ಆಶ್ರಯದಾತರು :

೧ ಶ್ರೀ ಭ್ರಮರಾಂಬಾ ಬಳಗ, ಅಕ್ಕಿಪೇಟೆ

ಬೆಂಗಳೂರು-೨. ಎ

೨ ಶ್ರೀಮತಿ ಎಸ್. ಬಸವರಾಜಮ್ಮನವರು,

ಶ್ರೀ ಎಂ. ಸದಾಶಿವಯ್ಯನವರು

ಕೋಲಾರ.

ಮೊದಲ ಮುದ್ರಣ : ೧೯೬೮





ಸಾದಾ ಪ್ರತಿ ೧೦-೦೦

ಕ್ಯಾಲಿಕೊ ಪ್ರತಿ ೧೨-೦೦



ಮುದ್ರಣ :

ಶ್ರೀ ಸತ್ಯನಾರಾಯಣ ಪ್ರೆಸ್

ಅರಳೇಪೇಟೆ : : ಬೆಂಗಳೂರು-೨



ಗ್ರಂಥದ ಆಶ್ರಯದಾತರು

ಬಳಗದ ಚೇತನಮೂರ್ತಿಗಳು !



ಶ್ರೀ ಕರಿಬಸಪ್ಪನವರು

ಬೆಂಗಳೂರು



ಶ್ರೀಮತಿ ಗು. ಶಂಕರಮ್ಮನವರು

ಬೆಂಗಳೂರು

# ಗ್ರಂಥದ ಆಶ್ರಯದಾತರು!



ಮಾಲೂರು ಶ್ರೀ ಸದಾಶಿವಯ್ಯನವರು
ಕೋಲಾರ



ಶ್ರೀಮತಿ ಎಸ್. ಬಸವರಾಜಮ್ಮನವರು
ಕೋಲಾರ

# ಹೃದಯದ ಹರಕೆ

'ಜೀವನ ಸಿದ್ಧಾಂತ'ದ ಪ್ರಥಮ ಸಂಪುಟ ೧೯೬೭ ರಲ್ಲಿ ಬೆಂಗಳೂರಿನ ಭ್ರಮರಾಂಬಾ ಬಳಗದ ಉದಾರ ಸೇವೆಯಿಂದ ಬೆಳ್ಳಿಯ ಹಬ್ಬದ ಸವಿನೆನಹಿಗಾಗಿ ಪ್ರಕಾಶಗೊಂಡಿತು. ಇದೀಗ ಎರಡನೆಯ ಸಂಪುಟ ಓದುಗರ ಕೈಯಲ್ಲಿದೆ. ಇದಕ್ಕಾಗಿ ಇಬ್ಬರಿಂದ ಸೇವೆ ಸಂದಿದೆ.

೧. ಶ್ರೀಮತಿ ಎಸ್. ಬಸವರಾಜಮ್ಮನವರು, ಶ್ರೀಮಂತ ಮಾಲೂರು ಸದಾಶಿವಯ್ಯನವರು ಕೋಲಾರ ಇವರು ಈ ಪೀಠದ ಶಿಷ್ಯರು. ಇವರು ಉದಾರ ಹೃದಯರು ; ಸುಸಂಸ್ಕೃತರು. ಪೂಜಾ ಪ್ರೇಮಿಗಳು. ಶ್ರೀಮತಿ ಎಸ್. ಬಸವರಾಜಮ್ಮನವರು ಚಿಕ್ಕಂದಿನಿಂದಲೂ ನಮಗೆ ಪರಿಚಯ. ೧೯೩೮ರಲ್ಲಿ ಬೆಂಗಳೂರಿನಲ್ಲಿ ಅಕ್ಕನಬಳಗದವರು ಏರ್ಪಡಿಸಿದ ಮಹಾದೇವಿಯಕ್ಕನ ನಾಟಕದಲ್ಲಿ ಮಹಾದೇವಿಯಕ್ಕನ ಪ್ರಧಾನ ಪಾತ್ರ ವಹಿಸಿ ಭಾವಪೂರ್ಣವಾಗಿ ಅಭಿನಯಿಸಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಂದ ಅಭಿನಂದನೆಯನ್ನು ಪಡೆದವರು. ಇವರು ತಮ್ಮ ತಾಯಿಯವರಾದ ಶಿವೈಕ್ಯ ಶ್ರೀಮತಿ ಗೌರಮ್ಮನವರ ನೆನಹಿಗಾಗಿ ಸೇವೆ ಸಲ್ಲಿಸಿದ್ದಾರೆ. ಇದಕ್ಕೆ ವೆಚ್ಚವಾದ ಅಯ್ದು ಸಾವಿರದಲ್ಲಿ ಅರ್ಧ ಹಣವನ್ನು ಸಂತಸದಿಂದ ಸಲ್ಲಿಸಿದ್ದಾರೆ.

ಇವರ ತಾಯಿ ಶಿವೈಕ್ಯ ಗೌರಮ್ಮನವರು ಶ್ರೀ ಸದಾಶಿವಯ್ಯನವರ ಅಕ್ಕನವರು. ಬೆಂಗಳೂರು ಹೊಸಕೋಟೆ ಭದ್ರಪ್ಪನವರ ಧರ್ಮಪತ್ನಿ. ಇವರ ಜನನ ೧೯೦೭ರಲ್ಲಿ. ಇವರು ಶಿವಾಧೀನರಾದುದು ೧೯೬೭ರಲ್ಲಿ. ಇವರದು ಅರವತ್ತು ವರ್ಷಗಳ ಜೀವನ. ಇವರಿಗೆ ಸದರಿ ಶ್ರೀಮತಿ ಬಸವರಾಜಮ್ಮನವರೊಬ್ಬರೇ ಮಗಳು. ತಮ್ಮನಿಗೇ ಕೊಟ್ಟು ಮದುವೆ ಮಾಡಿದರು. ತಮ್ಮ ಕೊನೆಯ ದಿನಗಳನ್ನು ತಮ್ಮನ ಮನೆಯಲ್ಲಿಯೇ ಇದ್ದು ಕಳೆದರು. ಇವರಿಗೆ ತಮ್ಮದೇ ಆದ ಈ ಗುರುಪೀಠದಲ್ಲಿ ಪರಮ ವಿಶ್ವಾಸವಿದ್ದಿತು. ಅದರ ಫಲವಾಗಿ ಅವರ ಮಗಳು ಅವರ ಚಿರಸ್ಮರಣೆಗಾಗಿ ಶಾಶ್ವತವಾದ ಸಾಹಿತ್ಯ ಸೇವೆಯನ್ನು

ಮಾಡಿದ್ದಾರೆ. ಜ್ಞಾನ ದರ್ಶನ ದಾಸೋಹವನ್ನು ನೇರವೇರಿಸಿದ್ದಾರೆ. ಶಿವೈಕ್ಯ ಶ್ರೀ ಗೌರಮ್ಮನವರ ಆತ್ಮಕ್ಕೆ ಚಿರಶಾಂತಿಯೊದಗಲೆಂದು ಹಾರೈಸೋಣವಾಗಿದೆ.

ಇವರ ಮಗಳಾದ ಶ್ರೀಮತಿ ಎಸ್. ಬಸವರಾಜಮ್ಮನವರಿಗೆ ಅಯಿದು ಜನ ಮಕ್ಕಳು. ಇವರಲ್ಲಿ ಮೂವರು ಹೆಣ್ಣು ಮಕ್ಕಳು. ಇಬ್ಬರು ಗಂಡು ಮಕ್ಕಳು. ಶ್ರೀಮತಿ ನಾಗರತ್ನಮ್ಮ, ಚಿ. ಕುಮಾರಿ ಉಮಾದೇವಿ, ಚಿ. ಕು. ವಿಜಯ ಕುಮಾರಿ, ಇವರು ಹೆಣ್ಣು ಮಕ್ಕಳು. ಶ್ರೀ ಮಹಾದೇವ, ಶ್ರೀ ಮಲ್ಲಿಕಾರ್ಜುನ ಪ್ರಕಾಶ ಇವರು ಗಂಡು ಮಕ್ಕಳು.

ಶ್ರೀಮತಿ ಎಸ್. ಬಸವರಾಜಮ್ಮನವರ ಯಜಮಾನರು ಶ್ರೀ ಎಂ. ಸದಾ ಶಿವಯ್ಯನವರು. ಇವರು ಕೋಲಾರದವರು, ಶ್ರೀಮಂತರು, ಸರಳ ಹೃದಯರು, ಸೌಜನ್ಯಪರರು. ಇವರಿಗೆ ಈಗ ೫೮ ವಯಸ್ಸು, ತುಂಬಿದ ಮನಸ್ಸು.

ಇವರಿಬ್ಬರೂ ಆದರ್ಶ ದಂಪತಿಗಳು. ಇಬ್ಬರೊಂದಾಗಿ ಬಾಳಿದ್ದಾರೆ ; ಬಾಳುತ್ತಿದ್ದಾರೆ. ಬೆಂಗಳೂರಿನ ವೀರಶೈವ ತತ್ತ್ವ ಪ್ರಚಾರಕ ಸಂಘಕ್ಕೆ ಅಯಿದು ನೂರು ರೂಪಾಯಿಗಳನ್ನು ಕೊಟ್ಟಿದ್ದಾರೆ. ಈಚೆಗೆ ಉತ್ತರ ಭಾರತ ಮತ್ತು ದಕ್ಷಿಣ ಭಾರತಗಳಲ್ಲಿ ಪ್ರಯಾಣಮಾಡಿ ಅಲ್ಲಲ್ಲಿ ಇರುವ ಆಶ್ರಮ ಮಠ, ದೇವ ಸ್ಥಾನ ಸಂಘ ಸಂಸ್ಥೆಗಳಿಗೆ ಹೋಗಿ ನೋಡಿ ಬಂದಿದ್ದಾರೆ. ಇವರಿಗೂ ಇವರ ಮಕ್ಕಳಿಗೂ ಚಿರಾಯುರಾರೋಗ್ಯ ಸಂತಾನ ಸೌಭಾಗ್ಯಗಳುಂಟಾಗಲೆಂದು ಹೃದ ಯಾರೆ ಹರಸೋಣವಾಗಿದೆ. ಇವರಿಂದ ಇನ್ನೂ ಇಂತಹ ಉತ್ತಮ ಸೇವೆ ಸಲ್ಲು ವಂತಾಗಲೆಂದು ಹಾರೈಸಲಾಗಿದೆ.

೨. ಬೆಂಗಳೂರಿನ ಅಕ್ಕಿಪೇಟೆ ಭ್ರಮರಾಂಬಾ ಬಳಗದ ಪತಿಯಿಂದ ಶ್ರೀಮತಿ ಗು. ಶಂಕರಮ್ಮನವರು ಶ್ರೀ ಎನ್. ಕರಿಬಸಪ್ಪನವರು ಉದಾರತೆ ಯಿಂದ ಉಳಿದ ಅರ್ಧ ಮೊಬಲಗನ್ನು ಸಲ್ಲಿಸಿ ಸೇವೆ ಮಾಡಿದ್ದಾರೆ. ಎಂದಿನಂತೆ ಜ್ಞಾನದಾಸೋಹವನ್ನು ಈ ಕೃತಿಯ ಮೂಲಕವೂ ಮಾಡಿ ಕೃತಾರ್ಥರಾಗಿದ್ದಾರೆ. ಬಳಗವೇ ಇವರು; ಇವರೇ ಬಳಗ, ಈಗ ಬಳಗಕ್ಕೆ ಅಧ್ಯಕ್ಷರಾದ ಶ್ರೀ ಚೌಧರೀ ಚೆನ್ನಬಸವಮ್ಮನವರು ಇವರಿಗೆ ತುಂಬಾ ನೆರವಾಗಿ ನಿಂತಿದ್ದಾರೆ. ಪೀಠದ ಸಾಹಿತ್ಯದಲ್ಲಿ ಇವರುಗಳು ತುಂಬಾ ಆದರಾಭಿಮಾನಗಳನ್ನಿಟ್ಟು ಕೊಂಡಿದ್ದಾರೆ. ದಿನಕ್ಕೊಮ್ಮೆ ವಾರಕ್ಕೊಮ್ಮೆ ಮನೆಯಲ್ಲಿಯೇ ಬಳಗದವರೆಲ್ಲರೂ ಒಟ್ಟಾಗಿ ಸೇರಿ

ವಚನ, ಕವನ, ಪ್ರವಚನ, ಅರ್ಚನಾದಿಗಳನ್ನು ನೆರವೇರಿಸುತ್ತಾರೆ. ಇವರ ಸಹಜ ಸೇವೆಯನ್ನು ಮರೆಯುವಂತಿಲ್ಲ. ಇವರಿಗೂ ಬಳಗಕ್ಕೂ ಹೃದಯ ತುಂಬಿದ ಹರಕೆ.

ಮುಂದಿನ ಮೂರು ಸಂಪುಟಗಳು ಬರೆದು ಅಣಿಯಾಗಿವೆ. ಉದಾರಿಗಳ ನೆರವು ದೊರೆತರೆ ಬೇಗ ಬೆಳಕಿಗೆ ತರುವ ಅಪೇಕ್ಷೆಯಿದೆ. ಅದಕ್ಕೂ ಆತನ ಅನುಗ್ರಹಬೇಕು.

ಇಷ್ಟು ಬೇಗ ಈ ಸಂಪುಟ ಬೆಳಕಿಗೆ ಬಂದುದಕ್ಕೆ ಸಂತೋಷಿಸುತ್ತೇವೆ. ಬೆಳಕಿಗೆ ತಂದವರನ್ನು ಮತ್ತೊಮ್ಮೆ ಮನಸಾರೆ ಹರಸುತ್ತೇವೆ.

೯-೯-೧೯೬೮ ಶ್ರೀ ಜ. ಚ. ನಿ.

ಬೆಂಗಳೂರು.

# ಅಭಿನಂದನೀಯ

ಶ್ರೀ ಜ. ಚ. ನಿ. ಅವರ 'ಜೀವನಸಿದ್ಧಾಂತ' ಎಂಬ ಗ್ರಂಥದ ಎರಡನೆ ಸಂಪುಟವನ್ನು ನೋಡಿದ್ದೇನೆ. ವೀರಶೈವ ಸಿದ್ಧಾಂತದಲ್ಲಿ ಷಟ್‌ಸ್ಥಲಗಳ ವಿಷಯದ ನಿರೂಪಣೆ ಇನ್ನೂ ಹೆಚ್ಚು ವಿಶ್ಲೇಷಣಾತ್ಮಕವಾಗಬೇಕಾಗಿದೆ. ಶರಣರ ವಚನಗಳಲ್ಲಿ ಈ ಸ್ಥಳಗಳ ಬಗ್ಗೆ ಬರುವಮಾತಿನಿಂದ ಸಾಮಾನ್ಯ ವಾಚಕರಿಗೆ ಅಷ್ಟೊಂದು ಸ್ಪಷ್ಟ ಕಲ್ಪನೆ ಇರುವುದಿಲ್ಲ. ಶ್ರೀ ಜ. ಚ. ನಿ. ಆದರು ಈ ಕಾರ್ಯಕ್ಕೆ ಉದ್ಯುಕ್ತರಾಗಿ ಈಗಾಗಲೇ ಎರಡು ಸ್ಥಲಗಳ ಬಗ್ಗೆ ಪ್ರಕಟಿಸಿರುವುದು ಅಭಿನಂದನೀಯವಾಗಿದೆ. ಉಳಿದ ನಾಲ್ಕು ಸ್ಥಲಗಳ ಬಗ್ಗೆ ಅವರ ಬರವಣಿಗೆಯನ್ನು ಉತ್ಸುಕತೆಯಿಂದ ಎದುರು ನೋಡುತ್ತೇವೆ.

ವಿ. ಕೃ. ಗೋಕಾಕ್,
ಬೆಂಗಳೂರು ವಿಶ್ವವಿದ್ಯಾನಿಲಯದ
ಉಪಕುಲಪತಿ

೬-೧೦-೧೯೬೮

# ತಪಸ್ಸಿನ ತಿರುಳು

ಶ್ರೀ ಶ್ರೀ ಜ. ಚ. ನಿ ಅವರ "ಜೀವನಸಿದ್ಧಾಂತ" ಗ್ರಂಥ ಕುರಿತು;

ಶ್ರೀ ಜ. ಚ. ನಿ. ಅವರ ಪಾಂಡಿತ್ಯ, ಆದರ್ಶಮಯವಾದ ತಪೋನಿಷ್ಠ ಬಾಳು; ವಿಶ್ವಸನೀಯವೆನಿಸಿದ ಸಾಹಿತ್ಯವಾರಿಧಿ; ಚಿರಪರಿಚಿತ ಪರಿಸರಗಳಿಗೆ ಈಯುವ ದರ್ಶನೀಯಶಕ್ತಿ; ಮಹಾಪ್ರವಾದಿಯ ಉತ್ತುಂಗಮಯ ಮನೋ ವೈಭವ, ತಾತ್ವಿಕದರ್ಶನ ಶ್ರೀ ಈ ಸಮಗ್ರಮುಖಗಳ ರೂವಾರಿಗಳು,

ಶ್ರೀಗಳು ಕನ್ನಡಸಾಹಿತ್ಯ ಸರಸ್ವತಿಯ ದಿವ್ಯದೇಗುಲದಲ್ಲಿ ಕುಳಿತು, "ಷಟ್ ಸ್ಥಲ ಸಿದ್ಧಾಂತವೇ ಜೀವನಸಿದ್ಧಾಂತ. ಜೀವನಸಿದ್ಧಾಂತವೇ ಷಟ್‌ಸ್ಥಲ ಸಿದ್ಧಾಂತ"ವೆಂದು ಅಪ್ಪಣೆ ಕೊಡಿಸಿದ ತಮ್ಮ ತಪಸ್ಸಿನ ತಿರುಳು ಈ ಮಹಾ ಪ್ರಬೋಧ ಗ್ರಂಥದಲ್ಲಡಗಿದೆನ್ನಬಹುದು.

ಬುದ್ಧ ಮಹಾಮುನಿಯ ಘೋರತಪೋಮಯ, ಬಾಳಿನನಂತರ ಆ ಮಹಾ ನುಭಾವನ ದೇಹ, ಎಲುವು ತೆಗಲುಗಳ ಶಿವ್ರಡು ಆಗಿತ್ತಂತೆ. ನೋಡಲು ಕರುಣಾರ್ದ್ರಪೂರ್ಣವಾದ ಮುಖಮುದ್ರೆಯಲ್ಲಿ ಇತ್ಯರ್ಥಗೊಂಡ ಅನುಭವಾ ಮೃತ ಗಂಗೆಯಂತೆ ನಾಡಿನೆಲ್ಲೆಡೆಗೂ ಹರಿದು ಸರ್ವಬುದ್ಧಿಜೀವಿಗಳಿಗೂ ಸುಧೆ ನೀಡದಂತೆ; ಶ್ರೀಗಳ ಅಸ್ಖಲಿತವಾಣಿ ಮಹಾಮಹಾ ಪ್ರಭೋದಗ್ರಂಥಗಳಾಗಿ, ಹೊರಬರುತ್ತಿರುವದು ಬಹುಶ್ರುತ ಶಕ್ತಿಯ ಪ್ರದರ್ಶನ.

ಈ ದಿವ್ಯಶಕ್ತಿಯ ಜ್ಞಾನವಾಹಿನಿ, ವಿಶ್ವವಿದ್ಯಾನಿಲಯಗಳ ಪ್ರಕಾಂಡ ಪಂಡಿತರ ಅಭ್ಯಾಸ ವರ್ತುಲಗಳಿಗೂ ರಸಭೋಜನವೆನಿಸಿದೆ. ಶ್ರೀ ಜ. ಚ. ನಿ ಅವರ ಸಂಪ್ರದಾಯ ಬದ್ಧತೆಯ ಪರಂಪರೆಯಲ್ಲಿ ಒಡಮೂಡಿದ, ವಿಶ್ಲೇಷಣಾ ತ್ಮಕಶಕ್ತಿ ಅವರ ಪವಾಡಶಕ್ತಿ ಎಂದೆನಿಸಿ, ಪ್ರತಿವಿಷಯದಲ್ಲಿಯೂ ಹೃದಯಂ ಗಮವಾಗಿ ಹೊರಬಂದಿದೆ. ಅಧ್ಯಾತ್ಮ ಸಾಹಿತ್ಯ, ಇವುಗಳ ವಿಶ್ಲೇಷಣೆ, ಅವರ ಬದುಕಿನ ದ್ವಿನೇತ್ರಗಳಾಗಿವೆ, ಪರಂಪರಾಗತವಾಗಿ ಹೊರಬಂದ ಅವರಸಾಹಿತ್ಯ

ಓತ–ಪ್ರೋತವಾಗಿ, ಸರ್ವರಿಗೂ ಸಂಗಮವೆನಿಸಿದೆ. ಅನುಭವದ ಆಳವೇ ಅವರ ಬದುಕಿನ ಮೂಲ, ಬದುಕೇ ಅವರ ಅನುಭವದ ಆಳ.

ಶ್ರೀ ಜ. ಚ. ನಿ. ಅವರ ಅನುಭವದ ಹೃದಯಾಂತರಾಳದಿಂದ ಉಗಮಗೊಂಡ ಮಹಾ ಪ್ರಬೋಧಗ್ರಂಥಗಳು ಕನ್ನಡಸಾಹಿತ್ಯ ಸರಸ್ವತಿಯ ಕಂಠಾಭರಣಗಳಾಗಲೆಂದು ಹಾರೈಸುವೆವು.

ಶ್ರೀ ನಿ. ಪ್ರ. ಶಿವಕುಮಾರ ಸ್ವಾಮಿಗಳು,

ಶ್ರೀ ಸರ್ಪಭೂಷಣ ಶಿವಯೋಗೀಶ್ವರಮಠ ೫–೧೦–೬೮

ಬೆಂಗಳೂರು–೯.

# ಮೊದಲ್ಮಾತು

ಜಲತತ್ವ ಜೀವನದ ಜೀವಾಳ ಮಾತ್ರವಲ್ಲ; ಜಲವೇ ಜೀವನ. ಜಲವಿಲ್ಲದಿದ್ದರೆ ಜಗತ್ತು ನೀರಸವಾಗಿರುತ್ತಿತ್ತು; ನಿರ್ಮಲತೆಯನ್ನು ಕಳೆದುಕೊಳ್ಳುತಿತ್ತು. ಮಳೆ ಹುಯ್ದು ನೆಲದ ಮೈಕೊಳೆಯನ್ನು ಕಳೆಯುತ್ತದೆ; ಹಸಿರುಡಿಗೆಯನ್ನು ಉಡಿಸುತ್ತದೆ. ಹಲವು ಬಣ್ಣದ ಹೂವುಗಳನ್ನು ಮುಡಿಸುತ್ತದೆ. ಹಣ್ಣು ಕಾಯಿಗಳನ್ನು ಹೆಮ್ಮರಗಳೆಂಬ ಕೈಗಳಲ್ಲಿ ಹಿಡಿಸಿ ನಿಲ್ಲಿಸುತ್ತದೆ. ಜೀವಿಗಳ ಆರಾಧನೆಗೆಂದು ಕೆರೆ ಬಾವಿ ಹಳ್ಳ ಕೊಳ್ಳಗಳನ್ನು ತುಂಬಿ ನಿಸರ್ಗ ಸುಂದರಿ ತನ್ನ ಚೆಲುವನ್ನು ನೋಡಿಕೊಳ್ಳಲು ನಿಲುಗನ್ನಡಿಗಳನ್ನು ಅಲ್ಲಲ್ಲಿ ಹಿಡಿದಂತಿರುತ್ತದೆ. ಬಿಸಿಲಿನ ಬಿಸಿಯನ್ನು ತಗ್ಗಿಸಿ ಎಲ್ಲೆಲ್ಲಿಯೂ ಶಾಂತಿ ವಾತಾವರಣವನ್ನು ಹುಟ್ಟಿಸುತ್ತದೆ. ನೆಮ್ಮದಿಯನ್ನು ತರುತ್ತದೆ. ವೃಷ್ಟಿಯಿಂದ ಸೃಷ್ಟಿಯ ಸೊಬಗು; ವೃಷ್ಟಿ ಜೀವನಕ್ಕೆ ಸೊಗಸು.

ಜನತೆ ಜಳಕ ಮಾಡಿ ಮೈದೊಳೆಯುತ್ತಾರೆ; ಮೊಗದೊಳೆಯುತ್ತಾರೆ. ಕುಡಿದು ನೀರಡಿಕೆಯನ್ನು ಕಳೆದುಕೊಳ್ಳುತ್ತಾರೆ. ಬಟ್ಟೆ ಬರೆಗಳನ್ನು ತೊಳೆದು ಶುಭ್ರಗೊಳಿಸುತ್ತಾರೆ. ಬೇಸಾಯಕ್ಕೆ ಬಳಸಿ ಬೆಳೆಗಳನ್ನು ಬೆಳೆಯುತ್ತಾರೆ. ಅಡುಗೆಯಲ್ಲಿ ಆದರದೇ ಪ್ರಧಾನ ಪಾತ್ರ. ಊಟಕ್ಕೂ ನೀರಿಲ್ಲದೆ ನಡೆಯದು, ಹೆಚ್ಚೇನು ಜಾಗತಿಕ ಜೀವನದಲ್ಲಿ ಜಲ ಅತ್ಯವಸರ ಮತ್ತು ಅನಿವಾರ್ಯ.

ಜಾಗತಿಕ ಜೀವನಕ್ಕೆ ಗಾಳಿ ಬೆಳಕುಗಳು ಹೇಗೋ ಹಾಗೆ ನೀರೂ ತುಂಬಾ ಮುಖ್ಯವಾಗಿದೆ. ರಸ ರಕ್ತಗಳಿಲ್ಲದಿದ್ದರೆ ಬಾಳೇ ಇಲ್ಲ. ರಸ ರಕ್ತಗಳಿಗೆ ಅನ್ನ ಮೂಲ, ಅನಕ್ಕೆ ಜಲ ಮೂಲ. ಅದರಿಂದ ಅನ್ನ ಶುದ್ಧಿಗೆ ಮೂಲ ಜಲಶುದ್ಧಿ. ಬ್ರಹ್ಮಾಂಡ ಜಲಶುದ್ಧಿಗೆ ಮೇಘ ಇರುವಂತೆ ಪಿಂಡಾಂಡ ಜಲಶುದ್ಧಿಗೆ ಮಾಹೇಶ್ವರನಿರುತ್ತಾನೆ.

ಪಾರ್ಥಿವಾಂಗ ಶುದ್ಧಿಯಿಂದ ಭಕ್ತನಾದರೆ ಜಲಾಂಗ ಶುದ್ಧಿಯಿಂದ ಮಾಹೇಶ್ವರನೆನಿಸುತ್ತಾನೆ. ಸೃಷ್ಟಿ ಜೀವನದಲ್ಲಿ ಜಲದ ಪಾತ್ರವಿರುವಂತೆ ಷಟ್

ಸ್ಥಲ ಜೀವನದಲ್ಲಿ ಅಥವಾ ದರ್ಶನದಲ್ಲಿ ಮಾಹೇಶ್ವರನ ಪಾತ್ರ ಅಂತಹದು ; ಅದಕ್ಕೂ ಹೆಚ್ಚಿನದು, ಸ್ಥಾನವೂ ಅಂತೆ !

ಅನ್ನ ಪ್ರದಾತ ಭಕ್ತ ; ಆ ಅನ್ನಕ್ಕೆ ರಸೋತ್ಪಾದಕ ಮಾಹೇಶ. ಆ ರಸವನ್ನು ಶುಚಿಗೊಳಿಸಿ ರುಚಿಸುವಾತ ಪ್ರಸಾದಿ. ಆ ರುಚಿಯನ್ನು ಪ್ರಾಣವಾಗಿಸುವಾತ ಪ್ರಾಣಲಿಂಗಿ. ಆ ಪರಮ ಪ್ರಾಣಕ್ಕೆ ಶರಣಾಗುವಾತ ಶರಣ. ಅದರಲ್ಲಿ ಸಮರಸವಾಗುವಾತ ಐಕ್ಯ. ಇವೆಲ್ಲವೂ ಮಾಹೇಶ್ವರ ಸ್ಥಲದಲ್ಲಿಯೇ ಮೈಗೂಡುತ್ತವೆ.

ಮಾಹೇಶ್ವರನ ಸಾಧನೆಯ ವಿವರಣೆಯೇ ಈ ಸಂಪುಟ.

ಈ ಸಂಪುಟಕ್ಕೆ ತಮ್ಮ ಅಭಿಪ್ರಾಯವನ್ನು ಬರೆದುಕೊಟ್ಟ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀ ವಿ. ಕೃ. ಗೋಕಾಕ ಅವರನ್ನು ಮತ್ತು ಶ್ರೀ ಸರ್ಪಭೂಷಣ ಮಠದ ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳವರನ್ನೂ ನೆನೆಯದಿರೆವು.

೯-೧೦-೧೯೭೮ ಶ್ರೀ ಜ. ಚ. ನಿ.

# ಪರಿವಿಡಿ

## ಉತ್ತರ ಭಾಗ

## ಅನುಬಂಧ

# ಜೀವನ ಸಿದ್ಧಾಂತ

## (ಮಾಹೇಶ ಸಂಪುಟ)

### ಜೀವನ ವಿಕಾಸ ಸಂದೇಶ

ಮಾನವ ಜೀವನ ರಹಸ್ಯವು ಷಟ್‌ಸ್ಥಲ ತತ್ತ್ವದಲ್ಲಿದೆಯಲ್ಲಿದೆಯಲ್ಲದೆ ಕೇವಲ ಪ್ರಕೃತಿ ನಿಯತಿಗೆ ಸಿಕ್ಕು ಬಾಳುವಲ್ಲಿಲ್ಲ ; ಬೆಳಲುವಲ್ಲಿಲ್ಲ. ಮಾನವನು ದಿಟವಾಗಿ ಪ್ರಾಕೃತಿಕ ಯಂತ್ರವಾಗಿದ್ದಾನೆ. ಎಲ್ಲರಂತೆ ಹುಟ್ಟಿ, ಎಲ್ಲರಂತೆ ಬಾಳಿ, ಎಲ್ಲರಂತೆ ಸಾಯುವ ನಿಯತಿಯಲ್ಲಿ ನಿಂತಿದ್ದಾನೆ. ಈ ಸಾಂಸಾರಿಕ ಚಕ್ರದಲ್ಲಿ ಸಿಕ್ಕು ನುಚ್ಚು ನೂರಾಗುತ್ತಿದ್ದಾನೆ. ಬರೀ ಭೌತಿಕದ ಭೂತ ಹಿಡಿದು ಚಪಲ ಚೇಷ್ಟಿತನಾಗಿದ್ದಾನೆ. ದೈಹಿಕ ದೃಷ್ಟಿಯಲ್ಲಿ ದೈವೀ ದೃಷ್ಟಿಯನ್ನು ಕಳೆದುಕೊಂಡಿದ್ದಾನೆ. ಐಂದ್ರಿಕ ಸೆಳತದಲ್ಲಿ ಆತ್ಮಿಕ ಆಶ್ರಯವಿಲ್ಲದವನಾಗಿದ್ದಾನೆ. ಮಾನಸಿಕ ಚಿಂತನೆಯಲ್ಲಿ ಮಹಾ ಜೀವನ ಚಿಂತನದಿಂದ ವಂಚಿತನಾಗಿದ್ದಾನೆ. ತಾರ್ಕಿಕ ತಿಕ್ಕಾಟದಲ್ಲಿ ತಾತ್ತ್ವಿಕ ಪರಿಣಾಮವನ್ನು ಅರಿಯದವನಾಗಿದ್ದಾನೆ. ಬೌದ್ಧಿಕದ ಬರಡು ಬೆಲೆಯಲ್ಲಿ ಭೌಮದ ಬೆಲೆ ನೆಲೆಯ ಕಾಣದವನಾಗಿದ್ದಾನೆ. ಚೂರ್ಣಾಹಂಕಾರದಲ್ಲಿ ಪೂರ್ಣಾಹಂಕಾರದ ಪ್ರಭಾವಕ್ಕೆ ದೂರಾಗಿದ್ದಾನೆ. ಮಾನವ ಜೀವನವು ಚೂರ್ಣ ಜೀವನಕ್ಕಾಗಿ ಇಲ್ಲ; ಕ್ಷಣಿಕ ಜೀವನಕ್ಕಾಗಿ ಬಂದಿಲ್ಲ. ಪೂರ್ಣರೂಪದ ಸಂಪಾದನೆಗಾಗಿ ಇದೆ. ಪವಿತ್ರಾತ್ಮದ ಆವಿಷ್ಕರಣಕ್ಕಾಗಿ ಇದೆ. ಈ ದಿಸೆಯಲ್ಲಿ ಜೀವನ ಶೋಧನೆಯಾಗಿ ಜೀವನ ಸಾರ್ಥಕವಾಗಬೇಕಾಗಿದೆ. ಪೂರ್ಣಸ್ವರೂಪದ ಸಾಕ್ಷಾತ್ಕಾರವಾಗಬೇಕಾಗಿದೆ. ತ್ಯಾಗ – ಯೋಗಗಳಿಲ್ಲದೆ ಬರೀ ಭೋಗ ಜೀವನದಿಂದ ಇದು ಸಾಧ್ಯವಾಗದು. ತ್ಯಾಗ—ಭೋಗ—ಯೋಗ

ಗಳ ಶೋಧನೆಗಾಗಿ ಸಂವರ್ಧನೆಗಾಗಿ ಷಟ್‌ಸ್ಥಲ ತತ್ತ್ವ ನಿರ್ಮಿತವಾಗಿದೆ; ಈ ಮೂರರ ಸಮನ್ವಯಕ್ಕಾಗಿ ಷಟ್‌ಸ್ಥಲ ಸಿದ್ಧಾಂತವೇರ್ಪಟ್ಟಿದೆ. ಆತ್ಮದ ಆ ಪರಮ ಸ್ವರೂಪವನ್ನು ಅರಿತು ಅಲ್ಲಿಗೇರಬೇಕಾದರೆ ಷಟ್‌ಸ್ಥಲ ಸೋಪಾನಗಳ ನ್ನೇರಬೇಕು. ಬಾಳಿನ ನಿಜವಾದ ಆವಿಷ್ಕಾರ ಅಲ್ಲಿದೆ: ಅಖಂಡ ಪರಿಪೂರ್ಣತೆ ಅಲ್ಲಿದೆ. ನಿಜವಾದ ಜೀವನಸೂತ್ರವೆಂದರೆ ನಿರ್ದುಷ್ಟ ಪರಮ ಜೀವನವೆಂದರೆ ನಿತ್ಯವೂ ಪೂರ್ಣವೂ ಅಖಂಡವೂ ಆದ ಆ ಸತ್ಯವನ್ನು ಅರಿತು ಅದನ್ನು ಅಂಗವಿಸಿ ಕೊಳ್ಳುವ ಬಗೆಯಲ್ಲಿ ಬಾಳುವುದೆಂದರ್ಥ. ಆ ಸಚ್ಚಿದಾನಂದವನ್ನು ಅಜ್ಞಾನ ದಿಂದ ಆಚಾರ ಚ್ಯುತಿಯಿಂದ ಅನನುಭವದಿಂದ ಅಪೂರ್ಣವಾಗಿ ಪಡೆದರೆ ಅಪಾರ ದುಃಖದಲ್ಲಿ ಪರಿತಪಿಸಿದರೆ ಜೀವನವಲ್ಲ. ಬಾಹ್ಯ ಪ್ರಮಾಣವೇ ಪ್ರಮಾಣವಲ್ಲ. ಈ ಲೌಕಿಕದೊಡನೆ ಆ ಪಾರಮಾರ್ಥಿಕವನ್ನು ಪ್ರಮಾಣೀಕರಿಸಬೇಕು. ಅಂದರೆ ಅದಕ್ಕಾಗಿ ಅನುಸರಿಸಬೇಕು. ಬರೀ ಭೌತಿಕ ಸಂಪಾದನೆಯೆ ಜೀವಿತ ಲಕ್ಷ್ಯ ವಾದರೆ ಹಲ್ಲಣ ಹೋರಾಟಗಳು ತಪ್ಪವು. ಎಡರು ತೊಡರುಗಳು ತಪ್ಪವು. ಈ ಜೀವನ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕಾದರೆ ಆ ದುರ್ಗಮ ಮಾರ್ಗ ಸುಗಮವಾಗಬೇಕಾದರೆ ಆರ್ನೆಲೆಯ ಹೆದ್ದಾರಿಯಲ್ಲಿ ಹೆಜ್ಜೆ ಹಾಕಬೇಕು.

ಜೀವನದ ಪ್ರಾಕೃತಿಕಾಚಾರಗಳಿಗೆ ಭಾಕ್ತಿಕಾಚಾರಗಳ ಮಂಗಳ ಮುದ್ರೆ ಯನ್ನೊತ್ತಬೇಕು. ಸತ್ಯ ಶುದ್ಧತೆಯ ಪದ್ಧತಿಯಲ್ಲಿ ಪರಿಕ್ರಮಿಸಬೇಕು. ಆಗ ಕ್ರಿಯಾಚಾರವಾಗಿ ಪರಿಣಮಿಸುವವು. ಅಂತೆಯೆ ಪ್ರಾಕೃತಿಕ ವಿಚಾರ ಗಳೊಡನೆ ಪಾರಮಾರ್ಥಿಕ ವಿಚಾರಗಳ ಜೋಡಣೆಯಾಗಬೇಕು. ಶ್ರದ್ಧೆ ನಿಷ್ಠೆಗಳನ್ನು ತಳೆದಾಗಬೇಕು. ಸದಾಚಾರ ಸುವಿಚಾರಗಳೇ ಸರ್ವಾಂಗಲಿಂಗ ಗಳಾಗಬೇಕು. ಆಗ ತ್ಯಾಗಾಂಗ ತೊಳಗುತ್ತದೆ. ತತ್ತ್ವಬಾಹಿರ ಆಚಾರ ವಿಚಾರಗಳೆಲ್ಲ ಬಿಟ್ಟೋಡುತ್ತವೆ. ಆಗ ಆತ್ಮನು ಈಶ್ವರ ಸ್ವರೂಪ ನಾಗುತ್ತಾನೆ. ಭಕ್ತತ್ವ—ಮಾಹೇಶ್ವರತ್ವಗಳು ಮೈಗೂಡುತ್ತವೆ. ಆತ್ಮ ಪರ ಮಾತ್ಮನ ಅಂಶನಾಗಿ—ಪ್ರತಿನಿಧಿಯಾಗಿ ಬಾಳುತ್ತಾನೆ; ಬೆಳಗುತ್ತಾನೆ. ಆಗ ಆಧ್ಯಾತ್ಮಿಕ ನಿವೃತ್ತಿಯಲ್ಲಿ ಉಜ್ಜೀವನ ಸಾಗುತ್ತದೆ. ಆ ಮಹೇಶ್ವರನ ಸಾಧ್ಯ ರ್ಮ್ಯವನ್ನು ಪಡೆವ ಭಾಗ್ಯ ಉಂಟಾಗುತ್ತದೆ. ಆತನೊಡನೆ ಒಂದಾಗಲು ಮುಂದಾರಿ ತೋರುತ್ತದೆ. ಜೀವನ ಆಚಾರ—ವಿಚಾರಗಳೆಲ್ಲ ಆ ಪರಮ ಪೂರ್ಣನಿಗೆ ಸಮರ್ಪಣವಾಗುತ್ತವೆ. ಇದರಿಂದ ಜೀವನ ವ್ಯಾಪ್ತಿ ಹೆಚ್ಚುತ್ತದೆ.

ಸಂಕುಚಿತ ಭಾವಗಳೆಲ್ಲ ಸಂಹಾರವಾಗುತ್ತವೆ. ಕರ್ಮಜಾಡ್ಯತೆ ಕಳಚುತ್ತದೆ, ಅಜ್ಞಾನದ ಅಂಧಕಾರ ಹರಿಯುತ್ತದೆ. ಶ್ರದ್ಧೆಗೆ ತಕ್ಕ ಸದಾಚಾರ, ನಿಷ್ಠೆಗೆ ತಕ್ಕ ನಿಜವಿಚಾರ ಬಾಳಿನಲ್ಲಿ ಬೆರೆಯುತ್ತವೆ.

ಮಾನವನು ತನ್ನ ಸುತ್ತು ಬಳಸಿಕೊಂಡಿರುವ ತನ್ನೊಳಗೆ ನೆಲಸಿರುವ ಪ್ರಕೃತಿ, ಅವಿದ್ಯೆ, ಮಾಯೆಗಳ ಎಲ್ಲೆಯನ್ನು ದಾಟಬೇಕು. ದಾಟಿ ಆ ಮಹಾ ಶಕ್ತಿಯನ್ನು ಮೈಗೂಡಿಸಿಕೊಳ್ಳಬೇಕು. ಇದುವೇ ಮಾಹೇಶ್ವರನ ಮುಖ್ಯ ಧ್ಯೇಯ ಈ ಧ್ಯೇಯವಿಲ್ಲದಿದ್ದರೆ ಸಾಮಾನ್ಯರಲ್ಲಿ ಒಬ್ಬನಾಗಿರಬೇಕಾಗುತ್ತದೆ. ಪ್ರಕೃತಿಯ ಅಧೀನನಾಗಿ ವಿಕಾಸಹೀನವಾಗಿ ಜೀವಿಸಬೇಕಾಗುತ್ತದೆ. ಅಲ್ಪೇಚ್ಛೆ-ಅಲ್ಪಾಶೆಗಳ ಬಂಧಿಯಾಗಬೇಕಾಗುತ್ತದೆ. ಪ್ರಕೃತಿಯ ಅಭೀಕ್ಷೆಯಂತೆ ಪರಿಸರ ದಲ್ಲಿಯೇ ಪರಿಭ್ರಮಿಸಬೇಕಾಗುತ್ತದೆ. ಅವಿದ್ಯೆಯಲ್ಲಿ ಆಳಲಬೇಕಾಗುತ್ತದೆ; ಅಕ್ಷಿಹೀನನಾಗಬೇಕಾಗುತ್ತದೆ. ಮಾಯೆಯಿಂದ ಮುಂಗಾಣದವನಾಗಬೇಕಾಗು ತ್ತದೆ. ರಾಗ ದ್ವೇಷಗಳ ಹೆಮ್ಮಡುವಿಗೆ ಬಿದ್ದು ಎದ್ದೇಳದವನಾಗುತ್ತಾನೆ. ಅದೇ ರಕ್ತನಾಗದೆ ಭಕ್ತನಾದರೆ ಅಧೀರನಾಗದೆ ಧೀರನಾದರೆ ಅಸ್ವತಂತ್ರನಾಗದೆ ಸ್ವತಂತ್ರನಾದರೆ ಪ್ರಾಕೃತಿಕ ಪರಿಭ್ರಮಣಕ್ಕೆ ಒಳಗಾಗದೆ ಮೇಲೇಳುತ್ತಾನೆ. ಮಾನವ ಚೇತನದಲ್ಲಿ ಆ ಶಕ್ತಿಯಿದೆ. ಆ ಅಂತಃ ಸತ್ವವನ್ನು ಅರಿತು ಅಳವಡಿಸಿ ಕೊಳ್ಳುವ ಮಾರ್ಗವೇ ಮಹೋನ್ನತ ಮಾರ್ಗ. ಅದೇ ಷಟ್‌ಸ್ಥಲ ಮಾರ್ಗ. ಆ ಮಾರ್ಗದಲ್ಲಿ ಎರಡು ಹೆಜ್ಜೆ ನಡೆದ ತ್ಯಾಗಾಂಗನು ತಾತ್ವಿಕ ಜೀವಿಯಾಗು ತ್ತಾನೆ. ಮಾಯೆಯನ್ನು ಗೆದ್ದು ಮಾಹೇಶ್ವರನಾಗುತ್ತಾನೆ.

ಈ ವಿಶ್ವ ಆ ಮಹೇಶ್ವರನ ಒಂದಂಶ ಮಾತ್ರ. ಆತನ ಉಪಾಸಕನಾದ ಉನ್ನತ ಸತ್ವಶಾಲಿಯಾದ ತ್ಯಾಗಾಂಗನು ವಿಶ್ವಕ್ಕೆ ಮಾಹೇಶ್ವರನಾಗುವುದರಲ್ಲಿ ಅಸಂಗತವೇನಿಲ್ಲ. ಆಗ ಆ ದಿವ್ಯ ಶಕ್ತಿಯನ್ನು ಆ ಮಾಹೇಶ್ವರಿಯೇ ದಯಪಾಲಿಸು ತ್ತಾಳೆ. ಅವಳು ತನ್ನ ಮಕ್ಕಳಿಗೆ ಒಡ್ಡಿದ ಆಟದ ಬೊಂಬೆ ಈ ವಿಶ್ವ. ಇದರಾಟ ದಲ್ಲಿಯೇ ತನ್ನೆಲ್ಲ ಕಾಲವನ್ನು ಕಳೆಯುವುದು ತನ್ನೆಲ್ಲ ಶಕ್ತಿಯನ್ನು ಕಡಿಮೆ ಮಾಡಿ ಕೊಳ್ಳುವುದು ಬಾಲಿಶತನವಲ್ಲದೆ ಮಾಹೇಶತನವಲ್ಲ. ಪ್ರಕೃತಿಗೆ ತಾನು ಪ್ರೇರಕ ನಾಗಬೇಕಲ್ಲದೆ ಪ್ರಕೃತಿಯಿಂದ ತಾನು ಪ್ರೇರ್ಯನಾದರೆ ಪುರುಷತನವಲ್ಲ.

ಪ್ರಕೃತಿಗೆ ಎರಡು ಮುಖಗಳಿವೆ. ಒಂದು ವಿಕೃತಿ : ಇನ್ನೊಂದು ಪ್ರಗತಿ. ವಿಕೃತಿಗೆ ಒಳಗಾಗುವುದೇ ಮಾನವೀಯ ಮೌಲ್ಯತೆಯ ಹಾನಿ; ಜೀವನ

ವೈಶಾಲ್ಯತೆಯ ಹಾನಿ. ಪ್ರಾಕೃತಿಕ ವ್ಯವಹಾರಗಳೇ ಪ್ರಗತಿ ಸೂಚಕಗಳಾಗದಿರು- ವಾಗ ಸಂಸ್ಕೃತಿಯನ್ನು ರೂಪಿಸದಿರುವಾಗ ವೈಕೃತಿಕ ಕರ್ಮಗಳು ಪ್ರಗತಿ- ಸಂಸ್ಕೃತಿಗಳನ್ನು ರೂಪಿಸಬಲ್ಲವೆ? ಒಮ್ಮೊಮ್ಮೆ ಪ್ರಾಕೃತಿಕ ಕ್ರಿಯೆಗಳು ಪಾರಮಾರ್ಥತೆಗೆ ನೆರವಾಗುವುದುಂಟು. ಆದರೆ ಅವು ಪ್ರಕೃತಿ-ಸಹಜವಾಗಿರ ಬೇಕು. ಅಥವಾ ಪ್ರಕೃಷ್ಟ ಕೃತಿಯಾಗಿರಬೇಕು.

ಪ್ರಕೃತಿ ಅಪರಾ,—ಪರಾ ಎಂದು ಇತ್ತೆರ. ಅಪರಾಪ್ರಕೃತಿಯನ್ನು ಪೂರ್ಣವಾಗಿ ಪರಮಾರ್ಥಗೊಳಿಸುವುದೇ ಮಾಹೇಶ್ವರನ ಕರ್ತವ್ಯ. ತ್ಯಾಗಾಂಗವೇ ಅಪರಾ ಪ್ರಕೃತಿ. ಕ್ರಿಯಾದೀಕ್ಷೆಯಿಂದ ಕ್ರಿಯಾಚಾರ ಶಿಕ್ಷೆಯಿಂದ ಜ್ಞಾನಶಕ್ತಿಯಿಂದ ಅಪರಾ ಪ್ರಕೃತಿ ಅಂಗವಾಗಿ ಪರಿವರ್ತಿತವಾಗುತ್ತದೆ. ಅಪರಾ ಪ್ರಕೃತಿಯ ವ್ಯಾಪ್ತಿ ಬುದ್ಧಿಯವರೆವಿಗೂ ಇರುತ್ತದೆ. ಪ್ರಾಕೃತಿಕ ಬುದ್ಧಿಗೆ ಪ್ರಾಣಲಿಂಗವು ಅಗಮ್ಯ. ಪ್ರಾಣಲಿಂಗವೆಂದರೆ ಅಂತರಾತ್ಮ. ಅದೇ ಮಾಹೇಶ್ವರನ ಸಾಧನದಿಂದ ಸ್ಥಿರಬುದ್ಧಿಯಾದರೆ ಆಗ ಅಂತರಾತ್ಮ ರೂಪ ಪ್ರಾಣಲಿಂಗದ ಪರಿಚಯಕ್ಕೆ ಸಮರ್ಥವಾಗುತ್ತದೆ. ಇಲ್ಲವಾದರೆ ಬುದ್ಧಿಯು ಕೇವಲ ಕಾಯಕರಣೇಂದ್ರಿಯ ಪ್ರಾಣಗಳಲ್ಲಿಯೇ ತತ್ಪರವಾಗಿರುತ್ತದೆ. ಬಾಹ್ಯ ಯುಕ್ತಿಯೆ ಬೆರತಿರುತ್ತದೆ. ವ್ಯಾವಹಾರಿಕ ತಂತ್ರದಲ್ಲಿ ನಿಪುಣವಾಗಿರುತ್ತದೆ. ಕ್ರಿಯಾ ಜ್ಞಾನಸಂಸ್ಕಾರದಿಂದ ಬುದ್ಧಿಯೋಗಪರವಾದಲ್ಲಿ ಬಾಹ್ಯವನ್ನು ನಿರಾಕರಿಸುತ್ತದೆ. ಕ್ರಿಯಾಜ್ಞಾನಗಳ ಕಲಿತನ-ಕಳೆಗಳ ಸಹಕಾರದಲ್ಲಿ ಅಂತ ರಾತ್ಮನಲ್ಲಿಗೆ ಸಾಗುತ್ತದೆ. ಶ್ರದ್ಧೆ ನಿಷ್ಠೆಗಳೊಡನೆ ಅವಧಾನವನ್ನೂ ಅಂಗೀ ಕರಿಸುತ್ತದೆ. ಆಗ ಬಾಳು ಅಂತರ್ಮುಖವಾಗುವುದು. ಅಂತರ್ಜ್ಯೋತಿ ಯಿಂದ ಕೂಡಿರುವುದು. ಅಂತರಾರ್ಥವನ್ನು ಗ್ರಹಿಸುವುದು. ಆಗ ಜೀವನವು ಅಲ್ಪ ಬುದ್ಧಿಯ ಅಲ್ಪ ವಿಚಾರದ ಪ್ರತೀಕವಾಗಿರದೆ ಸ್ಥಿರಬುದ್ಧಿಯ ಪರಮ ವಿಚಾರದ ನಿಷ್ಠೆಯುಂಟಾಗುತ್ತದೆ. ಅಪಾರವಾದ ಆಧ್ಯಾತ್ಮಿಕ ಶಕ್ತಿ ಯುದಿಸುತ್ತದೆ. ದಿವ್ಯರಸಾನುಭೂತಿ ಉದಯವಾಗುತ್ತದೆ. ಬೌದ್ಧಿಕ ಶುಷ್ಕವಾದ ಪಲ್ಲಟವಾಗುತ್ತದೆ. ಜಡಲೋಕದಿಂದ ಜ್ಯೋತಿರ್ಲೋಕಕ್ಕೆ ಪಯಣಿಸಲು ಪಥವಾಗುತ್ತದೆ. ಜ್ಯೋತಿರ್ಲಿಂಗದ ದರ್ಶನವೊದಗುತ್ತದೆ. ಕ್ಷರಪ್ರಕೃತಿಯು ಅಕ್ಷರ ಪ್ರಕೃತಿಯಲ್ಲಿ ಪರಿವರ್ತಿಸುತ್ತದೆ. ಸ್ಥೂಲಪ್ರಕೃತಿಯು ತನ್ನ ಸ್ಥೌಲ್ಯದಿಂದ ಪಲ್ಲಟವಾಗಿ ಸೂಕ್ಷ್ಮವಾಗಿ ಸ್ಥಿತಿಗೊಳ್ಳುತ್ತದೆ. ಪರಾ

ಪ್ರಕೃತಿ ರೂಪಾಗುತ್ತದೆ. ಅಂದರೆ ಲಿಂಗಕಾಯವಾಗುತ್ತದೆ; ಲಿಂಗಾಂಗವಾಗುತ್ತದೆ. ಪ್ರಕೃತಿಯಲ್ಲಿ ಮರೆಯಾಗಿದ್ದ ಲಿಂಗಕಳೆಯು ಹೊರಹೊಮ್ಮುತ್ತದೆ. ಕ್ರಿಯಾಶಕ್ತಿಯಾಗಿ ಕಾಣಿಸುತ್ತದೆ.

ಆಗ ಮಾನವನು ಪ್ರಕೃತಿಗೆ ಪ್ರಭುವಾಗುತ್ತಾನೆ. ಮಾಹೇಶ್ವರಾಭಿಧನಾಗುತ್ತಾನೆ. ಅಪರಾ ಪ್ರಕೃತಿಯ ಸರ್ವಸ್ವಭಾವಗಳನ್ನು ಗೆಲ್ಲುತ್ತಾನೆ. ಅಧಃಪ್ರವೃತ್ತಿಗೆ ಒಳಗಾಗದಿರುತ್ತಾನೆ. ಬೆಳಕಿಗೆ ಬರುತ್ತಾನೆ. ಎಚ್ಚರಗೊಳ್ಳುತ್ತಾನೆ. ಪರಾಪ್ರಕೃತಿಯಲ್ಲಿ ಪ್ರವೇಶಿಸುತ್ತಾನೆ. ಈ ಹುಟ್ಟುವಿಕೆಯನ್ನು ಗೆಲ್ಲುತ್ತಾನೆ. ಸ್ವಯಂಭೂಸತ್ತೆಯನ್ನು ಸಂಪಾದಿಸುತ್ತಾನೆ. ಮರಣದ ಭಯಕ್ಕೆ ಮಾಲಿನ್ಯಕ್ಕೆ ಒಳಗಾಗುವುದಿಲ್ಲ. ಶಾಶ್ವತನಾಗುತ್ತಾನೆ. ವೀರನೂ ಭದ್ರನೂ ಆಗಿ ವಿಶ್ವಪ್ರಕಾಶಕನಾಗುತ್ತಾನೆ. ಕ್ಷುದ್ರಕೃತಿಗಳನ್ನು ಮಾಡನು. ಕ್ಷುದ್ರಮತಿಯಾಗನು. ಕ್ಷುದ್ರಪ್ರಾಪ್ತಿಗಾಗಿ ಬಾಯ್ಬಿಡನು. ಕ್ಷುದ್ರಾಹಂಕಾರಕ್ಕೊಳಗಾಗನು.

ಆತನ ದಿವ್ಯ ಜೀವನಕ್ಕೆ ಅವನೊಳಗಿನ ದಿವ್ಯವಾಣಿ ನೆರವಾಗುತ್ತದೆ. ಆ ವಾಣಿಯನ್ನು ಕೇಳಲು ಕುತೂಹಲಗೊಳ್ಳುತ್ತಾನೆ. ಅದನ್ನು ಆಚರಿಸಲು ಅಳವಡಿಸಲು ಅನುವಾಗುತ್ತಾನೆ. ಕ್ಷರಪ್ರಕೃತಿಯಿಂದ ಪರಾಙ್ಮುಖನಾಗುತ್ತಾನೆ. ಆ ಪರಾ ಪ್ರಕೃತಿಯಲ್ಲಿ ನಿಷ್ಠೆಯನ್ನು ನೆಲೆಗೊಳಿಸುತ್ತಾನೆ. ಈ ದೇಹೇಂದ್ರಿಯ ಮತ್ತು ಚಿತ್ತಗಳಿಗಿಂತ ಉತ್ತಮವಾದ ಉನ್ನತವಾದ ತತ್ವದಲ್ಲಿ ಸತ್ವದಲ್ಲಿ ಶ್ರದ್ಧೆಯುಳ್ಳವನಾಗುತ್ತಾನೆ. ಚಿತ್ತವೃತ್ತಿಗಳಿಂದಾಚೆ ಸಾಗಿ ಚಿತ್ತ ಕಾಂಕ್ಷೆಗಳನ್ನೆಲ್ಲ ನೀಗಿ ಚಿನ್ಮಯಾನಂದಕಾಂಕ್ಷಿಯಾಗಿ ಬಾಳುತ್ತಾನೆ. ಪ್ರಕೃತಿಯ ಪರಿಮಿತ ವೃತ್ತಿಗಳನ್ನು ಮೀರುತ್ತಾನೆ. ಪರಿಮಿತ ವಿಚಾರದಾಚೆ ಸಾಗುತ್ತಾನೆ. ಪ್ರಾಕೃತಿಕ ಬಂಧನ ಭಯಗಳಿಂದ ಬಿಡಲ್ಪಡುತ್ತಾನೆ.

ಪ್ರಾಕೃತಿಕ ಜ್ಞಾನ ಪರಿಮಿತ. ಪಾರಮಾರ್ಥ ಜ್ಞಾನ ಅಪರಿಮಿತ ಪ್ರಾಕೃತಿಕ ಜ್ಞಾನವೆಲ್ಲ ಅಜ್ಞಾನ; ಅಪೂರ್ಣಜ್ಞಾನ. ಇವುಗಳ ಪರಿಣಾಮ ಕ್ಷಣಭಂಗುರ; ತೃಣತುಂತುರ. ವ್ಯಷ್ಟಿ ಪ್ರಕೃತಿ, ಸಮಷ್ಟಿ ಪ್ರಕೃತಿಗಳ ಪರಿಣಾಮದಲ್ಲಿಯೇ ಪರ್ಯವಸಾನಗೊಳ್ಳದೆ ಪಾರಾಮಾರ್ಥಿಕ ಪರಾಪ್ರಕೃತಿಯಲ್ಲಿ ಪರಿಣಾಮಗೊಳ್ಳುವ ಸ್ಥಿತಿಯೇ ಮಾಹೇಶ್ವರ ಧರ್ಮ. ಅದನ್ನರಿತು ಅಳವಡಿಸಿಕೊಳ್ಳುವ ಜ್ಞಾತೃ ಕರ್ತೃ ಆಗಬೇಕು.

ಈ ತ್ರಿವಿಧ ಪ್ರಕೃತಿಗಳ ಪ್ರಭುವಾಗಬೇಕು. ಇವುಗಳ ಕ್ರಿಯಾಕಲಾಪಗಳನ್ನು ಕಾಣುವವನಾಗಬೇಕು. ಪ್ರಕ್ಷುಬ್ಧ ಕ್ರಿಯೆಗಳಿಗೆ ಒಳಗಾಗದೆ, ಕ್ರಮರಹಿತ ಕ್ರಿಯೆಗಳಿಗೆ ಕಣ್ಣಿಡದೆ ಕ್ಷಿಪ್ತ ಚಿತ್ತನಾಗದೆ ಇದ್ದು ಇವನ್ನು ಪ್ರಶಾಂತಗೊಳಿಸಿ, ಕ್ರಮಗೊಳಿಸಿ ಅಂಜದೆ ಅಳುಕದೆ ಬಾಳುವ ಬಗೆಯ ಕಂಡುಕೊಳ್ಳುವುದೇ ಮಾಹೇಶ್ವರನ ಮಹಾಸಾಧನ. ಪ್ರಕೃತಿಯ ಪ್ರತಿಕ್ರಿಯೆಗಳನ್ನು ಸಂಯಮಿಸುವ ಶಕ್ತಿ ಸಣ್ಣದಲ್ಲ. ಚಿತ್ತೋದ್ರೇಕವಾಗದಂತಿರುವ ಯೋಗಸಾಮರ್ಥ್ಯ ಮಾಹೇಶ್ವರನಿಗೆ ಸಲ್ಲುವ ಮಾತು. ಚಿತ್ತವಲ್ಲಭನಾಗುವ ಅಗ್ಗಳಿಕೆ ಆತನದು ಪ್ರಶಾಂತಾತ್ಮನಾಗಿರುವ ಪರಮಸ್ಥಿತಿಯೂ ಆತನದೆ! ಆತನು ಕ್ರಿಯಾಜ್ಞಾನಗಳ ಒಡೆಯ. ತ್ರಿವಿಧ ಪ್ರಕೃತಿಗಳ ಒಡೆಯ. ಆತನು ಯಾವಾಗಲೂ ಸತ್ಕ್ರಿಯೆಯಲ್ಲಿ ನಿರತನಾಗಿರುತ್ತಾನೆ. ಎಲ್ಲ ವಸ್ತುಗಳಲ್ಲಿ ಶಿವಸ್ವರೂಪವನ್ನು ಕಾಣುತ್ತಾನೆ. ತನ್ನ ಸತ್ಕ್ರಿಯೆಗಳ ಸತ್ಫಲಗಳನ್ನು ಶಿವನಿರ್ಗಪಿಸುತ್ತಾನೆ.

ಈ ತ್ರಿವಿಧ ಪ್ರಕೃತಿಗಳು ಪರಶಿವನ ಸಂಕಲ್ಪ ಸೃಷ್ಟಿಯೇ ಆಗಿವೆ. ಆತನ ಸತ್ವವನ್ನುಳಿದು ಇವು ಬಾಳವು. ಪ್ರಕೃತಿನಿಷ್ಠ ಪುರುಷನ ಸಾಧನೆಗೆ ತಕ್ಕಂತೆ ಪ್ರಕೃತಿ ಪ್ರವರ್ತಿಸುವುದು, ಪರಿಣಮಿಸುವುದು. ಮಹೋನ್ನತ ಸಾಧನೆಯಿಂದ ಮಹಾತ್ಮತ್ವವನ್ನು ಅಭಿವ್ಯಕ್ತಗೊಳಿಸುವುದು; ಮತ್ತು ಮಹೇಶ್ವರಾನುವರ್ತಿಯಾಗುವುದು.

ಅಪರಾಪ್ರಕೃತಿಯೆನಿಸಿದ ವ್ಯಷ್ಟಿ ಸಮಷ್ಟಿ ಪ್ರಕೃತಿಗಳೆರಡು ಅಧಃಪ್ರಕೃತಿಗಳೆನಿಸಿವೆ; ಅಪೂರ್ಣವೆನಿಸಿವೆ. ಪರಾಪ್ರಕೃತಿಯೆನಿಸಿದ ಪರಮಾತ್ಮ ಪ್ರಕೃತಿಯೇ ಊರ್ಧ್ವ ಪ್ರಕೃತಿಯೆನಿಸಿದೆ; ಪೂರ್ಣಪ್ರಕೃತಿಯೆನಿಸಿದೆ. ಇವೆರಡು ಕ್ಷರ; ಅದು ಅಕ್ಷರ. ಇಲ್ಲಿ ಕ್ಷರವೆಂದರೆ ಪೂರ್ಣನಾಶವಲ್ಲ; ಅವ್ಯಕ್ತವಾಗುವಿಕೆ. ಆ ಪರಾಪ್ರಕೃತಿ ರೂಪದಿಂದ ವ್ಯಕ್ತವಾಗದಾದ್ದರಿಂದ ರೂಪಕ್ಷರತೆಯಿಲ್ಲ. ಅದು ನಿರೂಪ. ಇವೆರಡು ಸರೂಪ. ಆದ್ದರಿಂದ ಇವುಗಳ ರೂಪು ಮಾತ್ರ ಕ್ಷರ (ಅವ್ಯಕ್ತ) ವಾಗುತ್ತದೆ. ಆ ಪರಾಪ್ರಕೃತಿ ಕ್ರಿಯಾ ಜ್ಞಾನೇಚ್ಛೆಗಳಿಂದ ತೋರುತ್ತದೆ. ಅಂತೆಯೇ ಅದು ಅತಿಮಾನಸಪ್ರಕೃತಿಯಾಗಿದೆ. ಅಲ್ಲಿ ಅಂಗನು ಮಹೇಶ್ವರನೊಡನೆ ಸಮರಸಗೊಳ್ಳುತ್ತಾನೆ. ಮಾಹೇಶ್ವರತ್ವವನ್ನು ರೂಢಿಸಿಗೊಳ್ಳುತ್ತಾನೆ.

ಅಂಗನು ತ್ರಿವಿಧ ಪ್ರಕೃತಿಗಳನ್ನೂ ಆತ್ಮನನ್ನೂ ಆ ಪರಶಿವನಿಗೆ ಸಮರ್ಪಿಸುತ್ತಾನೆ; ಸರ್ವಾತ್ಮಸ್ವರೂಪವನ್ನಾಗಿಸುತ್ತಾನೆ. ಸಚ್ಚಿದಾನಂದವನ್ನಾಗಿಸುತ್ತಾನೆ. ನಿತ್ಯಪೂರ್ಣವನ್ನಾಗಿಸುತ್ತಾನೆ. ವಿಶ್ವಾತ್ಮನ ವಿಭೂತಿಯನ್ನಾಗಿಸುತ್ತಾನೆ.

ಪ್ರಕೃತಿ ಜ್ಞಾನದೊಡನೆ ಪುರುಷ (ಜೀವ) ಜ್ಞಾನವನ್ನು ಅಳವಡಿಸಿಕೊಂಡು ಅಿರುಹುತ್ತಾನೆ ಮಾಹೇಶ್ವರನು. ಇಂದಿನ ವಿಜ್ಞಾನಿಗಳು ಹೆಚ್ಚಾಗಿ ಜಡವಿಜ್ಞಾನಕ್ಕೆ ಗಮನವನ್ನಿತ್ತಿದ್ದಾರೆ. ಜೀವ ವಿಜ್ಞಾನ ಹೇಳುವಷ್ಟು ಹೆಚ್ಚಿಲ್ಲ. ಮಾಹೇಶ್ವರಾಂಗನಾದರೋ ಎರಡನ್ನೂ ಸಮತೋಲನದಲ್ಲಿ ಶೋಧನದಲ್ಲಿ ಸಮೀಕ್ಷಿಸುತ್ತಾನೆ, ಶುದ್ಧವಿಸುತ್ತಾನೆ; ಸಂವೃದ್ಧಿಸುತ್ತಾನೆ. ವಿಜ್ಞಾನಿ ಬರೀ ಸಮಷ್ಟಿ ಪದಾರ್ಥ ಸಂಶೋಧಕನಾಗಿದ್ದರೆ ಮಾಹೇಶ್ವರ ಜ್ಞಾನಿ ವ್ಯಷ್ಟಿ-ಸಮಷ್ಟಿಗಳ ಸಂಶೋಧಕನಾಗಿದ್ದಾನೆ. ಆದರೇನು ? ಪೂರ್ವದಲ್ಲಿ ಆದ ಪ್ರಯತ್ನವೇ ಪ್ರಯತ್ನ. ಇತ್ತೀಚೆಗೆ ಹೆಚ್ಚಿನ ಪ್ರಯತ್ನವಿಲ್ಲ; ಹೆಚ್ಚಿನ ಫಲವಿಲ್ಲವಾಗಿದೆ.

ಮಾಹೇಶ್ವರನು ಪೂರ್ಣತ್ಯಾಗಾಂಗ ಜ್ಞಾನಿ. ತ್ಯಾಗಾಂಗದ ಸ್ತರ ಸ್ತರಗಳನ್ನೆಲ್ಲ ವಿಂಗಡಿಸಿ ವಿಚಾರಿಸಿ ವಿವರ್ಧಿಸಲು ೪೨ ಉಪಸ್ಥಲಗಳೆಂಬ ಸಾಧನ ಸೋಪಾನಗಳಿಂದ ಪ್ರಯತ್ನಿಸಿ ಮಾಹೇಶ್ವರತ್ವದ ಮೇಲ್ಮಟ್ಟಕ್ಕೇರುತ್ತಾನೆ. ಈ ದಿಸೆಯಲ್ಲಿ ಹಲವಾರು ನಿಯಮಗಳನ್ನು ಪಾಲಿಸುತ್ತಾನೆ; ಹಲವಾರು ಪ್ರಯೋಗಗಳನ್ನು ಮಾಡುತ್ತಾನೆ. ಹಲವಾರು ಗುಣಗಳನ್ನು ಬಿಡುತ್ತಾನೆ. ದೇಹತತ್ತ್ವ, ಇಂದ್ರಿಯ ತತ್ತ್ವ, ಮನಸ್ತತ್ತ್ವ, ಬುದ್ಧಿ ತತ್ತ್ವಗಳ ಮೇಲೆ ಪೂರ್ಣ ಅಧಿಕಾರವನ್ನು ಪಡೆದಿರುತ್ತಾನೆ. ವ್ಯಕ್ತಿತ್ವವನ್ನು ಎತ್ತಿ ಹಿಡಿದಿರುತ್ತಾನೆ. ಅಂಗಗುಣ, ಚೈತನ್ಯಗುಣಗಳನ್ನು ತಿದ್ದಿ ತಿಳಿಗೊಳಿಸುತ್ತಾನೆ. ಅಂಗ, ಅಂಗಾಂಶಗಳನ್ನೂ ಜೀವ, ಜೀವಕಣಗಳನ್ನೂ ಪರಿಶೀಲಿಸಿ ಪರಿಶೋಧಿಸಿರುತ್ತಾನೆ. ಮಾಹೇಶ್ವರ ಮಾತ್ರನಲ್ಲ, ಮಹಾಕವೀಶ್ವರನೂ ಅಹುದು. ಆತ ಕಾಣದ ಅಂಶವಿಲ್ಲ. ಎಲ್ಲಿಯೇ ಹುದಿಗಿರಲಿ ಅದನ್ನು ಕಾಣುವ ಕಣ್ಣನ್ನು ಪಡೆದಿರುತ್ತಾನೆ. ಕಂಡೆಲ್ಲವನ್ನು ಹಸನಾಗಿಸಲು ಹೆಚ್ಚಿಸಲು ಹೆಣಗಿ ಕೃತ ಕೃತ್ಯನಾಗುತ್ತಾನೆ. ಬುದ್ಧಿ ಜೀವಿಯಾಗಿದ್ದಂತೆ ಭಾವ ಜೀವಿಯೂ ಆಗಿ ಬಾಳನ್ನು ರೂಪಿಸುತ್ತಾನೆ. ಅಂಗಾಂಶಗಳನ್ನು ಜೀವಕಣಗಳನ್ನು ಜಾಗ್ರತಗೊಳಿಸುತ್ತಾನೆ. ಶರೀರಾತ್ಮವೆರಡೂ ಪ್ರಧಾನವೆಂದು ಭಾವಿಸುತ್ತಾನೆ. ಇವುಗಳಲ್ಲಿ ಯಾವುದೊಂದಿಲ್ಲದಿದ್ದರೂ ಈ ಬಾಳು

ಅರೆ ಕೊರೆಯಾಗುತ್ತದೆ. ಒಂದು ಬಲುಲಾಗುತ್ತದೆ ; ಇನ್ನೊಂದು ಬರಡಾಗುತ್ತದೆ. ಮಾನವತೆ ನಿಜವಾಗಿ ವಿಭಾಜ್ಯವಸ್ತುವಲ್ಲ. ಪಲವಾರು ವಸ್ತುಗಳ ಸಮನ್ವಯವಾದಂತೆ ಕಂಡರೂ ಅನಭುಪಾಂತ್ಯದಲ್ಲಿ ಒಂದೇ ವಸ್ತು. ಇದನ್ನು ಸಾಧಿಸಿ ತೋರಿಸುವುದೇ ಐಕ್ಯಸ್ಥಲದ ಮುಖ್ಯೋದ್ದೇಶ. ಇಂದಿನ ಜೀವವಿಜ್ಞಾನ ಷಟ್‌ಸ್ಥಲವಿಜ್ಞಾನದಷ್ಟು ಇನ್ನೂ ಮುಂದುವರಿದಿಲ್ಲೆಂದರೆ ಅತಿಶಯೋಕ್ತಿಯಲ್ಲ.

ಷಟ್‌ಸ್ಥಲ ತತ್ತ್ವ ಅನಾದಿ. ಷಡಂಗ-ಷಡ್ಲಿಂಗ ಶೋಧ ಅನಾದಿ. ಅಂಗಾಂಶವು ಲಿಂಗರೂಪ ಚೈತನ್ಯದಲ್ಲಿ ಸಮರಸಗೊಂಡು ಮರಳಿ ಆ ಲಿಂಗರೂಪ ಚೈತನ್ಯದಿಂದ ಅಂಗಾಂಶವು ಉತ್ಪತ್ತಿಗೊಳ್ಳುತ್ತದೆಂದೂ ಇವೆರಡರ ಪರಿಣಾಮಕ್ಕೆ ರಸೋತ್ಪತ್ತಿಗೆ ಪ್ರಸಾದ-ಪಾದೋದಕಗಳೇ ಕಾರಣವೆಂದೂ ಅಂತೆಯೇ ಇವೆರಡೂ ಪರಶಿವ ಬ್ರಹ್ಮಸ್ವರೂಪವೆಂದೂ ಪರಿಭಾವಿಸಲಾಯಿತು. ಅಂಗವೆಂದರೆ ಜಡಾಜಡವಸ್ತು. ಲಿಂಗವೆಂದರೆ ಕೇವಲ ಅಜಡವಸ್ತು ; ಜೀವಕಳೆ. ಇವೆರಡು ಬೀಜಾಂಕುರಗಳಂತೆ ಅನ್ಯೋನ್ಯವಾದವುಗಳು. ಇವೆರಡಕ್ಕೆ ಪ್ರೇರಕವಾದ ಬೇರೊಂದು ರಹಸ್ಯ ಮಹಾ ಚೈತನ್ಯವಿದೆ. ಅದು ಮಹಾಶಕ್ತಿಸಂಪನ್ನವಾದುದು.

ಭಕ್ತನು ಕ್ರಿಯಾಂಗ ಮತ್ತು ಕ್ರಿಯಾಲಿಂಗಗಳೆರಡರ ಶೋಧ ಮತ್ತು ಸಮರಸ ಸಿದ್ಧಿಗಳನ್ನು ಪಡೆದರೆ ಮಾಹೇಶ್ವರನು ಕ್ರಿಯಾಂಗದೊಡನೆ ಜ್ಞಾನಾಂಗವನ್ನೂ ಕ್ರಿಯಾಂಗದೊಡನೆ ಜ್ಞಾನಲಿಂಗವನ್ನೂ ಪರಿಶೋಧಿಸಿ ಇನ್ನೊಂದು ಹೆಜ್ಜೆ ಮುಂದುವರಿಯುವನು. ಪ್ರಸಾದಿಯು ಮತ್ತೊಂದು ಹೆಜ್ಜೆ ಮುಂದಿಟ್ಟು ಇಚ್ಛಾಂಗದ ಮೇಲೆ ಅಹಂಪ್ರವೃತ್ತಿಯ ಮೇಲೆ ಸಂಯಮವನ್ನು ಸಾಧಿಸುವನು. ಇದರಂತೆ ಪ್ರಾಣಲಿಂಗಿ, ಶರಣ, ಐಕ್ಯಾಂಗರು ಕೆಲಸ ಮಾಡುವರು.

ಷಡಂಗಗಳ ಮತ್ತು ಉಪಾಂಗಗಳ ಉತ್ಪತ್ತಿಗೆ ಷಡ್ರಸಗಳೆ ಬೀಜವೆಂದು ಷಟ್‌ಸ್ಥಲ ಜ್ಞಾನಿಯ ಅಭಿಪ್ರಾಯ. ಅವೇ ಷಡ್ರಸಗಳಲ್ಲಿ ಜೀವಕಣಗಳನ್ನು ಉತ್ಪಾದಿಸುವ ವಸ್ತುಗಳುಂಟೆಂದು ಹೇಳಿ 'ರಸೋವೈಸಃ' ಎಂಬುದನು ದೃಢೀಕರಿಸಿದ್ದಾರೆ. ಇಲ್ಲಿ ವಸ್ತುಗಳೆಂದರೆ ದ್ರವ್ಯಗಳು ಮತ್ತು ಧಾತುಗಳೆಂದರ್ಥ.

ಭೂತ ರಸಾಯನ ಶಾಸ್ತ್ರ ಪರಿಶೋಧನಕ್ಕಿಂತ ಷಟ್‌ಶಾಸ್ತ್ರಾನುಭವ ಪರಿಶೋಧನ ಇನ್ನೂ ಮುಂದುವರಿದಿದೆ. ರಕ್ತದಲ್ಲಿ ಸ್ಥಿರಕ್ಷಾರಕಾಂಶವಿದೆಯೆಂದು ಭೌತರಸಾಯನ ಶಾಸ್ತ್ರವು ಕಂಡುಕೊಂಡಿದ್ದರೆ ಷಟ್‌ಸ್ಥಲ ಶಾಸ್ತ್ರವು ರಕ್ತದ ಗುಣಧರ್ಮಗಳನ್ನೂ ಧೃತಿದ್ರವ್ಯ ಧಾತುಗಳನ್ನು ರಕ್ತಗತ ಚೇತನ ಕಣಗಳನ್ನು ಕಂಡು ಆ ಚೇತನ ಕಣಕ್ಕೆ ಇರುವ ದೈವಿಕ ಪ್ರೇರಕ ಶಕ್ತಿಯನ್ನು ಕಂಡುಕೊಂಡಿದೆ. ಅಲ್ಲದೆ ಅದರ ಶುದ್ಧಿಗೆ ಆ ಶುದ್ಧ ರಕ್ತವೃದ್ಧಿಗೆ ಕ್ರಮಬದ್ಧವಾದ ನೈತಿಕ ಮಾನಸಿಕ ಬೌದ್ಧಿಕ ಶುಭ್ರ ಸಾಧನೆ ಅತ್ಯವಶ್ಯವೆಂಬುದನ್ನು ಷಟ್‌ಸ್ಥಲ ಸಿದ್ಧಾಂತದೊಳಗಿನ ಭಕ್ತ–ಮಾಹೇಶ್ವರ ಸ್ಥಲಗಳು ಮುಮ್ಮೊದಲು ಕಂಡುಕೊಂಡು ಕೈಕೊಂಡು ಜೈವಿಕ ಸುಧಾರಣೆಯಲ್ಲಿ ಮುಂದುವರಿದಿದೆ. ಮತ್ತು ತನ್ನ ಈ ಸತ್ಸಾಧನೆಯಿಂದ ನರ ನರಗಳಲ್ಲಿ ಸಮತೋಲನ ಸ್ಥಿತಿ, ಸಹಜ ಧೈರ್ಯ ಸ್ಥೈರ್ಯ, ಸತ್ಕ್ರಿಯಾ ಸಮ್ಯ ಜ್ಞಾನಗಳ ಚಲನೆ ಸಂಪಾದಿತವಾಗುತ್ತದೆ. ಸಾಧಕನ ಅಭಿರುಚಿ ಅತ್ಯುತ್ತಮಗೊಳ್ಳುತ್ತದೆ. ವೈಷಯಿಕ ವಾಸನಾ ಪ್ರವೃತ್ತಿ ನಿವೃತ್ತಿಯಾಗುತ್ತದೆ. ಸ್ವಭಾವವು ಸತ್ಪ್ರೇರಕವೂ ಸಹಾಯಕವೂ ಆಗಿ ಪರಿಣಮಿಸುತ್ತದೆ. ಅಂಗಾಂಗಗಳಲ್ಲಿ ತರತಮ ಭಾವವನ್ನು ತೆಗೆದುಹಾಕುತ್ತದೆ. ವಿಶಿಷ್ಟವಾದ ವಿಶ್ಲೇಷಣೆ–ಪರಿಶೀಲನೆ ಜರಗುತ್ತದೆ. ವಾಸ್ತವಾಂಶದ ನಿರ್ಣಯಕ್ಕೆ ನಿಲುಕಿಸುತ್ತದೆ.

ಷಟ್‌ಸ್ಥಲಗಳ ಪುನರ್ವಿಮರ್ಶೆ, ಪೂರ್ಣವಿಮರ್ಶೆ ಅನಿವಾರ್ಯ. ಹಳೆಗಾಲದಿಂದ ಬಂದ ವಿಚಾರಗಳಲ್ಲಿ ವಿವರಣೆಯ ಕೊರತೆಯಿದೆ. ನವೀನ ಕಾಲಕ್ಕೆ ತಕ್ಕಂತೆ ಬೇಕಾಗುವ ಹೊಸದೃಷ್ಟಿ ಬೇಕಾಗಿದೆ. ಸ್ಪಷ್ಟ ಭಾವಗಳನ್ನು ಕಾಣುವ ಸಾಹಿತ್ಯ ಅಗತ್ಯವಾಗಿದೆ. ಹಿಂದಿನ ಅರ್ಥಗರ್ಭಿತ ಉಕ್ತಿಗಳನ್ನು ವಿಂಗಡಿಸಿ ವಿಶ್ಲೇಷಿಸಿ ವಿಷಯಗ್ರಾಹಿಕೆಯಾಗುವಂತೆ ವಿಪುಲವಾಗಿ ರೂಪಿಸಿ ಚೆಲುವಾಗಿಸಬೇಕಾಗಿದೆ. ಅವಧಾನ ಅನುಭವಗಳಿಂದ ಸ್ಥಲ ಸ್ಥಲಗಳ ಆಳ–ಅಗಲಗಳನ್ನು ಅಳೆದು ನಿಲುಮೆಯನ್ನು ಗುರುತಿಸಬೇಕಾಗಿದೆ. ವಿವಿಧ ವಿಚಾರಾನುಭವಗಳ ಸಂಗ್ರಹ, ಪರಿಶೀಲನೆ ತುಲನೆಗಳು ಸಮರ್ಪಕವಾಗಿ ಸಾಗಬೇಕಾಗಿದೆ. ಷಟ್‌ಸ್ಥಲಾಭ್ಯಾಸಕ್ಕೆ ಸೌಕರ್ಯವೊದಗಬೇಕಾಗಿದೆ. ಹೆಜ್ಜೆ ಹೆಜ್ಜೆಗೂ ಸುತ್ತಿ ಮುತ್ತಿ ಬರುವ ಸಂದೇಹಗಳು ನಿವಾರಣೆಯಾಗುವಂತೆ ಸಾಧ್ಯವಿದ್ದ ಮಟ್ಟಿಗೂ ಷಟ್‌ಸ್ಥಲಮೀಮಾಂಸೆ ನಡೆಯಬೇಕಾಗಿದೆ. ಷಟ್‌ಸ್ಥಲ ಜ್ಞಾನದ ಪ್ರಗತಿ ಮಾಂದ್ಯವನ್ನು ಕಳೆದುಕೊಂಡು ತೀವ್ರವಾಗಬೇಕಾಗಿದೆ. ಜಟಿಲತೆ ಅಳಿದು ಸಹಜತೆ

ಉಳಿದು ಜೀವನ ಕ್ರಮದಲ್ಲಿ ಹಾಸು ಹೊಕ್ಕಾಗಿ ನೆಲಸಬೇಕಾಗಿದೆ. ಹೆಚ್ಚಿನ ಜ್ಞಾನಾರ್ಜನೆಯಾಗಬೇಕಾಗಿದೆ.

"ಆರು ಸ್ಥಲವ ಬಿಟ್ಟು ಬೇರೆ ತರದ ಭಾವವಾವುದಯ್ಯಾ ? ಸಕಲ ಗುಣಂಗಳನರಿತು ಸರ್ವ ಜೀವಕ್ಕೆ ದಯಾಪರನಾಗಿಪ್ಪುದು ಭಕ್ತಸ್ಥಲ, ಸಕಲ ದೇಹ ಭಾವಂಗಳಲ್ಲಿ ತಲೆದೋರದಿಪ್ಪುದು ಗುರುಸ್ಥಲ. ಉತ್ಪತ್ತಿ ಸ್ಥಿತಿಲಯಕ್ಕೆ ಹೊರಗಾದುದು ಲಿಂಗಸ್ಥಲ. ಆ ಮೂರ ಹೆರೆಹಿಂಗಿ ನಿಂದುದು ಜಂಗಮಸ್ಥಲ. ಆ ಚತುರ್ವಿದವನೊಳಕೊಂಡುದು ಶರಣಸ್ಥಲ. ಆ ಐದನಂಗವಿಸಿ ನಿಂದುದು ಐಕ್ಯಸ್ಥಲ, ಭಕ್ತ, ಗುರು, ಲಿಂಗ, ಜಂಗಮ, ಶರಣ, ಐಕ್ಯನೆಂಬವು ಒಂದೇ ಸ್ಥಲ. ಮರೆದು ಅರಿದಲ್ಲಿ ಆಯಿತ್ತು—ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಷಡಂಗಲೇಪವಾಗಿ ಸ್ವಯಂಭುವಾಯಿತ್ತು" ಶಿವಲೆಂಕಮಂಚಣ್ಣನ ಈ ವಚನದಲ್ಲಿನ ಷಟ್‌ಸ್ಥಲ ನಾಮ ನಿರ್ದೇಶ ನವೀನವಾಗಿವೆ ; ಗಮನಾರ್ಹವಾಗಿವೆ.

ಮಾನವನ ಉಭಯಾಂಗಗಳಲ್ಲಿನ ಪ್ರತಿಯೊಂದಂಶಕ್ಕೂ ಅರ್ಥವಿದೆ ; ಅಗತ್ಯತೆಯಿದೆ. ಈ ದಿಸೆಯಲ್ಲಿ ಕೇವಲ ದಾರ್ಶನಿಕ ದೃಷ್ಟಿಯೇ ಪೂರ್ಣ ಪ್ರಮಾಣವಾಗದು, ಸ್ವಾನುಭವ ಪ್ರಮಾಣವೂ ಸಂಪೂರ್ಣತೆಗೊಯ್ಯುವ ಸಬಲ ಪ್ರಮಾಣವಾಗಬಲ್ಲುದು. ಆ ಆ ಅಂಗ–ಲಿಂಗಗಳ ಗುಣಧರ್ಮಸ್ವಭಾವಗಳ ದೃಷ್ಟಿಯಿಂದ ಸಹಜವಾಗಿ ವಿಶ್ಲೇಷಿಸಬೇಕು ; ವಿಶೋಧಿಸಬೇಕು. ಈ ಕಾರ್ಯವನ್ನು ಮಾಡುತ್ತದೆ ಷಟ್‌ಸ್ಥಲ ಸಿಂದ್ಧಾಂತ. ಇದು ಮಾನವನ ಶಾರೀರಿಕ, ಚೈತ್ತಿಕ, ಬೌದ್ಧಿಕ, ಅಹಂಕಾರಿಕ, ಜ್ಞಾನಿಕ, ಭಾವಿಕ, ನೈತಿಕ, ಧಾರ್ಮಿಕ, ಆತ್ಮಿಕ ಮುಂತಾದವುಗಳ ಸತ್ಯವಾದ ಶಿವವಾದ ಸೌಂದರ್ಯೋಪಾಸನೆಯ ಮಾಡ ಹೊರಟಿದೆ. ಸಾಮಾಜಿಕ ಸಮನ್ವಯವನ್ನು ಕಾರ್ಮಿಕ–ಆರ್ಥಿಕ ಶುದ್ಧತೆಯನ್ನು ಸಮರ್ಪಕತೆಯನ್ನು ಸಾಧಿಸಲು ಸನ್ನದ್ಧವಾಗಿದೆ.

ಯಾವ ಯಂತ್ರ ತಂತ್ರಗಳೂ ತೂಗಿನೋಡದ ಮಾನವ ಮಹಾಘನತೆಯನ್ನು ಷಟ್‌ಸ್ಥಲಸಿದ್ಧಾಂತ ತೂಗಿ ನೋಡುತ್ತದೆ. ಯಾವ ರವಿ–ಕವಿಗಳೂ ಕಾಣದ ಮಾನವ ಜೀವನ ಪ್ರಭೆಯನ್ನು ಅಥವಾ ಪ್ರಭಾವವನ್ನು ಷಟ್‌ಸ್ಥಲಶಾಸ್ತ್ರ ಕಂಡುಕೊಳ್ಳುತ್ತದೆ. ಮಾನವಜೀವನದ ಸಮಸ್ತ ಆಚಾರ–ವಿಚಾರ-ಅನುಭವ–ಆನಂದಾದಿಗಳನ್ನು ಸಂಗ್ರಹಿಸಲು ಸೋಜ್ವಲಗೊಳಿಸಲು ಸಮರ್ಥವಾಗಿದೆ ಷಟ್‌ಸ್ಥಲ ತತ್ವ. ಧರ್ಮ, ದಾನ, ದಯೆ, ನೀತಿ, ಶಾಂತಿ, ರೀತಿ, ಪ್ರೀತಿ, ನಯ

ನಿಷ್ಠೆ, ಅವಧಾನ, ಆರೋಗ್ಯ, ಸಮನ್ವಯ, ಸಮರಸಗಳನ್ನು ಪೂರ್ಣವಾಗಿ ಪಾವನವಾಗಿ ಬೆಳೆದು ಕೊಡುವ ಭೂಮಿಯಾಗಿದೆ ಷಟ್‌ಸ್ಥಲ. ಎಲ್ಲ ಪದಾರ್ಥಗಳ ಪರಿಚಯವನ್ನು, ಹಾವಾಡಿಗನ ಹಾವಿನಂತೆ ಪ್ರಪಂಚದ ಸಹಕಾರವನ್ನು, ಪರಮಾರ್ಥದ ಸರ್ವಸ್ವವನ್ನು ಸಂಪಾದಿಸಿಕೊಡುತ್ತದೆ ಷಟ್‌ಸ್ಥಲ. ಮಾನವನ ಶಾರೀರಿಕ ಮಾನಸಿಕ ಬೌದ್ಧಿಕ ಸರ್ವ ವ್ಯಾಪಾರಗಳನ್ನು ಶುದ್ಧಿ ಮತ್ತು ವೃದ್ಧಿಗೊಳಿಸುತ್ತದೆ, ಶಿವಸೌಂದರ್ಯೋಪಾಸನೆಗೆ ಸಂಪೂರ್ಣ ಸಹಾಯಕವಾಗಿದೆ. ಷಟ್‌ಸ್ಥಲಸಾಧಕನು ದೂರದರ್ಶಿಯು, ಸೂಕ್ಷ್ಮದರ್ಶಿಯು ಆಗ ಬಲ್ಲನು. ಆ ಪರಾವಾಣಿಯ ಪ್ರಭಾವವನ್ನು ಹೆಚ್ಚಿಸಿಕೊಳ್ಳಬಲ್ಲನು. ಆ ಆತ್ಮರುಚಿಯನ್ನು ಅತ್ಯಂತ ಮಧುರವಾಗಿಸಿಕೊಳ್ಳಬಲ್ಲನು. ಆ ಆತ್ಮಾನುಭವ ಆ ಆತ್ಮಾನಂದಗಳಲ್ಲಿ ಬಹು ದೂರ ಬಹು ಎತ್ತರಸಂಚರಿಸಬಲ್ಲನು. ಆತನಿಗೆ ಸಾಗರದ ಅಗಲ ಸಣ್ಣದಾಗಬಲ್ಲದು; ಹಿರಿದಾದ ಪರ್ವತ ಶಿಖರಗಳು ಕಿರಿದಾಗಬಲ್ಲವು. ಮುಗಿಲಾಚೆ ತೂರಿ ತುರ್ಯಾತೀತದ ಗುರಿಯನ್ನು ಸಾರಬಲ್ಲನು. ಆದ್ದರಿಂದ ಷಟ್‌ಸ್ಥಲ ಜ್ಞಾನಿಯು ಬರೀ ಭೌತಿಕ ವಿಜ್ಞಾನಕ್ಕೆ ಮನಸೋಲದೆ ಷಟ್‌ಸ್ಥಲ ಜ್ಞಾನಕ್ಕೆ ಆಕರ್ಷಿತನಾಗಿದ್ದಾನೆ. ಬ್ರಹ್ಮಾಂಡ ಶೋಧಕ್ಕಿಂತ ಪಿಂಡಾಂಡ ಶೋಧ ಅತ್ಯಂತ ಅಗತ್ಯವೆನ್ನುತ್ತಾನೆ. ಅಧ್ಯಾತ್ಮಿಕ ಶೀಲ ನಿರೂಪಣೆಯನ್ನು ಮತ್ತು ಶಿವ ಸೌಂದರ್ಯೋಪಾಸನೆಯನ್ನು ಮಿಗಿಲಾಗಿ ಮೆಚ್ಚಿಕೊಂಡಿದ್ದಾನೆ. ಪಿಂಡಾಂಡದ ಆವರಣದಲ್ಲಿ ಪ್ರಪಂಚ–ಪರಮಾರ್ಥಗಳೆರಡರ ಹೆಚ್ಚಳಸನ್ನು ಬೆಳೆಯಬೇಕೆನ್ನುತ್ತಾನೆ. ಉನ್ನತ ಭಾವಗಳನ್ನು ಬೆಳಗಿಸಬೇಕೆನ್ನುತ್ತಾನೆ. ಸಣ್ಣ ಬೀಜದಲ್ಲಿ ದೊಡ್ಡ ಮರವನ್ನು ಕಾಣುವಂತೆ ಪಿಂಡಾಂಡ ಪ್ರಪಂಚದಲ್ಲಿ ಬ್ರಹ್ಮಾಂಡವನ್ನು ಬ್ರಹ್ಮವನ್ನು ಕಾಣಬಯಸುತ್ತಾನೆ; ಕಾಣುತ್ತಾನೆ.

ಷಟ್‌ಸ್ಥಲವು ಪ್ರತಿಯೊಬ್ಬರಿಗೂ ತನ್ನದೇ ಆದ ಸ್ವತಂತ್ರ ಅಸ್ತಿತ್ವವನ್ನು ಸಾಮಾಜಿಕ ವ್ಯಕ್ತಿತ್ವವನ್ನು ಗಳಿಸಿ ಕೊಡುತ್ತದೆ. ಪ್ರತ್ಯಂಗದಲ್ಲಿ ಪರಮದೈವೀಭಾವವನ್ನು ಪ್ರತಿಯೊಬ್ಬನಲ್ಲಿ ಶೈವೀಸ್ವರೂಪವನ್ನು ಕಾಣುವಂತೆ ಮಾಡುತ್ತದೆ. ಪ್ರತಿಕ್ರಿಯೆಯಲ್ಲಿ ಸತ್ಯಶುದ್ಧತೆಯನ್ನು ಸುವಿಚಾರವನ್ನು ಸಮರಸಗೊಳಿಸುತ್ತದೆ. ಇದರಿಂದಾಗಿ ಷಟ್‌ಸ್ಥಲ ಸಂಪನ್ನನ ಸ್ವರೂಪ ಸರ್ವಸ್ವವು ಶಿವವಾಗಿ ಸರ್ವಾದರಣೀಯವಾಗುತ್ತದೆ. ಷಟ್‌ಸ್ಥಲಜ್ಞಾನಿಯು ಪ್ರಾಕೃತಿಕ ಪ್ರವಾಹದಲ್ಲಿ ಸಾಮಾನ್ಯ ಸನ್ನಿವೇಶದಲ್ಲಿ ತನ್ನ ವಿಶಿಷ್ಟವ್ಯಕ್ತಿತ್ವವನ್ನು ತೇಲಿಹೋಗಗೊಡುವುದಿಲ್ಲ. ತನ್ನ

ಜೀವನವನ್ನು ಆದಷ್ಟು ಆಂತರಿಕವಾಗಿಸಿ ಉದಾತ್ತಗೊಳಿಸುತ್ತಾನೆ. ಉನ್ನತವಾದ ತನ್ನ ಜೀವನದಿಂದ ಸಾಮಾಜಿಕ ಕ್ಷೇತ್ರದಲ್ಲಿ ಉತ್ತಮಿಕೆಯ ಬೀಜಗಳನ್ನು ಬಿತ್ತಿ ನಯ, ನೀತಿ, ಧರ್ಮ, ದಯೆ, ಕಲೆ, ಕಾಂತಿ, ಜ್ಞಾನಾನುಭವಗಳನ್ನು ಬೆಳೆಯು ತ್ತಾನೆ. ಬೆಳೆದುದನ್ನು ಉತ್ತಮ ಸ್ಥಿತಿಯಲ್ಲಿ ಇರಿಸುತ್ತಾನೆ.

ಬರೀ ದೇಹದಿಂದ, ಬರೀ ಆತ್ಮದಿಂದ ಮಾನವನಾಗುವುದಿಲ್ಲ. ಇವೆರಡರ ಸಮ್ಮಿಲನದಲ್ಲಿ ಮಾನವತ್ವವಿದೆ. ಇವೆರಡು ಬೇರೆ ಬೇರೆ ಆದರೆ (ಆಗು ವಂತಿಲ್ಲ) ಜೀವವಿಲ್ಲ. ಜಗತ್ತಿಲ್ಲ. ಶರೀರ ಸ್ಥೂಲಮಾನದಿಂದ ಬೇರಾದಂತೆ ಸತ್ತಾಗ ಕಂಡರೂ ಸೂಕ್ಷ್ಮದಲ್ಲಿ ಬೇರಾಗಿರುವುದಿಲ್ಲ: ಬೇರಾಗುವುದಿಲ್ಲ. ದೇಹಕಣ ಗಳು ಜೀವದಲ್ಲಿವೆ: ಜೀವಕಣಗಳು ದೇಹದಲ್ಲಿವೆ.

"ಕಾಯವಿದ್ದಲ್ಲದೆ ಜೀವಕ್ಕೆ ನೆಲೆಯಿಲ್ಲ. ಜೀವವಿದ್ದಲ್ಲದೆ ಜ್ಞಾನಕ್ಕೆ ಕುರು ಹಿಲ್ಲ. ಜ್ಞಾನವಿದ್ದಲ್ಲದೆ ಬೆಳಗಿಗೆ ಒಡಲಿಲ್ಲ. ಒಂದಕ್ಕೊಂದ ಹಿಂಗಿ ಕಾಂಬ ಠಾವ ಹೇಳಾ, ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವೇ ?" ಎಂದು ಶಿವಲೆಂಕ ಮಂಚಣ್ಣನು ನಿರೂಪಿಸಿದ್ದಾನೆ.

ಶಾರೀರಿಕ ಮಾನಸಿಕ ಗುಣಧರ್ಮಗಳ ಪರಿಣಾಮ ಚೇತನದ ಮೇಲಾಗದೆ ಇರುವುದಿಲ್ಲ. ಚೇತನದ ಚಟುವಟಿಕೆಗಳ ಪ್ರಭಾವ ಶರೀರಾದಿಗಳ ಮೇಲಾಗ ವೆಂದಲ್ಲ. ಹೊರಗಿನ ವಾತಾವರಣದ ಪರಿಣಾಮವೇ ಮಾನವನ ಮೇಲುಂಟಾಗು ವಾಗ ತನು ಮನ ಭಾವ ಚೇತನಗಳ ಪರಿಣಾಮ ಪರಸ್ಪರ ಉಂಟಾಗವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಇತ್ತ ಅಂಗಾಂಗ ಗಳನ್ನು ಅತ್ತ ಚೇತನವನ್ನು ಪ್ರತಿನಿಧಿಸಬಲ್ಲ ಮತ್ತು ಪೋಷಿಸಬಲ್ಲ ರಸವನ್ನು ನಿರ್ಮಲಗೊಳಿಸಬಲ್ಲ ಕಾರ್ಯ, ನಿಯಂತ್ರಣಗೊಳಿಸಬಲ್ಲ ಸ್ಥೈರ್ಯ ಎಷ್ಟಾದರೂ ಅಗತ್ಯವಿದೆ. ಈ ಬದುಕು ಮಾಹೇಶ್ವರಾಂಗನಿಗೆ ಸೇರಿದ ಮಾತು. ರಸವ್ಯಗ್ರವಾಗದಂತೆ ಉಗ್ರವಾಗದಂತೆ ನೋಡಿಕೊಳ್ಳಬೇಕಾಗುತ್ತದೆ. ಕಲ್ಮಷವಾಗದಂತೆ ಕಾಪಾಡಬೇಕಾಗುತ್ತದೆ. ಚೇತನಾಚೇತನಗಳ ಸಮನ್ವಯಕ್ಕೆ ಸಂಪನ್ಮೂಲವಾದ ರಸಸಂಸ್ಕಾರ, ರಸಶುದ್ಧಿ, ರಸವೃದ್ಧಿಗಳ ವಿಷಯ ತುಂಬ ಗಮನಾರ್ಹವಾದುದದಾಗಿದೆ. ಈ ವಿಚಾರದ ಈ ಉದ್ಯಮದ ಒಡೆತನವನ್ನು ಷಟ್‌ಸ್ಥಲ ಸಾಧಕನು ಅದರಲ್ಲಿಯೂ ಭಕ್ತಾಂಗತ್ವವನ್ನು ಆಳವಡಿಸಿಕೊಂಡವನು ವಹಿಸಿಯೇ ತೀರ ಬೇಕಾಗುತ್ತದೆ. ಜೀವಸರದ ದೋಷ ಗಳನ್ನೂ ದೂರಮಾಡಬೇಕಾಗುತ್ತದೆ. ಜೀವರಸ ನಿರ್ದೋಷವಾದರೆ ಶಾರೀರಿಕ

ಮತ್ತು ಮಾನಸಿಕ ರೋಗಗಳು ಕ್ಲೇಶಗಳು ಬಹುಮಟ್ಟಿಗೆ ದೂರಾಗುತ್ತವೆ. ಒಂದು ವೇಳೆ ಸಂಚಿತ ಕರ್ಮದ ಫಲವಾಗಿ ಆನುವಂಶಿಕ ಕಾರಣವಾಗಿ ರೋಗಗಳಿದ್ದರೂ ರೋಗಜನ್ಯ ಕ್ಲೇಶಗಳಿಗೆಡೆಯಿರುವುದಿಲ್ಲ. ಬುದ್ಧಿಬಲ ಭಾವಬಲ ಜೈವಿಕ ಬಲಗಳು ಹೆಚ್ಚಿ ಇವುಗಳ ಕಾರ್ಯಗಳಲ್ಲಿ ಮೈಮರೆತು ಮನಮರೆತು ಇರುವ ಸನ್ನಿವೇಶ-ಸುಯೋಗಗಳೊದಗುತ್ತವೆಂಬುದು ಸ್ವಾನುಭವ ವಿಷಯವಾಗಿದೆ.

## ಸಾಮಾಜಿಕ ಜೀವನ ಸಂವಿಧಾನ.

ಮಾನವನ ಬಾಳು ತುಂಬಿ ಬರಬೇಕಾದರೆ— ತೊಡಕಿಲ್ಲದಿರಬೇಕಾದರೆ ಸಾಮಾಜಿಕ ಸಂವಿಧಾನದೊಡನೆ ಹೊಂದಿಕೊಂಡು ಹೋಗಬೇಕು. ಅಪೇಕ್ಷಿಸು ವಷ್ಟು ಸಹಕಾರ ಸೌಲಭ್ಯಗಳು ಸಂಪ್ರಾಪ್ತವಾಗದಿದ್ದರೂ ಬಹುಮಟ್ಟಿಗೆ ನೆರವೊದಗುತ್ತದೆ. ಸ್ವಶಕ್ತಿಯಿದ್ದರೆ ಹೆಚ್ಚು ಅನುಕೂಲ. ಸಮಾಜ ಶಾಸಕನಾಗುವ ಸನ್ನಿವೇಶವೂ ಸನ್ನಿಹಿತವಾಗುತ್ತದೆ. ಶ್ರೇಷ್ಠವಾದ ಸಾಮಾಜಿಕ ನಿಯಮಗಳನ್ನು ನಡೆಯಿಸಿದಲ್ಲಿ ಹತಾಶರಾಗುವ ಸಂಭವವಿರುವುದಿಲ್ಲ. ಇಚ್ಛೆಗಳನ್ನು ಈಡೇರಿಸಿಕೊಳ್ಳಲು ಸ್ವೇಚ್ಛೆಯಾಗಿ ಸ್ಪರ್ಧೆಯ ಮನೋಭಾವವುಳ್ಳವನಾಗಿ ವರ್ತಿಸಬಾರದು. ಅನರ್ಥಕ್ಕೆ ಅಪಾಯಕ್ಕೆ ಎಡೆಯಾಗದಂತೆ ಹೊಂಚಿ ನಡೆಯಬೇಕು. ಮಿಗಿಲಾಗಿ ಸಾಮಾಜಿಕ ಸಂವಿಧಾನಗಳ ಹಂಚಿಕೆಯಲ್ಲಿರಬೇಕು. ಸ್ವಾರ್ಥ ಮನೋಭಾವವನ್ನು ಆದಷ್ಟೂ ಕಡಿಮೆಮಾಡಬೇಕು. ಕುಯುಕ್ತಿಗಿಂತ ಹೆಚ್ಚು ಋಜುಮಾರ್ಗಗಾಮಿಯಾಗಿರಬೇಕು. ಬುದ್ಧಿಶಕ್ತಿಯಿಂದ ವಿಶಾಲಭಾವದಿಂದ ಸಮಾಜಾಭ್ಯುದಯಕ್ಕಾಗಿ ಸದಾ ಶ್ರಮಿಸಬೇಕು. ಆದರೆ ಈ ಸಾಮೂಹಿಕ ಶ್ರಮದಲ್ಲಿ ಆತ್ಮಶಾಂತಿಯನ್ನು ಹಾಳುಮಾಡಿಕೊಳ್ಳಬಾರದು. ಯಾಂತ್ರಿಕಜೀವಿಯಾಗಬಾರದು. ಆತ್ಮಪ್ರತಿಷ್ಠೆಯೆ ಬದುಕಿನ ಗುರಿಯಾಗಿರಬಾರದು. ಒಳಗೊಂದು ಹೊರಗೊಂದಾಗಿ ಸಮಾಜವನ್ನು ವಂಚಿಸಬಾರದು. ವಿಭಾಗಿಸಿ ಆಳುವ ಹಂಬಲವಿರಬಾರದು. ಕುಲಛಲಹಿಡಿದು ಹೊಲಬುಗೆಡಬಾರದು. ಪ್ರಗತಿಯ ವೇಷದಲ್ಲಿ ಸನಾತನ ಸಂವಿಧಾನ ನುಗ್ಗಾಗಬಾರದು. ಸಮಭಾವ ಸಮಸಾಂಗತ್ಯಗಳಿಗೆ ತಿಲಾಂಜಲಿಯನ್ನು ತೆತ್ತಬಾರದು. ಹೀನ ಮನಸ್ಸಿನ ವಿಷಮ ಸನ್ನಿವೇಶಗಳನ್ನು ತಂದೊಡ್ಡಬಾರದು. ವಕ್ರವಾಗಿ ಕ್ರೌರ್ಯವಾಗಿ ಸಾಗಿ ಸಮಾಜವನ್ನು ದುರ್ಲಕ್ಷಿಸಬಾರದು. ಮೂಢ ಸಮಾಜವನ್ನು ತನ್ನ ಸ್ವಾರ್ಥದ ಆಡಂಬೊಲ

ವನ್ನಾಗಿಸಿಕೊಳ್ಳಬಾರದು. ಸಾಮಾಜಿಕ ಸಂಸ್ಕೃತಿಗೆ ವಿಘಾತಕವಾದ ಕಾರ್ಯವನ್ನು ಕೈಗೊಳ್ಳಬಾರದು. ಸಾಮೂಹಿಕೋದ್ಯಮದ ಸೋಗಿನಲ್ಲಿ ಸಾಮಾಜಿಕರನ್ನು ಹಿಂಡಿ ಹಿಪ್ಪೆ ಮಾಡಬಾರದು. ಇಂದು ಹಣ ಗಳಿಸಲು ಹಲವು ಮಾರ್ಗಗಳಿವೆ. ಗಳಿಸಿದ ಆ ಹಣದ ಬಲದಿಂದ ಸ್ಥಾನ ಮಾನಗಳನ್ನು ಕೈಗೂಡಿಸಿಕೊಳ್ಳುವ ಕ್ಷೇತ್ರಗಳಿವೆ. ಹೀಗೆ ಮಾಡುವುದರಿಂದ ಯಾವ ಪ್ರಯೋಜನವಿಲ್ಲ. ಇದು ಪತನ ಮತ್ತು ಪಾತಕ ಕಾರಣವೇ ಹೊರತು ಪರಮಾರ್ಥ ಕಾರಣವಲ್ಲ. ಆದ್ದರಿಂದ ವಿನಾಶಕ ವಿಧಾನಗಳನ್ನು ವಿಸರ್ಜಿಸಿ ವಿಧಾಯಕ ಸಂವಿಧಾನಗಳನ್ನು ಕೈಕೊಳ್ಳಬೇಕು. ಪ್ರತ್ಯಂಗದಲ್ಲಿಯೂ ಸುವಿಧಾನ ಅತ್ಯಗತ್ಯ.

# ವ್ಯಕ್ತಿತ್ವ ವ್ಯಾಪ್ತಿ

ಮಾನವನು ತನ್ನ ಬೌದ್ಧಿಕ ಸತ್ವದಿಂದ ತನ್ನ ವ್ಯಕ್ತಿತ್ವವನ್ನು ಬೇರೆ ಪ್ರಾಣಿಗಳಿಗಿಂತ ಬೇರ್ಪಡಿಸಿಕೊಂಡಿರುವನು. ಆದರೆ ಅಷ್ಟೇ ಸಾಲದು. ಮಾನವರಲ್ಲಿ ವೈಶಿಷ್ಟ್ಯವನ್ನು ಗಳಿಸಲು ಪ್ರಯತ್ನಿಸುವನು. ಸಾಮಾಜಿಕ ಸಂವಿಧಾನಗಳಿಂದ ಶ್ರೇಷ್ಠನೆನಿಸಲು ಸಾಹಸಗೊಳ್ಳುವನು. ಮುಂದುವರಿದು ಸರ್ವಭೂತ ಹಿತರತನಾಗಿ ವಿಶ್ವ ವಿಶಾಲವಾದ ವ್ಯಕ್ತಿತ್ವವನ್ನು ವರ್ಧಿಸುವ ಶಕ್ತಿ ಯುಕ್ತಿಯುಳ್ಳವನಾಗುವನು. ಮೈಗೆ ಮಿತಿಯಿದೆ. ವ್ಯಕ್ತಿತ್ವಕ್ಕೆ ಮಿತಿಯಿಲ್ಲ. ಮಾನವನದು ಮಹಾಶಕ್ತಿ ; ವ್ಯಾಪಕ ಶಕ್ತಿ. ಚೈತನ್ಯ ವಿಶಿಷ್ಟ ವ್ಯಕ್ತಿತ್ವಕ್ಕೆ ಚರಾಚರ ಜಗತ್ತು ಒಂದು ಕಿಂಚಿತ್ತು. ಈ ನೈಜ ನಿಷ್ಠೆಯನ್ನು ಬೆಳೆಸಿಕೊಂಡ ಮಾಹೇಶ್ವರನು ದೇಹದ ಎಲ್ಲೆಯನ್ನು ಮೀರಿ ದೇಶ ದೇಶಗಳಲ್ಲಿ ದೂರ ವ್ಯಾಪಿಸುವ ಅತ್ಯದ್ಭುತ ಶಕ್ತಿಯನ್ನು ಸಂಪಾದಿಸಬಲ್ಲನು ಈ ಮಹಾ ವ್ಯಕ್ತಿತ್ವ ಸಂಪಾದನೆಯಿಂದ ಮಾಹೇಶ್ವರನೆಂಬ ನಾಮ ಸಾರ್ಥಕವಾಗುವುದು. ಪೃಥ್ವ್ಯಂಗ-ಜಲಾಂಗಗಳೆರಡರ ಸಂಯಮನದಿಂದ ಈ ವಿಶಿಷ್ಟಶಕ್ತಿ ಸಂಭವಿಸುತ್ತದೆ. ಮೈಗಿಂತ ಮನಸ್ಸು ವ್ಯಾಪಕ. ಮನಸ್ಸಿಗಿಂತ ಬೌದ್ಧಿಕ ಮತ್ತು ಆತ್ಮಿಕ ಪ್ರಭಾವ ವ್ಯಾಪಕ. ಸಹೃದಯತೆ ಸೌಜನ್ಯ ಶಾಂತಿ ಸ್ವಾನುಭವ ಚಿತ್ಕ್ರಿಯಾಶಕ್ತಿ ಇವು ವ್ಯಕ್ತಿತ್ವದ ಉತ್ತಮ ಪ್ರತೀಕಗಳು. ಇವುಗಳ ಪ್ರಸಾರಕ್ಕೆ ಬೇರೆಯಾವ ಅಡೆತಡೆಗಳಿರುವುದಿಲ್ಲ. ಆತ್ಮಶಕ್ತಿ ಪರಮವಾದರೆ ಅದರ ವ್ಯಾಪ್ತಿಗೆ ಸೀಮೆಯಿರುವುದಿಲ್ಲ. ವಿಶ್ವ ಆದಕ್ಕೊಂದು ಚಿಕ್ಕ ಪ್ರದೇಶವಾಗಿ ಪರಿಣಮಸುತ್ತದೆ. ಅದು ಕೇವಲ ಕಾರ್ಯ ಬಂಧನದಲ್ಲಿ ಮನೆ ಮಠ ಊರು ನಾಡುಗಳ ಬಂಧನದಲ್ಲಿ ಇರದು. ಪ್ರಪಂಚದ ಪರಿಮಿತಿಯಲ್ಲಿ ನೆಲೆ ನಿಲ್ಲದು. ಇದು ಎಲ್ಲರಿಗೂ ಎಟಕುವ ಸಾಧಿಸುವ ಸಾಮರ್ಥ್ಯವಲ್ಲ. ಮಾಹೇಶ್ವರನ ವಿಚಾರಪ್ರಭೆ ವಿದ್ಯುತ್ಕಿರಣದಂತೆ ವಿಶಾಲವಾಗಿ ಪ್ರಸರಿಸಬಲ್ಲವು. ಆತನ ದಿವ್ಯದೃಷ್ಟಿಯ ದಿವ್ಯದೀಪ್ತಿ ದಿವಾಕರನಂತೆ ದೆಸೆ ದೆಸೆಗೆ ಹರವಾಗಬಲ್ಲುದು

ಮಾನವನು ಸಾಮಾಜಿಕ ಜೀವಿಯಾದರೂ ಸಾಮಾನ್ಯ ಜೀವಿಯಲ್ಲ. ವಿಶಿಷ್ಟಜೀವಿ. ಹತ್ತರೊಳಗೊಬ್ಬನಾಗಿ ಉಸಿರೆತ್ತಿರಬೇಕೆನ್ನುವವನಲ್ಲ. ಮಂದೆಯೊಳಗಿನ ಕುರಿಯಂತಿರಬೇಕೆನ್ನುವವನಲ್ಲ. ತನ್ನದೇ ಆದ ಒಂದು ವ್ಯಕ್ತಿತ್ವವನ್ನು ಬೆಳಸಬೇಕೆನ್ನುವವನು. ಅದಕ್ಕೆ ತಕ್ಕ ಸನ್ನಿವೇಶದೊಡನೆ ಹೊಂದಿಕೊಳ್ಳುವವನು. ತನ್ನ ಅಭಿಲಾಷೆ ಅಭಿರುಚಿಗಳನ್ನು ಅಭಿವರ್ಧಿಸಿಕೊಳ್ಳುವವನು. ಆದರ್ಶವಾದ ರೀತಿಯನ್ನು ಸಂಸ್ಕೃತಿಯನ್ನು ಪ್ರದರ್ಶಿಸಬಲ್ಲನು. ಜೀವನ ವಿಕಾಸಕ್ಕೆ ವೈವಿಧ್ಯಕ್ಕೆ ಯಾವಾಗಲೂ ಯತ್ನಿಸುವಾತನು. ಸಾಮಾಜಿಕ ಹಲಕೆಲವು ಸಮಸ್ಯೆಗಳನ್ನು ಬಿಡಿಸಬಲ್ಲನು. ಸಮಾಜೋಪಯೋಗಿ ಕಾರ್ಯ ಕ್ಷೇತ್ರಗಳನ್ನು ವಿಸ್ತರಿಸಬಲ್ಲನು. ತನ್ನ ಔನ್ನತ್ಯ ಜೀವನದ ಪರಮ ಪುಣ್ಯಾಮೃತವನ್ನು ಪ್ರಪಂಚಕ್ಕೆ ಹಂಚಬಲ್ಲನು. ವೈಯಕ್ತಿಕ ವಿಶೇಷಾಂಶಗಳಿಂದ ವಿಶ್ವಶಕ್ತಿಯಾಗಿ ನಿಲ್ಲಬಲ್ಲನು. ವಿಶ್ವವಿಭೂತಿಯಾಗಿ ವಿರಾಜಿಸಬಲ್ಲನು. ಈ ಜಡದೇಹದ ದಾಸನಾಗದೆ ಮಹಾತತ್ತ್ವದ ಉಪಾಸಕನಾಗಿ ಊರ್ಜಿತ ಸತ್ವಶಾಲಿಯಾಗಿ ಜಗತ್ತಿನ ಜ್ಯೋತಿಯಾಗಿ ಜೀವಿಸಬಲ್ಲನು.

# ಜ್ಞಾನಶಕ್ತಿ-ಪ್ರತಿಷ್ಠಾಕಲೆ

ಮಾನವೀಯತೆಯನ್ನು ಮಹೋನ್ನತಪಥದಲ್ಲಿ ಸಾಗಿಸಲಿರುವ ಮಾಹೇಶ್ವರನಿಗೆ ಇವೆರಡು ಮುಖ್ಯಾಂಗಗಳು. ಮಾಹೇಶ್ವರನು ತನಗಿರುವ ಜ್ಞಾನವನ್ನು ಒಳ್ಳೆಯದಕ್ಕೆ ಉಪಯೋಗಿಸಿಕೊಳ್ಳುತ್ತಾನೆ. ಅದರಿಂದ ತನ್ನ ಮೂರ್ತಿ ಶಿಲ್ಪವನ್ನು ಸುಂದರವಾಗಿ ಶಿವವಾಗಿ ರಚಿಸಿಕೊಳ್ಳುತ್ತಾನೆ. ತಾನೇ ಸತ್ಯಮೂರ್ತಿಯಾಗಿ ತಯಾರಾಗುತ್ತಾನೆ. ನಿಷ್ಠೆಯೆಂಬ ವೇದಿಕೆಯ ಮೇಲೆ ಪ್ರತಿಷ್ಠೆಗೊಳಿಸುತ್ತಾನೆ. ನೈಜಸ್ವರೂಪವನ್ನು ಸಹಜಸತ್ವವನ್ನು ಸಾಕ್ಷಾತ್ಕರಿಸುತ್ತಾನೆ. ಪರಮಶಿವನು ಜ್ಞಾನ ಶಕ್ತಿಯಲ್ಲಿ ಕೂಡಿ ಸರ್ವಜ್ಞನೆನಿಸುತ್ತಾನೆ. ಶಿವತತ್ವವೆನಿಸುತ್ತಾನೆ ಸೃಷ್ಟಿರಚನೆಗೆ ನಿಮಿತ್ತ ಕಾರಣನಾಗುತ್ತಾನೆ.

ಮಾಹೇಶ್ವರನ ಜ್ಞಾನಶಕ್ತಿ ಕ್ರಿಯಾಶಕ್ತಿಯೆಂಬ ಎಲೆಯ ಮೇಲೆ ಮೂಡಿಬಂದ ಹೂವು. ಕಣ್ಣ ಸೆಳೆವ ಹೊಳಪು. ಮನವಾಕರ್ಷಿಸುವ ಕಂಪು; ಸೊಂಪು. ಇಂತಹ ಜ್ಞಾನಶಕ್ತಿಯನ್ನು ಸಂಪಾದಿಸಿದ ಮಾಹೇಶ್ವರನು ದೇಹೇಂದ್ರಿಯಾದಿಗಳ ಮೇಲೆ ದುಷ್ಕ್ರಿಯೆಗಳ ದುರಾಕ್ರಮಣವಾಗದಂತೆ ಅಂತಃಕರಣಗಳ ಮೇಲೆ ಅವಿದ್ಯಾದಿಗಳ ಆವರಣವಾಗದಂತೆ ಎಚ್ಚರಿಕೆ ವಹಿಸುತ್ತಾನೆ. ಸೂಕ್ಷ್ಮಪ್ರಜ್ಞೆಯಿಂದ ಪಾರದರ್ಶಿಯಾಗುತ್ತಾನೆ. ಪ್ರಕೃತಿಯ ಪೂರ್ವಾಶ್ರಯ ದೂಷಿತ ಪರದೆಯನ್ನು ದೂರ ಸರಿಸಿ ದಿವ್ಯ ಸ್ವರೂಪವನ್ನು ದರ್ಶಿಸಲು ಸಮರ್ಥನಾಗುತ್ತಾನೆ. ತನ್ನ ಅಂತಃಕರಣಗಳ ಮೇಲೆ ಪ್ರಭುತ್ವವನ್ನು ಪ್ರಸ್ಥಾಪಿಸುತ್ತಾನೆ; ಪೂರ್ಣಪ್ರತಿಭೆಯನ್ನು ಬೀರುತ್ತಾನೆ. ಮಹೇಶ್ವರನ ಮಂಗಳ ಉಪಾಸನೆಗೆ ಉದ್ಯಮಿಸುವಂತೆ ಮಾಡುತ್ತಾನೆ. ಉಭಯಾಂಗಗಳಲ್ಲಿಯೂ ಮಾಹೇಶ್ವರನ ಉಪಾಸನೆಯನ್ನು ಪ್ರತಿಷ್ಠಿಸಿ ಮಾಹೇಶ್ವರನೆನಿಸುತ್ತಾನೆ.

ಹೀಗಾದ ಬಳಿಕ ಈ ಲೌಕಿಕ ಅರ್ಥಗಳನ್ನು ಸಂಪಾದಿಸಲು ಮನಸ್ಸು ಮಾಡನು. ಪರಮಾರ್ಥ ಸಾಧನೆಯೇ ಆತನ ಗುರಿಯಾಗಿರುತ್ತದೆ. ಈ ಅಲ್ಪಾರ್ಥಗಳ ಆಸೆ ಅವನನ್ನು ಆಕರ್ಷಿಸದು. ಯಥಾರ್ಥ ಪ್ರತಿಷ್ಠೆಯೆ

ಮಾಹೇಶ್ವರನ ಮಣಿಹವಾಗುವುದು. ಅರ್ಥ–ಆಯಥಾರ್ಥಗಳ ಲೋಭವನ್ನು ಬಿಟ್ಟು ಕೃತಾರ್ಥನಾಗುತ್ತಾನೆ. "ಅಂಧಂತಮಃ ಪ್ರವಿಶಂತಿಯೇಽವಿದ್ಯಾಮುಪಾಸತೇ" ಎಂಬ ಶ್ರುತಿ ನೀತಿಯನ್ನು ಮಾಹೇಶ್ವರನು ಮನಸಾರೆ ಬಲ್ಲ.

ವಿತ್ತಮೋಹ, ವೃತ್ತಿಮೋಹಗಳು ಯಾವಾಗಲೂ ಬಾಳನ್ನು ಬಳಸಿಕೊಂಡಿರುತ್ತವೆ ವಿತ್ತಮೋಹವುಂಟಾದರೇನೆ ನ್ಯಾಯಹೀನವೃತ್ತಿಯಲ್ಲಿ ಪ್ರವೇಶಿಸುವುದು. ಕಣ್ಣು ಮುಚ್ಚುವ ಈ ಕತ್ತಲೆಯನ್ನು ಕಳೆಯಬೇಕಾದರೆ ಚಿತ್ಕ್ರಿಯಾಚಾರದಲ್ಲಿ ಚರಿಸಬೇಕಾಗುವುದು. ಇಲ್ಲಿ ಜ್ಞಾನಶಕ್ತಿಯೆಂದರೆ ಚಿತ್ಕ್ರಿಯಾಶಕ್ತಿಯೆಂದರ್ಥ. ಈ ಶಕ್ತಿಯಿಲ್ಲದೆ ಪರಮ ಪ್ರತಿಭೆಯಲ್ಲಿ ಜೀವನಪ್ರತಿಷ್ಠೆಯಾಗುವುದಿಲ್ಲ. ಇದನರಿತು ಪರಧನ, ಪರಸತಿ, ಪರದೈವ, ಪರನಿಂದೆ, ಪರಹಿಂಸೆ ಎಂಬ ಪಾಪವೃತ್ತಿಗಳಿಂದ ಮಾಹೇಶ್ವರನು ಬಹುದೂರ ಇರಬೇಕೆಂದು ವಿಧಿಸಲಾಗಿದೆ. ಈ ಪಾಪವೃತ್ತಿಗಳು ಮಾಹೇಶ್ವರನ ಚಿತ್ತದಲ್ಲಿ ಬುದ್ಧಿಯಲ್ಲಿ ಎಷ್ಟೂ ಎಂದೂ ಸುಳಿಯಬಾರದು. ಪ್ರತಿಯಾಗಿ ಗುರುಲಿಂಗದ ಚಿತ್ಕ್ರಿಯೆಗಳು ಸಂಚರಿಸುತ್ತಿರಬೇಕು.

ಗುರುಲಿಂಗವೆಂದರೆ ಅರುಹಿನ ಕುರುಹು ಅಥವಾ ಅರುಹುಳ್ಳವನ ಕುರುಹು. ಜ್ಞಾನಮಯ ಚೈತನ್ಯವನ್ನು ಆರಾಧಿಸುವುದೇ ಮಾಹೇಶ್ವರನ ಸಂವಿಧಾನ. ಈ ಸಂವಿಧಾನದಲ್ಲಿಯೇ ಸ್ಥಿರಬುದ್ಧಿಯುಳ್ಳವನಾಗಿರಬೇಕು. ಸುರಸ ಪ್ರಸಾದಮೋಹಿಯಾಗಬೇಕು. ನಿಜ ನಿಷ್ಠೆಯಲ್ಲಿ ಮನ ನೆಲೆಗೊಳ್ಳಬೇಕು. 'ಸತ್ಯಂ ಜ್ಞಾನಮನಂತು ಬ್ರಹ್ಮ ಮಹೇಶ್ವರನು ಸತ್ಯಸ್ವರೂಪನೂ ಅನಂತನೂ ಆಗಿದ್ದಾನೆ. ಭಕ್ತನಾಗಿ ಆತನ ಆ ಸತ್ಯಸ್ವರೂಪವನ್ನು ಕಂಡರೆ ಮಾಹೇಶ್ವರನಾಗಿ ಆತನ ಆ ಜ್ಞಾನಸ್ವರೂಪವನ್ನು ಅಳವಡಿಸಿಕೊಳ್ಳಬೇಕು. ಆಗ ಅನಂತತ್ವ ಅಂದರೆ ಅಮೃತತ್ವ ಅಳವಡುತ್ತದೆ. ಭುವನಕ್ಕೆ ಭಾನು ಎಷ್ಟು ಆವಶ್ಯವೋ ಬಾಳಿಗೆ ಜ್ಞಾನವು ಅದಕ್ಕೂ ಹೆಚ್ಚು ಅಗತ್ಯ. ಅನಂತ ಶಕ್ತಿ ಸಂಪಾದನೆಗೆ ಆಧಾರ. ಸತ್ಯ ಮತ್ತು ಜ್ಞಾನಗಳಲ್ಲಿ ಸಮಸತ್ತೆ ಇರುವಂತೆ ಕ್ರಿಯಾ ಜ್ಞಾನಗಳಲ್ಲಿಯೂ ಸಮಸತ್ತೆಯಿದೆ. ಆದ್ದರಿಂದ ಕ್ರಿಯಾಜ್ಞಾನಗಳೆರಡನ್ನೂ ಸಮಸಮನ್ವಯವೆಂದು ವೀರಶೈವರು ಭಾವಿಸುತ್ತಾರೆ. ಇವೆರಡರಿಂದ ಅಚ್ಚಳಿಯದ ಅನುಭವ ಆನಂದಗಳು ಉಂಟಾಗುತ್ತವೆ.

ಮನುಷ್ಯನಲ್ಲಿರುವುದು ಅಂಗ–ಲಿಂಗ ಎಂಬೆರಡು ಭಾಗ. ಇವೆರಡರ ವಿಕಾಸ–ಸಂಕೋಚಗಳನ್ನು ಕುರಿತು ಪ್ರಯೋಗ ನಡೆಯಿಸುವ ಸಿದ್ಧಾಂತ ಷಟ್‌ಸ್ಥಲ. ಈ ದಿಸೆಯುಲ್ಲಿ ಸ್ಥಲ ಸ್ಥಲವೂ ವಿಪುಲವಾದ ಪೀಠಿಕೆಯನ್ನು ಹಾಕಿಕೊಂಡು ಪ್ರಕ್ರಿಯೆಯುನ್ನು ಪ್ರಾರಂಬಿಸಿದೆಯಾದರೂ ಇವೆರಡರ ಬಗೆಗಿರುವ ಜ್ಞಾನ ನಮಗೆ ಅತ್ಯಲ್ಪ. ಅಂಗಗತ ಸ್ವರೂಪವನ್ನು ಲಿಂಗಗತ ಶಕ್ತಿಯನ್ನು ಪೂರ್ಣವಾಗಿ ಅಭ್ಯಾಸಿಸಲು ಅಳವಡಿಸಲು ತಕ್ಕ ಸೌಲಭ್ಯ ತಕ್ಕ ಸಹಾಯಸಂಪತ್ತಿಗೆ ತಕ್ಕ ಸಾಹಿತ್ಯ ನಮಗಿಲ್ಲ. ನಿಸರ್ಗನಿಯಮವನ್ನು ನಿಜ ನಿಯತಿಯನ್ನು ಬೆರಸಿ ಬಳಸಿಕೊಳ್ಳಲು ನಾವೀಗ ಪೂರ್ಣ ಸಮರ್ಥರಾಗಿಲ್ಲ!; ಪೂರ್ಣ ಪ್ರಜ್ಞಾವಂತರಾಗಿಲ್ಲ. ಅಂಗ–ಲಿಂಗಗಳೆರಡರೊಡನೆ ಇರುವ ಎಲ್ಲ ಸಕೀಲಗಳನ್ನು ಶಕ್ತಿ ಭಕ್ತಿಗಳನ್ನು ಅರಿತಾಚರಿಸುವ ಸ್ಥಿತಿಯೊದಗಿದಾಗ ಗತಿ ಗಮನಾರ್ಹವಾಗುತ್ತದೆ. ಪ್ರತ್ಯಂಗದ ಪ್ರತಿಲಿಂಗದ ಸ್ವಭಾವ ಸಹಜತೆಗಳನ್ನು ಸ್ವಾನುಭವಕ್ಕೆ ತಂದುಕೊಳ್ಳುವ ತಂದುಕೊಂಡು ತಿದ್ದಿಕೊಳ್ಳುವ ಸಾಧ್ಯತೆಗೆ ಸಮೀಪಿಸಬೇಕು. ಈ ದಿಸೆಯಲ್ಲಿ ಇದೊಂದು ಅಲ್ಪಪ್ರಯತ್ನ. ಸಾಧಕನ ಅಂಗಾಂಶಗಳನ್ನು ಮೊದಲು ಪರಿಶೋಧಿಸಿ ಚಿತ್ತಶುದ್ಧಿ ಬುದ್ಧಿವೃದ್ಧಿಗಳನ್ನು ಸಾಧಿಸಬೇಕು. ಸಾಧಿಸಿದುದನ್ನು ಸ್ಥಿರಗೊಳಿಸಿಕೊಳ್ಳಬೇಕು. ನಿಯಂತ್ರಿಸುವ–ಲಿಂಗಮುಖವಾಗಿ ನಿಯೋಜಿಸುವ ಅವಧಾನಿಗಳಾಗಬೇಕು. ತನ್ನನ್ನು ತಾನೇ ರೂಪಿಸಿಕೊಳ್ಳುವ ಆದರೆ ಅಂಗ ಭಾವವನ್ನು ಲಿಂಗ ಸ್ವರೂಪದಲ್ಲಿ ಸಮರಸಗೊಳಿಸುವ ಅನುಭವ ಸಂಗ್ರಹವಾಗಬೇಕು. ಆ ಆನಂದವೇ ಆನಂದ. ಆ ಪ್ರತಿಷ್ಠಾಪನೆಯೇ ಪ್ರತಿಷ್ಠಾಪನೆ. ಷಟ್‌ಸ್ಥಲಗತ ಕಲೋಪಾಸನೆ ಸಾಧಕನ ಪ್ರತ್ಯಂಗಕ್ಕೂ ಪ್ರಭಾವವನ್ನು ಬೀರಿ ಹೊಸ ಚೇತನವನ್ನು ತುಂಬುತ್ತದೆ.

ಜೀವನಾಧಾರವಾದ ಆಹಾರದೊಳಗಿನ ರಾಸಾಯನಿಕ ದ್ರವ್ಯಗಳಿಂದ ಮೈಮನ ಬುದ್ಧಿಗಳು ಪರಿವರ್ತಿಸುತ್ತವೆ; ಪರಿಣಾಮಗೊಳ್ಳುತ್ತವೆ. ಆದ್ದರಿಂದ ರಸೋತ್ಪಾದಕ ಆಹಾರಾಂಗ ಸತ್ವವೂ ಶುದ್ಧವೂ ಆಗಿರಬೇಕಾದುದು ಅಗತ್ಯ. ಕ್ರಿಯೆ ಜ್ಞಾನಗಳನ್ನು ಬೆಳೆಸುವ ಚಿತ್ತ ಬುದ್ಧಿಗಳನ್ನು ಉತ್ತಮಗೊಳಿಸುವ ಉತ್ತಮಿಕೆಗೆ ಉತ್ತೇಜನವನ್ನುಂಟುಮಾಡುವ ನಿಸರ್ಗ ಶಾಖಾಹಾರವನ್ನೆ ನಿರಂತರ ನಿರ್ಮಲ ಭಾವದಿಂದ ಶುದ್ಧ ಸಂಸ್ಕಾರದಿಂದ ಸ್ವೀಕರಿಸುವುದು ಶ್ರೇಷ್ಠ ಸಂವಿಧಾನ.

ಇದರಿಂದ ಅಂಗ-ಲಿಂಗಗಳೆರಡರಲ್ಲಿಯೂ ಸಮಸತ್ತಾಭಾವವು ಉಂಟಾಗಲು ಅನುಕೂಲವಾಗುತ್ತದೆ. ಇದು ಬೆಳೆದರೇನೆ ಸಾಮರಸ್ಯ ಸಾಧ್ಯ.

ಇನ್ನು ಪ್ರತಿಷ್ಠಾಕಲೆಯೆಂದರೆ ಅಂಗಗತ ಎಲ್ಲ ಕಲೆಗಳು ಎಲ್ಲ ಶಕ್ತಿಗಳು ಎಲ್ಲ ಚೇತನಗಳು ಆ ಮಹೇಶ್ವರನಲ್ಲಿ ಪ್ರತಿಷ್ಠಿತವಾಗಬೇಕು. "ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ। ದೇವಾಶ್ಚ ಸರ್ವೇ ಪ್ರತಿದೇವತಾಸು। ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ। ಪರೇ ವ್ಯಯೇ ಸರ್ವ ಏಕೀಭವಂತಿ ॥"ಮುಂಡಕ ೩-೨-೭. ಅಂಗನ ಎಲ್ಲ ಕ್ರಿಯೆಗಳು, ಎಲ್ಲ ಸಂಕಲ್ಪಗಳು, ಎಲ್ಲ ವಿಚಾರಗಳು, ಎಲ್ಲ ಭಾವಗಳು ಮಹೇಶ್ವರನಲ್ಲಿ ಅಸ್ತಿತ್ವವುಳ್ಳವಾಗಬೇಕು; ಸಂಪೂರ್ಣ ಜೀವನವೇ ಅವನದಾಗಿರಬೇಕು ; ಅವನಲ್ಲಿ ಏಕೀಭವಿಸಿರಬೇಕು.

ಜ್ಞಾನ ಶಕ್ತಿಯು ಗುರುಲಿಂಗವನ್ನು ಆಶ್ರಯಿಸಿ ಪ್ರತಿಷ್ಠಾಕಳೆಯೆನಿಸುವುದು. ಅಂದರೆ ಗುರುಲಿಂಗದ ಸಂವಿತ್ಕಳೆಯೇ ಪ್ರತಿಷ್ಠೆ ; ಪ್ರಜ್ಞಾಕಳೆಯೇ ಪ್ರತಿಷ್ಠೆ. ಜ್ಞಾನಸಕ್ತಿ—ಪ್ರತಿಷ್ಠಾಕಳೆ ಇವೆರಡೂ ಗುರುಲಿಂಗಜೀವಾಳ ಮತ್ತು ಗುರುಲಿಂಗತ್ವದ ಕುರುಹುಗಳು. ಅಂದರೆ ಜ್ಞಾನ—ಜ್ಞಾನದ ಕಳೆಯೇ ಗುರುಲಿಂಗ. ಜ್ಞಾನಕಳಾವಂತನೇ ಗುರುದೇವ.

"ಆ ನಿಃಕಲ ಶಿವನ ಮಧ್ಯದಲ್ಲಿ ಜ್ಞಾನಶಕ್ತಿ. ಆ ಜ್ಞಾನ ಶಕ್ತಿಯ ಮಧ್ಯದಲ್ಲಿ ಪ್ರತಿಷ್ಠೆ ಎಂಬ ಕಲೆ. ಆ ಪ್ರತಿಷ್ಠೆ ಎಂಬ ಕಲೆಯ ಮಧ್ಯದಲ್ಲಿ ಗುರುಲಿಂಗ. ಆ ಗುರುಲಿಂಗದ ಮಧ್ಯದಲ್ಲಿ ಕರ್ತೃಸಾದಾಖ್ಯ. ಆ ಕರ್ತೃಸಾದಾಖ್ಯದ ಮಧ್ಯದಲ್ಲಿ ಶರ್ವನೆಂಬ ಕಲಾಮೂರ್ತಿ. ಆ ಶರ್ವನೆಂಬ ಕಳಾಮೂರ್ತಿಯ ಮಧ್ಯದಲ್ಲಿ ಚೈತನ್ಯವೆಂಬ ಮಾಹೇಶ್ವರ. ಆ ಚೈತನ್ಯನೆಂಬ ಮಹೇಶ್ವರನ ಮಧ್ಯದಲ್ಲಿ ವಿಷ್ಣು. ಆ ವಿಷ್ಣುವಿನ ಮಧ್ಯದಲ್ಲಿ ಅಪ್ಪು. ಇಂತು ಕರ್ತೃಸಾದಾಖ್ಯದ ಸೃಷ್ಟಿ. ಇದರಿಂದ ಜ್ಞಾನಶಕ್ತಿಯ ಪ್ರತಿಭೆ ಪ್ರಕಟವಾಗುತ್ತದೆ.

ಜ್ಞಾನಕಳೆ, ಅಪೂರ್ವ ಅನುಪಮ. ಅದರಿಂದ ಆತ್ಮಜ್ಞಾನವಾಗುತ್ತದೆ. ಪರಮಾತ್ಮ ಪ್ರಕಾಶಿತವಾಗುತ್ತದೆ. ಅನು ಭಾನು ಕಳೆಗೆ ಕೋಟಿ ಕೋಟಿ ಪಾಲು ಮಿಗಿಲು.

# ಜಲಾಂಗ ಜಿಜ್ಞಾಸೆ

"ಅಪ್ಪು ಮೂಲಾಧಾರವಾಗಿ ಬೀಜದ ಮೇಲೆ ಬೀಳೆ ಪೃಥ್ವಿಗರ್ಭ ಬೆಸಲಾಯಿತ್ತು." — ಶಿವಲೆಂಕಮಂಚಣ್ಣ.

ಶೀತಸ್ಪರ್ಶವುಳ್ಳದ್ದು ಜಲ. ಇದು ನಿತ್ಯಾನಿತ್ಯಾರೂಪಾಗಿದೆ. ಜಲಪರಮಾಣು ನಿತ್ಯ. ಕಾರ್ಯರೂಪ ಜಲ ಅನಿತ್ಯ, ಸ್ಥೂಲ. ಜಲವು ಶರೀರ, ಇಂದ್ರಿಯ, ವಿಷಯ ಎಂದು ಮತ್ತೆ ಮೂಬಗೆಯಾಗಿದೆ. ವರುಣಲೋಕ (ಭಾಗ)ವೆ ಜಲಾಂಗ. ರಸಗ್ರಾಹಕವಾದ ರಸನೆಯು ಜಲೇಂದ್ರಿಯ. ಇದು ನಾಲಗೆಯ ತುದಿಯಲ್ಲಿರುತ್ತದೆ. ಷಡ್ರಸಗಳು ವಿಷಯಗಳು.

ಜಲಾಂಗವು ತೇಜಸ್ಸಿನಿಂದ ಹುಟ್ಟಿದೆ. ಜಲಾಂಗಕ್ಕೆ ರಸವೇ ಸ್ವಗುಣ ಆಕಾಶ ವಾಯು ತೇಜಗಳ ಗುಣಗಳಾದ ಶಬ್ದ ಸ್ಪರ್ಶರೂಪಗಳೂ ಇರುತ್ತವೆ. ಕಾರ್ಯದಲ್ಲಿ ಈ ಗುಣಗಳು ಗೋಚರಿಸುತ್ತವೆ.

ವಾಯುಜನ್ಯ ಅಗ್ನಿಯು ವಾಯುವನ್ನು ನಾಶಪಡಿಸುವುದಿಲ್ಲ. ಪ್ರತಿಯಾಗಿ ವಾಯುವಿನಿಂದ ಅಗ್ನಿ ಅಭಿವೃದ್ಧಿಯಾಗುತ್ತದೆ. ಆದರೆ ಅಗ್ನಿಯಿಂದಾದ ಜಲವು ಅಗ್ನಿಯನ್ನು ಆರಿಸುತ್ತದೆ. ಅಗ್ನಿಯಿಂದ ತಾನೂ ತನ್ನ ಶೀತಗುಣವನ್ನು ಬಿಡುತ್ತದೆ; ಮತ್ತು ಕ್ಷೀಣವಾಗುತ್ತದೆ. ಹೀಗೆ ಇವೆರಡೂ ವಿರುದ್ಧ ಗುಣಗಳಿಂದ ಕೂಡಿವೆ. ಇದಕ್ಕೆ ಕಾರಣವೆಂದರೆ ಅಗ್ನಿಯ ಉಷ್ಣಗುಣ ಜಲಕ್ಕೆ ಬರುವುದಿಲ್ಲ. ಅಗ್ನಿಯ ರೂಪಗುಣ ಮಾತ್ರ ಜಲಕ್ಕೆ ಬರುತ್ತದೆ. ಈ ರೂಪನ್ನು ಜಲವು ಪ್ರಕೃತಿಯಲ್ಲಿ ತೋರುತ್ತದೆ. ಜಲ ಜನನಕ್ಕೆ ಮೂಲ. "ಸಕಲ ಗಂಧಕ್ಕೆ ವಾಯುವೇ ಬೀಜ. ಸಕಲ ಉತ್ಪತ್ಯಕ್ಕೆ ಅಪ್ಪುವೇ ಬೀಜ. ಸಕಲ ಪ್ರಕೃತಿಗೆ ಜೀವನೇ ಬೀಜ. ಇಂತೀ ಭೇದವನರಿತಲ್ಲಿ ಆತ್ಮನ ವಿವರ ಹೆರೆ ಹಿಂಗದೆ ನಿಜತತ್ವ ಪರಮನಲ್ಲಿ ಪರಮಪರ ತತ್ತ್ವವ ಕೂಡಿ ಬೆರಸಿದಲ್ಲಿ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಸ್ವಯಂಭುವಾದ."—ಶಿವಲೆಂಕಮಂಚಣ್ಣ. ಜಲತತ್ತ್ವದಿಂದ ಪಂಚತನ್ಮಾತ್ರಗಳು ಉತ್ಪತ್ತಿಯಾಗುತ್ತದೆ.

ಜಲಾಂಗಸ್ವರೂಪ ; ರಸರೂಪ.

"ರಸೋ ರಸನೇಂದ್ರಿಯಂ, ಸರ್ವದ್ರವಸಮೂಹೋ—ಗುರುತಾ—ಶೈತ್ಯಂ ಸ್ನೇಹೋ—ರೇತಶ್ಚ"—ಸುಶ್ರುತ. ರಸ, ರಸನೇಂದ್ರಿಯ, ಸರ್ವದ್ರವಗಳು, ಜಡತ್ವ, ಶೀತ, ಸ್ನೇಹ (ಜಿಗುಟು) ರೇತ—ಇವು ಜಲಾಂಗದ ಸಂಬಂಧಗಳು. ರಸವೆ ರಸನೇಂದ್ರಿಯದ ವಿಶೇಷಗುಣ. ಶಬ್ದ ಸ್ಪರ್ಶ ರೂಪಗಳು ಸಾಮಾನ್ಯ ಗುಣಗಳು. 'ಸತ್ವತಮೋ ಬಹುಲಾ ಆಪಃ, ಎಂಬಂತೆ ಸ್ವಚ್ಛತೆಯಿಂದ ಸತ್ವ ಗುಣ ಜಡತೆಯಿಂದ ತಮೋ ಗುಣವುಳ್ಳುದಾಗಿದೆ.

ಶರೀರದಂತೆ ಆಹಾರವೂ ಪಂಚಭೂತಗಳಿಂದಾಗುತ್ತದೆ. ವಿಶೇಷವಾಗಿ ರಸಮಯವಾಗಿರುತ್ತದೆ. ಉಂಡ ಆಹಾರವು ಜಠರದಲ್ಲಿ ಜೀರ್ಣವಾಗಿ ದ್ರವ ರೂಪಾದ 'ರಸ'ವೆಂಬ ಪದಾರ್ಥವಾಗುತ್ತವೆ. ಹುಟ್ಟಿದ ರಸವು ಹೃದಯಸ್ಥಾನ ವನ್ನು ಆಶ್ರಯಿಸುತ್ತದೆ. ಆಹಾರದಲ್ಲಿರುವ ಷಡ್ರಸಗಳಿಂದ ಹುಟ್ಟಿ ಸಾರಭೂತ ವಾದ ಈ ರಸವು ಜೀವಸತ್ವವುಳ್ಳದ್ದಾಗುತ್ತದೆ. ಗತಿಶೀಲವಾದ ರಸವು ಹೃದಯ ದಿಂದ ಹೊರಟು ಇಪ್ಪತ್ತುನಾಲ್ಕು ಧಮನಿಗಳ ಮುಖಾಂತರ ಸರ್ವಾಂಗವನ್ನು ವ್ಯಾಪಿಸುತ್ತದೆ. ವ್ಯಾಪಿಸಿ ಎಲ್ಲ ಶರೀರವನ್ನು ರಸಾರ್ದ್ರವಾಗಿಸುತ್ತದೆ. ಪುಷ್ಟಿ ಗೊಳಿಸುತ್ತದೆ. ಧಾರಣ ಮಾಡುತ್ತದೆ. ಮತ್ತು ಜೀವಂತವಿರಿಸುತ್ತದೆ. ಸರ್ವಾಂಗ ದಲ್ಲಿ ಸಂಚರಿಸುವ ರಸವು ಯಕೃತ್‌ಪ್ಲೀಹಗಳಲ್ಲಿ ಸಂಚರಿಸಿ ರಕ್ತವಾಗುತ್ತದೆ.

"ರಂಜಿತಾಸ್ತೇಜಸಾತ್ವಾಪಃ ಶರೀರಸ್ಥೇನ ದೇಹಿನಾಂ !
ಅವ್ಯಾಪನ್ನಾಃ ಪ್ರಸನ್ನೇನ ರಕ್ತಮಿತ್ಯಭಿಧೀಯತೇ ॥"

—ಸುಶ್ರುತ

# ರಕ್ತ ಸಂವಿಧಾನ

ದೇಹಿಗಳ ಶರೀರದಲ್ಲಿರುವ ಜಠರಾಗ್ನಿರೂಪ ಯಕೃತ್ ಪ್ಲೀಹಗಳಿಂದ ರಂಜಿತವಾದುದೆ ರಕ್ತ. ಜಠರಾಗ್ನಿಯ ತೇಜಸ್ಸಿನಿಂದ ಪರಿಪಕ್ವವಾದ ರಸವು ಕೆಂಬಣ್ಣವುಳ್ಳುದಾಗಿ ರಕ್ತವೆನಿಸಿದೆ. ರಕ್ತವು ಪಾಂಚಭೌತಿಕ. ನೆಲದ ಗಂಧ, ನೀರಿನ ದ್ರವರೂಪ, ಬೆಂಕಿಯ ಕೆಂಪು, ಗಾಳಿಯ ಚಲನ, ಮುಗಿಲಿನ ಹಗುರಾಗುವಿಕೆ ಇವೆಲ್ಲವೂ ರಕ್ತದಲ್ಲಿರುತ್ತದೆ. ರಕ್ತವೇ ಜೀವನಸರ್ವಸ್ವ. ರಕ್ತರಸದಿಂದ ಧಾತುವೃದ್ಧಿ; ಪ್ರಜ್ಞಾವೃದ್ಧಿ. ಯಾವುದೇ ಕಾರಣದಿಂದ ಕಾಯದಿಂದ ರಕ್ತ ಸ್ರಾವವಾದರೆ ಪ್ರಜ್ಞಾಹೀನತೆಯುಂಟಾಗುವುದನ್ನು ನೆನೆಯಬೇಕು. ಮಾಂಸ ಮೇದಗಳನ್ನು ಹುಟ್ಟಿಸುವ ರಕ್ತರಸಗಳನ್ನು ಕೆಡದಂತೆ ನೋಡಿಕೊಳ್ಳುವುದು ಮುಖ್ಯ ಕರ್ತವ್ಯ. "ರಸಾದ್ರಕ್ತಂ ತತೋ ಮಾಂಸಂ ಮಾಂಸಾನ್ಮೇದಃ ಪ್ರಜಾಯತೇ। ಮೇದಸೋಽಸ್ಥಿ ತತೋಮಜ್ಜಾ ಮಜ್ಜಃ ಶುಕ್ರಂತು ಜಾಯತೇ ॥" ಎಂಬುದಾಗಿ ಸುಶ್ರುತವು ಸಪ್ತಧಾತೂತ್ಪತ್ತಿಯ ಕ್ರಮವನ್ನು ಹೇಳಿದೆ. ಇವು ಶರೀರವನ್ನು ಧಾರಣಮಾಡುವುದರಿಂದ ಇವನ್ನು ಧಾತು ಎಂದು ಹೇಳುತ್ತಾರೆ. ಶುಕ್ರದಲ್ಲಿ ಜೀವಕಣ ಸ್ಫುಟವಾಗಿರುತ್ತದೆ. ಶುಕ್ರವು ರಸಶ್ರೇಷ್ಠವೆನಿಸಿದೆ. ಇದು ಶುದ್ಧಿಯಾಗಿ ಸಮೃದ್ಧಿಯಾಗಿರುವಂತೆ ನೋಡಿಕೊಳ್ಳುವುದೇ ಮಾಹೇಶ್ವರಾಂಗನ ಮುಖ್ಯಧ್ಯೇಯ. "ಏಷಪುರುಷೋಽನ್ನರಸಮಯಃ" ಪುರುಷನು ರಸಮಯನಾಗಿರವನೆಂದು ಶ್ರುತಿ ಸಾರಿದೆ. "ಶುಕ್ರಂ ಧೈರ್ಯಂ ಚ್ಯವನಂ ಪ್ರೀತಿಂ ದೇಹ ಬಲಂ ಹರ್ಷಂ ಬೀಜಾರ್ಥಂ ಚ" ಎಂದು ಶುಕ್ರದ ವಿಷಯದಲ್ಲಿ ಸುಶ್ರುತವು ವಿವರಿಸಿದೆ. ಶುಕ್ರದಲ್ಲಿ ಪಂಚಭೂತಗುಣಗಳಿರುತ್ತವೆ. ಈ ಶುಕ್ರಸಂಯಮದಿಂದ ಓಜಸ್ಸು ಉಂಟಾಗುತ್ತದೆ. ಶರೀರವು ತೇಜಸ್ವಿಯಾಗುವುದು, ಬುದ್ಧಿಯು ತೀವ್ರ ಶಕ್ತಿಯುಳ್ಳುದಾಗುವುದು ಓಜಸ್ಸಿನಿಂದ. ಕಾರಣ ಮಾಹೇಶ್ವರನು ಓಜೋಭಿವೃದ್ಧಿಯನ್ನು ಸಾಧಿಸಬೇಕು.

ಮಾನವನಿಗೆ ಶಾರೀರಕ ಮತ್ತು ಮಾನಸಿಕ ಕ್ರಿಯೆಗಳಿರುವಂತೆ ಬೌದ್ಧಿಕ ಕ್ರಿಯೆಗಳೂ ಇರುತ್ತವೆ. ಇವನ್ನು ಸಾಮಾನ್ಯವಾಗಿ ಅಳೆಯಲಾಗುವುದಿಲ್ಲ. ಆದರೆ

ಕಾರ್ಯರೂಪಕ್ಕೆ ಬಂದಾಗ ಅರಿಯಲು ಸಾಧ್ಯ! ಬುದ್ಧಿಯ ಕಾರ್ಯಗಳು ವ್ಯಾವಹಾರಿಕದಲ್ಲಿ ಸಾಹಿತ್ಯಕದಲ್ಲಿ ತಾತ್ತ್ವಿಕದಲ್ಲಿ ಕಾಣಬಹುದು. ಇವೆಲ್ಲ ಕ್ಷೇತ್ರಗಳಲ್ಲಿ ಬುದ್ಧಿಯ ಅಸಾಧಾರಣ ಬೆಳಕುಬೀಳುತ್ತದೆ. ಈ ದಿಸೆಯಲ್ಲಿ ಪ್ರದರ್ಶಿತವಾದ ಬೌದ್ಧಿಕಶಕ್ತಿಯನ್ನು ಪ್ರಭಾವವನ್ನು ಮರೆಯುವಂತಿಲ್ಲ. ಹೊರಗಿನ ಬಾಳಿಗೆ ರವಿಯು ಎಷ್ಟು ಅಗತ್ಯವೋ ವೈಯಕ್ತಿಕ ಜೀವನೋನ್ನತಿಗೆ ಅಷ್ಟೇ ಏಕೆ, ಅದಕ್ಕೂ ಹೆಚ್ಚು ಬುದ್ಧಿಯ ಅಗತ್ಯವಿದೆ. ಉಳಿದ ಪ್ರಾಣಿಗಳಿಗಿಂತ ಮಾನವನು ಉತ್ತಮ ನೆನಿಸಬೇಕಾದರೆ ಬುದ್ಧಿಯೋಗದ ಬೆಂಬಲದಿಂದ ! ವಿಶ್ವದಲ್ಲಿ ಕಾಣುವ ಹಲವಾರು ಶಕ್ತಿ ವಿಶೇಷಗಳಲ್ಲಿ ಆತ್ಮಿಕ ಶಕ್ತಿಯೊಂದನ್ನು ಬಿಟ್ಟರೆ ಬಹುಶಃ ಬೌದ್ಧಿಕ ಶಕ್ತಿಯೇ ದ್ವಿತೀಯ ಸ್ಥಾನವನ್ನಾಕ್ರಮಿಸಬಲ್ಲುದೆನಿಸುತ್ತದೆ. ಇತ್ತ ಭೌತ ವಿಜ್ಞಾನದ, ಅತ್ತ ಭೌಮ ವಿಜ್ಞಾನದ ಬೆಳವಣಿಗೆಗೆ ಕಾರಣವಾಗಿ ನಿಂತಿದೆ ಬುದ್ಧಿ ಶಕ್ತಿ. ಮಿಗಿಲಾಗಿ ಬೌದ್ಧಿಕ ಚಟುವಟಿಕೆಗಳು ಶಾರೀರಕ ಮತ್ತು ಮಾನಸಿಕ ಭಾಗಗಳ ಮೇಲೆ ಮಾಡುವ ಪರಿಣಾಮ ಗಮನಾರ್ಹವಾದುದು. ಅಂತೆಯೆ ಶೈಕ್ಷಣಿಕ ಸಾಂಸ್ಕೃತಿಕ ಭಾಗಗಳ ಮೇಲೆಯೂ ಬೌದ್ಧಿಕ ಪ್ರಭಾವ ಅಪ್ರತಿಮವಾಗಿದೆ. ಆದರೆ ಮಾಹೇಶ್ವರನ ಜೀವಾಳವಾದ ಬೌದ್ಧಿಕ ಶಕ್ತಿ ಚಿನ್ಮಯ ಚೈತನ್ಯದತ್ತ ಸಾಗಿರುತ್ತದೆ. ಬಾಹ್ಯ ಜೀವನ ಸಂಬಂಧವನ್ನು ಇಟ್ಟುಕೊಂಡಿದ್ದರೂ ಆಂತರಿಕ ಆಸಕ್ತಿಯನ್ನೇ ಅತಿಶಯವಾಗಿ ಅಭಿವ್ಯಕ್ತಗೊಳಿಸುತ್ತದೆ. ಗುರುಲಿಂಗದ ಸಂಪರ್ಕದಿಂದ ಗುರುಲಿಂಗದ ಸಂವಿತ್ಪ್ರಕಾಶದಿಂದ ಪ್ರಭಾವಿತವಾಗಿರುತ್ತದೆ. ತನ್ನ ಅಂತಃಕರಣತ್ವದಿಂದ ಅನಂತ ಶಕ್ತಿಯತ್ತ ಸಾಗಿರುತ್ತದೆ. ಅರಿವಿನೀವ ಅವಧಾನದತ್ತ ಅನುಭವದತ್ತ ಸಮ್ಮುಖವಾಗಿರುತ್ತದೆ. ಜ್ಞಾನಶಕ್ತಿಯ ಉಪಾಸನೆಯಿಂದ ಉತ್ತಮಗೊಂಡಿರುತ್ತದೆ. ಬರೀ ಮೇಧಾವಿಯಾಗುವ ಬದಲು ಅನುಭಾವಿಯಾಗಲು ಮಾಹೇಶ್ವರನು ಸಮರ್ಥನಾಗುತ್ತಾನೆ. ಬೌದ್ಧಿಕ ಶಕ್ತಿಯ ಔನ್ನತ್ಯಕ್ಕೆ ತಕ್ಕ ಜೀವನ ಕ್ರಮವನ್ನು ಮಾಹೇಶ್ವರನು ರೂಪಿಸಿಕೊಳ್ಳುತ್ತಾನೆ. ರೂಪಿಸಿಕೊಂಡು ಬರೀ ಬುದ್ಧಿವಂತನಾಗದೆ ಬುದ್ಧಿಯೋಗಿಯಾಗುತ್ತಾನೆ. ಹೀಗಾಗದೆ ಮುಂದಿನ ಸಾಧನೆಯಲ್ಲಿ ಪ್ರಗತಿಯುಂಟಾಗುವಂತಿಲ್ಲ.

ಮುಂದಿನ ಪ್ರಾಣಲಿಂಗಿ, ಶರಣಸ್ಥಲಗಳಲ್ಲಿ ಒದಗುವ 'ದಿವ್ಯ ದೃಷ್ಟಿ'ಗೆ ಮಾಹೇಶ್ವರನ ಬುದ್ಧಿಯೋಗವು ಬುನಾದಿಯಾಗಿದೆ. ಇಂದ್ರಿಯಾತೀತ ವಸ್ತುವಿನ ವಿಚಾರವನ್ನು ಅನುಭವವನ್ನು ಅಳವಡಿಸಿಕೊಳ್ಳುವ ವಿಶಿಷ್ಟಾನುಭೂತಿಯೇ

ದಿವ್ಯದೃಷ್ಟಿ. ಅದಕ್ಕೆ ಸಹಾಯಕವಾಗುವ ಅದನ್ನು ರೂಪಿಸುವ ಶಕ್ತಿ ಸಂಪನ್ನ ಬುದ್ಧಿಯೋಗವನ್ನು ಮಾಹೇಶ್ವರನು ತನ್ನ ರಸಸ್ವರೂಪವಾದ ಗುರುಲಿಂಗ ನಿಷ್ಠೆಯಿಂದ ಪಡೆಯುತ್ತಾನೆ. ಶುದ್ಧರಸ ವೃದ್ಧಿಯಾದಷ್ಟು ಬುದ್ಧಿಯೋಗ ಸಿದ್ಧಿಸುತ್ತದೆ. ಜೀವರಸವನ್ನು ದೇವರಸವನ್ನಾಗಿಸುತ್ತದೆ.

ಭಕ್ತನ ನೈತಿಕ ಜೀವನವನ್ನು ಮಾಹೇಶ್ವರನು ಮುಂದುವರಿಸುತ್ತಾನೆ. ಘ್ರಾಣೇಂದ್ರಿಯ ವಿಜಯದ ಬಳಿಕ ಜಿಹ್ವೇಂದ್ರಿಯ ಜಯಸಾಧನೆ ಮಾಹೇಶ್ವನದು. ಜಠರಧ ಆಸೆಗೆ ಜಿಹ್ವೆಯನ್ನು ಬಳಸಿಕೊಳ್ಳದೆ ಜಿಹ್ವಾಂಗದ ಚೇತನವಾದ ಗುರುಲಿಂಗದ ಉಪಾಸನೆಗಾಗಿ ಬಳಸಿಕೊಳ್ಳುತ್ತಾನೆ. ರಸನೇಂದ್ರಿಯದ ರುಚಿಗೆ ಬೀಳದೆ ಜಾಗ್ರತನಾಗಿರುತ್ತಾನೆ. ಶುದ್ಧ ರಸಪೋಷಣೆಗೆ ವೃದ್ಧಿಗೆ ಬೇಕಾದುದನ್ನೇ ಗುರುಲಿಂಗಕ್ಕೆ ಅರ್ಪಣಮಾಡುತ್ತಾನೆ. ಪಾದೋದಕವನ್ನೇ ಪಾನ ಮಾಡುತ್ತಾನೆ. ಆರೋಗಣೆಯಲ್ಲಿ ಅತ್ಯಂತ ಮಿತಹಿತಗಳನ್ನು ಸಾತ್ವಿಕತೆಯನ್ನು ಚೆನ್ನಾಗಿ ಲಕ್ಷಿಸುತ್ತಾನೆ. ಬುದ್ಧಿಯೋಗವು ಬೆಳೆದು ಬರವಂತೆ ಎಚ್ಚರಿಕೆಯನ್ನು ವಹಿಸುತ್ತಾನೆ. ಆತನ ಬೌದ್ಧಿಕ ವ್ಯಾಪಾರಗಳೆಲ್ಲ ವಿಶುದ್ಧವೂ ವಿಶಾಲವೂ ಆಗಿರುತ್ತವೆ. ಸುಪ್ತವಾದ ಪ್ರಾಜ್ಞಶಕ್ತಿಯನ್ನು ಜಾಗ್ರತಗೊಳಿಸಿ ಅಭ್ಯುದಯಗೊಳಿಸಿ ಉತ್ತಮ ವಿಚಾರಗಳನ್ನು ಉನ್ನತಮಟ್ಟಕ್ಕೇರಿಸುತ್ತಾನೆ. ಸತ್ಕಲಾದೃಷ್ಟಿ ಸತ್ಯಸೌಂದರ್ಯ ದೃಷ್ಟಿ ಶಿವಭಾವ ದೃಷ್ಟಿಗಳನ್ನು ಬೆಳೆಸಿಕೊಳ್ಳುತ್ತಾನೆ. ಇವುಗಳಿಂದ ಸ್ಥಿರವಾದ ಬುದ್ಧಿಯು ಸಾಂಸ್ಕೃತಿಕ ಜೀವನವನ್ನು ಸಾಹಿತ್ಯಕ ಮನೋಭಾವವನ್ನು ಪೋಷಿಸಿಕೊಂಡು ಬರುತ್ತದೆ. ಜನ ಜೀವನದ ಪ್ರಗತಿಗಾಗಿ ಸಾಮಾಜಿಕ ಜೀವಿಯನ್ನಾಗಿಸುತ್ತದೆ. ಇಷ್ಟಾದ ಮಾಹೇಶ್ವರನು ಒಂದು ವಿದ್ಯುದ್ದೀಪದಂತಿದ್ದು ತನ್ನ ಸುತ್ತು ಮುತ್ತಿನ ಜನ ಜೀವನದ ಮೇಲೆ ಪ್ರಗತಿ ಪರ ಪ್ರಕಾಶವನ್ನು ಬೀರುತ್ತಾನೆ.

ಪ್ರಕೃತಿನಿಷ್ಠರಸವನ್ನು ಪರಮಾರ್ಥ ನಿಷ್ಠರಸವನ್ನಾಗಿಸುವುದೇ ಮಾಹೇಶ್ವರನ ಮೂಲೋದ್ದೇಶ. ವಿಕೃತಿಕಾರಕ ಕೃತಕರಸೋತ್ಪತ್ತಿಗೆ ಈತನು ಮನಸ್ಸು ಮಾಡುವುದಿಲ್ಲ. ಧರ್ಮಪ್ರವೃತ್ತಿಯನ್ನು ಧರ್ಮಸ್ಫೂರ್ತಿಯನ್ನು ಹುಟ್ಟಿಸುವ ದಿವ್ಯರಸೋತ್ಪತ್ತಿಯೇ ಮುಖ್ಯಧ್ಯೇಯ. ಸತ್ಯ ಸೌಂದರ್ಯೋಪಾಸನೆಗೆ ಸಹಾಯಕವಾದ ಶಿವರಸ ಸೃಷ್ಟಿಯೇ ಮಾಹೇಶ್ವರ ದೃಷ್ಟಿ ! ಮಾಹೇಶ್ವರನದು ಪ್ರಾಕೃತಿಕ ಕಲೋಪಾಸಕನಂತಹ ಸೌಂದರ್ಯೋಪಾಸನೆಯಲ್ಲ. ಈತನ ಈ

ಉಪಾಸನೆ ಪಂಚೇಂದ್ರಿಯಗ್ರಾಹ್ಯ. ಮಾಹೇಶ್ವರನದು ಘನಮನಗ್ರಾಹ್ಯ. ಹಾಗು ಅದು ಅಮಿತ; ಶಾಶ್ವತ. ಅದು ಇಂದ್ರಿಯಾತೀತ. ಅದು ಜಡರಸ ಜನ್ಯವಲ್ಲ. ಅದು ಜಡವರ್ಣರಂಜಿತವಲ್ಲ. ಅದು ರೂಪೋತ್ಪಾದಕ ಸೌಂದರ್ಯ ವಲ್ಲ; ಸ್ವರೂಪ ಸಾಕ್ಷಾತ್ಕಾರಕ್ಕೆ ಸಹಾಯಕವಾದ ಶಿವಸೌಂದರ್ಯ. ಅದು ಸಾಕಾರ ನಿರಾಕಾರಗಳನ್ನು ವ್ಯಾಪಿಸಿರುವ ಸರ್ವಶಕ್ತ ಮಹಾ ಸೌಂದರ್ಯ; ಅದೇ ಮಹಾವಸ್ತು. ಅದನ್ನೇ ಮಾಹೇಶ್ವರನು ಗುರುಲಿಂಗವೆಂದು ಕಂಡು ಕರೆದನು; ಕರೆವನು. ಈ ಸುಸ್ಥಿತಿ ಸರ್ವರಿಗೆ ಲಭಿಸುವುದಿಲ್ಲ. ಆ ಪರಮ ರಸಸ್ವರೂಪ ಸೌಂದರ್ಯ ಸಂದರ್ಶನಲಾಭ ಯಾವನೋ ಒಬ್ಬ ಮಹಾನುಭಾವನಾದ ಮಾಹೇ ಶ್ವರನ ಭಾಗ್ಯಕ್ಕೆ ಸೇರಿದ ಸೊಮ್ಮು. ಆ ಬಗೆಯ ಸಾಧನೆಯನ್ನು ಸಂಯಮವನ್ನು ಸಾಧಿಸಿದರೆ ಸರ್ವರಿಗೂ ಸಾಧ್ಯ. ಪ್ರಾಕೃತಿಕ ಕೃತಕ ರಸೋತ್ಪತ್ತಿಯ ತ್ಯಾಗಕ್ಕೆ ಸನ್ನದ್ಧವಾದರೆ ಮಾತ್ರ ಅದು ಸಂವೇದ್ಯ. ವಿಷಯ ತ್ಯಾಗಬುದ್ಧಿಯುಂಟಾಗು ವುದು ಸುಲಭ ಸಾಧ್ಯವಲ್ಲ. ನಿಸ್ವಾರ್ಥ ಬುದ್ಧಿ ಪರಮಾರ್ಥ ಬುದ್ಧಿಗಳು ನಿರಾ ಯಾಸವಾಗಿ ಮೈಗೂಡಿ ಬರುವ ಗುಣಗಳಲ್ಲ. ಸೇವಿಸುವ ಪದಾರ್ಥದಲ್ಲಿ ಪ್ರಾಸಾದಿಕ ಮನೋಭಾವ ಬಾರದೆ ಸಾಧ್ಯವಾಗುವ ಮಾತಲ್ಲ. ಮೋಹಿಸಿದ ಪದಾರ್ಥವೆಲ್ಲವೂ ಪ್ರಸಾದವಾಗದು. ಗುರುಲಿಂಗ ಮುಖಕ್ಕೆ ಅರ್ಪಣೀಯ ಪದಾರ್ಥವೇ ಅರ್ಪಣವಾಗಿ ಪ್ರಸಾದವಾಗುತ್ತದೆ. ಅದರ ಸ್ವೀಕಾರದಿಂದ ಇಂದ್ರಿಯ ವ್ಯಾಪಾರಗಳು ಸಾತ್ವಿಕವಾಗುತ್ತವೆ; ಶುದ್ಧವಾಗುತ್ತವೆ. ಆ ಪ್ರಸಾದ ದಿಂದುಂಟಾಗುವ ರಸವು ಪರಿಶುದ್ಧವಾಗುತ್ತದೆ. ಪರಮ ಸತ್ವಶಾಲಿಯಾಗುತ್ತದೆ. ಅದರಿಂದ ಮನ ಘನವಾಗುತ್ತದೆ. ಬುದ್ಧಿ ಶುದ್ಧಿಯಾಗುತ್ತದೆ; ವೃದ್ಧಿಗೊಳ್ಳು ತ್ತದೆ. ಹಮ್ಮು ಹಳಚುತ್ತದೆ. ಮಮತೆ ಮಾಯವಾಗುತ್ತದೆ. ಶಿವಜ್ಞಾನ ಸಂವೃದ್ಧಿಸುತ್ತದೆ. ಆದರಿಂದ ವಿಶ್ವಮಯನೂ ವಿಶ್ವಾತೀತನೂ ಆದ ಆ ಪರ ಮಾತ್ಮ ನಿಷ್ಠಾಗರಿಷ್ಠನಾಗುತ್ತಾನೆ.

# ಬುದ್ಧಿಯೋಗದ ಬಲುಮೆ

ಭಕ್ತನಾಗಿ ಚಿತ್ತ ಸಂಯಮವನ್ನು ಕ್ರಿಯೆಯ ನಿಯಮವನ್ನು ತಳೆದ ಬಳಿಕ ಮಾಹೇಶ್ವರನಾಗಿ ಬುದ್ಧಿಯೋಗವನ್ನು ಬೆಳೆಸಿಕೊಳ್ಳಬೇಕೆ ? ಬೆಳಸಿಕೊಂಡರೆ ಪ್ರಯೋಜನವೇನು ? ಪರಿಣಾಮವೇನು ? ಜೀವನ ಪ್ರಗತಿಯೇನು ? ಎಂಬುದನ್ನು ವಿಚಾರಿಸಬೇಕು. ಚಿತ್ತಕ್ರಿಯೆಗಳು ಚಿತ್ಕ್ರಿಯೆಗಳಾಗಬೇಕಾದರೆ ಬುದ್ಧಿಯೋಗದ ನೆರವು ಅನಿವಾರ್ಯ. ಚಿತ್ಕ್ರಿಯೆಗಳಾಗದೆ ಜೀವನು ಪೂರ್ಣಜೀವಿಯಾಗನು. ಚೇತನಕ್ಕೆ ಬುದ್ಧಿಶಕ್ತಿ ಚಿತ್ತಕ್ರಿಯೆ ಜತೆಗೂಡಿಯೆ ಜೀವನಪೂರ್ಣಗೊಳ್ಳುವುದು. ಕ್ರಿಯೆಗಳು ಪ್ರಭಾವ ಪೂರ್ಣವಾಗಬೇಕಾದರೆ ಅಕ್ರಿಯೆ–ದುಷ್ಕ್ರಿಯೆಗಳು ದೂರಾಗಬೇಕಾದರೆ ಸತ್ಕ್ರಿಯೆಗಳಲ್ಲಿಯೇ ಅವಶ್ಯ–ಅನವಶ್ಯ ಯಾವೆಂಬುದು ವಿಂಗಡಬೇಕಾದರೆ ಅಂದರೆ ನಿತ್ಯ ನೈಮಿತ್ತಿಕ ವಿಮರ್ಶೆಯುಂಟಾಗಬೇಕಾದರೆ ಬುದ್ಧಿಯೋಗ ಬೇಕೇಬೇಕು. ಕಾಮ್ಯಕರ್ಮ, ನಿಷಿದ್ಧಕರ್ಮಗಳನ್ನು ನಿರಾಕರಿಸಲು ಪ್ರಜ್ಞಾಯೋಗವಿಲ್ಲದೆ ಸಾಧ್ಯವಿಲ್ಲ. ಸತ್ಕ್ರಿಯೆ ಸಮರ್ಪಕವಾಗಬೇಕಾದರೂ ಬುದ್ಧಿ ಶಕ್ತಿ ಬೇಕು. ಸನ್ನಿವೇಶಕ್ಕೆ ಅನುಗುಣವಾಗಿ ಹೊಂದಿಕೊಳ್ಳುವ ಶಕ್ತಿ ಸಂಪನ್ನನಾಗುವುದೇ ಬುದ್ಧಿಯೋಗ. ಕಾರ್ಯದ್ವಂದ್ವದಲ್ಲಿ ಇದುವೇ ಸರಿಯೆಂದು ನಿರ್ಧರಿಸುವುದೇ ಬುದ್ಧಿಯ ಯೋಗ. ಭಾವೀಕಾರ್ಯವನ್ನು ಪ್ರತಿಭಾಪೂರ್ಣವಾಗಿ ಯೋಚಿಸಿ ರೂಪಿಸುವ ಶಕ್ತಿಯೇ ಬುದ್ಧಿಯೋಗ. ಪ್ರತಿಕ್ರಿಯೆಯನ್ನು ನೀತಿ ಪರವಾಗಿ ಯೋಚಿಸುವುದೇ ಬುದ್ಧಿ ಕುಶಲತೆ. ರಚನಾತ್ಮಕ ಮತ್ತು ವಿಧಾಯಕ ಕ್ರಿಯೆಗಳಿಗೆ ಪ್ರೇರಕ ಪ್ರಭಾವವನ್ನು ಬೀರುವುದೇ ಬುದ್ಧಿ. ಆತ್ಮಶಕ್ತಿಯಾಗಿರುವುದೇ ಬುದ್ಧಿ.

ಚಿತ್ತ ಬುದ್ಧಿಗಳ ಕಾರ್ಯಗಳಿಗೆ ವೈಷಮ್ಯವಿರಬಾರದು. ಪರಸ್ಪರ ಚಿತ್ತ ಬುದ್ಧಿಗಳು ಪೂರಕವಾಗಿರಬೇಕು. ಮತ್ತು ಶಾರೀರಕ ಕಾಯಕವನ್ನು ಚಿತ್ತ ಬುದ್ಧಿಗಳು ಹೊಂದಿಕೊಂಡು ಹೋಗಬೇಕು. ಕ್ರಿಯಾಚರಣೆಗೆ ಬೌದ್ಧಿಕ ಬೆಂಬಲವೂ ಜ್ಞಾನಾರ್ಜನೆಗೆ ಚಿತ್ತ ಸ್ಥೈರ್ಯವೂ ಅತ್ಯಗತ್ಯ. ಶ್ರದ್ಧೆ ನಿಷ್ಠೆಗಳಿಂದ ಪ್ರಯತ್ನಿ

ಸಿದರೆ ಕಾರ್ಯ ಮತ್ತು ಸಾಧನೆ ಸಫಲವಾಗುತ್ತವೆ. ಸತ್ಯ ಸಾಕ್ಷಾತ್ಕಾರ ಚಿತ್ರ ಕಾಣ ಉಂಟಾಗುತ್ತದೆ.

ಕೇವಲ ಕ್ರಿಯಾಚಾರದಿಂದ ಬುದ್ಧಿ ಸಂಕುಚಿತವಾಗುತ್ತದೆ. ಬುದ್ಧಿಯ ಪ್ರಭೆ ಮಂದವಾಗುತ್ತದೆ. ಬುದ್ಧಿವಂತಿಕೆ ಬಳಿಯುವುದಿಲ್ಲ. ಜ್ಞಾನಶಕ್ತಿ ಸ್ಥಗಿತಗೊಳ್ಳುತ್ತದೆ. ಜ್ಞಾನದ ರುಚಿ ಗೊತ್ತಾಗುವುದಿಲ್ಲ. ಅರಿವಿನ ಅಗ್ಗಳಿಕೆ ಅರ್ಥವಾಗುವುದಿಲ್ಲ.

ಬರೀ ಶಿಕ್ಷಣಜನ್ಯ ಬುದ್ಧಿಯೇ ಪೂರ್ಣಬುದ್ಧಿಯಲ್ಲ. ಪರಮ ಬುದ್ಧಿಯೇ ಬುದ್ಧಿ ; ಅದೇ ಪ್ರಬಲ ಸಿದ್ಧಿ. ಅದೇ ಹಮ್ಮನ್ನು ಹತ್ತಿಕ್ಕುವ, ಪೂರ್ಣಾಹಂಕಾರದ ಪಥವನ್ನು ತೋರುವ ಹೆದ್ದಾರಿ ; ಹೊಳಪಿನ ದಾರಿ.

ಬುದ್ಧಿ ವಿಕಾಸವಾಗುವುದು ಉತ್ತಮ ಲಕ್ಷಣ. ಬುದ್ಧಿ ಅರಳಿದರೆ ಬುದ್ಧಿವಂತರೆನಿಸುತ್ತಾರೆ ; ಕುಶಲರು, ಜಾಣರು, ವಿಚಾರ ಶೀಲರು, ವಿವೇಕಸ್ಥರು— ಎಂದೆನಿಸುತ್ತಾರೆ. ಅದೇ ಬುದ್ಧಿ ವಿಕಾಸವಾಗದಿದ್ದರೆ ಮೂಢರು ಮಂದರು ಮಂಕರು ಹುಚ್ಚರು ಬೆಪ್ಪರು ಎಂದೆನಿಸುತ್ತಾರೆ. ಇವರ ಸ್ಥಾನ ಮಾನಗಳು ತೀರ ಕೆಳಮಟ್ಟದವಿರುತ್ತವೆ. ಬುದ್ಧಿ ದಾರಿದ್ರ್ಯ ತೀರ ಕೆಟ್ಟದು. ಬುದ್ಧಿ ದೌರ್ಬಲ್ಯ ತುಂಬಿ ಬಾರದ ನಷ್ಟ. ಬುದ್ಧಿ ಬಲವಿಲ್ಲದವರ ಕಾಲ ವ್ಯರ್ಥ ; ಜೀವನ ನಿರರ್ಥ. ಜತೆಗೆ ಕ್ರಿಯಾದಾರ್ಢ್ಯವಿಲ್ಲದಿದ್ದರೆ ಇದ್ದದ್ದೂ ನಿಷ್ಫಲ.

ಬೌದ್ಧಿಕ ನೈತಿಕ ಉನ್ನತಿಯನ್ನು ವ್ಯಕ್ತಗೊಳಿಸುವವರೇ ವಿಶಿಷ್ಟರೆನಿಸುವರು; ಜನಪ್ರಿಯರೆನಿಸುವರು. ಮಾಹೇಶ್ವರ ಪದವೀಧರರೆನಿಸುವರು. ಸಾಮಾಜಿಕ ಕ್ರಿಯಾ ನಿರ್ವಹಣ ನಿಪುಣರೆನಿಸುವರು. ಸರ್ವೋತ್ತಮ ಸಂಸ್ಕೃತಿಯನ್ನೊದಗಿಸಿ ಸರ್ವಾದರ್ಶರಾಗುವರು. ಅವರ ಜೀವನ ಚೇತನಗೊಳ್ಳುವುದು ; ಜ್ವಲನಗೊಳ್ಳುವುದು.

ಚಿತ್ತ ಸಮುನ್ನತಿಗೆ ಹೃದಯ ಎಷ್ಟು ಆವಶ್ಯಕವೋ ಬುದ್ಧಿ ಸಮುನ್ನತಿಗೆ ಮೆದುಳು ಅಷ್ಟೇ ಆವಶ್ಯಕ. ಅಂತೆಯೇ ಮೆದುಳಿನ ಅಭಿವೃದ್ಧಿಗೆ ಬದ್ಧಿಯ ಅಭಿವೃದ್ಧಿಯೂ ಅನಿವಾರ್ಯ. ಇವೆರಡರಲ್ಲಿ ಯಾವುದು ಕುಂಠಿತವಾದರೂ ಎರಡೂ ಕುಂಠಿತವಾಗುತ್ತವೆ. ಇಪೆಡೂ ಒಂದೇ ಆದರೂ ಕಾರ್ಯಭಾಗದಲ್ಲಿ ಕೊಂಚ ಬೇರೆಯಾಗಿ ತೋರುತ್ತವೆ. ಮೆದುಳು ಮೊಗ್ಗಾದರೆ ಬುದ್ಧಿ ಹೂವೆಂದು ಹೇಳಬಹುದು ಮೆದುಳಿನ ವಿಕಾಸವೇ ಬುದ್ಧಿವಂತಿಕೆಯು. ಮೆದುಳುಳ್ಳವನೇ

ಮಾಹೇಶ್ವರನೆಂದು ಹೇಳುವಲ್ಲಿ ಔಚಿತ್ಯವಿದೆ. ಮೆದುಳು ಮಾನವ ಜೀವನದ ಅರಸು. ಮೆದುಳಿನಿಂದಲೇ ಸರ್ವಾಂಗಗಳ ಸ್ಥಿತಿಗತಿಗಳು ಜೀವನಿಗೆ ಗೋಚರ ವಾಗುತ್ತವೆ. ಜೀವನದ ಎಲ್ಲ ವ್ಯವಸ್ಥೆಗೆ ಮೆದುಳು ಮುಖ್ಯವಾಗಿ ಬೇಕು. ಯೋಚಿಸುವುದು ವಿಚಾರಿಸುವುದು ವಿಮರ್ಶಿಸುವುದು ವಿಶ್ಲೇಷಿಸುವುದು ಮೆದುಳಿಗೆ ಸೇರಿದ ಕೆಲಸ. ತಪ್ಪು ಒಪ್ಪುಗಳ ನಿರ್ಧರಿಸುವುದು ಮೆದುಳು. ಮೆದುಳಿನ ನರ ಗಳು ಮೈಯ್ಯನ್ನೆಲ್ಲ ತುಂಬಿಕೊಂಡಿವೆ. ಮೈಯನ್ನೆಲ್ಲ ಆಳುವುದು ಮೆದುಳು. ಆದ್ದರಿಂದ ಮೆದುಳುಳ್ಳವನು ಮಾಹೇಶ್ವರನು.

ಮೆದುಳಿಗೆ ಮಸ್ತಿಷ್ಕ ಎಂಬುದು ಮತ್ತೊಂದು ಹೆಸರು. ಮಸ್ತಿಷ್ಕ ಮಸ್ತಕದಲ್ಲಿರುತ್ತದೆ. ಮಸ್ತಕದಲ್ಲಿ ಹೆತ್ತುಪ್ಪದಂತೆ ಮೆತ್ತಗಿರುವುದಕ್ಕೆ ಮಸ್ತಿಷ್ಕ ಅಥವಾ ಮೆದುಳೆಂದು ಹೇಳುತ್ತಾರೆ. ಅರೆಬೊಗಸೆಯುಂತೆ ಇದರಾಕಾರ. ಇದ ರಿಂದ ಜ್ಞಾನ ತಂತುಗಳು ಹೊಮ್ಮಿ ಸರ್ವಾಂಗವನ್ನು ವ್ಯಾಪಿಸಿರುತ್ತವೆ. ಮತ್ತು ಮಸ್ತಿಷ್ಕವು ಶ್ರೋತ್ರಾದಿ ಜ್ಞಾನೇಂದ್ರಿಯಗಳಿಗೆ ಆಶ್ರಯಸ್ಥಲವಾಗಿರುತ್ತದೆ. ಬುದ್ಧಿಗೆ ಪ್ರಧಾನವೆಂದು ಮಹತ್ತೆಂದು ಹೆಸರುಗಳು. ಪರಮ ಬುದ್ಧಿಯುಳ್ಳ ವನು ಮಹತ್ತ್ವಭಾವವುಳ್ಳವನು ಮಾಹೇಶ್ವರನೆಂದು ಹೇಳುವಲ್ಲಿ ಔಚಿತ್ಯ ವಿಲ್ಲದಿಲ್ಲ.

ಬುದ್ಧಿ ಇಂದ್ರಿಯ ನಿಷ್ಠವಾಗಿ ಆ ಆ ಇಂದ್ರಿಯಾರ್ಥ ಯೋಜನೆಯಲ್ಲಿ ನಿಯೋಜಿತವಾಗುತ್ತದೆ. ತನ್ನ ನಿರೋಧಶಕ್ತಿಯನ್ನು ಕಳೆದುಕೊಳ್ಳುತ್ತದೆ. ಬುದ್ಧಿಯು ಪಂಚ ಬುದ್ಧೀಂದ್ರಿಯಗಳ ಮುಖಾಂತರ ಮನಸ್ಸಿನೊಡನೆ ಹರಿದಾಡು ತ್ತದೆ. ಅನಿಶ್ಚಿತಾರ್ಥವುಳ್ಳುದಾಗುತ್ತದೆ. ಮನಸ್ಸಿಗೆ ಅಡಿಯಾಳಾಗಿ ಮನ ಬಯಸಿದುದನ್ನು ಬುದ್ಧಿ ಸಂಗ್ರಹಿಸಲು ನಿಶ್ಚಯಿಸುತ್ತದೆ. ಇಂದ್ರಿಯಾರ್ಥ ಸಂಗ್ರಹ ನಿರ್ಣಯದಿಂದ ಮಾಹೇಶ್ವರತ್ವ ಧರ್ಮಕ್ಕೆ ಚ್ಯುತಿಯೊದಗುತ್ತದೆ. ಮಾನವೀಯ ನೀತಿಕೀಲ ಕಳಚುತ್ತದೆ. ಧರ್ಮರಥ ನಿಮ್ನಭೂಮಿಗೆ ಹೊಡೆಗೆ ಡುವುತ್ತದೆ. ಕರ್ತವ್ಯಬುದ್ಧಿ ಕಡಿಮೆಯಾಗಿ ನೈಚ್ಯಬುದ್ಧಿ ನೆಲೆಗೊಳ್ಳುತ್ತದೆ. ಆದ್ದರಿಂದ ಬುದ್ಧಿಯೋಗವನ್ನು ಪಡೆದು ಮಾಹೇಶ್ವರನಾಗಬೇಕೆಂದು ಜಗದ್ಗುರು ರೇಣುಕರ ದಿವ್ಯೋಪದೇಶವಿದೆ. ಬುದ್ಧಿಯೋಗ ಬುದ್ಧಿನೈರ್ಮಲ್ಯವನ್ನು ಬುದ್ಧಿ ಮಾಲ್ಯವನ್ನು ಸಂಗಳಿಸುತ್ತದೆ. ಮತ್ತು ಜೀವನೋನ್ನತಿಯನ್ನು ಸಾಧಿಸುತ್ತದೆ.

ಇದಕ್ಕೆ ಪ್ರತಿಯಾಗಿ ಬುದ್ಧಿ ಮಲ ವಿಶಿಷ್ಟವಾಗಿ ಅಧೋಮುಖಿಯಾದರೆ ಮಾನವನ ಬಾಳು ಹಾಳಾಗುತ್ತದೆ.

"ನ ಯಸ್ಯ ನಿರ್ಮಲಾ ಬುದ್ಧಿಃ ಸ ಧ್ಯಾಯೇತ್ ವಿಷಯಾನ್‌ಸದಾ !
ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ॥
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿ ಜಾಯತೇ ।
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿಭ್ರಮಃ ॥
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ।"

—ಪಾರಮೇಶ್ವರಾಗಮ.

ಬುದ್ಧಿ ನೈರ್ಮಲ್ಯವನ್ನು ಕಳೆದುಕೊಂಡರೆ ಪಶುವ ಪಾಡನ್ನು ದುರ್ಗುಣಗಳನ್ನು ಪಾರಮೇಶ್ವರಾಗಮವು ಪರಿಣಾಮಕಾರಿಯಾಗಿ ವರ್ಣಿಸಿದೆ. ಬುದ್ಧಿನಾಶಕ್ಕಿಂತ ಬೇರಿಲ್ಲ ಜೀವನ ಮರಣ. ಸ್ಮೃತಿಚ್ಯುತಿಗಿಂತ ಬೇರಿಲ್ಲ ಬಾಳಿನ ಅವನತಿ. ಸಂಮೋಹಕ್ಕಿಂತ ಬೇರಿಲ್ಲ ಬಾಳನ್ನು ಮುಸುಕುವ ಆವರಣ; ಮಸುಕಾಗಿಸುವ ಅಜ್ಞಾನ. ಬುದ್ಧಿಯ ಮಾಲಿನ್ಯವನ್ನು ಜ್ಞಾನಭಸಿತದಿಂದ ಕಳೆಯಬೇಕು. ತೊಳೆಯಬೇಕು.

"ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥"

ಸ್ಥಿರಚಿತ್ತನಾಗಿ ಜ್ಞಾನವನ್ನು ಗಳಿಸಿದರೆ ಇಂದ್ರಿಯಗಳು ವಶವಾಗುತ್ತವೆ. ಸಾರಥಿಯ ಕುದುರೆಗಳಂತೆ ಹಾದಿ ಹಿಡಿದು ಹೋಗುತ್ತವೆ. ಇಂದ್ರಿಯಾಶ್ವಗಳನ್ನು ಬಿಗಿ ಹಿಡಿದು ಸನ್ಮಾರ್ಗದಲ್ಲಿ ನಡೆಯಿಸುವ ಸಾರಥಿಯೆಂದರೆ ಬುದ್ಧಿಯೇ ಆಗಿದೆ.

"ಆತ್ಮಾನಂ ರಥಿನಂ ವಿದ್ಧಿ. ಶರೀರಂ ರಥಮೇವತು ।
ಬುದ್ಧಿಂ ತು ಸಾರಥಿಂ ವಿದ್ಧಿ, ಮನಃ ಪ್ರಗ್ರಹಮೇವ ಚ ॥"

ಎಂದು ಕಠಶ್ರುತಿಯು ಸಾರಿದೆ. ಮುಂದುವರಿದು:

"ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸ್ಚ ಪರಾ ಬುದ್ಧಿಃ......"ಎಂದು ಹೇಳಿ ಬುದ್ಧಿಯ ಸ್ಥಾನ ಮಾನಗಳನ್ನು ನಿರ್ದೇಶನಗೊಳಿಸಿದೆ. ಇಷ್ಟೇ ಅಲ್ಲ,

" ಎಷ ಸರ್ವೇಷು ಭೂತೇಷು ಗೂಢ ಆತ್ಮಾನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮ ದರ್ಶಿಭಿಃ ॥

ಆತ್ಮ ಸಾಕ್ಷಾತ್ಕಾರಕ್ಕೂ ಬುದ್ಧಿಯೇ ಸೂಕ್ಷ್ಮವಾಗಿ ಸಹಾಯಕವಾಗುತ್ತ ದೆಂದು ಹೇಳಿ ಬುದ್ಧಿಯೋಗದ ಪಾರಮ್ಯವನ್ನು ಪ್ರತಿಪಾದಿಸಿದೆ. ಇದನರಿದು ಶ್ರೀ ರೇಣುಕಜಗದ್ಗುರುವರ್ಯರು ಮಾಹೇಶ್ವರನಿಗೆ ಬುದ್ಧಿಯೋಗವೇ ಸಿದ್ಧಿ ಮೂಲವೆಂದು ಉಪದೇಶಿಸಿದ್ದಾರೆ.

ಹೊರ ಬಾಳಿನ ಸೊಗಸನ್ನು ಸವಿಯಲು ಯೌವನವು ಹೇಗೆ ಶ್ರೇಷ್ಠಸಾಧ ನವೋ ಹಾಗೆ ಒಳ ಬಾಳಿನ ಸೊಗಸನ್ನು ಸವಿಯಲು ಪ್ರಜ್ಞಾ ಪ್ರೌಢಿಮೆ ಅಥವಾ ಬೌದ್ಧಿಕ ಯೌವನ ಉತ್ತಮ ಸಾಧನ. ಇದಕ್ಕಾಗಿಯೇ ಪ್ರಾಚೀನ ಕಾಲ ದಿಂದಲೂ ಪ್ರಜ್ಞರ ಪ್ರಯತ್ನ. ಆದರೆ ಆ ಪ್ರಯತ್ನ ಫಲಿಸುತ್ತಿರುವುದು ವಿರಳ. ಪ್ರಯತ್ನಿಸಿದವರೆಲ್ಲರೂ ಪೂರ್ಣಪ್ರಜ್ಞರಾಗಿ ಪ್ರಕಾಶಿಸುವ ಅವಕಾಶ ಕಡಿಮೆ. ಪೂರ್ಣಪ್ರಜ್ಞರಾಗದೆ ಪ್ರೌಢರಾಗರು. ಬಾಲಿಶರಾಗಿಯೆ ಬಾಳುವವರು ಬಹಳ. ಬಾಲ್ಯಾವಸ್ಥೆಯಲ್ಲಿಯೆ ಮುಪ್ಪಿನ ಕುರುಹನ್ನು ಮೂಡಿಸಿಕೊಳ್ಳುವವರು ಅಸಂಖ್ಯರು. ಕರ್ಮಜಡರಾಗುವವರೆ ನೂರಕ್ಕೆ ನೂರು. ಜ್ಞಾನಕ್ರಿಯೆಗಳ ತಕ್ಕಡಿ ಸಮವಾಗಿ ಲ್ಲದೆ ಬಾಳಿನ ಸಮತೋಲವನ್ನು ಹಾಳುಮಾಡಿಕೊಳ್ಳುವ ಪ್ರಸಕ್ತಿ ಹೆಚ್ಚು. ಇವೆರ ಡರ ಸಮರಸದಲ್ಲಿಯೇ ಸಮತೂಕದಲ್ಲಿಯೇ ಜೀವನಶಾಂತಿಯಿದೆ. ಚಿತ್ತ ಸಂಯಮವಿದೆ. ಇದನ್ನು ದೊರಕಿಸಿಕೊಂಡರೆ ದುರ್ದೆಶೆಗೆಡೆಯಿರುವುದಿಲ್ಲ. ಬೌದ್ಧಿಕ ನೈತಿಕ ಪತನವುಂಟಾಗುವುದಿಲ್ಲ. ಮಾನಸಿಕ ಮತ್ತು ಬೌದ್ಧಿಕ ಶಕ್ತಿಯು ಬಲಿತು ಬಹುಕಾಲ ಬಾಳು ಬಂಧುರವಾಗಿ ಸುಂದರವಾಗಿ ರೂಪಿತವಾಗಿರುತ್ತದೆ. ಸಹಜಜೀವನ ಜನಾದರಣೀಯವಾಗಿ ಜರಗುತ್ತದೆ.

ಹೊರ ಬಾಳಿಗೆ ಶಾರೀರಾರೋಗ್ಯಕ್ಕೆ ಹೊರ ಬೆಳಕು ಎಷ್ಟು ಅವಸರವೋ ಒಳಬಾಳಿಗೆ ಒಳಪ್ರೌಢಿಮೆಗೆ ಪ್ರಜ್ಞಾಪ್ರಭೆ ಅಷ್ಟೇ ಏಕೆ ಅವಕ್ಕೂ ಹೆಚ್ಚು ಅವಸರ. ಅದರಿಂದಲೇ ಆಂತರಿಕ ಬೆಡಗು ಬಿನ್ನಾಣಗಳು ಬೆಳೆಯಬಲ್ಲವು.

ಪರಮಾರ್ಥ ಪ್ರಜ್ಞೆಯೇ ಸಹಜ ಪ್ರೌಢಿಮೆ; ಶಾಶ್ವತ ಪ್ರೌಢಿಮೆ. ಇದ ರಿಂದ ಪರಮಾತ್ಮನ ಬಲುಮೆ. ತನು-ಮನಗಳ ಬೆಳವಣಿಗೆಗೆ ಒಂದು ವಯೋ ಮಿತಿಯಿದೆ. ಬಾಲ್ಯದ ತರುವಾಯ ಇವು ಬೆಳೆಯಲಾರವು. ಆದರೆ ಬುದ್ಧಿಯು ವಯೋಮಿತಿಯಿಲ್ಲದೆ ಬೆಳೆಯಬಲ್ಲದು. ಬೆಳೆಯುತ್ತದೆ. ಹೀಗಿದ್ದರೂ

ಇಷ್ಟೊಂದು ದೀರ್ಘಾವಕಾಶವಿದ್ದರೂ ಇದರ ಬೆಳವಣಿಗೆಗೆ ಮನಸ್ಸು ಮಾಡದೆ ಮಾಂದ್ಯದಲ್ಲಿ ಮುಂದುವರಿಯ ಬಯಸುವವರೇ ಬಹಳ. ಮತ್ತೆ ಕೆಲವರ ತಮಗಿರುವ ಅಲ್ಪ ಸ್ವಲ್ಪ ಕ್ರಿಯಾಸಂಪತ್ತಿಯಿಂದ ಮಾತ್ರ ಜೀವನ ನಿರ್ವಹಣವನ್ನು ನಡೆಸಿ ಪರರ ಮೇಲೆ ಪ್ರಭಾವವನ್ನು ಬೀರಲೆಳಸಿ ಭಗ್ನ ಮನೋರಥರಾಗುತ್ತಾರೆ. ಅಪಯಶಸ್ಸಿಗೆ ಕಾರಣರಾಗುತ್ತಾರೆ. ಅರ್ಥವಿಲ್ಲದ ಜೀವನ ಎಂಬ ಭಾವನೆ ಬೇಗ ಜನರಲ್ಲಿ ಹರಡಿದರೆ ಅದಕ್ಕೆ ಆಚ್ಚರಿಪಡಬೇಕಾಗಿಲ್ಲ. ಕಾರಣ ಕ್ರಿಯಾ ಸಂಪತ್ತಿನೊಡನೆ ಪ್ರಜ್ಞಾಸಂಪತ್ತಿಯನ್ನೂ ಸಂಪಾದಿಸಬೇಕು. ಒಮ್ಮೊಗದ ಸಂಕುಚಿತ ಸೀಮೆಯನ್ನು ದಾಟಿ ದೂರಸಾಗಿ ದೂರದೃಷ್ಟಿಯುಳ್ಳವರಾಗಬೇಕು.

# ಬುದ್ಧಿನಾಶವೇ ಆತ್ಮನಾಶ

ಬಾಳಿನಲ್ಲಿ ಬುದ್ಧಿಗೆ ಪ್ರಾಧಾನ್ಯತೆಯಿದೆ. ಬುದ್ಧಿವಂತನೇ ನಿಜವಾದ ಶ್ರೀಮಂತ. ಚಿತ್ಕ್ರಿಯಾರಹಿತನು ಜೀವಿಸಿದ್ದರೂ ಸತ್ತಂತೆ! ಆತನದು ಅರ್ಥವಿಲ್ಲದ ಬಾಳು. ಸರ್ವಶಕ್ತಿ ಸಂಪನ್ನವಾದ ಆತ್ಮವಿದ್ದರೂ ಇಲ್ಲದಂತೆ! ವಾಸ್ತವಿಕವಾಗಿ ಆತ್ಮನಾಶವಾಗದಿದ್ದರೂ ಬುದ್ಧಿಹೀನನ ಜೀವನದೃಷ್ಟಿಯಲ್ಲಿ ಆತ್ಮ ಮೃತವಾದಂತೆ ಭಾವಿಸಬೇಕಾಗುತ್ತದೆ.

"ಅಸೂರ್ಯಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ।
ತಾಂಸ್ತೆ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ॥"

—ಈಶಾವಾಸ್ಯ.

ಜನ್ಮತಾಳಿದವರೆಲ್ಲರೂ ಜನರಲ್ಲ. ಮೂಢಜೀವಿಗಳೆಲ್ಲರೂ ಮಾನವರಲ್ಲ. ಮಾನವೀಯತೆಗೆ ಮೂಲಕಾರಣನಾದ ಆ ಮಹಾದೇವನ ಜ್ಞಾನಾರ್ಜನೆಯೇ ಮಾನವತೆ. ಅದಿಲ್ಲದಿದ್ದರೆ ಮಾನವತ್ವದ ಅಧಿಕಾರ ಅಳಿದಂತೆ! ಚೈತನ್ಯ ಜೀವನ ಜಡವಾದಂತೆ! ಸೂರ್ಯನಿಲ್ಲದ ಲೋಕದಲ್ಲಿ ವಾಸವಿದ್ದಂತೆ! ಕಣ್ಣಿಲ್ಲದೆ ಬಾಳಿದಂತೆ! ಅಂಥವನು ಮತ್ತೊಮ್ಮೆ ಸಾಯಬೇಕಿಲ್ಲ. ಸಾಯದಿದ್ದರೂ ಸತ್ತಂತೆ! ಯಾವುದರಿಂದ ನಾವು ಬಾಳಿ ಬದುಕುವೆವೋ ಅದನ್ನೇ ಅರಿಯದೆ ಅದನ್ನೇ ಅರ್ಚಿಸದೆ ಇರುವುದಕ್ಕಿಂತ ಬೇರಿಲ್ಲ ಆತ್ಮಹನನ! 'ಬುದ್ಧಿನಾಶಾತ್ಪ್ರಣಶ್ಯತಿ.'

ಕ್ಷಣಬುದ್ಧಿ ಚಪಲಬುದ್ಧಿ ವಿಪರೀತಬುದ್ಧಿ ದುರ್ಬುದ್ಧಿ ಇವೆಲ್ಲವೂ ಬುದ್ಧಿನಾಶವನ್ನು ಸೂಚಿಸುವ ಪರ್ಯಾಯಪದಗಳು. ಇವುಗಳಿಂದಲೂ ಆತ್ಮವಿನಾಶ ಆಳವಡುತ್ತದೆ. ಅಶಿವಬುದ್ಧಿಯಲ್ಲಿ ಆತ್ಮವಿನಾಶಕ್ಕೆ ಅನುವನ್ನುಂಟು ಮಾಡುತ್ತವೆ. ಬುದ್ಧಿಮಾಂದ್ಯವೂ ಜೀವನ್ಮೃತತ್ವದ ನಿದರ್ಶನ. ಇವೆಲ್ಲವೂ ಅಂತಃಕರಣದೋಷಗಳು. ಇವಿದ್ದರೆ ಆತ್ಮಶಕ್ತಿ ಹೊರಹೊಮ್ಮದು. ಅಸ್ಥಿರ ಬುದ್ಧಿಯಲ್ಲಿ ಆತ್ಮಸತ್ತೆಯು ಅವಾಸ್ತವ ಬುದ್ಧಿಯಲ್ಲಿ ಆತ್ಮಜ್ಞಾನವು ಅಶಿವಬುದ್ಧಿ

ಯಲ್ಲಿ ಆತ್ಮಾನಂದವು ಗೋಚರಿಸವು. ಶಾರೀರಿಕ ಆರೋಗ್ಯಕ್ಕೆ ರಸರಕ್ತಗಳ ಸಮತೋಲನ ಅಗತ್ಯವಿದ್ದಂತೆ, ತಾತ್ತ್ವಿಕ ಅಥವಾ ಯೌಗಿಕ ಜೀವನಕ್ಕೆ ಬೌದ್ಧಿಕ ವೃತ್ತಿಯಲ್ಲಿ ವಿಚಾರಪದ್ಧತಿಯಲ್ಲಿ ಜ್ಞಾನಶಕ್ತಿಯಲ್ಲಿ ಸತ್ವಮಯ ಅಸ್ತಿತ್ವವಿರುವುದು ಅಷ್ಟೇ ಅಗತ್ಯ. ಇದರಿಂದ ಆಧ್ಯಾತ್ಮಿಕ ಜಾಗ್ರತಿ–ಪ್ರಗತಿ ಅಭಿವೃದ್ಧಿಯಾಗುತ್ತವೆ. ಈ ಉನ್ನತಿ ಅವನತಿಯಿಂದ ಎತ್ತಿ ಉದ್ಧರಿಸುತ್ತದೆ.

ಪದಾರ್ಥಗಳ ಒಳಿತು-ಕೇಡು, ಮೇಲು–ಕೀಳು ಮೊದಲಾದ ಸ್ವರೂಪಗಳನ್ನು ಮತ್ತು ಪರವಸ್ತುವಿನ ಸ್ವರೂಪವನ್ನು ನಿಶ್ಚಯಮಾಡುವ ಸ್ಥಿತಿಗೆ ಅಥವಾ ವೃತ್ತಿಗೆ ಬುದ್ಧಿಯೆಂದು ಹೆಸರು. ಅಂತಃಕರಣದ ಪರಿಣಾಮವೇ ವೃತ್ತಿಯೆನಿಸುತ್ತದೆ. ಆರು ಅಂತಃಕರಣಗಳಲ್ಲಿ ಬುದ್ಧಿ ಒಂದು. ಬುದ್ಧಿಯು ಅಧ್ಯಾತ್ಮ, ಬೋದ್ಧವ್ಯ ಅಧಿಭೂತ, ಬೋದ್ಧಾ ಅಧಿದೈವ–ಎಂದು ಭಾವಿಸಬೇಕು. ಪಂಚ ಜ್ಞಾನೇಂದ್ರಿಯ ಮತ್ತು ಬುದ್ಧಿ ಇವಿಷ್ಟು ಸೇರಿದ್ದು ವಿಜ್ಞಾನಮಯಕೋಶವೆಂದು ವೇದಾಂತಮತವಾಗಿದೆ. ಈ ವಿಜ್ಞಾನಮಯ ಕೋಶಾಧಿಕಾರ ಮಾಹೇಶ್ವರನದು. ಇದರೊಡನೆ ನಿಷ್ಠೆಯೂ ಪ್ರತಿಷ್ಠಾ ಕಲೆಯೂ ಮಾಹೇಶ್ವರನಿಗೆ ಸೇರಿದ ನಿಜಗುಣ ; ನಿಜಶಕ್ತಿ. ವಿಜ್ಞಾನಮಯ ಕೋಶವು ವೇದಾಂತದಲ್ಲಿ ಆತ್ಮನಿಗೆ ಆಚ್ಛಾದಕ ಅಥವಾ ಆವರಣವಾಗಿ ದೋಷಯುಕ್ತವಾಗಿದೆ. ಶಿವಸಿದ್ಧಾಂತದಲ್ಲಿ ಈ ಕೋಶವು ಸಂಸ್ಕಾರಶುದ್ಧವಾಗಿ ವಿಜ್ಞಾನದ ಬೊಕ್ಕಸಾಗಿ ಪ್ರಕಾಶವಾಗಿ ಆತ್ಮೋತ್ತೇಜಕವಾಗಿರುತ್ತದೆ.

ಅಹಂತ್ವಬುದ್ಧಿ ಮಮತ್ವಬುದ್ಧಿ ವೈಷಯಿಕಬುದ್ಧಿಗಳನ್ನು ಬಿಟ್ಟು ಪರಮಾರ್ಥಬುದ್ಧಿಯನ್ನು ಬೆಳೆಸಲು ತಕ್ಕ ಸಾಧನ ಮಾಹೇಶ್ವರಸ್ಥಲ ಪ್ರಕ್ರಿಯೆ. ರಸನೇಂದ್ರಿಯ, ಬುದ್ಧಿ, ಗುಹ್ಯೇಂದ್ರಿಯಗಳಿಗೆ ಸಂಬಂಧವಿದೆ. ಬುದ್ಧಿ–ಗುಹ್ಯೇಂದ್ರಿಯಗಳಿಗೆ ಮೂಲವಾದುದು ಜಿಹ್ವೇಂದ್ರಿಯ. ಇದರಲ್ಲಿರುವ ಚೈತನ್ಯವನ್ನು ಗುರುಲಿಂಗವನ್ನಾಗಿಸಿ ಸ್ವೀಕರಿಸುವ ಸತ್ವಶುದ್ಧವಾದ ಪ್ರತಿಪದಾರ್ಥವನ್ನು ಗುರುಲಿಂಗಕ್ಕರ್ಪಿಸುವುದರಿಂದ ಪ್ರಸಾದವಾಗಿ ಪರಿಣಾಮಗೊಂಡು ಪ್ರಸನ್ನಬುದ್ಧಿ–ಪ್ರಸನ್ನಭಾವಗಳುಂಟಾಗುತ್ತವೆ. ರಸನೇಂದ್ರಿಯವು ಕಂಡ ಕಂಡ ಅಂದರೆ ರಾಜಸ ತಾಮಸ ರುಚಿಗಳಿಗೆಳಸಿದರೆ ಬುದ್ಧಿಚಾಪಲ್ಯವುಂಟಾಗುತ್ತದೆ ; ಅಪ್ರಸನ್ನತೆಯುಂಟಾಗುತ್ತದೆ. ವೈಷಯಿಕಬುದ್ಧಿಯುಂಟಾಗುತ್ತದೆ. ಮಂದಬುದ್ಧಿಯುಂಟಾಗುತ ದೆ. ಅದೇ ಗುರುಲಿಂಗಪ್ರಸಾದ ಸ್ವೀಕಾರದಿಂದ ಪ್ರಸನ್ನಬುದ್ಧಿ, ಕುಶಲ

ಬುದ್ಧಿಗಳುಂಟಾಗುತ್ತವೆ. ಪ್ರಜ್ಞಾಶಕ್ತಿ ಪ್ರಬಲವಾಗುತ್ತದೆ. ಬುದ್ಧಿಬಲ ಬೆಳಿದು ಉಳಿದು ಬೆಳಗುತ್ತದೆ.

ನಿಶ್ಚಯಕ್ಕೆ ನಿಲುಕುವುದೇ ಮಾನವನ ಮುಕ್ತಿ. ಸಂದೇಹ ಬಂಧನದಿಂದ ಬಿಡುಗಡೆಯಾಗಬೇಕಾದರೆ ಬುದ್ಧಿಯೋಗಕ್ಕೆ ಶರಣಾಗಬೇಕು. ಒಂದು ನಿಶ್ಚಯಕ್ಕೆ ಬಂದ ಬಳಿಕ ಕ್ರಿಯೆಯಲ್ಲಿ, ಜ್ಞಾನದಲ್ಲಿ ಪ್ರವೃತ್ತಿಯುಂಟಾಗುತ್ತದೆ. ಇದರಿಂದ ಮಾಹೇಶ್ವರನ ನಿಶ್ಚಯಾತ್ಮಕ ಬುದ್ಧಿಹಸ್ತದ ಮಹತ್ವ ಮನದಟ್ಟಾಗುತ್ತದೆ. ಬೆಳೆದ ಬುದ್ಧಿಬಲದಿಂದ ಬಾಳು ಹಸನಾಗುತ್ತದೆ ; ಹರವಾಗುತ್ತದೆ.

ಮಾನವನಲ್ಲಿ ಬೌದ್ಧಿಕವೂ ಒಂದು ಮಹಾಪ್ರಪಂಚ. ಬುದ್ಧಿವಿಕಾಸವೇ ಮಾನವ ವಿಕಾಸ; ಬುದ್ಧಿಸಂಕೋಚವೇ ಮಾನವ ವಿನಾಶ. ಬುದ್ಧಿಸಂಸ್ಕಾರಕ್ಕಾಗಿ ಮಾನವನು ಯತ್ನಿಸಬೇಕು.

ಬುದ್ಧಿ ಸಂಸ್ಕಾರ ದ್ವಿವಿಧವಾಗಿದೆ. ಕೇವಲ ಭೌತಿಕ ಜ್ಞಾನವನ್ನು ಅರ್ಜಿಸುವುದೊಂದು ; ಜತೆಗೆ ಆತ್ಮಿಕಜ್ಞಾನವನ್ನು ಆರ್ಜಿಸುವುದು ಇನ್ನೊಂದು. ಇವೆರಡನ್ನು ಸಂಪಾದಿಸಿದವನ ಜೀವನ ಪೂರ್ಣ.

ಬುದ್ಧಿ, ಬೋದ್ಧವ್ಯ, ಬೋದ್ಧಾ ಈ ತ್ರಿಪುಟಿಜ್ಞಾನವನ್ನು ಮೊದಲು ಪಡೆಯಬೇಕು. ಬುದ್ಧಿಯೇ ಅಧ್ಯಾತ್ಮ, ಬೋದ್ಧವ್ಯವೆ ಅಧಿಭೂತ : ಬೋಧ್ಧಾರನೇ ಅಧಿದೈವ ಅಥವಾ ಮಾಹೇಶ್ವರ—ಎಂದು ಭಾವಿಸಬೇಕು. ನಿಶ್ಚಯಾತ್ಮಕ ವೃತ್ತಿಯೇ ಬುದ್ಧಿ ಅಥವಾ ಅಧ್ಯಾತ್ಮ. ಮಂತ್ರಾತ್ಮಕ ಗುರುಲಿಂಗವೇ ಬೋದ್ಧವ್ಯ ಅಥವಾ ಅಧಿಭೂತ. ಮಾಹೇಶ್ವರಾಂಗನೇ ಬೋದ್ಧಾರನು. ಇದು ಸಂಪೂರ್ಣ ಸಿದ್ಧಿಯಾದ ಬಳಿಕ ಅಧಿದೈವತ್ವವು, ಅಳವಡುತ್ತದೆ.

ಬುದ್ಧಿಯು ನೀಲಾಕಾಶದಂತೆ ನಿರ್ಮಲವಾಗಿದೆ ; ನೀಲಾಕಾಶವೇ ಆಗಿದೆ:

"ಬುದ್ಧಿಶ್ಚಾಪಾನವಾಯುಶ್ಚ ಜಿಹ್ವಾಚ ರಸ ಏವಚ ।
ಗುಹ್ಯಂ ಪಂಚವಿಧಂ ಪ್ರೋಕ್ತಮಿತ್ಯೇತ ಜ್ಜಲಪಂಚಕಂ ॥

ಎಂಬುದಾಗಿ, ಉದಕದಲ್ಲಿಯ ಪೃಥ್ವಿ ಗುಹ್ಯೇಂದ್ರಿಯ. ಉದಕದಲ್ಲಿಯ ಅಪ್ಪುರಸ. ಉದಕದಲ್ಲಿಯ ಅಗ್ನಿ ಜಿಹ್ವೇಂದ್ರಿಯ. ಉದಕದಲ್ಲಿಯ ವಾಯು ಅಪಾನವಾಯು. ಉದಕದಲ್ಲಿಯ ಆಕಾಶ ಬುದ್ಧಿ. ಈ ಐದು ಉದಕ ಪಂಚೀಕೃತಿ, ಎಂದು ಚನ್ನಬಸವಣ್ಣನವರು ತಮ್ಮ 'ಕರಣ ಹಸಿಗೆ' ಎಂಬ ಕೃತಿ

ಯಲ್ಲಿ ಮಾಹೇಶ್ವರನ ಪಂಚಭೂತ ಪಂಚೀಕರಣವನ್ನು ನಿರೂಪಿಸಿದ್ದಾರೆ. ಇದರಿಂದ ಬುದ್ಧಿಯ ಸ್ಥಾನ ಮಾನಗಳು ಮನದಟ್ಟಾಗುತ್ತವೆ. ಜನಜನ್ಯವಾದ ಗುಹ್ಯ—ರಸ—ಜಿಹ್ವೆ, ಅಪಾನವಾಯುಗಳಿಗೆ ಬುದ್ಧಿ ಜನಕವಾಗಿದೆ. ಆಕಾಶಾಂಶ ಬುದ್ಧಿಯು ಇನ್ನುಳಿದ ಅಪಾನಾದಿ ಚತುರ್ಭೂತಾಂಶಗಳಿಗೆ ಜೀವನಾವಕಾಶವನ್ನು ಕೊಡುತ್ತದೆ. ಬುದ್ಧಿಯಿಲ್ಲದಿದ್ದರೆ ಇವು ಬಾಳವು.

"ಜ್ಞಾನ ಶಕ್ತಿಯ ಮಥನದಿಂದ ಅಪಾನವಾಯುವ ನಿಲಿಸಿ,
ಸ್ವಾಧಿಷ್ಠಾನ ಚಕ್ರದೆ ನೀಲವರ್ಣದ ಷಡುದಳದ
ಬ ಭ ಮ ಯ ರ ಲ ಎಂಬ ಷಡಕ್ಷರದ
ಅಧಿದೈವ ವಿಷ್ಣುವಿನ ಸ್ವಪ್ನಾವಸ್ಥೆಯನು ಮ—ಕಾರವೆಂಬ ಬೀಜಾ
ಕ್ಷರದಿಂ ತಿಳಿದು : ಇಂತೀ ಷಡ್ವಿಧವಿಚಾರವಿಡಿದು ನೈಷ್ಠಿಕಭಕ್ತಿಯಿಂ
ಎರಡನೆಯ ತತ್ತ್ವದಾದಿಯ ಉತ್ತರ ದಿಕ್ಕಿನ ವಾಮದೇವಮುಖವನರಿದು
ಅಪ್ಪುವಿನ ಮೃದುವನು ದೃಢ ವ್ರತದಿಂ ತಿಳಿದು,
ಸಂಸಾರ ನಾಸ್ತಿಯಾಗಿ ಮಾಹೇಶ್ವರಸ್ಥಲವನಂಗಂಗೊಂಡುದೀಗ
ಸುಬುದ್ಧಿಯ ನೆಲೆ."

"ಕುಬುದ್ಧಿಯಳಿದು ಸುಬುದ್ಧಿ ನೆಲೆಗೊಂಡಲ್ಲದೆ
ಆ ಹಸ್ತಕ್ಕೆ ಗುರುಲಿಂಗ ಸಾಧ್ಯವಾಗದು."

ಎಂದು ಚನ್ನಬಸವಣ್ಣನವರು ತಮ್ಮ 'ಮಿಶ್ರಾರ್ಪಣ' ಗ್ರಂಥದಲ್ಲಿ ನಿರೂಪಿಸಿದ್ದಾರೆ. ಕುಬುದ್ಧಿಯಳಿಯಬೇಕಾದರೆ:

"ತೇಷಾಂ ಸತತಯುಕ್ತಾನಾಂ ಭಜತಾಂಪ್ರೀತಿ ಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥

ಗೀತೆ, ಅ.೧೦, ಶ್ಲೋ.೧೦

ಎಂಬಂತೆ ಭಗವಂತನ ಭಜನೆಯಲ್ಲಿ ನಿರತರಾಗಿರಬೇಕು ; ನಿಷ್ಠೆಯುಳ್ಳವರಾಗಿರಬೇಕು. ಅಂಥವರಿಗೆ ಪರಮಾತ್ಮನು ಬುದ್ಧಿಯೋಗವನ್ನು ಅಂದರೆ ಜ್ಞಾನವನ್ನು ದಯಪಾಲಿಸುತ್ತಾನೆ. ಕರ್ತೃತ್ವವನ್ನು ತನ್ನಲ್ಲಿ ಆರೋಪಿಸಿಕೊಳ್ಳದವನೇ ಬುದ್ಧಿವಂತನು. ಇವನಿಗೆ ಎಲ್ಲಿಯೂ ಎಂದಿಗೂ ಚ್ಯುತಿಯಿರುವುದಿಲ್ಲ.

"ಯಸ್ಯನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬದ್ಧ್ಯತೇ॥"

ಎಂದು ಭಗವದ್ಗೀತೆಯು ೧೮ನೆಯ ಅಧ್ಯಾಯದಲ್ಲಿ ಉಗ್ಗಡಿಸಿದೆ.

# ರಸರೂಪ ಮಾಹೇಶ್ವರ

"ಏಷಾಂ ಭೂತಾನಾಂ ಪೃಥವೀ ರಸಃ ಪೃಥಿವ್ಯಾ ಆಪೋ ರಸೋಽಪಾಮೋಷಧಯೋ
ರಸ ಓಷಧೀನಾಂ ಪುರುಷೋ ರಸಃ ।

ಪುರುಷಸ್ಯ ವಾಗ್ರಸೋ ವಾ ಚ ಋಗ್ರಸ ಋಚಃ ಸಾಮ ರಸಃ ಸಾಮ್ನ ಉದ್ಗೀಥೋ
ರಸಃ।

ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋಯದುದ್ಗೀಥಃ !"

—ಛಾಂದೋಗ್ಯ

ಶ್ರೀಗಂಧ ಅಥವಾ ಸುಗಂಧರೂಪ ಭಕ್ತನಾದರೆ ರಸ ಅಥವಾ ಸುರಸ ರೂಪ ಮಾಹೇಶ್ವರ. ಜಲತತ್ತ್ವವನ್ನು ಜೀರ್ಣಸಿಕೊಂಡು ಜಲತತ್ತ್ವಾಧಿಕಾರಿಯಾದ ಮಾಹೇಶ್ವರನು ರಸಸ್ವರೂಪನಾಗುವುವರಲ್ಲಿ ಅಚ್ಚರಿಯೇನಿಲ್ಲ. 'ರಸೋ ವೈ ಸಃ ರಸಗ್ಂ ಹೋ ವಾಯಂ ಲಬ್ಧ್ವಾನಂದೀ ಭವತಿ' ಎಂದಿದೆ ಶ್ರುತಿ. ಜಲರಸವನ್ನು ಜೀರ್ಣಸಿಕೊಂಡು ಗುರುಲಿಂಗಾರ್ಪಣದಿಂದ ಮತ್ತು ಗುರುಲಿಂಗದ ಪ್ರಭಾವದಿಂದ ಚಿದ್ರಸಸ್ವರೂಪನೂ ಆಗಿ ಮಾಹೇಶ್ವರಾಂಗನು ಕವಿಯಾಗಿ ಆತ್ಮದ್ರಷ್ಟೃತ್ವಶಕ್ತಿ ಸಂಪನ್ನನಾಗುತ್ತಾನೆ. ದಾರ್ಶನಿಕ ದೃಷ್ಟಿಯುಳ್ಳವನಾಗುತ್ತಾನೆ. ಇತ್ತ ಭೂ ಸಾರಗಳಾದ ಷಡ್ರಸಗಳನ್ನು ಅತ್ತ ಬೌದ್ಧಿಕಸಾರಗಳಾದ ನವರಸಗಳನ್ನು ಆತ್ಮಸಾರವಾದ ಚಿದ್ರಸವನ್ನೂ ಮೈಗೂಡಿಸಿಕೊಂಡ ಮಹಾರಸಯೋಗಿ ಮಾಹೇಶ್ವರ, ರಸಬ್ರಹ್ಮ ಮಾಹೇಶ್ವರ. ಮಾಹೇಶ್ವರನ ಜ್ಞಾನಶಕ್ತಿ ರಸಪೂರ್ಣವಾಗಿರುತ್ತದೆ. ಮಾಹೇಶ್ವರನ ವಾಣಿಯಲ್ಲಿ ಮಾಧುರ್ಯರಸ ತುಂಬಿರುತ್ತದೆ. ಆತನ ಆ ವಾಣಿಯಲ್ಲಿ ಸರಸ್ವತಿ ನಲಿಯುತ್ತಿರುತ್ತಾಳೆ; ಅಷ್ಟೇಕೆ ಆ ಪರಾಶಕ್ತಿ ಪರಿಣಮಿಸುತ್ತಿರುತ್ತಾಳೆ. ಆತನು ಆ ಪರಾವಾಣಿಯನ್ನು ತನ್ನೊಳಗೆ ಅಳವಡಿಸಿಕೊಂಡು ಅಭಿವ್ಯಕ್ತಗೊಳಿಸುತ್ತಾನೆ. ಅಂತೆಯೇ ಆ ಪರಾವಾಣಿಯ ಅಧಿದೇವತೆಯಾದ ಪರಾಶಕ್ತಿ ಆತನಿಗೆ ಆಕರ್ಷಿತಳಾಗಿರುತ್ತಾಳೆ. ಮಾಹೇಶ್ವರನ ರಸಪ್ರತಿಭೆ, ರಸಮಾಧುರ್ಯ ಅಂತಹವು. ಅವು ನವನವೋನ್ಮೇಷಶಾಲಿಯಾದವು. ಜ್ಞಾನ–ವಿಜ್ಞಾನಗಳ ಭಾಂಡಾರವನ್ನೊಳಗೊಂಡಿರುತ್ತವೆ. ವಿಶ್ವದ ಮತ್ತು ವಿಶ

ನಾಥನ ವಿಷಯದಲ್ಲಿ ಮಾಹೇಶ್ವರನ ಜ್ಞಾನ ಒಂದು ರಸಕೋಶವಾಗಿರುತ್ತದೆ; ಹಾಗು ವಿಶ್ವಕೋಶವಾಗಿರುತ್ತದೆ. ಮಾಹೇಶ್ವರನ ಆ ರಸಸಿದ್ಧಿ ಆ ರಸಮಾಧುರ್ಯ, ಆ ರಸವೈಶಾಲ್ಯ ನುಡಿಗೆ ನಿಲಕದವು. ಅಪೂರ್ವವೂ ಅಪಾರವೂ ಆದವು. ಅಸಮಾನ್ಯವಾದವು. ಶಿವಮಯ ಸು-ರಸಜೀವಿ ಮಾಹೇಶ್ವರ. ತನ್ನ ರಸನೇಂದ್ರಿಯದಲ್ಲಿರುವ ಚೈತನ್ಯದ ಚಿದ್ರಸಾನುಭಾವಿ ಮಾಹೇಶ್ವರ. ತನ್ನ ಗುರುಲಿಂಗದಿಂದೊದಗುವ ಸು ರ ಸ ಪ್ರಸಾದಾರ್ಪಣಸುಖಿ ಮಾಹೇಶ್ವರ. ಇದು ಮಾಹೇಶ್ವರನ ಬುದ್ಧಿ ವಿಕಾಸದ ದಾರಿ; ಜ್ಞಾನಪ್ರಕಾಶಗೊಳ್ಳುವ ಪರಿ. ಸುರಸ ಪ್ರಸಾದದ ಪರಿಣಾಮದಿಂದ ಚಿದ್ದೀಪ್ತಿಯನ್ನು ಬೆಳಗಿಸಬಲ್ಲ ಸಮರ್ಥ ಮಾಹೇಶ್ವರ. ಚಂದ್ರಪ್ರಕಾಶವನ್ನು ಮೀರಿ ಬೆಳಗಬಲ್ಲ; ಒಡಲತಂಪನ್ನೀಯಬಲ್ಲ. ಜಲತತ್ತ್ವದಾಶ್ರಯದಲ್ಲಿ ಬಾನ್ಬೆಳಗನ್ನು ಪರಂಜ್ಯೋತಿಯನ್ನು ಹೊಮ್ಮಿಸಬಲ್ಲ. ಜಲತತ್ವಧಾರಣದಿಂದ ಪ್ರಕೃತಿಯಲ್ಲಿ ಪರಮಾರ್ಥದೀಪ್ತಿಯನ್ನು ತೋರಬಲ್ಲ. ಭೌತಿಕ ವಿಜ್ಞಾನಿಯು ಸಮಷ್ಟಿ ಜಲಾಶಯದಿಂದ ಭೌತ ವಿದ್ಯುತ್ತನ್ನು ಸೃಷ್ಟಿಸಿದರೆ ಆತ್ಮಜ್ಞಾನಿಯಾದ ಮಾಹೇಶ್ವರಾಂಗನು ವ್ಯಷ್ಟಿಜಲತತ್ತ್ವಕ್ಕೆ ಸ್ಥಾನವಾದ ರಸನೇಂದ್ರಿಯ ಸಂಯಮದಿಂದ ಭೌಮ ವಿದ್ಯುತ್ತನ್ನು ಹೊಮ್ಮಿಸಬಲ್ಲ ಆಧ್ಯಾತ್ಮ ವಿಜ್ಞಾನಿ. 'ರಸದಲ್ಲಿ ಸುರಸವನ್ನು ರಸತಮದ ರಹಸ್ಯವನ್ನು ಕಾಣುವ-ಕಾಣಿಸುವ ಶಕ್ತ ಮಾಹೇಶ್ವರ. ದಿವ್ಯರಸರುಚಿಯನ್ನು ಕಂಡ ಕಲಾವಿದ ಮಾಹೇಶ್ವರ. ರಸಬಿಂದುವಿನಲ್ಲಿ ರಸಸ್ವರೂಪನಾದ ಆ ಪರಮಾತ್ಮನ ನಾದ ಸಿಂಧುವನ್ನು ನೆಲೆಗೊಳಿಸಿಕೊಂಡ ರಸಬ್ರಹ್ಮ ಮಾಹೇಶ್ವರ.

ಅಂತರಾತ್ಮ ಪ್ರೇರಿತ ಅಂತಜ್ಞಾನದಿಂದ ಪ್ರಪೂರಿತ ಪ್ರಭಾಮೂರ್ತಿ ಮಾಹೇಶ್ವರ. ಅಂತಃಕಾವ್ಯ ಕರ್ತೃ ಮಾಹೇಶ್ವರ. ಮಂತ್ರದ್ರಷ್ಟಾ; ಮಂತ್ರಬೋಧಕರ್ತ, ಸಾರ್ವಕಾಲಿಕ ಸಾರ್ವದೇಶಿಕ ಸಾರ್ವಜನ ಭೋಧಕ. ಮಾಹೇಶ್ವರನ ಭಾಷೆ-ಭಾವಗಳು ದಿವ್ಯರಸಾರ್ದ್ರ ವಾದವುಗಳು. ಮಾಹೇಶ್ವರನ ದೃಷ್ಟಿ ಕಾರುಣ್ಯರಸ ಪೂರ್ಣವಾದುದು. ಮಾಹೇಶ್ವರನ ಪ್ರತಿಕ್ರಿಯೆಯೂ ಪ್ರತಿವಿಚಾರವೂ ರಸಮಯವಾಗಿ ರಾಜಿಸುತ್ತವೆ. ಮಾಹೇಶ್ವರನಿಂದ ಸಾಮಾಜಿಕ ಜೀವನವೃಕ್ಷ ಫಲಭರಿತವಾಗುತ್ತದೆ. ಬರಡುತನವನ್ನು ಗೆಲ್ಲುತ್ತದೆ. ಮೂಢಶ್ರದ್ಧೆಯಿಂದ ಮುಂದುವರಿದು ಮೃಡಜ್ಞಾನ ಪೂರ್ಣಶ್ರದ್ಧೆಯುಳ್ಳದಾಗುತ್ತದೆ. ಕಾಡುಸ್ಥಿತಿಯನ್ನು ಕಳೆದುಕೊಂಡು ಕಲಾಸಕ್ತಿಯನ್ನು ತಾತ್ತ್ವಿಕ ಶಕ್ತಿಯನ್ನು ತಾಳುತ್ತದೆ.

ಸಾಮಾಜಿಕ ಕ್ಷೇತ್ರದಲ್ಲಿ ಮಾಹೇಶ್ವರನು ಎಲ್ಲ ಬಗೆಯ ಅಭಿವೃದ್ಧಿ ಬೀಜಗಳನ್ನು ಬಿತ್ತಿ ಬೆಳೆಯುತ್ತಾನೆ. ರಸಫಲಗಳನ್ನು ಸಾಮಾಜಿಕರು ಪಡೆಯುವಂತೆ ಮಾಡುತ್ತಾನೆ.

ಮಾಹೇಶ್ವರನ ವಿಚಾರಕಿರಣಗಳು ಹುಣ್ಣಿಮೆಯ ಚಂದ್ರಕಿರಣಗಳಂತೆ ಹಬ್ಬಿ ತಂಪುವೆರಸಿ ತಮಸ್ಸನ್ನು ಹಿನ್ನೆಲೆಯಾಗಿಸುತ್ತವೆ. ಸಚ್ಚಿತ್ಸ್ವರೂಪದ ಸತ್ಯಜ್ಞಾನ ವನ್ನುಂಟುಮಾಡುತ್ತವೆ. ನಿತ್ಯಾನಂದಮಯಮೂರ್ತಿ ಸಾಕ್ಷಾತ್ಕಾರವನ್ನುಂಟು ಮಾಡುತ್ತವೆ. ಅಚ್ಚಳಿಯದ ಅಮೃತವನ್ನು ಶ್ರವಿಸುತ್ತವೆ. ಋತಚಿಜ್ಯೋತಿ ರ್ಲೋಕಕ್ಕೆ ಕರೆದೊಯ್ಯುತ್ತವೆ. ಸತ್ಯಜ್ಞಾನದ ಉದ್ಘೋಷವನ್ನು ಕೇಳಿಸುತ್ತವೆ. ರಸಮಯ ಜೀವನದ ಸ್ಫೂರ್ತಿಯನ್ನು ಹುಟ್ಟಿಸುತ್ತವೆ. ರಸಾನುಭೂತಿಯನ್ನು ಆವಿಷ್ಕರಿಸುತ್ತವೆ. ಪರಮರಸನೊಡನೆ ಸಮರಸಗೊಳಿಸುತ್ತವೆ; . ಪರವಶ ಗೊಳಿಸುತ್ತವೆ.

ತನ್ನ ಪರಾತ್ಪರ ರಸಮಯ ಜೀವನದಅಂತರ್ದೃಷ್ಟಿಯಿಂದ ಆರ್ಷಕಾವ್ಯವನ್ನು ಕೊಡುವ ಮಾಹೇಶ್ವರನ ಮುಖ್ಯವಾದ ರಸಮಯ ಜೀವನ ಲಕ್ಷಣವನ್ನು ಆದಷ್ಟು ಎತ್ತಿ ತೋರಿಸಿ ವಾಚಕರ ಮನ ಅಚ್ಚೊತ್ತಿ ನಿಲ್ಲುವಂತೆ ಅರುವಿಗೆ ಅಚ್ಚಳಿಯದೆ ಸಲ್ಲುವಂತೆ ಮಾಡಬೇಕಾಗಿದೆ. ಏಕೆಂದರೆ ಮಾಹೇಶ್ವರನ ರಸದೃಷ್ಟಿಯ ರಸ ಜೀವನದ ಪರಿಚಯವು ಪ್ರಥಮ ಪ್ರಯತ್ನದ್ದಾಗಿದೆ. ಮಾಹೇಶ್ವರನದು ಆರ್ಷ ಕಾವ್ಯ ಮೂಲಜ್ಞಾನಜೀವನವೆಂಬುದು ಮನವರಿಕೆಯಾಗಬೇಕಾಗಿದೆ. ಶ್ರುತಿ ವಾಕ್ಯ ಸಮಾಧಿಕ ವಚನಾಮೃತ ಕರ್ತನೆಂಬುದು ತಿಳಿಯಬೇಕಾಗಿದೆ.

ಭೌತಿಕದ ಈ ಸೊಬಗಿನಲ್ಲಿ ಆತ್ಮಿಕದ ಆ ಸೊಗಸನ್ನು ಕಂಡುಂಡು ನಲಿವ-ಉಲಿವ ಉನ್ನತ ಕಲಾವಿದ ಮಾಹೇಶ್ವರ. ವಿಶ್ವಾತ್ಮಜೀವನದ ಏಕೈಕ ನಿಷ್ಠಾವಂತ. ಆತನ ಹುಟ್ಟು ಅಮೃತಮಯವಾದ ಶ್ರೀಗುರು ಹಸ್ತದಿಂದ ! ಆತನು ಧರಿಸಿರುವುದು ಅಮೃತ ಮಯಗುರುಲಿಂಗರೂಪ ಚೈತನ್ಯವನ್ನು ! ಆ ಮಾಹೇಶ್ವರನ ಅಂಗಾಂಗವು ತುಂಬಿರುವುದು ಜ್ಞಾನಮೃತದಿಂದ ! ಜ್ಞಾನಿಗಳಲ್ಲಿ ಆತನು ಶ್ರೇಷ್ಠನು; ವಿಶ್ವರೂಪನು. ವಿಶ್ವಪ್ರಕಾಶಕನು. ಆದ್ದರಿಂದ ಆತನ ಆ ಮಾಹೇಶ್ವರತ್ವವು ಜ್ಞಾನಶ್ರೇಷ್ಠತೆಯ ಕುರುಹು.

"ಯಶ್ಛಂದಸಾಮೃಷಭೋ ವಿಶ್ವರೂಪಃ ।
ಛಂದೋಭ್ಯೋಽಧ್ಯಮೃತಾತ್ಸಂಬಭೂವ ।
ಸಮೇಂದ್ರೋ ಮೇಧಯಾ ಸ್ಪೃಣೋತು ।
ಅಮೃತಸ್ಯ ದೇವಧಾರಣೋ ಭೂಯಾಸಂ !
ಶರೀರಂ ಮೇ ವಿಚರ್ಷಣಂ !
ಜಿಹ್ವಾ ಮೇ ಮಧುಮತ್ತಮಾ ।
ಕರ್ಣಾಭ್ಯಾಂ ಭೂರಿ ವಿಶ್ರುವಂ ।
ಬ್ರಹ್ಮಣಃ ಕೋಶೋऽಸಿ ಮೇಧಯಾ ಪಿಹಿತಃ ॥"

—ತೈತ್ತಿರೀಯ.

ಸುವಿದ್ರಸ ಶರೀರಿಯಾದ ಮಾಹೇಶ್ವರನ ಅಮೃತಶ್ರಾವಿಯಾದ ಪ್ರಾರ್ಥನೆಯಿದು.

ಜ್ಞಾನವು ಸತ್ಯಸ್ವರೂಪವನ್ನು ಕಾಣುವ ಕಣ್ಣು. ಅದನ್ನು ಗುರುಲಿಂಗದಿಂದಲೇ ತೆರೆಯಿಸಿಕೊಳ್ಳಬೇಕು.

"ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥

ಇದು ಶ್ರೀಗುರು ಧರ್ಮ. ಜ್ಞಾನ ಭಾನು. ಬಾಳನ್ನು ಬೆಳಗಿಸುವ ಚತುರ. ತಿಳಿಗಣ್ಣನ್ನು ತೆರೆಯಿಸುವ ಜ್ಞಾನಾಂಜನವುಳ್ಳವ. ಆತನಿಗೆ ನಮಿಸಿ ನನ್ನದೆಲ್ಲವನ್ನೊಪ್ಪಿಸುವೆ. ಈ ಮಂತ್ರವಾಣಿ ಮಾಹೇಶ್ವರತ್ವದ ಸ್ವರೂಪ ಸಾಧನ ಚಿತ್ರಣವಾಗಿದೆ. ಸ್ಪಷ್ಟವಾಗಿದೆ; ಸಜೀವವಾಗಿದೆ. ಸುಧಾಶ್ರಾವಿಯಾಗಿದೆ.

ಮಾಹೇಶ್ವರನ ಉದ್ದೇಶದ ಉದಾತ್ತತೆಯೇನು ? ಉನ್ಮನದ ಉನ್ಮೀಲನವೇನು ? ಮೈ ಮಾತು ಕಿವಿಗಳು ಬ್ರಹ್ಮಕೋಶವು—ಎಲ್ಲವು ಮಧುಮಯವಾಗಬೇಕಂತೆ ! ಮೇಧಾಮಯವಾಗಬೇಕಂತೆ ! ಜ್ಞಾನಾಂಜನದಿಂದ ಒಳಗಿರುವ ಹಿರಣ್ಮಯ ಪುರುಷನ ಪ್ರಾಪ್ತಿಯಾಗಬೇಕಂತೆ ! ಉಭಯಾಂಗವು ಚಿದಾನಂದದ ಸವಿಯಚ್ಚಿನಂತಾಗಬೇಕಂತೆ ! ಇದಕ್ಕಿಂತ ಉದಾತ್ತ ಉದ್ದೇಶವಿದೆಯೆ ? ಉನ್ಮನದ ಉನ್ಮೀಲನವಿದೆಯೆ ? ಆ ರಸಾನಂದದ ಪೂರ್ಣವೈಭವದಲ್ಲಿ ಆ ರಹಸ್ಯಜ್ಞಾನದ ಪ್ರಭೆಯಲ್ಲಿ ತನ್ಮಯವಾಗುವ ಹೆಬ್ಬಯಕೆ ಮಾಹೇಶ್ವರನದು. ಪುನರಾ

ವರ್ತಿಸದ ವಿಭೂತಿತ್ವವನ್ನು ಅನುಭವಿಸುವ ನಿಷ್ಠೆ ಮಾಹೇಶ್ವರನದು. 'ಮ' ಕಾರ ಮಂತ್ರಾತ್ಮಕನಾದ ಮಾಹೇಶ್ವರನು ಮಧುಮಯ ಮೇಧಾವಂತಿಕೆಯನ್ನು ಅಳವಡಿಸಿಕೊಳ್ಳುವುದರಲ್ಲಿ ಅಳವಡಿಸಿಕೊಂಡು ಅಖಿಳಾಂಡಕ್ಕೆ ಧಾರೆಯೆರೆಯುವದ ರಲ್ಲಿ ಅಚ್ಚರಿಯೇನಿಲ್ಲ. ಆತ ಸತ್ಯಕಾಮಿ; ವಿಶ್ವಪ್ರೇಮಿ.

ಶರೀರದಲ್ಲಿರುವ ಪಂಚತತ್ತ್ವಗಳಲ್ಲಿ ರಸತತ್ತ್ವವೂ ಪ್ರಧಾನವಾದುದು. ಪ್ರಾಣಕ್ಕೆ ವಾಯುತತ್ತ್ವ ಹೇಗೋ ಹಾಗೆ ಶುಕ್ರ—ಓಜಸ್ಸುಗಳಿಗೆ ರಸತತ್ತ್ವವೇ ಮುಖ್ಯ. ರಸವೇ ರಕ್ತವಾಗಿ ಸರ್ವಾಂಗದಲ್ಲಿ ಸಂಚರಿಸುತ್ತದೆ. ರಸವೇ ಜೀವ ಮತ್ತು ಜೀವನ. ಈ ರಸ, ರಕ್ತ, ಶುಕ್ರ, ಓಜಗಳ ಒಡೆಯ ಮಾಹೇಶ್ವರ. ಮಾಹೇಶ್ವರನು ಜಲ ಸೇವನೆಯಲ್ಲಿ ಒಂದು ಕ್ರಮವನ್ನೇರ್ಪಡಿಸುತ್ತಾನೆ. ಜಲ ಸುಸ್ಕಾರವನ್ನು ಮಾಡುತ್ತಾನೆ. ಪರಮ ಪಾದೋದಕವನ್ನಾಗಿಸುತ್ತಾನೆ;—ಮಂತ್ರ ವಿಭೂತಿ ಹಸ್ತ—ಪಾದ ಭಾವಗಳ ಸೋಂಕಿನಿಂದ ! ಇದರಿಂದಾಗಿ ಇಂತಹ ಪವಿತ್ರ ಜಲವನ್ನು ಪರಬ್ರಹ್ಮವನ್ನಾಗಿ ಭಾವಿಸಿ ಇತಿಮಿತಿಯಾಗಿ ಸೇವಿಸುತ್ತಾನೆ. ಇದ ರಿಂದ ಒಳಗೆ ಉಂಟಾಗುವ ರಸವು ಶುದ್ಧವಾಗುತ್ತದೆ. ರಕ್ತವೂ ಶುದ್ಧವಾಗು ತ್ತದೆ. ಶುಕ್ರ ಓಜಸ್ಸುಗಳಲ್ಲಿ ದಿವ್ಯ ತೇಜಸ್ಸುಂಟಾಗುತ್ತದೆ. ದಿವ್ಯರಸದೀಪ್ತಿ ಸರ್ವಾಂಗವ್ಯಾಪ್ತಿಯಾಗಿ ಮಹಾತೇಜಸ್ವಿಯಾಗುತ್ತಾನೆ. ಮಂತ್ರಮಯ ರಸ ರಕ್ತಗಳಿಂದ ಮಂತ್ರಮಯ ವೀರ್ಯವುಂಟಾಗುತ್ತದೆ. ಮಹಾಸ್ಥೈರ್ಯವುಂಟಾಗು ತ್ತದೆ. ಜಡರಸದಲ್ಲಿ ಅಜಡವಾದ ಮಹಾ ಚೈತನ್ಯಪ್ರತಿಷ್ಠಿತವಾಗುತ್ತದೆ. ಸ್ವ–ಅಧಿಷ್ಠಾನಸ್ವರೂಪನಾಗುತ್ತಾನೆ.

ಜಲತತ್ತ್ವಕ್ಕೆ ಸ್ವಾಧಿಷ್ಠಾನ ಚಕ್ರವೇ ಸ್ಥಾನ. ಇದು ಗುಹ್ಯದ ಪಡು ವಣಕ್ಕಿರುತ್ತದೆ. ಇದಕ್ಕೆ ಆರು ದಳಗಳಿರುತ್ತವೆ. ಬ–ಭ–ಮ, ಯ–ರ–ಲ ಎಂಬಾರು ಮಂತ್ರಾಕ್ಷರ ಸಹಿತವಾಗಿದೆ. ಇಲ್ಲಿ ಪ್ರಾಣ—ಮನಗಳನ್ನು ನಿಲ್ಲಿಸಿ ಇಲ್ಲಿರುವ ಜ್ಞಾನಾಂಬರಧಾರಿಯಾದ ಗುರುಲಿಂಗವನ್ನು ಧ್ಯಾನಿಸಿ ಧರಿಸಿದಲ್ಲಿ ರಸ ವಿಕಾರಕ್ಕೆ ಕಾರಣವಿರುವುದಿಲ್ಲ. ಜಲತತ್ತ್ವದ ಜಯ ಲಭಿಸುತ್ತದೆ. ಅಂದರೆ ರಸರಕ್ತ ಶುಕ್ರ ಓಜಸ್ಸುಗಳ ಪ್ರತಿಷ್ಠೆಯುಂಟಾಗುತ್ತದೆ. ರಸಪುಷ್ಟಿಯಿಂದ ಸ್ಥೈರ್ಯ ಚಾತುರ್ಯಗಳು ಹೆಚ್ಚುತ್ತವೆ. ಜ್ಞಾನಶಕ್ತಿ, ನಿಷ್ಠಾಕಲೆ, ನಿಷ್ಠಾಮ ಬುದ್ಧಿ ಬೆಳೆಯುತ್ತವೆ.

ಜಲತತ್ತ್ವಕ್ಕೆ ಜಲತತ್ತ್ವದಿಂದಾದ ರಸಕ್ಕೆ ಶ್ವೇತವರ್ಣವನ್ನು, ಅರ್ಧ ಚಂದ್ರಾಕೃತಿಯನ್ನು, ಒಗರು ರುಚಿಯನ್ನು, ನಾಭಿಸ್ಥಾನವನ್ನು, ಗುರುಲಿಂಗದೇವತ್ವವನ್ನು, ವಿಷ್ಣು ಅರ್ಚಕನೆಂಬುದನ್ನು ಅರಿತು ಅವನ್ನು ಧಾರಣಮಾಡುತ್ತಾನೆ. ಆ ಧಾರಣಶಕ್ತಿಯಿಂದ ಧೈರ್ಯ, ಔದಾರ್ಯ, ಧರ್ಮಬುದ್ಧಿ, ಯಶೋಲಾಭ, ಧರ್ಮಾಧಿಕಾರಾದಿ ಗುಣಗಳು ಮೈಗೂಡಿ ಬರುತ್ತವೆ. ಇದರಿಂದಾಗಿ ಮರಣ ಭಯ ಮಾಯುವಾಗುತ್ತದೆ.

ಸೋಮನಾಳ ಸೂರ್ಯನಾಳಗಳನ್ನು ನಿಲ್ಲಿಸಲು ಸುಷುಮ್ನನಾಳ ಸುಮುಖವಾಗುತ್ತದೆ. ಅದರ ಉನ್ಮುಖ ಉದ್ಘಾಟಿತವಾಗುತ್ತದೆ. ಅದರಲ್ಲಿ ಸಮ್ಯಗ್ ಜ್ಞಾನಕಳೆ ಬೆಳಗುತ್ತದೆ. ಸರ್ವಾಂಗವನ್ನು ಸೋಜ್ವಲಗೊಳಿಸುತ್ತದೆ. ತೇಜಃಪುಂಜವಾಗಿ ಸುರಸ ಪ್ರಸಾದವಾಗಿ ಶ್ರೀಗುರುಲಿಂಗವು ಜಿಹ್ವಾಗ್ರದಲ್ಲಿ ನೆಲಸುತ್ತದೆ. ಮಂತ್ರವು ಸರ್ವಾಂಗದಲ್ಲಿರುತ್ತದೆ. "ಓಂ ಎಂಬಕ್ಷರವೆ ರಸ, ನ ಎಂಬಕ್ಷರವೆ ರುಧಿರ, ಮ ಎಂಬಕ್ಷರವೆ ಮಾಂಸ, ಶಿ ಎಂಬಕ್ಷರವೆ ಮೇಧಸ್ಸು, ವಾ ಎಂಬಕ್ಷರವೆ ಅಸ್ಥಿ, ಯ ಎಂಬಕ್ಷರವೆ ಮಜ್ಜೆ, ಷಡಕ್ಷರದಿಂದ ಶುಕ್ಲ ಶೋಣಿತ. ಇಂತೀ ಸರ್ವೇಂದ್ರಿಯಂಗಳುತ್ಪತ್ತಿ ಕೂಡಲಚೆನ್ನಸಂಗಮದೇವ.

ಮಾನವೀಯ ಜೀವನವು ವರ್ತನ, ನೀರು, ಅನ್ನಗಳಿಂದ ರೂಪಿತವಾಗುತ್ತದೆ. ಇದರಿಂದಾಗಿ ಇವುಗಳ ಸಂಸ್ಕಾರ ಅತ್ಯಗತ್ಯ. ಇವುಗಳ ಸಂಸ್ಕಾರವನ್ನು ಕ್ರಮವಾಗಿ ಭಕ್ತ-ಮಾಹೇಶ್ವರ, ಪ್ರಸಾದಿ ಸ್ಥಲಗಳು ಮಾಡುತ್ತವೆ. ವೃತ್ತಿ ಸಂಸ್ಕಾರದಿಂದ ಭಕ್ತನೆನಿಸಿದರೆ ಜಲ ಸಂಸ್ಕಾರದಿಂದ ಮಾಹೇಶ್ವರನೆನಿಸುತ್ತಾನೆ. ಜಲ ಸಂಸ್ಕಾರದಿಂದ ಸ್ವಾಧಿಷ್ಠಾನ ಚಕ್ರ ಮತ್ತು ಆ ಚಕ್ರಗತ ಚೈತನ್ಯ ಶುದ್ಧ ಸ್ಫೂರ್ತಿಯುಳ್ಳವಾಗುತ್ತವೆ. ಶುಭ್ರ ಸ್ಥೈರ್ಯವುಳ್ಳವಾಗುತ್ತವೆ. ಜಲಾಂಗದ ಪರಿಣಾಮದಿಂದುಂಟಾದ ರಸ, ರಕ್ತ, ಶುಕ್ರಗಳ ಸಂಯಮದಿಂದ ಜ್ಞಾನಶಕ್ತಿ ಸಂವರ್ಧಿಸುತ್ತದೆ. ಶಾರೀರಿಕ ಸಾಮರ್ಥ್ಯವೂ ಸಂವರ್ಧಿಸುತ್ತದೆ. ಆರೋಗ್ಯದ ಪ್ರಗತಿ ಕುಂಠಿತವಾಗದು. ಕರಣೇಂದ್ರಿಯಗಳ ಕಲಿತನ ಮಿಗಿಲಾಗಿ ಚಿರಂತತೆ ಮೈಗೂಡುತ್ತದೆ. ಮಾನಸಿಕ ದೌರ್ಬಲ್ಯವಳಿಯುತ್ತದೆ. ಬೌದ್ಧಿಕ ಬಡತನ ನೀಗುತ್ತದೆ. ವೈದ್ಯದ ಅಗತ್ಯ ಕಡಿಮೆಯಾಗುತ್ತದೆ.

ಮಾಹೇಶ್ವರ ಸ್ಥಲದ ಈ ರಸಯೋಗದಿಂದ ರಕ್ತ ಹೀನತೆಯಾಗಲಿ, ರಕ್ತ ಚಲನೆಗೆ ಅಡೆತಡೆಯಾಗಲಿ ರಕ್ತ ಕ್ಷುಬ್ಧತೆಯಾಗಲಿ ಒದಗದು. ರೋಗ ರುಜಿನ

ಗಳಿಗೆ ಪಕ್ಕಾಗುವ ಸಂಭವವಿರದು. ಆಯುಃಪರಿಮಾಣ ಹೆಚ್ಚುವುದು, ನಿರೋಧ ಬಲ, ಸಹಿಷ್ಣು ಶಕ್ತಿ ಸಂಭವಿಸುವವು. ಒಟ್ಟಿನಲ್ಲಿ ಜೈವರಸಾಭಿವೃದ್ಧಿಯಾಗಿ ಜೀವನ ಸೌಂದರ್ಯ ಗಮನಾರ್ಹವಾಗುವುದು.

ಮಾಹೇಶ್ವರನು ತನ್ನಂಗದ ರಸ ಸಾಮ್ಯವನ್ನು ರಸ ಶುದ್ಧಿಯನ್ನು ಕಾಪಾಡಿ ಕೊಂಡು ಬರುವುದೇ ಮುಖ್ಯ. ವೈದ್ಯರ ಹಂಗಿಲ್ಲದೆ ಬಾಳುವ ಭಾಗ್ಯವುಂಟಾಗು ತ್ತದೆ. ಆದರೆ ಷಟ್‌ಸ್ಥಲ ಸಾಧಕರು ಕೇವಲ ಧಾರ್ಮಿಕ. ತಾತ್ವಿಕ ದೃಷ್ಟಿಗಳನ್ನೇ ಇಟ್ಟುಕೊಂಡು ಮುಂದುವರಿಯಬಾರದು; ಜತೆಗೆ ಈ ಒಂದು ಜೈವಿಕ ಜೀವನ ದೃಷ್ಟಿಯನ್ನೂ ಆರೋಗ್ಯ ಜೀವನ ವಿಚಾರವನ್ನೂ ಬೆಳಸಿಕೊಳ್ಳಬೇಕು. ಕೇವಲ ತಾತ್ವಿಕಕ್ಕಾಗಲಿ, ಕೇವಲ ಲೌಕಿಕಕ್ಕಾಗಲಿ ಇಳಿದರೆ ಜೀವನ ಕೃತಕವಾಗುತ್ತದೆ. ಷಟ್‌ಸ್ಥಲ ಸಿದ್ಧಾಂತ ಬರಡಾಗುತ್ತದೆ. ಷಟ್‌ಸ್ಥಲದಲ್ಲಿ ಜೀವನ ಸೌಂದರ್ಯಕ್ಕೆ ಬೇಕಾಗುವ ಕ್ರಿಯಾಜ್ಞಾನಗಳು ಬೇಕಾದಷ್ಟಿವೆ. ಮೊದಲಿನ ಮೂರು ಸ್ಥಳ ಗಳು ಬಹಿರಂಗ–ಅಂತರಂಗಗಳ ರಚನಾತ್ಮಕ ಸಕ್ರಿಯ ಪ್ರಣಾಳಿಕೆಯುಳ್ಳವಾಗಿವೆ. ಮುಂದಿನ ಮೂರು ಲಿಂಗ ಅಂದರೆ ಚೈತನ್ಯ ದೃಷ್ಟಿಯುಳ್ಳವಾಗಿವೆಯೆಂಬುದನ್ನು ಮರೆಯಬಾರದಾಗಿದೆ. ಜೀವನವನ್ನು ಬಿಟ್ಟು ದೇವನ ಬಳಿಗೆ ಸೇರಲು ಸಾಧ್ಯ ವಿಲ್ಲ. ಜೀವನವೇ ದೇವತ್ವದ ಮೂಲ ಬೀಜ. ಜೀವನ ಕ್ರಮ ತಾತ್ತ್ವಿಕದ ಧಾರ್ಮಿಕದ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋಗಬಾರದು. ಅಧ್ಯಯನ, ನೀತಿಗಳು ಎಷ್ಟು ಅವಶ್ಯವೋ ಶುದ್ಧ ಸಾತ್ವಿಕ ಆಹಾರ ನೀರ ಅಷ್ಟೇ ಅವಶ್ಯ ಈ ದೃಷ್ಟಿಯಿಂದ ಷಟ್‌ಸ್ಥಲಗಳ ಪುನರ್ವಿಶ್ಲೇಷಣ–ಪುನರ್ವಿಮರ್ಶೆ ಅತ್ಯಗತ್ಯ.

ಈ ಪುನರ್ವಿಮರ್ಶೆಯಿಲ್ಲದೆ ಮಾನವ ಜೀವಿತದ ಮತ್ತು ವ್ಯಕ್ತಿತ್ವದ ನಿಜ ಮತ್ತು ಪೂರ್ಣ ನಿರ್ಮಾಣವಾಗುವುದಿಲ್ಲ. ಪ್ರಕೃತಿಯೇ ಪರಮಾರ್ಥವಾಗ ಬೇಕೆಂಬ ಪುರಾತನ ಪಾವನ ಸಹಜ ದೃಷ್ಟಿ ಬೆಳೆದು ಬಂದಂತಾಗುವುದಿಲ್ಲ; ಉಳಿದು ನಿಂತಂತಾಗುವುದಿಲ್ಲ. ಪ್ರಕೃತಿಯನ್ನು ವಿಕೃತಗೊಳಿಸಿ ಪರಮಾರ್ಥ ವನ್ನು ಗಳಿಸೆಂದು ಎಲ್ಲಿಯೂ ಹೇಳಿಲ್ಲ. ಷಟ್‌ಸ್ಥಲ ಧ್ಯೇಯವೂ ಅದಲ್ಲ. ಶಾರೀರಿಕ ಅಸ್ತಿತ್ವವನ್ನು ಸುಸ್ಥಿತಿಯನ್ನು ಉಪೇಕ್ಷಿಸುವುದು ಷಟ್‌ಸ್ಥಲ ಧ್ಯೇಯಕ್ಕೆ ಹೊರಗು. ಪ್ರಕೃತಿಯನ್ನು ಉಪೇಕ್ಷಿಸಿದಷ್ಟೂ ಪರಮಾರ್ಥಸಾಧನೆ ಹಸಗೆಡು ತ್ತದೆ. ಈ ದಿಸೆಯಲ್ಲಿ ಜೀವನದ ಆಹಾರ ಆರೋಗ್ಯ ಶಾರೀರ ಜಲಾಂಗಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟ ಭಕ್ತ, ಮಾಹೇಶ್ವರ, ಪ್ರಸಾದಿಸ್ಥಲಗಳ ಪುನರ್ವಿ

ಮರ್ಶೆಗೆ ಪೂರ್ಣಗಮನವೀಯ ಬೇಕಾಗಿದೆ. ಪ್ರಕೃತಿಯ ಪರಿಶುದ್ಧ ಪ್ರಗತಿಯನ್ನು ಸಾಧಿಸಲು ಸಹಾಯಕವಾದ ಈ ಮೂರುಸ್ಥಲಗಳ ಪ್ರಾಮುಖ್ಯತೆ ಅಷ್ಟಿಷ್ಟಲ್ಲ. ಪೂರ್ವಭಾವಿಯಾಗಿ ಇವು ಬೇಕೇ ಬೇಕು. ಅದರಲ್ಲಿಯೂ ಅಂಗಸ್ಥಲಗಳ ಪ್ರಾಕೃತಿಕ ಪೂರ್ಣವಿಮರ್ಶೆ ಅತ್ಯಂತ ಆಕಾಂಕ್ಷಣೀಯ.

ಹೊರಮೈ ಭಕ್ತನದಾದರೆ ಒಳಮೈ ಮಾಹೇಶ್ವರನದು. ಹೊರಮೈ ಹೊರಗಿನ ಗಾಳಿ ಬೆಳಕುಗಳ ಸಂಪರ್ಕದಿಂದ ಮಣ್ಣಿನಂತೆ ಶುಷ್ಕವಾಗಿರುತ್ತದೆ. ಒಳಮೈಗೆ ಗಾಳಿಬೆಳಕುಗಳ ಸನ್ನಿಹಿತ ಸಂಪರ್ಕವಿಲ್ಲದ ಕಾರಣ ತನ್ನ ಆರ್ದತೆಯ ಅಚ್ಚಳಿಯದೆ ಉಳಿಸಿಕೊಂಡಿರುತ್ತದೆ. ಅದು ಆರ್ದ್ರಗುಣದಿಂದಾಗಿ ಮೃದುವಾಗಿರುತ್ತದೆ. ಅದು ತನ್ನ ರಸಮಯಜೀವನದಿಂದ ಜೀವಕಣಗಳನ್ನು ಉತ್ಪಾದಿಸಲು ಸಮರ್ಥವಾಗುತ್ತದೆ. ಅದರಿಂದಾಗಿ ಅದು ಸ್ಥಿತಿ ಸ್ಥಾಪಕ ಶಕ್ತಿ ಸಂಪನ್ನವಾಗುತ್ತದೆ. ಆ ಭಾಗಕ್ಕೆ ಭಕ್ತನು ಒಡೆಯನಾದಾಗ ಮಾಹೇಶ್ವರನೆನಿಸುತ್ತಾನೆ. ತನ್ನ ನಿಷ್ಠೆಯಿಂದ ಸತ್ತೆಯಲ್ಲಿ ಚಿತ್‌ಶಕ್ತಿಯನ್ನು ಉಜ್ವಲಗೊಳಿಸುತ್ತಾನೆ. ಜ್ಞಾನ ಸಂಪತ್ತನ್ನು ಭಾಷಾಸಂಪತ್ತನ್ನು ಊರ್ಜಿತಗೊಳಿಸುತ್ತಾನೆ.

ಜಿಹ್ವೆಯು ಯಾವಾಗಲೂ ತೇವ (ಜಲಾರ್ದ್ರ) ವಾಗಿರುವುದರಿಂದ ಅದು ರುಚಿಸುವ ಶಕ್ತಿಸಂಪನ್ನವಾಗಿದೆ. ಈ ಗುಣವೇ ಮಾಹೇಶ್ವರಾಂಗನ ಬಲ. ಪ್ರತಿ ಶಬ್ದಾರ್ಥದ ರುಚಿಯನ್ನು ನೋಡುವ ಶಕ್ತಿ ಮಾಹೇಶ್ವರಾಂಗನ ನಾಲಗೆಗೆ ಇರುವಂತೆ ಪ್ರತಿ ಶಬ್ದಾರ್ಥದ ರುಚಿಯನ್ನು ನೋಡುವ ಶಕ್ತಿ ಮಾಹೇಶ್ವರಾಂಗನ ಬುದ್ಧಿಗಿರುತ್ತದೆ. ಘ್ರಾಣೇಂದ್ರಿಯದ ಮುಖ್ಯನರ ನೇರವಾಗಿ ಚಿತ್ತಕ್ಕೆ ಸಂಬಂಧವಿರುವಂತೆ ಜಿಹ್ವೇಂದ್ರಿಯದ ಪ್ರಮುಖನರದ ಸಂಬಂಧ ಬುದ್ಧಿಗಿರುತ್ತದೆ.

ಮಾಹೇಶ್ವರನ ರಸನೇಂದ್ರಿಯವು ಆತನಿಗೆ ಪ್ರಾಣಿಪ್ರಪಂಚದಲ್ಲಿ ಹಿರಿಯ ಸ್ಥಾನವನ್ನು ಗಳಿಸಿಕೊಟ್ಟಿದೆ. ಕೊರಳು ನಾಲಗೆಗಳ ಸಂಬಂಧದಿಂದ ಮತ್ತು ಅವೆರಡರಲ್ಲಿರುವ ನರ ಸ್ನಾಯುಗಳ ಸಮೂಹದಿಂದ ಮಾತನಾಡಬಲ್ಲನು ಮಾಹೇಶ್ವರನು. ಮಾತಿನಿಂದ ಮನಸ್ಸಿನ ಕ್ರಿಯೆಗಳನ್ನು ಉದ್ದೇಶಗಳನ್ನು ಹೊರಹೊಮ್ಮಿಸಬಲ್ಲನು; ವ್ಯವಹರಿಸಬಲ್ಲನು. ಭಾವಗಳನ್ನು ವೆಗ್ಗಳಿಸಿ ಭಾಷೆಯನ್ನು ರಚಿಸಬಲ್ಲನು. ಸಂಸ್ಕೃತಿಯನ್ನು ಬೆಳಸಬಲ್ಲನು.

# ರುದ್ರಗಣಾಧೀಶ್ವರ ಮಾಹೇಶ್ವರ

ಮಾಹೇಶ್ವರನ ಜಲಾಂಗವೆಲ್ಲ ರಸ-ರಕ್ತಮಯ. ರಸರಕ್ತಗಳೆರಡು ಜೀವ ಕಣಸ್ವರೂಪ. ರಕ್ತಕಣಗಳೆಲ್ಲವೂ ರುದ್ರಗಣರು. ಈ ರುದ್ರಗಣರಿಗೆ ಅಧೀಶ್ವರ ಮಾಹೇಶ್ವರ. ರಸ ರಕ್ತ ದ್ರವ್ಯ. ರಕ್ತ ಜೈವಿಕ ಧಾತುದ್ರವ್ಯ. ಇವು ಅಂಗಕ್ಕೆ ಬೇಕಾದ ರಸ ವಿಶೇಷಗಳು ; ಧಾತೂತ್ಪತ್ತಿಯ ಕಣಗಳು, ಜೈವಿಕಗಣಗಳು. ಪ್ರತಿ ರಕ್ತರಸಗಳ ಕಣದಲ್ಲಿಯೂ ಅಂಗಾಂಶ–ಲಿಂಗಾಂಶಗಳಿರುತ್ತವೆ. ರಕ್ತಾಂಶವೆ ಜೀವ ಕಣವಾಗಿ ಮಾರ್ಪಡುತ್ತದೆ, ಮಾರ್ಪಟ್ಟ ಜೀವಕಣವನ್ನು ಮಾರ್ಪಡದ ರಕ್ತ ಪ್ರವಾಹವು ಪೋಷಿಸುತ್ತದೆ. ರಸರಕ್ತಗಳ ಅಂಗಾಂಶ–ಲಿಂಗಾಂಶಗಳನ್ನೆ ಕೆಂಪುಕಣ–ಬಿಳಿಕಣಗಳೆಂದು ಶಾರೀರ ವಿಜ್ಞಾನಿಗಳು ಹೇಳುತ್ತಾರೆ. ಈ ತೆರನಾದ ರಕ್ತ ರಸಗಳ ಮೇಲೆ, ಈ ರಕ್ತರಸಗಳನ್ನು ಹೊತ್ತೊಯ್ವ ನರಗಳ ಮೇಲೆ ಸ್ಪಂದನದಿಂದ ಸ್ಫುರಣಗೊಳ್ಳುವ ಸ್ನಾಯುಕಣಗಳ ಮೇಲೆ ಮಾಹೇಶ್ವರಾಂಗನಿಗೆ ಒಡೆತನವಿರುತ್ತದೆ. ನರಕಣಗಳ ಕ್ರಿಯೆಗಳಲ್ಲಿ ಒಂದು ಬಗೆಯ ಎಚ್ಚರಿಕೆಯ ಶಕ್ತಿಯಿರುತ್ತದೆ. ನರತಂತುಗಳ ಉದ್ದಕ್ಕೂ ಒಂದು ತೆರನಾದ ವಿದ್ಯುತ್ ಪ್ರವಾಹವಿರುತ್ತದೆಂದು, ಇದು ಮೆದುಳಿಗೆ ವೇದನೆ ಮತ್ತು ಕಲ್ಪನೆಗಳನ್ನು ಹುಟ್ಟಿಸುತ್ತದೆಂದು ಹೇಳುತ್ತಾರೆ.

ಇದರಿಂದಾಗಿ ಮಾಹೇಶ್ವರನಿಗೆ ಬುದ್ಧಿ ಮತ್ತು ಜ್ಞಾನಗಳ ಸಂಬಂಧವನ್ನು ಷಟ್‌ಸ್ಥಲಸಿದ್ಧಾಂತ ಸಿದ್ಧಮಾಡಿದೆ. ಮಾನವನ ಜ್ಞಾನಾರ್ಜನೆಗೆ ಮಾಹೇಶ್ವರಾಂಗದ ನರತಂತುಗಳೆ ಕಾರಣವೆಂಬುದನ್ನು ಅರಿಯಬೇಕಾಗಿದೆ. ಭಕ್ತಸ್ಥಲದಲ್ಲಿ ಕ್ರಿಯಾವಾಹಿ ನರತಂತುಗಳು ಜಾಗ್ರತಗೊಂಡರೆ ಮಾಹೇಶ್ವರ ಸ್ಥಲದಲ್ಲಿ ಜ್ಞಾನವಾಹಿ ನರತಂತುಗಳು ಜಾಗ್ರತಗೊಳ್ಳುತ್ತವೆ. ಹೀಗೆ ಜಾಗ್ರತಗೊಳ್ಳಲು ಬೇಕಾದ ನಿಷ್ಠೆ ನಿಯಮಗಳನ್ನು ನಿರ್ದೇಶಿಸುವುದೇ ಮಾಹೇಶ್ವರ ಸ್ಥಲದ ಮೂಲ ಉದ್ದೇಶ; ಮಾಹೇಶ್ವರಾಂಗನ ಮುಖ್ಯ ಕರ್ತವ್ಯ.

ಮಾನವನಿಗೆ ಷಡಂಗಗಳಿವೆ. ಪರಸ್ಪರ ಸಾಮರಸ್ಯದಿಂದವೆಯಾದರೂ ಆ ಆ ಅಂಗಗಳ ಆ ಆ ಕಾರ್ಯಭಾಗ ಪೃಥಕ್ಕರಣದಲ್ಲಿ ಸಾಗಿರುತ್ತದೆ. ಅಂತೆಯೇ

ಮಾಹೇಶ್ವರನು ರಸಾಂಗಕ್ಕೆ ರಸಲೋಕಕ್ಕೆ ರಸಕಾರ್ಯ ಸಮೂಹಕ್ಕೆ ಒಡೆಯನಾಗಿ ರುತ್ತಾನೆ. ಆದ್ದರಿಂದ ಮಾಹೇಶ್ವರನು ರಸಾಂಗದ ಪೂರ್ಣ ಪರಿಚಯವನ್ನು ಪಡೆದಿರಬೇಕಾಗತ್ತದೆ. ಮಿಗಿಲಾಗಿ ಸ್ವಾಧಿಷ್ಠಾನ ಚಕ್ರದ ಗುಹ್ಯೇಂದ್ರಿಯದ ಮೂತ್ರಗ್ರಂಥಿಯ ರಸರಕ್ತ ಶುಕ್ರಗಂಥಿಗಳ ಪರಿಜ್ಞಾನವಿರಬೇಕಾಗುತ್ತದೆ. ಪುಷ್ಟಿಯುಳ್ಳ ಪೂರ್ಣಪಿಂಡಾಂಡೋತ್ಪತ್ತಿ ಕಾರ್ಯದಲ್ಲಿ ಮಾಹೇಶ್ವರಾಂಗದ ಹೊಣೆ ಹೆಚ್ಚಿನದೆಂದೇ ಹೇಳಬೇಕು, ಧಾತುದ್ರವ್ಯ ಜೈವಿಕದ್ರವ್ಯಗಳಿಗೂ ಹೆಚ್ಚು ಸಂಬಂಧವಿರುವುದರಿಂದ ಇವೆರಡರ ಅನುಭವ ಮಾಹೇಶ್ವರನಿಗೆ ಅನಿವಾರ್ಯ. ರಕ್ತ ಕಣಗಳ ಜ್ಞಾನವೂ ಅವಶ್ಯ.

ಪಂಚಭೂತಗಳಿಂದ ಶರೀರ ; ಪಂಚಭೂತಗಳಿಂದ ಶರೀರಕ್ಕೆ ಬೇಕಾದ ಆಹಾರ. ಉಂಡ ಆಹಾರವು ಪಚನವಾಗಿ 'ರಸ' ಪದಾರ್ಥವಾಗುತ್ತದೆ. ರಸಕ್ಕೆ ಹೃದಯವೇ ಆಶ್ರಯಸ್ಥಾನ. ಅದೇ ಹೃದಯದಿಂದ ಹೊರಟ ಇಪ್ಪತ್ತು ನಾಲ್ಕು ಧಮನಿಗಳ ಮುಖಾಂತರ ಪ್ರವಹಿಸುತ್ತದೆ.

ಧಮನಿಗಳೆಂದರೆ ಮಾಂಸದ ನಲಿಕೆಗಳು. ಹೃದಯದಿಂದ ಮೇಲಕ್ಕೆ ಹತ್ತು, ಕೆಳಕ್ಕೆ ಹತ್ತು, ಎಡಬಲ ಪಕ್ಕಗಳಿಗೆ ಎರಡೆರಡು ಹೀಗಿ ಧಮನಿಗಳು ಶರೀರದಲ್ಲಿ ಹಬ್ಬಿವೆ. ಇವುಗಳಿಂದ ರಸವು ಮೈದುಂಬಿ ಮೈಯನ್ನು ಕಾಪಿಡು ತ್ತದೆ. ಬೆಳೆಸುತ್ತದೆ. ಧಾರಣಮಾಡುತ್ತದೆ; ಸಜೀವವನ್ನಾಗಿಸುತ್ತದೆ.

ಗತ್ಯರ್ಥವುಳ್ಳುದು ರಸಧಾತು. ಇದರಿಂದಾಗಿ ರಸ ಶರೀರದಲ್ಲಿ ಸಂಚರಣ ಶೀಲವಾಗಿರುತ್ತದೆ. ಅವರವರ ಶಕ್ತಿಗನುಸರಿಸಿ ರಸ ಸಂಚಾರ ಹೆಚ್ಚು ಕಡಿಮೆ ಗತಿಯುಳ್ಳದಾಗಿರುತ್ತದೆ. ಮತ್ತು ವೃದ್ಧಿ—ಕ್ಷೀಣತೆಯುಳ್ಳದ್ದಾಗಿರುತ್ತದೆ. ವಿಕೃತಿಗೂ ಒಳಪಡುತ್ತದೆ. ರಸವಿಕಾರದಿಂದ ರೋಗೋತ್ಪತ್ತಿಯಾಗುತ್ತದೆ. ರಸವು ಆಮಕೋಶ, ಕಫಕೋಶಗಳಲ್ಲಿ ಸಂಚರಿಸುವುದರಿಂದ ಶೀತವಾಗಿರುತ್ತದೆ. ಅದೇ ಪಿತ್ತಾಶಯದಲ್ಲಿ ಸಂಚರಿಸುವುದರಿಂದ ಉಷ್ಣವಾಗುತ್ತದೆ.

ರಸಕ್ಕೆ ಮೂಲ ಜಲ. ಜಲತತ್ತ್ವವು "ಸತ್ವತಮೋಬಹುಲಾ ಆಪಃ" ಎಂಬಂತೆ ಸತ್ವಗುಣ, ತಮೋಗುಣ ಯುಕ್ತವಾಗಿವೆ. ಸ್ವಚ್ಛವಾಗಿದ್ದು ಸತ್ವಗುಣ ವುಳ್ಳದ್ದು; ಜಡವಾಗಿದ್ದು ತಮೋಗುಣವುಳ್ಳದ್ದು.

"ರಸೋ ರಸನೇಂದ್ರಿಯಂ ಸರ್ವದ್ರವಸಮೂಹೋ
ಗುರುತಾ ಶೈತ್ಯಂ ಸ್ನೇಹೋ ರೇತಶ್ಚ ।"

ರಸ, ರಸನೇಂದ್ರಿಯ, ಎಲ್ಲ ದ್ರವರೂಪದ್ರವ್ಯಗಳು, ಜಡತ್ವ, ಶ್ವೈತ್ರ, ಸ್ನೇಹ, ರೇತಸ್ಸು ಇವು ಜಲದ ಕ್ರಿಯೆಗಳು, ಗುಣಗಳು. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ಶುಕ್ರ: ಇವೇಳು ಧಾತುಗಳು. ಇವು ಶರೀರ ಧಾರಣಾರ್ಹಗಳು. ಇವುಗಳಿಂದಲೇ ಜೀವನ. ಸ್ತನ್ಯ (ಎದೆಹಾಲು), ರಜಸ್ಸು (ಮುಟ್ಟು ದೋಷ), ವಸಾ, ಬೆವರು, ಹಲ್ಲು, ಕೂದಲು, ಓಜಸ್ಸು ಇವೇಳು ಉಪಧಾತುಗಳೆಂದು ಹೇಳುತ್ತಾರೆ. ರಸದಿಂದ ಸ್ತನ್ಯ ರಜಸ್ಸುಗಳು, ಮಾಂಸದಿಂದ ಸ್ನಿಗ್ಧರೂಪ ವಸೆಯು, ಮೇದಸ್ಸಿನಿಂದ ಬೆವರು, ಅಸ್ಥಿಯಿಂದ ಹಲ್ಲು, ಮಜ್ಜೆಯಿಂದ ಕೂದಲು, ಶುಕ್ರದಿಂದ ಓಜಸ್ಸು ಜನಿಸುತ್ತವೆ. ಉಂಡ ಅನ್ನ ನೀರುಗಳಿಂದ ಮಲ ಮೂತ್ರಗಳು ಶೇಷಮಲಿನಾಂಶಗಳಾಗಿ ಹೊರಹೊಮ್ಮುವಂತೆ ಅದೇ ಅನ್ನ ಜಲಗಳು ಜಠರಾಗ್ನಿಯಲ್ಲಿ ಪಾಕವಾಗಿ ಆದ ರಸಾದಿಗಳಿಂದಲೂ ಮಲಗಳುಂಟಾಗಿ ಹೊರ ಬರುತ್ತವೆ. ಅವಿವು : ರಸಪಾಕವಾಗಿ ಜೊಲ್ಲು, ಕಣ್ಣೀರುಗಳ ರೂಪದಲ್ಲಿ ರಸಮಲಗಳುಂಟಾಗಿ ಹೊರಬರುತ್ತವೆ. ರಕ್ತದಿಂದ ರಂಜಕವೆಂಬ ಪಿತ್ತ, ಮಾಂಸದಿಂದ ಕೂಗಣೆ, ಮೇದಸ್ಸಿನಿಂದ ಹಲ್ಲು ಗುಹ್ಯಗಳ ಕೊಳೆಗಳು, ಅಸ್ಥಿಯಿಂದ ಉಗುರು, ಮಜ್ಜೆಯಿಂದ ಕಣ್ಣ ಪಿಚ್ಚ, ಶುಕ್ರದಿಂದ ಮುಖಸ್ನಿಗ್ಧತೆ, ಮಡಿಬಕ್ಕೆಗಳು ಮಲವಾಗಿ ಹೊರಬರುತ್ತವೆ.

ರಸವು ಯಕೃತ್, ಪ್ಲೀಹ ಎಂದು ಇಬ್ಬಗೆ. ಎದೆಯ ಬಲಭಾಗಕ್ಕಿರುವುದು ಯಕೃತ್. ಎಡಭಾಗಕ್ಕಿರುವುದು ಪ್ಲೀಹ. ಇವೆರಡರಿಂದಲೂ ರಕ್ತವಾಗುತ್ತದೆ. ಯಕೃತ್ತಿನಿಂದ ರಂಜಕ ಪಿತ್ತ ಹುಟ್ಟುತ್ತದೆ. ಇದರ ಮಿಶ್ರಣದಿಂದ ಅನ್ನ ರಸವು ರಕ್ತವಾಗುತ್ತದೆ. ಮತ್ತು ಪ್ಲೀಹರಸದಿಂದಲೂ ರಕ್ತವಾಗುತ್ತದೆಂದು ವೈದ್ಯ ಶಾಸ್ತ್ರ ಹೇಳುತ್ತದೆ.

ದ್ರವ, ಸರ ಅಂದರೆ ಮಂದಗತಿ, ಸ್ನಿಗ್ಧ, ಮೃದು, ಪಿಚ್ಛಲ, ರಸ, ರಕ್ತ, ವಸೆ, ಕಫ, ಪಿತ್ತ, ಮೂತ್ರ, ಸ್ವೇದ, ರಸ, ರಸನೇಂದ್ರಿಯ ಇವು ಜಲಸಂಬಂಧವಾದವುಗಳು. "ಯದ್ರವ ಸರ ಮಂದ ಸ್ನಿಗ್ಧಮೃದು ಪಿಚ್ಛಲಂ ರಸ ರುಧಿರ ವಸಾ ಕಫ ಪಿತ್ತ ಮೂತ್ರ ಸ್ವೇದಾದಿ ತದಾಪ್ಯಂ ರಸೋ ರಸನಂಚ ॥ "—ಚರಕ, ಶಾರೀರ—ಅ—೭, ಸೂ—೧೬.

ಷಟ್‌ಸ್ಥಲ ಸಾಧಕನಾದ ಭಕ್ತನು ಮಾಹೇಶ್ವರ ಸ್ಥಲಕ್ಕೆ ಅಡಿಯಿಡುವುದೆಂದರೆ ಒಂದರೊಳಗಿನ ಮತ್ತೊಂದು ಸ್ತರ, ಮತ್ತೊಂದು ಜನ್ಮ, ಮತ್ತೊಂದು

ನವ ಸಾಧನ: ಅಂದರೆ ಸೊಪ್ಪು ಸುವವಾದಂತೆ! ಹೂವು ತನ್ನ ಕಂಪನ್ನು ಸುಳಿ ಗಾಳಿಯಲ್ಲಿ ದೂರ ದೂರಕ್ಕೆ ಸುಳಸುವಂತೆ ಮಾಹೇಶ್ವರನು ತಾನು ತುಂಬಿಕೊಂಡ ತನ್ನ ಬೌದ್ಧಿಕದ ಬೆಳಕನ್ನು ಬಿತ್ತರವಾಗಿ ಹಬ್ಬಿಸುತ್ತಾನೆ. ರವಿಯುದಿಸಿದಂತೆ ಉದಿಸುತ್ತಾನೆ. ನಿಜದೊಳಗೆ ನಿಷ್ಠೆಯನ್ನು ಗಟ್ಟಿಗೊಳಿಸುತ್ತಾನೆ. ಫಲವಾಗಿ ಜ್ಞಾನ ಶಕ್ತಿಯುಕ್ತ ಗುರುಲಿಂಗವೆಂಬ ಭೃಂಗ–ಮಾಹೇಶ್ವರನೆಂಬ ಕುಸುಮ ಕಂಪಿ ಗೆಳಸಿ ಬಂದು ಮಕಾರ ಜೇಂಕಾರದೊಡನೆ ಮನತಣಿಸಿ ಹೃದಯ ಹೂವಿನೊಳ ಹೊಕ್ಕು ನಿಷ್ಠೆಯೆಂಬ ಮರಂದ ಪಾನಾನಂದದಲ್ಲಿ ಮೈಮರೆತು ಮಾಹೇಶ್ವರತ್ವ ಸಿದ್ಧಿಯನ್ನು ದಯಪಾಲಿಸುವ ಚಿತ್ರ ಚೆನ್ನಾದುದು. ಮುನ್ನೀರ ನೀರು ಮುಗಿಲ ಸೇರಿದಂತೆ ಮಾಹೇಶ್ವರನ ಜಲಾಂಗದ ಮಂಗಳ ಬಾಳ ನಿಲುವು ನೀಳಾಗಿ ಬೆಳೆದು ನಿಲ್ಲುತ್ತದೆ; ಚಿದ್ಘನವಾಗಿ ಸಲ್ಲುತ್ತದೆ. ಹೊಸ ಮೈವೆತ್ತು ಹೊಸ ಸ್ಫೂರ್ತಿ ಗೊಳ್ಳುತ್ತದೆ. ಮಾಹೇಶ್ವರನ ತ್ಯಾಗಾಂಗದ ಅಂಗೋಪಾಂಗಗಳಲ್ಲಿ ಮಾಹೇಶ್ವ ರತ್ವದ ಮಹತ್ತರ ಕಳೆಗಳು ಮೈಗೂಡುತ್ತವೆ. ಉತ್ತರೋತ್ತರ ಉನ್ನತಗೊಳ್ಳು ತ್ತವೆ. ಪ್ರಸನ್ನತೆಗೆ ಮುಟ್ಟಿಸುವ ಬಗೆಯಲ್ಲಿ ಕಾರ್ಯನಿರತವಾಗಿ ಕಂಗೊಳಿಸುತ್ತವೆ, ತ್ಯಾಜ್ಯ ಗುಣಗಳನ್ನೆಲ್ಲ ತ್ಯಜಿಸಿ ತೇಜಸ್ವಿಯಾಗುತ್ತಾನೆ ಮಾಹೇಶ್ವರನು. ಲಿಂಗ ಭೋಗೋಪಭೋಗಕ್ಕೆ ಬೇಕಾಗುವ ಪರಮಾರ್ಥ ಸಾಹಿತ್ಯವನ್ನು ಶಕ್ತಿಯನ್ನು ಸಂಗಳಿಸುತ್ತಾನೆ. ಪ್ರಸನ್ನತೆಯನ್ನು ಪಡೆದು ಪೂರ್ಣತೃಪ್ತಿಗೊಳ್ಳುವ ಅಧಿಕಾರ ವನ್ನು ಅಳವಡಿಸಿಕೊಳ್ಳುವವನಾಗಿರುತ್ತಾನೆ.

ತ್ಯಾಗಾಂಗವನ್ನು ಅದರ ಹೆಸರಿಗೆ ತಕ್ಕಂತೆ ಪೂರ್ಣಗೊಳಿಸುವುದೇ ಮಾಹೇಶ್ವರನ ಕರ್ತವ್ಯ. ಸಣ್ಣ ಪುಟ್ಟ ಸ್ವಭಾವಗಳನ್ನು ತ್ಯಾಗಮಾಡಿ ಸಹಜ ನಿಷ್ಠೆಯಿಂದೊಡಗೂಡಿ ತಾತ್ವಿಕತೆಗೆ ತಲ್ಪಿಸುವುದೆ ಮುಖ್ಯಕಾರ್ಯ. ವಿಶಾಲ ಭಾವಿಯಾಗಿ ಬಾಳುವುದೆ ವಿಚಾರ ದೃಷ್ಟಿಗೆ ಉಚಿತವಾದ ಗುರಿ.

ವಿಶ್ವಾತೀತ ಮಹೇಶ್ವರನ ಆರಾಧಕನಾದ ಮಾಹೇಶ್ವರನ ದೃಷ್ಟಿಗೆ ಹೊರಗಾದುದು ಯಾವುದಿಲ್ಲ. ಈತನ ಜ್ಞಾನಶಕ್ತಿ–ಬುದ್ಧಿ ಜ್ಯೋತಿ ಪೂರ್ಣ ವಾಗಿರುತ್ತದೆ. ವಿಶ್ವಾಂತರ್ಯಾಮಿಯ ಆರಾಧನೆಯಲ್ಲಿ ನಿಷ್ಠೆ ಗಟ್ಟಿಗೊಂಡಿರು ತ್ತದೆ. ಅದರಲ್ಲಿ ಆ ವಿಶ್ವಾತ್ಮನನ್ನು ಮಾಹೇಶ್ವರನು ಅವಲೋಕಿಸುತ್ತಾನೆ, ಆರಾಧಿಸುತ್ತಾನೆ: ಆನಂದಿಸುತ್ತಾನೆ, ಬುದ್ಧಿ ಬಲವಿಲ್ಲದ ಚಿತ್ತ ಆತ್ಮವಿಲ್ಲದ ದೇಹದಂತೆ ಎಂದು ಭಾವಿಸುತ್ತಾನೆ. ಆ ಪಾರದರ್ಶನಕ್ಕೆ ಬುದ್ಧಿ ಚಿತ್ತಕರಣೇಂ

ದ್ರಿಯಗಳನ್ನೊಳಗೊಂಡ ಕಾಯವಿದು ಕಂಟಕವಲ್ಲ ಪ್ರತಿಯಾಗಿ ಸಹಾಯಕ ವೆಂದು ಭಾವಿಸುತ್ತಾನೆ. ಸಹಾಯಕವಾಗುವಂತೆ ಸಾಧನೆಯಿಂದ ಶುದ್ಧವಿಸಿ ವೃದ್ಧಿಸಿಗೊಳ್ಳುತ್ತಾನೆ. ತ್ಯಾಗಾಂಗದ ಬೆಲೆ ಕಲೆ ಕಡಿಮೆಯೆಂದು ತಿಳಿಯು ವುದಿಲ್ಲ. ತ್ಯಾಗಾಂಗಕ್ಕೆ ಮಾಹೇಶ್ವರನು ತುಂಬಾ ಮಹತ್ವವನ್ನು ಕೊಡುತ್ತಾನೆ. ಪರಮಪಾತ್ರವನ್ನಾಗಿಸುತ್ತಾನೆ. ಅತ್ಯಂತ ಗೌರವದಿಂದ ಗಂಭೀರತೆಯಿಂದ ಪರಾ ಮರ್ಶಿಸುತ್ತಾನೆ. ಸಮರಸ ಸಿದ್ಧಿಗೆ ಉತ್ತಮ ಉಪಕರಣವನ್ನಾಗಿಸುತ್ತಾನೆ. ತ್ಯಾಗಾಂಗ ತಳಿಗೆಯಲ್ಲಿ ಆಚಾರ–ವಿಚಾರವೆಂಬ ರಸದುಣಿಸುಗಳನ್ನು ತುಂಬುತ್ತಾನೆ. ವ್ಯಕ್ತಿ ಜೀವನದಲ್ಲಿ ವಿಶ್ವಾತ್ಮಭಾವ ಪ್ರಕಾಶವನ್ನು ತುಂಬುತ್ತಾನೆ. ಅಕಿಂಚನತೆಗೆ ಜಲಾಂಜಲಿಯನ್ನು ಬಿಡುತ್ತಾನೆ.

ಮಿಥ್ಯೆಯನ್ನು ಕಳೆದು ಸತ್ಯವನ್ನು ತಳೆದು ಭಕ್ತನಾದಂತೆ ತಮಸ್ಸನ್ನು ಹರಿಸಿ ತೇಜಸ್ಸನ್ನು ಬೆಳಸಿ ಮಾಹೇಶ್ವರನೆನಿಸುತ್ತಾನೆ. ಸ್ವಾರ್ಥಪರತೆಯನ್ನು ಬಿಟ್ಟು ಸರ್ವಾಂಗೀಣತೆಯಲ್ಲಿ ಪರಿವರ್ತಿತನಾಗಿರುತ್ತಾನೆ. ಮಾಹೇಶ್ವರತೆಯು ಆತನಲ್ಲಿ ಸುಸಂಸ್ಕೃತ ಜೀವನದ ಸಂಕೇತವಾಗಿ ಪರಿಣಮಿಸುವುದು. ಸಾಮಾಜಿಕ ನೈತಿಕ ಜೀವನಾದರ್ಶವುಳ್ಳುದಾಗುವುದು. ವಿದ್ಯೆ, ವಿನಯ, ಔದಾರ್ಯ, ಧೈರ್ಯ, ಉತ್ತಮತೆ, ಉದಾತ್ತತೆ, ಸರಳತೆ, ಸಾಮಾಜಿಕಧರ್ಮಪರಿಪಾಲನೆ, ವಿವೇಕಿ ಗಳಲ್ಲಿ ಮನ್ನಣೆ ಮುಂತಾದ ಸದ್ಗುಣಗಳ ನೆಲವೀಡಾಗುತ್ತದೆ. ತ್ಯಾಗಾಂಗ ಕ್ಷೇತ್ರದಲ್ಲಿ ತತ್ತ್ವದ ಬೆಳೆಯನ್ನು• ಹುಲುಸಾಗಿ ತೆಗೆಯಬಲ್ಲುದು ಮಾಹೇಶ್ವರತೆ! ಮಾನವ ಮಹಾ ಜೀವನ ಪ್ರಗತಿಗೆ ಅಡೆ ತಡೆಯಾಗಿ ಬರುವುದನ್ನೆಲ್ಲ ಗೆಲುವ ಶಕ್ತಿ ಇದಕ್ಕಿರುತ್ತದೆ.

ಅನ್ವೇಷಣೆ ಭಕ್ತತ್ವದ ಕುರುಹಾದರೆ ಅರ್ಚನೆ ಮಾಹೇಶ್ವರತ್ವದ ಕುರುಹು. ಮಾಹೇಶ್ವರನು ತನಗಿರುವ ದೈವೀ ಸಂಪತ್ತನ್ನು ದೈವೀ ದೀಪ್ತಿಯನ್ನು ಕ್ರಿಯಾ ಜ್ಞಾನಗಳ ಮುಖಾಂತರ ಮಾನವ ಲೋಕಕ್ಕೆ ಧಾರೆಯೆರೆಯುವವನು. ಆ ಆಧ್ಯಾತ್ಮ ಸಾಮ್ರಾಜ್ಯವನ್ನು ತನ್ನಲ್ಲಿಯೂ ಪರರಲ್ಲಿಯೂ ನೆಲೆಗೊಳಿಸಲು ಪ್ರಯತ್ನಿಸಿ ಫಲಗೊಳ್ಳುವವನು. ಈ ದಿಸೆಯಲ್ಲಿ ಮಾಹೇಶ್ವರನ ಮುಖ್ಯ ಸಾಧನ ಗಳೆಂದರೆ ಮೂರು : ತ್ಯಾಗ, ಜ್ಞಾನ, ನಿಷ್ಠೆಗಳು.

೧. ತ್ಯಾಗವೆಂದರೆ ಪ್ರಾಕೃತಿಕವಾದ ಎಲ್ಲ ಬಗೆಯ ವೃತ್ತಿಗಳನ್ನು ಬಿಡು ವುದು. ಶರೀರೇಂದ್ರಿಯ ಗುಣ ಕರ್ಮಗಳನ್ನು ಶರೀರೇಂದ್ರಿಯ ಭಾವವನ್ನು

ಬಿಟ್ಟು ಅಂಗಕ್ರಿಯೆಗಳನ್ನು ಅಂಗ–ಲಿಂಗ ಭಾವವನ್ನು ಬಲಿಸುವುದು. ಮನದ ಸಂಕಲ್ಪ–ವಿಕಲ್ಪಗಳನ್ನು ವಿಸರ್ಜಿಸುವುದು. ಆಶೆ, ಅಭಿಲಾಷೆ, ಪಿಪಾಸೆ, ಸಂವೇದನ, ಉದ್ವೇಗ, ಔದ್ಧತ್ಯ, ಸ್ವಾರ್ಥ, ಕಾಮಕ್ರೋಧಾದಿ ಶತ್ರುಷಡ್ವರ್ಗ, ಅಸೂಯೆ ದ್ವೇಷಾದಿಗಳನ್ನು ಬಿಡುವುದು. ಬೌದ್ಧಿಕವಾದ ಸಂಶಯ ಭಯ ತಮೋಗುಣಾದಿಗಳನ್ನು ತ್ಯಜಿಸುವುದು. ಅಚಲತೆ, ಅನುಕಂಪ, ಔದಾರ್ಯ, ಪರಹಿತ, ಧೈರ್ಯ, ತತ್ಪರತೆ, ಸದಾಚಾರ, ಲಿಂಗಾಚಾರ ಮುಂತಾದವುಗಳನ್ನು ಸ್ವೀಕರಿಸಿದಲ್ಲಿ ಮಹೇಶ್ವರತ್ವದ ಶಕ್ತಿ ಮೈಗೂಡಿಬರುತ್ತದೆ.

೨. ಜ್ಞಾನವೆಂದರೆ ಲೌಕಿಕ ಪಾರಮಾರ್ಥ ಜ್ಞಾನಗಳೆರಡನ್ನೂ ಗಳಿಸುವುದು. ಸಚ್ಚಿದಾನಂದ ನಿತ್ಯ ಪರಿಪೂರ್ಣಾಖಂಡ ಸ್ವರೂಪ ಸಂಪತ್ಪ್ರಭೆಯಲ್ಲಿ ಪ್ರಕಾಶಿಸುವುದು. ಅದು-ಇದು ಎಂಬ ಭಿನ್ನಭಾವವಳಿವುದು. ಸಣ್ಣ ಸ್ವಭಾವಕ್ಕಿಳಿಯದಿರುವುದು.

೩. ನಿಷ್ಠೆಯೆಂದರೆ ಕ್ರಿಯಾಚಾರಗಳಲ್ಲಿ ಜ್ಞಾನಾಚಾರಗಳಲ್ಲಿ ಸರ್ವಲೋಕಹಿತಕಾರ್ಯಗಳಲ್ಲಿ ಯಾವಾಗಲೂ ತೊಡಗಿರುವುದು. ಯಾವಾಗಲೂ ಹಿರಿಯಬಾಳಿನಲ್ಲಿಯೆ ಇರುವುದು. ಷಡ್ಗುಣೈಶ್ವರ್ಯ ಸಂಪಾದನೆಯಲ್ಲಿ ಶ್ರದ್ಧೆ ಕರಿಗೊಳ್ಳುವುದು.

ಈ ಮೂರರಿಂದ ಹುರಿಗೊಂಡು ಸ್ಥೈರ್ಯಗೊಂಡ ಅಂತಃಕರಣ ಮಾಹೇಶ್ವರನದು. ಜೀವನದ ಆಪತ್ತು ವಿಪತ್ತು ಸಂಕಟಾದಿಗಳನ್ನು ಎದುರಿಸುವ ಎದೆಗಾರಿಕೆಯುಳ್ಳವ ಮಾಹೇಶ್ವರ. ಸಜ್ಜನಿಕೆಯಿಂದ ಸಜ್ಜಾದ ವ್ಯಕ್ತಿತ್ವ ಮಾಹೇಶ್ವರನದು. ಬುದ್ಧಿ, ಚಿತ್ತ, ತನುಗಳನ್ನು ಪರಿಪಕ್ವಗೊಳಿಸಿ ತನ್ನ ಪ್ರಭುತ್ವದಲ್ಲಿರಿಸಿಕೊಳ್ಳುವ ಸತ್ವಶಾಲಿ ಮಾಹೇಶ್ವರ. ದೇಹಭಾವತ್ಯಾಗಿ, ದಿವ್ಯಚಕ್ಷುಧಾರಿ ; ದೈವೀನಿಷ್ಠಾಶಾಲಿ. ತನು ಬುದ್ಧಿ ಚಿತ್ತ ಶ್ರೀಮಂತ. ಆತನದು ಅಮೃತಕಾವ್ಯ ವಾಣಿ. ಆತನ ಆ ವಾಣಿಯಲ್ಲಿ ಪ್ರಾಮಾಣಿಕತೆಯುಂಟು ; ಗಾಂಭೀರ್ಯವುಂಟು. ಅಪಾರ ಅರ್ಥವುಂಟು, ದಾರ್ಶನಿಕತೆಯ ದೀಪ್ತಿಯಿರುವುದುಂಟು. ಆತ್ಮದ ಅಸ್ತಿತ್ವದ ಚಿತ್ತಾಕಾಶದಲ್ಲಿ ಸರ್ವಪದಾರ್ಥಗಳ-ಸರ್ವಸಂಗತಿಗಳ ಆಳ-ಅಗಲಗಳನ್ನು ಒಳಹೊಕ್ಕು ಕಂಡರಿಯುವ ಕುಶಲ. ಅದರಿಂದಾಗಿ ಆ ಮಾಹೇಶ್ವರನ ಬೋಧೆಯಲ್ಲಿ ಸತ್ವವಿರುತ್ತದೆ ; ಸತ್ಯದ ನಿಲುಮೆಯಿರುತ್ತದೆ. ಪ್ರೌಢ ಪ್ರಜ್ಞೆಯಿರುತ್ತದೆ. ಅತ್ಯಂತ ಆಳವಾದ ಚಿಂತನ ಮಂಥನದಿಂದ ಪ್ರಬುದ್ಧತೆ ಪ್ರಾದುರ್ಭವಿಸಿರುತ್ತದೆ; ಸಮಗ್ರತೆ ಸಂಭವಿಸಿರುತ್ತದೆ. ಮಾಹೇಶ್ವರನ ವಿಚಾರ ತಾತ್ತ್ವಿಕ ತಾದಾತ್ಮ್ಯದ

ತುದಿಗೊಂಡಿರುತ್ತದೆ. ಇದರಿಂದಾಗಿ ಮಾಹೇಶ್ವರನ ಸಮ್ಯಕ್ ಸಂವಿತ್ತು ಸಾಕ್ಷಾತ್ತಾಗಿರುತ್ತದೆ. ಅದರ ಅವಧಾನ, ಅದರ ಅನುಭವ, ಅದರ ಆನಂದ ಗಳಲ್ಲಿ ಪರಿವಿಡಿದು ತಲ್ಲೀನನಾಗಿ ಅದೇ ಸ್ಥಲದ ಪ್ರಸಾದಿತ್ವ, ಪ್ರಾಣಲಿಂಗತ್ವ, ಶರಣತ್ವಗಳನ್ನೂ ಮೈಗೂಡಿಸಿ ಕೊಂಡಿರುತ್ತಾನೆ. ಸಾಮರಸ್ಯದ ಸವಿಯಲ್ಲಿಯೂ ಸೋವೇರಿರುತ್ತಾನೆ. ಇದರಿಂದಾಗಿ ಸಮಷ್ಟಿ ದೃಷ್ಟಿ, ಸರ್ವೋನ್ನತ ದೃಷ್ಟಿ ಮಾಹೇಶ್ವರನಿಗೆ ಬೆಳೆದು ಬಂದಿರುತ್ತದೆ.

ಕ್ರಿಯಾಜ್ಞಾನಗಳೆರಡರ ಸಮ ಸಮನ್ವಯ ಸಿದ್ಧಿಯಲ್ಲಿ ತ್ಯಾಗಾಂಗದ ಮಾಹೇಶ್ವರತ್ವವನ್ನು ವಿಶ್ವಾತ್ಮನು ಪಡೆಯುತ್ತಾನೆ. ವಿಶ್ವಾತೀತ ವಸ್ತು ವಿಜ್ಞಾನಿ ಯಾಗುತ್ತಾನೆ. ಆತ್ಮಜ್ಞಾನ. ವಿಶ್ವಜ್ಞಾನ, ಪರಮಾತ್ಮಜ್ಞಾನಗಳನ್ನು ನಿಸ್ಸಂದೇಹ ವಾಗಿ ನೆಲೆಗೊಂಡಿಸಿರುತ್ತಾನೆ. ಬುದ್ಧಿಯೋಗದ ಹಸ್ತದಲ್ಲಿದರೂ ಊರ್ಧ್ವದೃಷ್ಟಿ ಅರಳಿರುತ್ತದೆ. ಅನೇಕದಲ್ಲಿ ಏಕವನ್ನು ಕಾಣುವ ಕಲೆ ಕರಿಗೊಂಡಿರುತ್ತದೆ. ಇದನ್ನೊಳಗೊಂಡ ಅದೊಂದೇ ಸತ್ತೆಂಬುದನ್ನು ಮನಗೂಂಡಿರುತ್ತಾನೆ. ಅಂತೆಯೇ ಆ ಸಂಪೂರ್ಣ ಜ್ಞಾನ ಸಂಪಾದನೆಯ ಕ್ರಿಯಾಚಾರವೂ ಅಷ್ಟೇ ಆಳ ಅಷ್ಟೇ ಅಗಲವಾಗಿರುತ್ತದೆ. ಆದ್ದರಿಂದ ಮಾಹೇಶ್ವರನ ಕ್ರಿಯಾ ಜ್ಞಾನಗಳೆರಡರ ಪೂರ್ಣಪ್ರಾತಿಭವರ್ಚಸ್ಸು ಉಜ್ವಲವಾಗಿ ಸತ್ವಶಾಲಿಯಾಗಿ ಬೆಳ ಗುತ್ತದೆ. ಅಂತರ್ವಿಚಾರದಂತೆ ಅಂತರಾಚಾರವೂ ಅಭಿವೃದ್ಧಿಗೊಂಡಿರುತ್ತದೆ. ಬಾಹ್ಯಜ್ಞಾನದೊಡನೆ ಬಾಹ್ಯಕ್ರಿಯೆಯೂ ಬಿಡದೆ ಬೆಂಬಳಿವಿಡಿದಿರುತ್ತದೆ.

ಮಾಹೇಶ್ವರನೆಂದರೆ ಭಕ್ತಿ, ಜ್ಞಾನ, ಕ್ರಿಯೆಗಳು ಕರಿಗೊಂಡ ಸಮನ್ವಯ ಮೂರ್ತಿ. ಕ್ರಿಯಾಜ್ಞಾನಭಕ್ತಿಗಳ ಜೀವಂತಕಾವ್ಯ. ಈ ತ್ರಿವಿಧರಸ ಪೂರ್ಣ ಫಲಗಳನ್ನು ಹೊತ್ತುನಿಂತ ಮರ್ತ್ಯದ ಮಂದಾರ. ಈ ಮಂದಾರಮರ ನೋಡಲು ಚೆಂದ, ಇದರ ಫಲ ರಚಿಸಲು ಆನಂದ, ಇದರ ಹೂವುಗಳಲ್ಲಿರುವುದು ಘ್ರಾಣಾ ತೀತಗಂಧ. ಇದರ ನೋಟದಲ್ಲಿದೆ ಸರ್ವದರ್ಶನ ಸಾರ. ಇವರ ಸ್ಪರ್ಶನವಲ್ಲಿದೆ ಅಪರೋಕ್ಷ ಸಾಮರಸ್ಯ ಸಾರಾಯ ಸುಖಸ್ವಾರಸ್ಯ. ಮಾಹೇಶ್ವರನ ಮಾತು ಮಾತುಗಳಲ್ಲಿ ದರ್ಶನದೀಪ್ತಿ, ದಿವ್ಯಾಮೃತ ತೃಪ್ತಿ ಹೊಮ್ಮಿಬರುತ್ತವೆ. ಮಾಹೇ ಶ್ವರನದು ದಿವ್ಯವಾಣಿ; ಕಾವ್ಯವಾಣಿ. ಸತ್ಯದರ್ಶನಕಾಂಕ್ಷಿಯ ಅಭೀಪ್ಸೆಯನ್ನು ಅಳವಡಿಸುತ್ತದೆ—ಆ ಮಾಹೇಶ್ವರನ ಮಂಗಳವಾಣಿ. ಮಂತ್ರಗಳಲ್ಲಿ ಮಾತುಗಳಲ್ಲಿ ಅಚ್ಚಳಿಯದ ಆಧ್ಯಾತ್ಮ ಕಾವ್ಯಕಲೆಯನ್ನು ರಸಾನುಭೂತಿಯನ್ನು ತತ್ತ್ವಸತ್ವವನ್ನು ತುಂಬಬಲ್ಲ ಸರ್ವಸಮರ್ಥ ಮಾಹೇಶ್ವರ; ದಿವ್ಯದಾರ್ಶನಿಕ ಮಾಹೇಶ್ವರ.

# ಭಕ್ತ-ಮಾಹೇಶ ಮೀಮಾಂಸೆ

ತ್ವಂ ಪದ ಶೋಧಕ ಭಕ್ತ. ತತ್‌ಪದ ಸಾಧಕಮಾಹೇಶ್ವರ. ಆಚಾರ ಕರ್ತೃ ಭಕ್ತ. ವಿಚಾರ ಜ್ಞಾತೃ ಮಾಹೇಶ್ವರ. ಕ್ರಿಯಾಲೋಕ ಭಕ್ತನದು. ಜ್ಞಾನ ಲೋಕ ಮಾಹೇಶ್ವರನದು. ಭಕ್ತನಿಗೆ ಕರ್ಮೇಂದ್ರಿಯಗಳು ಸಾಧನ ಮತ್ತು ಕರಣ. ಮಾಹೇಶ್ವರನಿಗೆ ಜ್ಞಾನೇಂದ್ರಿಯಗಳು ಸಾಧನ ಮತ್ತು ಕರಣ. ಸಹಜ ದಾನಿ ಭಕ್ತ; ಸಹಜವೀರ ಮಾಹೇಶ್ವರ. ಭಕ್ತನ ಅಂತಃಕರಣಚಿತ್ತ; ಮಾಹೇಶ್ವರನ ಅಂತಃಕರಣ ಬುದ್ಧಿ, ಭಕ್ತ ಶ್ರಧ್ಧಾವಂತ; ಮಾಹೇಶ್ವರ ನಿಷ್ಠಾವಂತ. ಭಕ್ತ ಶ್ರೀಮಂತ; ಮಾಹೇಶ್ವರ ಧೀಮಂತ. ಚಿತ್ತಸ್ಥೈರ್ಯದಿಂದ ಭಕ್ತನಾಗಿ ದುಷ್ಕ್ರಿಯೆಗಳನ್ನು ದೂರೀಕರಿಸಿರುತ್ತಾನೆ; ಬುದ್ಧಿಯ ಶುದ್ಧಿವೃದ್ಧಿಗಳಿಂದ ಅವನೇ ಮಾಹೇಶ್ವರನಾಗಿ ಅಜ್ಞಾನ ಅಸ್ಮಿತಾದಿಗಳನ್ನು ಅಲ್ಲಗಳೆದಿರುತ್ತಾನೆ. ಜನನ ಸೂತಕವಿಲ್ಲದಾತ ಭಕ್ತ; ಮರಣ ಭಯ ರಹಿತ ಮಾಹೇಶ್ವರ.

'ಅಸತೋ ಮಾ ಸದ್ಗಮಯ' ಇದು ಭಕ್ತನ ಉಸಿರು. 'ತಮಸೋ ಮಾ ಜ್ಯೋತಿರ್ಗಮಯ' ಇದು ಮಾಹೇಶ್ವರನ ಉಸಿರು. ಭಕ್ತನಿಗೆ ತ್ವಂ ಪದವೇ ಲಕ್ಷ್ಯ. ಮಾಹೇಶ್ವರನಿಗೆ ತತ್ಪದವೇ ಲಕ್ಷ್ಯ. ಭಕ್ತ ಅಂಗ; ಮಾಹೇಶ್ವರ ಲಿಂಗ. ಭಕ್ತ ತ್ಯಾಗಾಂಗದ ಹೊರಮೈ. ಮಾಹೇಶ್ವರ ತ್ಯಾಗಾಂಗದ ಒಳಮೈ. ಭಕ್ತ ಎಡಗೈ; ಮಾಹೇಶ್ವರ ಬಲಗೈ. ಭಕ್ತ ಎಡಗಣ್ಣು; ಮಾಹೇಶ್ವರ ಬಲಗಣ್ಣು. ಭಕ್ತತ್ವವೆಂಬ ಪತ್ರದಮೇಲೆ ಮಾಹೇಶ್ವರತ್ವದ ಪುಷ್ಪ ಅರಳುತ್ತದೆ.

ಪಿಂಡಾಂಡದಲ್ಲಿ ಬ್ರಹ್ಮಾಂಡದಲ್ಲಿ ಸತ್ತತ್ವವನ್ನು ತುಂಬುವವನು ಭಕ್ತ. ಇವೆರಡರಲ್ಲಿ ಚಿತ್ತತ್ವವನ್ನು ತುಂಬುವವನು ಮಾಹೇಶ್ವರನು. ವಿಶ್ವಪಿತನೂ ವಿಶ್ವಾತೀತನೂ ಆದ ಮಹೇಶ್ವರನ ಮಹಾ ಜ್ಯೋತಿಸ್ವರೂಪವನ್ನು ಆರಾಧಿಸುವಾತನೇ ಮಾಹೇಶ್ವರನು. ಪ್ರತಿವಸ್ತುವಿನಲ್ಲಿ ಪ್ರತಿ ಜೀವಿಯಲ್ಲಿ ಗೂಢವಾಗಿರುವ ಜೀವನ ಬೀಜವಾಗಿರುವ ಚಿಜ್ಜ್ಯೋತಿಯನ್ನು ಅರಿದು ಹೊರಹೊಮ್ಮಿಸುವ ಮಣಿಹದಲ್ಲಿರುವವನು ಮಾಹೇಶ್ವರನು. ಆ ಪರಮ ಚಿತ್ಪ್ರಕಾಶ ಚರಾಚರ ಜಗತ್ತಿನಲ್ಲಿ ಹಲವು ಬಗೆಯಲ್ಲಿ ಬೆಳಗುತ್ತಿದೆ. ಅದಿಲ್ಲದ ವಸ್ತುವಿಲ್ಲ. ಅದು ಸೃಷ್ಟಿಯ ಅಣು

ಅಣುವಿನಲ್ಲಿಯೂ ಉಂಟು. ಅದನ್ನು ಆ ಮಟ್ಟದಲ್ಲಿ ಅಭಿವ್ಯಕ್ತಗೊಳಿಸಿ ತೋರುವುದೆ ಮಾಹೇಶ್ವರನ ಸತ್ಯಸಾಧನ. ಅಭಿವ್ಯಕ್ತವಾಗಿಸಿ ತಮಸ್ಸಿನಿಂದೀಚೆಗೆ ಬಂದು ನಿಲ್ಲುವುದೇ ಮಾಹೇಶ್ವರತ್ವದ ಸಿದ್ಧಿ. ಆಗ ವಿಶ್ವಾನುಗ್ರಹಶಕ್ತಿ ಸ್ಫುಟವಾಗುತ್ತದೆ. ಶಾಶ್ವತಗೊಳ್ಳುತ್ತದೆ. ಸ್ವಯಂಜ್ಯೋತಿ ಸರ್ವಾಂಗ ಸಂಪೂರ್ಣವಾಗಿ ಪ್ರಕಾಶಗೊಂಡು ವಿಕಾಸಗೊಂಡು ಶೋಭಿಸುತ್ತದೆ, ಕಣ್ಣುಗಳಿಗೆ ಮೀರಿದ ಕಾಂತಿಯದು, ಅತಿಮಾನಸ ಲೋಕದ ಬೆಳಕದು. ಸರ್ವಸಮರ್ಥ ಚಿಜ್ಜ್ಯೋತಿಯದು. ಆ ಹೆಬ್ಬೆಳಗಿನಲ್ಲಿ ಮಾಹೇಶ್ವರನು ಇಡುವ ಹೆಜ್ಜೆಗಳು, ಆಡುವ ವಾಕ್ಕುಗಳು ಸತ್ಯವಾದವು, ಶಿವವಾದವು; ಸರ್ವಾದರ್ಶವಾದವು.

"ಅನಾದಿ ಮಹೇಶ್ವರನ ಪೂಜೆಗೆ ಅಧಿಕಾರಿಯಾಗಿ ಶಿವಧ್ಯಾನ, ಶಿವಪ್ರಸಂಗ, ಶಿವಕಥಾಲಾಪ, ಶಿವಶಾಸ್ತ್ರ, ಶಿವಾಗಮ ಶಿವಗಣಸ್ಮರಣೆಯಿಂದ ಪ್ರಳಾಪಿಸುವಂಥ ಸರ್ವಜೀವರಿಗೆ ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ, ಸಮಾಧಿಯೆಂಬ ಅಷ್ಟಾಂಗಯೋಗ ತೋರುವಂಥ ಯೋಗಾಭ್ಯಾಸ ಕೃತ್ಯಕ್ಕೆ ಕರ್ತನೆಂಬುದೀಗ ಮಾಹೇಶ್ವರನೆಂಬ ಶಬ್ದಕ್ಕರ್ಥ."

"ವೀರ ಮಾಹೇಶ್ವರ ಗಣಂಗಳ ಮನೆಯ ಭೃತ್ಯರಾಗಿ ಅವರಾನಂದಕೃತ್ಯಗಳಿಗೆ ಲಕ್ಷ್ಮಿಯೆಂಬ ಶಕ್ತಿಯೊಡಗೂಡಿ ಆ ಸೇವೆಗೆ ಅಧಿಕಾರಿಗಳಾಗಿರ್ಪರೆಂಬುದೀಗ ವಿಷ್ಣುವೆಂಬಧಿದೇವತೆಯೆಂಬ ಶಬ್ದಕ್ಕರ್ಥ."

ಪೃಥ್ವಿ ಸಂಬಂಧ ೨೫ ತತ್ತ್ವಗಳಿಂದ ಪರ್ವತದಷ್ಟು ದುಃಖ, ಅಣುಮಾತ್ರ ಸುಖವುಳ್ಳುದೇ ಸ್ಥೂಲತನು. ಇದನ್ನು ಭಕ್ತನು ತನ್ನ ಕ್ರಿಯಾಚಾರಗಳಿಂದ ಲಿಂಗಕಾಯವನ್ನಾಗಿಸಿರುತ್ತಾನೆ. ಇನ್ನು ಅಪ್ಪುಸಂಬಂಧವಾದ ಇಪ್ಪತ್ತು ತತ್ತ್ವಗಳಿಂದ ನೂರುಪಾಲು ದುಃಖ, ಎಂಬತ್ತು ಪಾಲು ಸುಖಂಗಳಿಂದಕೂಡಿದುದೇ ಸೂಕ್ಷ್ಮತನು. ಇದನ್ನು ಮಾಹೇಶ್ವರನು ತನ್ನ ದೃಕ್ಕ್ರಿಯಾಚಾರಗಳಿಂದ ಪರಿಶುದ್ಧವನ್ನಾಗಿಸುತ್ತಾನೆ. ಸೂಕ್ಷ್ಮತನುವಿನಲ್ಲಿ ಅಂತರಾತ್ಮನಿರುವನು. ದಿಕ್ಕುದಿಕ್ಕುಗಳಲ್ಲಿರುವ ಮಹಾಭೋಗಗಳನ್ನು ಕಂಡರೂ ಕೈ ಮುಟ್ಟಿ ಭೋಗಿಸದೆ ಮನದಲ್ಲಿ ಸಂತೋಷಗೊಳ್ಳುವ ಸೋಹಂಸ್ವರೂಪನೇ ಅಂತರಾತ್ಮನು. ಇವನೇ ಮಾಹೇಶ್ವರನಾಗುವನು. ಈ ಮಾಹೇಶ್ವರನು ಸೃಷ್ಟಿಯ ಸಕಲಾತ್ಮರ ಪುಣ್ಯ-ಪಾಪಗಳನ್ನು ಆಚಾರ-ಅನಾಚಾರಗಳನ್ನು ವಿಚಾರಿಸಿ ಪಾಪಾನಾಚಾರಗಳನ್ನು ಬಿಡಿಸಿ ಪುಣ್ಯಾಚಾರಗಳನ್ನು ಹಿಡಿಸಿ ಪರೋಪಕಾರಿಯಾಗಿರುವನು.

ಮಾಹೇಶ್ವರನದು ತ್ಯಾಗಾಂಗದ ಒಡೆತನ. ಇವನಿಂದ ಈ ಒಡೆತನ ಪೂರ್ಣಗೊಳ್ಳುತ್ತದೆ. ಮಲ–ಮಾಯಾ-ಕರ್ಮಗಳ ದಬ್ಬಾಳಿಕೆಯನ್ನು ಮಾಹೇಶ್ವರನು ಪೂರ್ಣವಾಗಿ ದೂಡಿ ದೂರೀಕರಿಸಿ ಸರ್ವಾವಸ್ಥೆಗಳಲ್ಲಿ ಸರ್ವಸ್ವತಂತ್ರನಾಗುತ್ತಾನೆ. ಅಂಗ ಮನಪ್ರಾಣಗಳಲ್ಲಿ ನಿರ್ಭಯನಾಗುತ್ತಾನೆ; ನಿಷ್ಕಂಟಕನಾಗುತ್ತಾನೆ. ಆಧಾರ ಸ್ವಾಧಿಷ್ಠಾನ ಚಕ್ರಗಳನ್ನು ಸ್ವಾಧೀನಗೊಳಿಸಿಕೊಂಡು ಶುದ್ಧವಿಸಿ ಸುಪ್ತಚೈತನ್ಯಕ್ಕೆ ಸ್ಫೂರ್ತಿಯನ್ನೊದಗಿಸುತ್ತಾನೆ. ಪ್ರವೃತ್ತಿಮಾರ್ಗವನ್ನು ಪರಿಹರಿಸಿ ನಿವೃತ್ತಿಯಲ್ಲಿ ಪುರೋಗಾಮಿಯಾಗುತ್ತಾನೆ. ಪಾರ್ಥಿವ ಮತ್ತು ಅಪ್ ಸಂಬಂಧಿ ವಾಸನೆಗಳನ್ನು ಅಣಗಿಸಿರುತ್ತಾನೆ. ಸ್ವಾಧಿಷ್ಠಾನ ಚಕ್ರಾಧಿಪತ್ಯನನ್ನು ಸಂಪೂರ್ಣವಾಗಿ ಸಂಗಳಿಸಿಕೊಂಡಿರುತ್ತಾನೆ. ಪೀತ ಶ್ವೇತವರ್ಣಗಳನ್ನು ಅಳವಡಿಸಿಕೊಂಡು ಚೆಟ್ಟಿದಾವರೆಯಂತೆ ದುಂಡುಮಲ್ಲಿಗೆಯಂತೆ ಶೋಭಿಸುತ್ತಾನೆ; ವಿಕಸಿಸುತ್ತಾನೆ. ಹೊಂಪೇರಿ ಕೆಂಪೇರಿ ಸರ್ವಗ್ರಾಹ್ಯನೆನಿಸುತ್ತಾನೆ. ಭಕ್ತನಾಗಿ ಕರ್ಮೇಂದ್ರಿಯ ಮತ್ತು ಚಿತ್ತ ಸಂಯಮ ಶುದ್ಧಿ ವಿಕಾಸಗಳನ್ನು ಸಿದ್ಧಿಸಿಕೊಂಡರೆ. ಮಾಹೇಶ್ವರನಾಗಿ ಜ್ಞಾನೇಂದ್ರಿಯ ಮತ್ತು ಬುದ್ಧಿಗಳನ್ನು ಸಂಯಮ ಶುದ್ಧಿ ವಿಕಾಸಗಳ ನಿಲುವಿಗೇರಿಸುತ್ತಾನೆ. ಚಿಜ್ಜಲಾಂಗನಾಗಿರುತ್ತಾನೆ. ಮಾಹೇಶ್ವರನ ಜಲಾಂಗವೇ ಜಲಧಿ. ನಿಷ್ಠೆಯೇ ಶುಕ್ತಿ. ಗುರುಲಿಂಗಕಾರುಣ್ಯವೇ ಸ್ವಾತಿಜಲ. ಸದ್ಬುದ್ಧಿಯೇ ಉಂಟಾಗುವ ಮುತ್ತು. ಚಿದ್ಭಸ್ಮಾಂಗನಾಗಿ ಚೆಲುವನಾಗುತ್ತಾನೆ.

ಷಡೂರ್ಮಿ, ಷಡ್ವರ್ಗ, ಷಡ್ಭಾವವಿಕಾರಗಳನ್ನು ತನ್ನ ಜ್ಞಾನಾಚಾರದಿಂದ ದೂರೀಕರಿಸಿ, ಗುರುಕೃಪೆಯನ್ನು ಪಡೆದು ಸಮಸ್ತಮತಗಳಲ್ಲಿನ ಯೋಗ್ಯಾಯೋಗ್ಯವ ತಿಳಿದು ಅಯೋಗ್ಯವ ತೊಳೆದು ಸಮಸ್ತರನ್ನು ಉದ್ಧರಿಸಿ ಕ್ರಿಯಾಚಾರ.ಜ್ಞಾನಾಚಾರಗಳೇ ಪ್ರಾಣವಾಗಿರುವವನು ಮಾಹೇಶ್ವರನು. ಸಂವಿತ್‌ಶಕ್ತಿಸಂಪನ್ನನು. ಉದಯವಾದ ಪ್ರಾಕೃತಿಕಭಾವವನ್ನು ಅಸ್ತಂಗತಗೊಳಿಸುವ ಪಡುವಣ ದಿಗೀಶನು ಮಾಹೇಶನು, ಅಧಃಸೃಷ್ಟಿ ಅಧೋದೃಷ್ಟಿಗಳನ್ನು ಅಸ್ತಮಾನವಾಗಿಸುವನು ಮಾಹೇಶನು. ಯಜುರ್ವೇದಕೋವಿದನು. ವಾಮದೇವ ಮುಖಾನ್ವಿತನು. ವೀಣಾನಾದಮೋದನು. ಮಂತ್ರದ್ರಷ್ಟಾರನು. ಸುರಸಪ್ರಸಾದಿಯು. ಚಿದಪ್ಪುವಿನಲ್ಲಿ ಸುಬುದ್ಧಿರತ್ನವನ್ನು ಪಡೆದವನು. ಪ್ರತಿಷ್ಠಾಕಲೆಯಿಂದ ಪ್ರಭಾವಾನ್ವಿತನು. ಕರ್ತೃಸಾದಾಖ್ಯದಿಂದ ಕೂಡಿದವನು. ಚಿಲ್ಲಕ್ಷಣಲಕ್ಷಿತನು. ಗೂಢಸಂಜ್ಞಾ

ಸಮನ್ವಿತನು. ಹಾಲೊಳಗೆ ತುಪ್ಪ ಅಡಗಿರುವಂತೆ ಇರುವ ಒಡಗಿನವನು. ದಂಡಾಕೃತಿಯವನು–ಅಂದರೆ ನೀಳಾದ ನಿಲುವುಳ್ಳವನು, ರಸದಾಳಿಯಂತೆ ತನಿಬಾಳುಳ್ಳವನು. ೨೫೭೨ ಲಿಂಗಮಂತ್ರಗಳನ್ನು ಒಳಗೊಂಡ 'ಮ'ಕಾರ ಮಂತ್ರಾಧಿಕಾರಿಯು. ಇಪ್ಪತ್ತುಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶಕ್ಕೆ ಮಿಗಿಲಾದ ಪ್ರಕಾಶವುಳ್ಳವನು. ಲಿಂಗಸಂಬಂಧಿ. ಲಿಂಗಾಧಿಕಾರಿ. ಲಿಂಗಸಂಸ್ಕಾರಿ.

ಮಾಹೇಶ್ವರನ ಬೋಧ ದ್ವಿವಿಧ. ಒಂದು ವರ್ಣಜನ್ಯಬೋಧ. ಇನ್ನೊಂದು ಹೃದಯಪ್ರಧಾನ ಬೋಧ. ಮಾಹೇಶ್ವರನು ಬುದ್ಧಿನಿಷ್ಠನಾಗಿರುವುದರಿಂದ ಬೋಧಜೀವಿ. ಅನ್ಯಬೋಧದಂತೆ ಆತ್ಮಬೋಧನಿಷ್ಠನೂ ಆಗಿರುತ್ತಾನೆ. ಮಾಹೇಶ್ವರನು ಮೇಲ್ಮಟ್ಟಕ್ಕೆ ಹೋದಂತೆ ವರ್ಣ (ಅಕ್ಷರ) ಸಾಧನಬೋಧವನ್ನು ನಿಲ್ಲಿಸುತ್ತಾನೆ. ಅಕ್ಷರೋಚ್ಚಾರವಿಲ್ಲದೆ ಬೋಧಿಸುವ ಪ್ರಭುದ್ಧತೆಯನ್ನು ಪಡೆಯುತ್ತಾನೆ. ಆತನ ಆ ಬೌದ್ಧಿಕ ಪ್ರಭೆಯೇ ವಸ್ತುಪ್ರಕಾಶನ ಸಾಧನವಾಗಿ ಪರಿಣಮಿಸುತ್ತದೆ. ವರ್ಣ, ಶಬ್ದ, ವಾಕ್ಯಗಳ ಅವಲಂಬನ ಅದಕ್ಕಿರುವುದಿಲ್ಲ. ಅದು ಚಿನ್ಮಾತ್ರ, ಸತ್ತಾಸ್ವರೂಪವುಳ್ಳದ್ದಾಗಿರುತ್ತದೆ. ಅದು ವರ್ಣಾತೀತ ಶಬ್ದಾತೀತ. ವಸ್ತುರೂಪಕ್ಕೆ ಸನ್ನಿಹಿತವಾಗಲು ಸನ್ನಾಹಗೊಂಡಿರುತ್ತದೆ. ಸ್ವಭಾವದತ್ತ ಸಂಚರಣಶೀಲವಾಗಿರುತ್ತದೆ. ವಸ್ತುವಿನಿಂದ ವರ್ಣಗಳಲ್ಲದೆ ವರ್ಣಗಳಿಂದ ವಸ್ತುವಲ್ಲವೆಂಬುದನ್ನು ಮಾಹೇಶ್ವರನು ಮನದಟ್ಟಾಗಿಸಿಕೊಳ್ಳುತ್ತಾನೆ. ಮೌನಬೋಧದ ಮೇಲ್ಮಟ್ಟಕ್ಕೇರುತ್ತಾನೆ. ಆಕಾಶದ ನಾದಕ್ಕೆ ಹೇಗೆ ವರ್ಣಗಳ ಶಬ್ದಗಳ ಅಗತ್ಯವಿಲ್ಲವೋ ಹಾಗೆ ಚಿದಾಕಾಶಸ್ವರೂಪನಾದ ಆ ಮಹಾ ಮಾಹೇಶ್ವರನ ಬೋಧಕ್ಕೆ ವರ್ಣಶಬ್ದವಾಕ್ಯಗಳ ಅಗತ್ಯ ಉಳಿಯುವುದಿಲ್ಲ. ಈ ಆಕಾಶದ ನಾದಕ್ಕಿಂತಲೂ ಅತ್ಯಂತ ಸೂಕ್ಷ್ಮವಾದುದು ಆ ಚಿದಾಕಾಶದ ಬೋಧ. ಇದು ಜಡಾಕಾಶ. ಚೇತನಾತ್ಮಕವಾದುದು ಆ ಮಾಹೇಶನ ಚಿದಾಕಾಶ.

ಈ ಎತ್ತರದ ನಿಲುವಿಗೇರಬೇಕಾದರೆ ಮೊದಲಿನಿಂದಲು ಮಾಹೇಶ್ವರನು ವಾಣಿಯ ಶುದ್ಧತೆಯನ್ನು ಕಾಪಾಡಿಕೊಳ್ಳಬೇಕು. ಮಾತಾಡಿಯೂ ಮೌನಿಯಂತಿರಬೇಕು. ಮಾತು ಜ್ಯೋತಿರ್ಲಿಂಗವಾಗಿ ಬೆಳಗಬೇಕು. ಮಂತ್ರಮೂರ್ತಿಯಾದ ಗುರುಲಿಂಗವನ್ನು ನಾಲಗೆಯಲ್ಲಿ ನೆಲೆಗೊಳಿಸಿಕೊಂಡ ಮಾಹೇಶ್ವರನು ಮಾತನ್ನು ಜ್ಯೋತಿರ್ಲಿಂಗವಾಗಿಸಿಕೊಳ್ಳುವುದೊಂದು ಸೋಜಿಗವಲ್ಲ. ನುಡಿದೂ ನುಡಿಯದಂತಿರುವ ಈ ಮಿಗೆಬಗೆಯನ್ನು ಮೈಗೂಡಿಸಿಕೊಳ್ಳಬೇಕು ಮಾಹೇ

ಶ್ವರನು. ಮಾಹೇಶರನ ವಾಣಿ ಮಂತ್ರಪ್ರೂತವಾಗಿ ಮಹತ್ತಾಗಬೇಕು. ಆತನ ನಡೆ ಚೆನ್ನಾದಂತೆ ನುಡಿ ಚೆನ್ನಾಗಬೇಕು. ತನ್ನ ಬಣ್ಣಿಸುವದಾಗಲಿ, ಅನ್ಯರ ನಿಂದಿಸುವುದಾಗಲಿ ಆತನ ವಾಣಿಯಿಂದಾಗಬಾರದು. ಹುಸಿಯಾಡಬಾರದು. ಕಿಡಿನುಡಿಯಬಾರದು. ಬಿರುನುಡಿಯಬಾರದು. ಕುಹಕ ಕುಭಾಷೆಗಳನ್ನು ಬಿಡಬೇಕು. ಸತ್ಯವಾಣಿಯುಳ್ಳವನಾಗಬೇಕು. ಮೃದುಮಾತುಳ್ಳವನಾಗಬೇಕು. 'ನಡೆಯಲರಿಯದೆ ನುಡಿಯಲರಿಯದೆ ಲಿಂಗವ ಪೂಜಿಸಿ ಫಲವೇನು ?' ಎಂದು ಕೇಳುತ್ತಾರೆ ಬಸವಣ್ಣನವರು. ನುಡಿಯೇ ಎಲ್ಲಕ್ಕೂ ಮೂಲ. ಮೇಲಾಗಲು ನುಡಿಯೇ ಮೂಲ. ಕೀಳಾಗಲು ನುಡಿಯೇ ಮೂಲ. ವಿಶಾಲಹೃದಯದಿಂದೊಡಗೂಡಿದ ವಾಣಿಯಲ್ಲಿ ವಿಶಿಷ್ಟತೆಯಿರುತ್ತದೆ. ವಿಶುದ್ಧ ಚೈತನ್ಯವಿರುತ್ತದೆ. ಚಿತ್ಕಳೆಯು ಚಿಮ್ಮುತ್ತಿರುತ್ತದೆ.

"ಕೆರೆ ಹಳ್ಳ ಭಾವಿಗಳು ಮೈದೆಗೆದರೆ ಗುಳ್ಳೆಗೊರಚೆ ಚಿಪ್ಪುಗಳ ಕಾಣಬಹುದು. ವಾರುಧಿ ಮೈದೆಗೆದರೆ ರತ್ನಂಗಳಂ ಕಾಣಬಹುದು. ಕೂಡಲಸಂಗನ ಸರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು."

ಮಾಹೇಶ್ವರನ ಮಾತು ಇಂತಹ ಫಲದಾಯಕವಾಗಬೇಕು ; ಪರಮಪರಿಣಾಮಕಾರಕವಾಗಬೇಕು. ಜಿಹ್ವೆಯಲ್ಲಿ ಗುರುಲಿಂಗವನ್ನೊಳಪಡಿಸಿಕೊಂಡ ಮಾಹೇಶ್ವರನು ಮಾತಾಡಿದರೆ ಮಂತ್ರದಂತೆ ತೂಕವುಳ್ಳ ತತ್ತ್ವವುಳ್ಳ ಅರ್ಥರೂಪ ಲಿಂಗವು ಕಾಣುವುದು ಸಹಜ. ಆತನ ವಾಕ್‌ಶಕ್ತಿಯಾಗಿ ಆ ವಾಕ್ಕಿನ ಅರ್ಥ ಶಿವವಾಗಿ ಸಂಭವಿಸುವುದರಲ್ಲಿ ಸೋಜಿಗವಿಲ್ಲ. ವಾಗರ್ಥಗಳಂತೆ ಶಿವಶಕ್ತಿಯರಿರುವರಂತಲ್ಲ; ವಾಗರ್ಥಗಳಾಗಿಯೇ ಇರುವರು ಮಾಹೇಷ್ವರನ ಮಹಾವಾಣಿಯಲ್ಲಿ ! ವಾಕ್ ಸದ್ರೂಪವಾಗಿ ಅರ್ಥ ಚಿದ್ರೂಪವಾಗಿ ಹೊರಹೊಮ್ಮಿದಾಗ ಶಕ್ತಿ ಶಿವಸ್ವರೂಪವಾಗಿ ಸಂಪ್ರಾಪ್ತವಾಗುತ್ತದೆ. ಭೌತಿಕ ಜಡತೆಯನ್ನು ಐಂದ್ರಿಕಭಾವವನ್ನು ಕಳೆದುಕೊಳ್ಳುತ್ತದೆ. ಅಂತಹ ಮಾತಿನಲ್ಲಿ ಶಿವಸೌಂದರ್ಯ ಶಿವ ಪ್ರಕಾಶ, ಶಿವಭಾವಗಳು ತುಂಬಿ ಸಹೃದಯರ ಹೃದಯಗಳನ್ನು ಸೂರೆಗೊಳ್ಳುವ ಅಸಾಧಾರಣ ಶಕ್ತಿಯುಳ್ಳವಾಗುತ್ತವೆ. ಇದೇ ಅರ್ಥ ಧ್ವನಿಯಲ್ಲಿ ಬಸವಣ್ಣನವರು ಹೀಗೆ ಹೇಳಿದ್ದಾರೆ. "ನುಡಿದರೆ ಮುತ್ತಿನಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು......." ಈ ವಚನ ಭಾವ ಪರಂಪರೆಗಳ,

ಗಮನರ್ಹವಾಗಿವೆ. "......ಅಸೆ ಆಮಿಷ ತಾಮಸ ಹುಸಿ ವಿಷಯ ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯೆ—ಇವನೆನ್ನ ನಾಲಗೆಯ ಮೇಲಿಂದತ್ತ ಕಳೆಯಯ್ಯ! ಎನ್ನ ಅವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗ ತಂದೆ, ಸುಳಿವೆಗೆದು ಬೆಳೆವೆನು......" ಈ ಬೇಡಿಕೆಯ ಮಾತುಗಳು ಮಾಹೇಶ್ವರನಿಗಾಗಿ ಮೀಸಲಾದವು. ಮಾಹೇಶ್ವರತ್ವಕ್ಕೆ ಮೆರಗನ್ನು ತರತಕ್ಕವು. ಮಾಹೇಶ್ವರನ ಜಿಹ್ವಾಂಗವನ್ನು ಜ್ವಲಂತಗೊಳಿಸತಕ್ಕವು. ಕಾರಣ ಮಾಹೇಶ್ವರನು ಮೂನ್ನೂರರವತ್ತು ದಿನಗಳಲ್ಲಿಯೂ ಮಹೇಶ್ವರನನಾಮಾಮೃತವನ್ನು ತನ್ನ ಜಿಹ್ವೆಯಲ್ಲಿರಿಸಿಕೊಂಡಿರಬೇಕು.

ಚಿತ್ತಧರ್ಮಗಳನ್ನು ಮುಖವು ಹೊರ ಹೊಮ್ಮಿಸುತ್ತದೆ. ಆದರೆ ಬೌದ್ಧಿಕ ಧರ್ಮಗಳನ್ನು ಹೊರಹೊಮ್ಮಿಸಲು ವಾಕ್ ಬೇಕಾಗುತ್ತದೆ. ಮೋಹ ಚಿತ್ತಧರ್ಮವಾದರೆ ಜ್ಞಾನ ಬುದ್ಧಿ ಧರ್ಮವಾಗಿದೆ. ಮೋಹಮತ್ಸರಾದಿಗಳನ್ನು ಮುಖಲಕ್ಷಣಗಳಿಂದ ತೋರಬಹುದು. ಜ್ಞಾನವನ್ನು ವಾಣಿಯಿಂದಲ್ಲದೆ ತೋರಲಾಗುವುದಿಲ್ಲ. ಬಾಲ್ಯ ಕಳೆದು ಯೌವನವು ಕಾಯದಲ್ಲಿ ಕಾಲಿಟ್ಟಾಗ ಮುಖಚರ್ಯೆಯು ಬದಲಾಗುತ್ತವೆ. ಮನೋಧರ್ಮಗಳನ್ನು ಮುಖವು ಎತ್ತಿ ಹಿಡಿಯುತ್ತದೆ. ಮುಖಭಾವವು ಪ್ರೇಮ ಕಾಮಗಳನ್ನು ಪ್ರಕಟಿಸುತ್ತದೆ. ಇದರಂತೆ ಬುದ್ಧಿ ಕೌಶಲ್ಯವನ್ನು ಪ್ರಕಟಿಸದು. ಇದಕ್ಕೆ ವಾಣಿಯೇ ಬೇಕು.

ನುಡಿ ನಡೆಗಳ ಕರ್ತೃ ಅಂಗನು. ಇವುಗಳಿಂದೊದಗುವ ನೋವು—ನಲಿವುಗಳ ಭೋಕ್ತೃ ಅಂಗನು. ಇದನರಿದು ಅಂಗನು ನುಡಿ—ನಡೆಗಳಲ್ಲಿ ತುಂಬಾ ಎಚ್ಚತ್ತಿರಬೇಕು. ನಲಿವನ್ನು ಹುಟ್ಟಿಸುವ ನುಡಿ—ನಡೆಗಳಿಂದ ಕೂಡಿರಬೇಕು. ನುಡಿಯೊಂದೇ ವ್ಯಕ್ತಿ ವೈಶಿಷ್ಟ್ಯದ ಮಾನದಂಡವಲ್ಲ ; ಅಂತೆಯೇ ನಡೆಯೊಂದೇ ಆಗದು. ನುಡಿ-ನಡೆಗಳೆರಡೂ ಮಾನವ ಜೀವನಕ್ಕೆ ಬೇಕು. ಮಾಹೇಶ್ವರ ಜೀವನಕ್ಕೆ ಮತ್ತೂ ಅಗತ್ಯ.

"ಸೌಖ್ಯಾರ್ಥಿನಾನಾಮಿಹ ಜೀವನಲೋಕೇ ಚತ್ವಾರಿ ನಿತ್ಯಂ ಹೃದಯೇ ವಸಂತಿ ।
ದಾನಪ್ರಸಂಗೇಽ ಮಧುರಾ ಚ ವಾಣೀ ದೇವಾರ್ಚನಂ ಸದ್ಗುರು ಸೇವನಂ ಚ ॥"

ನುಡಿ—ನಡೆಗಳು ಅಗತ್ಯ. ಆದರೆ ಇವು ತನಗಾಗಲಿ ಇತರರಿಗಾಗಲಿ ಬಾಧಕವಾಗಿರಬಾರದು. ತನಗೂ ಜನತೆಗೂ ಉಪಕಾರಕವಾಗಿರಬೇಕು. ಜಗತ್ತನ್ನು

ಆಳುವದಾಗಲಿ, ಜಗತ್ತನ್ನು ಹಿಂಡುವದಾಗಲಿ, ಮಾಹೇಶ್ವರನ ಜೀವನವಲ್ಲ. ಲೋಕ ಸೇವೆ ಲೋಕೋಪಕಾರಗಳೇ ಮಾಹೇಶ್ವರನ ಮಣಿಹ. ಇದಕ್ಕೆ ತಕ್ಕಂತೆ ತನ್ನ ನುಡಿ–ನಡೆಗಳನ್ನು ಹದವಾಗಿಸುವನು, ಹರವಾಗಿಸುವನು. ಸಮ್ಯಜ್ಞಾನಿಯಾಗಿ ಸತ್ಕ್ರಿಯಾಶಾಲಿಯಾಗಿ ಬಾಳುವನು. ಮುಖ್ಯವಾಗಿ ಬುದ್ಧಿಜೀವಿಯಾದ ಮಾಹೇಶ್ವರನು "ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾ ತಥ್ಯತೋ ಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ !" ಎಂಬೀ ಈಶಾವಾಸ್ಯೋಪನಿಷದುಕ್ತಿಯಂತೆ ಬಾಳಿ ಬೆಳಗುವನು. ಅಂದರೆ ಸರ್ವದರ್ಶಿಯಾಗಿ ಸರ್ವಜ್ಞನಾಗಿ ಸರ್ವವ್ಯಾಪಕನಾಗಿ ಸ್ವಯಂಭುವಾಗಿ ಮುಂದೆ ಶಾಶ್ವತವಾಗಿ ಆಚರಿಸುವ ಕರ್ತವ್ಯಗಳನ್ನು ವಿಚಾರಪೂರ್ಣವಾಗಿ ನಿಯಮಿಸುವನಾಗಿ ಬಾಳುವನು. ತ್ಯಾಗಾಂಗದ ರಹಸ್ಯವನ್ನು ಕಂಡು ಕರ್ತವ್ಯವನ್ನು ಉಂಡು ಕವಿಯಾಗುವನು. ತ್ಯಾಗಾಂಗದಲ್ಲಿ ಸತ್ಯ ಸೌಂದರ್ಯವನ್ನು ಶೈವೀ ಮಾಧುರ್ಯವನ್ನು ಕಂಡುಂಡು ಮನೀಷಿಯೆನಿಸುವನು. ವಿಶ್ವವಿಶಾಲವಾದ ವಿಚಾರಾನುಭವಗಳನ್ನು ತಳೆದು ಬೆಳೆದು ಬಾಳಿ ಬೆಳಗಿ 'ಪರಿಭೂಃ' ಎಂದೆನಿಸುವನು. ಸ್ವಾನುಭವದ ನೆಲೆಯನ್ನು ಸ್ವಯಂ ಗುರುಲಿಂಗದಲ್ಲಿ ಕಂಡು ಸ್ವಯಂಭುವೆನಿಸುವನು. ತನ್ನ ಗುರುಲಿಂಗದಲ್ಲಿಯೇ ಆಚಾರ–ವಿಚಾರಾತ್ಮನಾಗಿ ಸಂಜಾತನಾಗುವುದರಿಂದ ಸ್ವಯಂಭು ತಾನಾಗುವನು. ಅನ್ಯ ಅನೇಕ ಅನುಭವಗಳಿಗಿಂತ ಆತ್ಮಾನುಭವವೇ ಅನನ್ಯವಾದುದು ಅಚ್ಚಳಿಯದಾನಂದದಾಯಕವಾದುದೆಂದು ಅರಿದು ಅದನ್ನು ಆಚರಣೆಗೆ ತಂದಂದೇ ಮಾಹೇಶ್ವರನು ತಪ್ಪು ನಡೆ–ನುಡಿಗಳು ತಪ್ಪಿಹೋಗಿ ಸಾಕ್ಷಾತ್ ಸ್ವಯಂಬುವೆನಿಸುವನು. ಅವನೇ ಭಾವೀ ಜಗತ್ತಿಗೆ ಶಾಶ್ವತವಾದ ಆಚಾರ–ವಿಚಾರಗಳನ್ನು (ನಡೆ–ನುಡಿಗಳನ್ನು) ಅನುಗ್ರಹಿಸಬಲ್ಲನು; ಅನುಗ್ರಹಿಸುವವನೇ ಅನುಗಾಲ ಮಹಾ ಮಾಹೇಶ್ವರನೆನಿಸುವನು.

ಮಾಹೇಶ್ವರನು ಮತಿಮಾಂದ್ಯವನ್ನು ತ್ಯಜಿಸಿ, ಧೀತೃಷ್ಣೆಯನ್ನು ತೀರಿಸಿ ಚಿಜ್ಜ್ಯೋತಿಯ ಹೆಬ್ಬೆಳಕಿನಲ್ಲಿ ಭಾವಪೂರ್ಣಗೀತೆಗಳನ್ನು ಹಾಡಿ ಮಹಾಕವೀಶ್ವರನಾಗುವನು. ಮಾನವ ಜೀವನಕ್ಕೆ ಬೇಕಾಗುವ, ಮುನ್ನಡೆಯಲು ಸಹಾಯಕವಾಗುವ ಅಸಾಧಾರಣ ಅಭಿಪ್ರಾಯಗಳನ್ನು ಅನುಭವಗಳನ್ನು ತನ್ನ ಆ ಭಾವಗೀತಗಳಲ್ಲಿ ಅಭಿವ್ಯಕ್ತಗೊಳಿಸುವನು. ಜನತೆಯ ಜಾಗತಿಕ ಜೀವನದಲ್ಲಿ ಒಂದು ಜೀವಂತ ಜ್ಯೋತಿಯನ್ನು ದರ್ಶಿಸುವನು. ಅತೀಂದ್ರಿಯ ಆನಂದವನ್ನು ಅನುಭವಿಸಹಚ್ಚುವನು. ಮಾನವನ ಈ ಪಾರ್ಥಿವ ಜೀವನಕ್ಕೆ ಪರಮಾರ್ಥಪೂರ್ಣ

ವಾದ ಸಮಗ್ರತೆಯನ್ನು ಅನುಗ್ರಹಿಸುವವನು. ಕ್ರಿಯೆ ಜ್ಞಾನಗಳ ಸಮನ್ವಯದ ಸೌಂದರ್ಯವನ್ನು ಸಾತ್ಪೃಪ್ತಿಯನ್ನು ಜನತೆಯ ಬುದ್ಧಿ ಹೃದಯಗಳಿಗೆ ತಂದು ತೋರಿ ತೋಪಿಸುವವನು. ಅದರ ವೈಶಾಲ್ಯವನ್ನೂ ಆಧಿಕ್ಯವನ್ನೂ ಗಾಂಭೀರ್ಯವನ್ನೂ ಗುರ್ತಿಸುವ ಶಕ್ತಿಯನ್ನು ದಯಪಾಲಿಸುವವನು. ಒಟ್ಟಿನಲ್ಲಿ ಮಾಹೇಶ್ವರನು ಸ್ವಯಂ ಸ್ವಾತ್ಮದ್ರಷ್ಟನಾಗಿ ಸರ್ವರ ಮರವೆಯ ತೆರೆಯನ್ನು ತೆರೆದು 'ಸತ್ಯಂ ಶಿವಂ ಸುಂದರಂ' ಸ್ವರೂಪ ದರ್ಶನವನ್ನು ಮಾಡಿಸುವ ಮಣಿಹದಲ್ಲಿ ನಿತ್ಯ ನಿರತನಾಗಿರುವನು. 'ಈಶಾವಾಸ್ಯಮಿದಂ ಸರ್ವಂ'—ಎಂಬಂತೆ ತ್ಯಾಗಾಂಗವೆಲ್ಲ ಮಹೇಶ್ವರನಿಂದ ತುಂಬಿಕೊಂಡಿರುತ್ತದೆ. ಈ ಪಾರ್ಥಿವಾಂಗದಲ್ಲಿ ಈ ಸಲಿಲಾಂಗದಲ್ಲಿ ಪೂರ್ಣ ಪ್ರಭಾವವನ್ನು ಬೀರಿ ಶರೀರ ಭಾವವನ್ನು ಕಳೆದು ಶಾಶ್ವತಭಾವವನ್ನು ತುಂಬುತ್ತಾನೆ; ಶುದ್ಧಾಂಗವನ್ನಾಗಿಸುತ್ತಾನೆ. ತ್ಯಾಗ ರಹಸ್ಯವನ್ನು ಸ್ವಾರಸ್ಯವಾಗಿ ರೂಪಿಸುತ್ತಾನೆ. ಈ ತ್ಯಾಗವೇ ಮುಂದೆ ಹೇಗೆ ಶಾಶ್ವತಯೋಗವಾಗಬಲ್ಲುದೆಂಬುದನ್ನು ಬೆಡಗು ಬಿನ್ನಾಣದಲ್ಲಿ ತಿಳಿಸುತ್ತಾನೆ.

ಮಾಹೇಶ್ವರನೊಬ್ಬ ಮಹಾವಿಜ್ಞಾನಿ. ಈತನು ಈ ಪಿಂಡಾಂಡ ಪರಿಶೋಧಕನು. ಪ್ರಕೃತಿಯಲ್ಲಿ ಅಡಗಿರುವ ಪರಮಾರ್ಥವನ್ನು ಪರಿಶೋಧಿಸುವ ಪರಮಜ್ಞಾನಿ. ಪ್ರಕೃತಿ ವಿಕೃತಿಗೀಡಾಗದಂತೆ ಸಂಯಮಿಸುವ ಸಮರ್ಥ ಸುಯ್ದಾನಿ. ಹೇಯವೆಂದು ಹೇಳುವುದನ್ನು ಉಪಾದೇಯವನ್ನಾಗಿ ಮಾಡುವಾತನು. ಅನರ್ಹವೆಂದು ಕೈಬಿಡುವುದನ್ನು ಅರ್ಹವೆಂದೆನಿಸಿ ಕೈಹಿಡಿದೆತ್ತುವಾತನು. ಕರ್ಷಕವೆಂದು ತಿಳಿದುದನ್ನು ಆಕರ್ಷಕವಾಗಿಸುವಾತನು. ತ್ಯಾಗಾಂಗ ಪ್ರಕೃತಿಯ ಮೇಲಿನ ಇವನ ಪ್ರಭುತ್ವ ಅಗಾಧವಾದುದು. ಅನರ್ಥವನ್ನು ಸಾರ್ಥಕಗೊಳಿಸಬಲ್ಲ ಪಿಂಡಜ್ಞಾನಿ. ಮುಂದಿನ ಭೋಗಯೋಗಗಳಿಗೆ ಇದನ್ನು ಅಣಿಗೊಳಿಸುವ ಅಣಿಯರದ ವಿಜ್ಞಾನಿ. ಪ್ರಗತಿಗೆ—ಪೂರ್ಣತೆಯ ಸಿದ್ಧತೆಗೆ ತಕ್ಕುದನ್ನಾಗಿಸುವ ಸೂಕ್ತ ಸುಜ್ಞಾನಿ. ತ್ಯಾಗಾಂಗದ ತಾತ್ವಿಕತೆಯನ್ನು ತಿಳಿಸುವ ತತ್ತ್ವಜ್ಞಾನಿ. ಕಾಯಯೋಗದ ಅವಶ್ಯಕತೆ ಮತ್ತು ವಾಸ್ತವಿಕತೆಗಳನ್ನು ಬಿಚ್ಚಿ ತೋರುವ ವಿಶಿಷ್ಟವಿಜ್ಞಾನಿ. ಪರಮೇಶ್ವರನ ಪ್ರಮೆಗೆ ಪ್ರಕೃತಿಯೇ ಮೂಲವೆಂಬುದನ್ನು ಮನದಟ್ಟಾಗಿಸಬಲ್ಲ ಚತುರ ಮಾಹೇಶ್ವರ. ವೀರಶೈವ ತ್ಯಾಗಾಂಗದ ಸಂಸ್ಕೃತಿಯನ್ನು ಪ್ರಗತಿಯನ್ನು ವೈಭವವನ್ನು ಬೀರಬಲ್ಲ ಜಾಣ ಮಾಹೇಶ್ವರ. ಮುಂದೊದಗುವ ಭೋಗವನ್ನು ಯೋಗಕ್ಕೆ ಅಣಿಯಾಗುವಂತೆ ಮಾಡುವ

ತ್ಯಾಗಾಂಗವನ್ನು ರೂಪಿಸುವ ರೀತಿ ರಹಸ್ಯಗಳನ್ನು ಕಂಡ ಕುಶಲ ಮಾಹೇಶ್ವರ. ತ್ಯಾಗಾಂಗವನ್ನು ತಾತ್ತ್ವಿಕವಾಗಿ ರೂಪಿಸಿ ತಾದಾತ್ಮ್ಯಗೊಳಿಸುವ ಸಾಮ್ರಾಜ್ಞ ಮಾಹೇಶ್ವರ. ಕ್ರಿಯಾಜ್ಞಾನ ಸಿದ್ಧಿಯಿಂದ ತಯಾರಾದ ತ್ಯಾಗಾಂಗದರ್ಪಣದಲ್ಲಿ ತೋರುವ ಭವ್ಯ ಬೆಳಗಿನ ಬಿಂಬ ಮಾಹೇಶ್ವರ. ವ್ಯಷ್ಟಿ ಪ್ರಕೃತಿಯನ್ನು ಸಮಷ್ಟಿ ಪ್ರಕೃತಿಯ ಸಂಸ್ಕೃತಿಗೆ ಸಹಾಯಕವಾಗುವಂತೆ ಮಾಡುವ ಮಹಾಕಾರಣಿಕ ಮಾಹೇಶ್ವರ. ಸ್ಥೂಲಾಂಗದ ಎಲ್ಲ ಸ್ವಾಭಾವಿಕ ಗುಣಧರ್ಮಗಳನ್ನು ಮೈಗೂಡಿಸಿಕೊಂಡ ಮಹಾಮಹಿಮ ಮಾಹೇಶ್ವರ. ಸರ್ವಸದ್ಗುಣ ಶ್ರೀಮಂತ. ಶಿವಾತ್ಮವಿದ್ಯಾಧೀಮಂತ. ಶಾರೀರಕ ಬೌದ್ಧಿಕ ಶಿಕ್ಷಣ ಪ್ರವೀಣ. ಹತ್ತಿಂದ್ರಿಯ—ಚಿತ್ತ—ಬುದ್ಧಿ ಇವುಗಳ ಮೇಲೆ ಇವನಿಗೆ ಅಖಂಡ ಅಧಿಕಾರ. ಈತನ ಕಣ್ಣಲ್ಲಿ ವಿಶ್ವರೂಪವೆಲ್ಲ ಶಿವರೂಪ. ಈತನ ಕಿವಿಯಲ್ಲಿ ವಿಶ್ವಶಬ್ದವೆಲ್ಲ ವಿಶುದ್ಧಮಂತ್ರ. ಈತನ ವಾಣಿ ಶಿವವಾಣಿ. ಭಕ್ತ ಸಹಜದಾನಿ; ಮಾಹೇಶ್ವರ ಸಹಜ ಜ್ಞಾನಿ.

# ಸ್ಥಿರಪ್ರಜ್ಞ ಮಾಹೇಶ್ವರ

ಬುದ್ಧಿ ಜೀವಿ ಮಾಹೇಶ್ವರ. ಪ್ರಜ್ಞಾ ಪ್ರಧಾನನಾದ ಮಾಹೇಶ್ವರ ಬುದ್ಧಿ ಸಂಸ್ಕಾರವುಳ್ಳವನಾಗಿರುತ್ತಾನೆ. ಬುದ್ಧಿ ಪ್ರಭಾವದಿಂದ ಪ್ರಕಾಶಿಸುತ್ತಾನೆ. ಋಜು ಬುದ್ಧಿ, ನಿಜಬುದ್ಧಿಯುಳ್ಳವನು. ಉದಾರ ಮತ್ತು ಮಧುರ ಬುದ್ಧಿಯುಳ್ಳವನು. ಶಾಂತ ಮಹಂತ ಬುದ್ಧಿಯುಳ್ಳವನು. ಆತನ ಬುದ್ಧಿ ಚಂದ್ರನು ಷೋಡಶ ವಿದ್ಯಾಕಲೆಗಳಿಂದ ಕಳೆಯೇರಿರುವನು ; ಕಂಗೊಳಿಸಿರುವನು. ತಮಸ್ಸನ್ನು ತೊಳೆಯುವನು, ರಜಸ್ಸನ್ನು ಅಣಗಿಸುವನು. ಕರುಳ ಕನ್ನೈದಿಲೆಯನ್ನು ಅರಳಿಸುವನು. ಬಾಳ ಬಗೆಗೆ ತಂಪೀಯುವನು. ಪ್ರಜ್ಞಾಪ್ರಭೆಯಲ್ಲಿ ಬಾಳಿರುಳು ಬೆಳ್ಳಂಬೆಳಗಾಗುವುದು. ಚಿತ್ತಚಕೋರ ತಣಿಯುವುದು. ಸಂತೋಷ ಶರಧಿ ಉಕ್ಕುವುದು. ಸುವಿಚಾರ ಸುಧೆ ವರ್ಷಿಸುವುದು. ಸಂವಿತ್ಸಂಪತ್ತು ಹೆಚ್ಚುವುದು. ಮಾಹೇಶ್ವರನ ಜ್ಞಾನಶಕ್ತಿಯು ಸ್ಥಿರಬುದ್ಧಿಯೆಂಬ ಚಂದ್ರತಿಲಕವನ್ನಿಟ್ಟು, ಚುಕ್ಕಿಗಳೆಂಬ ಮಲ್ಲಿಗೆಯ ಹೂವುಗಳನ್ನು ಮುಡಿದು, ನಿಷ್ಠೆಯೆಂಬ ನೀಲಾಂಬರವುಟ್ಟು ನಯನ ಮನೋಹರಳಾಗಿರುವಳು. ಅವಳ ಶಿವಪಥ ಪ್ರಯಾಣಕ್ಕೆ ಪ್ರಜ್ಞಾಪ್ರದೀಪವು ಸಹಾಯಕವಾಗಿರುತ್ತದೆ. ಪರಾಭಕ್ತಿ ತೈಲದಿಂದ ಕೂಡಿರುತ್ತದೆ.

ಮಾಹೇಶ್ವರನಿಗೆ ಅಂಗವೆಂಬುದೊಂದು ಭಾಂಡ. ಅದರಲ್ಲಿ ಹೃದಯವೆ ಹೆಪ್ಪಿಟ್ಟ ಹಾಲು. ನಿಷ್ಠೆಯೇ ಕಡೆಗೋಲು. ಗುರುಲಿಂಗವೇ ಎಳೆದಾಡುವ ಅಂದರೆ ಮಂಥನ ಮಾಡುವ ಕೈಹಗ್ಗ, ಬುದ್ಧಿಯೇ ಹಸ್ತ. ಮುಂಜಾವಿನಲ್ಲಿ ಕಡೆದು ತೆಗೆವನು ಸ್ಥಿರವಾದ ಅರಿವೆಂಬ ಬೆಣ್ಣೆಯನು. ಮೂಢಬುದ್ಧಿಯ ತೊಡೆದು ಪ್ರೌಢ ಬುದ್ಧಿಯ ತೊಡುವನು ; ದೃಢಬುದ್ಧಿಯ ತಳೆವನು.

ಋಗ್ವೇದೀಯ 'ಪ್ರಜ್ಞಾನಂ ಬ್ರಹ್ಮ' ಎಂಬ ಮಹಾ ವಾಕ್ಯವೇ ಮಾಹೇಶ್ವರನ ಮಹಾಲಕ್ಷ್ಯ. ಆತನ ಅಂಗವೆಲ್ಲ ಅದರ ಉಪಾಸನೆಯಿಂದ ಪ್ರಜ್ಞಾನಘನವಾಗಿರುತ್ತದೆ. ಆತನ ಗುರುಲಿಂಗವೇ ಪ್ರಜ್ಞಾನ ಬ್ರಹ್ಮವಾಗಿರುತ್ತದೆ.

ಬ್ರಹ್ಮವೆಂದರೆ ಬೃಹತ್ತಾಗಿರುವ ವಸ್ತು. ಅದರಲ್ಲಿ ಸ್ಥಿರವಾದ ಬುದ್ಧಿಯುಳ್ಳವನೇ ಮಾಹೇಶ್ವರನು. ಅವನೇ ಸ್ಥಿರ ಪ್ರಜ್ಞನು.

"ವಿಶ್ವ ಸ್ಮಾದಧಿಕೋ ರುದ್ರೋ ವಿಶ್ವಾನುಗ್ರಹಕಾರಕಃ ।
ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥"

ಎಂಬುದಾಗಿ ಮಾಹೇಶ್ವರನ ಸ್ಥಿರಪ್ರಜ್ಞತೆಯನ್ನು ರುದ್ರನೇ ಬ್ರಹ್ಮನೆಂಬುದನ್ನು ಶ್ರೀ ರೇಣುಕ ಜಗದ್ಗುರುವರ್ಯರು ಸೂಚ್ಯಾರ್ಥದಿಂದ ಸ್ಪಷ್ಟಗೊಳಿಸಿದ್ದಾರೆ. ವಿಶ್ವಾಧಿಕ ವಿಶ್ವಾನುಗ್ರಹ ಪರಬ್ರಹ್ಮದ ಸ್ಥಿರಪ್ರಜ್ಞೆಯುಳ್ಳಾತನೆ ಮಾಹೇಶ್ವರನೆಂದರ್ಥ.

ಮರವೆಯೆ ಸಂಸಾರ; ಅರಿವೇ ನಿಸ್ಸಂಸಾರ. ಅರಿವೇ ಜೀವನ ; ಮರವೆಯೇ ಮರಣ. 'ಅರಿದೊಡೆ ಶರಣ ; ಮರೆದೊಡೆ ಮಾನವ.' ಭವಪಾಶ ಭವಬಂಧವಾದ ಕಾರಣವೇನಯ್ಯಾ ? ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ ; ಹಿಂದಣ ಸಿರಿಯಲ್ಲಿ ಜಂಗಮವ ಮರೆದೆನಾಗಿ ! ಅರಿದೊಡೆ ಈ ಸಂಸಾರವ ಹೊದ್ದಲೀವೆನೆ ಕೂಡಲಸಂಗಮದೇವಾ ?' ಅರಿವಿನ ಹಿರಿಮೆ ಈ ಶರಣವಾಣಿಯಲ್ಲಿ ಅಭಿವ್ಯಕ್ತವಾಗಿದೆ. ಮಾನವತೆಯಿಂದ ಮುಂದುವರಿಯಬೇಕಾದರೆ ಅರಿವು ಅತ್ಯಗತ್ಯ.

ಮರ್ತ್ಯದ ಮಾನವನು ಅಜ್ಞಾನಿಯಾಗಿ ಸಂಸಾರಿಯಾಗಿದ್ದಾನೆ ; ಭವಿಯಾಗಿದ್ದಾನೆ. ತುಪ್ಪದ ಸವಿಗೆ ಅಲಗನೆಕ್ಕುವಂತಹ ಅಜ್ಞಾನರೂಪ ಸಂಸಾರವನ್ನು ಹೊದ್ದಿದ್ದಾನೆ. ನಿಡುಹುಸಿಯ ಆಡುತ್ತಾನೆ. ಮಮಕಾರಕ್ಕೆ ಮರೆಹೊಕ್ಕು ಪರಮನ ಮರೆಯುತ್ತಾನೆ. ರೋಗಶೂಲದಲ್ಲಿದ್ದರೂ ಯೋಗಶೀಲನಾಗಲು ಬಯಸುವುದಿಲ್ಲ. ಹಗೆಗಳ ಮಧ್ಯದಲ್ಲಿರುವುದೆ ಹದುಳತನವೆಂದು ಭಾವಿಸುತ್ತಾನೆ. ಹೇಯದಲ್ಲಿರುವುದೇ ಧ್ಯೇಯವೆನ್ನುತ್ತಾನೆ. ಇಷ್ಟಕ್ಕೂ ಕಾರಣ ಅಜ್ಞಾನ. ಇದು ಅಯ್ದಿಂದ್ರಿಯಗಳನ್ನು ಬಳಸಿ ಬರುತ್ತದೆ. ಆದ್ದರಿಂದ ಅಯ್ದಿಂದ್ರಿಯಗಳನ್ನು ಅಜ್ಞಾನದಿಂದ ದಾಟಿಸಬೇಕು. ಅರಿವಿನ ಸೀಮೆಗೊಯ್ಯಬೇಕು. ಪರಮಪ್ರೇಮೆಗೆ ಮುಟ್ಟಿಸಬೇಕು. ಆಗ ಅಯ್ದಿಂದ್ರಿಯ ಒಡೆತನ ತನಗುಂಟಾಗಿ

ಮಾಹೇಶ್ವರ ಸ್ಥಲಸಂಪನ್ನನೆನಿಸುತ್ತಾನೆ. ಕಾಯವಿಕಾರ–ಕರಣವಿಕಾರಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಆಗ ಅಜ್ಞಾನರೂಪ ಸಂಸಾರದ ಬಲೆಯು ಹರಿದು ಹೋಗುತ್ತದೆ.

ಮಹಾಜ್ಞಾನಿಯಾದ ಮಾಹೇಶ್ವರನು ಹೀಗೆ ವಿಚಾರಿಸುತ್ತಾನೆ: ಕಿವಿಕೇಳಲಿದೆ ; ಆದರೆ ಏನನ್ನು ಕೇಳಬೇಕು, ಏನನ್ನು ಕೇಳಬಾರದು ? ಆತ್ಮವಿಷಯವಲ್ಲದೆ ಮತ್ತೊಂದನ್ನು ಕೇಳದಂತಿರಬೇಕೆಂದರಿದು ಶ್ರೋತ್ರ ಸಂಯಮನವನ್ನು ಶ್ರೋತ್ರ ಸಂವಿತ್ತನ್ನು ಸಂಪಾದಿಸುತ್ತಾನೆ. ತ್ವಗಿಂದ್ರಿಯ ಸ್ಪರ್ಶಿಸಲಿದೆ : ಆದರೆ ಯಾವುದನ್ನು ಮುಟ್ಟಬೇಕೋ—ಯಾವುದನ್ನು ಮುಟ್ಟಬಾರದೋ—ಎಂಬುದನ್ನು ವಿಮರ್ಶಿಸಿ ಗುರುಲಿಂಗಸ್ಪರ್ಶವೆಂಬುದನ್ನರಿತು ಸ್ಪರ್ಶಸಂಯಮವನ್ನು ಸ್ಪರ್ಶ ಸಂವಿತ್ತನ್ನು ಸಂಗಳಿಸುತ್ತಾನೆ. ಕಣ್ಣು ಕಾಣಲಿದೆ: ಆದರೆ ಮನೋವಿಕಾರ ಕಾರಕರೂಪಗಳನ್ನು ಕಾಣಬಾರದೆಂದು ತಿಳಿದು ತನ್ನ ಕರದಿಷ್ಟವನ್ನೇ ಕಾಣಬೇಕೆಂದು ತನ್ನ ಕಾರುಣ್ಯಮೂರ್ತಿಯಾದ ಗುರುವಿನ ದರ್ಶನವನ್ನು ಪಡೆಯಬೇಕೆಂದು ಬಗೆದು ನೇತ್ರಸಂಯಮವನ್ನು ನೇತ್ರಸಂವಿತ್ತನ್ನು ನೆಲೆಗೊಳಿಸಿಕೊಳ್ಳುತ್ತಾನೆ. ರಸನೆ ರುಚಿಸಲಿದೆ: ಆದರೆ ಗುರುಲಿಂಗಪ್ರಸಾದವನ್ನಲ್ಲದೆ ಬೇರೆ ಯಾವ ಪಡಿ ಪದಾರ್ಥವನ್ನು ರುಚಿಸಬಾರದೆಂದರಿದು ರಸನೆಯ ಸಂಯಮವನ್ನೂ–ಸಂವಿತ್ತನ್ನೂ ಸಂಪಾದಿಸುತ್ತಾನೆ. ಘ್ರಾಣ ಘ್ರಾಣಿಸಲಿದೆ : ಆಚಾರಲಿಂಗದ ಸುಗಂಧ ಪ್ರಸಾದವನ್ನಲ್ಲದೆ ಬೇರೆ ಯಾವ ಗಂಧವನ್ನೂ ಘ್ರಾಣಿಸಬಾರದೆಂದು ತಿಳಿದು ಘ್ರಾಣ ಸಂಯಮವನ್ನು ಸಂವಿತ್ತನ್ನು ಮಾಹೇಶ್ವರನು ಗಳಿಸುತ್ತಾನೆ. ಈ ಎಲ್ಲ ಸಂಯಮ ಸಂಪತ್ತು ಮತ್ತು ಸಂವಿತ್ತು ಮಾಹೇಶ್ವರನ ಬಳುವಳಿ. ಇದೇ ಮಾಹೇಶ್ವರನ ವೀರತ್ವದ ಬಿರುದಾವಳಿ. ಮಹಾ ಮಾಹೇಶ್ವರತ್ವದ ನಿಯಮಾವಳಿ. ಇದೇ ಈಶತ್ವಕ್ಕೇರಿಸುವ ಸ್ಫೂರ್ತಿ. ಅಂತೆಯೇ ಇದು ಜೀವನ ಸ್ಫೂರ್ತಿ. ಪಾರ್ಥಿವ ಮತ್ತು ಸಾಲಿಲರೂಪ ತ್ಯಾಗಾಂಗದ ಮೇಲೆ ತನ್ನ ಪ್ರಭಾವವನ್ನು ಪ್ರಸ್ಥಾಪಿಸಬಲ್ಲುದು.

"ಅಸೂರ್ಯಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಕೇ ಚಾತ್ಮಹನೋ ಜನಾಃ ॥"
'ಅಂಧಂತಮಃ ಪ್ರವಿಶಂತಿಯೇಽವಿದ್ಯಾಮುಪಾಸತೇ ।'

ಅಜ್ಞಾನದಿಂದ ತುಂಬಿದವುಗಳು ಆಸುರೀ ಲೋಕಗಳು. ಆತ್ಮಘಾತಕಿಗಳು ಮರಣಾನಂತರ ಆ ಆಸುರೀ ಲೋಕಗಳಿಗೆ ಹೋಗುವರು. ಅವಿದ್ಯೋಪಾಸಕರೂ ತಮೋಲೋಕಗಳಿಗೆ ತೆರಳುವರು ಎಂದು ಈಶಾವಾಸ್ಯಶ್ರುತಿಯ ಅಭಿಮತ. ಹೀಗಾಗಬಾರದೆಂಬುದೇ ಮಾಹೇಶ್ವರ ಸ್ಥಲದ ಸಾಧನೆಯ ಸತ್ಯಧ್ಯೇಯ. ಅಜ್ಞಾನಾಂಧಕಾರವು ಪಿಂಡಾಂಡದ ಯಾವ ಭಾಗದಲ್ಲಿಯೂ ಇರಬಾರದೆಂದು ಬೋಧಿಸುತ್ತದೆ, ಜ್ಞಾನಶಕ್ತಿಯ ಪ್ರಭಾವವನ್ನು ಪಿಂಡಾಂಡಕ್ಕೆಲ್ಲ ಹಬ್ಬಿಸುವುದೇ ಈ ಸ್ಥಲದ ಧ್ಯೇಯ ; ಈ ಸ್ಥಲದ ನಿಷ್ಠೆ. ಮಾಹೇಶ್ವರನು ಸಾಮಾಜಿಕರಿಗೆ ಜ್ಞಾನದಾನ ಮಾಡುವ, ಧರ್ಮದೀಕ್ಷೆಕೊಡುವ ಪ್ರಮುಖ ಪ್ರತಿನಿಧಿ. ವೈಯಕ್ತಿಕ ಹಾಗು ಸಾಮೂಹಿಕ ಶ್ರೇಯಸ್ಸಿಗಾಗಿ ಸದಾ ಸಾಧನೆಯನ್ನು ಮಾಡುವ ಉತ್ತಮ ಜೀವಿ ; ಉದಾತ್ತ ಭಾವಿ. ಸತ್ಯಪ್ರಜ್ಞೆಯನ್ನು ಸರ್ವರಿಗೆ ಶಿಕ್ಷಣ ಕೊಡುವ ಶಿಕ್ಷಕ. ಬೌದ್ಧಿಕ ಸಮಸ್ಯೆಯನ್ನು ಬಿಡಿಸಬಲ್ಲ ಬುದ್ಧಿಯೋಗಿ ಮಾಹೇಶ್ವರ. ಹೊನ್ನುಹೆಣ್ಣು ಮಣ್ಣುಗಳ ಸಮಸ್ಯೆಯನ್ನು ಬಿಡಿಸಿ ಜೀವನ ಪಥವನ್ನು ಸುಗಮಗೊಳಿಸಬಲ್ಲ ; ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸಬಲ್ಲ. ಅನಿಷ್ಟ ಅನೀತಿ ಅಕ್ರಮ ಅಸಮ ಭಾವಗಳನ್ನು ಹೊಡೆದೋಡಿಸಬಲ್ಲ. ಸಾಮಾಜಿಕ ಎಲ್ಲ ಬಗೆಯ ಅಸ್ತವ್ಯಸ್ತತೆಯನ್ನು ಅಣಗಿಸಬಲ್ಲ. ತ್ಯಾಗ–ತಾಳ್ಮೆಗಳನ್ನು ಸಾಮಾಜಿಕರಲ್ಲಿ ತುಂಬಬಲ್ಲ.

ಜೀವನದಲ್ಲಿ ಒಂದು ನವೀನ ಪರಿವರ್ತನವಾಗಬೇಕಾದರೆ ಸಾಂಪ್ರದಾಯಿಕ ಪ್ರಾಕೃತಿಕ ಮತ್ತು ಪ್ರಾಪಂಚಿಕ ಜ್ಞಾನಮಾತ್ರದಿಂದ ಸಾಧ್ಯವಿಲ್ಲ. ಅತಿಮಾನಸ ಚೇತನವಾದ ಪಾರಮಾರ್ಥಿಕ ಜ್ಞಾನಸಂಪಾದನೆ ಬೇಕು. ಅದರಿಂದ ಬಾಳಿಗೆ ಹೊಸಬೆಳಕು ; ಹೊಸಬದುಕು. ಧೀಮಂತತೆಯ ಆವಿಷ್ಕಾರವಿಲ್ಲದೆ ಮಾನವತೆಯ ವಿಕಾಸವಿಲ್ಲದೆ ಅದು ಸಾಧ್ಯವಿಲ್ಲ. ಪ್ರಗತಿಯೇ ಪ್ರಾಣವಾದ ಮಾಹೇಶ್ವರತ್ವ ಸಿದ್ಧಿಯಾಗದೆ ಸಾಧ್ಯವಿಲ್ಲ. ಮಾನವತ್ವರೂಪ ಅತ್ಯಲ್ಪ ಘಟಕಾಂಶದಲ್ಲಿ ಮಾಹೇಶ್ವರತ್ವವಿದೆ. ಆ ಮಾಹೇಶ್ವರತ್ವರೂಪ ಷಟ್‌ಸ್ಥಲಾಂಶ ಘಟಕದಲ್ಲಿ ಸತ್ಯಜ್ಞಾನೈಶ್ವರ್ಯವಿದೆ, ಸತ್ಯಶಿವಸೌಂದರ್ಯವಿದೆ. ಸತ್ಯಾನಂದವೀವ ಮಾಧುರ್ಯವಿದೆ. ಈ ಜೀವಸತ್ವದ ಆಳದಲ್ಲಿ ಉನ್ನತ ಮತ್ತು ಶಾಶ್ವತ ದೈವೀ ಶಕ್ತಿಯಿದೆ. ಈ ಈಷಜ್ಜೀವನದಲ್ಲಿ ಮಾಹೇಶ್ವರತ್ವದ ಬೀಜಾವಾಪವಾಗಿದೆ. ಅದನ್ನು

ಕ್ಷಿತಿಜವಾಗಿಸುವ ಸಾಧನಸಂಪತ್ತಿಯೇ ನಿಷ್ಠೆ, ನಿಷ್ಕಾಮಭಾವ, ನಿಶ್ಚಯಾತ್ಮಕ ಬುದ್ಧಿಯೋಗ.

ಮಾಹೇಶ್ವರನ ಬುದ್ಧಿಯೋಗದಲ್ಲಿ ಸ್ಥಿರಪ್ರಜ್ಞೆಯಲ್ಲಿ ಪರಮಾರ್ಥ ಪ್ರಚೋದಕ ಶಕ್ತಿಯಿದೆ; ಪಾವಿತ್ರ್ಯ ಪ್ರಸರಣ ಪ್ರಸಕ್ತಿಯಿದೆ. ಮಾಹೇಶ್ವರನ ಕೃಪಾರೂಪ ಅಮೃತಸ್ರಾವಿ ಸಾಮರ್ಥ್ಯವಿದೆ. ಬಾಳನ್ನು ತೊಳ ತೊಳಗಿಸುವ ತೇಜಸ್ಸಿದೆ. ಮಾನವನಲ್ಲಿ ಮಹೀಶತ್ವವು ಸಿದ್ಧವಾಗಿರುವಂತೆ ಮಾಹೇಶತ್ವವೂ ಘಟಿಸುವ ಸಾಧನಶಕ್ತಿಯಿದೆ; ಸಂಪತ್ತಿಯಿದೆ.

ಷಡರ್ಥಸಂಗ್ರಾಹಕ ಮಾಹೇಶ್ವರ. ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯ—ಇವು ಮಾಹೇಶ್ವರನು ಸಂಪಾದಿಸುವ ಷಟ್‌ಸಂಪತ್ತಿ. ಅಂಬುಧಿ ರತ್ನಗಳನ್ನು ಒಡಲೊಳಗಿರಿಸಿಕೊಂಬಂತೆ, ಅರಸನು ಎಂಟು ಸಿರಿಗೆ ಒಡೆಯನಾಗಿರುವಂತೆ ಮಾಹೇಶ್ವರನು ಈ ಆರುಸಿರಿಗಳ ಒಡೆಯ. ಅವುಗಳ ಸಂಗ್ರಹಾಚರಣೆಯಲ್ಲಿ ನಿತ್ಯನಿರತ. ಇವೇ ಇವನ ಸಂಪತ್ತು.

# ಗುಣವೇ ಹಣ

ಹಣವೇ ಗುಣ,–ದುಡ್ಡುಳ್ಳವನೇ ದೊಡ್ಡಪ್ಪ ಎಂಬ ವಾದವನ್ನು ಮಾಹೇಶ್ವರನು ಎಂದಿಗೂ ಒಪ್ಪನು. ಪ್ರತಿಯಾಗಿ ಮಾಹೇಶ್ವರನಿಗೆ ಗುಣವೇ ಹಣ; ದೊಡ್ಡಿಸ್ತಿಕೆಯೇ ದುಡ್ಡು. ಗುಣವಿಲ್ಲದ ಹಣ ಅವನಿಗೆ ಬೇಕಿಲ್ಲ. ಅಂತಹ ಭಾಗ್ಯಕ್ಕಿಂತ ಬಡತನವೇ ಲೇಸೆನ್ನುವ ವಿಚಾರವಾದಿ; ಸಂಯಮಿ. "ಗುಣಹೀನ ಗಧೋಗತಿ। ಗುಣಿಗಂ ಸ್ವರ್ಗಾದಿ ಭೋಗಮಕ್ಕುಮೆನಲ್ಕಾ। ಗುಣಹೀನರ ಸಿರಿಯಿಂದಂ। ಗುಣಿಗಳ ಬಡತನವೆ ಲೇಸು ಚೂಡಾರತ್ನಾ॥" ಎಂಬುದನ್ನು ಮಾಹೇಶ್ವರ ಮನಸಾರೆ ಬಲ್ಲ. ಅರ್ಥದಾಶೆಗೆ ಸಿಕ್ಕು ಅದರ ಸಂಪಾದನೆಗೆ ಅಲ್ಲದಾಟವ ನಾಡುವುದು ಮಾಹೇಶ್ವರನಿಗೆ ಸಲ್ಲದು. ಕಾಯಕದ ಕಟ್ಟಳೆಯಮೇಲೆ ಬಾಳುವಾತ ಮಾಹೇಶ್ವರ. ದ್ರವ್ಯದಿಂದ ಒದಗುವ ಭೋಗವನ್ನು ಪ್ರಭುತ್ವವನ್ನು ಕುಲೀನತೆಯನ್ನು ಈತನು ಅಂಗೀಕರಿಸುವುದಿಲ್ಲ. ಈ ದ್ರವ್ಯಭೋಗದಲ್ಲಿದೆ ರೋಗಭಯ. ಈ ದ್ರವ್ಯ ಪ್ರಭುತ್ವದಲ್ಲಿದೆ ಭ್ರಷ್ಟತೆ. ಈ ದ್ರವ್ಯಜನ್ಯಕುಲದಲ್ಲಿದೆ ವ್ಯಾಕುಲತೆ,–ಎಂಬುದನ್ನು ಮಾಹೇಶ್ವರನು ಚೆನ್ನಾಗಿ ಬಲ್ಲ. ಆದ್ದರಿಂದ ದ್ರೋಹ, ಮೋಸಗಳಿಂದ ಹಣಗಳಿಸನು. ಸತ್ಯಶುದ್ಧ ಕಾಯಕದಿಂದ ಬಂದ ಹಣವನ್ನೂ ಸಹ ಕೂಡಿಡನು. ಸಮಾಜಕ್ಕೆ ಸಂಸ್ಕೃತಿಗೆ ಸಾಹಿತ್ಯಕ್ಕೆ ವಿನಿಯೋಗಿಸುವ ಉದಾರ ಹೃದಯಿ ಮಾಹೇಶ್ವರ. ಆರ್ಥಿಕದಲ್ಲಿ ಶುದ್ಧತೆ ಮತ್ತು ಸಮಾನತೆಗಳನ್ನು ಕಂಡು ಅನುಭವಿಸಿ ಆರ್ಥಿಕಸಾಮ್ಯ ಸಿದ್ಧಾಂತವಾದಕ್ಕೆ ಅಡಿಗಲ್ಲನ್ನಿಟ್ಟವನು ಮಾಹೇಶ್ವರನು. ಒಂದೆಡೆಯಲ್ಲಿ ಸಂಪತ್ತು ಕೇಂದ್ರೀಕೃತವಾಗಬಾರದೆಂದು ನಿರೂಪಿಸಿದ ಶ್ರೇಯಸ್ಸು ಮಾಹೇಶ್ವರನಿಗಿರುತ್ತದೆ ಇದರೀದಾಗಿ ಸ್ವಾರ್ಥವಾಗಲಿ, ಸ್ಪರ್ಧೆಯಾಗಲಿ, ಸತ್ಯನಾಶವಾಗಲಿ, ಸಂಭವಿಸದು. ಬಡವ–ಬಲ್ಲಿದ ಎಂಬ ಕವಲು ನೋಟ ನೆಲಸದು. ಅಸಮಾನತೆ ಆವಿಭವಿಸದು. ಪರರ ಸ್ವಾತಂತ್ರ್ಯವನ್ನು ಪರರ ಸ್ವಾಮ್ಯವನ್ನು ಪರರ ಹಿತವನ್ನು ಪರರ ಸಂಪತ್ತನ್ನು ಅಪಹರಿಸುವ ಅಲ್ಪಬುದ್ಧಿಯುಳ್ಳವನಲ್ಲ

ಮಾಹೇಶ್ವರ. ಮಾಹೇಶ್ವರನ ಶಾಸಕಾಂಗದೃಷ್ಟಿ ವಿಶಾಲವೂ ವಿಶುದ್ಧವೂ ಆದುದು. ಎಲ್ಲರೂ ತಾತ್ವಿಕವಾಗಿ ಮಾಹೇಶ್ವರರಾಗಬೇಕೆಂಬುದೇ ಮಾಹೇಶ್ವರನ ಶಾಸನ. ನ್ಯಾಯದಿಂದ ಆರ್ಜಿಸಿದ ಅರ್ಥವ್ಯರ್ಥವಾಗಬಾರದು. ಅಪಾರ ಅರ್ಥಾರ್ಜನೆಗಾಗಿ ಉಪಯುಕ್ತ ಜೀವನ ವ್ಯರ್ಥವಾಗಬಾರದು—ಎಂಬುದೇ ಮಾಹೇಶ್ವರನ ಮನೀಷೆ! ದುಡಿಯುವವರ ದುಡ್ಡಿನ ಮೇಲೆ ದುಡಿಯದವರು ಕಣ್ಣು ಮನಗಳನ್ನು ಚೆಲ್ಲಬಾರದು. ಅನ್ಯರ ಅರ್ಥವನ್ನು ಆಶಿಸುವುದಕ್ಕಿಂತ ಅಪಹರಿಸುವುದಕ್ಕಿಂತ ಬೇರೆ ಪಾಪವಿಲ್ಲ; ಎಂಬದನ್ನರಿತು ಪರದ್ರವ್ಯಾಶೆಯನ್ನು ಪರಿಹರಿಸುವುದೇ ಮಾಹೇಶ್ವರನ ನಿಜನಿಯಮ.

ಧರ್ಮ, ಅರ್ಥ ಇವೆರಡೂ ಬಾಳಿಗೆ ಬೇಕಾದವುಗಳು. ಆದರೆ ಧರ್ಮವಿಲ್ಲದ ಅರ್ಥಬೇಕಿಲ್ಲ. ಧರ್ಮವೇ ಪ್ರಥಮ ಸಂಪತ್ತು. ದುಡ್ಡು ದ್ವಿತೀಯ ಸಂಪತ್ತು—ಮಾಹೇಶ್ವರನಿಗೆ! ಧರ್ಮಾರ್ಜಿತ ದುಡ್ಡು ಧರ್ಮಾರ್ಥಕ್ಕಾಗಿಯೇ ವಿನಿಯೋಗವಾಗಬೇಕೆಂಬುದು ಮಾಹೇಶ್ವರನ ದಿವ್ಯಧ್ಯೇಯ. ದುಡ್ಡಿದ್ದವನು ದೊಡ್ಡವನೆಂಬುದು ಭೌತಿಕವಾದ. ದುಡ್ಡಿಲ್ಲದಿದ್ದರೂ ಧರ್ಮಿಯಾದವನೇ ದೊಡ್ಡವನು—ಒಡೆಯನು ಎಂಬುದು ಷಟ್‌ಸ್ಥಲಧಾರ್ಮಿಕ ವಾದ. ಅಂತೆಯೇ ಮಾಹೇಶ್ವರತ್ವಕ್ಕೆ ದುಡ್ಡಿಗಿಂತ ಧರ್ಮಶ್ರೀಮಂತಿಕೆಯೇ ದೊಡ್ಡದಾಗಿದೆ; ಮುಖ್ಯವಾಗಿದೆ. ಜ್ಞಾನ ಶ್ರೀಮಂತಿಕೆ ಇನ್ನೂ ದೊಡ್ಡದಾಗಿದೆ. ಭೌತಿಕ ಭಾಗ್ಯವಂತನು ಭೌತಿಕ ಭಾಗ್ಯವಿಲ್ಲದ ಧರ್ಮಜ್ಞಾನಗಳ ಭಾಗ್ಯವುಳ್ಳ ಮಾಹೇಶ್ವರನಿಗೆ ಮಣಿಯುವ ಆರಾಧಿಸುವ ನ್ಯಾಯ ನೀತಿ ರೀತಿ ಸಾಮಾಜಿಕವಾಗಿ ಸಾಗಿಬಂದಿದೆ. ದೇಶ ಮತ್ತು ದುಡ್ಡಿನ ಚಕ್ರವರ್ತಿಗಿಂತ ಷಟ್‌ಸ್ಥಲ ಧರ್ಮಚಕ್ರವರ್ತಿ ಹೆಚ್ಚಿನವನು. ಇದೊಂದು ಬಗೆಯ ಧಾರ್ಮಿಕ ಕ್ಷೇತ್ರದ ಕಮ್ಯುನಿಷ್ಟ ತತ್ತ್ವದ ಕ್ರಾಂತಿಕವಾದವೆಂದೇ ಹೇಳಬೇಕು.

ಮಾಹೇಶ್ವರನದು ವರ್ಗರಹಿತ ಮತ್ತು ವರ್ಣರಹಿತವಾದ ಸಮಾಜವಾದ. ಜ್ಞಾನ, ಧ್ಯಾನ, ಧಾರಣ, ಕ್ರಿಯೆಗಳೇ ಮಾಹೇಶ್ವರನಾಗುವ ಸಂಪತ್ತು ಮತ್ತು ಶಕ್ತಿ. ಈ ಸಂಪತ್‌ಶಕ್ತಿಯುಳ್ಳವರು ಯಾರಾದರಾಗಲಿ ಅವರೆಲ್ಲರೂ ಸಮಾನರೆಂದು ಪ್ರತಿಪಾದಿಸುವುದೇ ಷಟ್‌ಸ್ಥಲ ತಾತ್ತ್ವಿಕ ಸಿದ್ಧಾಂತ. ಇದನ್ನು ಮಾಹೇ

ಶ್ವರನು ಮುಖ್ಯವಾಗಿ ಮುಮ್ಮೊದಲು ಬಾಳಿನಲ್ಲಿ ಬೆಳಸಿಕೊಂಡು ಬಳಿಕ ಸಮಾಜದಲ್ಲಿ ಬಳಕೆಗೆ ತರುವ ಹೊಣೆ ಹೊರುತ್ತಾನೆ.

ಮಾಹೇಶ್ವರನ ಕರ್ತವ್ಯದೃಷ್ಟಿಯಲ್ಲಿ ನ್ಯಾಯದೃಷ್ಟಿಯಲ್ಲಿ ಹಣವು ಗುಣವಾಗಬೇಕು. ಅದೂ ಒಂದು ದೈವೀಶಕ್ತಿ. ಅದರಿಂದಾಗಿ ಅದರ ವಿಷಯದಲ್ಲಿ ಅನ್ಯಾಯ. ಅಪಚಾರಗಳು ನಡೆಯಬಾರದು. ಅಲಸಿಕೆಗೆ ಅಪವ್ಯಯಕ್ಕೆ ಅವಕಾಶವಿರಬಾರದು. ಹೊರಗಿನ ಬಾಳನ್ನು ರೂಪಿಸುವಂತೆ ಹದುಳಬಾಳನ್ನೂ ರೂಪಿಸಬಲ್ಲದು-ಸತ್ಯಪಥದಲ್ಲಿ ಸ್ವಾರ್ಜಿತತದ್ರವ್ಯ ಸಧ್ವಿನಿಯೋಗವಾದಾಗ! ಅಧರ್ಮಕ್ಕಾಗಿ ದ್ರವ್ಯದ ವಿನಿಯೋಗವಾಗಬಾರದು. ವಿನಿಯೋಗವಾದರೆ ದುರಪಯೋಗವಾಗುತ್ತದೆ. ದೈವೀಶಕ್ತಿಯೊಂದನ್ನು ದುರುದ್ದೇಶಗಳಿಗೆ ಉಪಯೋಗಿಸುವುದು ಪಾಪಕಾರ್ಯವಲ್ಲದೆ ಮತ್ತೇನು? ಅಂತೆಯೇ ಪ್ರೌಢಪ್ರೇಮವೂ ಒಂದು ತೈವೀಶಕ್ತಿ. ಇದನ್ನೂ ದುರಪಯೋಗಪಡಿಸಬಾರದು. ಧರ್ಮರೀತಿಯಲ್ಲಿಯೇ ಉಪಯೋಗವಾಗಬೇಕು. ದೈವೀಸಾಕ್ಷಾತ್ಕಾರಕ್ಕಾಗಿ ವಿನಿಯೋಗವಾಗಬೇಕು. ಹೇಮ-ಪ್ರೇಮಗಳೆರಡೂ ದೈವಾರಾಧನೆಗೆ ಮೀಸಲಾಗಬೇಕು.

ವೀರಶೈವ ಪರಿಭಾಷೆಯಲ್ಲಿ ಧನ ದ್ವಿವಿಧ, ಒಂದು ಬಾಹ್ಯ; ಇನ್ನೊಂದು ಅಂತರ. ಬಾಹ್ಯಧನ ಯಾವುದೆಂಬುದು ಎಲ್ಲರಿಗೂ ಗೊತ್ತಿದೆ. ಆಂತರಿಕಧನವೆಂದರೆ ಭಾವ. ಬಾಹ್ಯಧನ ಆದಿಭೌತಿಕಧನ. ಭಾವಧನ ಆಧ್ಯಾತ್ಮಿಕಧನ. ಇವೆರಡನ್ನೂ ಧರ್ಮಕ್ಕೆ ದೈವಕ್ಕೆ ಅರ್ಪಿಸಬೇಕು. ಇವೆರಡೂ ಸ್ವಕೀಯವಾಗಿರಬೇಕು. ಸತ್ಯಶುದ್ಧವಾಗಿರಬೇಕು. ಪರರಧನವನ್ನು ಹೇಗೋ ಹಾಗೆ ಪರರ ಭಾವವನ್ನೂ ಆಶಿಸಬಾರದು; ಕದಿಯಬಾರದು. ಭಾವ ಧನವನ್ನು ಭಾಷೆಯ ಮೂಲಕ ಕದ್ದು ತನ್ನದನ್ನಾಗಿಸಿಕೊಳ್ಳಬಾರದು.

ಮನ ಇರುವವರೆಗೂ ತನು–ಮತ್ತು ಧನ ಇದ್ದಾಗಬೇಕು. ತನು ಶುಚಿಯಾಗದೆ ಭಕ್ತನಲ್ಲ. ಧನ ಶುಚಿಯಾಗದೆ ಮಾಹೇಶ್ವರನಲ್ಲ. ಮನಶುಚಿಯಾಗದೆ ಪ್ರಸಾದಿಯಲ್ಲ.

ಮನಸ್ಸಿನ ಸಮತೆ ನಿರ್ಮಲತೆ ನಿಶ್ಚಲತೆ ಉಳಿಯಬೇಕಾದರೆ ಪರದಾರ ಪರದ್ರವ್ಯಗಳಲ್ಲಿ ಆಶೆ-ಅಭಿಲಾಷೆಗಳುಂಟಾಗಬಾರದು. ಮತ್ತು ಸ್ವಾರ್ಜಿತದ್ರವ್ಯಾದಿಗಳ ಉಪಯೋಗವೂ ದೈವ-ಧರ್ಮಗಳ ಸಾಹಿತ್ಯ-ಸಂಸ್ಕೃತಿಗಳ ಎಲ್ಲೆಯನ್ನು ಮೀರಬಾರದು. ಮಿತಿಮೀರಬಾರದು.

ತಾನು ಗಳಿಸಿದ್ದರೂ ತನ್ನದಲ್ಲ ಧನ. ತನ್ನದಲ್ಲ ಭಾವ. ಜಗದೊಡೆಯನವು. ಆತನವನ್ನು ಆತನಿಗೆ ಅರ್ಪಿಸಬೇಕಲ್ಲದೆ ಅನ್ಯಾಯಕ್ಕೆ ಅನ್ಯಕ್ಕೆ ಅರ್ಪಿಸಬಾರದು. ಹೊನ್ನು ಹೆಣ್ಣುಗಳು ಭೋಗವಸ್ತುಗಳು ಇವನ್ನು ದಿವ್ಯಚೈತನ್ಯಕ್ಕೆ ಅರ್ಪಿಸಿ ಭೋಗಿಸಿದರೆ ಭೋಗ ದೋಷ ಬಾರದು. ಧನಜಂಗಮಕ್ಕೆ ಅರ್ಪಿಸಬೇಕೆಂದರೆ ದಿವ್ಯ ಚೈತನ್ಯಕ್ಕೆ ಅರ್ಪಿಸಬೇಕೆಂದರ್ಥ.

ಇವೆರಡರ ವ್ಯವಸ್ಥೆಯನ್ನು ಹೇಳುವ ಮಾಹೇಶ್ವರಸ್ಥಲ ಮಾನವ ಜೀವನ ವ್ಯವಸ್ಥೆಯನ್ನೇ ಹೇಳಿದಂತಿದೆ. ಹೊನ್ನು ಹೆಣ್ಣು ಎರಡೂ ಮಾನವ ಜೀವನಕ್ಕೆ ಅನಿವಾರ್ಯ ವಸ್ತುಗಳು. ಸನ್ಯಾಸಿಗಳಾದವರು ಬಾಹ್ಯಸ್ತ್ರೀಯನ್ನು ಬಿಟ್ಟಿದ್ದರೂ ಸ್ತ್ರೀತ್ವವನ್ನು ಬಿಟ್ಟಿರುವುದಿಲ್ಲ. ಸ್ತ್ರೀತ್ವವು ಅವರ ಪ್ರಕೃತಿಯಲ್ಲಿ ಸಮ್ಮಿಲಿತವಾಗಿಯೇ ಇರುತ್ತದೆ. ಧರ್ಮ, ಸಂಸ್ಕೃತಿ, ಸಾಮಾಜಿಕತೆ, ನಾಗರಿಕತೆಗಳು ಉತ್ಕರ್ಷವಾಗಬೇಕಾದರೆ ದ್ರವ್ಯ ಬೇಕೇ ಬೇಕು. ಸಂಸಾರಿ, ಸನ್ಯಾಸಿ ಎಂಥವರೂ ದ್ರವ್ಯವನ್ನಾಶ್ರಯಿಸಿ ಜೀವನವನ್ನು–ಜೀವನ ಧ್ಯೇಯಗಳನ್ನು ಮುಂದುವರಿಸುತ್ತಾರೆ. ಕ್ಷೇತ್ರ ರಕ್ಷಣೆಗೆ ಶಾಸ್ತ್ರಶೋಧನೆಗೆ ಧರ್ಮಪ್ರಸಾರಕ್ಕೆ ಸಂಸ್ಕೃತಿ–ತತ್ತ್ವೋಪದೇಶಗಳಿಗೆ ಏನೆಲ್ಲದಕ್ಕೂ ದ್ರವ್ಯಬೇಕು. ದ್ರವ್ಯದಿಂದ ಅವನತಿ-ಉನ್ನತಿ ಎರಡೂ ಉಂಟು. ಅದನ್ನು ಬಳಸುವುದರಲ್ಲಿದೆ ಜಾಣ್ಮೆ. ಇದನ್ನು ಹೇಳಿ ಬಳಕೆಗೆ ತರುವುದೇ ಮಾಹೇಶ್ವರ ಸ್ಥಲದ ಧ್ಯೇಯ. ಅನೇಕರು ಭಾವಿಸಿದಂತೆ ಹೊನ್ನು ಹೆಣ್ಣುಗಳು ಬರಿಯ ಪಾಪಮೂಲವಲ್ಲ; ಪುಣ್ಯಮೂಲವೂ ಆಗಿವೆ. ವಿನಿಯೋಗಿಸುವ ಉದ್ದೇಶ ಉತ್ತಮವಾಗಿದ್ದರೆ ಉನ್ನತಿಗೂ ಪವಿತ್ರತೆಗೂ ಪಾತ್ರವಾಗುತ್ತವೆ. ಬೆಂಕಿಯಂತೆ ಇವೆರಡನ್ನೂ ವಿಹಿತವಾದುದಕ್ಕೆ ಉಪಯೋಗಿಸಬೇಕು. ಅಂತೆಯೇ ದ್ರವ್ಯವನ್ನೂ ಭಾವವನ್ನೂ ಶಿವಕಾರ್ಯಗಳಿಗೆ ಶಿವಸಾಹಿತ್ಯಕ್ಕೆ ಸವೆಸಬೇಕು.

ಹೊನ್ನು ಹೆಣ್ಣುಗಳ ಮಮಕಾರಕ್ಕೆ ಅಹಂಕಾರಕ್ಕೆ ಮಾಹೇಶ್ವರನು ಒಳಗಾಗಬಾರದು. ಒಳಗಾಗಿ ವಿಕಾರವಶನಾಗಬಾರದು. ಧನ ದಾರಾದಿಗಳ ದಾಸನಾಗಬಾರದು. ಆದರೆ ಮಾಹೇಶ್ವರತ್ವಕ್ಕೆ ಭಂಗ. ತನುಮನ ಧನದಾರಾದಿಗಳಿಗೆ ಒಡೆಯನಾಗಬೇಕು. ಸ್ವಂತದ ಧನವನ್ನು ತನುಮನಗಳನ್ನು ಇಡೀ ಜೀವಕೋಟಿಯ ಹಿತಕ್ಕಾಗಿ ವಿನಯಾನ್ವಿತನಾಗಿ ವಿನಿಯೋಗಿಸಬೇಕು. ಮಾಹೇಶ್ವರನು ತನಗಿರುವ ಉಭಯ ಸಂಪತ್ತನ್ನು ಅಂದರೆ ಭೌತಿಕಧನ ಭಾವಧನಗಳನ್ನು

ಸಾರ್ಥಕಪಡಿಸಬೇಕಾದರೆ ಇವುಗಳ ಮಮತ್ವಕ್ಕೊಳಗಾಗದೆ ಕಾಮಸೀಮೆಗೆ ಸಿಲುಕದೆ ಶಿವ ಸಂಸ್ಕೃತಿಗೆ ಶಿವಸಾಹಿತ್ಯ ನಿರ್ಮಾಣಕ್ಕೆ ಬಳಸಬೇಕು. ಆಗ ಆ ಭಗವಂತನಿಗೆ ಸಲ್ಲಿದಂತಾಗುತ್ತದೆ.

"ಪರಸ್ತ್ರೀ ಸಂಗನಿರ್ಮುಕ್ತಃ ಪರದ್ರವ್ಯ ಪರಾಙ್ಮುಖಃ ।
ಶಿವಾರ್ಥಕಾರ್ಯಸಂಪನ್ನಃ ಶಿವಾಗಮ ಪರಾಯಣಃ ॥
ಶಿವಸ್ತುತಿರಸಾಸ್ವಾದಮೋದಮಾನಮನಾಃ ಶುಚಿಃ ।
ಶಿವೋತ್ಕರ್ಷ ಪ್ರಮಾಣಾನಾಂ ಸಂಪಾದನ ಸಮುದ್ಯತಃ ॥"

ಎಂಬುದಾಗಿ ಶ್ರೀ ರೇಣುಕ ಜಗದ್ಗುರುವರ್ಯರು ಬಗೆಗೊಳ್ಳುವಂತೆ ಬೋಧಿಸಿದ್ದಾರೆ.

# ವಿಶ್ವವ್ಯಾಪಕ ವರ್ಚಸ್ಸು

ಶಿವಮಯವಾದ ವಿಶ್ವದಲ್ಲಿ ಶಿವವರ್ಚಸ್ಸನ್ನು ಸಂಪಾದಿಸುವುದೇ ಮಾಹೇಶ್ವರನ ಹೃದಯೇಂಗಿತ. ಮಾಹೇಶ್ವರನು ಮೇಲಿನಿಂದ ಇಳಿದು ಬಂದವನಲ್ಲ; ಅಂದರೆ ಅವತರಿಸಿದ ಅಥವಾ ಅವತಾರದ ಅಮಾನುಷ ಶಕ್ತಿಯುಳ್ಳ ಮಹಾಮಹಿಮನಲ್ಲ. ಮಾನವನಾಗಿ ಮರ್ತ್ಯದಲ್ಲಿ ಷಟ್‌ಸ್ಥಲ ಸಾಧಕನಾಗಿ ಇದರ ಮೊದಲು ಮೆಟ್ಟಲಾದ ಭಕ್ತಸ್ಥಲವನ್ನು ಅಖಂಡವಾಗಿ ಅಳವಡಿಸಿಕೊಂಡು ಸಾಧನೆಯ ಸತ್ವದಿಂದ ಮಾಹೇಶ್ವರನಾದವನು. ವ್ಯಷ್ಟಿಸಂಯಮದಿಂದ ಪ್ರಭಾವಿತನಾದವನು. ಸ್ವಾರ್ಥಕ್ಕೆ ಜಲಾಂಜಲಿಯನಿತ್ತು ಸಮತಾವಾದಿಯಾದವನು. ಸದ್ಗುಣ ಸಹಕಾರಾದಿಗಳ ಸಂಪತ್ತಿನಿಂದ ಸಮಾಜವಾದಿ ನಾಯಕನಾಗಲು ಅರ್ಹತೆಯನ್ನು ಪಡೆದವನು. ಮಾನವತೆಯ ಮಟ್ಟದಲ್ಲಿಯೆ ಬಾಳಿ.ಬದುಕಿ ಮಹೋನ್ನತಸ್ಥಾನವನ್ನು ನಿಷ್ಠೆಯಿಂದ ಮುಟ್ಟಿದವನು. ತಾತ್ತ್ವಿಕ ವಿಚಾರವಿಯತ್ತಿನಲ್ಲಿ ಮೂಡಿ ಬೆಳಗುವ ಪೂರ್ಣಚಂದ್ರನು. ಜ್ಞಾನ-ವಿಜ್ಞಾನಗಳ ಪ್ರಗತಿ ಪಥದಲ್ಲಿ ಪ್ರಕಾಶಿಸುವ ಪ್ರಭಾಕರನು. ವಿಶ್ವದವರ ಬಾಳನ್ನು ಬೆಳಗುವ ವೈಶ್ವವಿದ್ಯುದ್ದೀಪಸ್ವರೂಪನು. ಸ್ವಚ್ಛವೂ ಸಮರ್ಥಶಾಲಿಯೂ ಆದ ವ್ಯಕ್ತಿತ್ವ. ಮಧುರವೂ ಮನೋಹರವೂ ಆದ ವಕ್ತೃತ್ವ. ಜನತೆಗೆ 'ಜೀವನದರ್ಶನ'ವನ್ನು ಒದಗಿಸುವ ಆದರ್ಶ ಜೀವಿ. ಅಂತೆಯೆ ಸಕಲ ಸಜ್ಜನ ಭಾವಿ. ವಿಶ್ವಜೀವನದಲ್ಲಿ ವಿಶಿಷ್ಟ ವಾತಾವರಣವನ್ನು ಶಾಂತಿ–ಸಮರಸಗಳನ್ನು ತುಂಬ ನಿಂತ ಮಹಾತ್ಮ. ಸತ್ ಚಿತ್ ಸಂಸ್ಕಾರಗಳ ತಂಬೆಲರ ತೀಡುವ, ತೀಡಿ ತೋಷಿಸುವ ಪ್ರಾಣಾನಿಲ. ಜಾಗತಿಕ ಜೀವನದಲ್ಲಿ ತನ್ನದೇ ಆದ ತುಂಬು ಚಾರಿತ್ರವನ್ನು ಹೊಮ್ಮಿಸಿ ಹೊಸ ಇತಿಹಾಸವನ್ನು–ಹೊಸ ಪ್ರಕಾಶವನ್ನು ಉಳಿಸಿಬಲ್ಲ-ಬೆಳಗಿಸಬಲ್ಲ ಉದಾತ್ತಚರಿತ.

ಭಕ್ತ ಜೀವನದಲ್ಲಿ ಚಿತ್ತಸಂಯಮಿ; ಸತ್ಕ್ರಿಯಾ ನಿಯಮಿ. ಮಾಹೇಶ್ವರ ಜೀವನದಲ್ಲಿ ಬುದ್ಧಿಜೀವಿ; ಬುದ್ಧಿಯೋಗಿ. ವಿಚಾರಪರ ಅನ್ವೇಷಣವೇ ಇವನ

ನಿತ್ಯಕರ್ತವ್ಯ. ವಿಕಾಸ ದೃಷ್ಟಿಯನ್ನು ಚೆಲ್ಲುವುದೇ ಇವನ ನೀತಿ ಮತ್ತು ರೀತಿ. ಬುದ್ಧಿಹೀನರಿಗೆ ಬುದ್ಧಿಯನ್ನು ಬಲಹೀನರಿಗೆ ಬಲವನ್ನು ತುಂಬಿ ತರುವುದೇ ಇವನ ನಿತ್ಯನಿಯತಿ. ಖುಚಿಯಲ್ಲಿ ಶುಚಿಯನ್ನು ಶುದ್ಧಭಾವವನ್ನು ಸರ್ವರಿಗೂ ಅನುಗ್ರಹಿಸುವ ಅಂತಃಕರುಣೆ. ಭಕ್ತತ್ವದಲ್ಲಿ ವಿನಯ, ಶ್ರದ್ಧೆ, ಚಿತ್ತಶುದ್ಧಿಗಳು ಹೇಗೋ ಹಾಗೆ ಮಾಹೇಶ್ವರನಿಗೆ ವಿಮರ್ಶೆ, ನಿಷ್ಠೆ, ಬುದ್ಧಿಸಿದ್ಧಿಗಳು. ಇವು ಇವನಿಗೆ ಆಧಾರಸ್ತಂಭಗಳು. ಆಧ್ಯಾತ್ಮಿಕ ವಿಜ್ಞಾನ, ಶಾರೀರಕ ಕಲೆ, ಜಾಗತಿಕ ಕಲ್ಯಾಣ ಇವು ಇವನ ಜೀವನ ಜೀವಾಳ.

ಆತ್ಮೋನ್ನತಿಯ ಜತೆಗೆ ಮಾನವಲೋಕದ ಸಂಪರ್ಕವನ್ನು ಬೆಳಸುತ್ತಾನೆ— ಮಾಹೇಶ್ವರನು. ಇರುವಿಕೆಯನ್ನು ಉಳಿಸಿಕೊಳ್ಳುವುದು ಭಕ್ತಸ್ಥಲದ ಕರ್ತವ್ಯವಾದರೆ ಜತೆಗೆ ಅರಿಯುವಿಕೆಯನ್ನು ಅಳವಡಿಸಿಕೊಳ್ಳುವುದು ಮಾಹೇಶ್ವರ ಸ್ಥಲದ ಕೆಲಸ. ಅರಿತಂತೆ ಆಗುವಿಕೆಯನ್ನು ಅಂಗವಿಸಿಕೊಳ್ಳುವುದು ಪ್ರಸಾದಿಸ್ಥಲದ ಪ್ರಕರಣ. ಆಗುವಿಕೆ ಅನೇಕ ವಿಧವಾಗಿವೆ. ಆದರೆ ನಿಜವಾದ ಆಗುವಿಕೆ ಒಂದೇ ಒಂದಿರುತ್ತದೆ. ಅದನ್ನು ನಿಶ್ಚಯಿಸಿ ಆಗುವುದೇ ಪ್ರಾಣಲಿಂಗಿಸ್ಥಲದ ಪರಿ. ಇನ್ನೇನಾಗಬೇಕಿಲ್ಲ. ಆದರೆ ಪ್ರಯೋಜನವಿಲ್ಲ. ಪ್ರಾಣಲಿಂಗಿಯೇ ಆಗಬೇಕು. ಹಲವಾಗುವ ಹಂಬಲವಳಿಯಬೇಕು. ಇದಕ್ಕೆಲ್ಲ ಸ್ವಾತಂತ್ರ್ಯದ ಅಡಿಗಲ್ಲನ್ನಿ ಹಾಕುತ್ತದೆ ಮಾಹೇಶ್ವರಸ್ಥಲ. ನಿಯಂತ್ರಿಸುವ ಮತ್ತು ನಿಯಮಿಸುವ ಅಧಿಕಾರವುಳ್ಳದಾಗಿದೆ. ಈ ಸ್ಥಲದಲ್ಲಿದ್ದು ತನಗೆ ಕಣ್ಣನ್ನು, ಕಣ್ಣಿಗೆ ಬೇಕಾದ ಬೆಳಕನ್ನು ಪಡೆಯುತ್ತಾನೆ ಮಾಹೇಶ್ವರನು. ಪಡೆದು ಪ್ರಪಂಚಕ್ಕೆ ಪ್ರಕಾಶವನ್ನು ಪ್ರಸರಿಸುತ್ತಾನೆ. ಹೀಗಾಗಲು ತನ್ನ ಕರಣೇಂದ್ರಿಯಗಳನ್ನು ನಿಯಂತ್ರಿಸುತ್ತಾನೆ. ಮುಂದೆ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನಾಗಲು ನಿಯಮಿಸುತ್ತಾನೆ— ಪ್ರಾಣಾತ್ಮರಿಗೆ ! ಅಂತೆಯೇ ಮಾಹೇಶ್ವರನು ತಾನು ತುಂಬು ಜೀವಿಯಾಗಿ ಪರರಿಗೆ ಔದಾರ್ಯದ ಜೀವನವನ್ನು ನಿರ್ವಹಿಸುತ್ತಾನೆ. ನೆರೆ ಹೊರೆಯವರನ್ನು ಮಾತ್ರವಲ್ಲ ಎಲ್ಲ ಮಾನವರನ್ನು ಪ್ರೀತಿಸುತ್ತಾನೆ. ತನ್ನನ್ನು ವಿಶ್ವಜನತೆಗೆ ತ್ಯಾಗ ಮಾಡುತ್ತಾನೆ. ತ್ಯಾಗಾಂಗವನ್ನು ಸಾರ್ಥಕಗೊಳಿಸುತ್ತಾನೆ. ಇದರಿಂದಾಗಿ ಮಹಾ—ಈಶ್ವರತ್ವಕ್ಕೆ ಏರುತ್ತಾನೆ.

ವಿಶ್ವವು ಶಿವಮಯವಾಗಿದೆ, ವಿಶ್ವ ಶಿವನಿಗೆ ವ್ಯತಿರಿಕ್ತವಲ್ಲ;
"ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯಃ ಸ್ಮೃತಃ ।
ತಥಾ ಶಿವಾತ್ಸಮುತ್ಪನ್ನಂ ಶಿವ ಏವ ಚರಾಚರಂ ॥"

ಎಂಬೀ ಜಗದ್ಗುರು ರೇಣುಕವಾಣಿಯಂತೆ ಅಭಿನ್ನಭಾವ ಮಾಹೇಶ್ವರನದು. ಮಾಹೇಶ್ವರನ ದೃಷ್ಟಿಯಲ್ಲಿ ಶಿವ ಬೇರಲ್ಲ; ವಿಶ್ವ ಬೇರಲ್ಲ. ಶಿವಮಯ ಜಗತ್ಸೇವೆಯಲ್ಲಿ ಮಾಹೇಶ್ವರನು ತನ್ನನ್ನು ಸರ್ವಭಾವದಿಂದ ಸೂರೆಗೊಂಡಿರುತ್ತಾನೆ. ಜನತೆಯೆಂಬ ಜಗದೀಶ್ವರನ ಆರಾಧನೆಯಲ್ಲಿ ಅನುಗಾಲ ನಿರತನಾಗಿ ವಿಶ್ವದಲ್ಲಿ ತನ್ನ ವಿಶುದ್ಧ ವರ್ಚಸ್ಸನ್ನು ಹಬ್ಬಿಸಿರುತ್ತಾನೆ.

# ಮಾಯಾಮಲ, ಚಿತ್ಕಳಾ

ಶಿವನಲ್ಲಿದೆ ಆ ಸರ್ವಜ್ಞ ಶಕ್ತಿ. ಅದು ಸರ್ವಶಕ್ತಿವಂತ ಶಕ್ತಿ; ಸರ್ವ ಸ್ವತಂತ್ರ ಶಕ್ತಿ. ಅದು ಸಂಕೋಚಗೊಂಡು ಈ ಜೀವಾತ್ಮದಲ್ಲಿ ಕಿಂಚಿಜ್ಞತೆಯನ್ನು ತಳೆದು ಮಾಯಿಯಮಲವೆನಿಸಿದೆ. ಅಲ್ಲಿ ಪ್ರತಿಷ್ಠಿತಕಳೆಯಾಗಿದ್ದು ಇಲ್ಲಿ ಅಪ್ರತಿಷ್ಠಿತ ಕಲೆಯಾಗಿದೆ. ಅಲ್ಲಿ ಅದು ಚಿತ್ಕಳೆ; ಇಲ್ಲಿ ಇದು ಅಚಿತ್ಕಳೆ. ಆತ ಸರ್ವಜ್ಞ; ಈತ ಅಲ್ಪಜ್ಞ. ಶಿವನಲ್ಲಿರುವ ಆ ಚಿತ್ಕಳೆ ಅಚಂಚಲ. ಜೀವನಲ್ಲಿರುವ ಅಚಿತ್ಕಳೆ ಚಂಚಲ. ಅದು ದೃಗ್ರೂಪ. ಇದು ದೃಶ್ಯರೂಪ. ಅದು ಏಕವಿಧ. ಇದು ವಿವಿಧ. ಅದು ವಾಙ್ಮನಾತೀತ. ಇದು ಕರಣೇಂದ್ರಿಯ ಸೀಮಿತ.

ಮಾಯಾ ರೂಪ ಮಲ ಜೀವಾತ್ಮನನ್ನು ಅಜ್ಞಾನಿಯನ್ನಾಗಿಸಿದೆ. ಅವಿದ್ಯಾ ಅಸ್ಮಿತ ರಾಗ ದ್ವೇಷ ಅಭಿನಿವೇಶಗಳಿಂದ ಕೂಡಿದವನನ್ನಾಗಿಸಿದೆ. ಅಹಂಕಾರ ಮಮಕಾರಗಳ ಪಾಶದಲ್ಲಿರಿಸಿದೆ. ಭವದ ಬಂಧನದಲ್ಲಿರಿಸಿದೆ. ಮಾಯಾಮಲದಿಂದ ಬುದ್ಧಿ ಜಡವಾಗಿದೆ; ಅಸ್ಥಿರವಾಗಿದೆ. ಸೂಕ್ಷ್ಮತನು ಅಂಧಕಾರದಿಂದ ಆವೃತವಾಗಿದೆ. ಕಾರ್ಮಿಕ ಮಲ ಪಂಚಭೂತರೂಪಸ್ಥೂಲತನುವನ್ನು ದೂಷಿತಗೊಳಿಸಿದರೆ ಮಾಯಾಮಲ ಉಳಿದ ಹತ್ತೊಂಬತ್ತು ತತ್ವಮಯ ಸೂಕ್ಷ್ಮತನುವನ್ನು ಕಲುಷಿತಗೊಳಿಸಿರುತ್ತದೆ.

# ಚಿನ್ನಿರೂಪಣ

ಅಚ್ಚಳಿಯದ ಜ್ಯೋತಿಯೇ ಚಿತ್. ಎಲ್ಲೆಲ್ಲಿಯು ತುಂಬಿ ತುಳುಕುವ ಚೇತನವೇಚಿತ್. ಎಲ್ಲವನ್ನು ಬೆಳಗುವ ಆ ಮಹಾಜ್ಞಾನಶಕ್ತಿಯೇ ಚಿತ್, ಆ ಮಹಾ ಚೈತನ್ಯದ ಮಹಾಜ್ಞಾನಕ್ಕೆ ಅಳಿವಿಲ್ಲ; ಅರೆ ಕೊರೆಯಿಲ್ಲ. ಪರಿಚ್ಛಿನ್ನತೆ ಮತ್ತೂ ಇಲ್ಲ. ಶಕ್ತಿವಿಶಿಷ್ಟಾದ್ವೈತವೇ ಚಿತ್. ಪರಮಾತ್ಮ—ಪರಾಶಕ್ತಿ,—ಪರಂ ಜ್ಯೋತಿ ಈ ಮೂರರ ಒಬ್ಬುಳಿಯೇ ಚಿತ್. ಅದು ನಿತ್ಯ ಪರಿಪೂರ್ಣಾಖಂಡ ವಸ್ತು. ಅದುವೇ ಮಹಾ ಸಂಪತ್.

ಶಿವಾದ್ವೈತದಲ್ಲಿ ಕ್ರಿಯಾಶಕ್ತಿಯಂತೆ ಜ್ಞಾನಶಕ್ತಿಯೂ ನಿತ್ಯವಾಗಿದೆ, ನಿರ್ಮಳವಾಗಿದೆ; ಶಿವಾದ್ವೈತದಲ್ಲಿ ಶುದ್ಧಾತ್ಮನಲ್ಲಿ ಅವಿರಳವಾಗಿದೆ. ಇದು ಬರುವುದಲ್ಲ; ಹೋಗುವುದಲ್ಲ. ಬಂದುದು ಹೋಗುವುದು. ಬಾರದ್ದು ಹೋಗದು. ಜೀವನಿಗೆ ಅಜ್ಞಾನವೊಂದು ಆವರಣವೇ ಹೊರತು ಜ್ಞಾನವನ್ನು ಪೂರ್ಣಲಯಗೊಳಿಸಿ ತಾನಿರುವ ಗುಣವಲ್ಲ. ಅಜ್ಞಾನ ಆಗಮಾಪಾಯಿ. ಜ್ಞಾನ ಚೈತನ್ಯಸ್ಥಾಯಿ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಮತ ದಂತೆ ಜ್ಞಾನವು ಮಾಹೇಶ್ವರಾಂಗ ಸ್ವರೂಪವಾಗಿದೆ; ನಿತ್ಯವಾಗಿದೆ. ಗುರು ಲಿಂಗ ಸ್ವರೂಪವೂ ಆಗಿದೆ. ಅನಾದಿನಿಧನ ಸ್ವರೂಪವಾಗಿದೆ. ಸತ್ಯವೂ ಬೃಹತ್ತವೂ ಆಗಿದೆ.

ಜ್ಞಾನ ದ್ವಿವಿಧ. ಒಂದು ವೃತ್ತಿಜ್ಞಾನ: ಇನ್ನೊಂದು ತತ್ತ್ವಜ್ಞಾನ. ವೃತ್ತಿಜ್ಞಾನ ಅನಿತ್ಯ. ತತ್ತ್ವಜ್ಞಾನ ನಿತ್ಯ. ಬೆಂಕಿಯಲ್ಲಿ ಬಿಸಿಯಿರುವಂತೆ ತತ್ತ್ವ ಜ್ಞಾನವು ಆತ್ಮನಲ್ಲಿರುತ್ತದೆ, ಅಗಲದೆ ಅಭಿನ್ನವಾಗಿ ಅವಿನಾಶಿಯಾಗಿರುತ್ತದೆ. ವ್ಯಾಪಕವಾಗಿರುತ್ತದೆ.

ಅನಿತ್ಯವೆಂದರೆ ಸರ್ವಸ್ವನಾಶವಲ್ಲ; ಅವ್ಯಕ್ತಭಾವ ಅಥವಾ ತಿರೋಭಾವ. ಜಡ ಮತ್ತು ಭಿನ್ನವಾದುದು ಅನಿತ್ಯವೆಂಬ ಅದ್ವೈತವಾದವನ್ನು ಶಿವಾದ್ವೈತವು

ಒಪ್ಪುವುದಿಲ್ಲ, ಶಿವಾದ್ವೈತದಲ್ಲಿ ಅನಿತ್ಯ ಅಥವಾ ಅಸತ್ಯ ತತ್ತ್ವವೇ ಇಲ್ಲ.

ತತ್ತ್ವಜ್ಞಾನ, ವೃತ್ತಿಜ್ಞಾನಗಳನ್ನೇ ಆತ್ಮಜ್ಞಾನ, ಅನಾತ್ಮಜ್ಞಾನಗಳೆಂದು ನಾಮಾಂತರಗಳಿಂದ ನಿರ್ದೇಶಿಸುವುದುಂಟು. ಹೇಗೆ ಹೇಳಿದರೂ ಒಂದೆ !

ಚೇತನ ಪ್ರಕಾಶವೇ ಚಿತ್ಪ್ರಕಾಶ. ಜಡಪ್ರಕಾಶವೇ ಅಚಿತ್ಪ್ರಕಾಶ. ಇವೆರಡಕ್ಕೆ ವ್ಯತ್ಯಾಸವಿದ್ದರೂ ಇವೆರಡು ಅತ್ಯಂತ ಭಿನ್ನವಲ್ಲ. ಆ ಚಿತ್ಪ್ರಕಾಶವನ್ನು ಅಂಗೀಕರಿಸಿ ಅಚಿತ್ ಅಲ್ಪಾಂಶದಲ್ಲಿ ಪ್ರಕಾಶಿಸುತ್ತದೆ, ಚಿದ್ವಸ್ತು ಅಚಿದ್ವಸ್ತುವಿಗೆ ಅಧಿಷ್ಠಾನವಾಗಿರುತ್ತದೆ. ಆದ್ದರಿಂದ ಚಿತ್ಪ್ರಕಾಶವೇ ಅಚಿತ್‌ದಲ್ಲಿ ಅಂಶಾತ್ಮಕವಾಗಿರುತ್ತದೆ.

ಸತ್ ಮತ್ತು ಚಿತ್—ಇವೆರಡು ವಿಕಾರಿ ಅವಿಕಾರಿ ಎಂದು ಎರಡು ಬಗೆಯಾಗಿವೆ. ವಿಕಾರಿ ಸತ್ ಚಿತ್‌ಗಳನ್ನು ಕಳೆದುಕೊಳ್ಳುವುದೇ ಭಕ್ತ-ಮಾಹೇಶ್ವರ ಸ್ಥಲಗಳೆರಡರ ಸಾಧನೆ.

ಚಿತ್ ಸಂಕೋಚವಾದ ಮಾಯಿಯ ಮಲ ನಿವೃತ್ತಿಗೆ ಮಂತ್ರ ದೀಕ್ಷೆ ಅಥವಾ ಶಿವಸಂಸ್ಕಾರ ಕಾರಣ. ಈ ಸಂಸ್ಕಾರದಿಂದ ಮಾಯಾಮಲ ನಿವೃತ್ತಿಯಾಗಿ ಜ್ಞಾನ ಮತ್ತು ಸುಗುಣಗಳ ಉತ್ಪತ್ತಿಯಾಗಿ ಭಕ್ತನು ಮಾಹೇಶ್ವರತ್ವಕ್ಕೇರುತ್ತಾನೆ.

"ನಿಂಕಲ ಜ್ಞಾನಚಿತ್ತುವೆ ಬಲಿದು ಚಿಚ್ಛಕ್ತಿಯಾದಲ್ಲಿ
ಆ ಚಿಚ್ಛಕ್ತಿಯ ಸಂಗದಿಂದ ನೀನು ಮಹಾಲಿಂಗವಾದಲ್ಲಿ..."

ಎಂದು ತೋಂಟದ ಸಿದ್ಧಲಿಂಗೇಶ್ವರರು ಮಹಾಲಿಂಗ—ಐಕ್ಯಾಂಗಳ ಉತ್ಪತ್ತಿನಿರೂಪಣ ಮಾಡುತ್ತ ಜ್ಞಾನವೇ ಬಲಿದು ಚಿತ್ ಆಗುವುದನ್ನು ಅರುಹಿದ್ದಾರೆ.

ಪರಮಾತ್ಮನ ಚಿದಂಶವೇ ಆತ್ಮ. ಆತ್ಮನ ಚಿತ್ಪರಿಪೂರ್ಣತೆಯೇ ಪರಮಾತ್ಮ. ಮಾಹೇಶ್ವರಸ್ಥಲದ ಗುರುಲಿಂಗಕ್ಕೆ ಪರಶಿವನ ಚಿಲ್ಲಕ್ಷಣ ಸಂಬಂಧ.

ಗುರುಲಿಂಗದೊಳಗಿನ ಮಹಾ ಲಿಂಗಕ್ಕೆ ಜ್ಞಾನ ಚಿಚ್ಛಕ್ತಿ ಅಥವಾ ಜ್ಞಾನ ಚಿತ್ಕಳಾ ಸಂಬಂಧ,

"ನಿಂಕಲ ಶಿವತತ್ತ್ವದಲ್ಲಿ ಜ್ಞಾನ ಚಿತ್ತು ಉದಯಿಸಿತ್ತು.
ಆ ಚಿತ್ತಿಃಂದ ಅಕಾರ ಉಕಾರ ಮಕಾರಂಗಳೆಂಬ
ಅಕ್ಷರತ್ರಯಂಗಳಾದವು, ಆಕಾರವೇನಾದ, ಉಕಾರವೇ ಬಿಂದು ;
ಮಕಾರವೇ ಕಳೆ, ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು,
ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣಮ ಉತ್ಪತ್ತಿಯಾಯಿತ್ತು..."

ಪರಶಿವನ ನೆನಹೇ ಚಿತ್. ಆ ಚಿತ್ ಶಕ್ತಿಯೇ ಪ್ರಣವೋತ್ಪತ್ತಿಗೆ ಕಾರಣವಾಗಿ ನಾದ ಬಿಂದು ಕಳೆಗಳಿಗೆ ಆಧಾರವಾಗಿ ಮಾತೃಸ್ಥಾನದಲ್ಲಿದೆ. "ತನ್ನ ಸುಗುಣಾನಂದ ಲೀಲೆಗೊದಗಿದಂಥಾದ್ದೇ ಚಿತ್ತು. ಆ ಚಿತ್ತಿನ ವಿಲಾಸ ದಿಂದ ತಾನೇ ನಿಃಕಲ ಲಿಂಗವು ; ಆ ಚಿತ್ತಿನ ಚಿನ್ನಾದವೇ ಸುನಾದ. ಆ ಚಿತ್ತುವಿನ ಚಿದ್ಬಿಂದುವೇ ಬಿಂದು ಪ್ರಕಾಶ : ಆ ಚಿತ್ತುವಿನ ಚಿತ್ಕಳೆಯೇ ಪ್ರಕಾಶ ತೇಜೋ ಮೂರ್ತಿಯಾಗಿ, ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ ಎಂಬೀ ಚತು ರ್ವಿಧವು ಗಟ್ಟಿಗೊಂಡು ಅಖಂಡಗೊಳಕಾಕಾರ ತೇಜೋ ಮೂರ್ತಿಯಾಗಿ ನಿಂದು ಮಹಾಲಿಂಗವೆನಿಸಿತ್ತು."

# ನಿರೂಪಣ

'ತತ್ ತ್ವಮಸಿ' ಎಂಬುದು ವೇದಾಂತ ಮತ. 'ತ್ವಂ ತದಸಿ' ಎಂಬುದು ಶಿವಸಿದ್ಧಾಂತ ಮತ. ಈ ಮಾತನ್ನು ಭಕ್ತ ಸಂಪುಟದಲ್ಲಿ ಬಿತ್ತರಿಸಿದ್ದೇವೆ. ಇದನ್ನನುಸರಿಸಿ 'ತ್ವಂ' ಪದ ವಿಚಾರ ಭಕ್ತ ಸ್ಥಲದಲ್ಲಿ ನಡೆದಿದೆ. 'ತ್ವಂ' ಪದ ವಾಚ್ಯನೆ ಭಕ್ತ. 'ತತ್' ಪದ ವಾಚ್ಯನೆ ಮಾಹೇಶ್ವರ. ಅಂತಹ ಮಾಹೇಶ್ವರ ಸ್ಥಲ ವಿಚಾರ ವಿಮರ್ಶೆ ಈ ಸಂಪುಟದಲ್ಲಿ ಸಾಗಿದೆ.

ಮಾಹೇಶ್ವರತ್ವವು ಅಂಗನಿಷ್ಠವೂ ಅಹುದು ; ಲಿಂಗನಿಷ್ಠವೂ ಅಹುದು. ಅಂಗನಿಷ್ಠವು ಅಪೂರ್ಣವಾಗಿದ್ದು ಪೂರ್ಣತ್ವವನ್ನು ಪಡೆವುದೆ ಮಾಹೇಶ್ವರಾಂಗನ ಮಣಿಹ. ಪೂರೈಸುವಂತೆ ಮಾಡುವುದೆ ಮಾಹೇಶ್ವರ ಸ್ಥಲದ ಗುರುಲಿಂಗದೇವನ ಅನುಗ್ರಹ. ಮಾಹೇಶ್ವರಾಂಗನು ನಿಷ್ಠಾಭಕ್ತಿಯಿಂದ ಸುಬುದ್ಧಿ ಹಸ್ತದಲ್ಲಿ ರುಚಿ ಪದಾರ್ಥವನ್ನು ಅರ್ಪಿಸುವ ರೂಪದಲ್ಲಿ ಆರಾಧಿಸುತ್ತಾನೆ. ಇದೇ ಸ್ಥಲದ ಗುರುಲಿಂಗದೇವನು ತನ್ನ ಜ್ಞಾನಶಕ್ತಿಯಿಂದ ಸುರುಚಿ ಪ್ರಸಾದವನ್ನು ಅನುಗ್ರಹಿಸಿ ಅಂಗನನ್ನು ಲಿಂಗದೇವನನ್ನಾಗಿಸುತ್ತಾನೆ ; ಪೂರ್ಣ ಮಾಹೇಶ್ವರನನ್ನಾಗಿಸುತ್ತಾನೆ.

ಮಾಹೇಶ್ವರತ್ವಕ್ಕೆ ಮೂರು ಮುಖಗಳುಂಟು, ವೈಯಕ್ತಿಕ ಸಾಮಾಜಿಕ, ಸರ್ವಜಾಗತಿಕ ಇವೇ ಮಾಹೇಶ್ವರತ್ವದ ಮೂರು ಮುಖಗಳು ! ಇವು ಒಂದಕ್ಕೊಂದು ಉತ್ತರೋತ್ತರ ಪೂರಕವಾಗಿವೆ.

ವೈಯಕ್ತಿಕ ಮಾಹೇಶ್ವರತ್ವವು ತನಗಳವಡಬೇಕಾದರೆ ತಾನು ಮುಮ್ಮೊದಲು ಭಕ್ತನಾಗಬೇಕು. ಭಕ್ತನಾಗಬೇಕಾದರೆ ಪ್ರಥಮದಲ್ಲಿ ಪಿಂಡನಾಗಿ ಉದಯನಾಗಬೇಕು. ಪಿಂಡನೆಂದರೆ ಶುದ್ಧಾಂತಃಕರಣವುಳ್ಳ ದೇಹಿ. ಇಪ್ಪತ್ತೈದು ಭೂತ ತತ್ತ್ವವುಳ್ಳದೇ ದೇಹ. ಈ ದೇಹವುಳ್ಳವನೆ ದೇಹಿ; ಇವನನ್ನೆ ಪಿಂಡನೆಂದು ಅಂಗನೆಂದು ಹೇಳುತ್ತೇವೆ. ಇವನು ತನ್ನ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಪ್ರಾಣಾದಿ ವಾಯು, ಶಬ್ದಾದಿವಿಷಯ, ಅಂತಃಕರಣ ಪಂಚಕ ಇವುಗಳ ಮೇಲೆ ಮಹೇಶ್ವರನಾಗಿರಬೇಕು. ಅಂದರೆ ಆತ್ಮನು ತಾನು ಶುದ್ಧ

ಜೀವನಾಗಿ ಇವಗಳನ್ನು ತನ್ನ ಹಿಡಿತದಲ್ಲಿರಿಸಿಕೊಂಡಿರಬೇಕು. ಸರ್ವೇಂದ್ರಿಯ ಸಂಯಾಮ ಶೀಲನಾಗಿರಬೇಕು. ಅಂತಾದಾಗ ವೈಯಕ್ತಿಕ ಮಾಹೇಶ್ವರತ್ವವು ಸಿದ್ಧಿಸುತ್ತದೆ. ಮುಂದೆ ಸಾಮಾಜಿಕ ಮಾಹೇಶ್ವರತ್ವಕ್ಕೆ ಪೋಷಕವಾಗುತ್ತದೆ.

ಸಾಮಾಜಿಕರ ಶುಭಾಶುಭಗಳನ್ನು ಸುಖದುಃಖಗಳನ್ನು ಆಗುಹೋಗುಗಳನ್ನು ನಿರ್ವಹಿಸಿ ನಿತ್ತರಿಸುವುದೇ ಸಾಮಾಜಿಕ ಮಾಹೇಶ್ವರತ್ವ. ಸಾಮಾಜಿಕರಿಗೆ ಬೇಕಾದ ಆಚಾ–ವಿಚಾರಗಳನ್ನು ಅಂಗ–ಲಿಂಗಸಂಸ್ಕಾರಗಳನ್ನು ನಿರೂಪಿಸುವುದೆ ಸಾಮಾಜಿಕ ಮಾಹೇಶ್ವರತ್ವ. ಸರ್ವವಿಧದಲ್ಲಿ ಸಾಮಾಜಿಕರಿಗೆ ಸನ್ಮಾನ್ಯವಾಗಿರುವುದೇ ಸಾಮಾಜಿಕ ಮಾಹೇಶ್ವರತ್ವ.

ಸಾಮಾಜಿಕ ಮಾಹೇಶ್ವರತ್ವದ ಬೆಂಬಲದಿಂದ ಸರ್ವಜಗತ್ಪೂಜ್ಯನಾಗಿ ಜೀವಿಸುವುದೆ ಜಾಗತಿಕ ಮಾಹೇಶ್ವರತ್ವ. ಈ ಮೂರನ್ನು ಸಂಪಾದಿಸುವುದೆ ಈ ಸ್ಥಲದ ಮಾಹೇಶ್ವರಾಂಗನ ಮೂಲಗುರಿ; ಮುಖ್ಯ ಗುರಿ.

ಈಶತ್ವವು ಪಾರಮಾರ್ಥಿಕವಾಗಿದ್ದಂತೆ ಪ್ರಾಕೃತಿಕವೂ ಆಗಿದೆ. ಪರಮನಿಷ್ಠ ಈಶತ್ವವು ನಿಸರ್ಗವಾಗಿ ಉತ್ಕೃಷ್ಟವಾಗಿರುತ್ತದೆ. ಪ್ರಕೃತಿನಿಷ್ಠ ಈಶತ್ವವು ನಿಸರ್ಗವಾಗಿ ಅನುತ್ಕೃಷ್ಟವಾಗಿರುತ್ತದೆ. ಪ್ರಕೃತಿ ನಿಯತಿಗೆ ಸಿಕ್ಕ ಜೀವಾತ್ಮನು ಆಚಾರ ಪರಾಯಣನಾಗಿ ವೈರಾಗ್ಯಭಾಗ್ಯವಂತನಾಗಿ ಸಹಜ ಮಾಟ (ದಾನ) ಸ್ಥಲ ನಿಷ್ಣಾತನಾಗಿ ಮಾಹೇಶ್ವರತ್ವದ ನಿಲವಿಗೆ ನಿಲುಕಬೇಕಾಗುತ್ತಬೆ. ಈ ವಿಚಾರವನ್ನು ಶ್ರೀ ಜಗದುರು ರೇಣುಕ ಶಿವಾಚಾರ್ಯರು ಹೀಗೆ ನಿಸೂಪಿಸಿದ್ದಾರೆ:

"ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।
ಬ್ರಹ್ಮಾದಿ ಸ್ಥಾನವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥
ಭಕ್ತೇರ್ಯದಾ ಸಮುತ್ಕರ್ಷೋ ಭವೇದ್ವೈರಾಗ್ಯಗೌರವಾತ್ ।
ತದಾ ಮಾಹೇಶ್ವರಃ ಪ್ರೋಕ್ತೋ ಭಕ್ತಃ ಸ್ಥಿರವಿವೇಕವಾನ್ ॥"

ಭಕ್ತಸ್ಥಲದ ಕೊನೆಯಲ್ಲಿ ಸೋಪಾಧಿದಾನ. ನಿರುಪಾಧಿ ದಾನ, ಸಹಜ ದಾನಗಳು ನಿರೂಪಿತವಾಗಿವೆ. ಇವುಗಳಲ್ಲಿ ಸೋಪಾಧಿ-ನಿರುಪಾಧಿ ದಾನಗಳನ್ನು ಬಿಟ್ಟು ಕೇವಲ ಸಹಜದಾನದಲ್ಲಿ ನಿರತನಾಗಿ ನಿಷ್ಣಾತ ನೆನಿಸಿರಬೇಕು. ಬ್ರಹ್ಮಾದಿ ಪದವಿಗಳ ಬಯಕೆಯನ್ನು ಬಿಟ್ಟವನಾಗಿರಬೇಕು. ಶಿವೈಕ ನಿಷ್ಠೆಯುಳ್ಳವನಾಗಿರ

ಬೇಕು. ಸಹಜ ತ್ಯಾಗಭಾವದಿಂದ ಭಕ್ತಿಗೆ ಬಣ್ಣವೇರಿರಬೇಕು. ಸ್ಥಿರ ವಿವೇಕ ಶಾಲಿಯಾಗಿರಬೇಕು. ಅಂಥವನು ಮಾಹೇಶ್ವರನೆಂದೆನಿಸುತ್ತಾನೆ.

ಭಕ್ತಿ ಜ್ಞಾನ ವೈರಾಗ್ಯ ಈ ಮೂರುಳ್ಳವನು ಮಾಹೇಶ್ವರನೆಂದು ಶ್ರೀ ಜ. ರೇಣುಕ ಶಿವಾಚಾರ್ಯರು ನಿರೂಪಿಸಿದ್ದಾರೆ. ಬರೀ ಭಕ್ತಿ ಸಾಲದು. ಭಕ್ತಿ ಉತ್ಕರ್ಷವಾಗಿರಬೇಕು; ನಿಷ್ಠೆಯಿಂದೊಡಗೂಡಿರಬೇಕು. ಅಂತೆಯೇ ಜ್ಞಾನ ಸ್ವಯವಾಗಿರಬೇಕು; ಸ್ಥಿರವಾಗಿರಬೇಕು; ಪರವಾಗಿರಬೇಕು. ವೈರಾಗ್ಯವು ಸಹಜದಾನದಿಂದ ಕೂಡಿ ಸೃಷ್ಟಿಕರ್ತನಾದ ಬ್ರಹ್ಮನೇ ಮುಂತಾದ ಸ್ವರ್ಗೀಯ ದೇವತೆಗಳ ಫಲ ಪದವಿಗಳ ಆಶೆಯನ್ನು ದೂರ ದೂಡಿ ತೊಳಗಿ ಬೆಳಗುವಂತಹದಾಗಿರಬೇಕು. ಇಂತಹ ಭಕ್ತಿ ಜ್ಞಾನ ವೈರಾಗ್ಯಗಳಿಂದ ಮಾಹೇಶ್ವರತ್ವವು ಸಫಲವಾಗುತ್ತದೆ.

# ಈಶ-ಮಹೇಶ

ಪಶು ಜೀವ. ಪಾಶಬದ್ಧನಾಗಿ ಪಶುವಾಗಿದ್ದಾನೆ ಜೀವ. ಪಾಶರಹಿತನಾಗಿ ಪ್ರೇರಕನಾಗಿ ಈಶನೆನಿಸಿದ್ದಾನೆ ದೇವ. ಮಾಯಾಧಿಷ್ಠಾನನಾಗಿದ್ದಾನೆ ಈಶ. ಮಾಯಾಮಲ ವಿಶಿಷ್ಟನಾಗಿದ್ದಾನೆ-ಪಶುವೆನಿಸಿದ ಜೀವ. ಇದು ಜೀವೇಶರ ವಿಚಾರ.

ಇನ್ನು ಈಶ ಅಥವಾ ಈಶ್ವರನನ್ನು ಕುರಿತು ಹಲವರು ಹಲವು ಬಗೆಯಾಗಿ ಹೇಳಿದ್ದಾರೆ. ಚೈತನ್ಯದ ಸಮೀಪದಲ್ಲಿರುವ ಪ್ರಕೃತಿಯನ್ನು ಪ್ರೇರೇಪಿಸುವಾತನೇ ಈಶ್ವರನೆಂದು, ಜೀವರ ಕರ್ಮಗಳಿಗೆ ತಕ್ಕ ಫಲಗಳನ್ನು ಕೊಡತಕ್ಕವನೆಂದು ಯೋಗಾಚಾರ್ಯರ ಮತ. ಅಸಂಗನಾದ ಈಶ್ವರನಿಗೆ ನಿಯಾಮಕತ್ವ ಧರ್ಮವಿಲ್ಲೆಂದು, ಈಶ್ವರನಿಗಿರುವ ಜ್ಞಾನ ಪ್ರಯತ್ನಾದಿಗಳು ಆತನ ಇಚ್ಛಾರೂಪಗಳೆಂದು ಜೀವನಿಗೆ ಈಶ್ವರನು ಭಿನ್ನನೆಂದು ನೈಯಾಯಿಕರ ಮತ. ನ್ಯಾಯಮತದಂತೆ ಈಶ್ವರನ ಜ್ಞಾನ ನಿತ್ಯವೆಂದು ಹೇಳಿದರೆ ಸೃಷ್ಟಿಯ ಆರಂಭಕಾಲದಲ್ಲಿ ಈಶ್ವರನಿಗೆ ಜ್ಞಾನವುಂಟಾಯಿತೆಂದು ಹೇಳುವ ಶ್ರುತಿಗೆ ವಿರೋಧವಾಗುತ್ತದೆ. ಆದ್ದರಿಂದ ನೈಯಾಯಿಕ ಅಭಿಪ್ರಾಯ ಒಪ್ಪತಕ್ಕದಲ್ಲವೆಂದು ಹಿರಣ್ಯಗರ್ಭೋಪಾಸಕರು ಹೇಳುತ್ತಾರೆ. ಇವರ ಮತದಲ್ಲಿ ಹಿರಣ್ಯಗರ್ಭನೇ ಈಶ್ವರನು. ಇವರ ಈಶ್ವರನಿಗೆ ಲಿಂಗಶರೀರವುಂಟು. ಲಿಂಗಶರೀರವಿದ್ದರೂ ಅವಿದ್ಯಾದಿಗಳಿಲ್ಲ. ಇವರ ಹಿರಣ್ಯಗರ್ಭನು ಜೀವನಾಗುವುದಿಲ್ಲ. ವಿರಾಡುಪಾಸಕರು ವಿರಾಟ್ಪುರುಷನೇ ಈಶ್ವರನೆಂದು ಹೇಳುತ್ತಾರೆ. ಸ್ಥೂಲದೇಹವಿಲ್ಲದೆ ಲಿಂಗ (ಸೂಕ್ಷ್ಮ) ದೇಹವಿರದು. ಆದ್ದರಿಂದ ಹಿರಣ್ಯಗರ್ಭನು ಈಶ್ವರನಾಗನೆಂದು ಇವರು ನಿರಾಕರಿಸುತ್ತಾರೆ. ಪ್ರಾಜಾಪತರು ತಮ್ಮ ಪ್ರಜಾಪತಿಯೇ ಈಶ್ವರನೆಂದು, ವೈಷ್ಣವರು ವಿಷ್ಣುವೇ ಈಶ್ವರನೆಂದು, ಶೈವರು ಶಿವನೇ ಈಶ್ವರನೆಂದು, ಗಾಣಪತ್ಯರು ಗಣಪತಿಯೇ ಈಶ್ವರನೆಂದು ಮುಂತಾಗಿ ಹೇಳುವರು. ಮತ್ತು ಅದ್ವೈತಿಗಳು ಮಾಯೆಯಲ್ಲಿರುವ ಚೇತನಾಭಾಸವನ್ನೇ ಈಶ್ವರನೆಂದುಹೇಳುವರು.

ಚೇತನ ಪ್ರತಿಬಿಂಬವು ಈಶ್ವರನೆಂಬುದನ್ನು ವೀರಶೈವರು ಒಪ್ಪುವುದಿಲ್ಲ. ಚೇತನ ಪ್ರತಿಬಿಂಬವೆಂದು ಹೇಳಿದರೆ ಈಶ್ವರನಿಗೆ ಜಡತ್ವಪ್ರಾಪ್ತಿಯುಂಟಾಗುತ್ತದೆ, ಸಕಲಜೀವ ಪ್ರೇರಕತ್ವ ಈಶ್ವರನಿಗೆ ಉಂಟಾಗದೆ ಹೋಗ ಬೇಕಾಗುತ್ತದೆ. ಮಾಯಾಮಯ ಪ್ರಕೃತಿಗೆ ಆಶ್ರಯನಾದಾತಾನೇ ಈಶ್ವರನು, ಅವನೇ ಮಹೇಶ್ವರ ನೆಂದು ವೀರಶೈವಾಭಿಮತ.

ಮೇಘಾಕಾಶವೇ ಈಶ್ವರ. ಮೇಘವೇ ಮಾಯೆ, ಮೇಘಜಲವೇ ಬುದ್ಧಿವಾಸನ. ಬುದ್ಧಿವಾಸನಾರೂಪ ಮೇಘಜಲದಲ್ಲಿ ಮೇಘಾಕಾಶಸಮಾನನಾದ ಈಶ್ವರನು ಪ್ರತಿಬಿಂಬಿಸಿ ಚಿದಾಭಾಸನೆನಿಸುತ್ತಾನೆಂದು ಅದ್ವೈತಮತ, ಇದನ್ನು ಶಿವಾದ್ವೈತವು ನಿರಾಕರಿಸುತ್ತದೆ. ಆಕಾಶಕ್ಕೂ ಮೇಘಕ್ಕೂ ಭೇದವಿರುವುದ ರಿಂದ "ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಃ" ಎಂಬ ಶ್ರುತಿಮತಕ್ಕೆ ವಿರೋಧವಾಗುತ್ತದೆ. ಅದ್ದರಿಂದ ಶುದ್ಧ ಮಾಯೆ ಈಶ್ವರ ನಿಗೆ ಭಿನ್ನವಲ್ಲ. ಆದಿಲ್ಲದೆ ಅತನಿಗೆ ಪ್ರೇರಕಶಕ್ತಿ ಸಮನಿದು. ಆದ್ದರಿಂದ ಅಭಿನ್ನಮಾಯಾಧಿಷ್ಠಾನನಾಗಿದ್ದಾನೆ ವೀರಶೈವ ಈಶ್ವರ. ಅವಿದ್ಯೋಪಾಧಿಯೇ ಈಶ್ವರ ಭಾವಕ್ಕೆ ಕಾರಣವೆಂದು ಆದ್ವೈತಮತ ಹೇಳಿದರೆ, ಶುದ್ಧ ವಿದ್ಯಾಸ್ವರೂ ಪವೇ ಈಶ್ವರನೆಂದು ಶಿವಾದ್ವೈತಮತ ಹೇಳುತ್ತದೆ.

ಈಶನಿಗೆ ಅಭಿನ್ನ ಮಾಯಾಧಿಷ್ಠಾನತ್ವದಿಂದ ಮಹೇಶತ್ವ ಪ್ರಾಪ್ತವಾಗಿದೆ. ಮಹೇಶ್ವರನು ಸರ್ವಾಂತರ್ಯಾಮಿಯಾಗಿದ್ದಾನೆ, ಸರ್ವಪ್ರೇರಕನಾಗಿದ್ದಾನೆ. ಸದಾಮುಕ್ತನಾಗಿದ್ದಾನೆ. ಮಹೇಶ್ವರನಿಗೆ ಅಜ್ಞಾನಾವರಣಾದಿಗಳಿಲ್ಲ, ಜನನ ಮರಣಾದಿಗಳಿಲ್ಲ. ಆಧಿ ಉಪಾಧಿಗಳಿಲ. ಮಹೇಶ್ವರನು ಮಹಾಜ್ಞಾನಿ: ಮಹಾದಾನಿ.

ಆದ್ವೈತವಲ್ಲಿ ಈಶ್ವರನಿಗೆ ಮಾಯಾರೂಪ ಅಜ್ಞಾನವು ಉಪಾಧಿಯಾಗಿದೆ. ಎಲ್ಲಿ ಉಪಾಧಿಯಿದೆಯೋ ಅಲ್ಲಿ ಬಂಧವಿರುತ್ತದೆ. ಆಭಾಸವೂ ಬಂಧಕ್ಕೆ ಕಾರಣ. ಇದರಿಂದಾಗಿ ಅದ್ವೈತಮತದ ಈಶ್ವರನು ಬಂಧಸಹಿತನೆನಿಸುತ್ತಾನೆ. ಆಭಾಸ ಮತ್ತು ಉಪಾಧಿಗಳನ್ನೇ ಅಂಗೀಕರಿಸದ ಶಿವಾದ್ವೈತ ಸಿದ್ಧಾಂತವಲ್ಲಿ ಈಶ್ವರನಿಗೆ ಬಂಧಪ್ರಾಪ್ತಿಯೇ ಇಲ್ಲ. ಪ್ರತಿಯಾಗಿ ಜೀವರ ಬಂಧಮೋಚಕನಾಗಿ ದ್ದಾನೆ. ಅವಿದ್ಯೆ, ಅಜ್ಞಾನ, ಆಭಾಸ, ಉಪಾಧಿ ಮುಂತಾದವು ಶಿವಾದ್ವೈತಮತದ ಈಶ್ವರನ ಬಳಿಯಲ್ಲಿ ಸುಳಿಯಲು ಸಾಧ್ಯವಿಲ್ಲ.

ಶಿವಾದ್ವೈತದ ಮಹೇಶ್ವರನು ಸರ್ವಸಮರ್ಥನು. ಭಕ್ತಾನುಗ್ರಾಹಕನು. ಷಡ್ಗುಣೈಶ್ವರ್ಯಸಂಪನ್ನನು. ಸತ್ತಾಸ್ಫೂರ್ತಿಯುಳ್ಳವನು. ಚಿನ್ಮೂರ್ತಿಯು. ಮತ್ತು ಸಮಷ್ಟಿಚೇತನನು. ಪರಶಿವಚೈತನ್ಯದಿಂದೊಗೆದ ಪ್ರಥಮವಿಶಿಷ್ಟಾಂಶನು, ಆವರಣ ರಹಿತನು. ಸ್ವಯಂಪ್ರಕಾಶನು. ಎಲ್ಲ ವಿದ್ಯೆಗಳಿಗೆ ಮೂಲನು. ಎಲ್ಲ ಭೂತಗಳಿಗೆ ಒಡೆಯನು. ಎಲ್ಲ ಜೀವರಿಗೆ ಪ್ರೇರಕನು. ಸೃಷ್ಟಿಕರ್ತನಾದ ಬ್ರಹ್ಮನಿಗೆ ಅಧಿಪತಿಯು. ಶಿವಸ್ವರೂಪನು.

ವೀರಶೈವ ಈಶ್ವರನು ಮೂವತ್ತಾರು ತತ್ವಗಳಲ್ಲಿ ನಾಲ್ಕನೆಯವನು. ಶಿವ, ಶಕ್ತಿ, ಸದಾಶಿವರ ನಂತರ ಈಶ್ವರನ ಸ್ಥಾನ ನಾಲ್ಕನೆಯದಾಗಿ ಮೀಸಲಾಗಿದೆ. ಐದ್ದನೆಯದೇ ಶುದ್ಧ ವಿದ್ಯೆ. ಈ ಐಯ್ದು ಶುದ್ಧಾಧ್ವಗಳು. ಚಿತ್ ತತ್ವಗಳು. ಇದರಿಂದಾಗಿ ಈಶ್ವರನು ಚಿತ್‌ತತ್ವವೆನಿಸಿದ್ದಾನೆ.

ಶಿವ, ಸದಾಶಿವ, ಮಹೇಶ ಎಂದು ತತ್ತ್ವತ್ರಿವಿಧ. ಶಿವ ನಿಷ್ಕಲ, ಸದಾಶಿವ ಸಕಲ ನಿಷ್ಕಲ, ಮಹೇಶ ಸಕಲ.

# ಮಹೇಶ್ವರ-ಮಾಹೇಶ್ವರ ಮೀಮಾಂಸೆ

"ಅಹಂ ಮಾಹೇಶ್ವರ ಪ್ರಾಣೋ ಮಮ ಪ್ರಾಣೋ ಮಾಹೇಶ್ವರ ।"

ಮಹೇಶ್ವರನನ್ನು ಆರಾಧಿಸುವವನೆ ಮಾಹೇಶ್ವರನು. "ಮಹಾಂಶ್ಚಾಸೌ ಈಶ್ವರಶ್ಚ-ಮಹೇಶ್ವರಃ" ಎಂಬಂತೆ ದೇವಾದಿ ದೇವತೆಗಳಿಗೆಲ್ಲ ದೊಡ್ಡವನೂ ಒಡೆಯನೂ ಆದ ಶಿವ ಮಹಾದೇವನನ್ನು ಆರಾಧಿಸಿ ಆತನ ಅನುಗ್ರಹವನ್ನು ಪಡೆಯಲಿರುವಾಗ ಉಳಿದವರ ಆಸೆಯಿಂದೇನು? ಅಂತಹ ಮಹೇಶ್ವರನ ಆರಾಧನಾಸಕ್ತ ಭಕ್ತನು ಮಾಹೇಶ್ವರನೆನಿಸುವುದರಲ್ಲಿ ಔಚಿತ್ಯವಿಲ್ಲದಿಲ್ಲ. "ಮಹಾನ್ ಈಶ್ವರೋ ಯಸ್ಯ ಸಃ— ಮಾಹೇಶ್ವರಃ" ಎಂಬ ವಿಗ್ರಹವು ಮಾಹೇಶ್ವರಾಂಗನಿಗೆ ಸಲ್ಲುತ್ತದೆ. ಮಹೇಶ್ವರನು ಆರಾಧ್ಯ; ಮಾಹೇಶ್ವರನು ಆರಾಧಕ,

ಮಾಹೇಶ್ವರಾಂಗನ ಆರಾಧ್ಯಮೂರ್ತಿಗೆ ಮಹೇಶ್ವರ-ಮಹಾದೇವ, ಗುರುಲಿಂಗ-ಗುರುದೇವ ಎಂದು ಹೆಸರುಗಳಿವೆ. ಇವು ನಾಲ್ಕು ಸಮಾನಾರ್ಥಕ ಸೂಚಕಗಳು. ಮಹೇಶ್ವರನೆಂದರೂ ಗುರುಲಿಂಗವೆಂದರೂ ಒಂದೇ ಅರ್ಥ. ಗುರುದೇವನೇ ಮಹಾದೇವನು. 'ಗುರುದೇವಾತ್ ಪರಂ ನಾಸ್ತಿ' 'ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ.' 'ಗುರುದೇವೋ ಮಹಾದೇವೋ ಗುರುದೇವಃ ಸದಾಶಿವಃ' 'ಗುರುದೇವೋ ಮಹೇಶ್ವರಃ' ಮುಂತಾದ ಮಾತುಗಳು ಏಕೋದೇವಸೂಚಕಗಳು. ಗುರುಲಿಂಗವೆಂದರೂ ಮಹೇಶ್ವರನೆಂದರೂ ಒಬ್ಬನೇ ದೇವ. ಈ ಮಾತಿಗೆ ಪ್ರತಿಯಿಲ್ಲ; ಶ್ರುತಿಸಾಕ್ಷಿಯಿಲ್ಲದಿಲ್ಲ.

ಗುರುಲಿಂಗನಾಮಕ ಮಹೇಶ್ವರನು ಸರ್ವಜ್ಞನು ಸರ್ವಕರ್ತನು ಸರ್ವವ್ಯಾಪಕನು ಆಗಿದ್ದಾನೆ. ಮಹೇಶ್ವರನಿಗೆ ಜಗವೆಲ್ಲ ಕಣ್ಣು, ಜಗವೆಲ್ಲ ಕಿವಿ, ಜಗವೆಲ್ಲ ಕಾಲು, ಜಗವೆಲ್ಲ ಕೈ. "ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ ! ಸಕಲ ವಿಸ್ತಾರದ ರೂಹು ನೀನೇ ದೇವಾ ! ವಿಶ್ವತೋ ಬಾಹು ನೀನೇ ದೇವಾ ! ವಿಶ್ವತಶ್ಚಕ್ಷು ನೀನೇ ದೇವಾ ! ವಿಶ್ವತೋಮುಖ ನೀನೇದೇವಾ ! ವಿಶ್ವತಃಪಾದ ನೀನೇ

ದೇವಾ ಕೂಡಲಸಂಗಮದೇವಾ !" ಮಹೇಶ್ವರನ ವಿಶ್ವವ್ಯಾಪ್ತಿಯಿದು, ಆತನ ವಿಶ್ವಾಧಿಕ್ಯವನ್ನು ಕುರಿತು ಮುಂದೆ ವಿವೇಚಿಸಲಾಗುತ್ತದೆ.

ಮಹೇಶ್ವರನು ಮಹಾದಾನಿ, ಮಹಾಜ್ಞಾನಿ. ಅವನಿಂದ ಮಾಹೇಶ್ವರಾಂಗನಿಗೆ ಅಳವಡುವುದು ಅಪ್ರತಿಮದಾನ, ಅನುಪಮ ಜ್ಞಾನ. ಮಹೇಶ್ವರನ ಸಾಕ್ಷಾತ್ಕಾರವಾದರೆ ಕಾಮಧೇನು ಕುಟೀರದಲ್ಲಿದ್ದಂತೆ! ನಿಗಮಾಗಮಗಳು ನಾಲಗೆಯ ಮೇಲಿದ್ದಂತೆ ! ಬೇರೆಯವರ ರಕ್ಷಣ-ಶಿಕ್ಷಣಗಳ ಅಗತ್ಯವಿಲ್ಲ. ಒಡಲ ಕಾಳ್ಗತ್ತಲೆ ಓಡಿಹೋಗುವುದು. ಸ್ವಯಂಜ್ಯೋತಿ ಸೋಜ್ವಲಗೊಳ್ಳುವುದು. ಪರಮಾರ್ಥದ ಪರಿಣಾಮವುಂಟಾಗುವುದು. ಅಸಮತೆ ಅಳಿದು ಸರ್ವಸಮತೆ ಸಮನಿಸುವುದು ಋಣ ಅಳಿದು ಗುಣ ಬೆಳದು ಕಾರಣಿಕತೆ ಕೈಗೂಡುವುದು. ಅನೈಷ್ಠಿಕತೆ ಅದರುವುದು. ಅನಿಷ್ಠಿತೆ ಉದುರುವುದು. ಆತ್ಮವಿಕಾಸಕ್ಕೆ ಅಗತ್ಯವಾದ ಬುದ್ಧಿಸ್ಥಿರತೆ ಬುದ್ಧಿಯೋಗಗಳು ಉಂಟಾಗುವವು. ಹಲವಕ್ಕೆ ಹರಿದಾಡದಂತಾಗುವುದು. ನೂರ ಓದಿ, ನೂರ ಕೇಳುವಾಸೆ ಮನದಲ್ಲಿ ಮೊಳೆಯದು. ಅರಿವಿನ ಸಿರಿಗೆ ಅಳತೆಯಿಲ್ಲದಾಗುವುದು. ಅಳಿಮನ ಅಳಿವುದು. ಬುದ್ಧಿ ಬಲ ಬೆಳೆವುದು. ಹುಲಿಯಾಗಿರುವ ಹಮ್ಮು ಹುಲ್ಲೆಯಂತಾಗುವುದು. ರಸನೆ ಜ್ಞಾನರುಚಿಯಲ್ಲಿ ರಮಿಸುವುದು. ಮನ ಜ್ಞಾನಶುಚಿಯಲ್ಲಿ ರಾಜಿಸುವುದು. ಶಾಂತಿಜಲ ಹೆಚ್ಚಿ ಕಾಯಕರಣಮಲ ಕೊಚ್ಚಿಹೋಗುವುವು. ತ್ರಿಕರಣ ಕಳವಳ ಕೆಟ್ಟು ತ್ರಿವಿಧ ಛಲ ನಟ್ಟು ಕಲಿತನ ಬಲಿತು ನಿಲ್ಲುವುದು. ಮಾಹೇಶನು ಮೃತ್ಯುಭಯವನ್ನು ಗೆಲ್ಲುವನು. ಆ ಮಹೇಶ್ವರಲಿಂಗವನ್ನರಿಯಬೇಕಾದರೆ ಮಾಹೇಶ್ವರಾಂಗನೇ ಬೇಕು ; "ಕುರಿವಿಂಡು ಕಬ್ಬಿನ ತೋಟವ ಹೊಕ್ಕು ತೆರನನರಿಯದೆ, ತನಿರಸದ ಪೊರಗಣ ಎಲೆಯನೆ ಮೆಲೆದವು. ನಿಮ್ಮನರಿವುದು ಮದಕರಿಯಲ್ಲದೆ ಕುರಿ ಬಲ್ಲುದೇ ಕೂಡಲಸಂಗಮದೇವಾ ?" ಹೀಗೆ ಧೀರೋದಾತ್ತನಾಗಬೇಕು ಮಾಹೇಶ್ವರನು. ಪ್ರಾಣದಲ್ಲಿ ಅಭಯ, ಪ್ರಾಣಲಿಂಗದಲ್ಲಿ ಭಯ ಭಕ್ತಿ ಉಳ್ಳವನಾಗಿರಬೇಕು. ಗುರುಲಿಂಗಸಾಹಿತ್ಯ ರುಚಿಯುನ್ನು ಆಸ್ವಾದಿಸುವಲ್ಲಿ ಮದಕರಿಯಾಗಿರಬೇಕು ಮಾಹೇಶ್ವರನು. ವಿಶ್ವ ವಿಗರ್ಭಣೆಗೆ ಅಂಜದಂತಿರಬೇಕು.

ಮಾಹೇಶ್ವರನಿಗೆ ಮುಖ್ಯವಾಗಿ ಬೇಕಾದ ಗುಣ ಧೃತಿ. ತ್ರಿವಿಧ ತನುಗಳಲ್ಲಿ ಧೃತಿ ದೃಢವಾಗಿರಬೇಕು. ಅಂತೆಯೇ ತ್ರಿವಿಧಕರಣಗಳಲ್ಲಿಯೂ ಧೃತಿ ದೀಪ್ತಿ

ಗೊಂಡಿರಬೇಕು. ಯಾವಪ್ರಸಂಗದಲ್ಲಿಯೂ ಮಾಹೇಶ್ವರನು ಧೃತಿಗೆಡಬಾರದು, ತ್ಯಾಗದಲ್ಲಿ ಯೋಗದಲ್ಲಿ ಕಾರ್ಯಕರಣದಲ್ಲಿ ನ್ಯಾಯಪಥಪ್ರಯಾಣದಲ್ಲಿ ನಿತ್ಯ ನೈಮಿತ್ತಿಕಾನುಷ್ಠಾನಗಳಲ್ಲಿ ಅನುಭಾವಗೋಷ್ಠಿಯಲ್ಲಿ ಸುಖ-ದುಃಖದಲ್ಲಿ ಲಾಭಾ ಲಾಭದಲ್ಲಿ ಜಯಾಪಜಯದಲ್ಲಿ ರೋಗರುಜಿನದಲ್ಲಿ ಧೃತಿಯನ್ನು ಕೈಬಿಡಬಾರದು ಮಾಹೇಶ್ವರನು. 'ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ.' 'ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯ. ಎಲುದೋರಿದರೆ, ನರಹರಿದರೆ, ಕರುಳು ಕುಪ್ಪಳಿಸಿದರೆ, ನಾ ಧೃತಿಗೆಡೆನಯ್ಯ. ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಗೆ ಕೂಡಲ ಸಂಗ ಶರಣೆನುತಿದ್ದಿತಯ್ಯ.' 'ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ ತಲೆದಂಡ.' 'ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು. 'ಯದ್ಭಾವಂ ತದ್ಭವತಿ' ಉರಿ ಬರಲಿ, ಸಿರಿ ಬರಲಿ-ಬೇಕು ಬೇಡೆನ್ನೆನು. ಆನು ನಿಮ್ಮ ಹಾರೆನು, ಮಾನವರ ಬೇಡೆನು. ಆಣೆ ನಿಮ್ಮಾಣೆ ಕೂಡಲಸಂಗಮದೇವ.'

'ನಾಳೆ ಬಪ್ಪುದು ನಮಗಿಂದೇ ಬರಲಿ; ಇಂದೆ ಬಪ್ಪುದು ನಮಗೀಗಲೆ ಬರಲಿ. ಇದಕಾರಂಜುವರು ? ಇದಕಾರಳುಕುವರು ? 'ಜಾತಸ್ಯ ಮರಣಂ ಧೃವಂ' ಎಂಬುದಾಗಿ ನಮ್ಮ ಕೂಡಲ ಸಂಗಮದೇವ ಬರೆದ ಬರೆಹ ತಪ್ಪಿಸುವರೆ ಹರಿಬ್ರಹ್ಮಾದಿಗಳವಲ್ಲ,' 'ಮರಣವೇ ಮಹಾನವಮಿ'

ಈ ವಚನ ಗೀತೆಗಳಲ್ಲಿ ಧೃತಿಯ ದಾರಿ ಎಲ್ಲಿಂದ ಎಲ್ಲಿಯ ವರೆವಿಗೂ ಸಾಗಿ ಹೋಗಿದೆಯೆಂಬುವನ್ನು ಗಮನಿಸಬೇಕು. ಮಾಹೇಶ್ವರನು ಜನನ–ಜೀವನ-ಮರಣ ಪ್ರಕಾರ ವಿಕಾರಗಳಿಗೆ ಎದೆಗೆಡಬಾರದು, ಎದೆಗೆಟ್ಟರೆ ಕಟ್ಟಾಳು ತನಕ್ಕೆ ಕೇಡು. ಇಷ್ಟಾತ್ಮಭಾವದ ಹಾನಿ. ಮಾಹೇಶ್ವರನಿಗೆ ಮರಣವೇ ಮಹಾ ನವಮಿ. ಮಾಹೇಶ್ವರನು ಗಂಡುಡುಗೆಯನ್ನುಟ್ಟ ವೀರ. ಮಹಾವ್ರತವ ತೊಟ್ಟ ಧೀರ. ಎಲ್ಲಿಯೆ ಆಗಲಿ ಗೆಲುವೆನ್ನದೆಂಬ ಕೆಚ್ಚುಳ್ಳ ಕಲಿ, ಅನ್ಯಕ್ಕೆ ಅನ್ಯಾಯಕ್ಕೆ ಹರಿಯದ ಕಟ್ಟಾಳು. ಮಹೇಶ್ವರನಲ್ಲದೆ ಮತ್ತೊಂದಕ್ಕೆ ಮನಸ್ಸು ಮಾಡದ–ಗುರಿ ತಪ್ಪದ ಗಂಡುಗಲಿ. ಮನದಲ್ಲಿ ಮಹೇಶ್ವರನ ಮಚ್ಚು ಅಚ್ಚೊತ್ತಿದ ಕೆಚ್ಚಾಳು. ಗುರುಲಿಂಗದ ನಿಷ್ಠೆಯಲ್ಲಿ ನೆಲೆನಿಂತ ನಿಜಗಲಿ; ಬುದ್ಧಿ ಬಿಚ್ಚಿ ಬೇರಾಗದ ಬೀರ. ಭಯಕ್ಕೆ ಬಾಳದ ಬದುಕದ ಬಲವಂತ, ಭಾವಪೂರ್ಣ ಬೌದ್ಧಿಕ ಛಲವಂತ,

"ಧನ ಧಾನ್ಯ ಸತ ಮಿತ್ರ ವನಿತಾದಿ ಹಾನಿಯೊ ।
ಳಿನಿತು ರಾಗ ಮನದೊಳಗೆ ತನ್ನ ।
ಮನಕೆ ವಿಕೃತಿ ದೋರದಿರಲಿದೆ ಧೃತಿಯೆಂದು ।
ವನಿತೆ ನೀನವಧರಿಸೊಲವಿಂದೆ ॥"

— ಪರಮಾನುಭವಬೋಧೆ.

ಬುದ್ಧಿ ಬಲಗೆಡಬಾರದು. ಬುದ್ಧಿ ಹಸ್ತದಲ್ಲಿ ಗುರುಲಿಂಗವಿರುತ್ತದೆ, ಇದರಿಂದಾಗಿ ಮಾಹೇಶ್ವರನು ಬಲಶಾಲಿಯು ವಿಶಾಲಮತಿಯು ಆಗುತ್ತಾನೆ.

ಮಾಹೇಶ್ವರಾಂಗನು ಸಂಕುಚಿತ ಸ್ವಭಾವದ ಮಮತೆಯನ್ನು ಬಿಟ್ಟು ಸರ್ವ ಸಮತಾಭಾವದ ಮಮತ್ವವುಳ್ಳವನಾಗಬೇಕು. ಭಕ್ತರಲ್ಲಿ ಭೇದವನ್ನು ಎಂದಿಗೂ ಎಣಿಸಬಾರದು. ಮಾಹೇಶ್ವರತ್ವಕ್ಕೆ ಸರ್ವ ಮಮತ್ವಭಾವದ ಮುಖ್ಯವಾದುದು, ಎಲ್ಲ ಭಕ್ತರಲ್ಲಿ ಏಕೋಭಾವವನ್ನಿಟ್ಟುಕೊಳ್ಳುವಲ್ಲಿ ಮಾಹೇಶ್ವರನಿಗೆ ಎಳ್ಳುಮೊನೆಯಷ್ಟು ಪೊಳ್ಳುತನವಿರಬಾರದು. ಆದೇ ಭವಿ (ದುರಾಚಾರಿ ದುರ್ಗುಣಿ) ಸಂಗವೆಂದರೆ ಬಹುದೂರವಿರಬೇಕು, ತನ್ನ ಸದಾಚಾರ ಸದ್ಗುಣಗಳಿಗೆ ಭಂಗ ಬರುವ ತರುವ ಸಂಗ ಎಷ್ಟಕ್ಕೂ ಸರಿಯಲ್ಲ. ಭಕ್ತಿಯಿಲ್ಲದವರ ಸಂಗದಿಂದ ವ್ಯಕ್ತಿತ್ವ ಹಾನಿ. ಅಂತೆಯೇ ಭಕ್ತಿಯುಳ್ಳವರು ಯಾರೇ ಆಗಿರಲಿ ಅವರಲ್ಲಿ ಸಮಚಿತ್ತ ಸಮಭಾವವಿಲ್ಲದಿದ್ದರೆ ಮಾಹೇಶ್ವರತ್ವ ಹಾನಿ, ಭಕ್ತ ಬಾಂಧವ್ಯದಲ್ಲಿ ಸಂಶಯವೃತ್ತಿ ಧ್ವಂಸವಾಗಿರಬೇಕು. ಸಂಶಯ ಭಾವವೇ ಸರ್ವನಾಶ ಮೂಲ.

ಅಟ್ಟಾಟಿಕೆಯ ಮಾತುಗಳಿಗಿಂತ ಮನಮುಟ್ಟುವ ಸದಾಚಾರ ಸಮಭಾವಗಳೆ ಸರ್ವವಿಧದಲ್ಲಿಯೂ ಶ್ರೇಷ್ಠ. ಪ್ರಾಣಿಕೋಟಿಯಲ್ಲಿ ಪ್ರೇಮರಸವನ್ನಿರಿಸುವುದೇ ಮಾಹೇಶ್ವರರ ಮಹಾಗುಣ. ಎಲ್ಲ ಬಗೆಯಲ್ಲಿಯೂ ಮಹಾ ಪಥದಲ್ಲಿ ಮುನ್ನಡೆಯುವುದೇ ಮಾಹೇಶ್ವರನ ಮುಖ್ಯ ಗುಣ. ಯಮಾಂಗ–ನಿಯಮಾಂಗಗಳನ್ನು ಅಳವಡಿಸಿಕೊಳ್ಳುವುದೆ ಮಾಹೇಶ್ವರ ಧರ್ಮ.

ಪಿಂಡಾದಿ ಸಹಜಮಾಟಾಂತ ಉಪಸ್ಥಲಗಳಿಂದ ಮೈಗೂಡಿ ತುಂಬು ಬಾಳಿನಿಂದ ಹೆಮ್ಮರದಂತೆ ತೊಳಗುವವನೇ ಭಕ್ತ. ಆತನ ಹೃದಯವೆ ಹೂವು, ಆ ಹೂವಿನೊಳಗಿನ ಮಧುರ ಮಕರಂದವೆ ಮಾಹೇಶ್ವರ ಸ್ಥಲ. ಈ ಮಾಹೇಶ್ವರ ಸ್ಥಲವು ಜೀವರಸವಾಗಿದೆ, ವಿಚಾರ ಪ್ರಾಚುರ್ಯದಿಂದ ಜೀವೋತ್ತೇಜಕ ಜ್ಯೋತಿ

ಯಾಗಿದೆ. ನಿಷ್ಠಾ ಭಕ್ತಿಯಿಂದ ಜೀವನೋಪಯುಕ್ತ ದಿವ್ಯ ಶಕ್ತಿಯಾಗಿದೆ. ಮಧುರ ಜೀವನದ ದಿವ್ಯಧ್ವನಿಯಿದೆ; ದಿವ್ಯ ಕಲೆಯಿದೆ. ಮುಂದೆ ಪ್ರಸಾದಿ ಸ್ಥಲಕ್ಕೆ ಸನ್ನದ್ಧತೆಯನ್ನು ತಂದೊಗಿಸುವ ರಸಪೂರ್ಣ ಜೀವನ ಸಾಧನ ಮಾಹೇಶ್ವರ ಸ್ಥಲದಲ್ಲಿದೆ. ಮಾಹೇಶ್ವರ ತತ್ತ್ವಪ್ರಣಾಲಿಕೆ ಮೇರು ಪರ್ವತದಂತೆ ಮನೋಹರವಾಗಿದೆ; ಮಾನಸ ಸರಸ್ಸಿನ ದಿವ್ಯ ಜಲದಂತೆ ಮಧುರವಾಗಿದೆ. ಈ ಸ್ಥಲದಲ್ಲಿ ಬುದ್ಧಿಯ ಬಾಗಿಲು ತೆರೆದು ಹೊಸ ಗಾಳಿ ಹೊಸ ಬೆಳಕು ಒಳಬರುವಂತಾಗುತ್ತದೆ. ಹಳೆಯದು-ಕೊಳೆಯಾದುದು ಕಳಚಿ ಹೋಗುತ್ತದೆ. ಮುಂದೆ ಪ್ರಸಾದ ಸ್ವೀಕಾರಕ್ಕೆ ಬೇಕಾಗುವ ಹೃದಯದ ಹಸಿವು ಹುಟ್ಟುತ್ತದೆ. ಹೊಳಪುಗೊಂಡ ಹೃದಯಾಂತರಾಳದಲ್ಲಿ ಚಿನ್ಮಯ ಗುರುಲಿಂಗರೂಪ ಚೈತನ್ಯ ಪ್ರತಿಷ್ಠಿತವಾಗುತ್ತದೆ. ಭಕ್ತಸ್ಥಲದಲ್ಲಿ ಸಂಪಾದಿಸಿದ ಕ್ರಿಯಾಶಕ್ತಿರೂಪ ಸುರತರುವಿನಲ್ಲಿ ಜ್ಞಾನಶಕ್ತಿರೂಪ ಸುಮವರಳುತ್ತದೆ, ಸುವಾಸಿತವಾಗುತ್ತದೆ; ಸುಮಧುರಯುಕ್ತವಾಗುತ್ತದೆ. ಬುದ್ಧಿ ಶುದ್ಧಿಯಾಗಿ ತನ್ನ ಪೂರ್ವ ಪ್ರಾಕೃತಿಕ ಸಂಸ್ಕಾರಗಳನ್ನೆಲ್ಲ ನಿರಸನಗೊಳಿಸಿ ಹಿಂದುಳಿಸಿ ಚಕೋರಪಕ್ಕಿಯಂತೆ ಚಿಚ್ಚಂದ್ರಕಿರಣಗಳಿಗೆ ಮುಂದುವರೆಯುತ್ತದೆ; ತಂಬೆಳಗಿನ ತುಂಬು ಬಾಳಿಗೆ ತವಕಿಸುತ್ತದೆ. ವಿಶಿಷ್ಟವಾದ ವರ್ಚಸ್ಸುಳ್ಳದಾಗುತ್ತದೆ. ಗಂಭೀರವಾದ ಸ್ವರೂಪವುಳ್ಳದಾಗುತ್ತದೆ.

ರುಚಿಯಲ್ಲಿ ಋಷಿತನವನ್ನು ತರುವ ಮಹೋನ್ನತಿಕೆ ಮಾಹೇಶ್ವರ ಸ್ಥಲದಲ್ಲಿದೆ. ಒಡಲ ಕಳವಳ ಇಲ್ಲಿಲ್ಲ, ಬಾಯ ಸವಿಯ-ಬಯಕೆಯಿಲ್ಲ. ರಸನೇಂದ್ರಿಯ ಸೊಗಸನ್ನು ಗುರುಲಿಂಗಕ್ಕೆ ಅರ್ಪಿಸುವವನು ಹಿರಿ ಬಾಳಿನ ಹೊಳಹು–ಸುಳುಹುಗಳನ್ನೀಯುವ ಸುಂದರ ಬುದ್ಧಿಯೋಗ ಇದಾಗಿದೆ, ಮಹೇಶ್ವರ ಸ್ವರೂಪವಾದ ಗುರುಲಿಂಗದಿಂದ ಹೊರ ಹೊಮ್ಮಿದ ವಿಚಾರವಿದ್ಯುತ್ತಿನ ಜ್ವಲಜ್ಜ್ಯೋತಿ ಇದರಲ್ಲಿದೆ. ಮಾಹೇಶ್ವರ ಸ್ಥಲದಲ್ಲಿ ವೃದ್ಧಿಗೊಂಡ ಬುದ್ಧಿಚಂದ್ರನು ಇತ್ತ ಚಿತ್ತದ ಮೇಲೆ ಅತ್ತ ಮನೋಹಂಕಾರಗಳ ಮೇಲೆ ತನ್ನ ಚಂದ್ರಿಕೆಯನ್ನು ಚೆಲ್ಲಿ ಶಾಂತಿ ಕಾಂತಿಗಳನ್ನು ಸೂಸುತ್ತಾನೆ. ಜಲ–ಮೌಕ್ತಿಕಯೋಗ ಮಾಹೇಶ್ವರನಿಗಿರುತ್ತದೆ.

'ಮಹತೋ ಮಹೀಯಾನ್' ಆಗುವ ಹೊಚ್ಚ ಹೊಸ ಹೊಲಬು ಮಾಹೇಶ್ವರ ಸ್ಥಲ. ಭಕ್ತನು ತನ್ನ ವಿನಯಾದಿ ಗುಣಗಳಿಂದ ಅಣೋರಣೀಯಾನ್ ಆದರೆ ಮಾಹೇಶ್ವರನು ತನ್ನ ಮಹತ್ತರ ಮಣಿಹಗಳಿಂದ ಮಹತೋ ಮಹೀಯಾನ್

ಆಗುತ್ತಾನೆ. ಮಾಹೇಶ್ವರನ ಮಹತ್ವಾಕಾಂಕ್ಷೆ ಹಲ್ಲಣದ್ದಲ್ಲ. ಸಣ್ಣ ಸ್ವಭಾವದ್ದಲ್ಲ; ಚೂರ್ಣಾಹಂಭಾವದ್ದಲ್ಲ. ಸರ್ವಭೂತಹಿತದ ಹೊರತು ಅದಕ್ಕೆ ಬೇರೆ ಬಗೆಯಿಲ್ಲ.

ಬುದ್ಧಿಯೇ ಮಹತ್ತತ್ತ್ವ. ಈ ಮಹತ್ತತ್ತ್ವದ ಆರಾಧನೆಯಿಂದ ಅಂದರೆ ಬುದ್ಧಿಯ ಸಿದ್ಧಿಯಿಂದ ಭಕ್ತನು ಮಾಹೇಶ್ವರನೆನಿಸುತ್ತಾನೆ. ಹೀಗೆನಿಸುವುದರಲ್ಲಿ ಔಚಿತ್ಯವಿದೆ. ರುಚಿ ಪ್ರದಾರ್ಥಕ್ಕೆ ಪ್ರಾಸಾದಿಕತೆಯನ್ನು ತಂದಂತೆ ಬುದ್ಧಿಗೆ ಪರಮ ಪ್ರಭೆಯನ್ನು ತಂದುಕೊಂಡು ಮಹತ್ತಿಗೆ ಈಶ್ವರನೆನಿಸುತ್ತಾನೆ; ಮಹೇಶ್ವರ ನೆನಿಸುತ್ತಾನೆ.

ಬಾನೊಳು ಸಾಸಿರ ಚುಕ್ಕೆಗಳು
 ಮೂಡುತ ಮಿನುಗುವವು;
ಇರುಳಿಗೆ ಬೆಳಗನು ತರುವವನೊಬ್ಬನೆ
 ಚನ್ನಿಗ ಚಂದಿರನು.

ದೇಹಿಗೆ ಎನಿತೋ ಕರಣಗಳು
 ಬಲಿಯುತ ಬೆಳೆದಿಹವು;
ಬಾಳಿಗೆ ಬೆಳಗನು ತರುವುದು ನಿರ್ಮಳ
 ಬುದ್ಧಿಯು ತಾನೊಂದೇ !

ಬಾಳ ಬಟ್ಟೆಯಲ್ಲಿ ಬುದ್ಧಿಗೆ ಒಂದು ಪ್ರಾಧಾನ್ಯತೆಯಿದೆ. ಮುಖಕ್ಕೆ ಕಣ್ಣು ಹೇಗೋ ಅಂತಃಕರಣಗಳಲ್ಲಿ ಬುದ್ಧಿ ಹಾಗೆ. ಅಂತಹ ಬುದ್ಧಿಯನ್ನು ಶುದ್ಧಿ-ವೃದ್ಧಿಗೊಳಿಸಿ ಸಂಯಮದಲ್ಲಿರಿಸಿಕೊಳ್ಳುವುದೇ ಮಾಹೇಶ್ವರನ ಮುಖ್ಯ ಮಣಿಹ.

ಬುದ್ಧಿವಂತನಾಗದೆ ಪ್ರಬುದ್ಧತೆ ಬಾರದು. ಮಾನವನಿಗೆ ಬೌದ್ಧಿಕ ಬಲವೇ ಬಲ. ಶಾರೀರಕ ಬಲಕ್ಕಿಂತ ಸಾವಿರ ಪಾಲು ಬೌದ್ಧಿಕ ಬಲ. ಶಕ್ತಿಗಿಂತ ಯುಕ್ತಿ ಹೆಚ್ಚು. ಮಾಹೇಶ್ವರನ ಯುಕ್ತಿಯಲ್ಲಿ ಸಹಜಕತೆಯಿರುತ್ತದೆ. ಮಾಹೇಶ್ವರನು ವಂಚನೆಯನ್ನು ಕಂಡರಿಯನು, ಸಂದೇಹವೆಂಬುದನ್ನು ಉಳಿಸಿಕೊಂಡಿರನು. ಶಂಕಿಗನಲ್ಲ. ವೇದಾತೀತ, ವಿಶ್ವಜಿತ, ಮಾಹೇಶ್ವರನು ತನುಸಾರಾಯ, ಮನ ಸಾರಾಯ, ಜ್ಞಾನಸಾರಾಯವುಳ್ಳವನು. ಭಕ್ತನಾಗಿ ಸರ್ವ ಕರ್ತೃತ್ವಗುಣವನ್ನು

ಗಳಿಸಿದರೆ ಮಾಹೇಶ್ವರನಾಗಿ ಸರ್ವಜ್ಞತ್ವಗುಣವನ್ನು ಗಳಿಸುವನು. ಪ್ರಾಜ್ಞತೆ ಪ್ರಭುತ್ವಗಳು ಬಾರದೆ ಮುಂದಿನ ಪ್ರಸಾದಿಸ್ಥಲದ ಭೋಕ್ತೃತ್ವಗುಣ ಮೈಗೂಡಿ ಬಾರದು. ಪ್ರಾಜ್ಞತೆಯಿಲ್ಲದೆ ಪ್ರಭುತ್ವವು ಪೂರ್ಣ ಪರಿಣಾಮಕಾರಿಯಾಗದು. ಅನರ್ಥದ ಎಲ್ಲೆಯನ್ನು ಮೀರದು. ಆದ್ದರಿಂದ ಮಾಹೇಶ್ವರನು ಪ್ರಜ್ಞಾಶಕ್ತಿಯನ್ನು ಪ್ರಥಮವಾಗಿ ರೂಢಿಸಿಕೊಳ್ಳಬೇಕು. ಪ್ರಜ್ಞಾ ಪ್ರಾತಿಭ ಪ್ರಭುತ್ವ ಪೂರ್ಣ ಪರಿಣಾಮಕಾರಿಯಾದುದು; ನ್ಯೂನತೆಯನ್ನು ನಿವಾರಿಸುವಂತಹದು. ಪರಮ ಪ್ರೇಮಾಸ್ಪದವಾದುದು. ಸಾಲೋಕ್ಯ-ಸಾಮೀಪ್ಯ ಸಂಬಂಧಗಳನ್ನು ಗಾಢಗೊಳಿಸತಕ್ಕದ್ದು. ಆ ಪರಮೇಶ್ವರನಿಂದ ತಾನು ರಕ್ಷಣೆಯನ್ನು ಪಡೆದು ತನ್ನ ರಕ್ಷಣೆಯನ್ನು ಈ ಲೋಕದವರಿಗೆ ಕೊಡುವ ಈಶತ್ವದಲ್ಲಿ (ಅಧಿಕಾರದಲ್ಲಿ) ಇರತಕ್ಕವನು ಮಾಹೇಶ್ವರನು.

# ಅಧಿಕಾರ ಕ್ರಾಂತಿ

ಧಾರ್ಮಿಕ, ಆರ್ಥಿಕ ಮುಂತಾದ ಕ್ರಾಂತಿಗಳಂತೆ ಅಧಿಕಾರ ಕ್ರಾಂತಿಯೂ ಒಂದು. ಮಾಹೇಶ್ವರತ್ವವೂ ಒಂದು ಅಧಿಕಾರ. ಇದು ಉಳಿದ ಅಧಿಕಾರಗಳಂತೆ ಪ್ರಜಾಪೀಡಕವಲ್ಲ. ಸರ್ವೈಕ ವಿಷಯಕವೂ ಅಲ್ಲ. ಈ ಮಹೇಶ್ವರತ್ವವು ಧರ್ಮಾಧಿಕಾರ ಮತ್ತು ಧಾರ್ಮಿಕಾಧಿಕಾರವುಳ್ಳದು, ತನ್ನ ತನುಕರಣೇಂದ್ರಿಯಗಳ ಮೇಲೆ ತನಗೆ ಸಂಯಮರೂಪ ಪ್ರಭುತ್ವ ಪ್ರಥಮದ್ದು. ಸಾಮಾಜಿಕ ಶುಭಕಾರ್ಯಕರಣ-ಕರಣೀಯ ಪ್ರಭುತ್ವವು ಮಾಹೇಶ್ವರನದು. ಭಕ್ತಸ್ಥಲದಲ್ಲಿ ಸಂಪಾದಿಸಿದ ಕ್ರಿಯಾಚಾರಗಳ ಮೇಲೆ ತನ್ನ ಒಡೆತನವನ್ನು ಉಳಿಸಿ ಬೆಳಸಿಕೊಂಡು ಬರುವುದೇ ಮಾಹೇಶ್ವರನ ಅಧಿಕಾರಕ್ರಾಂತಿ. ಈ ಕ್ರಾಂತಿಯಿಂದ ಒದಗುವುದು ಆತ್ಮಶಾಂತಿ ; ಜತೆಗೆ ಸಾಮಾಜಿಕ ಶಾಂತಿ.

ಮಾಹೇಶ್ವರನ ಅಧಿಕಾರ ಸೀಮಿತವಲ್ಲ. ಈತನ ಪ್ರಭುತ್ವ ಪಂಚಭೂತಗಳ ಮೇಲಿರುತ್ತದೆ ; ಪ್ರಪಂಚದ ಮೇಲಿರುತ್ತದೆ. ಈತನ ಈಶತ್ವದ ಮೇಲೆ ಈಶತ್ವವಿಲ್ಲ. ಈತನೇ ಮಹಾ—ಈಶ ; ಮಹಾ—ದೇವ. ಘನಕ್ಕೆ ಘನಮಹಿಮ. ಮನಕ್ಕೆ ಅಗೋಚರ, ಅಗಮ್ಯ ; ಅಪ್ರಮಾಣ. ಮಾಹೇಶ್ವರನು ಮಹತೋಮಹಿಯಾನ್ ಎಂದು ಈ ಮೊದಲೆ ಹೇಳಿರಲಾಗಿದೆ. ಸಕಲ-ನಿಃಕಲವೆರಡನ್ನೂ ಕೂಡಿಕೊಂಡಿರುವನು. ಬ್ರಹ್ಮ ವಿಷ್ಣು ರುದ್ರ ಪದವಿಗಳಿಗಿಂತ ಅತ್ತತ್ತ ಮಾಹೇಶ್ವರ ಪದವಿ. ವಿಶ್ವವಿಸ್ತಾರದಲ್ಲಿ ಎಲ್ಲೆಲ್ಲಿ ಮಾನ್ಯತೆಯುಳ್ಳವನಾಗುತ್ತಾನೆ ಮಾಹೇಶ್ವರ. ಪಿಂಡಾಂಡ ಬ್ರಹ್ಮಾಂಡಗಳೆರಡಕ್ಕೂ ಮಹಾದೇವ ಮಾಹೇಶ್ವರನೊಬ್ಬ !

'ಎನ್ನುವತಧಿಕ ೧, ಎಲ್ಲರಿಂದಲು ಅಧಿಕನು.,
'ನಿಮ್ಮ ಶರಣರ ಚರಣದ ಚಮ್ಮಾವುಗೆಗೆ ಪೃಥ್ವಿ ಸಮಬಾರದು ;
ಸರಿಯಲ್ಲ ನೋಡಾ— ಕೂಡಲ ಸಂಗಮದೇವಾ

ಮಾಹೇಶ್ವರನ ಅಧಿಕಾರದ ಆಧಿಕ್ಯ ಅಹಂಕಾರದ್ದಲ್ಲ ; ಅನುನಯದ್ದು, ಆಚಾರ ವಿಚಾರ ಪ್ರಪೂರ್ಣವಾದದ್ದು. ಅಧಿಕಾರ ಕೇವಲ ಆದಿಭೌತಿಕವಲ್ಲ.

ಆಧಿದೈವಿಕ ಆಧ್ಯಾತ್ಮಿಕಗಳಿಂದೊಡಗೂಡಿದ್ದು, ಮಾಹೇಶ್ವರನ ಮನೆ ಕೈಲಾಸ ; ಮಾಹೇಶ್ವರನ ಮನ ಕೈವಲ್ಯ.

ಎಲ್ಲರೊಡಗೂಡಿ ಬಾಳುವ ಒಡೆತನ ಮಾಹೇಶ್ವರನದು. ಎಲ್ಲರಿಗೆ ಸತ್ಯ ಸಾಹಿತ್ಯ ಶಾಶ್ವತ ಸಂಪತ್ತನ್ನು ಕೊಡುವ ಒಡೆತನ ಮಾಹೇಶ್ವರನದು. ಸಮಯಾಚಾರ ಸದಾಚಾರ ಶಿವಾಚಾರಗಳನ್ನು ಬೋಧಿಸುವ ಒಡೆತನ ಮಾಹೇಶ್ವರನದು. ಮಾಹೇಶ್ವರನು ಜ್ಞಾನಮಯ ಜ್ಯೋತಿ ಪುರುಷ. ಮಾಹೇಶ್ವರನದು ವಾಕ್ ಪರುಷ.

ಮಾಹೇಶ್ವರನು ಲೋಭ–ಆಶೆಗಳಿಗೆ ಒಳಗಾಗುವವನಲ್ಲ. ಮದ-ಮತ್ಸರಗಳಿಗೆ ಮನಸ್ಸು ಮಾಡುವವನಲ್ಲ. ಕಾಮ ಕ್ರೋಧಗಳ ಕೇಡಿಗೆ ಗುರಿಯಾಗುವವನಲ್ಲ. ಹರರ ಸೊಮ್ಮೆಂದರೆ ಹೆದರುವಾತನು. ಭಕ್ತಿ ಭಾಷೆಯಲ್ಲಿ ಬಲ್ಲಿದನು. ತ್ಯಾಗ-ಯೋಗಗಳಲ್ಲಿ ನಿಷ್ಣಾತನು. ನಡೆ-ನುಡಿಗಳಲ್ಲಿ ನಿಪುಣನು. ಹರಗಣರಲ್ಲಿ ಹೇವವಿಲ್ಲದವನು. ಸೈರಣೆ-ಸಮಭಾವವುಳ್ಳವನು. ಆತ್ಮಸ್ತುತಿ-ಪರನಿಂದೆಗೆ ಎಳಸುವವನಲ್ಲ. ದ್ರೋಹ-ಮೋಹಗಳಿಗೆ ದುಡುಕುವವನಲ್ಲ. ಮ:ತ್ತೊಬ್ಬರ ಮನವ ನೋಯಿಸುವಾತನಲ್ಲ. ಹೊಲ್ಲದ ಹೊಲಬಿಗೆ ಹೋಗುವವನಲ್ಲ. ತತ್ವವೇತ್ತರಿಗೆ ತೊತ್ತಾಗಿ ಬಾಳುವಾತನು. ಸಮಯೋಚಿತವರಿತವನು. ಸತ್ವಶೀಲನು. ಶಬ್ದ ಪ್ರಸಾದಿಯು. ಅಷ್ಟವಿಧಾರ್ಚನೆಯಲ್ಲಿ ನಿಷ್ಠನು. ಇಷ್ಟಲಿಂಗದ ಆಚಾರ–ವಿಚಾರಗಳನ್ನು ಅರೆಕೊರೆಯಿಲ್ಲದೆ ಅರಿತವನು. ಆಯತವನ್ನು ಸ್ವಾಯತಗೊಳಿಸುವುದೇ ಮಾಹೇಶ್ವರನ ಸಾಧನೆ. ಮಹಿತಾತ್ಮನೆನಿಸುವುದೇ ಆತನ ಸಿದ್ಧಿ. ಅರ್ಥಪ್ರಾಣಾಭಿಮಾನ ತ್ಯಾಗಿ. ಆಯತ ಲಿಂಗಯೋಗಿ. ಸಕಲ ಜೀವಿಗಳಿಗೆ ಲೇಸ ನೆಸಗುವಲ್ಲಿ ಸರ್ವ ಸ್ವತಂತ್ರ ಮತ್ತು ಸಮರ್ಥ. ದಾನಿ, ಧರ್ಮಿ, ದಯಾಮಯ ಹೃದಯ. ಇಂತಹ ಈ ಮಾಹೇಶ್ವರತ್ವವು ಯಾರಿಗೆ ಹೊರೆ ? ಯಾರಿಗೆ ಬೇಸರ ? ಜೀವನದ ಆದರ್ಶ ಅಧಿಕಾರವು ಮಾಹೇಶರತ್ವವು.

ತನ್ನದೇ ಆದ ಆಚಾರಾಧಿಕಾರದಿಂದ ವಿಚಾರ ಮಂಥನದಿಂದ ಸಂಯಮ ನಿಯಮದಿಂದ ಷಟ್‌ಸ್ಥಲ ಸಿದ್ಧಾಂತದಲ್ಲಿ ಲೌಕಿಕಾಲೌಕಿಕ ಪ್ರಭುತ್ವದಲ್ಲಿ ಮಾಹೇಶ್ವರ ಸ್ಥಲವು ತನ್ನದೇ ಆದ ಒಂದು ವಿಕ್ರಮವನ್ನು ಪ್ರಸ್ಥಾಪಿಸಿದೆ ; ಸುವರ್ಣ ಯುಗವನ್ನು ಪ್ರಕಟಿಸಿದೆ. ಗಂಭೀರವಾದ ಪ್ರಸ್ಥಾನವನ್ನು ಗಳಿಸಿದೆ, ಇದರ ಸೌಮ್ಯ

ಮತ್ತು ಸಾಮ್ಯವಾದ ಸಂಯಮಶೀಲವಾದ ಪ್ರಭುತ್ವಾಂಗೀಕಾರದಿಂದ ಜನಜೀವನ ನಿಷ್ಕಂಟವಾಗುವಲ್ಲಿ ಯಾವ ಸಂದೇಹವಿಲ್ಲ. ತನ್ನದೇ ಆದ ಪ್ರತಿಭೆಯಿಂದ ಪ್ರಕಾಶಿಸುತ್ತಿದೆ. ದೌರ್ಬಲ್ಯ ಜನ್ಯದಾಸ್ಯವನ್ನು ದೂರೀಕರಿಸಿದೆ. ಇದರಿಂದ ಬಾಳಿನ ಎತ್ತರದ ನಿಲವು ರೂಪಿತವಾಗುತ್ತದೆ. ಬಾಳನ್ನು ಪ್ರಸನ್ನತೆಯ ನಿಲುವಿಗೆ ನಿಲುಕಿಸಿ ಎರಕ ಹೊಯ್ಯುವ ಶಕ್ತಿ ಮಾಹೇಶ್ವರ ಸ್ಥಲಕ್ಕಿದೆ. ತತ್ವಜ್ಞಾನದ ಔನ್ನತ್ಯಕ್ಕೇರುವುದು ಈ ಸ್ಥಲದಲ್ಲಿ! ಆದರ್ಶ ಜೀವನಕ್ಕೆ ಸತ್ವಯುಕ್ತಸ್ಫೂರ್ತಿ ಹುಟ್ಟುವುದು ಇದರಲ್ಲಿ! ಕೊಳೆಗಳನ್ನೆಲ್ಲ ತೊಳೆದು ಕಳೆದು ತಿಳಿಗೊಳದಲ್ಲಿ ಮಿಂದು ಮಡಿಯಾಗುವುದು ಇದರಲ್ಲಿ। ಮಾನವೀಯತೆಯ ಉತ್ಥಾನ ಕಾರ್ಯಕರಣ ಇದರಲ್ಲಿ! ಮೃತಜೀವನ ಅಮೃತಮಯಿಯಾಗುವುದು ಈ ಮಾಹೇಶ್ವರಸ್ಥಲದಲ್ಲಿ! ತನ್ನ ಈಶತ್ವಕಾರ್ಯದಿಂದ ಜಗದ ನೆಂಟನಾಗುವ ಭಾಗ್ಯ ಬರುವುದು ಈ ಮಹಾಸ್ಥಲದಲ್ಲಿ!

'ಈಶಾವಾಸ್ಯಮಿದಂ ಸರ್ವಂ' ಎಂಬ ಈಶೋಪನಿಷದುಕ್ತಿ ಪಲ್ಲವಕ್ಕೆ ಫಲಗಳನ್ನಾಗಿಸುತ್ತದೆ ಮಾಹೇಶ್ವರ ಸ್ಥಲಾಚರಣೆ! ಮಾನವ ಸಮಾಜಕ್ಕೆ ಮಹೇಶ್ವರ ಮಹಿಮೆಯನ್ನು ಸಕೀಲವನ್ನು ಉದ್ಘೋಷಿಸಿ ಕ್ಷುದ್ರಜೀವನದಿಂದ ಕ್ಷುದ್ರಭಾವನೆಯಿಂದ ಉದ್ಧರಿಸುವ ಉನ್ನತಗುರಿಯುಳ್ಳದಾಗಿದೆ. ಚಿನ್ಮಯ ಚಿಂತನಮಂಥನಗಳಿಂದ ಜೀವನ ಚಿರಂತನತೆಯನ್ನುಂಟುಮಾಡುವುದೇ ಈ ಸ್ಥಲದ ಉದಾತ್ತ ಉದ್ದೇಶ: ವೈಶಿಷ್ಟಪೂರ್ಣ ಸಾಧನ. ಮಹಾ ಈಶಶಕ್ತಿಸಂಪನ್ನ ಸಮಾಜ ನಿರ್ಮಾಣವೇ ಇದರ ಶ್ರೇಷ್ಠ ಸಂದೇಶ. ಭದ್ರ ಬೌದ್ಧಿಕ ಜೀವನ ಸೌದಧ ಅಡಿಗಲ್ಲು ಈ ಸ್ಥಲ. ನಿಷ್ಠಾ ಸೂತ್ರಬದ್ಧವಾದ ಅಂತಃಕರಣ ಪುಷ್ಪಮಾಲೆಯ ರಚನೆಯೇ ಈ ಮಹಾಸ್ಥಲದ ಗುರಿ.

'ಈಶ್ವರ: ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ' ಎಂಬ ಗೀತೋಕ್ತಿಯಂತೆ ಈಶ್ವರತ್ವವು ಹಲವರಿಗೆ ಮಾತ್ರ ಮೀಸಲಲ್ಲ. ಸರ್ವ ಭೂತಗಳಲ್ಲಿಯೂ ಇರುವ ಒಂದು ಚೈತನ್ಯ; ಒಂದು ಶಕ್ತಿ. ಸರ್ವಭೂತಗಳಲ್ಲಿರುವಷ್ಟೆ ಮಾನವನಲ್ಲಿ ಬರೀ ಈಶ್ವರತ್ವವಿರುವುದಾದರೆ ಮಾನವತ್ವಕ್ಕೆ ಯಾವ ಮೇಲ್ಮೆಯಿರುವುದಿಲ್ಲ. ಇದನರಿದು ಮಾನವನು ನಿಸರ್ಗ ಈಶ್ವರತ್ವದಿಂದ ಮುಂದುವರಿಯಬೇಕು; ಮಾಹೇಶ್ವರತ್ವದ ಮಟ್ಟಕ್ಕೆ ಮುಟ್ಟಬೇಕು. 'ಸರ್ವಜ್ಞಃ ಸರ್ವಕರ್ತಾ ಚ ನಿತ್ಯಮುಕ್ತೋ ಮಹೇಶ್ವರಃ' ಮಹೇಶ್ವರತ್ವದ ಮಟ್ಟವಿದು.

ಮಹೇಶ್ವರ ಪರಮೇಶ್ವರ ಮಹಾತ್ಮ ಪರಮಾತ್ಮ ಪಶುಪತಿ ಭೂತೇಶ ಮಹಾದೇವ ಮಹಾನುಭವ ಇವೆಲ್ಲವೂ ಒಂದೇ ಅರ್ಥದ ಪರ್ಯಾಯ ಪದಗಳು, ಚೈತನ್ಯವು ಆತ್ಮ ಅಂತರಾತ್ಮ ಪರಮಾತ್ಮ ಎಂದು ಮೂದೆರನಾಗಿದೆ. ಚೈತನ್ಯ ಶಕ್ತಿ ಹೆಚ್ಚಿದಂತೆ ಈ ಹೆಸರುಗಳು ಬರುತ್ತವೆ. ಈ ದೃಷ್ಟಿಯಿಂದ ನೋಡಿದಾಗ ಮಹೇಶ್ವರತ್ವವು ಕೇವಲ ಹಿರಿದಾದ ಒಡೆತನವನ್ನು ಮಾತ್ರ ಸೂಚಿಸುವ ಪದವಲ್ಲ ; ಹೆಸರಲ್ಲ. ವಿಶಿಷ್ಟಗುಣ, ವಿಶಾಲ ಮನೋಭಾವ, ವಿಶುದ್ಧ ಹೃದಯ, ನಿಷ್ಕಂಟಕವಾದ ನಿಸ್ಸೀಮ ಶಕ್ತಿ, ಜಗದ ಜನತೆಯನ್ನು ಪ್ರಗತಿಯತ್ತ ಪ್ರೇರೇಪಿಸುವ ಪುಣ್ಯಚೇತನ, ನಿರುಪಾಧಿಕತೆ. ನಿಜಕಾರಣಿಕತೆಗಳನ್ನು ಸೂಚಿಸುವ ದಿವ್ಯನಾಮ. ಆಕಾಶದಾಚೆಗೂ ಇರುವ ಅವ್ಯಕ್ತ ವಸ್ತುವಿನ ನಾಮಮಾತ್ರವಲ್ಲ. ಉಕ್ತವಾದ ಈ ಎಲ್ಲ ಗುಣಗಳನ್ನು ಗಳಿಸಿದ ಈ ಲೋಕದಲ್ಲಿ ವ್ಯಕ್ತನಾದ ಭಕ್ತಾಗ್ರಗಣ್ಯನ ನಾಮವೂ ಅಹುದು. ಅಂತೆಯೇ ಮಾಹೇಶ್ವರತ್ವವು ಔಚಿತ್ಯಪೂರ್ಣವುಳ್ಳುದಾಗಿ ಸಾರ್ಥಕವಾಗುತ್ತದೆ. ಭೃತ್ಯನಾಗಿ ಭಕ್ತನೆನಿಸಿದರೆ ಪುತ್ರನಾಗಿ ಮಾಹೇಶ್ವರನೆನಿಸುತ್ತಾನೆ. ಆ ಮಹೇಶ್ವರ ಅಂಶಜನಾಗಿ ಮಾಹೇಶ್ವರನೆನಿಸುತ್ತಾನೆ. ಸಾಮೀಪ್ಯ ಸಂಬಂಧವುಳ್ಳವನಾಗುತ್ತಾನೆ. ಕರ್ತೃ ಸಾದಾಖ್ಯಕ್ಕೆ ಸಲ್ಲುತಾನೆ. ಸರ್ವ ಕರ್ತೃವೆನಿಸುತ್ತಾನೆ.

ತನುಗುಣಗಳನ್ನು ತ್ಯಾಗಮಾಡುವ ಮಹಿಹ ಭಕ್ತ ಸ್ಥಲದಲ್ಲಿ ಮೊದಲಾಗಿ ಮಾಹೇಶ್ವರ ಸ್ಥಲದಲ್ಲಿ ಮುಗಿಯುತ್ತದೆ. ಭಕ್ತ ಮಾಹೇಶ್ವರ ಸ್ಥಲಗಳೆರಡರಿಂದ ಪೂರ್ಣ ತ್ಯಾಗಾಂಗ ಶುದ್ಧಿಯಾಗುತ್ತದೆ. ಈ ಎರಡು ಸ್ಥಲಗಳು ಪೂರ್ಣ ತಾಗ್ಯಾಂಗಕ್ಕೆ ಸಂಬಂಧಿಸಿದವು. ತ್ಯಾಗಾಂಗದಲ್ಲಿ ದ್ವೈತಾರಾಧನೆ ಮುಖ್ಯ. ಸ್ವಾಮಿ ಭೃತ್ಯ ಸಂಬಂಧವಿರುತ್ತದೆ. ದಾಸೋಹಂ ಭಾವವಿರುತ್ತದೆ. ಭಕ್ತ ಸ್ಥಲದಲ್ಲಿ ಶ್ರದ್ಧೆಯಿಂದ ಆಚಾರವನ್ನು ಅಳವಡಿಸಿಕೊಂಡು ಮಾಹೇಶ್ವರ ಸ್ಥಲದಲ್ಲಿ ನಿಷ್ಠೆಯಿಂದ ಗುರುಲಿಂಗವನ್ನು ಅಂದರೆ ವಿಚಾರವನ್ನು ಮೈಗೂಡಿಸಿಕೊಳ್ಳಬೇಕು. ಚಿತ್ತ ಬುದ್ಧಿಗಳೆರಡನ್ನೂ ಸ್ಥಿರಗೊಳಿಸಿಕೊಳ್ಳಬೇಕು. ನಾನು ನನ್ನದು ನನ್ನವರು ಎಂಬ ಅಹಂಕಾರ ಮಮಕಾರಗಳನ್ನು ಈ ಉಭಯ ಸ್ಥಲಗಳಲ್ಲಿ ತುಸು ಉಳಿಯದಂತೆ ತ್ಯಾಗಮಾಡಬೇಕು. ನೆಲ ಮತ್ತು ಜಲ ಭೂತ ತತ್ತ್ವಗಳೆರಡು ಶುದ್ಧವಾಗಬೇಕು. ಗಂಧ ರಸಗಳೆರಡು ಪದಾರ್ಥಗಳು ಪ್ರಸಾದವಾಗಬೇಕು. ಆಧಾರದಂತೆ ಸ್ವಾಧಿಷ್ಠಾನವೂ ಪ್ರಸನ್ನವಾಗಿರಬೇಕು. ಕ್ರಿಯಾರೂಪ ಕಾಲುಳ್ಳವನು

ಭಕ್ತ. ಜ್ಞಾನರೂಪ-ಕಣ್ಣುಳ್ಳವನು ಮಾಹೇಶ್ವರ. ಭಕ್ತನೇ ಮುಂದುವರಿದು ಮಾಹೇಶ್ವರನಾಗುವುದರಿಂದ ಇವರಿಬ್ಬರಲ್ಲಿ ಭಿನ್ನಭಾವವಿಲ್ಲ. ಭಕ್ತತ್ವವನ್ನೊಳಗೊಂಡಿರುವವನು ಮಾಹೇಶ್ವರನು. ಕ್ರಿಯಾ ಲಿಂಗವನ್ನು ಕರದಿಷ್ಟವನ್ನಾಗಿಸಿ ಪೂಜಿಸಿ ಭಕ್ತತ್ವವನ್ನು ಗಳಿಸಿದರೆ ಜ್ಞಾನಲಿಂಗವನ್ನು ಉರದಿಷ್ಟವನ್ನಾಗಿಸಿ ಅಂದರೆ ಹೃತ್ಕಮಲದಲ್ಲಿ ಪೂಜಿಸಿ ಆ ಭಕ್ತನೇ ಮಾಹೇಶ್ವರನೆನಿಸುತ್ತಾನೆ. ಈತನಿಗೆ ಕ್ರಿಯಾಜ್ಞಾನಗಳೆರಡೂ ಅಳವಟ್ಟು ಅವುಗಳ ಪ್ರಭುತ್ವ ಸಿದ್ಧಿಯಾಗಿರುವುದರಿಂದ ಮಾಹೇಶ್ವರತ್ವ ಪ್ರಾಪ್ತಿಯಾಗುತ್ತದೆ. 'ಕುಲಪತಿ'ಯಾಗಿಯೂ ಮಾಹೇಶ್ವರನು ಪರಿಗಣಿತನಾಗುತ್ತಾನೆ. ಮಾಹೇಶ್ವರನಿಗೆ 'ಕುಲಪತಿ'ತ್ವವು ಉಭಯ ದೃಷ್ಟಿಯುಳ್ಳದಾಗಿರುತ್ತದೆ. ವಿದ್ಯಾನಿಧಿಯಾಗಿರುವುದರಿಂದ ಮತ್ತು ಕರಣ ಕುಲ ಸಂಯಮದಿಂದ ಹಾಗು ಸಾಮಾಜಿಕ ಶ್ರೇಷ್ಠತೆಯಿಂದ ಮಾಹೇಶ್ವರನು 'ಕುಲಪತಿ' ಯೆಂಬ ಅನ್ವರ್ಥಕನಾಮವುಳ್ಳವನಾಗುತ್ತಾನೆ. ಆಸ್ತಿಕ ಗಣ ಕುಲಕ್ಕೂ ಗುರು ಕುಲಕ್ಕೂ ಮಾಹೇಶ್ವರನು ಅಧಿಪತಿಯಾಗಿರುತ್ತಾನೆ. ತನ್ನ ದೃಕ್ಕ್ರಿಯಾ ದೀಪ್ತಿಯಿಂದ ನಿಷ್ಠೆಯಿಂದ ಪರಮಾಚಾರ್ಯ ಪದವಿಗೇರುತ್ತಾನೆ. ಪ್ರಮಥರಿಂದ ಪುರಸ್ಕಾರಕ್ಕೆ ಅರ್ಹನಾಗುತ್ತಾನೆ. ಶಿಷ್ಯಾನುಗ್ರಹ ಸಮರ್ಥನಾಗುತ್ತಾನೆ. ಮಾಹೇಶ್ವರನು ಮಂತ್ರಾಂಗವಾದ 'ನಮಃ' ಪದದರ್ಥವನ್ನು ಪೂರ್ಣವಾಗಿ ಅಳವಡಿಸಿಕೊಂಡಿರುತ್ತಾನೆ. ಅಂದರೆ ಮಾಮಕಾರವನ್ನು ಜಯಿಸಿ ಜೀವ ಭಾವವನ್ನು ತ್ಯಜಿಸಿ ಶಿವಭಾವಿಯಾಗಿರುತ್ತಾನೆ; ಶಿವಜೀವಿಯಾಗಿರುತ್ತಾನೆ. ಆದ್ದರಿಂದ ಆರಂಭದ ಆರಾಧಕರ ಆಸ್ತಿಕರ ನಮಸ್ಕಾರಕ್ಕೆ ನಿಜವಾಗಿ ಅರ್ಹತೆಯನ್ನು ಪಡೆಯುತ್ತಾನೆ, ನಾಯಕನಾಗುತ್ತಾನೆ.

# ಮಾಹೇಶ-ಗಣೇಶ

ಮಾಹೇಶನೇ ಗಣೇಶ. ಗಣೇಶನೇ ಮಾಹೇಶ್ವರ. ತಾತ್ತ್ವಿಕವಾಗಿ ಇವರಿಬ್ಬರಲ್ಲಿ ಬಿರುಕಿಲ್ಲ. ದೈವೀ ಸಂಪತ್ತಿನಲ್ಲಿಯೂ ಇಬ್ಬರಲ್ಲಿ ಸಾಮ್ಯವಿದೆ. ಇಬ್ಬರೂ ಮಹೇಶ್ವರಾಂಶವುಳ್ಳವರು. ಇಬ್ಬರೂ ಗಣರಿಗೆ ಒಡೆಯರು. ಒಬ್ಬನು ಕೈಲಾಸದ ಗಣರಿಗೆ ಒಡೆಯನಾದರೆ ಇನ್ನೊಬ್ಬನು ಈ ಲೋಕದ ಗಣಂಗಳಿಗೆ ಒಡೆಯನು. ಗಣೇಶನಂತೆ ಮಾಹೇಶನೂ ಸಾಮಾಜಿಕರ ವಿಘ್ನಗಳನ್ನು ಅಶುಭಗಳನ್ನು ಪರಿಹರಿಸುವನು. ವಿಘ್ನೇಶ್ವರನು ಬುದ್ಧಿ ಸಿದ್ಧಿಯನ್ನು ಪಡೆದಂತೆ ಮಾಹೇಶ್ವರನೂ ಬುದ್ಧಿ ಸಿದ್ಧಿಯನ್ನು ಪಡೆದಿರುತ್ತಾನೆ. ವಿಘ್ನೇಶ್ವರನು ದ್ವೈಮಾತುರನಾದಂತೆ ಮಾಹೇಶ್ವರನೂ ದ್ವೈಮಾತುರನಾಗಿರುತ್ತಾನೆ. ಗಣೇಶನಿಗೆ ಗೌರಿ–ಗಂಗೆಯರು ಮಾತೆಯರಾಗಿದ್ದರೆ ಆ ಗೌರಿ–ಗಂಗೆಯರ ಸ್ವರೂಪಿಣಿಯರಾದ ಕ್ರಿಯಾಶಕ್ತಿ ಜ್ಞಾನಶಕ್ತಿಯರು ಮಾಹೇಶ್ವರನಿಗೆ ಮಾತೆಯರಾಗಿರುತ್ತಾರೆ.

ವಿನಾಯಕನು ವಿದ್ಯಾಧಿದೇವನಾದಂತೆ ಮಾಹೇಶ್ವರನೂ ವಿಚಾರಾಧಿದೇವನೆನಿಸಿದ್ದಾನೆ. ಮಾಹೇಶ್ವರನನ್ನು ಪೂಜಿಸದಿದ್ದರೆ ಸಾಮಾಜಿಕರ ವಿಘ್ನಗಳು ತೊಲಗವು. ಆದ್ದರಿಂದ ಗಣೇಶ ಎಂಬುದು ಮಾಹೇಶ್ವರನಿಗೆ ಮತ್ತೊಂದು ಹೆಸರೆಂದು ಹೇಳಿದರೆ ಹೆಚ್ಚಿನ ಅಚ್ಚರಿಯೇನಿಲ್ಲ, ಮಾಹೇಶ್ವರನು ಬೃಹಸ್ಪತಿಯಂತೆ ಬುದ್ಧಿವಂತನು; ಗುರು ಚೈತನ್ಯಸಂಪನ್ನನು, ಗಣಪತಿಯಂತೆ ಭಕ್ತಗಣರಿಗೆ ಅಧಿಪನು, ಭದ್ರತೆ ಶುಭ್ರತೆಗಳನ್ನು ಕರುಣಿಸುವಾತನು ಪರಮೇಶ್ವರನೇ ಗಣಪತಿಯೆಂದು ಹೇಳುವವರೂ ಇದ್ದಾರೆ. ತೈತ್ತಿರೇಯ ಆರಣ್ಯಕವು "ತತ್ಪುರುಷಾಯ ವಿದ್ಮಹೇ, ವಕ್ರತುಂಡಾಯ ಧೀಮಹಿ" ಎಂದು ಹೇಳಿದೆ. ಅಥರ್ವಶೀರ್ಷೋಪನಿಷತ್ತು ವಿನಾಯಕನನ್ನು ಶಿವನೆಂದೆ ನಿರೂಪಿಸಿದೆ. ವಿನಾಯಕನು ವಿಶ್ವನಾಥನ ಒಂದು ಸಾಂಕೇತಕರೂಪ; ಶಾಂತಸ್ವರೂಪ. ಮಾಹೇಶ್ವರನೂ ಅಷ್ಟೆ! ಮಹೇಶ್ವರನನ್ನು ಆರಾಧಿಸಿ ಮಾಹೇಶ್ವರನೆನಿಸುತ್ತಾನೆ. ಸಾಮಾಜಿಕರ ಆಗು–ಹೋಗುಗಳನ್ನೆಲ್ಲ ಕೇಳುವ ಹಿರಿದಾದ ಕಿವಿಗಳುಳ್ಳವನಾಗುತ್ತಾನೆ. ಸರ್ವ ವಿಚಾರಗಳನ್ನು ತುಂಬಿಕೊಂಡ ತಲೆಯುಳ್ಳವನು. ಸರ್ವಪ್ರಸಾದಗಳಿಂದ ತೃಪ್ತ

ವಾದ ಲಂಬೋದರವುಳ್ಳವನು. ಮುಖದಲ್ಲಿ ಯಾವಾಗಲೂ ಓಂಕಾರವನ್ನು ಉಚ್ಚರಿಸುವವನು. ಮಾಹೇಶ್ವರನೆಂಬ ಗಣೇಶ್ವರನು ಸರ್ವಗುಣ ಸರ್ವಕ್ರಿಯೆ ಸರ್ವಜ್ಞಾನಗಳಿಂದ ಸಮೃದ್ಧನಾದವನು. ಭವವೆಂಬ ಮೂಷಕವನ್ನು ಮೆಟ್ಟಿ ಕುಳಿತವನು. ಅಥವಾ ಚಾಪಲ್ಯಸ್ವಭಾವವುಳ್ಳ ಜೀವಭಾವವೆಂಬ ಇಲಿಯನ್ನು ಏರಿ ನಿಶ್ಚಲಗೊಳಿಸಿರುವನೆಂಬ ಸಂಕೇತಾರ್ಥವನ್ನೂ ಹೇಳಬಹುದು. ಜೀವಾತ್ಮ ಭಾವವನ್ನು ಪೂರ್ಣಜಯಿಸುವುದೇ ಮಾಹೇಶ್ವರನ ಮುಖ್ಯ ಧ್ಯೇಯ. ಜೀವ ಭಾವಕ್ಕೆ ಕಾರಣವಾದ ಮನಃಕುಂಡಲಿನಿಯನ್ನು ಕಟ್ಟಿ ನಿಲ್ಲಿಸಿ ಉನ್ಮನಗೊಳಿಸಿರು ತ್ತಾನೆ ಮಾಹೇಶ್ವರನೆಂಬ ಗಣೇಶ್ವರನು. ಅಂತೆಯೇ ಮಾಹೇಶ್ವರನಿಗೆ ಕುಂಡಲಿನೀಶಕ್ತಿಯು ವಶವಾಗಿರುತ್ತದೆ. ಮನವನ್ನು ಗೆದ್ದುದರಿಂದ ಮಾಯೆ ಯನ್ನು ಗೆದ್ದಿರುತ್ತಾನೆ ಮಾಹೇಶ್ವರನು. ಶುದ್ಧ ಮಾಯಾಶಕ್ತಿ ಸಂಪನ್ನನಾಗಿರು ತ್ತಾನೆ. ಅಂದರೆ ತ್ಯಾಗಾಂಗರೂಪ ಪ್ರಕೃತಿಯನ್ನು ಪೂರ್ಣವಾಗಿ ಪರಿಶುದ್ಧಿ ಯಾಗಿಸಿಕೊಂಡಿರುತ್ತಾನೆ. ಇದರಿಂದಾಗಿ "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರ:" ಎಂಬ ಶ್ರುತ್ಯುಕ್ತಿಯು ಮಾಹೇಶ್ವರನಿಗೆ ಸಂಪೂರ್ಣ ವಾಗಿ ಸಮನ್ವಯವಾಗುತ್ತದೆ. ಒಟ್ಟಿನಲ್ಲಿ ಪ್ರಕೃತಿಯನ್ನು ಅಂದರೆ ಮಾಯೆಯನ್ನು ಜಯಿಸಿದವನೇ ಮಾಹೇಶ್ವರನು.

"ವಿದ್ಯಾಯಾಂ ರಮತೇ ಯಸ್ಮಾತ್ ಮಾಯಾಂ ಹೇಯಾಂ ಶ್ವವದ್ರಹೇತ್ ।
ಅನೇನೈವ ನಿರುಕ್ತೇನ ವೀರ ಮಹೇಶ್ವರಃ ಸ್ಮೃತಃ ॥
ಶಿವೋ ಮಾಹೇಶ್ವರಶ್ಚೇತಿ ನಾತ್ಯಂತಮಿಹ ಭಿದ್ಯತೇ ।
ಯಥಾ ತಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾ ಅಪಿ ॥
ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞರತಾ ಭುವಿ ।
ತಸ್ಮಾದಭ್ಯಂತರೇ ಕುರ್ಯುಶ್ಶೈವಾ ಮಾಹೇಶ್ವರಾ ಬಹಿಃ ॥"

—ಸಿ. ಶಿ. ಪರಿ...೫

ಎಂದು ಜಗದ್ಗುರು ರೇಣುಕರು ಮಾಹೇಶ್ವರನ ನಿಲವನ್ನು ನಿರ್ದಿಷ್ಟ ಗೊಳಿಸಿದ್ದಾರೆ. ಇದರಿಂದಾಗಿ ಗಣೇಶ-ಮಹೇಶ-ಮಾಹೇಶ ಈ ಮೂರಲ್ಲಿ ಯಾವ ಭೇದವಿಲ್ಲ.

ಮಾಹೇಶ್ವರನು ಗಣಪತಿಸ್ವರೂಪನೆಂದು ತಿಳಿದೆವು. ಅವನಿಗಿದೆ ಅವನದೇ ಆದ ಒಂದು ಗಣರಾಜ್ಯ. ಅದಕ್ಕೆ ಅವನು ಅಧಿಪತಿ. ಅವನ ಗಣರಾಜ್ಯ

ಜಡವಲ್ಲ. ಅದು ಗಣರ ರಾಜ್ಯ. ಆ ಗಣರ ಸಾಧನೆಯಲ್ಲಿ ಬರುವ ಸಮಸ್ಯೆಗಳನ್ನು ಮಾಹೇಶ್ವರನು ತನ್ನ ವಿಚಾರ ಬಲದಿಂದ ಬಿಡಿಸಬಲ್ಲನು. ಹೊಸ ಹೊಸ ಬೆಳಗನ್ನು ಬೀರಬಲ್ಲನು. ಮತಧರ್ಮಗಳನ್ನು ಪ್ರತಿಷ್ಠಿಸಬಲ್ಲನು. ಸಾಮಾಜಿಕರನ್ನು ಸಂಘಟಿಸಬಲ್ಲನು. ಸತ್ಯಾನ್ವೇಷಣ ದೃಷ್ಟಿಯನ್ನು ಬಹುಜನಕ್ಕೆ ಬೀರಬಲ್ಲನು. ಆತನ ಚಕ್ಷುಪ್ರತಿಭೆ ಪರಿಣಾಮಕಾರಿಯಾದುದು. ಆ ಪ್ರತಿಭೆಗೆ ಒಳಗಾದವರ ಹೃದಯಗಳು ಹೂವುಗಳಂತೆ ಅರಳುತ್ತವೆ, ಕಂಪಿಡುತ್ತವೆ : ಮಧುರ ಮಕರಂದದಿಂದ ತುಂಬುತ್ತವೆ.

ಬೀಜದಲ್ಲಿ ಅಂಕುರವು ಸ್ವತಃಸಿದ್ಧವಾಗಿರುವಂತೆ ಮಾನವನಲ್ಲಿ ಮಾಹೇಶ್ವರತ್ವವು ಸತಃಸಿದ್ಧವಾಗಿರುತ್ತದೆ. ಆದರೆ ಅದನ್ನು ಉಳಿಸಿ ಬೆಳಸಿಕೊಂಡು ಹೋಗುವುದರಲ್ಲಿ ಅವರವರ ಶಕ್ತಿ ಸಾಧನೆಗಳ ಮಾಪನವಾಗುತ್ತದೆ. ಸದಾಚಾರ ಸದ್ವಿಚಾರ ಮಾರ್ಗದಲ್ಲಿ ಅದನ್ನು ಬೆಳಸಿದರೆ ಅದು ಹೆಮ್ಮರವಾಗಿ ಹೂವು ಹಣ್ಣುಗಳನ್ನು ಬಿಡುತ್ತದೆ. ಪ್ರಾಣಿಕೋಟಿಗೆ ರಕ್ಷಣೆಯನ್ನು ಒದಗಿಸಿ ರಂಜಿಸುತ್ತದೆ. ಸರ್ವಭೂತಾತ್ಮಭಾವ ಬೆಳೆಯುತ್ತದೆ.

ಪ್ರಕೃತಿಯನ್ನು ಸುಸ್ಥಿತಿಗೆ ತರುವುದೇ ಮಾಹೇಶ್ವರನ ಕರ್ತವ್ಯ. ಈ ಮಹಾಕರ್ತವ್ಯ ಕೈಗೂಡಬೇಕಾದರೆ ತನಗೆ ಕಾರ್ಪಣ್ಯಸ್ಥಿತಿಯಿದ್ದರೆ ಆಗದು. ತಾನು ಅನಧಿಕಾರಿ ಮತ್ತು ಅನುದಾರಿಯಾಗಿದ್ದರೆ ಆಗದು. ಸ್ಥಿತಿ ಗತಿಗಳ ನಿರ್ವಹಣೆಗೆ ಮಾಹೇಶ್ವರತ್ವವು ಮುಖ್ಯವಾದುದು ; ಅತ್ಯಗತ್ಯವಾದುದು. ಜೀವ–ಜಗತ್ತುಗಳ ಸ್ಥಿತಿಗಳನ್ನು ನಿರ್ವಹಿಸಬಲ್ಲ ಈಶತ್ವ ಅಷ್ಟಿಷ್ಟಿದ್ದರೆ ಆಗದು ; ಅಂತಹದಿಂತಹದಿದ್ದರೆ ಆಗದು. ಅದು ಮಹಾ–ಈಶತ್ವವೇ ಆಗಬೇಕು; ಅದನ್ನು ಆ ಮಹೇಶ್ವರನಿಂದಲೇ ಪಡೆಯಬೇಕು ಆಗ ವಿಶ್ವೇಶ್ವರತ್ವವು ಸಾಧ್ಯ. ಆಗ ಜೀವ–ಜಗತ್ತುಗಳ ಸ್ಥಿತಿ ಕರ್ತೃತ್ವವು ಸಾಧ್ಯ. ಗತಿ ಪ್ರಭುತ್ವವು ಸಾಧ್ಯ. ಆಗ ಅವನಿಗೆ ಯಾರಿಂದಲೂ ಯಾವುದರಿಂದಲೂ ಅಡ್ಡಿ ಆತಂಕಗಳುಂಟಾಗವು ; ಪ್ರಜ್ಞಾ ಶಕ್ತಿಯ ಸಹಾಯದಿಂದ ಗುರುಲಿಂಗಕೃಪೆಯಿಂದ ತನ್ನ ಮಹಾ ಪ್ರಭುತ್ವವನ್ನು ನಿರಾಯಾಸವಾಗಿ ನಿಷ್ಕಂಟಕವಾಗಿ ಮುಂದುವರಿಸಬಲ್ಲನು. ಸರ್ವ ಸುಖ ಶಾಂತಿಗಳಿಗೆ ಶಕ್ತನಾಗಬಲ್ಲನು. ಆತ್ಮೋದ್ಧಾರದೊಡನೆ ಅಖಿಲ ಜೀವೋದ್ಧಾರ ಕಾರ್ಯಕರ್ತೃವಾಗಬಲ್ಲನು, ಅಧಿಕಾರದ ಅಭಿಮಾನದಿಂದ ದೂರಿರಬಲ್ಲನು. ಸದಾ ಸಹಜ ಸ್ಥಿತಿಯಲ್ಲಿರಬಲ್ಲನು.

ಷಟ್‌ಸ್ಥಲಾಂತರ್ಗತ ಈ ಮಾಹೇಶ್ವರತ್ವವು ಉಪಾಸ್ಯವೇ ಹೊರತು ಉಪಾಸಕವಲ್ಲ. ಅವನ ದೃಷ್ಟಿಯಲ್ಲಿ ಅವನು ಉಪಾಸಕನಾಗಿಯೆ ಇರುತ್ತಾನೆ. ಆಗನಾಗಿಯೆ ಆರಾಧಿಸುತ್ತಾನೆ. ಬಾಹ್ಯ ಜಗತ್ತಿನ ಜನಕ್ಕೆ ಆತನು ಉಪಾಸ್ಯ ನೆನಿಸಿದ್ದರೂ ಅವನಿಗೆ ಈ ಭಾವವಿರುವುದಿಲ್ಲ. ಈ ಪೂಜ್ಯತೆಗಾಗಿ ಈ ಮಾನ್ಯತೆ ಗಾಗಿ ಅವನು ಆಶಿಸಿಕೊಂಡಿರುವುದಿಲ್ಲ. ಜಾಗತಿಕ ಗೌರವ ಪ್ರತಿಷ್ಠೆಗಳು ಅವನಿ ಗೊಂದು ತೃಣ.

ಮಾಹೇಶ್ವರನು ದೇಹೇಂದ್ರಿಯಗಳಿಗೆ ದಾಸನಾಗದೆ ದೇಶ ಕಾಲಗಳಿಗೆ ದಾಸನಾಗದೆ ಆಶೆಗೆ ದಾಸನಾಗದೆ ಜಿತೇಂದ್ರಿಯನಾಗಿ ಜಿತಕಾಮಕಾಲನಾಗಿ ಮಾಹೇಶ್ವರನೆನಿಸಿರುತ್ತಾನೆ. ವಿಷಯಕ್ಕೆ ದಾಸನಾಗದೆ ಹೃದಯೇಶ್ವರನ ಆರಾಧ ನೆಯ ಅಧಿಕಾರವನ್ನು ಪಡೆದಿರುತ್ತಾನೆ. ಜಲ, ರಸ, ರುಚಿಗಳ ಮೇಲೆ ಮಾಹೇ ಶ್ವರನು ತನಗಿರುವ ಕರ್ತೃಸಾದಾಖ್ಯ ತತ್ವವನ್ನು ಪ್ರಯೋಗಿಸುತ್ತಾನೆ. ಅಂತೆಯೇ ಕಾಯಕರಣೇಂದ್ರಿಯಗಳ ಮೇಲೆಯೂ ಪ್ರಯೋಗಿಸುತ್ತಾನೆ. ಚಿತ್ತಕ್ಕೂ ಕರ್ಮೇಂದ್ರಿಯಗಳಿಗೂ ಸಂಬಂಧವಿರುವಂತೆ, ಬುದ್ಧಿಗೂ ಬುದ್ಧೀಂದ್ರಿಯ ಗಳಿಗೂ ನಿಕಟ ಸಂಬಂಧವಿದೆ. ಆದ್ದರಿಂದ ಮಾಹೇಶ್ವರನು ಮುಖ್ಯವಾಗಿ ಬುದ್ಧೀಂದ್ರಿಯಗಳ ಸಂಯಮವನ್ನು ಸಾಧಿಸುತ್ತಾನೆ. ಮಾನವ ದೇಹೇಂದ್ರಿಯ ಜೀವಿ. ಇವನ್ನು ಬಿಟ್ಟು ಬಾಳಲು ಇವನಿಗೆ ಸುತರಾಂ ಸಾಧ್ಯವಿಲ್ಲ. ಇವನ್ನು ಬಿಡುವಂತಿಲ್ಲ. ಇವು ಹರಿದಂತೆ ಹೋಗುವಂತಿಲ್ಲ. ಕರ್ಮೇಂದ್ರಿಯಗಳಲ್ಲಿ ಆಚಾರವನ್ನು ತುಂಬುವಂತೆ ಬುದ್ಧೀಂದ್ರಿಯಗಳಲ್ಲಿ ಮುಖ್ಯವಾಗಿ ವಿಚಾರವನ್ನು ತುಂಬಬೇಕಾಗಿದೆ. ನಿಷ್ಠೆಯನ್ನು ಪ್ರತಿಷ್ಠಿಸಬೇಕಾಗಿದೆ. ಷಟ್‌ಸ್ಥಲ ಧರ್ಮ ಸಾಧನಕ್ಕೆ ಹಚ್ಚಬೇಕಾಗಿದೆ. ನಿಚ್ಚಳಗೊಳಿಸಬೇಕಾಗಿದೆ.

ಭಕ್ತಸ್ಥಲದ ಬರೀ ಆಚಾರ ಸಿದ್ಧಿಯಿಂದ ಸಾಧಕನ ರಥ ಮುಂದಕ್ಕೆ ಸಾಗದು. ಆಚಾರ ಒಂದು ಚಕ್ರ, ವಿಚಾರ ಇನ್ನೊಂದು ಚಕ್ರ. ಆದ್ದರಿಂದ ಮಾಹೇಶ್ವರಸ್ಥಲದ ವಿಚಾರ ಸಂಪಾದನೆ ಅಗತ್ಯ. ಇದಾಗಬೇಕಾದರೆ ಸಾಧ ಕಾಂಗನು ಎರಡನೆಯದಾದ ಕ್ರೋಧವನ್ನು ಗೆಲ್ಲಬೇಕು. ಭಕ್ತನಾಗಿದ್ದಾಗ ಕಾಮ ವನ್ನು ಗೆದ್ದಿರುತ್ತಾನೆ. ಈಗ ಕ್ರೋಧ ಜಯ ಅಗತ್ಯ. ಇದು ತನು ಮನಗಳಲ್ಲಿ ಇರಬಾರದು. ಇದ್ದರೆ ತನ್ನ ಮಾಹೇಶ್ವರತ್ವಕ್ಕೆ ಹಾನಿ.

"ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯ ? ತನ್ನ ತನುವಿನ ಕೋಪ. ತನ್ನ ಹಿರಿಯತನದ ಕೇಡು. ತನ್ನ ಮನದ ಕೋಪ ತನ್ನ ಅರಿವಿಂಗೆ ಹಾನಿ

ಮನೆಯು ಕಿಚ್ಚು ಮನೆಯು ಸುಟ್ಟಲ್ಲದೆ ನೆರೆಮನೆಯು ಸುಡದು ಕೂಡಲ ಸಂಗಮ ದೇವಾ !" ಮಾಹೇಶ್ವರನ ಮೂಲ ಜೀವಾಳ ಹಿರಿಯತನ ಮತ್ತು ಅರಿವುಳ್ಳ ತನ. ಇವೆರಡನ್ನು ಹಾಳು ಮಾಡುವುದು ಮುನಿಸು. ಇದರಿಂದಾಗಿ ಮಾಹೇಶ್ವ ರನು ಮೊದಲು ಮುನಿಸನ್ನು ಮುರಿದಿಕ್ಕಬೇಕು ನಿರರ್ಥಕವಾದ ಕೋಪಕ್ಕೆ ನಿಜಕೂ ಆಶ್ರಯವಿರಬಾರದು.

ಆ ಪರಶಿವನ ಸ್ವರೂಪ ಲಕ್ಷಣಗಳಾದ ಸತ್ ಚಿತ್ ಆನಂದ ನಿತ್ಯ ಪೂರ್ಣ ಅಖಂಡ ಈ ಆರರಲ್ಲಿ ಕ್ರಮವಾಗಿ ಮೊದಲಿನ ಸದ್ರೂಪವು ಆಚಾರಲಿಂಗವಾಗಿ ಕ್ರಿಯಾಶಕ್ತಿಯಾಗಿ ಶ್ರದ್ಧಾಭಕ್ತಿಯಾಗಿ ಭಕ್ತಾಂಗನನ್ನು ಉದ್ಧರಿಸಿದರೆ ಎರಡನೆಯ ದಾದ ಚಿದ್ರೂಪವು ಗುರುಲಿಂಗವಾಗಿ ಜ್ಞಾನಶಕ್ತಿಯಾಗಿ ವಿದ್ಯಾಕಲೆಯಾಗಿ ನಿಷ್ಠಾ ಭಕ್ತಿಯಾಗಿ ನೆಲಸಿ ಮಾಹೇಶ್ವರಾಂಗನನ್ನು ಉದ್ಧರಿಸುತ್ತದೆ. ಆ ಪರಶಿವನು ಚಿತ್ಕಳೆಯಾಗಿ ಪ್ರತ್ಯಂಗದಲ್ಲಿ ಪಶ್ಚಿಮ ಚಕ್ರದಲ್ಲಿ ನೆಲಸಿರುತ್ತಾನೆ.

ಜಲಾಂಗವನ್ನು ಜಾಗೃತಗೊಳಿಸುವುದೇ ಈ ಸ್ಥಲದ ಕಾರ್ಯ. ಜಿಹ್ವೆ ಯನ್ನು ಬುದ್ಧಿಯನ್ನು ಸಂಸ್ಕರಿಸಿ ಪದ–ಪದಾರ್ಥಗಳ ಜ್ಞಾನ ಶಿಕ್ಷಣವನ್ನು ಮತ್ತು ರಸ–ರುಚಿಗಳ ಜ್ಞಾನ ಶಿಕ್ಷಣವನ್ನು ಒದಗಿಸುವುದೇ ಮಾಹೇಶ್ವರಸ್ಥಲದ ಮಹಿಮೆ. ಜಿಹ್ವಾವಚ್ಛಿನ್ನ ಚೈತನ್ಯವೇ ಗುರುಲಿಂಗ. ಆರೋಗಣೆಯ ಅಂಗಗಳಾದ ರಸ– ರುಚಿಗಳನ್ನು ಶುದ್ಧಪ್ರಸಾದವನ್ನಾಗಿಸಿ ಗುರುಲಿಂಗಾರ್ಪಣಕ್ಕೆ ತಕ್ಕವನ್ನಾಗಿಸಬೇಕು. ಅಂತೆಯೇ ಬುದ್ಧಿವಿಷಯವಾದ ಶಬ್ದಪದಾರ್ಥವನ್ನು ಶುದ್ಧಪ್ರಸಾದವನ್ನಾಗಿಸಿ ನುಡಿಗಲಿಸಬೇಕು. ಪ್ರತಿ ಪದ ಪದಾರ್ಥಗಳ ಅರಿವು–ಅನುಭವಗಳನ್ನು ಬುದ್ಧಿ ಕರಣಕ್ಕೆ ಒದಗಿಸುವುದೇ ಗುರುಲಿಂಗ ಶಿಕ್ಷಣ. ಉಭಯಪ್ರಸಾದದಲ್ಲಿಯೂ ಶುದ್ಧತೆ ಸಾತ್ವಿಕತೆಗಳನ್ನು ಅಳವಡಿಸಿಕೊಳ್ಳುವುದೇ ಮಾಹೇಶ್ವರನ ಮನದ ನಿಷ್ಠೆ ಯಾಗಿರಬೇಕು. ಗುರುಲಿಂಗವನ್ನು ಪ್ರಸನ್ನಗೊಳಿಸುವ ವಿದ್ಯಾಕಲೆ ಮಾಹೇಶ್ವರನ ದಾಗಿರಬೇಕು. ಮಾಹೇಶ್ವರಾಂಗನು ಅಪಶಬ್ದಗಳನ್ನು ಕುಹಕ ಕುಭಾಷೆಯನ್ನು ಆಡಬಾರದು. ಅಭಕ್ಷ್ಯಭಕ್ಷಣವನ್ನು ಅಪೇಯಪಾನವನ್ನು ಮಾಡಬಾರದು. ಗುರುಲಿಂಗ ಮುಖಾರ್ಪಣಕ್ಕೆ ಯೋಗ್ಯವಾದ ವಿಶುದ್ಧ ಪದ–ಪದಾರ್ಥಗಳನ್ನೇ ಯಾವಾಗಲೂ ಬಳಸಬೇಕು. ಇದರಿಂದ ಮಾಹೇಶ್ವರನ ಗುರುಲಿಂಗಕಲೆ ಉಳಿದು ಬೆಳೆಯುತ್ತದೆ ; ಬೆಳೆದು ಬೆಳಗುತ್ತದೆ, ಬೆಳಗಿದರೆ ಆಗ ಮಾಯಾ ಮಲ ಮಾಣುತ್ತದೆ, ಮಾಯಾಮಲದ ಬಂಧನ ಬಾಧೆಗಳು ತೊಲಗುತ್ತವೆ. ಇದನ್ನುಂಟು

ಮಾಡಿಕೊಳ್ಳುವುದೇ ಮಾಹೇಶ್ವರನ ಮುಖ್ಯಧ್ಯೇಯ. ಈತನ ಮಾಯಾಮಲ ನಿವೃತ್ತಿಗೆ ಆಹಾರ ಶಿಕ್ಷಣ, ಶಾಬ್ದಿಕ ಶಿಕ್ಷಣ ಅಗತ್ಯವೆಂಬುದು ಅರಿಕೆಯಾಯಿತು. ಜಿಹ್ವೆ ಬುದ್ಧಿಗಳು ಜಾಗ್ರತಗೊಳ್ಳಬೇಕು, ರುಚಿ ರಸಗಳು ಶುದ್ಧವಾಗಬೇಕು— ಎಂಬುದು ಸಿದ್ಧವಾಯಿತು. ಈ ವಿವರಣೆಯಿಂದ ಮಾಹೇಶ್ವರಸ್ಥಲದ ನಿಲವು ನೆಲೆಕಲೆಗಳು ನಿಚ್ಚಳವಾಗಿ ನಿದರ್ಶನಕ್ಕೆ ನಿಲುಕುವವು. ಶಾರೀರಕ (ತ್ಯಾಗಾಂಗ) ಶಿಕ್ಷಣವೂ ಸಂಸ್ಕಾರವೂ ಇದರ ಇತಿಧ್ಯೇಯವೆಂಬುದು, ಆಚಾರ ವಿಚಾರ ಕೌಶಲ್ಯವೇ ಇದರ ಶಿವಯೋಗವೆಂಬುದು ಮನವರಿಕೆಯಾಯಿತು.

ಮಾಹೇಶ್ವರನಿಗೆ ಮಾನವತೆ ಒಂದು. ಒಳ ಒಡಕುಗಳನ್ನು ಆವನು ಗಣಿಸನು. ಜನ್ಮ ಕರ್ಮಗಳಿಂದ ಬಂದ ಜಾತಿ ಪಂಥ ವರ್ಣಾಶ್ರಮಗಳನ್ನು ಒಪ್ಪನು. ಇವುಗಳ ನಿರರ್ಥ ನಿಬಂಧಗಳಿಗೆ ಒಳಗಾಗನು. ಸರ್ವಸಮತಾಭಾವವೇ ಮಾಹೇಶ್ವರನ ಮಹಾ ಸಂಪತ್ತು. ಎಲ್ಲರಲ್ಲಿ ಶಿವಭಾವವನ್ನು ಹುಟ್ಟಿಸುವುದೆ ಅವನ ಉದ್ಯಮ. ಎಲ್ಲರ ಭಯ, ಬಡತನ, ಪಾಪ, ತಾಪ, ದೌರ್ಬಲ್ಯ, ಚಾಂಚಲ್ಯಗಳನ್ನು ಕಳೆವುದೇ ಆತನ ಕಾಯಕ. ಶಾಂತಿ ತೃಪ್ತಿಗಳನ್ನು ತುಂಬುವುದೇ ಮಾಗಳ ಮಣಿಹ. ಜಗಜ್ಜೀವಿಗಳಿಗೆ ಜ್ಯೋತಿರ್ಮಯ ಈಶ್ವರತ್ವ ಸಂಜೀವಿನಿಯನ್ನಿತ್ತು ನಿಡುಗಾಲ ಬಾಳಿ ಬದುಕುವಂತೆ ಮಾಡುವುದೇ ಮಾಹೇಶ್ವರನ ನಿತ್ಯ ಯಜ್ಞ. ಎಲ್ಲರೂ ಅಲ್ಪವೂ ಅಶಾಶ್ವತವೂ ಆದ ಜೀವ ಧರ್ಮಗಳನ್ನು ತ್ಯಜಿಸಿ ಅನಲ್ಪವೂ ಅನಂತ್ಯವೂ ಆದ ದೇವಧರ್ಮಗಳನ್ನು ಭಜಿಸಿ ಭವಮುಕ್ತರಾಗಬೇಕೆಂಬುದೇ ಮಾಹೇಶ್ವರನ ಮಹಾ ಮನೀಷೆ. ಎಲ್ಲರ ಬುದ್ಧಿ ವರ್ಧಿಸಿ ಬಾಳು ವಿಕಸಿಸಿ ಬದುಕ ಭವ್ಯವಾಗಲೆಂಬುದೇ ಮಾಹೇಶ್ವರನ ಹೆಬ್ಬಯಕೆ. ಮಾಹೇಶ್ವರನ ಗುರು ಲಿಂಗಾರಾಧನೆಯಲ್ಲಿ ಈ ಗುಟ್ಟಡಗಿದೆ. ಬುದ್ಧಿಯ ಬೆಳಗಿನಿಂದ ಹೃದಯ ಕತ್ತಲೆಯ ಕಳೆದು ಹೃದ್ಗುಹೆಯಲ್ಲಿರುವ ಈಶ್ವರನ ಸಾಕ್ಷಾತ್ಕಾರ ಮಾಡಿಕೊಂಡು, ಮಾನವರಿಗೆಲ್ಲ ಮಾಡಿಸುವುದೇ ಮಾಹೇಶ್ವರನ ಮಹಾ ಸಿದ್ಧಿ, ಇದಕ್ಕಾಗಿ ಆ ಮಾಹೇಶ್ವರಸ್ಥಲೋಪಾಸನೆ.

ವಿದ್ಯಾರ್ಥಿಯಾಗಿ ವಿದ್ಯೆಯನ್ನು ಸಂಪಾದಿಸಬೇಕು. ಶಿಷ್ಯನಾಗಿ ಶ್ರೀಗುರುವನ್ನು ಸೇವಿಸಬೇಕು. ರುದ್ರನಾಗಿ ರುದ್ರನನ್ನು ಸಂಪೂಜಿಸಬೇಕು. ಅಂತೆಯೇ ಮಾಹೇಶ್ವರನಾಗಿ ಮಹೇಶ್ವರ ಸ್ವರೂಪ ಗುರುಲಿಂಗವನ್ನು ಆರಾಧಿಸಬೇಕು. ಮಾಹೇಶ್ವರನಾಗಬೇಕಾದರೆ ಈ ಸ್ಥಲೋಕ್ತವಾದ ಒಂಬತ್ತು ಉಪಸ್ಥಲಗಳನ್ನು

ಉಪಾಸಿಸಬೇಕು. ಮಾಹೇಶ್ವರ ಪ್ರಶಂಸಾಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯ ನಿರಸನಸ್ಥಲ, ಸರ್ವಾದ್ವೈತ ನಿರಸನಸ್ಥಲ, ಆಹ್ವಾನನಿರಸನಸ್ಥಲ, ಅಷ್ಟ ಮೂರ್ತಿ ನಿರಸನಸ್ಥಲ, ಸರ್ವಗತತ್ವ ನಿರಸನಸ್ಥಲ, ಶಿವಜಗನ್ಮಯಸ್ಥಲ, ಭಕ್ತ ದೇಹಿಕಲಿಂಗಸ್ಥಲ ಈ ಒಂಬತ್ತು ಮಾಹೇಶ್ವರಸ್ಥಲದ ಉಪಸ್ಥಲಗಳು. ಇವು ಭಕ್ತನಿಗೆ ಅಳವಟ್ಟರೆ ಮಾಹೇಶ್ವರ ಸಂಸ್ಕಾರವೊದಗಿ ಮಾಹೇಶ್ವರ ಧರ್ಮಿಯೆಂದೆನಿಸುವನು. ಈ ನವವಿಧಸ್ಥಲಗತ ವಿಷಯ ಪ್ರತಿಪಾದನೆಯೇ ಮಾಹೇಶ್ವರನ ನಿತ್ಯ ವ್ರತ; ನಿಜ ಗುರುಲಿಂಗಾರ್ಚನ, ಇವುಗಳಿಗಾಗಿಯೇ ತನ್ನ ತ್ರಿಕರಣಗಳನ್ನು ತೆಯ್ದು ಸವೆಸಬೇಕು; ನೆಯ್ದು ಸೇವಿಸಬೇಕು. ಸುಯ್ದು ಪ್ರಶಂಶಿಸಬೇಕು, ಇದೇ ಇವನಿಗೆ ವಿದ್ಯೆ, ಇದೇ ಇವನಿಗೆ ಕಲೆ. ಇದೇ ಇವನ ಜ್ಞಾನಯಜ್ಞ. ಮಾಹೇಶ್ವರನ ನಾಲಗೆಯಲ್ಲಿ ನಿರುಪಮ ಗುರುಲಿಂಗಕಳೆ ನೆಲಗೊಳ್ಳಬೇಕು: ಬುದ್ಧಿಯಲ್ಲಿ ವಿದ್ಯಾಕಲೆ ಪ್ರತಿಷ್ಠಿತವಾಗಬೇಕು. ಸರ್ವೋತ್ಕೃಷ್ಟವಾದ ಶಿವ ಮಂತ್ರದ ನೆನಹು ನಿತ್ಯ ನಡೆಯುತ್ತಿರಬೇಕು.

# ಮಾಹೇಶ್ವರ ಪ್ರಶಂಸಾಸ್ಥಲಂ—೧

ಶಿವಾರ್ಚನೆಗಿಂತ ಶಿವಸ್ತುತಿ ಶ್ರೇಷ್ಠ. 'ಪೂಜಾಕೋಟಿ ಸಮಂ ಸ್ತೋತ್ರಂ. ಸ್ತೋತ್ರಕೋಟಿಸಮೋ ಜಪಃ' ಎಂಬುದನ್ನು ಗಮನಿಸಬೇಕು. ಪೂಜೆಗಿಂತ ಪ್ರಶಂಸೆ ಪ್ರಶಸ್ತ. ಪ್ರಶಂಸಾರ್ಥವುಳ್ಳುದೇ ಪ್ರಣವ. ಪ್ರಣವಸ್ವರೂಪನೇ ಅಂದರೆ ಪ್ರಶಂಸಾಸ್ವರೂಪನೇ ಪರಶಿವ. ಯಾವ ಬಗೆಯಲ್ಲಿಯೇ ಆಗಲಿ ಮಹೇಶ್ವರನನ್ನು ಪ್ರಶಂಸ ಮಾಡುವುದೇ ಪ್ರಣವ ಜಪ, 'ವಚನದಲ್ಲಿ ನಾಮಾಮೃತ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ' ಇಂತಾಗುವುದು ಪ್ರಶಂಸೆಯ ಧ್ಯೇಯ. ಇದು ಭಾವೈಕ್ಯದ ಮಾರ್ಗ. ಧ್ಯಾನ–ಧಾರಣ ಕಾರಣ.

ಪ್ರಣವೋಪಾಸನೆಯೆಂದರೂ ಮಾಹೇಶ್ವರ ಪ್ರಶಂಸೆಯೆಂದರೂ ಒಂದೇ ಅರ್ಥ. ಪ್ರಣವಸ್ವರೂಪನೇ ಮಹೇಶ್ವರ. ಪ್ರಣವ ಜಪವೇ ಮಾಹೇಶ್ವರ ಪ್ರಶಂಸ. ಇದರಿಂದ ವಾಕ್ ಶುದ್ಧಿಯಾಗುತ್ತದೆ, ಸಿದ್ಧಿಯಾಗುತ್ತದೆ; ಶಬ್ದ ಬ್ರಹ್ಮ ಸಾಕ್ಷಾತ್ಕಾರವಾಗುತ್ತದೆ. ಇದರಿಂದಾಗಿ ವಾಣಿಯಲ್ಲಿ ಮಹೇಶ್ವರನ ಪ್ರಶಂಸಾರೂಪ ವಚನಾಮೃತಗಳನ್ನು ತುಂಬಿಕೊಳ್ಳುವ ಆರಾಧನೆ ಆರಂಭದ್ದು; ಆತ್ಮಧಿಕವಾದದ್ದು. ಪ್ರಣವರೂಪ ಪರಮಾತ್ಮ ಧರ್ಮವು ಅಂಗನಲ್ಲಿ ಆಳವಡ ಬೇಕಾದರೆ ಪ್ರಥಮ ನಿಯಮ ಮಾಹೇಶ್ವರ ಪ್ರಶಂಸೆ! 'ತಮುಷ್ಟುಹಿ....' ಎಂಬೀ ಶೃತಿಯು ನಮ್ಮೀ ಅಭಿಪ್ರಾಯವನ್ನು ಎತ್ತಿ ಹಿಡಿದಿದೆ. ನಿದ್ದೆಯಿಂದ ಎದ್ದೊಡನೆ ಸ್ತುತಿಗೈಯುವುದು ಆರೋಗ್ಯಭಾಗ್ಯಕ್ಕೆ ಪ್ರಥಮೌಷಧಿ; ಆಧ್ಯಾತ ಸಿದ್ಧಿಗೆ ಪ್ರಥಮ ವಿಧಿ.

"ಅಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷುಃ
ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ
ಸರ್ವಂ ಬ್ರಹ್ಮೋಪನಿಷದಂ......"

ಅಪ್ಯಾಯಗೊಳ್ಳುವ ಅಂಗಗಳಲ್ಲಿ ಮೊದಲಿನದು ವಾಕ್ ಎಂಬುದನ್ನು ಮನದಟ್ಟಾಗಿಸಿಕೊಳ್ಳಬೇಕು. ಆತ್ಮನಿಂದ ಉದಯವಾದ ಆಗಸದಲ್ಲಿ ಮೊದಲು

ಉದಯವಾಗುವವೆಂದರೆ ಶಬ್ದ ಮತ್ತು ವಾಕ್! ಶಬ್ದ ಪ್ರಸಾದದಿಂದ ವಾಗಿಂದ್ರಿಯ ಆಪ್ಯಾಯಗೊಳ್ಳಬೇಕಾಗಿದೆ. ಶಬ್ದವು ಪ್ರಸಾದವಾಗಬೇಕಾದರೆ ಮಾಹೇಶ್ವರ ಪ್ರಶಂಸೆಯಿಂದ! ಅಂದರೆ ಪ್ರಣವ ಪ್ರಾರ್ಥನೆಯಿಂದ! ಇದರಿಂದ ಶಬ್ದಸೂತಕ ವಳಿಯುತ್ತದೆ, ರಸದ ಪದಾರ್ಥತ್ವವಳಿದು ಪ್ರಸಾದತ್ವ ಪ್ರಾಪ್ತವಾಗುತ್ತದೆ. ಇಷ್ಟಾದ ಬಳಿಕ ಘ್ರಾಣ–ನಯನ–ಕರ್ಣಗಳು ತಂತಮ್ಮ ಪ್ರಾಕೃತಿಕ ರೂಪಕರ್ಮಗಳನ್ನು ಪಾಪತಾಪಗಳನ್ನು ಕಳೆದುಕೊಳ್ಳುತ್ತವೆ, ಸರ್ವೇಂದ್ರಿಯಗಳಲ್ಲಿ ಬ್ರಹ್ಮಬಲವುಂಟಾಗುತ್ತದೆ; ಬ್ರಹ್ಮಸಾನ್ನಿಧ್ಯವುಂಟಾಗುತ್ತದೆ.

"ಕೋಟ್ಯಾನುಕೋಟಿ ಜಪವನು ಮಾಡಿ ಕೋಟಲೆಗೊಳ್ಳಲದೇಕೆ ಮನವೆ? ಕಿಂಚಿತು ಗೀತವೊಂದನಂತ ಕೋಟಿ ಜಪ! ಆಡಿ ಹಾಡಿ ಬದುಕು ಮನವೆ!...." ಎಂದರು ಬಸವಣ್ಣನವರು.

ಮಾಹೇಶ್ವರನ ಪ್ರಶಂಸಾರೂಪ ಆರಾಧನೆಗೆ ಆತನ ತನುವೇ ತಂಬೂರಿಯಾಗಬೇಕು; ನಚೆನುಡಿಗಳೇ ತಾಳವಾಗಬೇಕು. ಬುದ್ಧಿಹಸ್ತದ ಶಬ್ದಗಳೇ ಮಿಡಿವ ಬೆರಳುಗಳಾಗಬೇಕು. ನರನಾಡಿಗಳೇ ತಂತಿಗಳಾಗಬೇಕು. ಹೃದಯ ಹೆಪ್ಪುಗಟ್ಟಿ ಹಾಡಬೇಕು–ಹರನಿಗಿಂತ ಹಿರಿದಾದ ಚೈತನ್ಯವಿಲ್ಲೆಂದು! ಬಾಣ–ಮಯೂರರಂತೆ ಬಣ್ಣಿಸುವ ಬುದ್ಧಿ ಶುದ್ಧಿಯುಳ್ಳವನಾಗಬೇಕು ಮಾಹೇಶ್ವರನು.

"ವಿಶ್ವಸ್ಮಾದಧಿಕೋ ರುದ್ರೋ ವಿಶ್ವಾನುಗ್ರಹಕಾರಕಃ ।
ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥"

ಪ್ರಗತಿ ಪಥದಲ್ಲಿ ಕ್ರಿಯಾಲೋಪವು ಹೇಗೆ ಕುಂಠಿತಗೊಳಿಸುವುದೋ ಹಾಗೆ ಜ್ಞಾನಲೋಪವೂ ಕುಂಠಿತಗೊಳಿಸುತ್ತದೆ. ಜ್ಞಾನಲೋಪವಾಗಬಾರದೆಂದರೆ ಬುದ್ಧಿಸ್ಥಿರವಾಗಬೇಕು. ಬುದ್ಧಿಚಾಪಲ್ಯದಿಂದಲೇ ಜ್ಞಾನಲೋಪವುಂಟಾಗುತ್ತದೆ. ಬಾಳಿಗೆ ಬುದ್ಧಿಯ ಬಲ ಅಷ್ಟಿಷ್ಟಲ್ಲ. ಬುದ್ಧಿ ಸ್ಥೈರ್ಯವೇ ಜೀವನ; ಬುದ್ಧಿ ಚಾಪಲ್ಯವೇ ಮರಣ. ಸ್ಥಿರಬುದ್ಧಿಯಿಲ್ಲದೆ ಸ್ಥಿತಪ್ರಜ್ಞತ್ವವು ಬಾರದು. ಸ್ಥಿತಪ್ರಜ್ಞತೆಗೆ ಸ್ಥಿರಬುದ್ಧಿಯೇ ಬುನಾದಿ. ಜೀವನದ ಸುವ್ಯವಸ್ಥೆಗೆ ಬುದ್ಧಿಯೇ ಬೃಹನ್ನಿಧಿ. ಮಾಹೇಶ್ವರತ್ವದ ಪ್ರಾಪ್ತಿಗೂ ಸ್ಥಿರಬುದ್ಧಿಯೆ ಸಹಕಾರಿ.

ಕ್ಷುದ್ರ ವಿಷಯಗಳಲ್ಲಿ ಕ್ಷುದ್ರ ದೇವತೆಗಳಲ್ಲಿ ಸ್ಥಿರಬುದ್ಧಿಯಿದ್ದರೆ ಸುಖವಿಲ್ಲ. ಇದರಿಂದ ಬುದ್ಧಿಸ್ಥಿರತೆ ಬಹುದಿನ ಉಳಿಯುವುದಿಲ್ಲ. ಮಾಹೇಶ್ವರತ್ವಪ್ರಾಪ್ತಿಗೆ

ಬದಲಾಗಿ ಮಹಾದೈನ್ಯತೆಗೆ ಗುರಿಯಾಗಬೇಕಾಗುತ್ತದೆ. ಆದ್ದರಿಂದ ವಿಶ್ವ ವಿಶಿಷ್ಟತೆ, ವಿಶ್ವಕಾರುಣ್ಯತೆ ಯಾರಲ್ಲಿವೆಯೋ ಅವರಲ್ಲಿ ಸ್ಥಿರಬುದ್ಧಿಯುಳ್ಳವರಾಗಬೇಕು. ಅವುಳ್ಳವನೆಂದರೆ ಆ ರುದ್ರನೊಬ್ಬ. ಶ್ರೇಯಸ್ಸನ್ನುಂಟು ಮಾಡುವ ಮಾಹೇಶ್ವರತ್ವವನ್ನು ಬಯಸುವವನು ಮಹಾ ಪ್ರಭುವಾದ ಮಹಾ ಕರುಣಾ ಮೂರ್ತಿಯಾದ ಆ ಮಹಾ ರುದ್ರನಲ್ಲಿ ಸ್ಥಿರಬುದ್ಧಿಯ ಸಿದ್ಧಿಯನ್ನು ಪಡೆಯಬೇಕು.

ವ್ಯಷ್ಟಿ ಮತ್ತು ಸಮಷ್ಟಿ ಸರ್ವಸ್ಥೂಲ ಪ್ರಪಂಚವೇ ವಿಶ್ವ. ಮತ್ತು ಪರಶಿವನು ಸೇರಿರುವ ಅವಕಾಶಕ್ಕೆ ವಿಶ್ವವೆಂದು ಹೆಸರು. ಹೊಗು-ಸೇರು ಎಂಬರ್ಥದ ವಿಶ್‌ಧಾತುವಿನಿಂದ ವಿಶ್ವವಾಗಿದೆ.

ವಿಶ್ವವೇ ದೊಡ್ಡದು. ವಿಶ್ವಕ್ಕಿಂತಲೂ ದೊಡ್ಡವನು ಪರಮೇಶ್ವರನು.

"ಸಹಸ್ರ ಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಮ್ ॥"

—ಪುರುಷಸೂಕ್ತ

"ವಿಶ್ವಾಧಿಕೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ
ಪೂರ್ವಂ ಸ ನೋ ಬುಧ್ಯಾ ಶುಭಯಾ ಸಂಯುನಕ್ತು"

— ಶ್ವೇತಾಶ್ವತರ

ಸಾವಿರ ತಲೆ, ಸಾವಿರ ಕಣ್ಣು, ಸಾವಿರ ಕಾಲುಳ್ಳ ಆ ಪರಮ ಪುರುಷನು ವಿಶ್ವವನ್ನು ವ್ಯಾಪಿಸಿ ವಿಶ್ವದಾಚೆ ಹತ್ತು ಬೆರಳಷ್ಟು ಹಬ್ಬಿರುತ್ತಾನೆ.

ವಿಶ್ವೇಶ್ವರನೂ ಋಷೀಶ್ವರನೂ ಆದ ಆ ಪರಶಿವರುದ್ರನು ಪೂರ್ವದಲ್ಲಿ ಹಿರಣ್ಯಗರ್ಭ (ಬ್ರಹ್ಮ) ನನ್ನು ಹುಟ್ಟಿಸಿದನು. ಬ್ರಹ್ಮಾಧಿಪತಿಯಾದ ಆ ರುದ್ರದೇವನು ನಮ್ಮನ್ನು ಶಿವಬುದ್ಧಿಯುಳ್ಳವರನ್ನಾಗಿ ಮಾಡಲಿ.

ಸರ್ವಸಮರ್ಥನಾದ ಪರಮೇಶ್ವರನು ಪಿಂಡಾಂಡ ಪ್ರಪಂಚದಲ್ಲಿ ಆಧಾರದಿಂದ ಆರಂಭಿಸಿ ವಿಶುದ್ಧಚಕ್ರದಿಂದಾಚೆ ಹತ್ತಂಗುಲ ವ್ಯಾಪಿಸಿದ್ದಾನೆ. ಬ್ರಹ್ಮಾಂಡದಲ್ಲಿಯೂ ಭೂಮ್ಯಾಕಾಶವನ್ನು ತುಂಬಿ ಸುತ್ತು ಹತ್ತುಬೆರಳಷ್ಟು ವ್ಯಾಪಿಸಿದ್ದಾನೆ ಆಚೆಯೂ ಇದ್ದಾನೆ.

ಬ್ರಹ್ಮಾಂಡವನ್ನು ಹುಟ್ಟಿಸ ಬಲ್ಲ ಬ್ರಹ್ಮ. ಆ ಬ್ರಹ್ಮನನ್ನು ಹುಟ್ಟಿಸಿದಾತ ಶ್ರೀರುದ್ರ. ಆದ್ದರಿಂದ ಆತ ಪರಬ್ರಹ್ಮ; ಮಹರ್ಷಿ; ಸರ್ವೇಶ್ವರ; ಸ್ವಯಂಭು. ಅವನು ನಮ್ಮ ಶುಭಬುದ್ಧಿಯೊಡನೆ ಸಮರಸವಾಗಿರಲಿ. ಅಥವಾ ಬುದ್ಧಿಯಲ್ಲಿ ಯೋಗವಾಗಿರಲಿ.

ಈ ಶ್ವೇತಾಶ್ವತರ ಶೃತಿಯೇ ಶ್ರೀ ರೇಣುಕ ಗೀತೆಯಾಗಿ ಅವತರಿಸಿದಂತಿದೆ. ಬ್ರಹ್ಮಾಂಡಕ್ಕಿಂತಲೂ ಬೃಹತ್ತಾಗಿರುವ, ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಆಗಿರುವ ಆ ಪರಬ್ರಹ್ಮವಸ್ತುವನ್ನು ತನ್ನ ಬುದ್ಧಿಹಸ್ತದಲ್ಲಿರಿಸಿಕೊಂಡ ಭಕ್ತನು ಮಾಹೇಶ್ವರನಲ್ಲದೆ ಮತ್ತೇನು? ಆ ಅಖಂಡವಸ್ತುವಿನ ಅನುಗ್ರಹ ವನ್ನು ಸಂಪಾದಿಸಿ ಬುದ್ಧಿಸ್ಥಿರತೆಯನ್ನು ಪಡೆದು ಶುಭಯೋಗದಲ್ಲಿ ಸುಖಿಸುವ ವನು ಮಾಹೇಶ್ವರನೆಂದು ಹೇಳುವಲ್ಲಿ ಯಾವ ಸಂಶಯವಿಲ್ಲ. "ಏಕ ಏವ ರುದ್ರೋ ನ ದ್ವಿತೀಯಾಯತಸ್ಥೇ" ಎಂಬ ಶೃತಿಯಂತೆ. ಅನನ್ಯಮತಿಯುಳ್ಳ ವನು ಮಹಾಯತಿಯೇ ನಿಜ. ಪೂರ್ಣಾಖಂಡವಸ್ತುವಿನಲ್ಲಿ ಏಕನಿಷ್ಠೆಯುಳ್ಳ ಮಾಹೇಶ್ವರನ ಬುದ್ಧಿಯೂ ಪೂರ್ಣಾಖಂಡವಾಗಿ ವಿಶಾಲವಾಗುತ್ತದೆ. ಅಂತಹ ವಿಶಾಲಮತಿಗೆ ವಿಶ್ವಾನುಗ್ರಹಸಮರ್ಥನಾದ ವಿಶ್ವೇಶ್ವರನು ಅನುಗ್ರಹಿಸದಿರುವನೆ? ವಿಶ್ವಂಭರ ಸಾಮರ್ಥ್ಯ ಅವನದಾಗಿದೆ.

ವಿಶ್ವವಿಶಾಲವಾದ ಮತಿಯುಳ್ಳವನು ವಿಶ್ವೇಶನಲ್ಲಿ ವಿಶ್ವಾಸವುಳ್ಳವನು ಮಾಹೇಶ್ವರನು, ವಿಶ್ವೇಶ್ವರನ ಅನುಗ್ರಹವನ್ನು ಪಡೆವ ಅಚಲ ಬುದ್ಧಿಯುಳ್ಳ ವನು ಮಾಹೇಶ್ವರನು.

ವಿಶ್ವಾಧಿಕನೆಂದರೆ ವಿಶ್ವಕ್ಕೂ ವಿಶ್ವಸ್ವರೂಪನಾದ ವಿಷ್ಣುವಿಗೂ ವಿಶಿಷ್ಟ ನೆಂದರ್ಥ, ಜಡ ಜಂಗಮಕ್ಕೆಲ್ಲ ಒಡೆಯನೆಂದರ್ಥ, ಇದರಂತೆ ವಿಶ್ವಾನುಗ್ರಹ ಕಾರಕ ಎಂಬ ಪದಕ್ಕೂ ಅರ್ಥವನ್ನು ಹೇಳಬೇಕು. ಚರಾಚರವನ್ನು ಕರುಣಿಸುವ ಕೃಪಾಸಾಗರನು ಅವನು. ಸ್ಥಿರಾಬುದ್ಧಿ' ಎಂಬ ಪದಕ್ಕೆ ನಿಷ್ಠಾಭಕ್ತಿ ಯುಕ್ತ ಬುದ್ಧಿಯೆಂದರ್ಥ. ಮಾಹೇಶ್ವರಸ್ಥಲದ ಉಭಯ ಸಕೀಲಗಳನ್ನು ಒಂದೇ ಪದದಲ್ಲಿ ಹೇಳಿದ ಜಾಣ್ಮೆಯಿಲ್ಲಿದೆ. ಇಷ್ಟಾದರೆ ಮಾಹೇಶ್ವರತ್ವಕ್ಕೆ ಇದಕ್ಕಿಂತ ಹೆಚ್ಚಿನ ಸಾಧನ ಸಂಪತ್ತಿ ಬೇಕಿಲ್ಲ.

ಮಾಹೇಶ್ವರನಬುದ್ಧಿ ವಿಶ್ವಾಧಿಕ್ಯನಲ್ಲಿ ವಿಶ್ವಾನುಗ್ರಹ ಕಾರಕನಲ್ಲಿ ಸ್ಥಿರ ವಾಗಬೇಕು. ವೈಶಾಲ್ಯ ಆಧಿಕ್ಯ ಅನುಗ್ರಹಗಳು ಮಾಹೇಶ್ವರನ ಬುದ್ಧಿಯಲ್ಲಿ

ರೂಪಗೊಳ್ಳಬೇಕು. ತಾನು ಪಡೆದುದನ್ನು ಹಿಡಿದಿರಿಸಿಕೊಂಡು ಉಳಿದವರಿಗೂ ಕೊಡಬೇಕು, ಆಗ ವೈಶಾಲ್ಯಕ್ಕೆ ಆಧಿಕ್ಯಕ್ಕೆ ಕಾರುಣ್ಯಭಾವಕ್ಕೆ ಅರ್ಥವತ್ತತೆ ಬರುತ್ತದೆ. ಮಾಹೇಶ್ವರತ್ವವೂ ಅರ್ಥಪೂರ್ಣವಾಗುತ್ತದೆ. ಮಾಹೇಶ್ವರನು ಜನತೆಯ ಮಾಹೇಶ್ವರ. ಜಾಗತಿಕ ಜೀವಿ. ಕಾರಣ ಜನತೆಯ ಮೇಲೆ ತನ್ನ ಸಹೃದಯತೆಯನ್ನು ಬೀರದಿದ್ದರಾಗದು, ಮಹೇಶ್ವರನಂತೆ ಮಾಹೇಶ್ವರನೂ ಬ್ರಹ್ಮಾಂಡವನ್ನೂ ಬ್ರಹ್ಮಾಂಡಾಂತರ್ಗತ ಜೀವಿಗಳನ್ನೂ ಧಾರಣಮಾಡುವ ಪೋಷಿಸುವ ದಿವ್ಯಸಾಮರ್ಥ್ಯ ಸಂಪನ್ನನಾಗಬೇಕು. ಇದಾಗಬೇಕಾದರೆ ಆ ವಿಶ್ವಾಧಿಕನೊಡನೆ ವಿಶ್ವಾನುಗ್ರಹ ಕಾರಕನೊಡನೆ ಮಾಹೇಶ್ವರಾಂಗನಿಗೆ ಏಕಾತ್ಮ ಭಾವವೂ ಆ ಏಕಾತ್ಮಭಾವದಲ್ಲಿ ಸ್ಥಿರಬುದ್ಧಿಯೂ ಉಂಟಾಗಬೇಕು. ಉಂಟಾಗುತ್ತದೆ. ವಿಶ್ವದೊಡನಿದ್ದು ವಿಶ್ವೋತ್ತೀರ್ಣಶಕ್ತಿ ಸಂಭವಿಸುತ್ತದೆ. ವಿಶ್ವಂಭರಣ ಸಾಮರ್ಥ್ಯ ವುಂಟಾಗುತ್ತದೆ. ಆ ಮಹಾ ಚೈತನ್ಯದ ವಿಶ್ವಾಧಿಕ್ಯ ಮತ್ತು ವಿಶ್ವಾನುಗ್ರಹ ಶಕ್ತಿ ಸ್ವರೂಪವನ್ನು ಮಾಹೇಶ್ವರನು ಮನದಟ್ಟಾಗಿಸಿ ಕೊಂಡು ಅದರಲ್ಲಿ ಸ್ಥಿರಬುದ್ಧಿಯುಳ್ಳವನಾಗಿರಬೇಕು.

ತನಗೆ ಪ್ರೇರಕ ಶಕ್ತಿಯಾಗಿ ನಿಂತಿರುವ ಆ ಪರಮ ಚೈತನ್ಯದ ಆಧಿಕ್ಯ ವೈಶಾಲ್ಯ ಕಾರುಣ್ಯಗಳನ್ನು ತಿಳಿಯದೆ ತಳೆಯದೆ ಮಾನವನು ಸಣ್ಣವನಾಗಿದ್ದಾನೆ. ಸ್ವಲ್ಪ ಸ್ವಭಾವದವನಾಗಿದ್ದಾನೆ. ಅವನ್ನು ತಿಳಿದು ತಳೆದರೆ ಇವನೇ ಮಾಹೇಶ್ವರ ನಾಗುತ್ತಾನೆ. ಭಾವ ವೈಶಾಲ್ಯವನ್ನು ಆಚಾರ ವಿಚಾರಾಧಿಕ್ಯವನ್ನು ಹೃದಯ ಕಾರುಣ್ಯವನ್ನು ಪಡೆದವರು ಮಾಹೇಶ್ವರರಾಗದೆ ಉಳಿಯರು. ಅಲ್ಪತೆ ನಿರ್ದಯ ತೆಗಳು ಮಾಹೇಶ್ವರರಲ್ಲಿರವು.

ರುದ್ರನು ಕೇವಲ ರೌದ್ರರೂಪನಲ್ಲ; ಕರುಣಾರ್ದ್ರಹೃದಯಿ, ಅವನ ಕರುಣೆ ಕಿಂಚಿತ್ತಲ್ಲ; ವಿಶ್ವವಿಶಾಲವಾದದ್ದು. ಏಕೆಂದರೆ ವಿಶ್ವ ದುಃಖಮಯ. ಈ ವಿಶ್ವದ ಜನಜೀವನ ದುಃಖಭೂಯಿಷ್ಠ. ಸೃಷ್ಟಿಯ ಆದಿಯಿಂದ ಕಷ್ಟ ಕಾರ್ಪಣ್ಯಗಳಿಗೆ ಜೀವನು ಒಳಗಾಗಿದ್ದಾನೆ. ಸಂಕುಚಿತತೆ ಸಂವೇದನೆಗಳು ಜೀವನಿಗೆ ಅಂಟಿ ಬಂದ ಜಾಡ್ಯಗಳು. ಇವನ್ನು ಕಳೆದುಕೊಳ್ಳಬೇಕಾದರೆ ವಿಶ್ವ ವಿಶಾಲ ಮನೋಭಾವವುಳ್ಳ ವಿಶ್ವೇಶ್ವರನ ಅನುಗ್ರಹ ಅತ್ಯಗತ್ಯ. ಆತನು ಭಕ್ತರ ಸಂವೇದನೆಗಳನ್ನು ದೂರೀಕರಿಸುತ್ತಾನೆ. ಸಂಕೋಚಸ್ಥಿತಿಯನ್ನು ಸಂಹರಿಸು

ತ್ತಾನೆ. ವಿಶಾಲ ಭಾವವನ್ನು ಅನುಗ್ರಹಿಸುತ್ತಾನೆ. ಭವರೋಗವನ್ನು ನಿವಾರಿಸುತ್ತಾನೆ.

ಸಾಧಕನು ವಿಶಾಲ ಮನೋಭಾವವನ್ನು ಪಡೆಯಬೇಕು. ಪಡೆದವನು ಪುಣ್ಯ, ಗಣ್ಯ. ಸ್ವಾರ್ಥಿಗಳಿಗೆ ಇದು ರುಚಿಸದು. ಸ್ವಾರ್ಥಶೀಲ ಪತಂಗದಂತೆ ಪತನಹೊಂದುತ್ತಾನೆ: ಪರಿತಪಿಸುತ್ತಾನೆ.

ವಿಶ್ವ ವಿಶಾಲಭಾವ ವಿಶ್ವೇಶ್ವರ ಇವೆರಡೂ ಒಂದೆ! ಆ ಭಾವದಲ್ಲಿರುವವನು ಸೀಮಾತೀತ, ಶಾಶ್ವತ, ಅವನು ವಿಶ್ವ ವಿರಾಟಸ್ವರೂಪ. ವಿಶಾಲಭಾವದ ಜೀವನವೇ ಜೀವನ; ಅದೇ ಅಪ್ರತಿಮ ಭೂಷಣ. ಜೀವನಸತ್ವ, ಜೀವನ ಸೌಂದರ್ಯ ವಿಶಾಲಮನೋಭಾವದಲ್ಲಿವೆ. ಜೀವನ ಪಾವಿತ್ರ್ಯವೂ ಅದರಲ್ಲದೆ. ಅಂತೆಯೇ ಮಾಹೇಶ್ವರನು ವಿಶುದ್ಧ ಮತ್ತು ವಿಶಾಲ ಪ್ರೀತಿಯನ್ನು ವಿಶಿಷ್ಟ ರೀತಿಯನ್ನು ಅಭ್ಯಾಸಮಾಡಿ ಅಳವಡಿಸಿಕೊಳ್ಳಲು ತನ್ನ ಜೀವನವನ್ನೇ ಮೀಸಲಾಗಿಸುತ್ತಾನೆ. ಮಾಹೇಶ್ವರಸ್ಥಲಕ್ಕೆ ಮೊತ್ತ ಮೊದಲಿಗೆ ಪದಾರ್ಪಣಮಾಡಿದ ಭಕ್ತನು ಮೇಲೆ ವಿವರಿಸಿದಂತೆ ಅರ್ಥಬಾಹುಲ್ಯವುಳ್ಳ ವಿಶ್ವಾಧಿಕನೂ ವಿಶ್ವಾನುಗ್ರಹಕಾರಕನೂ ಆದ ರುದ್ರದೇವನ ಉಪಾಸಕನಾಗುವ ಔಚಿತ್ಯವನ್ನು ಕುರಿತು ಅದೆಷ್ಟು ಬರೆದರೂ ಕಡಿಮೆಯೆ! ವಿಶ್ವಕ್ಕಿಂತಲೂ ಹೆಚ್ಚು ವ್ಯಾಪಕವಾದ ಶಕ್ತಿಯುಳ್ಳ ಚೈತನ್ಯೋಪಾಸಕನು ಮಾಹೇಶ್ವರನು.

ಅಂತರಂಗದ ಒಂದು ಸೀಮಿತಕರಣವಾದ ಬುದ್ಧಿಯು ವಿಶ್ವಾಧಿಕನ ಆರಾಧನೆಯ ಬಲದಿಂದ ವಿಶ್ವಾಧಿಕ ಶಕ್ತಿ ಸಂಪನ್ನವಾಗುತ್ತದೆ. ಆಗ "ರವಿ ಕಾಣದುದಂ ಕವಿ ಕಂಡಂ" ಎಂಬ ನಾಣ್ಣುಡಿಗೆ ನಿಲುಕುತ್ತದೆ. ಬುದ್ಧಿನೇತ್ರ ಅರಳಿ ಪ್ರಬುದ್ಧವಾಗಿ ರವಿಗೆ ಮಿಗಿಲಾಗಿ ಕಾಣುವ ಕಾಂತಿಗೊಳ್ಳುವ ಶಕ್ತಿಯುಳ್ಳದ್ದಾಗುತ್ತದೆ. ಮಾಹೇಶ್ವರನ ಆ ಮಹಾಬುದ್ಧಿಗೆ ವಿಶ್ವವೂ ಒಂದು ಅಣುವಾಗಿ ನಿಲ್ಲುತ್ತದೆ. ಚೌಕಟ್ಟಿನ ಚಿತ್ರವಾಗಿ ಶೋಭಿಸುತ್ತದೆ. ವಿಶ್ವೇಶ್ವರನ ವಿಚಾರವನ್ನೇ ಲೀಲಾಜಾಲವಾಗಿ ಗ್ರಹಿಸಬಲ್ಲ, ಗ್ರಹಿಸಿ ಅರುಹಬಲ್ಲ ಬುದ್ಧಿಗೆ ವಿಶ್ವವಿಚಾರ ಒಕ್ಕುಡಿತಕ್ಕೂ ಸಾಲದು. ಅಂತಹ ಆ ಮಾಹೇಶ್ವರನ ಬುದ್ಧಿ ಪ್ರೌಢಿಮೆ ಅಗಾಧವಾದುದು; ಬುದ್ಧಿ ಪ್ರತಿಭೆ ಅಪಾರವಾದುದು. ಆತನ ಆ ಪ್ರಜ್ಞೆ ಪ್ರಮಾಣಾತೀತವಾದುದು. ಮಾಹೇಶ್ವರನ ಆ ಪ್ರಜ್ಞಾ ಪ್ರಭಾಕರನ ಮುಂದೆ ಈ ಪ್ರಭಾಕರನ ಪ್ರಕಾಶ ಏತಕ್ಕೂ ಬಾರದು; ಯಾವಲೆಕ್ಕಕ್ಕೂ ಸಿಕ್ಕದು.

ದಿವ್ಯ ಪ್ರಜ್ಞೆಯಿಂದ ಮಾಹೇಶ್ವರನು ತನ್ನ ಬಾಳನ್ನು ಬದುಕನ್ನು ಬಹು ಎತ್ತರಕ್ಕೆ ಎತ್ತಿ ಹಿಡಿಯುತ್ತಾನೆ; ಬಹು ಬಿತ್ತರಕ್ಕೆ ಹಬ್ಬಿಸುತ್ತಾನೆ. ಸ್ಥಲನಾಮವನ್ನು ಸಾರ್ಥಕಗೊಳಿಸುತ್ತಾನೆ.

ಮಾಹೇಶ್ವರನಿಗೆ ಆ ಜಗದೀಶನ ಪೂರ್ಣ ಪ್ರಜ್ಞೆ ಉದಯುವಾದಬಳಿಕ ಜಾಗತಿಕ ಪ್ರಜ್ಞೆ ಉದಯವಾಗುವುದು ಹೆಚ್ಚೇನಲ್ಲ. "ತಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂಭವತಿ" ಎಂಬ ಮಾತು ಆಗ ಸತ್ಯದ ಒರೆಗಲ್ಲಿಗೆ ನಿಲ್ಲುತ್ತದೆ, ಮಾಹೇಶ್ವರನ ಪ್ರಜ್ಞಾ ಪ್ರಾಸಾದಕ್ಕೆ ವಿಶ್ವಾಧಿಕನ ವಿಶ್ವಾನುಗ್ರಹವೇ ವಿಶಿಷ್ಟ ಆಸರ. ಅದಿಲ್ಲದಿದ್ದರೆ ಮಾಹೇಶ್ವರಸ್ಥಲದ ಮಹಡಿಯು ಕೆಳಕ್ಕೆ ಉರುಳುವುದು.

ಮಾನವನಿಗೆ ವಿಶ್ವಾಧಿಕ್ಯವನ್ನು ತರುವುದು ಅಥವಾ ಭಕ್ತನಿಗೆ ಮಾಹೇಶ್ವರತ್ವವನ್ನು ತರುವುದು ದೇಹವಲ್ಲ, ಇಂದ್ರಿಯಗಳಲ್ಲ, ಚಿತ್ತವಲ್ಲ, ಸ್ಥಿರಬುದ್ಧಿಯೊಂದೆ; ನಿಶ್ಚಯಾತ್ಮಕ ವೃತ್ತಿಯುಳ್ಳ ಬುದ್ಧಿಯು ಪೂರ್ಣ ಪ್ರತಿಭೆಯುಳ್ಳುದಾದರೆ ವಿಶ್ವಾಧಿಕ್ಯವುಳ್ಳ ಮಾಹೇಶ್ವರತ್ವವು ಮೈಗೂಡಿಬರುತ್ತದೆ. ವಿಭು ಮತ್ತು ಪ್ರಭು ತಾನಾಗುತ್ತಾನೆ; ಕಾರುಣ್ಯ ರಸಭರಿತನಾಗುತ್ತಾನೆ. ವಿಶ್ವಾನುಗ್ರಹ ಲೀಲೆಯಲ್ಲಿ ಲೀನವಾಗುತ್ತಾನೆ. ವಿಶ್ವವು ಅವನ ಅವಿಭಾಜ್ಯ ಅಂಗವಾಗುತ್ತದೆ.

ಮಾಹೇಶ್ವರತ್ವವು ಅಹಂಕಾರದ ಕುರುಹಲ್ಲ. ಅದೊಂದು ಅಪೂರ್ಣತೆಯಿಂದ ಪೂರ್ಣತೆಗೆ ಹೋಗುವ ನಿಲುವು. ಸೃಷ್ಟಿಯಲ್ಲಿ ಸರ್ವವು ದೊಡ್ಡದಾಗ ಬಯಸುತ್ತದೆ ; ದೊಡ್ಡದಾಗುತ್ತದೆ. ಹುಟ್ಟಿದ ಮಗು ಚಿಕ್ಕದಾಗಿಯೆ ಇರುವುದಿಲ್ಲ. ಶರೀರದಂತೆ ಸಸ್ಯಾದಿಗಳು ಎಷ್ಟು ಬೆಳೆಯ ಬೇಕೋ ಅಷ್ಟು ಬೆಳೆಯುತ್ತವೆ. ಇದು ಸೃಷ್ಟಿಯಲ್ಲಿ ದೃಷ್ಟವಾಗಿದೆ. ಅಂತೆಯೇ ಆತ್ಮವೂ ದೊಡ್ಡದಾಗಬೇಕು ; ಅಂದರೆ ಪರಮಾತ್ಮನಾಗಬೇಕು. ಈಅತ್ವದಿಂದ ಮಹೇಶ್ವರತ್ವಕ್ಕೇರಬೇಕು.

ಶ್ರೀ ರುದ್ರದೇವನು ಹಿರಿಮೆಗೆ ಹಿರಿಮೆಯನ್ನು ಹೃದಯಾರೆ ಹರಸುವ ಪರಮ ಚೈತನ್ಯ. ಬುದ್ಧಿಗೆ ಬೃಹತ್ತತೆಯನ್ನು ಪ್ರಜ್ಞೆಗೆ ಪರಾಕಾಷ್ಠತೆಯನ್ನು ಅನುಗ್ರಹಿಸುವ ಅಪಾರ ಅಂತಃಕರುಣಿ ಆ ರುದ್ರನು. ಆತನು ಈ ವಿಶ್ವಕ್ಕಿಂತ ವಿಭು ; ವಿಶ್ವಕ್ಕೆ ಪ್ರಭು. ಆ ವಿಶ್ವಾಧಿಕ ರುದ್ರ ಚೈತನ್ಯ ಇಂತಹ ಅನಂತ ವಿಶ್ವಗಳನ್ನು ಸೃಷ್ಟಿಸಬಲ್ಲುದು, ಸಂರಕ್ಷಿಸಬಲ್ಲುದು, ಸಂಹರಿಸಬಲ್ಲದು-ತನ್ನೊಳಗೆ ! ಅಂತಹ ವಿಶ್ವಾಧಿಕ ವಿಶ್ವಾನುಗ್ರಹಕಾರಕ ಚೈತನ್ಯದಲ್ಲಿ ಸ್ಥಿರ ಬುದ್ಧಿಯುಳ್ಳವನೇ ಮಾಹೇಶ್ವರನೆನಿಸುವನು.

"ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ, ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ ।
ಸ್ಥಿರ ಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತ : ॥"
—ಗೀತಾ

ಪ್ರಿಯವನ್ನು ಪಡೆದು ಹರ್ಷಿಸುವ, ಅಪ್ರಿಯವನ್ನು ಪಡೆದು ಹಳಹಳಿಸುವ ಸ್ವಭಾವವನ್ನು ಬಿಡುವುದೇ ಸ್ಥಿರ ಬುದ್ಧಿ. ಅದು ಮೂಢವಾಗದೆ ಮುಂಜಾಗ್ರತೆಯುಳ್ಳದಾಗುತ್ತದೆ, ಆ ಸ್ಥಿರ ಬುದ್ಧಿಯೆ ಬ್ರಹ್ಮಸ್ವರೂಪವಾಗಲು ಸಾಧನವಾಗುತ್ತದೆ.ಬ್ರಹ್ಮವನ್ನರಿತವನು ಬ್ರಹ್ಮನಾಗುತ್ತಾನೆ.

ನಮಸ್ತೇ ದೇವ ದೇವೇಶ ನಮಸ್ತೇ ಭಕ್ತವತ್ಸಲ ।
ನಮಸ್ತೇ ಕರುಣಾಸಿಂಧೋ ಪರಮೇಶಾಯ ತೇ ನಮ: ॥

ಸೂಕ್ಷ್ಮ ತಂತ್ರದ ಶಿವಸ್ತವವಿದು. ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಪ್ರತಿಪಾದಿಸಿದ ವಿಶ್ವಾಧಿಕತ್ವವನ್ನು ವಿಶ್ವಾನುಗ್ರಹಕಾರಕತ್ವವನ್ನು ಇದು ಸಮರ್ಥಿಸಿದೆ. ಅದೇ ಸೂಕ್ಷ್ಮ ತಂತ್ರವು ವಿಶ್ವಾತ್ಮನನ್ನು ಹೀಗೆ ಹೊಗಳಿದೆ;

"ವಿಶ್ವತಃ ಪಾಣಿಪಾದಾಯ ವಿಶ್ವತೋಽಕ್ಷಿ ಮುಖಾಯ ಚ।
ವಿಶ್ವತೋ ವ್ಯಾಪ್ತರೂಪಾಯ ನಮೋ ವಿಶ್ವಾತ್ಮಕಾಯ ತೇ ॥"

ವಿಶ್ವಾತ್ಮನ ಆ ವಿಶ್ವ ಕಾರುಣ್ಯವನ್ನು ಮಾಹೇಶ್ವರನು ಪಡೆಯಬೇಕು. ವಿಶ್ವಾತ್ಮನ ವಿಶ್ವಕಾರುಣ್ಯ ಅಮೃತಕಿರಣವಾಗಿ ಲಭ್ಯವಾಗುತ್ತದೆ, ಅ ಪರಶಿವ ಬ್ರಹ್ಮನ ಆ ಕಾರುಣ್ಯತೀರ್ಥ. ಆ ಪ್ರಜ್ಞಾ ಪ್ರಭೆ ಮಾಹೇಶ್ವರನ ಬಾಳಿನೊಳ್ಪಿಗೆ ಒಂದು ಭಾಗ್ಯ. ಆತನ ಆ ಕಾರುಣ್ಯತೀರ್ಥ ಉಳಿದೆಲ್ಲ ತೀರ್ಥಗಳಿಗೆ ಮೂಲ; ಪೂರ್ಣ ನಿರ್ಮಲ. ಆತನ ಆ ಪ್ರಜ್ಞಾಪ್ರಭೆ ಉಳಿದೆಲ್ಲ ಬೆಳಕುಗಳಿಗೆ ಆಧಾರ; ಪರಾತ್ಪರ ಆ ತೀರ್ಥ ಎಲ್ಲ ತಾಪ–ಪಾಪಗಳನ್ನು ತೊಡೆಯುತ್ತದೆ, ಆ ಪೂರ್ಣ ಪ್ರಜ್ಞೆ ಎಲ್ಲ ಅಂಧಕಾರಗಳನ್ನು ಅಳಿಸುತ್ತದೆ; ಜಡತೆಯನ್ನು ಕೊಡವುತ್ತದೆ. ಆತನ ತೀರ್ಥ ದಿವ್ಯರಸದ ಸಾಗರ; ಸರ್ವಸುಖ ಮಂದಾರ. ಆತನ ಆ ಜ್ಯೋತಿ ವಿಶ್ವಸ್ಫೂರ್ತಿಯ ನೆಲೆ; ದಿವ್ಯನಾದ ದಿವ್ಯಕಲೆಗಳ ಕೇಂದ್ರ. ಅವೆರಡು ಜಗಜ್ಜೀವರ ಜೀವಾಳ; ಚಿತ್ತವಾಳ. ಅವೆರಡು ಒಂದಾಗಿ ಆತನ ಸಾಕಾರ ಸ್ವರೂಪದಲ್ಲಿ ಗಂಗೆಯಾಗಿ ಉತ್ತುಂಗಶಿಖಾಗ್ರದಲ್ಲಿಶೋಭಿಸುತ್ತಿರುವವು.

ಬಾಳಿಗೆ ಬೇಕಾದ ವಸ್ತು ಜಾತಗಳಲ್ಲಿ ವಿಶಿಷ್ಟವಾದುದೆಂಬುದನ್ನು ಎತ್ತಿ ತೋರಲು ಶಿರಸ್ಸಿನಲ್ಲಿ ಮಾಸವಾದಾತಿವೆ. ಆ ವಿಶ್ವಾನುಗ್ರಹದಲ್ಲಿ ವಿಶ್ವಾಸವುಳ್ಳವನೆ ಮಾಹೇಶ್ವರನು. ವಿಶ್ವಾನುಗ್ರಹ ಧರ್ಮ ನಿರೂಪಣವು ಸರ್ವ ಜೀವಕಾರುಣ್ಯಕ್ಕೆ ಪ್ರತೀಕವಾಗಿದೆ,

"ಬ್ರಹ್ಮಾದ್ಯೈಃರ್ಮಲಿನ ಪ್ರಾಯ್ಯೈರ್ನಿರ್ಮಲೇ ಪರಮೇಶ್ವರೇ ।
ಸಾಮ್ಯೋಕ್ತಿಂ ಯೋ ನ ಸಹತೇ ಸ ವೈ ಮಾಹೇಶ್ವರಾಭಿದಃ ॥
ಈಶ್ವರಃ ಸರ್ವಭೂತಾನಾಂ ಬ್ರಹ್ಮಾದೀನಾಂ ಮಹಾನಿತಿ ।
ಬುದ್ಧಿಯೋಗಾತ್ತದಾಸಕ್ತೋ ಭಕ್ತೋ ಮಾಹೇಶ್ವರಃ ಸ್ಮೃತಃ ॥

ಬ್ರಹ್ಮಾದಿಗಳು ಆಣವಾದಿ ಮಲಸಹಿತರು. ಪರಬ್ರಹ್ಮನಾದ ಪರಮೇಶ ರನು ಮಲತ್ರಯ ರಹಿತನು. ಇದರಿಂದಾಗಿ ಬ್ರಹ್ಮ-ಪರಬ್ರಹ್ಮರು ಸಾಮ್ಯರಲ್ಲ. ಯಾರಾದರೂ ಅರಿಯದೆ ಸಮಾನರೆಂದು ಹೇಳಿದರೆ ಸಲ್ಲುವ ಮಾತಲ್ಲ. ಅಂಥ ವರಿಗೆ ಅರಿವನ್ನು ಕೊಟ್ಟು ಅವರ ಅನಭಿಜ್ಞ ಅಭಿಪ್ರಾಯವನ್ನು ತೊಡೆಯಬೇಕು ಮಾಹೇಶ್ವರನಾದವನು.

"ಬ್ರಹ್ಮವಿಷ್ಣು ರುದ್ರೇಂದ್ರಾಸ್ತೇ ಸಾಂಪ್ರಸೂಯಾಂತೇ" ಎಂದು ಅಥರ್ವ ಶಿಖೋಪನಿಷದ್ವಚನವಿರುವುದು. ಇವರು ಹುಟ್ಟು ಸಾವಿನ ಕಟ್ಟಿಗೆ ಸಿಕ್ಕವರು. ಜಾತರ ದೋಷ ಜಾಲದಲ್ಲಿ ಬಿದ್ದವರು. ಸ್ವಸಂರಕ್ಷಣದಲ್ಲಿ ಅಸಮರ್ಥರು :

"ವಿಷ್ಣು ಬ್ರಹ್ಮ ಸುರಾಧಿಪ ಪ್ರಭೃತಯಃ ಸರ್ವೇಪಿ ದೇವಾಃ ಸುರಾಃ
ಸಂಭೂತಾಜ್ಜಲಧೇರ್ವಿಷಾತ್ಪರಿಭವಂ ಪ್ರಾಪ್ತಾಯಮೇತ್ಮೇಶ್ವರಂ ।
ಯಾನಾತಾನ್ ಶರಣಾಗತಾನಿತಿ ಸುರಾನ್ ಯೋ ರಕ್ಷದರ್ಧಕ್ಷಣಾತ್
ತಸ್ಮಿನ್ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥"

—ಶ್ರೀ ಶಂಕರಾಚಾರ್ಯರು

ಇದು ಬ್ರಹ್ಮಾದಿಗಳ ಬವಣೆ. ಇದು ಇವರ ರಕ್ಷಣಾಸಮರ್ಥತೆ. ಜನನ ಜೀವನಗಳು ಇವರ ವಶವಲ್ಲ. ಪೂರ್ಣಶಕ್ತಿಯಿಂದ ವಂಚಿತರು. ಕಾರ್ಯ ಕೋಟಿಗೆ ಸೇರಿದವರು. ಇದರಿಂದಾಗಿ ಇವರು ಸದಾ ಸಮಜೀವಿಗಳಲ್ಲ. ಸರ್ವೇ ಶ್ವರನಿಗೆ ಸಮರಲ್ಲ. ಆ ಪರಮೇಶ್ವರನಿಗೆ ಇವಾವ ಲೋಪದೋಷಗಳಿಲ್ಲ.

"ನ ತಸ್ಯಕಾರ್ಯಂ ಕರಣಂ ಚ ವಿದ್ಯತೇ,ನ ತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ।
ನ ತಸ್ಯ ಕಶ್ಚಿತ್ ಪತಿರಸ್ತಿ ಲೋಕೇ ನ ಚೇಶಿತಾನೈವಚ ತಸ್ಯ ಲಿಂಗಂ।
ಸಕಾರಣಂ ಕರಣಾಧಿಪಾಧಿಪೋನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ॥-"

—ಶ್ವೇತಾಶ್ವತರೋಪನಿಷತ್

ಪರಬ್ರಹ್ಮನಾದ ಪರಮೇಶ್ವರನು ಕಾರ್ಯಕರಣಗಳ ಕಟ್ಟಿಗೆ ಸಿಕ್ಕವನಲ್ಲ. ಆತನಿಗೆ ಸಮಸಮರು ಅಧಿಕರು ಯಾರಿಲ್ಲ. ಆವನೇ ಮಹಾದೇವ. ಅವನಿಗೊಬ್ಬ ಒಡೆಯನಿಲ್ಲ. ಪಾಲಕನಿಲ್ಲ, ಅವನು ಸರ್ವಕಾರಣಗಳಿಗೆ ಕಾರಣನು. ಜನನ-ಮರಣ ರಹಿತನು. ಅವನು ಸರ್ವಸಮರ್ಥ, ಸ್ವತಂತ್ರ. ಅವನು ಎಲ್ಲಕ್ಕೂ ಒಡೆಯನು. ಎಲ್ಲರಿಗೂ ಒಡೆಯನು. "ಜಗತಾಂಪತಯೇ ನಮೋ....ಕ್ಷೇತ್ರಾಣಾಂ ಪತಿಯೇ ನಮೋ....ವನಾನಾಂ ಪತಯೇ ನಮೋ .. ಮಂತ್ರಿಣೇವಾಣಿಜಾಯ ಕಕ್ಷಾಣಾಂ ಪತಯೇ ನಮೋ ಔಷಧೀನಾಂ ಪತಯೇ ನಮೋ....ವಾಮದೇವಾಯನಮೋ ಜೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ"

—ಶ್ರೀರುದ್ರ

"ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿ:
ಬ್ರಹ್ಮಣೋಧಿಪತಿ ಬ್ರ್ರಹ್ಮಾ ಶಿವೋ ಮೇಽಸ್ತು ಸದಾಶಿವೋಂ"

—ಈಶಾನಮಂತ್ರ.

ಈ ನುಡಿಗಳಂತೆ ಎಲ್ಲರೊಡೆಯನಾತ. ಎಲ್ಲರ ಸಲಹುವನಾತ. ಎಲ್ಲ ವಿದ್ಯೆಗಳಿಗೆ ಅಧಿಪತಿಯಾತ. ದೇವದೇವನಾತ. ಆತನಲ್ಲಿ 'ಬುದ್ಧಿಯೋಗ'ವುಳ್ಳ ಭಕ್ತನೇ ಮಾಹೇಶ್ವರನೆನಿಸುತ್ತಾನೆ. ಇಲ್ಲಿ ಪ್ರಯೋಗಿಸಿದ 'ಬುದ್ಧಿಯೋಗ'ವೆಂಬ ಪಾರಿಭಾಷಿಕ ಪದವು ಗಮನಾರ್ಹವಾದುದು. ಈ ಪ್ರಯೋಗವು ಮಾಹೇಶ್ವರನಿಗೂ ಬುದ್ಧಿಯೋಗಕ್ಕೂ ಇರುವ ನಿಕಟಸಂಬಂಧಸೂಚಕವಾಗಿದೆ. ಜ್ಞಾನ ಪದಕ್ಕಿಂತಲೂ ಬುದ್ಧಿ ಪದ ವಿಶಿಷ್ಟವಾಗಿದೆ; ಉಭಯಾರ್ಥದ್ಯೋತಕವಾಗಿದೆ. ಜ್ಞಾನ ಕ್ರಿಯಾಮಾತ್ರಸೂಚಕವಾದರೆ ಬುದ್ಧಿ ಕ್ರಿಯಾ ಮತ್ತು ಕರಣ ಈ ಉಭಯಸೂಚಕವಾಗಿದೆ. ಇಂತಹ ಬುದ್ಧಿಯೋಗಕ್ಕೆ ಕರ್ತೃ ಮಾಹೇಶ್ವರ. ಮಾಹೇಶ್ವರನು ಮೊದಲು ಕರಣವಾದ ಬುದ್ಧಿಯನ್ನು ಸಂಯಮದಿಂದ ಸ್ಥಿರಗೊಳಿಸಿ ಬಳಿಕ ಆ ಪರಬ್ರಹ್ಮ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಅಂತಾದಾಗ ಅದು ಬುದ್ಧಿಯೋಗವೆನಿಸುತ್ತದೆ. ಆ ಬುದ್ಧಿಯೋಗಕ್ಕೆ ಸಾಕ್ಷಾತ್ಕಾರ

ವಾಗತಕ್ಕವನು ಸರ್ವವಿದ್ಯಾಧಿಪತಿ, ಸರ್ವಭೂತಾಧಿಪತಿ: ಬ್ರಹ್ಮಾದಿ ಸರ್ವದೇವಾಧಿಪತಿ. ಸತ್ಯಜ್ಞಾನಸ್ವರೂಪನಾದ ಪಶುಪತಿ.

ಕಣ್ಣಿಗೆ ಕಣ್ಣು ಬುದ್ಧಿ. ಅದು ಕವಿ ಕಣ್ಣು. ಬುದ್ಧಿಯ ಭೌತಿಕ ವೃತ್ತಿಗಳನ್ನು ತಡೆದರೆ ಆಗ ಅದು ಬುದ್ಧಿಯೋಗವೆನಿಸುತ್ತದೆ. ಆಗ ಅದು ಕವಿಋಷಿಯು ಕಣ್ಣಾಗಲು ಸಮರ್ಥವಾಗುತ್ತದೆ. ಭೂತ ಬ್ರಹ್ಮಾದಿಗಳಿಗೆ ಈಶ್ವರನಾದ ಪರಶಿವನನ್ನು ಪರಿಕಿಸುತ್ತದೆ. ಆಗ ಈ ಕಣ್ಣಿಗೂ ಆ ಕಣ್ಣಿಗೂ ಮಹದಂತರ: ಅದರ ಶಕ್ತಿ ಮಹತ್ತರ. ಇದು ಹೊರಗಿನದು; ಅದು ಒಳಗಿನದು. ಇದು ಬಾಹ್ಯದರ್ಶಿ: ಅದು ಅಂತರ್ದರ್ಶಿ. ಆ ಅಂತರ್ದರ್ಶಿತ್ವವು ಅಳವಡಬೇಕಾದರೆ ಅದು ಸ್ಥಿರವಾಗಬೇಕು; ಹರವಾಗಬೇಕು. ಹೃದಯದಿಂದ ಆರ್ದ್ರವಾಗಬೇಕು. ಅಂತಾದಾಗ ಅದು ಇಂದ್ರಿಯಾತೀತವಾದ ಆ ಪರಿಪೂರ್ಣಾಖಂಡವಸ್ತುವನ್ನು ಕಾಣುಸುತ್ತದೆ. ಪೂರ್ಣಪ್ರಜ್ಞೆಯನ್ನು ಪಡೆಯುತ್ತದೆ. ಅದುವೇ ದಿವ್ಯದರ್ಶನ. ಶಿವಸಾಕ್ಷಾತ್ಕಾರ.

ಎಲ್ಲಿ ಬುದ್ಧಿ ಶಕ್ತಿ (ಯೋಗ) ಇಲ್ಲವೋ ಅಲ್ಲಿ ಆತ್ಮಪ್ರಕಾಶವಿಲ್ಲ. ಆತ್ಮಪ್ರಕಾಶವಿಲ್ಲದಲ್ಲಿ ಪರಮಾತ್ಮ ಪ್ರಜ್ಞೆಯಿಲ್ಲ. ಇದಿಲ್ಲದಲ್ಲಿ ವಿಭುತ್ವ ಪ್ರಭುತ್ವಗಳಿಲ್ಲ. ಪ್ರಪಂಚ ಪ್ರಜ್ಞೆ ಪರಿಮಿತ, ಪರಮಾತ್ಮ ಪ್ರಜ್ಞೆ ಅಪರಿಮಿತ. ಅದೇ ಮಹಾಜ್ಞಾನ. ಅದುಳ್ಳವನೇ ಮಾಹೇಶ್ವರ. ಆ ಅಪರೋಕ್ಷಾನುಭೂತಿಗೆ ಬುದ್ಧಿಯೋಗವೇ ಅಡಿಗಲ್ಲು.

ಬುದ್ಧಿಯೋಗವೆ ಯೋಗ. ಬುದ್ಧಿಯೋಗವಿಲ್ಲದಿದ್ದರೆ ಉಳಿದ ಇನ್ನಾವ ಯೋಗವೂ ಲಭಿಸದು. ಬುದ್ಧಿ ಬಲ್ಲಿದನಾದರೆ ಕ್ರಿಯಾಯೋಗದಲ್ಲಿ ಜ್ಞಾನಯೋಗದಲ್ಲಿ ರಾಜಯೋಗದಲ್ಲಿ ಶಿವಯೋಗದಲ್ಲಿ ಪ್ರವೇಶಿಸಬಲ್ಲ. ಅದೇ ಬುದ್ಧಿಹೀನನಾದರೆ ಇವುಗಳ ಪ್ರವೇಶ ಸಾಧ್ಯವಿಲ್ಲ. ಇನ್ನು ಫಲಶ್ರುತಿಯ ಪ್ರಸ್ತಾಪವೇಕೆ ?

"ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ"

ಜ್ಞಾನವು ಅಜ್ಞಾನಾವೃತವಾದರೆ ಜೀವಿಗಳು ಸಹಜವಾಗಿವೆ ಮೋಹಾಂಧರಾಗುತ್ತಾರೆ; ಭ್ರಾಂತಾತ್ಮರಾಗುತ್ತಾರೆ.

ಬುದ್ಧಿಯೋಗ ಅದೊಂದು ಅಸಾಮಾನ್ಯ ಯೋಗವಾದಂತೆ ಉತ್ತಮ ವ್ಯುತ್ಕ್ರಾಂತಯೋಗವೂ ಆಗಿದೆ. ಪರಮ ಪ್ರಗತಿಕಾರಕ ಯೋಗವೂ ಆಗಿದೆ. ಚಿಕ್ಕದಾಗಿ ಹುಟ್ಟಿದ ಹೊಳೆ ಹರಿಯುತ್ತ ಹರವಾಗಿ ಹೆಗ್ಗಡಲ ಸೇರುವಂತೆ ದೇಹೇಂದ್ರಿಯಾದಿಗಳಿಗೆ ಈಶನಾದ ಜೀವನು ಬುದ್ಧಿಯೋಗದ ಸಿದ್ಧಿಯಿಂದ ದಿವ್ಯಪಥದಲ್ಲಿ ಪುರೋಗಮಿಸಿ ಪರಮೇಶನಲ್ಲಿ ಸಮರಸವಾಗುವುದೆ ಸ್ವಾಭಾವಿಕಯೋಗ; ಸಹಜಯೋಗ. ಇದು ಮಹೇಶ್ವರತ್ವ. ಇದಕ್ಕೆ ದೋಹದವನ್ನುಂಟು ಮಾಡುತ್ತದೆ ಬುದ್ಧಿಯೋಗ. ಆ ಮಾಹೇಶ್ವರತ್ವವನ್ನು ಆರ್ಜಿಸುವ ಅರ್ಹತೆ ಮಾನವನಿಗಲ್ಲದೆ ಮತ್ತಾವ ಪ್ರಾಣಿಗಿಲ್ಲ. ಈ ಸಂಪ್ರದ್ಧಿ ಸಾಧಕವಾಗಿದೆ ಬುದ್ಧಿಯೋಗ, ಪೂರ್ಣಪ್ರಜ್ಞೆಯನ್ನು ಪಡೆದರೆ ಬುದ್ಧಿಯೋಗವೆನಿಸುತ್ತದೆ. ಇದು ಮಾನವನ ಮುಖ್ಯ ಧ್ಯೇಯವನ್ನು ಸಾಧಿಸಿಕೊಡುತ್ತದೆ. ಅಜ್ಞಾನಾವರಣವನ್ನು ಅಳಿಸಿ ಜ್ಞಾನ ಪ್ರಭೆಯನ್ನು ಬೆಳಸಿ ಮುನ್ನಡೆಯಿಸುತ್ತದೆ; ಮಹೋನ್ನತಿಗೆ ಮುಟ್ಟಿಸುತ್ತದೆ.

ಪರಬ್ರಹ್ಮಪದವು ಪರ್ಯಾಯವಾಗಿ ಮಾಹೇಶರಾರ್ಥವನ್ನೇ ಬೋಧಿಸುತ್ತದೆ. ಆ ಪರಮ ಸತ್ಯವನ್ನು ಸರ್ವಾಂತರ್ಯಾಮಿಯನ್ನು ತಿಳಿಯಲುಬುದ್ಧಿಯೋಗಬೇಕು. ಆ ಪರಮಾತ್ಮನಿಷ್ಠ ವಿದ್ಯೆಯೇ ಬುದ್ಧಿಯೋಗ. ಇದುಳ್ಳವನೆ ಮಾಹೇಶ್ವರನು. ಇವನು ಇದರಿಂದ ಭೂರುದ್ರನಾಗುವನು; ಸುಜ್ಞಾನ-ಮಹಾಜ್ಞಾನ ಸಮುದ್ರನಾಗುವನು. ಆಗಿ ಆ ವಿಶ್ವಾಂತರ್ಯಾಮಿಯಾದ ಮಹೇಶ್ವರ ತತ್ತ್ವವನ್ನು ಹೀಗೆ ಅರಿಯುವನು: ವಿಶ್ವಾಧಿಕನೂ ವಿಶ್ವಾಂತರ್ಯಾಮಿಯೂ ಆದ ಆ ಪರಶಿವರೂಪ ರುದ್ರ ದೇವನಿಗೆ ಪರವೇ ಶಿರಸ್ಸು; ಅಪರ ಬ್ರಹ್ಮವೇ ಲಲಾಟ, ಮಹಾಜ್ಞಾನವೇ ನೇತ್ರ, ಮುಕ್ತಿಯೆ ನಾಸಿಕ,ಬ್ರಹ್ಮಾಂಡವೆ ಮುಖವಾಡ, ಮಹಾಮಂತ್ರವೆ ನಾದ, ಅನುಗ್ರಹವೆ ಕ್ರಿಯೆ, ಆಕಾಶವೆ ಕಂಠ, ಅಭಯವೆ ಹಸ್ತ. ನಿಗಮಗಳೆ ನೀಳ್ತೊಳಗಳು, ಆಗಮಗಳೆ ಉಸಿರು, ಪುರಾಣೇತಿಹಾಸಗಳೆ ಪಾದಗಳು, ಶ್ರುತಿಗಳೆ ಶ್ರವಣೇಂದ್ರಿಯಗಳು. ಸ್ಮೃತಿಗಳೇ ಸ್ಮರಣಶಕ್ತಿ, ಶಿವಶರಣರ ಶಿವಾಚಾರ್ಯರ ವಚನಗಳೆ ಮಾತುಗಳು; ಇದೇ ಅಭಿಪ್ರಾಯವನ್ನು ಶ್ರೀ ಶಂಕರಾಚಾರ್ಯರು,

"ಆಕಾಶಶ್ಶಿಕುರಾಯತೇ ದಶದಿಶಾಭಾಗೋದುಕೂಲಾಯತೇ
ಶೀತಾಂಶು಼ ಪ್ರಸವಾಯತೇ ಸ್ಥಿರತರಾನಂದ ಸ್ವರೂಪಾಯತೇ ।

ವೇದಾಂತೇಷು ನಿಲಯಾಯತೇ ಸುವಿನಯೋ ಯಸ್ಯಸ್ವಭಾವಾಯತೇ
ತಸ್ಮಿನ್ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥"

ತಮ್ಮ ಶಿವಸ್ತೋತ್ರದಲ್ಲಿ ತಮ್ಮದೇ ಆದ ಬಗೆಯಲ್ಲಿ ಬಿತ್ತರಿಸಿದ್ದಾರೆ. ಹೀಗಿರುವಾಗ ಶಿವನು ಸರ್ವಾಂತರ್ಯಾಮಿಯಾಗನೇನು ? ಸರ್ವಭೂತಗಳಿಗೆ ಬ್ರಹ್ಮಾದಿಗಳಿಗೆ ಮಹೇಶ್ವರನಾಗಲಾರನೇನು ? ಆ ವಿಶ್ವಾಧಿಕ ಚೈತನ್ಯ ಅದೊಂದು ವಿರಾಟ ವಿಶ್ವರೂಪ. ಅದು ಮಾತು ಮನಗಳಿಗೆ ನಿಲುಕದ ಸ್ವರೂಪ. ಕಾಲ್ಕೆಳಗೆ ಕಾಲನ ತೊತ್ತುಳಿದು ನಿಂತ ಕಾಲಾತೀತರೂಪ, ದಿಕ್ಕು ದೇಶಗಳ ಮೀರಿ ಮುಗಿಲಾಚೆ ಸಾರಿ ನಿಂತ ರೂಪ. ಅನಂತ ವಿಶ್ವಗಳನ್ನು ತನ್ನ ಒಡಲೊಳಗೆ ಅಡಗಿಸಿಕೊಂಡ ಅನಾದ್ಯನಂತರೂಪ. ಅವ್ಯಕ್ತರೂಪ.

"ಅವ್ಯಕ್ತಾಯ ಪುರಾಣಾಯ ಬಹುರೂಪೈಕರೂಪಿಣೇ ।
ಸಂಸ್ಥಿತಾಯ ತಮಃಪಾರೇ ಜ್ಯೋತಿರೂಪಾಯ ತೇ॰ನಮಃ ॥
ವೇದಾಃ ಸಮಸ್ತಾ ಅಪಿ ಮುಖ್ಯವೃತ್ತ್ಯಾ ಭವಂತಮೇವ
ಪ್ರತಿಪಾದಯಂತಿ । ಕರ್ತಾರಮೇಕಂ ಜಗತಾಂ ತಥಾಪಿ
ಮಾಯಾವೃತಸ್ತ್ವಾಂ ನ ಹಿ ಜಾನತೇ ನರಃ ॥

ತ್ವನ್ಮಾಯಯಾಮೋಹಿತ ಜಾತಯಸ್ತಾಃ ತ್ವತ್ಪ್ರೇರಿತಾಃ ಚಿತ್ತಮಿದಂ ಹಿ ನಿತ್ಯಂ।
ಕರೋತಿಕೃತ್ಯಂ ನಿಯತಂ ತ್ವದುಕ್ತಂ ತಸ್ಮಾಚ್ಛರಣ್ಯ ಸತತಂ ಭಜೇ॰ಹಂ ॥
ಬ್ರಹ್ಮಾಂಡಸಂಘಾಸ್ತ್ವಯಿ ಸಂಸ್ಥಿತಾ ಹಿ ಯಥಾ ಮಹಾಬ್ಧೌ ಜಲಬುದ್ಬುದೌಘಾಃ ।
ಬ್ರಹ್ಮಾಂಡಕೋಟ್ಯಾಶ್ರಿತದಿವ್ಯರೂಪಂ ತಸ್ಮಾದಹಂ ತ್ವಾಂ ಪ್ರಣತೋ ಭಾವಾಮಿ ।

ಏತಾವದಭ್ರಂಚ ಮಹೀಚ ನಿತ್ಯಂ ಯತ್ತೇಜಸೋ ಭಾತಿ ಕಿಲ ಪ್ರಭಾವಾತ್
ವಿಶ್ವಾಧಿಕಂ ರುದ್ರಮೃಷಿಂ ಮಹಾಂತಂ ವದಂತಿ ತಸ್ಮೈಪುರುಷಾಯ ತೇ ನಮಃ

ಸ್ವತಂತ್ರ ಶಕ್ತಿಮಾನ್ ದೇವ ತ್ವಮೇವ ಪುರಷೋತ್ತಮ ।
ತ್ವದಧೀನಮಿದಂ ವಿಶ್ವಂ ವಿಶ್ವನಾಥಾಯ ತೇ ನಮಃ ॥

ಸಮಸ್ತ ಸಾಧನೋಪಾಯ ಸರ್ವಸಿದ್ಧಿಪ್ರದಾಯಕ ।
ಸರ್ವಾಧಾರ ವಿರೂಪಾಕ್ಷ ಭಕ್ತವತ್ಸಲ ತೇ ನಮಃ ॥
ಶಿವ ಸಿದ್ಧಾಂತ ಮಾರ್ಗಸ್ಥ ಫಲದಾಯಕ ಶಂಕರ ।
ನಮಸ್ತೇ ದೀನ ಪರಿತ್ರಾಣ ಪರಾಯಣ ॥

ಸೂಕ್ಷ್ಮತಂತ್ರದ ಈ ಸೂಕ್ತಿಗಳು ಮಾಹೇಶ್ವರನ ಬುದ್ಧಿಯೋಗಕ್ಕೆ ಪುಷ್ಟಿದಾಯಕಗಳಾಗಿವೆ ಭಾವಗ್ರಾಹ್ಯಗಳಾಗಿವೆ.

ಚಿತ್ತವೃತ್ತಿ ನಿರೋಧರೂಪಯೋಗದಿಂದ ಭಕ್ತನಾದುವನು ಮುಂದುವರಿದು ಬುದ್ಧಿ ವೃತ್ತಿ ನಿರೋಧವನ್ನು ಸಾಧಿಸಿ ಬುದ್ಧಿಯೋಗಿಯಾಗಿ ಮಹೇಶ್ವರನೆನಿಸುತ್ತಾನೆ. ಸಂಕಲ್ಪ ಕರ್ತೃತ್ವ ಶಕ್ತಿಯನ್ನು ಪಡೆಯುತ್ತಾನೆ. ಜತೆಗೆ ಕರಣ ಕರ್ತೃತ್ವವೂ ಮಾಹೇಶ್ವರನಿಗಿರುತ್ತದೆ.

"ಬ್ರಹ್ಮಾದಿ ದೇವತಾಜಾಲಂ ಮೋಹಿತಂ ಮಾಯಯಾ ಸದಾ ।
ಅಶಕ್ತಂ ಮುಕ್ತಿದಾನೇತು ಕ್ಷಯಾತಿಶಯ ಸಂಯುತಂ ॥
ಅನಾದಿಮುಕ್ತೋ ಭಗವಾನ್ ಏಕ ಏವ ಮಾಹೇಶ್ವರಃ ।
ಮುಕ್ತಿದಶ್ಚೇತಿ ಯೋ ವೇದ ಸ ವೈ ಮಾಹೇಶ್ವರಃ ಸ್ಮೃತಃ ॥"

ಎಂದೆಂದಿಗೂ ಮಾಯೆಯಿಂದ ಮೋಹಿತರು ಬ್ರಹ್ಮಾದಿ ದೇವತೆಗಳು. ಇದರಿಂದಾಗಿ ಅವರು ಕುಗ್ಗು ಹಿಗ್ಗುಗಳಿಂದ ಕೂಡಿದವರು. ಅಥವಾ ಕೊನೆಯಾಗದ ಕೊರಗಿನಿಂದ ಕೂಡಿದವರು, ನಿಡಿದಾಗ ನೋವಿನಿಂದ ನರಳುವರು. ಇಂಥವರು ಭಕ್ತರಿಗೆ ಮುಕ್ತಿಯನ್ನೇನು ಕೊಟ್ಟಾರು ?

ಅಶಕ್ತಂ–ಮೋಹಿತಂ–ಕ್ಷಯಾತಿಶ ಸಂಯುತಂ ಈ ಮೂರು ಮಾತುಗಳಿಂದ ಕ್ರಮವಾಗಿ ಕಾರ್ಮಕಮಲ–ಮಾಯೇಯಮಲ–ಆಣವಮಲಗಳು ಸೂಚಿತವಾಗಿವೆ ಮೂರು ಲೋಕವನ್ನು ನುಂಗಿ ನೀರು ಕುಡಿವ ಮಾಯೆಗೊಳಗಾಗಿ ಬ್ರಹ್ಮಾದಿ ದೇವತೆಗಳು ಜ್ಞಾನ ಶಕ್ತಿಹೀನರಾಗಿದ್ದಾರೆ. ಅಂದರೆ ಬುದ್ಧಿಯೋಗದಲ್ಲಿ ಬಡವರಾಗದ್ದಾರೆ. ಮೋಹಪಾಶದಲ್ಲಿ ಬಂಧಿತರಾಗಿದ್ದಾರ. ಕ್ಷೀಣಾತಿಶಯದಿಂದ ಯುಕ್ತರಾಗಿದ್ದಾರೆ. ಮಹಾ ಮುಕ್ತಿದಾನದಲ್ಲಿ ಅಶಕ್ತರಾಗಿದ್ದಾರೆ,

ಆದ್ದರಿಂದ ಅವರು ದೇವ ಜಂಗುಳಿಯಾಗಿದ್ದಾರೆ. ಈ ಅರ್ಥದಲ್ಲಿ ಜಾಲ ಪ್ರಯೋಗ ಸಂಪೂರ್ಣ ಸಮರ್ಥಕವಾಗಿದೆ.

"ಬ್ರಹ್ಮಣಾ ಹಂಸರೂಪೇಣ ವಿಷ್ಣುನಾ ಕ್ರೋಡರೂಪಿಣಾ॥
ಅನಿರ್ದೇಶ್ಯಮಹಾಲಿಂಗಮೂರ್ತಯೇ ಜ್ಯೋತಿಷೇ ನಮಃ॥"

ಬ್ರಹ್ಮಾದಿಗಳು ಮಾಯಾ ಮೋಹಿತರೆಂಬುದಕ್ಕೆ ಈ ಸೂಕ್ಷ್ಮತಂತ್ರ ಕಥನವು ಸಾಕ್ಷಿಯಾಗಿದೆ. ಅವರಿಗೆ ಬುದ್ಧಿಯೋಗವಿಲ್ಲದ್ದರಿಂದ ಮಹಾಲಿಂಗದರ್ಶನವಾಗಲಿಲ್ಲ. ಅವರು ಕ್ಷೀಣಬಲರಾದ್ದರಿಂದ ತ್ರಿಪುರರನ್ನು ಜಯಿಸಲಾಗಲಿಲ್ಲ ಸಮುದ್ರ ಮಥನದಿಂದ ಹುಟ್ಟಿದ ನಂಜನ್ನು ಹರಿಸಿ ಮೂಜಗವನ್ನು ಉಳಿದ ಯಾವ ದೇವರು ರಕ್ಷಿಸಲಾಗಲಿಲ್ಲ. "....ಕೊಟ್ಟ ಬಲಿ ಬಂದನಕ್ಕೆ ಸಿಕ್ಕಿದ. ಕೊಟ್ಟ. ಕರ್ಣ ಕಳದಲ್ಲಿ ಮಡಿದ. ಕೊಟ್ಟ ನಾಗಾರ್ಜುನನ ಸಿರ ಹೋಯಿತ್ತು....ಗೌತಮನಿಗೆ ಗೋವಧೆಯಾಯಿತ್ತು. ಪರಶುರಾಮನು ಸಮುದ್ರಕ್ಕೆ ಗುರಿಯಾದ."

ಅಚಿದ್ರೂಪವೆ ಮಾಯೆ. ತ್ರಿಗುಣಮಯಿಯೆ ಮಾಯೆ. ಈ ಮಾಯೆಯಿಂದ ಮೋಹಿತರಾದವರ ಬುದ್ಧಿ ನಿರ್ಮಲವಾಗುವುದಿಲ್ಲ. ಜಗತ್ಕರ್ತನನ್ನು ತಿಳಿಯುವ ಸಾಮರ್ಥ್ಯ ಇರುವುದಿಲ್ಲ. ಬುದ್ಧಿ ಬಲವಿಲ್ಲದಲ್ಲಿ ಜ್ಞಾನ ಬಲವಿರುವುದಿಲ್ಲ.

"ಮೋಹಿತಂ ನಾಭಿಜಾನಾತಿ ಮಾಮೇಭ್ಯ : ಪರಮವ್ಯಯಂ ।
ದೈವಿ ಹ್ಯೇಷಾ ಗುಣಮಯಿ ಮಮ ಮಾಯಾ ದುರತ್ಯಯಾ ॥
ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ।"

—ಗೀತಾ

"ಆವಳ ವಚನ ಬೆಲ್ಲದಂತೆ : ಹೃದಯದಲ್ಲಿಪ್ಪುದು ನಂಜು ಕಂಡಯ್ಯಾ ।
ಕಂಗಳಲ್ಲೊಬ್ಬನ ಕರೆವಳು ಮನದಲ್ಲೊಬ್ಬನ ನೆರೆವಳು ! ಕೂ. ಸಂ. ದೇವ,
ಕೇಳಯ್ಯ, ಮಾನಿಸಗಳ್ಳಿಯ ನಂಬದಿರಯ್ಯ !"

—ಬಸವಗೀತಾ

ಮಾಯೆಯ ಆಟ ಮಾಟಗಳಿವು. ಇಂತಹ ಮಾಯೆಗೊಳಗಾದವರು ದೈವೀ ಗುಣವಂಚಿತರು. ದುರ್ಬಲರು, ಮುಕ್ತಿದಾನದಲ್ಲಿ ಅಶಕ್ತರು. "....ನಾ ಬಲ್ಲೆ, ನಾ ಹಿರಿಯಿನೆಂಬುವರೆಲ್ಲರು ಮಾಯೆಯ ಆಣಲೊಳಗೆ ಸಿಕ್ಕಿದರು. ಹರಿಹರ ಬ್ರಹ್ಮಾದಿಗಳೆಲ್ಲರು ಮಾಯೆಯ ಕೈಯ ಶಿಶುವಾದರಯ್ಯಾ ! ಸೌರಾಷ್ಟ್ರ ಸೋಮೇಶ್ವರಾ, ನಿನ್ನ ಮಾಯೆ ಅಖಿಲಕ್ಕೆ ತಾನರಸಿಯಾದಳಯ್ಯಾ !" ಹೀಗೆ ಮಾಯಾರಾಣಿಯ ತೊತ್ತುಗಳಾದವರು ಮುಕ್ತಿದಾತರಗುವುದು ಹೇಗೆ ? ಮಾಯಾಬಂಧಿತರಾಗಿ ಅವರೆ ಮುಕ್ತರಾಗದಿರುವಾಗ ಇನ್ನೊಬ್ಬರಿಗೆ ಕೊಡಲಾರರು.

ಮಹೇಶರನೊಬ್ಬನೆ ಅನಾದಿಮುಕ್ತನು, ಷಡ್ಗುಣೈಶ್ವರ್ಯಸಂಪನ್ನನು ; ಮುಕ್ತಿಪ್ರದನು–ಎಂದು ಮನವರಿಕೆ ಮಾಡಿ ಕೊಂಡವನೆ ಮಾಹೇಶ್ವರನು

ಆದಿಮುಕ್ತರು ಅನೇಕರಿರುವರು. ಅನಾದಿಮುಕ್ತನು ಆ ಮಹೇಶ್ವರ ನೊಬ್ಬನು ಮಾತ್ರ. ಆದ್ದರಿಂದ ಅವನು ಅಭವ, ಅನಂತ್ಯ (ಮೃತ್ಯುಂಜಯ) ಎಂದು ಅಥವಾ ಅನಾದಿನಿಧನನೆಂದು ಪ್ರಸಿದ್ಧನಾಗಿದ್ದಾನೆ. ನಿತ್ಯಮುಕ್ತನೆನಿ ಸಿದ್ದಾನೆ.

ನಿತ್ಯ ನಿರ್ಮಲ ನಿರ್ದ್ವಂದ್ವ ನಿರಾಮಯ ನಿರಂಜನ ।
ದೇವಾಚಾರ್ಯ ನಮಸ್ತುಭ್ಯಂ ಭೂಯೋಭೂಯೋನಮೋನಮಃ॥"

"ಸೋಽನಾದಿಮುಕ್ತ ಏಕೋ ವಿಜ್ಞೇಯಃ ಪಂಚಮಂತ್ರತನುಃ"

ಈ ಸೂಕ್ಷ್ಮಾಗಮ, ತತ್ತ್ವಪ್ರಕಾಶ ಉಕ್ತಿಗಳು ಮಹೇಶ್ವ ಅರನನಾದಿ ಮುಕ್ತತ್ವವನ್ನು ಉದ್ಘೋಷಿಸಿವೆ.

ಆದಿಯೆಂದರೆ ಸೃಷ್ಟಿ : ಆದಿಯೆಂದರೆ ಶರೀರ. ಸೃಷ್ಟಿಗೊಳಗಾಗಿ ಶರೀರ ಧಾರಿಗಳಾಗಿ ಮುಕ್ತರಾದವರು ಬ್ರಹ್ಮಾದಿಗಳು, ಸೃಷ್ಟಿಗೊಳಗಾಗದೆ ಇರುವ ವನು ಮಹೇಶ್ವರನು. ಶರೀರವಿದ್ದರೂ ಇಲ್ಲದಂತಿರೂವವನು ಮಾಹೇಶ್ವರನು. ಷಡ್ಗುಣೈಶ್ವರ್ಯ ಸಂಪನ್ನನಾಗಿದ್ದಾನೆ. ಸರ್ವೈಶ್ವರ್ಯ, ಜ್ಞಾನ. ಕೀರ್ತಿ, ವೀರ್ಯ (ಸ್ಥೈರ್ಯ) ವೈರಾಗ್ಯ, ಧರ್ಮ ಇವು ಆರು ಭಗಗಳೆಂದು ಹೆಸರಾಗಿವೆ. ಇವುಳ್ಳ

ವನೇ ಭಗವಂತ. ಮತ್ತು ಸರ್ವಜ್ಞತ್ವ, ಸರ್ವಕರ್ತೃತ್ವ ನಿತ್ಯತೃಪ್ತತ್ವ, ಅನಾದಿ ಬೋಧತ್ವ ಸರ್ವಸ್ವತಂತ್ರತ್ವ, ಅಲುಪ್ತಶಕ್ತಿತ್ವ ಇವಾರುಳ್ಳವನೆ ಭಗವಂತ.

"ಏಕ ಏವ ಮಹೇಶ್ವರಃ" ಅನೇಕತ್ವವನ್ನೊಳಗೊಂಡು ಏಕ ಸ್ವರೂಪ ನಾಗಿದ್ದಾನೆ ಮಹೇಶ್ವರನು. ಮಹೇಶ್ವರ ಎಂಬ ವಿಶೇಷ್ಯವು ವಿಶೇಷವಾಗಿ ಗಮನಾರ್ಹವಾಗಿದೆ. ಅನೇಕತ್ವವನ್ನು ಒಳಗೊಳ್ಳದಿದ್ದರೆ ಮಹೇಶ್ವರತ್ವ ಸಿದ್ಧಿ ಯಾಗದು, ಮಹೇಶ್ವರತ್ವವು ಒಂದೇ ಒಂದಾಗಿದೆ. "ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ. ದೇವನೊಬ್ಬ ಕಾಣಿರೋ ; ಇಬ್ಬ ರೆಂಬುದು ಹುಸಿ ನೋಡಾ ! ಕೂಡಲ ಸಂಗಮದೇವನಲ್ಲದೆ ಇಲ್ಲವೆಂದಿತ್ತು ವೇದ." "ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ !..." "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" "ಅನೇಜದೇಕಂ...." "ಏಕಾಕಾರ, ಲೋಕಾಕಾರ ನೀನಾಗಿ ತೋರ್ಪೆಯಯ್ಯ ಸದ್ಭಾವಿಗಳಿಗೆ ! ಏಕಾಕಾರವೆ ಹುಸಿ, ಲೋಕಾಕಾರವೆ ದಿಟವಾಗಿ ತೋರ್ಪೆಯಯ್ಯ ಭಾವಭ್ರಮಿತರಿಗೆ ! ಏಕಾಕಾರ ಲೋಕಾಕಾರ, ಸರ್ವಾಕಾರ ಶೂನ್ಯವಾಗಿ ತೋರ್ಪೆಯಯ್ಯ ನಿರ್ಭಾವರಿಗೆ ! ನಿಮ್ಮ ನಿಜದಾಕಾರ ನೀವಾಗಿಪ್ಪಿರಯ್ಯಾ ಭಾವೈಕ್ಯವಾದ ಮಹಂತರಿಗೆ ಸೌರಾಷ್ಟ್ರ ಸೋಮೇಶ್ವರಾ !"

ಅನೇಕತ್ವವಿದ್ದರೂ ಇಲ್ಲದಂತೆ ಆದರೆ ಹೊರಹೊಮ್ಮದಂತೆ ಇರುವ ಸ್ಥಿತಿಯನ್ನು ಈ ಕೆಳಗಿನ ವಚನ ಸ್ಪಷ್ಟಗೊಳಿಸಿದೆ:

"ಬೀಜದೊಳಗಣ ವೃಕ್ಷ ಅಂಕುರ ಪಲ್ಲವ ಪತ್ರಕುಸುಮ ಫಲ ಮೈದೋರ ದಂತೆ, ಕಾಷ್ಠದೊಳಗಣ ಅಗ್ನಿ ಉರಿ ಉಷ್ಣದೋರದಂತೆ, ಪತಂಗನ ಕರದೊಳಡ ಗಿಪ್ಪ ಮರೀಚಿ ಪ್ರವಹಿಸದಂತೆ, ಬಿಂದುವಿನೊಳಿಡಗಿಪ್ಪನಾದ ಧ್ವನಿದೋರದಂತೆ, ಪಿಂಡ–ಬ್ರಹ್ಮಾಂಡಗಳ ಕೂಡಿಪ್ಪ ಸೌರಾಷ್ಟ್ರ ಸೋಮೇಶ್ವರಾ. ಲಿಂಗವನಾರು ಭೇದಿಸಬಾರದಯ್ಯಾ !"

"ಏಕ ಏವ ಹಿ ಭೂತಾತ್ಮಾ ಭೂತೇಷು ಸುವ್ಯವಸ್ಥಿತ : !
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥"

ಈ ಮಾತು ಇನ್ನೂ ಸ್ಪಷ್ಟಗೊಳಿಸಿದೆ. ಏಕವೂ ಅವನೇ ! ಅನೇಕವೂ ಅವನೇ ! ತರಂಗಿಣಿಯಲ್ಲಿ ಚಂದ್ರನು. ಹಲವಾಗಿ ತೋರಿದಂತೆ ಜೀವತರಂಗಿಣಿ

ಯಲ್ಲಿ ಮಹೇಶ್ವರನು ಹಲವಾಗಿ ತೋರಿದ್ದಾನೆ. ವಾಸ್ತವಿಕವಾಗಿ ಒಬ್ಬನೆ! 'ಏಕಾತ್ಮ ಪ್ರತ್ಯಯ ಸಾರಂ' 'ಶಿವಮದ್ವೈತಂ ಚತುರ್ಥಂ ಮನ್ಯಂತೇ' ಮುಂತಾದ ಮಾಂಡೂಕ್ಯ ಸೂಕ್ತಿಗಳು ಇದನ್ನೆ ಸಮರ್ಥಿಸಿವೆ.

ಶ್ರೀ ರೇಣುಕ ಜಗದ್ಗುರುವಿನ 'ಭಗವಾನ್ ಏಕ ಏವ ಮಹೇಶ್ವರಃ' ಎಂಬ ಸೂತ್ರಪ್ರಾಯವಾದ ವಾಣಿಗೆ ಭಾಷ್ಯದಂತಿರುವ ಈ ಅಥರ್ವಶಿರೋಪ ನಿಷದ್ವಚನ ಉತ್ತಮ ನಿದರ್ಶನವಾಗಿದೆ.

"ಸ ಏಕಸ್ಸ ಏಕೋ ರುದ್ರಸ್ಸ ಈಶಾನಸ್ಸ ಭಗವಾನ್ ಸ ಮಹೇಶ್ವರಸ್ಸ ಮಹಾದೇವಃ" "ಏಕೋತ್ತರದಲ್ಲಿ ಎಚ್ಚತ್ತರೇನಯ್ಯಾ ಏಕೋ ದೇವನ ನೆನಹು ನೆಲೆಗೊಳ್ಳದನ್ನಕ್ಕ ?" ಎಂದು ಆದಯ್ಯ ಶರಣನ ಏಕೇಶ್ವರ ನಿರೂಪಣ.

ಅನಾದಿ ಮುಕ್ತನಾದ ಆ ಪರಶಿವನು ಸರ್ವಸಮರ್ಥನು. ಶಾರೀರ ಧರ್ಮರಹಿತನು ಪರಾಪರ ವಿದ್ಯಾಪ್ರೇರಕನು. ಸರ್ವಪೋಷಕನು. ಸರ್ವ ರಿಗೆ ಮುಕ್ತಿದಾತನು—ಎಂದು ತಿಳಿದವನೇ ಮಾಹೇಶ್ವರನು. "ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ"—ಕೈವಲ್ಯ, ಆ ಮಹೇ ಶ್ವರತ್ವನ್ನು ಅರಿವಿನಾಚಾರದಲ್ಲಿ ತಂದುಕೊಂಡಲ್ಲಿ ಮೃತ್ಯುವಿನಿಂದ ಮುಕ್ತಿ ಯುಂಟಾಗುತ್ತದೆ. ಇದನ್ನು ಬಿಟ್ಟು ಬೇರೆ ಹೊಲಬಿಲ್ಲ. ಅವನೇ ಕಾಲಾ ತೀತನು. ಅವನೇ ಕೈವಲ್ಯ ಸ್ವರೂಪನು. ಅತನೇ ಪರಾಪರವೆಂಬೆರಡು ಮೋಕ್ಷಪ್ರದಾತನು. ಈ ಬಗೆಯ ಅರಿವಿನಾಚಾರದಿಂದ ಜೀವನ್ಮುಕ್ತನಾದವನೇ ಮಾಹೇಶ್ವರನು. ಅನುಪಮದಾನಿಯಾದ ಆ ಮಹೇಶ್ವರನನ್ನು ಮನೋಮೂರ್ತಿ ಯನ್ನಾಗಿಸಿಕೊಂಡವನೇ ಮಾಹೇಶ್ವರನು.

ಈ ದ್ವಿತೀಯ ಮಂತ್ರದಲ್ಲಿ ಶ್ರೀ ಜಗದ್ಗುರು ರೇಣುಕರು ಮಹೇಶ್ವರ– ಮಾಹೇಶ್ವರ ಪದಗಳೆರಡರ ವಿಶ್ಲೇಷಣವನ್ನು ವಿಶದಗೊಳಿಸಿದ್ದಾರೆ. ಮೀಮಾಂಸೆ ಯನ್ನು—ಮನದಟ್ಟಾಗಿಸಿದ್ದಾರೆ. ವಿಚಾರಾರ್ಥದ 'ವೇದ' ಪದ ಪ್ರಯೋಗ ದಿಂದ ಮಾಹೇಶ್ವರನಿಗೆ ಮುಖ್ಯವಾಗಿ ಬೇಕಾದ 'ಜ್ಞಾನ ಶಕ್ತಿ'ಯನ್ನು ನಿರ್ದೇಶಿ ಸಿದ್ದಾರೆ. ಕ್ರಿಯಾಶಕ್ತಿಯನ್ನು ಸಂಪಾದಿಸಿದ ಭಕ್ತನು ಉಕ್ತ ಜ್ಞಾನವನ್ನು ಅಂದರೆ ಮಹೇಶ್ವರ ಜ್ಞಾನವನ್ನು ಮನದಟ್ಟಾಗಿಸಿಕೊಂಡರೆ ಮಾಹೇಶ್ವರಾಂಗ ನೆನಸುತ್ತಾನೆ—ನಿಶ್ಚಯವಾಗಿ !

ಮಹೇಶ್ವರನು ಅಂಡ ಪಿಂಡ ಬ್ರಹ್ಮಾಂಡಗಳಲ್ಲಿ ಅಖಂಡನಾಗಿರುವನೆಂದೂ ಆದಿ ಅನಾದಿಗಳಲ್ಲಿ ಏಕಸೂತ್ರನಾಗಿರುವನೆಂದೂ ಸರ್ವಜ್ಞತ್ವಾದಿ ಷಡ್ಗುಣ ಸಂಪನ್ನನಾಗಿರುವನೆಂದೂ ಸರ್ವಮುಕ್ತಿದಾತನೆಂದೂ ಪ್ರತಿಪಾದಿಸಿ ಅಂತಹ ಮಹೇಶ್ವರನನ್ನು ಅರಿದು ಆಳವಡಿಸಿಕೊಂಡವನು ಮಾಹೇಶ್ವರನೆಂದು ನಿರೂಪಿಸಿದ್ದಾರೆ ಶ್ರೀ ರೇಣುಕ ಶಿವಾಚಾರ್ಯರು. ಅಂತೆಯೇ ಮಾಹೇಶ್ವರತ್ವದ ಮೌಲ್ಯವನ್ನು ಹೆಚ್ಚಿಸಿದ್ದಾರೆ ಮಾಹೇಶ್ವರ ಗುಣ ಧರ್ಮ ನಿರೂಪಣದಿಂದ ಮತ್ತು ಅವನ್ನು ಮಾಹೇಶ್ವರನು ಅರಿದಾಚರಿಸಿ ಆಳವಡಿಸಿಕೊಳ್ಳಬೇಕೆಂಬ ಭಾವ ನಿರ್ದೇಶದಿಂದ ! ಮಹೇಶ್ವರತ್ವದ ವೈಶಿಷ್ಟ್ಯದರ್ಶನದಿಂದ ಮಾಹೇಶ್ವರತ್ವದ ವೈಶಿಷ್ಟ್ಯವೂ ವೆಗ್ಗಳವಾಗಿದೆ. ಭಗವಾನ್, ವಿಶೇಷಣವು ಸರ್ವಯೋಗ ಸಮನ್ವಯ ಸೂಚಕವಾಗಿದೆ. 'ಏಕ ಏವ' ಎಂಬುದು ಸರ್ವತಂತ್ರ ಸ್ವತಂತ್ರತ್ವ, ಸರ್ವ ಸಮರ್ಥತ್ವ ನಿರೂಪಿತವಾಗಿದೆ. ಮಾಹೇಶ್ವರನ ದಿವ್ಯ ಮತ್ತು ಭವ್ಯಜೀವನಕ್ಕೆ ಬೇಕಾದ ಸರ್ವೋತ್ಕೃಷ್ಟ ಶಕ್ತಿ, ಸಾರಾಯ ಸಂಪತ್ತು ಇವು ಮಹೇಶ್ವರ ಚೈತನ್ಯದಲ್ಲಿ ಕೇಂದ್ರೀ ಕೃತವಾಗಿವೆ. ದಿವ್ಯದೈವೀಭಾವದ ಬೆಂಬಲವನ್ನು ಪಡೆವುದೇ ಮಾಹೇಶ್ವರಾಂಗನ ಮುಖ್ಯ ಉದ್ದೇಶ. ಆ ಸರ್ವಾಂತರ್ಯಾಮಿಯ ಸಹಾಯದಿಂದ ಮಾಹೇಶ್ವರನು ತನ್ನ ವ್ಯಕ್ತಿತ್ವವನ್ನು ಪ್ರಭಾವ ಪೂರ್ಣವಾಗಿಸಿಕೊಳ್ಳಬೇಕು. ಇದು ಆತ್ಮ ಸ್ವರಾಜ್ಯದ ಮಾಹೇಶ್ವರತ್ವ.

"ಕ್ಷಯಾತಿಶಯ ಸಂಯುಕ್ತಾ ಬ್ರಹ್ಮವಿಷ್ಣ್ವಾದಿಸಂಪದಃ ।
ತೃಣವನ್ಮನ್ಯತೇ ಯುಕ್ತ್ಯಾ ವೀರಮಾಹೇಶ್ವರಸ್ಸದಾ ॥
ಶಬ್ದಸ್ಪರ್ಶಾದಿಸಂಪನ್ನೇ ಸುಖಲೇಶೇ ತು ನಿಸ್ಪೃಹಃ ।
ಶಿವಾನಂದೇ ಸಮುತ್ಕಂಠೋ ವೀರಮಾಹೇಶ್ವರೋ ಭವೇತ್ ॥"

ವಿರಿಂಚಿ ವಿಷ್ಣ್ವಾದಿಗಳ ಸಂಪತ್ತುಗಳು, ನಶ್ವರಗಳು, ತೃಣಸಮಾನಗಳು ಎಂದು ಯಾರು ನಿರಂತರ ಬುದ್ಧಿಪುರಸ್ಸರವಾಗಿ ತಿಳಿಯುವರೋ ಅವರು ವೀರ ಮಾಹೇಶ್ವರರೆನಿಸುವರು.

ಕ್ಷಯಸಂಪತ್ತು, ಅಕ್ಷಯ ಸಂಪತ್ತು ಎಂದು ಎರಡು ತೆರ. ವಿರಿಂಚಿ ವಿಷ್ಣ್ವಾದಿಗಳ ಸಂಪತ್ತು ಕ್ಷಯ ಸಂಪತ್ತು, ಪ್ರಾಕೃತಿಕ ಸಂಪತ್ತು. ಜ್ಞಾನಕ್ರಿಯಾ ಸಂಪತ್ತು

ಅಕ್ಷಯ ಸಂಪತ್ತು ; ಪಾರಮಾರ್ಥಸಂಪತ್ತು. ನೆಲ, ನಿಧಾನಗಳು ಪ್ರಾಕೃತಿಕ ಸಂಪತ್ತು. ಇವು ಹರಿವಿರಿಂಚಿ ವಿಷ್ಣು ದೇವತೆಗಳ ಸಂಪತ್ತು. ಹೊಲ, ಹಣಗಳಿಗಾಗಿಯೆ ಸತ್ಯಸಾಧಕನು ಬಾಯ್ನೀರು ಕರೆಯಬಾರದು ; ಕ್ರಿಯಾ ಜ್ಞಾನ ಗಳಿಗಾಗಿ ಬಾಳಬೇಕು. ಆಗ ವೀರ ಮಾಹೇಶ್ವರತ್ವ ಪ್ರಾಪ್ತಿಯಾಗುತ್ತದೆ. ಬರೀ ಮಾಹೇಶ್ವರತ್ವ ಬಾಲ್ಯದೆಸೆ. ವೀರ ಮಾಹೇಶರತ್ವ ಪ್ರೌಢದೆಸೆ. ಮಹೇಶ್ವರನ ಮೊರೆ ಹೊಕ್ಕವನು ಮರಳಿ ಬ್ರಹ್ಮಾದಿಗಳ ಬೆನ್ನು ಬೀಳ ಬೇಕಿಲ್ಲ. ಕಲ್ಪತರುವಿನ ಬಳಿಯಿದ್ದು ಕಳ್ಳಿಯ ಮರಕ್ಕೆ ಕಣ್ಣಿಡುವರಾರು ? ಹರಿ ಬ್ರಹ್ಮಾದಿಗಳ ಸಂಪತ್ತು ಹೊರಗಿನದು ; ಹುಲ್ಲಿಗೆಣೆಯಾದುದು. ಮಾಹೇಶ್ವರನ ಸಂಪತ್ತಾದ ಜ್ಞಾನ ಕ್ರಿಯಾದಿಗಳು ಒಳಗಿನವು ; ಅಚ್ಚಳಿಯದವು.

ಶಬ್ದ ಸುಖ, ಸ್ಪರ್ಶಸುಖ, ರೂಪಸುಖ, ರಸಸುಖ, ಗಂಧಸುಖಗಳು ವೈಷಯಿಕ ಸುಖಗಳು, ಲವಲೇಶ ಸುಖಗಳು, ಐಂದ್ರಿಕಸುಖಗಳು, ಇದರಿಂದಾಗಿ ವೀರಮಾಹೇಶ್ವರನು ಇವುಗಳಲ್ಲಿ ನಿಷ್ಪಾಹನಾಬೇಕು. ಶಾಶ್ವತವಾದ ಶಿವಾನಂದ ದಲ್ಲಿ ಹೆಚ್ಚಿನ ಹಂಬಲವುಳ್ಳವನಾಗಬೇಕು.

ಗಂಧಾದಿ ಸುಖಗಳಿಗಿಂತ ಶಬ್ದಾನಂದ ಶ್ರೇಷ್ಠ. ಅಂತಹ ಶಬ್ದಾನಂದಕ್ಕೂ ಶಿವಾನಂದಕ್ಕೂ ಮಹದಂತರ. ಶಬ್ದಾನಂದ ಒಂದು ತುಷಾರ. ಶಿವಾನಂದ ಅನಂತ ಸಾಗರ. ಶಬ್ದ ಒಂದು ಪಾತ್ರೆ. ಅದರಲ್ಲಿ ಉಳಿದೆಲ್ಲ ಆನಂದಗಳನ್ನು ತುಂಬಬಹುದು. ಶಿವಾನಂದವನ್ನೂ ತುಂಬಬಹುದಾದರೂ ಸಾಕಾರ ಶಿವಾನಂದವನ್ನು ತುಂಬ ಬಹುದು. ನಿರಾಕಾರ ಶಿವನು ನಿಶ್ಶಬ್ದಸ್ವರೂಪನು. ಅವಾಚ್ಯಮಂತ್ರಸ್ವರೂಪನು. ಶಬ್ದ ಆಕಾಶಜನ್ಯ. ನಿಶ್ಶಬ್ದ ಆಕಾಶಜನಕ. ನಿಶ್ಶಬ್ದಕ್ಕೆ ಮತ್ತೊಬ್ಬ ಜನಕನಿಲ್ಲ. ನಿಶ್ಶಬ್ದವೆ ನಿಶ್ಶೂನ್ಯ. ಆ ನಿಶ್ಶೂನ್ಯವೇ ಶಿವಾನಂದ. ಅದು ತೋರದು; ಅದ ರಿಂದ ಅದನ್ನು ಬೀರಲಾಗದು. ಅದು ಶಬ್ದಾತೀತ.

ಶಬ್ದ ಅನೇಕ. ಅಂತೆಯೇ ಅಕ್ಷರಗಳೂ ಅನೇಕ. ಶಬ್ದಾಕ್ಷರಗಳೆಲ್ಲ ಮಂತ್ರಗಳು. ಇವೆಲ್ಲಕ್ಕೂ ಮೂಲವಾದ ಓಂಕಾರವು ಮಾತ್ರ ಮಹಾಮಂತ್ರ ; ಸಾಕಾರ ಶಿವಾನಂದವನ್ನು ತುಂಬಿಕೊಂಡ ಮಹಾಮಂತ್ರ. ಮಹೇಶ್ವರಸ್ವರೂಪ. ಈ ಪ್ರಣವಸ್ವರೂಪಿ ಮಹೇಶ್ವರಾನಂದದಲ್ಲಿ ಅತ್ಯಂತ ಆಸಕ್ತನಾದವನೇ ವೀರ ಮಾಹೇಶ್ವರನು,

ವಿಷಯಸ್ಪೃಹ ವಿಷಾದಕ್ಕೆ ಮೂಲ; ಮಾನವತ್ವದ ಕುಠಾರ. ವಿಷಯ ವ್ಯಾಮೋಹದಿಂದ ಮಾನವ ಪಶುವಾಗುತ್ತಾನೆ. ತನ್ನ ವಿವೇಕ ಮತ್ತು ವಿವೇಚನ ಶಕ್ತಿಯನ್ನು ಸಂಯಮಶೀಲತೆಯನ್ನು ಕಳೆದುಕೊಳ್ಳುತ್ತಾನೆ. ಕಂಡಲ್ಲಿಗೆ ಮನ ಎಳಸುತ್ತದೆ. ಭೌತಿಕ ಸುಖದ ಬಯಕೆ ಬಲವಾಗುತ್ತದೆ. ಸಣ್ಣಪುಟ್ಟ ಆಶೆ ಅಭಿಲಾಷೆಗಳು ಅತಿಯಾಗುತ್ತವೆ. ಮೋಹ, ಮಿಥ್ಯ, ರಾಗ, ದ್ವೇಷಗಳು ಮಿತಿಮೀರುತ್ತವೆ. "ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯ! ಪಶುವೇನು ಬಲ್ಲುದು, ಹಸುರೆಂದೆಳಸುವುದಲ್ಲದೆ? ವಿಷಯ ರಹಿತನ ಮಾಡಿ, ಭಕ್ತಿ ರಸವ ದಣಿಯ ಮೇಯಿಸಿ ಸಲಹು, ಕೂ, ಸಂ. ದೇವ;" ಎಂದು ಬೇಡಿದರು ಬಸವಣ್ಣನವರು. ವಿಷಯದಲ್ಲಿ ವಿರಾಗವುಂಟಾಗುವುದೆ ವೀರಮಾಹೇಶ್ವರತ್ವ. "ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ" ಎಂಬ ಕವಿಕಾಳಿದಾಸನ ಉಕ್ತಿಯು ಧೀರನ ಲಕ್ಷಣವನ್ನು ಹೇಳಿ ಮೇಲಿನ ಅಭಿಪ್ರಾಯವನ್ನು ಸಮರ್ಥಿಸಿದೆ. ಇಹಾಮುತ್ರ ವಿಷಯಗಳಿಗೆ ಮಾಹೇಶ್ವರನ ಮನಸ್ಸು ಹರಿಯಬಾರದು. ಹರಿದರೆ ಮಾಹೇಶ್ವರತ್ವಕ್ಕೆ ಸಲ್ಲನು. ಹರಿಯುದಿದ್ದರೆ ಮಾಹೇಶ್ವರತ್ವದ ಮಟ್ಟದಿಂದ ಮೇಲೇರಿ ವೀರಮಾಹೇಶ್ವರತ್ವಕ್ಕೇರುವನು. ಆದ್ದರಿಂದ ವೀರಮಾಹೇಶ್ವರನು ಅಷ್ಟಭೋಗಗಳ ಇಷ್ಟವನ್ನು ನಷ್ಟಗೊಳಿಸಿಕೊಳ್ಳಬೇಕು. ಇಷ್ಟಲಿಂಗದ ಭೋಗೋಪಭೋಗದಲ್ಲಿ ಇಮ್ಮಡಿ ಇಷ್ಟವುಳ್ಳವನಾಗಬೇಕು. ಅಂದರೆ ಅಲ್ಪ ಅಭೀಪ್ಸೆಗಳಿಗೆ ಬೀಳದೆ ದೈವೀ ಜೀವನ ಸಿದ್ಧಿಗೇರಬೇಕು.

ಬ್ರಹ್ಮನಿಗೆ ಬ್ರಹ್ಮ ಶಿವ. ವಿಷ್ಣುವಿನಿಗೆ ವಿಷ್ಣು ಶಿವ. ವಿರಂಚಿ ವಿಷ್ಣು ಸುರೇಶರ ಸಂಪತ್ತು ಸೀಮಿತ; ಮತ್ತು ಅಶಾಶ್ವತ. ಇವರಿಗೆ ಮಿಗಿಲಾದ ಆ ಪರಶಿವನ ಸಂಪತ್ತಿಗೆ ಪರಿಮಿತಿಯಿಲ್ಲ; ಪ್ರತಿಯಿಲ್ಲ.

"ಬ್ರಹ್ಮನೆ ಬಟ್ಟಲು, ವಿಷ್ಣುವೆ ನೇಣು, ರುದ್ರನೆ ತೊಲೆ; ಈ ಮೂವರು ಕೂಡಿದ ತ್ರಾಸಿನಲ್ಲಿ ಬ್ರಹ್ಮಾಂಡವೆಂಬ ಗಟಿಕೆಯ ಪಿಂಡವೆಂಬ ಕಟ್ಟಳೆಯನಿಕ್ಕಿ ತೂಗುವೆನಯ್ಯಾ! ಇಚ್ಛಾ, ಜ್ಞಾನ, ಕ್ರಿಯಂಗಳೆಂಬ ಶಕ್ತಿತ್ರಯದ ಮುಳ್ಳು ಸರಸವಾಗಿ ತೂಗುವೆನಯ್ಯಾ! ಚಂದ್ರಸೂರ್ಯರೊಂದಾದ ಮಚ್ಚವನೊರೆದು ಪರಾಪರದ ಬಣ್ಣಕ್ಕೆ ಪ್ರತಿಯಿಲ್ಲದ ಪ್ರತಿಯಾಗಿ ನಿಂದಿತ್ತು. ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರಲ್ಲಿ!"

ಇದರಿಂದಾಗಿ ಇಹಾಮುತ್ರಫಲಪದವಿಗಳಲ್ಲಿ ಮಾಹೇಶ್ವರನು ನಿಸ್ಪೃಹ ನಾಗಿ ವೀರಮಾಹೇಶ್ವರನೆಂಬ ಬಿರುದಾಂಕಿತನಾಗಬೇಕು. ಈ ನಿಸ್ಪೃಹತೆ ಯಿಂದ ಶಿವಾನಂದ ಸಮುತ್ಕಂಠತೆಯಿಂದ ವೀರಪ್ರೌಢಿಮೆಯನ್ನು ಪಡೆಯಬೇಕು. ವಿದ್ಯೆ, ಅವಿದ್ಯೆ, ವಿದ್ಯಾವಿದ್ಯೆಗಳಲ್ಲಿ ಬೆರೆಯದೆ ಶುದ್ಧ ವಿದ್ಯೆಯನ್ನಾಶ್ರಯಿಸಿ ಶಿವಾ ನಂದವನ್ನು ಸಂಪಾದಿಸಬೇಕು. ವಿದ್ಯೆ ಸತ್ವಗುಣ. ಅವಿದ್ಯೆ ತಮೋಗುಣ. ವಿದ್ಯಾವಿದ್ಯೆ ರಜೋಗುಣ. ಈ ತ್ರಿವಿಧಾತೀತವಾದುದೇ ಶುದ್ಧವಿದ್ಯೆ. ಗುಣ ಕಾರ್ಯ, ಗುಣಮಯ, ಗುಣಗಂಧ, ಗುಣರೂಪ, ತ್ರಿವಿಧಭಾಗ–ಎಂದು ವೈರಾಗ್ಯ ಅಯ್ದು ಬಗೆ. ಪತ್ನಿಪುತ್ರ ಧನಕನಕಾದಿಗಳಲ್ಲಿ ಉಂಟಾಗುವ ನಿಸ್ಪೃಹೆಯು ಗುಣ ಕಾರ್ಯ ವೈರಾಗ್ಯ. ದೇಹೇಂದ್ರಿಯಾದಿಗಳಲ್ಲಿ ಹುಟ್ಟುವ ನಿರ್ಮಮತೆಯು ಗುಣ ಮಯ ವೈರಾಗ್ಯ, ಈ ಕಾಯೇಂದ್ರಿಯ ಮನಾದಿಗಳನ್ನು ತಿಳಿವ ದ್ರಷ್ಟನೇ ತಾನೆಂಬುವುದರಲ್ಲಿ ವಿರತಿವಾಸನೆಯುಂಟಾದರೆ ಅದು ಗುಣಗಂಧ ವೈರಾಗ್ಯವೆನಿಸು ವುದು. ತೋರುವ ಈ ದೃಶ್ಯದೃಕ್ಕುಗಳೆರಡೂ ತೋರದೆ ಉಂಟಾದ ಅರಿವೆ ತಾನೆಂದು ತಿಳಿದುದೇ ನಿಶ್ಚಲವಾದ ನಿಜವಿರಾಗವೇ ಗುಣರೂಪ. ಸಕಲವನ್ನು ತಿರಸ್ಕರಿಸಿ ಪರಬ್ರಹ್ಮವೇ ನಾನೆಂಬುದರಲ್ಲಿ ವೈರಾಗ್ಯವುಂಟಾದರೆ ಅದು ತ್ರಿವಿಧಭಾಗ ಅಥವಾ ಪರಮವೈರಾಗ್ಯವೆಂದು ನಿಜಗುಣರು ತಮ್ಮ ಪರಮಾನುಭವ ಬೋಧೆ ಯಲ್ಲಿ ಹೇಳಿದ್ದಾರೆ ಗುಣಮಯ, ಗುಣಗಂಧ, ಗುಣರೂಪಗಳು ಕ್ರಮವಾಗಿ ತಾಮಸ, ರಾಜಸ, ಸಾತ್ವಿಕ ವೈರಾಗ್ಯಗಳೆನಿಸುತ್ತವೆ, ಪರಿಪೂರ್ಣವಾದ ಶಿವಾ ನಂದವನ್ನು ಪಡೆಯಲು ಇವು ಸಾಧನವಾಗಿವೆ.

"ಪರಸ್ತ್ರೀಸಂಗನಿರ್ಮುಕ್ತಃ ಪರದ್ರವ್ಯ ಪರಾಙ್ಮುಖಃ ।
ಶಿವಾರ್ಥಕಾರ್ಯ ಸಂಪನ್ನಃ ಶಿವಾಗಮ ಪರಾಯಣಃ ॥

ಶಿವಸ್ತುತಿರಸಾಸ್ವಾದಮೋದಮಾನಮನಾಃ ಶುಚಿಃ ।
ಶಿವೋತ್ಕರ್ಷ ಪ್ರಮಾಣಾನಾಂ ಪರಿಪಾದನ ಸಮುದ್ಯತಃ ॥

ಮಾಹೇಶ್ವರಾಂಗನು ಪರಸ್ತ್ರೀಸಂಗಮವನ್ನು ಪರಿಹರಿಸಬೇಕು. ಪರ ದ್ರವ್ಯವನ್ನು ಅಪಹರಿಸಬಾರದು; ಆಶಿಸಬಾರದು. ಶಿವಕಾರ್ಯನಿರತನಾಗಿ, ಶಿವಾ ಗಮಗಳ ಅಭ್ಯಾಸದಲ್ಲಿ ಆಸಕ್ತನಾಗಿ, ಶಿವಸ್ತುತಿಯ ರಸಾಸ್ವಾದದಲ್ಲಿ ಸಂತಸ ಗೊಳ್ಳುವ ಮನಸುಳ್ಳವನಾಗಿ, ಶುದ್ಧಾತ್ಮನಾಗಿ, ಶಿವನ ಆಧಿಕ್ಯವನ್ನು ಉಗ್ಗಡಿ

ಸುವ ಪ್ರಮಾಣಗಳನ್ನು ಸಂಪಾದಿಸುವವನಾಗಿ-ಇರಬೇಕು. ಎಲ್ಲ ಬಗೆಯಲ್ಲಿಯೂ ಶಿವಸೇವಿಯಾಗಬೇಕು. 'ಶಿವಸಂಪಾದನ' ಶೀಲನಾಗಬೇಕು.

ದಾರೇಷಣ-ಪುತ್ರೇಷಣ-ವಿತ್ತೇಷಣ ಇವು ಮೂರು ಈಷಣತ್ರಯವೆಂದು ಹೆಸರಾಗಿವೆ. ಮಾಹೇಶನು ಈ ಆಶಾತ್ರಯದಿಂದ ದೂರನಾಗಿರಬೇಕೆನ್ನುವಾಗ ಪರದಾರ ಪರದ್ರವ್ಯಗಳ ಅಪೇಕ್ಷೆಯ ಮಾತು ಬಹುದೂರ ಉಳಿವುದು. ಸ್ವದಾರ ಸಂಯಮದಲ್ಲಿಯೆ ಪರದಾರ ಸಂಯಮನ ನಿರೂಪಿತವಾಗಿದೆ. ಪರದಾರ ಪರ ದ್ರವಿಣಗಳ ಆಸೆಯನ್ನು ಬಿಡುವುದು ವೈಯಕ್ತಿಕ ಕ್ಷೇಮದೊಡನೆ ಸಾಮಾಜಿಕ ಕ್ಷೇಮವೂ ಬೆಳೆದುಬರುತ್ತದೆ. ನೈತಿಕತೆ ನೆಲೆಗೊಳ್ಳುತ್ತದೆ. ಮತ್ತು ಸಾಮಾಜಿಕ ಆರ್ಥಿಕಸ್ಥಿತಿರಕ್ಷಣೆ-ಆರ್ಥಿಕ ಕಲ್ಯಾಣ-ಆರ್ಥಿಕಾಭಿವರ್ಧನೆಯ ಕಾರ್ಯಸುಗಮವಾಗುತ್ತದೆ; ಯಶಸ್ವಿಯಾಗುತ್ತದೆ.

ಈಷಣತ್ರಯದಿಂದ ಆತ್ಮಶಕ್ತಿ ಕುಂದುತ್ತದೆ; ಆತ್ಮಗೌರವವೂಕಡಿಮೆಯಾಗುತ್ತದೆ. ಪರಸತಿ, ಪರಸಂಪತ್ತಿಗೆ ಅಳುಕುವುದರಿಂದ ಮಾಹೇಶ್ವರತ್ವಕ್ಕೆ ಭಂಗ ಬರುತ್ತದೆ. ತನ್ನತನು ಮನದ ಒಡೆತನವೇ ತನಗೆ ಉಳಿಯುವುದಿಲ್ಲ. ಸುಜ್ಞಾನ ಸದ್ಭಾವಗಳು ಸಣ್ಣಾಗುತ್ತವೆ. ಕಾರಣ ಮಾಹೇಶ್ವರನು ಪರದಾರ ಪರದ್ರವಿಣಗಳಿಂದ ದೂರನಾಗಿರಬೇಕು.

"ಹರಿವ ಹಾವಿಂಗಂಜೆ, ಉರಿಯನಾಲಗೆಗಂಜೆ : ಸುರಗಿಯ ಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳಕುವೆ.
ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ ...." "ಮಾಹೇಶರನೆಂತೆಂಬೆನಯ್ಯಾ, ಪರಸ್ತ್ರೀಯ ಪರರರ್ಥದಾಸೆ ಬಿಡದನ್ನಕ್ಕ ?...." ಎಂದರು ಬಸವಣ್ಣನವರು ತನುಗುಣ ಮನಗುಣ ಪ್ರಾಣಗುಣಗಳನ್ನು ತೊಡೆಯದೆ ಮಾಹೇಶತ್ವವು ಮೈಗೂಡದು. ಪರರ ಹೆಣ್ಣು ಹೊನ್ನುಗಳಿಗೆ ಹಂಬಲಿಸುವುದು ತನುಮನ ಪ್ರಾಣಗುಣ. ಆತ್ಮ ಘಾತಕಕಾರ್ಯ ; ಪಾತಕ ಕಾರ್ಯ. ಘಾತಕನು ಪಾತಕನು ಮಾಹೇಶ್ವರತ್ವಕ್ಕೆ ಸಲ್ಲನು. ಆತ್ಮ ಕಲ್ಯಾಣ-ಸಮಾಜ ಕಲ್ಯಾಣಗಳನ್ನು ಸಾಧಿಸನು.

ಇನ್ನು ಮಹಿಳೆ ಮಹೇಶಾನಿಯಾದರೆ ಪುರುಷೇಷಣ, ಪುತ್ರೇಷಣ ವಿತ್ತೇಷಣಗಳನ್ನು ಬಿಡಬೇಕು. ಮತ್ತು ಪರಪುರುಷ ಸಂಗವನ್ನು, ಪರದ್ರವ್ಯಕಾಂಕ್ಷೆಯನ್ನು ಪರಿಹರಿಸಬೇಕು,

"ಪರಸ್ತ್ರಿಯಂ ಪರಾರ್ಥಂಚ ವರ್ಜಯೇತ್ ಭಾವಶುದ್ಧಿಮಾನ್।
ಲಿಂಗನಿಷ್ಠಾನಿಯುಕ್ತಾತ್ಮಾ ಮಾಹೇಶ್ವರ ಇತಿ ಸ್ಮೃತಃ ॥"

ಹೆರರ ಹೆಣ್ಣು ಹೊನ್ನು ಹೃದಯ ಶುದ್ಧಿಯನ್ನು ಕಳೆಯುತ್ತವೆ. ಲಿಂಗ ನಿಷ್ಠೆಯನ್ನು ಲಯಗೊಳಿಸುತ್ತವೆ. ಇವೆರಡರ ಆಸೆ ಅಂತಃಕರಣಗಳ ಅಶಾಂತಿಗೆ ಕಾರಣ. ಮನದ ಭೋಗಪ್ರವೃತ್ತಿಯನ್ನು ಕೆರಳಿಸುತ್ತವೆ. ಬುದ್ಧಿಯ ಬೆಳಕನ್ನು ಮುಚ್ಚುತ್ತವೆ. ಉದಾತ್ತಭಾವವನ್ನು ಉಡುಗಿಸುತ್ತವೆ. ಉನ್ನತ ಸ್ಥೈರ್ಯ ವನ್ನು ತುಳುಕಿಸುತ್ತವೆ. ಕರಣೇಂದ್ರಿಯಗಳನ್ನು ಹೀನ ಕಾರ್ಯಗಳಲ್ಲಿ ತೊಡಗಿ ಸುತ್ತವೆ. ಮಿಂಚಿನಂತೆ ಮಿಂಚಿ ಮಾಯವಾಗುವ ಸುಖಕ್ಕೆ ಚಿತ್ತ ಚಿಮ್ಮುವಂತೆ ಮಾಡುತ್ತವೆ. ಕೊರ್ಗಣೆಗಳಾಗಿ ಕಾಡುತ್ತವೆ. ಬಿಸಿಗಾಳಿಯಾಗಿ ಬೀಸುತ್ತವೆ. ಕಾಮ–ಹೇಮಗಳ ಪಾಶಬಂಧನದಲ್ಲಿ ಬಿದ್ದು ಮಾಹೇಶ್ವರತ್ವವನ್ನು ಮಣ್ಣುಮುಕ್ಕಿಸ ಬೇಕಾಗುತ್ತದೆ. ಹೀನ ಚಿಂತೆಯು ಮಥನದಲ್ಲಿ ಮುಂಗಾಣದಂತಾಗುತ್ತದೆ. ಆದ್ದರಿಂದ ಮಾಹೇಶ್ವರನು ಪರದಾರ ಪರದ್ರವಿಣಗಳನ್ನು ಆಶಿಸಬಾರದು.

ಜೀವನದಲ್ಲಿ ಸ್ವಸತಿ, ಸ್ವಸಂಪತ್ತುಗಳ ಸ್ಥಾನ ಏನು, ಎಷ್ಟರದ್ದು ಎಂಬು ದನ್ನು ಚೆನ್ನಾಗಿ ಅರಿತವನು ಪರಸತಿ ಪರಸಂಪತ್ತಿಗಳಿಗೆ ಎಂದಿಗೂ ಅಳುಕನು. "ನವಾ ಅರೆ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ। ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ।" ಸತಿಯು ಪತಿಯನ್ನು ಪ್ರೀತಿಸುವುದು ತನಗಾಗಿ! ಪತಿಯು ಸತಿಯನ್ನು ಪ್ರೀತಿಸುವುದು ಆತ್ಮಶಕ್ತಿಯ ಹ್ರಾಸಿಗಾಗಿ! ಹೀಗಿರುವಾಗ ಹೆರರ ಹೆಣ್ಣುಹೊನ್ನುಗಳ ಆಸೆಯಿಂದ ಮಾನವನಿಗಾಗುವ ಲಾಭವೇನಿಲ್ಲ. ಇಂತಿರು ವಾಗ ಮಹಂತ ಮಾಹೇಶ್ವರನು ಬಯಸುವುದೆಂದರೇನು ? ದೋಷಪಾಶದಲ್ಲಿ ಬಿದ್ದು ಮಾಹೇಶತ್ವವನ್ನು ಅದರಲ್ಲಿಯೂ ವೀರ ಮಾಹೇಶ್ವರತ್ವವನ್ನು ಹಾಳು ಮಾಡಿಕೊಳ್ಳುವುದೆಂದರೇನು ?

ಕಳಾಮಯನು ಮಾಹೇಶ್ವರನು, ಆ ಶಿವ ಕಳೆಯು ಬಿಂದು ಧಾರಣದಲ್ಲಿ ಬೆಳೆದು ಬೆಳಗುತ್ತದೆ. ಬ್ರಹ್ಮಚರ್ಯತ್ವಕ್ಕೆ ಬೆನ್ನಾಸರಾಗುತ್ತದೆ. ಕಾರಣ ಪರಸ್ತ್ರಿ ಸಂಗ ನಿರ್ಮುಕ್ತನಾಗೆಂದು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾವ ಪೂರ್ಣವಾಗಿ ಬೋಧಿಸಿದ್ದಾರೆ. ಅಂತೆಯೇ ಪರದ್ರವ್ಯದಾಶೆಯೂ ಕರ್ಮಪಾಶಕ್ಕೆ ಮೂಲ. ಅಪಹರಣ ಪಾಪಕ್ಕೆ ಮೂಲ. "ಮಾಗೃಧಃ ಕಸ್ಯಸ್ವಿದ್ಧನಂ" ಎಂದಿತು

ಈಶೋಪನಿಷತ್ ! ಸ್ವಧನದಲ್ಲಿ ಮನಶುಚಿಯಾಗಿರಬೇಕೆನ್ನುವಾಗ ಪರಧನದಾಶೆಗೆ ಬಿದ್ದು ಮನಮುಸುರೆ ಮಾಡಿಕೊಳ್ಳಬಾರದು. ಆಶೆಗಿಂತ ಪಾಪವಿಲ್ಲ ; ನಿರಾಶೆಗಿಂತ ಪುಣ್ಯವಿಲ್ಲ. ನಿಸ್ಸೀಮನೂ ನೀತಿವಂತನೂ ಆಗಬೇಕಾದರೆ ಪರಧನದ ಆಸೆಗೊಳಗಾಗಬಾರದು. ಆಶೆ ದಾಸತ್ವದ ಕುರುಹು : ಭವದ ಸುಳುಹು. "ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯು ಬರವು ತಪ್ಪದು. ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ...."

ನೂರನೋದಿ ನೂರ ಕೇಳಿದರೇನು ? ಆಸೆ ಹರಿಯದು, ರೋಷ ಬಿಡದು ;
ಮಜ್ಜನಕ್ಕೆರೆದು ಫಲವೇನು ?......"

ದ್ರವ್ಯ ಧರೆಯ ವ್ಯಾವಹಾರಿಕ ಶಕ್ತಿ. ಇದಿಲ್ಲದಿದ್ದರೆ ಇಹದ ಬಾಳಿಲ್ಲ ; ಬದುಕಿಲ್ಲ. ಆದರೆ ಪರದ್ರವ್ಯ ಪರಿಗ್ರಹಕ್ಕೆ ಪಕ್ಕಾಗಬಾರದು. ಸ್ವಯಂ ಸಂಪಾದಿಸಿ ವಿಶುದ್ಧಕಾರ್ಯಗಳಿಗೆ ಪರೋಪಕಾರ್ಯಕ್ಕೆ ವಿತರಣ ಮಾಡಬೇಕು. ವಿನಿಯೋಗಿಸಬೇಕು. ಸತ್ಯಶುದ್ಧ ಉದ್ಯಮದಿಂದ ಬಂದ ದ್ರವ್ಯದಲ್ಲಿ ದೇವಶಕ್ತಿಯಿರುತ್ತದೆ. ಪರಧನದಾಶೆಯಲ್ಲಿ ಆಸುರೀ ಶಕ್ತಿಯಿದೆ. ಇದರಿಂದಾಗಿ ಇದನ್ನು ಬಿಡಬೇಕು. ಮಾಹೇಶ್ವರು ಆರ್ಥಿನಕಸ್ವಾತಂತ್ರ್ಯವನ್ನು ಆರ್ಥಿಕ ಪಾವಿತ್ರ್ಯವನ್ನು ಸಂಪೂರ್ಣವಾಗಿ ಸಂಪಾದಿಸಬೇಕು. ಪರರ ವಿತ್ತವಾಸನೆ ಉಚಿತವಲ್ಲ.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ,
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ :
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ......
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವ...."

ಊರ ಸೀರೆಗೆ ಅಗಸ ತಡಬಡಿ ಹಡೆದಂತೆ, ಹೊನ್ನೆನ್ನದು. ಹೆಣ್ಣೆನ್ನದು, ಮಣ್ಣೆನ್ನದೆಂದು ಮರುಳಾದೆ : ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ ಕೂಡಲ ಸಂಗಮದೇವಾ ;

ಜಗತ್ತಿನಲ್ಲಿ ರೂಪರಾಶಿಗೆ ಹೆಸರಾದವು ಹೆಣ್ಣು ಹೊನ್ನುಗಳೆರಡು. ಒಂದು ಚರ, ಇನ್ನೊಂದು ಅಚರ. ರೂಪದಲ್ಲಿ ಮಾತ್ರ ಎರಡರದೂ ಎತ್ತಿದ

ಕ್ಕೆ. ಹೆಣ್ಣು ಸುಂದರಿ; ಹೊನ್ನು ಸುವರ್ಣ. ಇವೆರಡೂ ಕಣ್ಮನಗಳನ್ನು ಸೆಳೆಮಿಂಚಿನಂತೆ ಸೆಳೆಯತಕ್ಕವು. ಸೆಳೆದು ಮನವನ್ನು ಮರುಳಾಗಿಸುವವು, ಮೋಹ ಗೊಳಿಸುವವು; ಮಹೇಶ್ವರ ಧ್ಯಾನವನ್ನು ಮರೆಯಿಸುವವು. ಆದರಿಂದಾಗಿ ಇವು ಗಳ ಸಂಗ ಸ್ನೇಹಗಳನ್ನು ವರ್ಜಿಸಬೇಕು. ಅದರಲ್ಲಿಯೂ ಪರದಾರ ಪರದ್ರವ್ಯ ಗಳ ಆಸೆ ಆಕಾಂಕ್ಷೆಗಳನ್ನು ಪೂರ್ಣವಾಗಿ ಬಿಡಬೇಕೆಂದು ಶ್ರೀಜಗದ್ಗುರು ರೇಣುಕ ಶಿವಾಚಾರ್ಯರು ಬೋಧಿಸಿದ್ದಾರೆ. "ತೊರೆಯಮೀವಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ, ತೊರೆಯಂ ಭೋ, ತೊರೆಯಿಂಭೋ! ಪರನಾರಿಯ ಸಂಗವ ತೊರೆಯಿಂಭೋ! ಪರಧನದಾಮಿಷವ ತೊರೆಯಿಂಭೋ! ಇವ ತೊರೆ ಯದೆ ಹೋಗಿ ತೊರೆಯ ಮೀದರೆ, ಬರುದೊರೆಹೋಹುದು ಕೂಡಲಸಂಗಮ ದೇವಾ!" ಎಂಬ ಅದೇ ಅಭಿಪ್ರಾಯವನ್ನೆ ಬಸವಣ್ಣನವರು ಎತ್ತಿ ಹಿಡಿದಿದ್ದಾರೆ. ಪರರ ವಿತ್ತಾಪಹರಣವನ್ನು ವನಿತಾಪಹರಣವನ್ನು ನಿಷೇಧಿಸಿದ್ದಾರೆ. ಬರೀ ಸ್ನಾನದಲ್ಲಿ ಶುಚಿತ್ವವಿಲ್ಲ. ಸಂಪೂರ್ಣವಾಗಿ ಉಭಯಾಂಗ ಶುಚಿತ್ವವಳಪಡಬೇಕಾ ದರೆ ಸ್ನಾನದೊಡನೆ ಪರರ ಸೊತ್ತುಗಳ ವಿಷಯದಲ್ಲಿ ಸಂಯಮವೂ ಅತ್ಯ ಗತ್ಯ.

ಇನ್ನು ವೀರಮಾಹೇಶ್ವರನು ಯಾವಾಗಲೂ ಶಿವಕಾರ್ಯದಲ್ಲಿ ಶಿವಾಗಮ ಪಾರಾಯಣದಲ್ಲಿ ಶಿವೋತ್ಕರ್ಷ ಪ್ರಮಾಣ ಸಂಪಾದನದಲ್ಲಿ ಶುದ್ಧ ನಡೆ ನುಡಿ ಗಳಲ್ಲಿ ನಿರತನಾಗಿರಬೇಕೆಂದು ನಿರೂಪಿಸಿದ್ದಾರೆ ಶ್ರೀ ರೇಣುಕ ಜಗದ್ಗುರು ವರ್ಯರು.

ವೀರ ಮಾಹೇಶ್ವರನು ಯಾವ ಕಾಯಕವನ್ನೆ ಮಾಡಲಿ ಅದನ್ನು ಶಿವಲಿಂಗ ಕ್ಕಾಗಿ ಮಾಡಬೇಕು. ಶಿವಾರ್ಥವಾಗಿ ಮಾಡಿದ್ದು ಅಸಿ, ಮಸಿ, ಕೃಷಿ, ವಾಣಿಜ್ಯ, ವ್ಯಾಪಾರ ಮುಂತಾಗಿ ಯಾವುದೇ ಇರಲಿ ಅದು ಕಾಯಕವೆನಿಸು ತ್ತದೆ; ಶಿವಕಾರ್ಯವೆನಿಸುತ್ತದೆ. ಅದರಿಂದ ಮಾಡಿದಾತನ ತನು ಮನಗಳೆಲ್ಲ ಶುದ್ಧವಾಗುತ್ತವೆ. ಕೃಷಿ ಕೃತ್ಯ ಕಾಯಕದಿಂದಾದಡೇನು? ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ! ಅದೆಂತೆನೆ: ಆತನ ತನು ಶುದ್ಧ, ಆತನ ಮನ ಶುದ್ಧ; ಆತನ ನಡೆ ಶುದ್ಧ, ನುಡಿಯೆಲ್ಲ ಪಾವನವು......." ಎಂದು ಶಿವಾರ್ಥವಾಗಿ ಮಾಡಿದ ಕಾರ್ಯದಿಂದಾಗುವ ಪ್ರಯೋಜನವನ್ನು ಬಸವಣ್ಣನವರು ಬಿತ್ತರಿಸಿದ್ದಾರೆ.

ಕೇವಲ ಜೀವನ ನಿರ್ವಹಣ ದೃಷ್ಟಿಯಿಂದ ಕಾರ್ಯಗಳನ್ನು ಕೈಗೊಳ್ಳಬಾರದು. ಶಿವಸಂಸ್ಕೃತಿಯ ಉದ್ಧಾರಕ್ಕಾಗಿ ಉದ್ಯಮಶೀಲನಾಗಬೇಕು. ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನೊಡಲಿಂಗೆ, ಎನ್ನೊಡಪೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ—ಎನ್ನ ಮನವೆ ಸಾಕ್ಷಿ !....ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವಾ ! ನಾನು ಆರಂಬವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು ; 'ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು, ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ ನೀ ಕೊಡುವೆಯೆಂಬುದ ನಾನು ಬಲ್ಲೆನು ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು. ನಿಮ್ಮಾಣೆ—ಕೂ. ಸಂ. ದೇವಾ!

ಇದು ಶಿವಾರ್ಥ ಕಾರ್ಯಸಂಕಲ್ಪ, ಇದು ಶಿವಾರ್ಥ ಕಾರ್ಯಸಂಪನ್ನತೆ. ಈ ರೀತಿಯಲ್ಲಿ ಯಾವ ಕೆಲಸವನ್ನೇ ಮಾಡಲಿ ಅದೆಲ್ಲ ಸದಾಚಾರವೆನಿಸುತ್ತದೆ. ಸದ್ವಿಚಾರಕ್ಕೆ ದೋಹದವನ್ನುಂಟುಮಾಡುತ್ತದೆ. ಕೆಡೆನಡೆಯದಂತೆ ಪ್ರತಿಪಾಲಿಸುತ್ತದೆ. ಇದು ನಡೆಯ ಶುಚಿಯನ್ನು ಸೂಚಿಸಿದರೆ ಮುಂದಿನ ಶಿವಾಗಮ ಪರಾಯಣತೆ, ಶಿವಸ್ತುತಿರಸಾಸ್ವಾದಗಳೆರಡು ನುಡಿಶುಚಿಯನ್ನು ಸೂಚಿಸಿವೆ. ಕೆಡೆನಡೆಯದಂತಿರುವುದು ಹೇಗೆ ಆವಶ್ಯವೋ ಹಾಗೆ ಕೆಡೆನುಡಿಯದಂತಿರುವುದೂ ಆವಶ್ಯಕ. "ಭಕ್ತಿ ಸುಭಾಷೆಯ ನುಡಿಯ ನುಡಿವೆ. ನುಡಿದಂತೆ ನಡೆವೆ, ನಡೆಯೊಳಗೆ ನುಡಿಯ ಪೂರೈಸುವೆ,—ಮೇಲೆ ತೂಗುವ ತ್ರಾಸುಕಟ್ಟಳೆ ನಿಮ್ಮ ಕೈಯಲ್ಲಿ; ಒಂದು ಜವೆ ಕೊರತೆಯಾದರೆ, ಎನ್ನನದ್ದಿ ನೀನೆದ್ದು ಹೋಗು ಕೂ. ಸಂ. ದೇವಾ !

ಶಿವವಾಣಿಯಾಗಬೇಕಾದರೆ ಶಿವಾಗಮಾಭ್ಯಾಸ ಅನಿವಾರ್ಯ ; ಶಿವಶರಣರ ವಚನಾಭ್ಯಾಸ ಅನಿವಾರ್ಯ. ಕ್ರಿಯಾಶುದ್ಧಿಯಿಂದ ಬಹಿರಂಗ ಶುದ್ಧಿಯಾದರೆ ವಾಕ್‌ಶುದ್ಧಿಯಿಂದ ಅಂತರಂಗಶುದ್ಧಿಯಾಗುತ್ತದೆ. ಮಾತು ಜ್ಯೋತಿರ್ಲಿಂಗವಾಗುವುದೇ ಮಾತಿನ ಶುಚಿತ್ವದ ಹೆಗ್ಗುರುತು. "ಕೆರೆ ಹಳ್ಳ ಬಾವಿಗಳು ಮೈದೆಗೆದರೆ, ಗುಳ್ಳೆ ಗೊರಚೆ ಚಿಪ್ಪುಗಳ ಕಾಣಬಹುದು. ಕೂಡಲಸಂಗನ ಶರಣರು ಮನದೆರೆದ ಮಾತಾಡಿದರೆ ಲಿಂಗವ ಕಾಣಬಹುದು." ಶಿವಾಗಮಾಭ್ಯಾಸದಿಂದ ಶಿವಸ್ತುತಿಯಿಂದ ಈ ಸಿದ್ಧಿಸಂಪನ್ನತೆ ಸಂಪ್ರಾಪ್ತವಾಗುತ್ತದೆ. ಶಿವಾಗಮಗಳು ಶಿವವಾಣಿ

ಅಥವಾ ಶಿವಾಚಾರ್ಯವಾಣಿ. ಅಲ್ಲಿ ಶಿವಸ್ವರೂಪ ಸತ್ಯಸುಂದರವಾಗಿದೆ; ನಿತ್ಯ ಪೂರ್ಣವಾಗಿದೆ. ಅದರ ಅಭ್ಯಾಸದಿಂದ ಶಿವತ್ವದ ಆಗಮನವಾಗುತ್ತದೆ ಪಾರಾಯಣ ಮಾಡುವವನ ವಾಣಿಗೆ! ಮಾತು ಮಂಗಳವಾಗದೆ ಮಾಹೇಶ್ವರತ್ವಕ್ಕೆ ಮೆರಗು ಬಾರದು.

ಸಂಪಾದನೆಯಲ್ಲಿ ಶಿವಸಂಪಾದನೆ ಶ್ರೇಷ್ಠವಾದುದು. ಸಕಲ ಪ್ರಾಣಿಗಳಿಗೆ ಸುಖವನ್ನು ಶ್ರೇಯಸ್ಸನ್ನು ಶುಭವನ್ನು ಕೊಡತಕ್ಕವನು ಶಿವನು. ಸರ್ವಭೂತೇಶನವನು. ಆದ್ದರಿಂದ, "ಶಿವ ಏವ ಜಗತ್ಸರ್ವಂ ಶಿವಾದನ್ಯನ್ನ ವಿದ್ಯತೇ" ಎಂದು ಶಿವಾಗಮಗಳು ಉದ್ಘೋಷಿಸಿವೆ. 'ಶಿವೇತಿ ಮಂಗಳಂ ನಾಮ' "ಸ್ವಾಮಿ ನೀನು ಶಾಶ್ವತ ನೀನು; ಎತ್ತಿದೆ ಬಿರುದ ಜಗವೆಲ್ಲರಿಯಲು. 'ಮಹಾದೇವ, ಮಹಾದೇವ, ಇಲ್ಲಿಂದ ಮುಂದೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೆ ದೇವ ಕೂಡಲಸಂಗಮದೇವ.'

ಶಿವಶಾಸನದಿಂದ ಸರ್ವತತ್ವೋತ್ಪತ್ತಿ. ಶಿವಶಾಸನದಿಂದ ಸರ್ವದೇವಕಾರ್ಯ ಪ್ರವೃತ್ತಿ. ಶಿವಪ್ರಕಾಶದಿಂದ ಸೂರ್ಯಚಂದ್ರಾಗ್ನಿಗಳಿಗೆ ಪ್ರಕಾಶಪ್ರಾಪ್ತಿ. ಶಿವಶಕ್ತಿ ಪ್ರೇರಣೆಯಿಂದ ಸರ್ವಜಗದುತ್ಪತ್ತಿ ಮತ್ತು ಸರ್ವಪ್ರಾಣಿಪ್ರವೃತ್ತಿ ಶಿವಾನುಗ್ರಹದಿಂದ ಭವನಿಷ್ಪತ್ತಿ ಭಾವನಿಷ್ಪತ್ತಿ, ಸರ್ವಸಂಪತ್ತಿ.

"ತಸ್ಮಾಜ್ಞಯಾ ಮಹೇಶಸ್ಯ ಪ್ರಕೃತಿಃ ಪುರುಷೋಚಿತಾಂ
ಬುದ್ಧಿಂ ಪ್ರಸೂತೇ ಸಾ ಬುದ್ಧಿರಹಂಕಾರಮಹಂಕೃತಿಃ
ಇಂದ್ರಿಯಾಣಿ ದಶೈಕಂ ಚ ತನ್ಮಾತ್ರಪಂಚಕಂ ತಥಾ
ಶಾಸನಾದ್ದೇವದೇವಸ್ಯ ಶಿವಸ್ಯ ಶಿವದಾಯಿನಃ ।

ಅಧ್ಯವಸ್ಯತಿ ವೈ ಬುದ್ಧಿರಹಂಕಾರೋಽಭಿಮನ್ಯತೇ
ಚಿತ್ತಂ ಚೇತಯತೇ ಚಾಪಿ ಮನಃ ಸಂಕಲ್ಪಯತ್ಯಪಿ।
ಶ್ರೋತ್ರಾದೀನಿ ಚ ಗೃಹ್ಣಂತಿ ಶಬ್ದಾದೀನ್ ವಿಷಯಾನ್ ಪೃಥಕ್
ಸ್ವಾನೇವ ನಾನ್ಯಾನ್ ದೇವಸ್ಯ ದಿವ್ಯೇನಾಜ್ಞಾಬಲೇನ ವೈ ।

ಅವಕಾಶಮಶೇಷಾಣಾಂ ಭೂತಾನಾಂ ಸಂಪ್ರಯಚ್ಛತಿ
ಆಕಾಶಃ ಪರಮೇಶಸ್ಯ ಶಾಸನಾದೇವ ಸರ್ವಗಃ
ಪ್ರಾಣಾದ್ಯೈಶ್ಚ ತಥಾ ನಾಮಭೇದೈರಂತರ್ಬಹಿರ್ಜಗತ್

ಬಿಭರ್ತಿ ಸರ್ವಂ ಶರ್ವಸ್ಯ ಶಾಸನೇನ ಪ್ರಭಂಜನಃ
ಹವ್ಯಂ ವಹತಿ ದೇವಾನಾಂ ಕವ್ಯಂ ಕವ್ಯಾಶಿನಾಮಪಿ
ಪಾಕಾದ್ಯಂ ಚ ಕರೋತ್ಯಗ್ನಿಃ ಪರಮೇಶ್ವರ ಶಾಸನತ್
ಸ-ಜೀವನಾದ್ಯಂ ಸರ್ವಸ್ಯ ಕುರ್ವಂತ್ಯಾಪಃ ಶಿವಾಜ್ಞಯಾ
ವಿಶ್ವಂಭರಾ ಜಗನ್ನಿತ್ಯಂ ಧತ್ತೇ ವಿಶ್ವೇಶ್ವರಾಜ್ಞಯಾ ।

ಕರೋತಿ ಸಂಪದಃ ಶಶ್ವದ್ ಜ್ಞಾನಂ ಚಾಪಿ ಸುಮೇಧಸಾಂ
ನಿಗ್ರಹಂ ಚಾಪ್ಯಸಾಧೂನಾಮೀಶಾನಃ ಶಿವಶಾಸನಾತ್।
ಕಾಲಃ ಕರೋತಿ ಸಕಲಂ ಕಾಲಃ ಸಂಹರತಿ ಪ್ರಜಾಃ
ಕಾಲಃ ಪಾಲಯತೇ ವಿಶ್ವಂ ಕಾಲಕಾಲಸ್ಯ ಶಾಸನಾತ್।

ಆದಿತ್ಯಾ ವಸವೋ ರುದ್ರಾ ಅಶ್ವಿನೌ ಮರುತಸ್ತಥಾ
ಖೇಚರಾ ಋಷಯಸ್ಸಿದ್ಧಾ ಭೋಗಿನೋ ಮನುಜಾ ಮೃಗಾಃ
ಪಶವಃ ಪಕ್ಷಿಣಶ್ಚೈವ ಕೀಟಾದ್ಯಾಃ ಸ್ಥಾವರಾಣಿ ಚ
ನದ್ಯಃ ಸಮುದ್ರಾ ಗಿರಯಃ ಕಾನನಾನಿ ಸರಾಂಸಿ ಚ
ವೇದಾಃ ಸಾಂಗಾಶ್ಚ ಶಾಸ್ತ್ರಾಣಿ ಮಂತ್ರಾಸ್ತೋಮ ಮಖಾದಯಃ
ಕಾಲಾಗ್ನ್ಯಾದಿ ಶಿವಾಂತಾನಿ ಭುವನಾನಿ ಸಹಾಧಿಪೈಃ ।
ಬ್ರಹ್ಮಾಂಡಾನ್ಯಪ್ಯಸಂಖ್ಯಾನಿ ತೇಷಾಮಾವರಣಾನಿ ಚ ।

ವರ್ತಮಾನಾನ್ಯತೀತಾನಿ ಭವಿಷ್ಯಂತ್ಯಪಿ ಕೃತ್ಸ್ನಶಃ
ದಿಶಶ್ಚ ವಿದಿಶಶ್ಚೈವ ಕಾಲಭೇದಾಃ ಕಲಾದಯಃ
ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ
ತತ್ಸರ್ವಂ ಶಂಕರಸ್ಯಾಜ್ಞಾ ಬಲೇನ ಸಮಧಿಷ್ಠಿತಮ್

—ಚಂದ್ರಜ್ಞಾನಾಗಮ

ಇವೆ ಮುಂತಾಗಿ ಶಿವಾಗಮಗಳಲ್ಲಿ ಶಿವೋತ್ಕರ್ಷ ಪ್ರಮಾಣಗಳು ಸಾಕಷ್ಟಿವೆ. ಸರ್ವವೂ ದೇಹವಾಗಿ ಆ ಪರಶಿವನೇ ದೇಹಿಯಾಗಿದ್ದಾನೆ. ಅಂದರೆ ಸರ್ವಾಂತರ್ಯಾಮಿಯಾಗಿ ಸರ್ವಪ್ರೇರಕನಾಗಿದ್ದಾನೆ. ಸರ್ವವು ಶಿವಾಜ್ಞೆಯಿಂದ ಅದಿಷ್ಠಿತವಾಗಿದೆ, ಎಂದು ಮನವರಿಕೆ ಮಾಡಿಕೊಂಡವನೇ ಮಾಹೇಶ್ವರನೆನಿಸುವನು.

ಮಾಹೇಶ್ವರನ ಧ್ಯೇಯ ತನ್ನ ಬಾಳು ಶಿವವಾಗಬೇಕು. ಜನತೆಯ ಬಾಳು ಶಿವವಾಗಬೇಕೆಂದಿರುತ್ತದೆ. ಅಶಿವತೆ ಎಲ್ಲಿಯೂ ಯಾರಲ್ಲಿಯೂ ಮೈದೋರಬಾರದೆಂಬುದೇ ಮಾಹೇಶ್ವರಾಂಗನ ಮನದಾಸೆ,

"ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶ ಪಂಚಕಃ
ಅಸ್ಪೃಷ್ಟಮನಸಂಬಂಧೋ ಮಾತ್ಸರ್ಯಾವೇಶವರ್ಜಿತಃ
ನಿರಸ್ತಮದನೋನ್ಮೇಷೋ ನಿರ್ಧೂತಕ್ರೋಧವಿಪ್ಲವಃ
ಸದಾ ಸಂತುಷ್ಟಹೃದಯಃ ಸರ್ವಪ್ರಾಣಿಹಿತೇ ರತಃ

ಮಮಕಾರವನ್ನು ಮುರಿದಿಕ್ಕಿ, ಅಹಂಕಾರವನ್ನು ತರಿದಿಕ್ಕಿ, ದುಃಖಪಂಚಕಗಳನ್ನು ದೂರೀಕರಿಸಿ. ಅಷ್ಟಮದಗಳನ್ನು ಅಳಿಸಿ, ಮತ್ಸರಭಾವವನ್ನು ದೂಡಿ,ಕಾಮಕ್ರೋಧಗಳನ್ನು ಈಡಾಡಿ, ಸದಾ ಸಂತೋಷಚಿತ್ತನಾಗಿ, ಸರ್ವಪ್ರಾಣಿಹಿತದಲ್ಲಿ ರತನಾಗಿ ಇರುವವನೇ ವೀರಮಾಹೇಶ್ವರನು.

ಮಾನವರಿಗೆ ಮೊದಲನೆಯ ಬಂಧ ಮಮಕಾರ. ಇದು ಹುಟ್ಟಿನೊಡನೆಯೇ ಹೊಂದಿ ಬಂದಿದೆ. ಮಾನವರಿಗೆ ಮಾತ್ರವಲ್ಲ ಮರ್ತ್ಯಲೋಕದ ಸರ್ವಪ್ರಾಣಿಗಳಿಗೂ ಅಂಟಿ ಬಂದ ವ್ಯಾಧಿ. ಇದು ಯಾರನ್ನೂ ಬಿಟ್ಟಿಲ್ಲ,

ಮಮಕಾರಕ್ಕೆ ಎರಡು ಮುಖಗಳಿವೆ. ಅವು ನನ್ನವರು ನನ್ನದು ಎಂಬವು. ಬೆನ್ನುಬಳಿಯವರು, ಬಂಧುಗಳು ಎಂದು 'ನನ್ನವರು' ಇಬ್ಬಗೆ. ತನ್ನ ತನು ಕರಣೇಂದ್ರಿಯವೃಂದ ಇದಕ್ಕೆ ಅನ್ಯವಾದ ಪಡಿಪದಾರ್ಥ ಎಂದು 'ನನ್ನದು' ಇತ್ತೆರ. ಇವೆಲ್ಲವುಗಳಲ್ಲಿ ಮಮಕಾರವಿರಬಾರದು. ತನ್ನವರಲ್ಲಿ ತನ್ನದರಲ್ಲಿ ಪ್ರೀತಿಯಿದ್ದರೆ ಮಮಕಾರವೆನಿಸಿ ಬಂಧನವಾಗುತ್ತದೆ. ಅನ್ಯರಲ್ಲಿ ಅನ್ಯದರಲ್ಲಿ ನಿರಪೇಕ್ಷವಾದ ಪ್ರೇಮವಿದ್ದರೆ ಸಹಕಾರ–ಸಮಭಾವವೆನಿಸಿ ಬಂಧರಹಿತವಾಗುತ್ತದೆ, ಭಾವವೈಶಾಲ್ಯವೆನಿಸುತ್ತದೆ. ವಿಶಾಲ ಜಗತ್ತಿನ ಮೇಲೆಯೂ ಸ್ವಾರ್ಥಪ್ರೇಮವನ್ನು ತೋರಿದರೆ ಅದೂ ಸಹ ಮಹಾಮಮಕಾರವೆನಿಸುತ್ತದೆ. ದೇಹ ಜೀವ ಜಗತ್ತು ಈ ಮೂರು ನನ್ನವಲ್ಲ ನಿನ್ನದೆಂದು ಭಾವಿಸುವುದೇ ನಿಜವಾದ ನಿರ್ಮಮತೆ. ಶಿವಷಡಕ್ಷರಿ ಮಂತ್ರದಲ್ಲಿ ಈ ಅರ್ಥವನ್ನು ಗುರುಬೋಧಿಸಿ ನಿರ್ಮಮತ್ವ ಪಾಠವನ್ನು ಶಿಷ್ಯನಿಗೆ ಮೊದಲು ಕಲಿಸುತ್ತಾನೆ. ಇದರಿಂದಾಗಿ

ಮಾಹೇಶ್ವರಾಂಗನಿಗೆ ತನುಮನಧನ ಪ್ರಾಣಾಭಿಮಾನಗಳಲ್ಲಿ, ಪುತ್ರಮಿತ್ರ ಕಲತ್ರಾದಿಗಳಲ್ಲಿ. ಸಂಪತ್ತು ಜಗತ್ತುಗಳಲ್ಲಿ ಸ್ವಾರ್ಥಪ್ರೀತಿ ಸರ್ವಥಾ ಇರಬಾರದು. ಇದ್ದರೆ ಮಹೇಶ್ವರನ ಒಲುಮೆಯಾಗದು. "ತನು ಮನಧನವ ಹಿಂದಿಕ್ಕಿಕೊಂಡು ಮಾತಿನ ಬಣಬೆಯು, ಒಳಲೊಟ್ಟೆಯ ನುಡಿವರೂ ನೀವೆಲ್ಲ ಕೇಳಿರೇ: ತಲೆಹಿಲ್ಲದ ಕೋಲು ಹೊಳ್ಳು ಹಾರುವುದಲ್ಲದೆ ಗುರಿಯ ತಾಗಬಲ್ಲುದೆ ? ಮಾಯಾಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲ ಸಂಗಮದೇವನೆಂತೊಲಿವನಯ್ಯಾ?" 'ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ, ನಿಮ್ಮಪುರಾತರಾಣೆ!'

ಮಮಕಾರ ಭೌತಿಕ, ದೈಹಿಕ, ಆತ್ಮಿಕವೆಂದು ಮೂಬಗೆ. ಇವುಗಳಲ್ಲಿ ಮೊದಲಿನವೆರಡು ತ್ಯಾಜ್ಯ. ಆತ್ಮಿಕ ಮಮಕಾರ ಅಗತ್ಯ. ಗುರುಲಿಂಗ ಜಂಗಮರಲ್ಲಿ ಶಿವಾಗಮಗಳಲ್ಲಿ ಶಿವಕಾರ್ಯಗಳಲ್ಲಿ ಮಮಕಾರ ಇದ್ದಾಗಬೇಕು. ವಿಷಯಾದಿಗಳಲ್ಲಿ ಇಂದ್ರಿಯಾದಿಗಳಲ್ಲಿ ಮಮಕಾರ ಇರಬಾರದು. ತ್ಯಾಗ ಯೋಗಗಳಲ್ಲಿ ಇರಬೇಕು. ಕೇವಲ ಭೋಗದಲ್ಲಿ ಮಮಕಾರ ಇರಬಾರದು' ಇದ್ದರೆ ಪರಮನ ನೆನಹು ಬಾರದು.

"ಗುಬ್ಬಿ ಹೆರರ ಮನೆಯ ತನ್ನ ಮನೆಯೆಂಬಂತೆ–ಧರೆ, ಧನ, ವನಿತೆಯರು ಎನ್ನುವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ! ಸರ್ವಕರ್ತೃ ಕೂಡಲಸಂಗಯ್ಯನೊಬ್ಬನೆ ಎಂದರಿಯದೆ ಕೆಟ್ಟಿತು ಜೀವ!"–ತನ್ನದಲ್ಲದ್ದನ್ನೆ ತನ್ನದೆಂದು ತಿಳಿದು ಮಮಕಾರದಿಂದ ಮೂಢನಾಗಿ ಮಾಡಬಾರದ್ದನ್ನು ಮಾಡಿ ಕೆಟ್ಟುಹೋಗುತ್ತದೆ ಜೀವ. ಕಾರಣ ಪ್ರಾಕೃತಿಕ ಪ್ರೇಮವನ್ನು ಅಂದರೆ ಮಮಕಾರವನ್ನು ಬಿಡಬೇಕು,

ಎರಡನೆಯ ಬಂಧನ ಅಹಂಕಾರ. ಮಮಕಾರದ ಬೆನ್ನೇರಿ ಬರುವುದು ಅಹಂಕಾರ. 'ನಾನು' ಎಂಬುದು ಅಹಂಕಾರ. ಇದು ಸ್ಥೂಲ–ಸೂಕ್ಷ್ಮ–ಕಾರಣವೆಂದು ಮೂಬಗೆ. ಇವನ್ನೆ ತಾಮಸ–ರಾಜಸ–ಸಾತ್ವಿಕವೆಂತಲೂ ಹೇಳುವುದುಂಟು. ಈ ಮೂರನ್ನು ವಿಕಾರಾಹಂಕಾರ ಅವಿಕಾರಾಹಂಕಾರವೆಂದು ಮತ್ತೆ ಎರಡು ಬಗೆಯಾಗಿ ವಿಂಗಡಿಸುವರು. ತಾಮಸ-ರಾಜಸಗಳು ವಿಕಾರಾಹಂಕಾರಗಳು. ಸಾತ್ವಿಕ ಅಥವಾ ಕಾರಣಾಹಂಕಾರವು ಅವಿಕಾರಾಹಂಕಾರವು. ಇದನ್ನೆ ಚಿದಹಂಕಾರ

ವೆನ್ನುವರು. ಇದು ತ್ಯಾಜ್ಯವಲ್ಲ.ತ್ಯಜಿಸಲು ಸಾಧ್ಯವಿಲ್ಲ, ತಾಮಸ–ರಾಜಸಾಹಂಕಾರಗಳನ್ನು ತ್ಯಜಿಸಬೇಕು. ಇವು ದೇಹೇಂದ್ರಿಯಗಳನ್ನು ಆಶ್ರಯಿಸಿರುತ್ತವೆ.ಈ ದೇಹ ನಾನು, ಈ ಕರಣೇಂದ್ರಿಯಗಳು ನಾನು–ಎಂದು ಭಾವಿಸುವುದು ದೈಹಿಕ ಐಂದ್ರಿಕ ಅಹಂಕಾರಗಳು. ನೋಡಿದೆ, ಕೇಳಿದೆ, ಮಾಡಿದೆನೆಂಬುದು ಕರ್ಮಾಹಂಕಾರ. ನಾನರಿತೆ, ನಾನು ಜ್ಞಾನಿ ಎಂಬುದು ಜ್ಞಾನಾಹಂಕಾರ. ಇವೆಲ್ಲ ಅಹಂಕಾರಗಳು ಶಿವಸಾಯುಜ್ಯವನ್ನು ತಾರವು ; ಸನ್ನಿಹಿತತ್ವಕ್ಕೆ ತೊಡಕಾಗುವವು.

'ಅಹಂಕಾರ ಮನವನೆಂಬುಗೊಂಡಲ್ಲಿ ಲಿಂಗ ತಾನೆಲ್ಲಿ ಬಪ್ಪುದೊ? ಅಹಂಕಾರಕ್ಕೆ ಎಡೆಗೊಡದೆ ಲಿಂಗತನುವಾಗಿರಬೇಕು. ಅಹಂಕಾರ ರಹಿತವಾದಲ್ಲಿ ಸನ್ನಿಹಿತ ಕಾಣಾ ಕೂಡಲಸಂಗಮದೇವ.

ಜಡ ಪ್ರಕೃತಿಯ ಅಹಂವೃತ್ತಿಗೆ ಅಂಟಿಕೊಂಡರೆ ಆದರಿಸಿದರೆ ಆತ್ಮಸತ್ತೆಯ ಆತ್ಮಾನಂದದ ಅರಿವಾಗದು. ಅಹಂವೃತ್ತಿ ಮಮತ್ವದ ಗ್ರಂಥಿ. ಮಮತ್ವ ಸಂಕುಚಿತ ಮತ್ತು ಸ್ವಾರ್ಥಗಳ ಗ್ರಂಥಿ. ಇವು ತೊಲಗದೆ ಚೈತನ್ಯ ತೊಳಗದು. ಪೂರ್ಣ ಸತ್ತೆಯುಳ್ಳ ಚೈತನ್ಯವೇ ಲಿಂಗ. ಅದು ಸನ್ನಿಹಿತವಾಗಬೇಕಾದರೆ ಅಹಂಕಾರ ಗ್ರಂಥಿ ಬಿಚ್ಚಬೇಕು. ವೃತ್ತವಚ್ಚಿನ್ನ ಅಹಂಕಾರ ಎಲ್ಲಿದ್ದರೂ ಕೆಡಕು. ಅದರಿಂದಾಗುವುದು ಒಡಕು.

'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ! ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ ! ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿತ್ತನೀವ ಕೂಡಲಸಂಗಮದೇವ.

ಮಾಡುವವನು ತಾನಲ್ಲ ; ಮಾಡಿಸಿಕೊಂಬುವವನು ತಾನಲ್ಲ. ತಾನು ಮಾಡಿದೆನೆಂಬುದು ತಿಳುವಳಿಕೆಯಿಲ್ಲದ ಮಾತು. "ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ" ದಿಟವಾಗಿ ಮಾಡಿಸುವಾತನು ಆ ಪರಮೇಶ್ವರನು. ಮಾಡಿಸಿಕೊಂಬುವನೂ ಆತನೆ. ಇದನರಿಯದೆ ಅಹಂಕಾರದಿಂದ ಜೀವನು ಮತಿ ಮಂದನಾಗುತ್ತಾನೆ. ಹಮ್ಮಿಗೊಳಗಾಗುತ್ತಾನೆ. 'ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು ; ಮರ್ಮವನರಿಯದ ಮಾಟ ಸುಯಿದಾನದ ಕೇಡು.' ಎಂದರು ಬಸವಣ್ಣನವರು. ಒಳ್ಳೆಯದನ್ನೆ ಮಾಡಿದರೂ ಹಮ್ಮಿನಿಂದ ಮಾಡಬಾರದು. ಈ ಮರ್ಮವನ್ನು ಅರಿಯದಿದ್ದರೆ ಮಾಡಿದ್ದೆಲ್ಲ ವ್ಯರ್ಥವಾಗುವುದು. 'ಹತ್ತು ಮತ

ರದ ಭೂಮಿ, ಬತ್ತುವ ಹಯನು, ನಂದಾದೀವಿಗೆಯ ನಡೆಸಿಹೆನೆಂಬವರ ಮುಖವ ನೋಡಲಾಗದು ; ಅವರ ನುಡಿಯ ಕೇಳಲಾಗದು. ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೊ ? ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿದಂತೆ 'ಎನ್ನಿಂದಲೆ ಆಯಿತ್ತು, ಎನ್ನಿಂದಲೆ ಹೋಯಿತ್ತು' ಎಂಬವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ, ಕೂ. ಸಂ. ದೇವ?' 'ಒತ್ತಿ ಹೊಸೆದು ಕಿಚ್ಚನೆ ಮಾಡಿದೆನೆಂದು ಮುಚ್ಚಿ ಹಿಡಿವೊಡೆ ಕೈ ಬೇಯದಿಹುದೆ ? ಎನ್ನಿಂದಾಯಿತ್ತು, ಎನ್ನಿಂದ ಹೋಯಿತ್ತು' ಎನ್ನದಿರು ಮನವೆ. ನಾನು ಮಾಡಿದೆನೆನ್ನದಿರು ಮನವೆ.'

'....ಆನು ಮಾಡಿದೆ'ನೆಂಬ ಕಿಚ್ಚು ಸಾಲದೆ ?'

"ನಾನೆಂಬಹಂಕಾರ ತಲೆದೋರಿದಲ್ಲಿ ಅಟ ಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು. ಆ ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿ ಕೆಡಲೊಡನೆ ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲರು ತಾಮಸ ಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗೊಹೇಶ್ವರ."

ಮಾಹೇಶ್ವರನಿಗೆ ತನ್ನ ಮಾಹೇಶ್ವರತ್ವಕ್ಕೆ ತಕ್ಕ ಶಕ್ತಿ ಸಂಚಯವಾಗಬೇಕು. ಅದಾಗಬೇಕಾದರೆ ಮಮಕಾರ-ಅಹಂಕಾರ-ಅರಿಷಡ್ವರ್ಗಗಳನ್ನು ಗೆಲಿಯಬೇಕು. ತನ್ನ ಮಹಾಶಕ್ತಿಯು ಹ್ರಾಸವಾಗುವುದಕ್ಕೆ ಇವೆಲ್ಲ ಕಾರಣಗಳಾಗಿವೆ. ಸತ್ಯದ ಮತ್ತು ಸತ್ವದ ನಿಲವನ್ನು ಕಾಣಲು ಕೈಗೂಡಿಸಿಕೊಳ್ಳಲು ಆತಂಕಗಳಾಗಿವೆ. ಅದರ ಲ್ಲಿಯೂ ಅಹಂಕಾರದ ದರ್ಪದಲ್ಲಿರುವವನು ವಿನಯಾದಿ ಸದ್ಗುಣಗಳ ಹುಲು ಸಾದ ಬೆಳೆಯನ್ನು ಬೆಳೆಯಲಾರನು.

"ಆನೆಯನೇರಿಕೊಂಡು ಹೋದಿರೆ ನೀವು. ಕುದುರೆಯನೇರಿಕೊಂಡು ಹೋದಿರೆ ನೀವು; ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರಲ್ಲಾ ! ಸತ್ಯದ ನಿಲವನರಿಯದೆ ಹೋದಿರಲ್ಲಾ ! ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ ! ಅಹಂಕಾರವೆಂಬ ಮದಗಜವನೇರಿ, ವಿಧಿಗೆ ಗುರಿಯಾಗಿ, ನೀವು ಹೋದಿರಲ್ಲಾ ! ನಮ್ಮ ಕೂ. ಸಂ. ದೇವರನರಿಯದೆ ನರಕಕ್ಕೆ ಭಾಜನರಾದಿ ರಲ್ಲಾ !"

ಅಹಂಕಾರದ ಮದ ಅಷ್ಟಿಷ್ಟಲ್ಲ, ಅದು ಆನೆಯಂತಹದು. ಅಂತೆಯೇ ಅದರ ವೇಗ, ಅದರ ತೀವ್ರತೆ ಕುದುರೆಯ ವೇಗವನ್ನು ಮೀರುವಂತಹದು. ಅಹಂಕಾರದ ಗುಣ ಬಿಳುಪಲ್ಲ; ಅಂದರೆ ಸಾತ್ವಿಕವಲ್ಲ; ಕೆಂಪು-ಕಪ್ಪು ಬಣ್ಣದ— ಅಂದರೆ ರಾಜಸ ತಾಮಸ ಗುಣಗಳಿಗೆ ಹೋಲುವಂತಹದು. ಅವುಳ್ಳವರಿಗೆ ಸತ್ಯ-ಸದ್ಗುಣಗಳ ಸಂಪಾದನೆಯಾಗದು. ಆಗದ ಬಳಿಕ ಕರ್ಮ-ದುಃಖ ಗಳಿಗೆ ಗುರಿಯಾಗುವುದು ತಪ್ಪುವುದಲ್ಲ. ತನ್ನ ಶಕ್ತಿ ಎಷ್ಟರದೆಂಬುದು ಅರಿಕೆ ಯಾಗುವುದಿಲ್ಲ. 'ಮರದ ನೆಳಲಲಿದ್ದು ತನ್ನ ನೆಳಲನರಸಬಹುದೆ ? ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ ? ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ ? ಆನು ಭಕ್ತನೆಂಬ ನುಡಿ ನುಡಿದೆ ಕೂ. ಸಂ. ದೇವಾ ?"

ನನ್ನದು-ನನ್ನವರು ಎಂಬುದು ಮಮಕಾರವಾದರೆ,-'ಇದು ನಾನು' ಎಂದು ಹೇಳುವುದು ಸ್ಥೂಲಾಹಂಕಾರ. ಅಂತೆಯೇ 'ನಾನು ದೇವರವ'— ದೇವನನ್ನು ಭಜಿಸುವವ—ಉಪಾಸಿಸುವವನೆಂದು ಉಗ್ಗಡಿಸುವುದೂ ಒಂದು ಬಗೆಯ ಕಿಚ್ಚು ಕಾರುವ ಹಮ್ಮು. ಮರದ ನೆಳಲಲ್ಲಿದ್ದು ತನ್ನ ನೆಳವನ್ನು ಬೆದಕುವ ಸಾಹಸ. 'ನಾನು ಭಕ್ತ'ನೆಂಬ ಭಾವ ಮೂಡಬಾರದು. ಆಡಬಾರದು; ಈ ಭಾವ ಭಾವೀ ಪ್ರಗತಿಗೆ ಭಾವೀ ಪೂರ್ಣತೆಗೆ ಆತಂಕ. ಕಾರಣ ಪ್ರಕೃತಿಯ ಗುಣ ಧರ್ಮಗಳಾದ ಈ ಮಮಕಾರ—ಅಹಂಕಾರಗಳೆರಡನ್ನು ತಡೆಯಬೇಕೆಂದು ಜಗದ್ಗುರು ರೇಣುಕ ಶಿವಾಚಾರ್ಯರು ನಿರೂಪಿಸಿ ಪ್ರಕೃತಿ ಸ್ವಭಾವವನ್ನು ಮೀರಲು ಆಜ್ಞಾಪಿಸಿದ್ದಾರೆ.

ಕರಣೇಂದ್ರಿಯಗಳ ಮುಖಾಂತರ ಹಮ್ಮು ಹಲವು ಬಗೆಯಾಗಿ ಬಂದು ನಿಂದು ಕಾಡುತ್ತದೆ. ಮೂಸಿದೆ, ರುಚಿಸಿದೆ, ನೋಡಿದೆ, ಮುಟ್ಟಿದೆ, ಕೇಳಿದೆ, ಮಾಡಿದೆ. ನೀಡಿದೆ, ನೆನದೆ, ತಿಳಿದೆ, ಭಾವಿಸಿದೆ ಎಂದು ಮುಂತಾಗಿ ಅಹಂಕರಿಸು ತ್ತದೆ ಈ ಜೀವ. ಇದೆಲ್ಲವೂ ತೊಲಗಬೇಕು. ಕೊಡುವವನು ತೆಗೆದುಕೊಂಬು ವವನು ಆ ಪರಶಿವನೇ ಎಂದು ನಂಬಬೇಕು. 'ಎನ್ನ ಹಾಮ-ಕ್ಷೇಮ ನಿಮ್ಮ ದಯ್ಯಾ, ಎನ್ನ ಹಾನಿ-ವೃದ್ಧಿ ನಿಮ್ಮದಯ್ಯಾ; ಎನ್ನ ಮಾನಾಪಮಾನ ನಿಮ್ಮ ದಯ್ಯಾ..." ಎಂಬ ದ್ವಂದ್ವಾರ್ಪಣಭಾವ ಮೂಡಬೇಕು. ಕೀಳಾದರೆ ಆತನ ಮೇಲೆ ಆರೋಪಿಸುವುದು; ಮೇಲಾದರೆ ತಾನು ಮಾಡಿದೆನೆನ್ನುವುದು ನಿಷ್ಠಾವಂತ

ನಿಗೆ ತಕ್ಕುದಲ್ಲ; ಜ್ಞಾನವಂತನಿಗೆ ಉಚಿತವಲ್ಲ. ಮಮಕಾರದಂತೆ ಅಹಂಕಾರವೂ ಅಶಾಂತಿಗೆ ಕಾರಣ; ಅಜ್ಞಾನಕ್ಕೆ ಕಾರಣ; "ನಿರ್ಮಮೋ ನಿರಹಂಕಾರಃ ಸ ಶಾಂತಿ ಮಧಿಗಚ್ಛತಿ"–ಎಂದು ಹೇಳಿ ಶ್ರೀ ರೇಣುಕ ಜಗದ್ಗುರುವಿನ ಅಭಿಪ್ರಾಯವನ್ನೇ ಭಗವದ್ಗೀತೆಯೂ ಸಮರ್ಥಿಸಿದೆ.

ಮಮಕಾರ ಅಹಂಕಾರಗಳು ದುಃಖಮೂಲ. ಇವೆರಡನ್ನು ಸಂಯಮನ ಮಾಡಿದರೆ ಪಂಚಕ್ಲೇಶಗಳು ಪರಿಹಾರವಾಗುತ್ತವೆ. ಅವಿದ್ಯಾ ಅಸ್ಮಿತರಾಗದ್ವೇಷ ಅಭಿನಿವೇಶ ಇವು ದುಃಖಪಂಚಕಗಳು. ತಮೋಗುಣಜನ್ಯಗಳು. ಇದೊಂದು ಪಂಜರ. ಈ ಆಯುದ್ದರಿಂದ ಪಂಜರ ಭದ್ರವಾಗಿರುತ್ತದೆ. ಇದರಲ್ಲಿ ಸಿಕ್ಕುಬಿದ್ದ ಜೀವನು ಪ್ರಗತಿಗೆ ಬಾರನು. ಮಾನವನ ಬಾಳು ನಿಸರ್ಗವಾಗಿ ಲೇಸಿನತ್ತ ಹೋಗದೆ ಕ್ಲೇಶಕರಪಥದಲ್ಲಿ ಕ್ರಮಿಸುತ್ತದೆ. ಕ್ಲೇಶಕ್ಕೆ ಮೂಲ ಅವಿದ್ಯೆ. ಅವಿದ್ಯೆ ಬಾಳಿನ ನೆರಳಾಗಿ ಬಂದಿರುತ್ತದೆ. ಈ ನೆರಳಿನ ನೆರವಿನಲ್ಲಿಯೇ ನರನ ಜೀವನ ಸಾಗುತ್ತಿರುತ್ತದೆ. ವಿದ್ಯಾವಂತರಾಗಿ ಬಾಳುವ ಬಗೆ ಕಡಿಮೆ. ವಿದ್ಯೆಯಿಲ್ಲದ ಬಾಳು ಹದ್ದಿನ ಬಾಳು; ವ್ಯಾಧನ ಬಾಳು. ಬಾಳಿಗೆ ಅನ್ನಹೇಗೋ ವಿದ್ಯೆ ಹಾಗೆ! ಅನ್ನವಿಲ್ಲದವನು ಬಡವನಾಗುತ್ತಾನೆ, ವಿದ್ಯೆಯಿಲ್ಲದವನೂ ಬಡವನಾಗುತ್ತಾನೆ. ಒಂದು ಧನದಾರಿದ್ರ್ಯ; ಇನ್ನೊಂದು ಜ್ಞಾನದಾರಿದ್ರ್ಯ. ಬಡತನ ಬವಣೆಗೆ ಮೂಲವೆಂಬುದನ್ನು ಬೇರೆ ಹೇಳಬೇಕಿಲ್ಲ. ಹಸಿದವನು ಏನನ್ನೂ ಮಾಡಲಾರನು: ಮುನ್ನಡೆಯಲಾರನು. ಯಾವುದಕ್ಕೂ ಶರೀರಪುಷ್ಟಿಯು ಎಷ್ಟು ಆವಶ್ಯಕವೋ ಬೌದ್ಧಿಕಪುಷ್ಟಿಯೂ ಅಷ್ಟೇ ಅಗತ್ಯ. ಕ್ಲೇಶಪಾಶಕ್ಕೆ ಬೀಳಬಾರದಾಗಿದ್ದರೆ ಬುದ್ಧಿಯ ಕಾಳಿಕೆಯು ಕಳೆಯಬೇಕು; ಬುದ್ಧಿಯ ಬಡತನವನ್ನು ಓಡಿಸಬೇಕು. ಬುದ್ಧಿಯೆಂಬ ಬತ್ತಿಗೆ ಜ್ಯೋತಿಯನಂಟಸಬೇಕು.

ಅವಿದ್ಯೆ ಅನಾದಿ. ಅದು ಆತ್ಮಶಕ್ತಿಯನ್ನು ಆಶ್ರಯಿಸಿ ಬಂದಿದೆ. ದ್ವಂದ್ವ ಭಾವದಲ್ಲಿ ಆತ್ಮನನ್ನು ಅದು ದೂಡುತ್ತದೆ: ಕಲಂಕ, ಕಂಟಕಾದಿಗಳನ್ನು ತಂದೊಡ್ಡುತ್ತದೆ. 'ಉಂಟೆನಿಸದು, ಇಲ್ಲೆನಿಸದು: ಉಂಟಿಲ್ಲೆನಿಸದು' ಎಂದು ಅವಿದ್ಯೆಯ ಗುಣಸ್ವಭಾವವನ್ನು ನಿಜಗುಣರು ನಿರೂಪಿಸಿದ್ದಾರೆ. ಕಾರಣ ಅವಿದ್ಯೆ ಯನ್ನು ದೂರೀಕರಿಸಬೇಕು.

ಅವಿದ್ಯಾಕ್ಲೇಶವಿರುವಲ್ಲಿ ಅದ್ವಯ ಮಹೇಶನ ಮಹಾ ಸುಖವಿರದು. 'ವಿದ್ಯಯಾಮೃತಮಶ್ನುತೇ' ವಿದ್ಯೆಯೆ ಅಮೃತ, ಅವಿದ್ಯೆಯೇ ವಿಷ. ಬುದ್ಧಿಯ ಬಡತನವನ್ನು ನೀಗಿಸಿ ಶ್ರೀಮಂತಿಕೆಯನ್ನು ನೀಡುತ್ತದೆ ಆ ಪರಾವಿದ್ಯೆ, ಬಾಳಿನ ಮೌಲ್ಯವನ್ನು ಹೆಚ್ಚಿಸುತ್ತದೆ. ಆ ಪರಾತ್ಪರ ವಿದ್ಯೆ ತನ್ನಿರವಿಗೆ ತುಂಬು ಮೆರಗನು ತಂದು ತುಂಬುತ್ತದೆ. ಬುದ್ಧಿಭಾವಗಳೆರಡು ವಿಕಾಸವಾಗುತ್ತವೆ; ಪ್ರಕಾಶಗೊಳ್ಳುತ್ತವೆ. ಭಕ್ತನಾಗಿ ಸತ್ತತ್ವವನ್ನು ಸಂಪಾದಿಸುವುದು ಎಷ್ಟು ಅವಶ್ಯಕವೋ ಮಾಹೇಶ್ವರನಾಗಿ ಚಿತ್ತತ್ವವನ್ನು ಸಂಪಾದಿಸುವುದು ಅಷ್ಟೆ ಆವಶ್ಯಕ. ಚಿತ್ತತ್ವ ಚಿಮ್ಮದೆ ಹೊಮ್ಮದೆ ಸ್ಮಿತತತ್ವ ಬಾರದು: ಅಸ್ಮಿತತತ್ವವಳಿಯದು. ರಾಗದ್ವೇಷಾಭಿನಿವೇಶಗಳು ಶಾಂತವಾಗವು. ಕ್ಲೇಶಪಂಚಕ ನಿರಸ್ತವಾಗದೆ ಶಾಶ್ವತಾನಂದ ಸಂಪ್ರಾಪ್ತವಾಗದು. ಇದಾಗದೆ ಮಾಹೇಶ್ವರತ್ವ ಪೂರ್ಣವಾಗದು. ಇದು ಪೂರ್ಣವಾಗವೆ, "ಒಂದು ದುಃಖದೊಳು ತಾನೊಂದದೆ ಪರಿಪೂರ್ಣಾ– ನಂದರೂಪಿಂದೆ ಸಂತತಮಿರ್ಪ" ಭಾಗ್ಯ ಕೈಗೂಡಿ ಬಾರದು. ತಾನೇ ಸಚ್ಚಿದಾನಂದಗಳ ದಾರಿದ್ರ್ಯದಲ್ಲಿರುವಾಗ ಸಾಮಾಜಿಕರಿಗೆ ಅನುಗ್ರಹಿಸುವ ಶ್ರೀಮಂತಿಕೆ ಮಾಹೇಶ್ವರನಿಗೆ ನಿಜಕ್ಕೂ ಬಾರದು. 'ಆನು ಒಬ್ಬನು ಸುಡುವರೈವರು.' ಹೀಗಿರುವಾಗ ಬೇರೆಯವರನ್ನು ಆರಯ್ವುದು ಹೇಗೆ ?

ಮೂಲಾವಿದ್ಯೆ, ತೂಲಾವಿದ್ಯೆ ಎಂದು ಎರಡು ಬಗೆ. ಚೈತನ್ಯವನ್ನು ಆದರಿಸಿರುವುದು ಮೂಲಾವಿದ್ಯೆ. ವಿಷಯೋಪಾಧಿಚೈತನ್ಯವನ್ನು ಆವರಿಸಿರುವುದು ತೂಲಾವಿದ್ಯೆ. ಇವೆರಡರಲ್ಲಿ ಮೂಲಾವಿದ್ಯೆಯು ಕಾರ್ಯ–ಕಾರಣಭೇದದಿಂದ ದ್ವಿವಿಧವಾಗಿದೆ. ಅನ್ಯವಿಷಯಕವಾದ ಅವಿದ್ಯೆ ಕಾರ್ಯಾವಿದ್ಯೆ, ಅಂತಃಕರಣದಲ್ಲಿರುವ ಅವಿದ್ಯೆ ಕಾರಣಾವಿದ್ಯೆಯೆಂದು ವೇದಾಂತ ಪ್ರಕ್ರಿಯೆಯಾಗಿದೆ. ತಮ, ಮಾಯೆ, ಮೋಹ, ಅಜ್ಞಾನ, ಅನೃತ ಇವು ಅವಿದ್ಯಾ ಪಂಚಕಗಳು, ಇವೆಲ್ಲವನ್ನು ಅಲ್ಲಗಳೆಯಬೇಕು ಆಗ ವಿದ್ಯೆ ಆರ್ಜನವಾಗುತ್ತದೆ.

ಪರಿಭವದ ಬಾಧೆ ಅಪಾರ. ಹುಟ್ಟು–ಸಾವು, ಹಸಿವು-ತೃಷೆ, ಶೋಕ-ಮೋಹ ಇವು ತ್ರಿವಿಧತನುಗಳಲ್ಲಿರುವ ತೊಳಲಿಕೆಗಳು. ಈ ತೊಳಲಿಕೆಗಳ ತೊಡಕಿಗೆ ಮಾಹೇಶ್ವರನು ಬೀಳಬಾರದು. ಬೀಳದಿರುವುದು ಸುಲಭವಲ್ಲ. ಭವ ಬಾಧೆಗಳು ಬೆನ್ನುಬಿದ್ದಿವೆ. ಪ್ರಕೃತಿನಿಷ್ಠವಾಗಿವೆ. ಇವನ್ನು ಗೆಲ್ಲಬೇಕಾದರೆ

ಸಂಯಮಶೀಲನಾಗದೆ ಸಾಧ್ಯವಿಲ್ಲ. ಮಮಕಾರ ಅಹಂಕಾರಗಳನ್ನು ವರ್ಜಿಸದೆ ಕ್ಲೇಶಕ್ಷಯವಾಗುವುದಿಲ್ಲ. ಬಾಳಿನ ಸಾವು-ನೋವುಗಳಿಂದ ಈ ಜೀವನು ಹೊಲಬುಗೆಡವನು ; ಒಳಿತದ ನೆಲೆದಪ್ಪುವನು. ಪಶುವಿನಂತೆ ಶಿಶುವಿನಂತೆ ವರ್ತನೆಯುಂಟಾಗುತ್ತದೆ, ಕೊರತೆಗಳಿಂದ ಕಂಗೆಟ್ಟು ಮುಂಗೆಟ್ಟಿರುತ್ತಾನೆ. ಮತಿಮಂದನಾಗಿ ಗತಿಗಾಣದಿರುತ್ತಾನೆ. ಸತ್ಕ್ರಿಯೆ ಸುಜ್ಞಾನಗಳ ಬೆಳೆಗೆ ಬದಲಾಗಿ ಕಸವೇ ಬಾಳನ್ನೆಲ್ಲಾ ಬಳಸಿರುತ್ತದೆ; ಬೆಳೆದು ನಿಂತಿರುತ್ತದೆ. ತನು ಬೆಂದಿರುತ್ತದೆ. ಮನ ನೊಂದಿರುತ್ತದೆ. ಸಂದೇಹಾದಿಗಳಿಂದ ತುಂಬಿರುತ್ತದೆ. ಬಿಡುವಿಲ್ಲದೆ ಉದರದ ಚಿಂತೆಯಲ್ಲಿಯೇ ಇರುವುದಲ್ಲದೆ ಹದುಳತೆಯ ಸುಳಿವಿರುವುದಿಲ್ಲ. ಅಡಿಗಡಿಗೂ ತಪ್ಪು, ನುಡಿನುಡಿಗೂ ತಪ್ಪು. ಒಮ್ಮೊಮ್ಮೆ ನುಡಿಯೇ ನಂಜಾಗಿ ಕೊಲ್ಲುವುದು. ನಡೆಯೆ ನಿತ್ತರಿಸಲಾರದ ಆಪತ್ತಾಗಿ ಆತುಕೊಳ್ಳುವುದು. ಆಧಿಭೌತಿಕಾದಿ ದುಃಖಗಳಿಗೆ ತುದಿಮೊದಲಿಲ್ಲ. ಈತಿಬಾಧೆ ಅನೀತಿಬಾಧೆ ಅಷ್ಟಿಷ್ಟಲ್ಲ. ಭವದ ಬಾಧೆಗಳನ್ನು ಕರ್ಮಕ್ಲೇಶಗಳನ್ನು ಹೇಳಿ ತೀರಿಸಲು ಸಾಧ್ಯವಿಲ್ಲ, ಆಧಿವ್ಯಾಧಿಗಳಿಗೆ ಅಳತೆಯಿಲ್ಲ.

ನಿರಸ್ತಕ್ಲೇಶನಾದ ಮಾಹೇಶ್ವರನು ಇವೆಲ್ಲವುಗಳ ವಿಕಾರಕ್ಕೊಳಗಾಗನು. ಯಾವ ನೋವಿನ ಬೇಗುದಿ ಮಾಹೇಶನಿಗಿಲ್ಲ. ಆತನ ಚಿತ್ತಬುದ್ಧಿಗಳು ಅವುಗಳಿಂದ ಕಲಕುವುದಿಲ್ಲ. ಪ್ರಕೃತಿವಿದ್ಯೆಗಳಿಂದ ಅವನು ಪೀಡಿತನಾಗುವುದಿಲ್ಲ. "ಕ್ಲೇಶಕರ್ಮವಿಪಾಕಾಶಯ್ಯೆರಪರಾಮೃಷ್ಟಃ ಪುರುಷವಿಶೇಷ ಈಶ್ವರಃ" ಅವಿದ್ಯಾದಿಕ್ಲೇಶಗಳಿಂದ ಜಾತ್ಯಾಯುರ್ಭೋಗಕರ್ಮಗಳಿಂದ ವಿಷಯವಾಸನೆಗಳಿಂದ ಕೂಡದಿರುವವನೇ ಪುರುಷಶ್ರೇಷ್ಠನಾದ ಪಾಲನಶೀಲನಾದ ಈಶ್ವರನೆಂದು ಪತಂಜಲಿಯು ತನ್ನ ಯೋಗಸೂತ್ರದಲ್ಲಿ ಹೇಳಿದ್ದಾನೆ.

ಅಲ್ಲದ್ದನ್ನು ಅಹುದೆಂದು ಭಾವಿಸುವುದೆ ಅವಿದ್ಯೆ, ಅನಿತ್ಯವನ್ನು ನಿತ್ಯವೆಂದು ಅಶುಚಿಯನ್ನು ಶುಚಿಯೆಂದು ದುಃಖವನ್ನು ಸುಖವೆಂದು ತಿಳಿಯುವುದೆ ಅವಿದ್ಯೆಯೆನಿಸುತ್ತದೆ, ಅವಿದ್ಯೆಯ ಕಾರ್ಯಗಳೇ ಅಸ್ಮಿತಾದಿಗಳು. ಕರ್ತೃತ್ವಾಭಿಮಾನವೆ ಅಸ್ಮಿತೆ ವಿಷಯಸುಖಗಳಲ್ಲಿ ಇರುವ ಪ್ರೀತಿಯೆ ರಾಗ. ನಿಂದಾತ್ಮಕ ಕಷಾಯಮನೋಭಾವವೆ ದ್ವೇಷ. ಈ ಶರೀರವು ಸ್ಥಿರವಾಗಿರಬೇಕೆಂದು ಬಗೆದು ಇದರ ಮೇಲೆ ಅವಾಸ್ತವ ಅಭಿಮಾನವನ್ನು ತೋರುವುದೇ ಅಭಿನಿವೇಶ. ಇವೆಲ್ಲವು

ಹ್ಯೇಯವಾದವು. ಇವನ್ನು ಬಿಟ್ಟಬಳಿಕ ಮಾಯಾಕಾರ್ಯಗಳಾದ ಮದಮತ್ಸರ ಲೋಭಮೋಹ ಕಾಮಕ್ರೋಧಗಳನ್ನು ಬಿಡಬೇಕೆಂದು ಬಿಟ್ಟಿರುವಾತನೆ ಮಾಹೇಶ್ವರನೆಂದು ನಿರೂಪಿಸಲಾಗಿದೆ.

ಮದದ ಸೋಂಕು ಮಾನವತೆಗೆ ಮುಳುವು; ಪರಾಪ್ರಕೃತಿ ಅಥವಾ ಶಕ್ತಿ ವಂಚನೆ. ಮದದ ಅಮಲಿನಲ್ಲಿ, ಮದದ ಸೊಕ್ಕಿನಲ್ಲಿ, ಮದದ ಉದ್ರೇಕದಲ್ಲಿ ವಿನಯ-ವಿವೇಕ-ಪಾತ್ರತೆ ಎಲ್ಲವೂ ನುಚ್ಚು ನೂರಾಗಿ ಕೊಚ್ಚಿಹೋಗುತ್ತವೆ. ಮದಗಳಲ್ಲಿ ಸ್ಥೂಲ ಸೂಕ್ಷ್ಮವೆಂದು ಎರಡು ಬಗೆ, ಕುಲಮದ, ಯೌವನಮದ, ಸ್ತ್ರೀಮದ, ಅನ್ನಮದ, ಧನಮದ, ವಿದ್ಯಾಮದ ಉದ್ಯಮಮದ, ರೂಪಮದಗಳು ಸ್ಥೂಲಗಳು. ಪೂಜಾಮದ, ತಪೋಮದ, ಯೋಗಮದ, ಸಿದ್ಧಿಮದಗಳು ಸೂಕ್ಷ್ಮಗಳು ಇವೆರಡೂ ಕೇಡಿನವು. ಈ ಮದಗಳಿದ್ದರೆ ಆಪರಾಶಕ್ತಿಯನ್ನು ಪ್ರವರ್ಧಿಸಲು ಸಾಧ್ಯವಿಲ್ಲ. ಮದ ಅಹಂಕಾರದ ಮತ್ತೊಂದು ರೂಪ. ಅಹಂಕಾರ ಚೈತನ್ಯ ನಿಷ್ಠವಾದರೆ ಮದ ಅ ಪರಾಪ್ರಕೃತಿನಿಷ್ಠವಾಗಿ ಪ್ರಾಮುಖ್ಯವಾಗಿ ಇರುತ್ತದೆ. ಕಾರಣ ಮಾಹೇಶ್ವರನು ಯಾವ ಮದಕ್ಕೂ ಮನಸೋತಿರಬಾರದು.

ಮದ ಅದೊಂದು ಹೊರಲಾರದ ಹೊರೆ. ಹೊಲಬುಗೆಡುವ ಹವಣ. ರಜಸ್ತಮೋಗುಣಗಳ ತಾಣ. ಸ್ವಪ್ರತಿಷ್ಠೆಯ ಗ್ರಂಥಿ. ಅದನ್ನು ಬಿಚ್ಚುವುದು ಕಷ್ಟ, ಅದರಿಂದ ಪ್ರಗತಿಯ ನಷ್ಟ. ಮದದಿಂದ ಮುಂದುವರಿದವರಿಲ್ಲ. ಉನ್ಮತ್ತವೃತ್ತಿಗಾಶ್ರಯವಾಗಿ ವ್ಯಕ್ತಿತ್ವವನ್ನೇ ಹಾಳುಮಾಡುತ್ತದೆ. ಸಾಮಾನ್ಯರನ್ನು ನಿರ್ಲಕ್ಷಿಸ ಹಚ್ಚುತ್ತದೆ. ಇನ್ನೊಬ್ಬರ ಸ್ಥಾನಮಾನಗಳನ್ನು ಯೋಗ್ಯತೆಯನ್ನು ಗುರ್ತಿಸದಂತೆ ಮಾಡಿಸುತ್ತದೆ. ಗುರ್ತಿಸಿದರೂ ಗೌರವಿಸಿದಂತೆ ಮಾಡಿಸುತ್ತದೆ, ಸಮಭಾವದಿಂದ ದೂರ ದೂರ ಇರಿಸುತ್ತದೆ. ತನಗಿರುವುದೇ ಎಲ್ಲಕ್ಕೂ ಎಲ್ಲರಿಗೂ ಹೆಚ್ಚೆಂದು ಭಾವಿಸ ಹಚ್ಚುತ್ತದೆ. ಅವನ ಬುದ್ಧಿ ಭಾವ ದೃಷ್ಟಿ ವಾಣಿ ಯಾವೂ ಅವನ ವಶದಲ್ಲಿರುವುದಿಲ್ಲ. ಅವುಗಳಲ್ಲಿ ವ್ಯವಸ್ಥಿತ ಕ್ರಮವಿರುವುದಿಲ್ಲ. ಅವುಗಳ ಕಾರ್ಯದಲ್ಲಿ ಇತಿಮಿತಿಗಳಿರುವುದಿಲ್ಲ. ಮದಾವಿಷ್ಟನ ಜೀವನ ಅದೊಂದು ಅರ್ಥವಿಲ್ಲದ ಜೀವನ, ಯಂತ್ರ ಜೀವನಕ್ಕಿಂತ ಅತಂತ್ರಜೀವನ. ಅದೊಂದು ಕಡೆಗೀಲಿಲ್ಲದ ಬಂಡಿಯ ಬಾಳು. ಸರಳತೆಯ ಸೋಂಕಿರುವುದಿಲ್ಲ;ಸೊಗಸಿರುವುದಿಲ್ಲ. ಬಾಳೆಲ್ಲ ಬಿಗುಮಾನ; ದುಮ್ಮಾನ. "ಅರ್ಥಮದ, ಅಹಂಕಾರಮದ,

ಕುಲಮದ ಬಿಡದನ್ನಕ್ಕರ ಸಮಯಾಚಾರ ಸಮಯಭಕ್ತಿ ಇನ್ನಾರಿಗೂ ಅಳವಡದು ನೋಡಾ! ಮಾತಿನ ಮಿಂಚಿನ ಢಾಳಕರಿಗೆ ಸಮಯಭಕ್ತಿ ಇನ್ನೆಲ್ಲಿಯದೋ ಕೂಡಲ ಚೆನ್ನಸಂಗಮದೇವಾ ?" ತಮೋಗುಣದಿಂದ ತುಂಬಿದ ಮದ ಸಮಯಾಚಾರಕ್ಕೆ ಸಮಯಭಕ್ತಿಗೆ ಸಮುಖತೆಯನ್ನುಂಟುಮಾಡದು, ಕಾರಣ ಆರ್ಥಿಕ, ಅಹಂಕಾರಿಕ ಜಾತೀಯ ಮದಗಳಿಗೆ ಸೋಂಕಬಾರದೆನ್ನುತ್ತಾರೆ ಚೆನ್ನಬಸವಣ್ಣನವರು. ಮತ್ತು 'ಅಷ್ಟಮದವೆಲ್ಲ ನಷ್ಟವಾದಲ್ಲದೆ ಶೀಲವಿಲ್ಲ.......ಅಷ್ಟಮದಗಳ ಕೊಂದಾತನೆ ಶೀಲವಂತ.' ಎಂದಿದಾರೆ- ಉನ್ಮತ್ತತೆ ಉದ್ರಿಕ್ತತೆ ಮದದ ಗುಣ, ಅದು ಗಾಢವಾದಾಗ ಶೀಲ ಸದ್ವೃತ್ತಿಗಳು ಕೆಡುವವಲ್ಲದೆ ಮತಿಯೂ ಮಂದವಾಗುತ್ತದೆ, ಮದದಿಂದ ಸದಾಚಾರ-ಸದ್ವಿಚಾರಗಳು ನಷ್ಟವಾಗುತ್ತವೆ. ಆದ್ದರಿಂದ 'ಅಸ್ಪೃಷ್ಟಮದಸಂಬಂಧ'ನಾಗಬೇಕೆಂದು ಜಗದ್ಗುರು ರೇಣುಕರು ಬೋಧಿಸಿದ್ದಾರೆ. ಕಾಮಿ ಮಜ್ಜನಕ್ಕೆ ನೀಡಿದಡೆ ರಕ್ತದ ಧಾರೆ. ಕ್ರೋಧಿ ಪುಷ್ಪವನರ್ಪಿಸಿದಡೆ ಕತ್ತಿನ ಮೊನೆ. ಲೋಭಿ ರುದ್ರಾಕ್ಷಿಯ ಧರಿಸಿದಡೆ ಗಿರುಕೆ. ಮೋಹಿ ವಿಭೂತಿಯ ಧರಿಸಿದಡೆ ಸುಣ್ಣದಗರ್ತ. ಮದಿ ಲಿಂಗವ ಕಟ್ಟಿದಡೆ ಎತ್ತುಗಲ್ಲು. ಮತ್ಸರಿ ಪಾದೋದಕ ಪ್ರಸಾದವ ಕೊಂಡಡೆ ಕಾಳಕೂಟ ವಿಷ. ಕೂಡಲ ಚೆನ್ನಸಂಗಮದೇವರಲ್ಲಿ ಮದ-ಮತ್ಸರ ಬಿಟ್ಟವರು ಅಪೂರ್ವ.'ಚೆನ್ನಬಸವಣ್ಣನವರ ಈ ವಚನ ಅದರಲ್ಲಿಯೂ ಕೊನೆಯ ಮಾತು ಗಮನಾರ್ಹ. ಏನನ್ನಾದರೂ ಬಿಡಬಹುದು. ಮದ-ಮತ್ಸರಗಳನ್ನು ಬಿಡುವುದು ತುಂಬಾ ಕಷ್ಟ. ಆದ್ದರಿಂದ ಮದವನ್ನು ಮೊದಲು ಬಿಡಬೇಕೆಂದು ಹೇಳಿ ಮುಂದೆ ಮತ್ಸರವನ್ನೂ ಬಿಡಲು ಜಗದ್ಗುರುವರ್ಯರು ಹೇಳಿದ್ದಾರೆ. ಏಕೆಂದರೆ ಕಾಮಾದಿಗಳಿಂದ ಕೇಡಾದಂತೆ ಮಾತ್ಸರ್ಯದಿಂದಲೂ ಮಾನವಜೀವನಕ್ಕೆ ಕೇಡೊದಗುತ್ತದೆ. ನಿದರ್ಶನಕ್ಕಾಗಿ ಪ್ರಭುದೇವರ ಈ ನುಡಿಯನ್ನು ನೋಡಬಹುದು, "ಕಾಮವೆಂಬ ತಸ್ಕರನು ಹೊಕ್ಕು ನಿಜಜ್ಞಾನವೆಂಬ ರತ್ನವನಪಹರಿಸಿ ಕೊಂಡೊಯ್ದನು ದೇವಾ! ಕ್ರೋಧವೆಂಬ ವ್ಯಾಘ್ರನು ಹೊಕ್ಕು ನಿಜಸ್ವರೂಪವೆಂಬ ಕಾಮಧೇನುವ ಕಡಿದು ಕೆಡಹಿತ್ತು ದೇವಾ ! ಲೋಭವೆಂಬ ಕಪಿ ಹೊಕ್ಕು ಶಿವಸತ್ಕ್ರಿಯೆಯೆಂಬ ಹಣ್ಣನುಂಗಿತ್ತು ದೇವಾ ! ಮೋಹವೆಂಬ ಮಳೆಹೊಯ್ದು ಶಿವಾಚಾರವೆಂಬ ಅರಿವು ತೇಲಿ ಹೋಯಿತ್ತು ದೇವಾ ! ಮದವೆಂಬ ಆನೆ ಹೊಕ್ಕು ನಿಶ್ಚಿಂತ ನಿರ್ಮಲತ ವೆಂಬ

ತಾವರೆಯ ಕೊಳನ ಕಲವಲವ ಮಾಡಿತ್ತು ದೇವಾ! ಮತ್ಸರವೆಂಬ ಕಡಲ ಕಾಲಾನಲ ಹೊಕ್ಕು ಶಾಂತಿಯೆಂಬ ಸಮುದ್ರವು ಬತ್ತಿಹೋಯಿತ್ತು ದೇವಾ! ಮನೋವಿಕಾರವೆಂಬ ಚಂಡಮಾರುತ ಹೊಕ್ಕು ಸತ್ಯ ಶೌಚ ಕ್ಷಮೆ ದಮೆ ದಯೆ ಶಾಂತಿ ದಯಾ ದಾಕ್ಷಿಣ್ಯ ಬ್ರಹ್ಮಚರ್ಯ ಸತ್ಕೃತ್ಯವೆಂಬ ದೀಪಂಗಳು ಮುಗ್ಗಿ ಹೋದುವು ದೇವಾ! ರಾಗದ್ವೇಷವೆಂಬ ಜೇನನೊಣವು ಕೂಡಿಕೊಂಡು, ಎನ್ನ ಜೀವಹಂಸನ ಬಾಧೆಗೊಳಿಸಲು ತಾಳಲಾಪೆನೆ ?...." ಶಾಂತಿಯನ್ನೆ ಹಾಳು ಮಾಡುವ, ಮನೋವಿಕಾರಕ್ಕೆ ರಾಗ ದ್ವೇಷಕ್ಕೆ ಕಾರಣವಾಗುವ ಮತ್ಸರವನ್ನು ಕುರಿತು ಹೀಗೆ ಹೇಳಿದ್ದಾರೆ, 'ಮಾತ್ಸರ್ಯಾವೇಶವರ್ಜಿತಃ'

ಆಯ್ದನೆಯದಾಗಿ ಮಾಹೇಶ್ವರನು ಮಾತ್ಸರ್ಯದ ಆವೇಶದಿಂದ ಕೂಡಿದವನಾಗಿರಬಾರದು. ಮತ್ತೊಬ್ಬರನ್ನು ಕಂಡು ಮತ್ಸರಿಸುವುದು ಮಾನವೀಯತೆಗೆ ತಕ್ಕದ್ದಲ್ಲ. ಮತ್ಸರ ಅದೊಂದು ಅವಗುಣ; ರಜೋಗುಣ. ಮಾನವತೆಯನ್ನು ಸುಡುವ ಹೊಡೆಗಿಚ್ಚು.

ವಿವೇಕ ಮುಖದಲ್ಲಿ ಹುಟ್ಟತಕ್ಕ ಅವಗುಣ ಅಸೂಯೆ. ಇದು ಸ್ವಾರ್ಥ ಭಾವದಲ್ಲಿಯೂ ತೋರುತ್ತದೆ. ಮತ್ತೊಬ್ಬರು ಮುಂದುವರಿವರೆಂದು ತಿಳಿದರೆ, ಮತ್ತೊಬ್ಬರಿಗೆ ತನ್ನ ಮತ್ತು ತನಗಾಗುವ ಸುಖ ಸಂಪತ್ತುಗಳು ಕೀರ್ತಿಗೌರವಗಳು ಸೇರುವವೆಂದು ಗೊತ್ತಾದರೆ ಆಗ ಅಂತರಂಗದಲ್ಲಿ ಆವಿರ್ಭವಿಸುವ ದುರ್ಗುಣ ಮತ್ಸರ. ಅದು ಬೆಳೆದು ಬಹಿರಂಗಕ್ಕೂ ಬಂದು ಶಾಂತಿ ಸೌಜನ್ಯಗಳನ್ನು ಸುಟ್ಟುಹಾಕುತ್ತದೆ. ಮತ್ಸರಕ್ಕೆ ಕನ್ನಡದಲ್ಲಿ 'ಹೊಟ್ಟೆಯುರಿ' ಅಥವಾ 'ಹೊಟ್ಟೆಕಿಚ್ಚು' ಎಂದು ಹೇಳುತ್ತಾರೆ. ಈ ಹೆಸರು ಹೆಚ್ಚು ಸಾರ್ಥಕವಾಗಿದೆ. ಹೆಸರಿಗೆ ತಕ್ಕಂತೆ ಮೊದಲು ಅದಕ್ಕೆ ತುತ್ತಾದವರ ಹೊಟ್ಟೆಯನ್ನು ಸುಟ್ಟು ಹಾಕುತ್ತದೆ. ಅಂದರೆ ತನ್ನ ಶಾಂತಿಯನ್ನು ವಿವೇಚನ ಶಕ್ತಿಯನ್ನು ಕಳೆಯುತ್ತದೆ. ತಾಳ್ಮೆಯನ್ನು ತೊಡೆಯುತ್ತದೆ. ಸಹನೆ ಸಹಕಾರಗಳು ದೂರಾಗುತ್ತವೆ, ಸಹ ಜೀವನಕ್ಕೆ ಕಲ್ಲುಬೀಳುತ್ತದೆ. ಬುದ್ಧಿ ಶಕ್ತಿ ಸ್ತಬ್ಧವಾಗುತ್ತದೆ. ಆದ್ದರಿಂದ ಇದು ದುರ್ಗುಣವಾಗಿದೆ; ದ್ವೇಷಮೂಲವಾಗಿದೆ. ಎಲ್ಲರಲ್ಲಿ ಏಕೀಭಾವವುಂಟಾಗಲು ಅಡ್ಡಿ ಆತಂಕವಾಗಿ ನಿಲ್ಲುತ್ತದೆ. ಮತ್ಸರ ಅರಿಷಡ್ವರ್ಗದಲ್ಲಿ ಕೊನೆಯದಾದರೂ ಜೀವನದ ಹೋರಾಟದಲ್ಲಿ ಜಡಾವೇಶದಲ್ಲಿ ಮೊದಲಿನದಾಗಿ ಪರಿಣಮಿ

ಸುತ್ತದೆ. ಮತ್ಸರ ಮುಂದಾಗಿಯೇ ಎಲ್ಲ ಕಲಹಗಳು ಕೊನರುತ್ತವೆ. ವ್ಯಕ್ತಿ ವಿಷಯದಲ್ಲಿ ಕೌಟುಂಬಿಕದಲ್ಲಿ ಸಮಾಜದಲ್ಲಿ ಪ್ರಾಂತದಲ್ಲಿ ರಾಷ್ಟ್ರದಲ್ಲಿ ಒಡಕು–ಕೆಡಕು ಜಗಳಗಳು ಹುಟ್ಟಲು ಮತ್ಸರವೇ ಮೂಲ.

ಗುರು ಹಿರಿಯರನ್ನು ಕಂಡು ಮಲೆತು ಜರಿದಾಡುವಂತೆ ಮಾಡುವುದು ಮದವಾದರೆ ಸರಿಬರಿಯವರನ್ನು ಕಂಡು ಕರಿಯುವುದು ಅಸೂಯೆ ಪಡುವುದು ಉರಿಯುವುದು ಮತ್ಸರದ ಬೀಳ್ಗಲಸ. ತನ್ನವರಲ್ಲಿ ಭಿನ್ನಭಾವವನ್ನು ಅಸಹನೆಯನ್ನು ಹುಟ್ಟಿಸುತ್ತದೆ ಮತ್ಸರ. ಕಿಚ್ಚು ಪಕ್ಕದಲ್ಲಿರುವ ದ್ರವ್ಯವನ್ನು ಸುಡುವಂತೆ ಮತ್ಸರ ಅಕ್ಕಪಕ್ಕದವರನ್ನು ಸಹಿಸದಂತಿರುತ್ತದೆ: ಯಾವವಿಧದಲ್ಲಿಯೂ ಯಾರೂ ತನ್ನಂತೆ ಆಗಬಾರದೆಂಬ ಬುದ್ಧಿಯನ್ನು ಬೆಳಸಹಚ್ಚುತ್ತದೆ. ಮನಸ್ಸಿಗೆ ಕ್ಷೋಭೆಯನ್ನುಂಟುಮಾಡುತ್ತದೆ. ಧೀಮಂತಿಕೆಯಲ್ಲಿ ಶ್ರೀಮಂತಿಕೆಯಲ್ಲಿ ಒಡೆತನದಲ್ಲಿ ತನ್ನಂತೆ ಇನ್ನಾರು ಇರಬಾರದೆಂಬ ದುರ್ಬುದ್ಧಿಯನ್ನು ಹುಟ್ಟಿಸುತ್ತದೆ. ಮೃಗಗಳಂತೆ ಸೆಣಸಾಟಕ್ಕೆ ಹಚ್ಚುತ್ತದೆ. ಮಹದಾಕ್ಷಾಂಕ್ಷೆಯಿಂದ ಸರ್ವಸಮಭಾವದಿಂದ ದೂರ ದೂರ ಒಯ್ಯುತ್ತದೆ, ಸಮತ್ವದ ಹತೋಟಿಯನ್ನು ತಪ್ಪಿಸುತ್ತದೆ, ಪ್ರೇಮರಸವನ್ನು ಸುಟ್ಟುಹಾಕುತ್ತದೆ. ಅರ್ಥವಿಲ್ಲದ ಆ ಕರ್ತವ್ಯದಲ್ಲಿ ಆವೇಶವನ್ನು ಹುಟ್ಟಿಸುತ್ತದೆ: ಹೆಚ್ಚಿಸುತ್ತದೆ, ಕರುಣಸ್ಥಿತಿಯನ್ನು ಕಳೆದು ದಾರುಣಮತಿಯನ್ನು ಮುಂದುವರಿಸುತ್ತದೆ. ಶಾಂತಿಯನ್ನು ಬಿಡಿಸಿ ಅರ್ಥರಹಿತ ಕ್ರಾಂತಿಗೆ ಕಿಡಿಹಾಕಿ ಪ್ರಳಯಾಗ್ನಿಯನ್ನಾಗಿಸುತ್ತದೆ. ಶಿವಪಥವನ್ನು ಬಿಡಿಸಿ ಅವಪಥದಲ್ಲಿ ಗಮಿಸಲು ಉತ್ಸಾಹಿಸುತ್ತದೆ, ಇದು ಇರುವೆಡೆಯಲ್ಲಿ ಒಳ್ಳೆಯದಕ್ಕೆ ಎಷ್ಟೂ ಎಡೆಯಿರುವುದಿಲ್ಲ. ಅರ್ಥ ಅಪಾರ್ಥವಾಗುತ್ತದೆ. ಸಹಜ ಅಸಹಜವಾಗುತ್ತದೆ. ಸತ್ಯ ಅಸತ್ಯವಾಗುತ್ತದೆ, ಸುಖ ದುಃಖವಾಗುತ್ತದೆ. ಅಭಯ ಭಯವಾಗಿ ಪರಿಣಮಿಸುತ್ತದೆ. ಅಮೃತ ವಿಷವಾಗುತ್ತದೆ. ವಿಷಾದವನ್ನುಂಟು ಮಾಡುತ್ತದೆ.

ಒಟ್ಟಿನಲ್ಲಿ ಮತ್ಸರವು ಸಂಕೋಚ ಭಾವವನ್ನು ಸ್ವಾರ್ಥವನ್ನು ಸಮ್ಮೂಢತೆಯನ್ನು ಹುಟ್ಟಿಸುತ್ತದೆ. ಇವು ವಿಶ್ವಾದರ್ಶ ಜೀವಿಯಾಗಬೇಕೆನ್ನುವ ಮಾಹೇಶ್ವರನಿಗೆ ಮಹಾವಿರೋಧ ಗುಣಗಳು. ಈ ಅವಗುಣಗಳನ್ನು ಹುಟ್ಟಿಸುವ ಮಚ್ಚರವನ್ನು ನಿರಸನ ಮಾಡಬೇಕೆಂದು ಜಗದ್ಗುರು ರೇಣುಕರು ಉಪದೇಶಿಸಿದ್ದಾರೆ.

ಇಲ್ಲಿ ಸಮ್ಮೂಢತೆಯೆಂದರೆ ಬುದ್ಧಿವಿಕಲ್ಪ. ಇದು ಅತ್ಯಂತ ಅಪಾಯಕಾರಿ. ಇದರಿಂದ ನಿಜರೂಪವು ಮುಚ್ಚಲ್ಪಡುತ್ತದೆ. ದೋಷಾರೋಪಗಳೇ ದೃಷ್ಟಿ ಗೋಚರವಾಗುತ್ತವೆ. ಬುದ್ಧಿವಿಕಲ್ಪಕ್ಕೆ ಮತ್ಸರ ಬೀಜದಂತಿದೆ, ಈ ಬೀಜದಿಂದ ಅಹಂಭಾವವೂ ಮೊಳೆಯುತ್ತದೆ. ಇವುಗಳಿಂದ ಸಹಜಸ್ವಭಾವ, ಸಹಜಸ್ನೇಹ ಕ್ಷೀಣಿಸುತ್ತವೆ, ದೃಷ್ಟಿಭೇದ, ಭಾವಭೇದಗಳು ಬೆಳೆಯುತ್ತವೆ. ಬುದ್ಧಿಯ ವಿವೇಚನಶಕ್ತಿ, ಚಿತ್ತದ ವಿಶ್ವಾಸಶಕ್ತಿ ಕ್ಷಯಿಸುತ್ತದೆ. ಮತ್ಸರ ಬುದ್ಧಿ ಮತ್ತೊಬ್ಬರನ್ನು ಕಂಡು ಸಮಾಧಾನ ಪಡುವುದು ಅಪರೂಪ. ಕಾರಣ ಬುದ್ಧಿಯೋಗವನ್ನು ಬಯಸುವ ಮಾಹೇಶ್ವರನು ಮತ್ಸರಕ್ಕೆ ಮನಸ್ಸನ್ನು ಎಂದಿಗೂ ಮಾಡಬಾರದು.

ಇನ್ನು ಕಾಮೋನ್ಮೇಷ, ಕ್ರೋಧವಿಪ್ಲವಗಳನ್ನು ಕಳೆಯಬೇಕೆಂದು ಕಾರುಣ್ಯಮೂರ್ತಿ ಜಗದ್ಗುರುವಿನ ಕಟ್ಟಪ್ಪಣೆ! ಕಾಮ-ಕ್ರೋಧಗಳೂ ರಜೋಗುಣದಿಂದ ಮೈದೋರುವವು. ಪ್ರಾಕೃತಿಕ ಕಾಮ, ಪ್ರಾಣದಲ್ಲಿ ಪ್ರಾಣಿಗಳಲ್ಲಿ ಕ್ರೋಧ ಉಚಿತವಾದುವುಗಳಲ್ಲ. ಕಂಡದ್ದನ್ನು ಬಯಸುವುದು ಕಣ್ಣರಿಯದೆ ಕೋಪಿಸುವುದು ಪ್ರಗತಿಸೂಚಕವಲ್ಲ. ಮೋಹಮುನಿಸುಗಳಿಂದ ಅರಿವು ಪಲ್ಲಟವಾಗುತ್ತದೆ. ಅಧರ್ಮ ಕಾಮದಿಂದ ಕಣ್ಣು ಮುಚ್ಚುತ್ತವೆ. 'ತನುವಿನ ಕೋಪ ತನ್ನ ಹಿರಿಯತನಕ್ಕೆ ಕೇಡು, ಮನದ ಕೋಪ ತನ್ನ ಅರುವಿಗೆ ಹಾನಿ' ಕಾಮವಡಗದು ಕ್ರೋಧ ತೊಲಗದು, ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕ ನೀನೆತ್ತ ಶಿವನೆತ್ತ ಹೋಗತ್ತ ಮರುಳೆ!' ಎಂದಿದಾರೆ ಬಸವಣ್ಣನವರು. ಧರ್ಮಕಾಮ, ತತ್ತ್ವಕಾಮ ವಿಹಿತವಾದವು. ಆದರೆ ಇದಿರುವುದು ಅಪರೂಪ. ಭಕ್ತಿರತಿ ಬೆಳೆದು ಬರುವುದು ಅಪರೂಪ. ಭೋಗೇಚ್ಛೆ ಬೆಳೆಯುವುದು ಪ್ರಕೃತಿ ಸಹಜ.

"....ಮುನಿಸ ತಾಳಿ ಎನ್ನ ಭಕ್ತಿ ಅರೆಯಾಯಿತ್ತು."

"ಕಾಮವೇಕೋ ಲಿಂಗ ಪ್ರೇಮಿಯೆನಿಸುವಂಗೆ ? ಕ್ರೋಧವೇಕೋ ಶರಣ ವೇದ್ಯನೆನಿಸುವಂಗೆ ? ಲೋಭವೇಕೋ ಭಕ್ತಿಲಾಭವ ಬಯಸುವಂಗೆ ? ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ? ಮದಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೋ? ಹದುಳಿಗರಾದವರಲ್ಲಿಪ್ಪ ನಮ್ಮ ಕೂಡಲ ಸಂಗಮದೇವ."

ಲಿಂಗಪ್ರೇಮಿಗೆ ವೈಷಯಿಕ ಭೋಗರೂಪಾದ ಕಾಮ ತ್ಯಾಜ್ಯ. ಶಿವಭಾವಿಗಳಲ್ಲಿ ಶರಣುಹೋಗುವವನಿಗೆ ಕೋಪವಿರಬಾರದು, ಇದ್ದರೆ ಶರಣವೇದ್ಯತ್ವ ಬಾರದು.

...."ಕಾಮವೆಂಬುದೊಂದು ಪಾಪಿ, ಮದವೆಂಬುದೊಂದು ದ್ರೋಹಿ. ಮತ್ಸರವೆಂಬುದೊಂದು ಹೊಲೆಯ, ಕ್ರೋಧವೆಂಬುದೊಂದು ಕೈಸೂನೆಗಾರ. ಮನೋವ್ಯಾಪಾರಂಗಳು ಭವಿಗಳು. ಇಂತಿವನರಿದು ಮರೆದು. ಹರವಸಂಬೋಗಿ ಹೊಯಿ ಹೊಡೆದಂತಿರ್ದಡೆ ಕೂಡಲ ಚೆನ್ನ ಸಂಗಯ್ಯನಲ್ಲಿ ಅವರ ಶೀಲವಂತ ರೆಂಬೆ ;"

"ಹೊರಗಣ ಭವಿಯ ಕಳೆದೆವೆಂಬರು, ಒಳಗಣ ಭವಿಯ ಕಳೆಯಲರಿಯರು. ಕಾಮವೆಂಬುದೊಂದು ಭವಿ, ಕ್ರೋಧವೆಂಬುದೊಂದು ಭವಿ. ಲೋಭವೆಂಬುದೊಂದು ಭವಿ, ಮೋಹವೆಂಬುದೊಂದು ಭವಿ. ಮದವೆಂಬುದೊಂದು ಭವಿ, ಮತ್ಸರವೆಂಬುದೊಂದು ಭವಿ. ಆಸೆಯೆಂಬುದೊಂದು ಭವಿ, ಆಮಿಷವೆಂಬುದೊಂದು ಭವಿ. ಹೊನ್ನೆಂಬುದೊಂದು ಭವಿ. ಮಣ್ಣೆಂಬುದೊಂದು ಭವಿ, ಇಂತೀ ಭವಿಯ ಕಳೆದುಳಿದು ನಿಂದ, ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ."

"ಅರಿಷಡ್ವರ್ಗಕೆ ರಾಗವೆ ಬಿತ್ತು । ದುರಿತಂಗಳಿಗಿವು ತಾವೇ ಗೊತ್ತು । ಎಂದು ಪರಮಾರ್ಥ ಗೀತೆಯಲ್ಲಿ ನಿಜಗುಣರು ಹೇಳಿದ್ದಾರೆ, ಅಲ್ಲದೆ, "ಕಾಮಂ ಕ್ರೋಧಂ ಮೋಹಾದಿಗಳು । ತಾಮಸವವು ಹೃದಯ ಗ್ರಂಥಿಗಳು । ಅಗಳು ಮವರಿಂದತ್ತಿತ್ತೊಲಿವ । ಆ ಗಂಟಿನ ಭವಬಂಧನ ಮನವ ॥ ಪುಟ್ಟುವ ಸುವಿವೇಕದ ಮನದಿಂದ । ನೆಟ್ಟನೆ ಕಡಿವುದು ಮಸೆದುಳಿಯಿಂದ ॥ ಜಡಿದಿಹ ಸಂಕಲೆಯಂ ಕಡಿವಂತೆ। ಕಡಿದೊಡೆ ನೀನಹೆ ಮುನ್ನಿರ್ದಂತೆ ॥೬॥" ಎಂಬುದಾಗಿಯೂ ಹೇಳಿದ್ದಾರೆ. ಇದಲ್ಲದೆ "ಕಾಮ ಕ್ರೋಧ ಲೋಭ ವ್ಯಾಮೋಹ ಭಯವೆಂಬ। ನಾಮದಿ ಪರಿವಿಡಿದೊಪ್ಪುವ। ವ್ಯೋಮದ ಮೂರ್ತದಂಶಿಕವೈದು ಗುಣವಿವು । ಕಾಮಿನಿ ತಿಳಿ ಚಿತ್ತಿಗಿಲ್ಲೆಂದು ॥" ಎಂದು ಪರಮಾನುಭವ ಬೋಧೆ ಸಂಧಿ ಎರಡರಲ್ಲಿ ತಿಳಿಸಿದ್ದಾರೆ.

ಕಾಮಕ್ರೋಧಾದಿಗಳು ರಜಸ್ತಮೋಗುಣಗಳಾಗಿರುವಾಗ ಬೇಡ ; ಇವೇ ಸತ್ವಗುಣಗಳಾದರೆ ಏಕೆ ಬೇಡ ? ಬೇಡ ಬೇಕೆಂಬುದಕ್ಕೆ ಚನ್ನಬಸವಣ್ಣನವರ ಈ

ವಚನವನ್ನು ಕೇಳಿ: "ಶಿವಭಕ್ತಿಯುಳ್ಳವರಿಗೆ ಕಾಮ ಬೇಡ, ಕ್ರೋಧ ಬೇಡ; ಲೋಭ ಬೇಡ. ಮೋಹ ಬೇಡ; ಮದ ಬೇಡ, ಮಾತ್ಸರ ಬೇಡ. ಶಿವಭಕ್ತಿಯುಳ್ಳವಗೆ ಕಾಮ ಬೇಕು, ಕ್ರೋಧ ಬೇಕು; ಲೋಭ ಬೇಕು, ಮೋಹ ಬೇಕು; ಮದ ಬೇಕು, ಮತ್ಸರ ಬೇಕು, ಬೇಕೆಂಬುದಕ್ಕಾವ ಗುಣ ? ಬೇಡೆಂಬುದಕ್ಕಾವ ಗುಣ? ಬೇಕಂಬುದಕ್ಕೆ ಕಾಮ ಬೇಕು ಲಿಂಗದಲ್ಲಿ; ಕ್ರೋಧ ಬೇಕು ಕರಣಂಗಳಲ್ಲಿ; ಲೋಭ ಬೇಕು ಪಾದೋದಕ ಪ್ರಸಾದದಲ್ಲಿ; ಮೋಹಬೇಕು ಗುರುಲಿಂಗ ಜಂಗಮದಲ್ಲಿ; ಮದಬೇಕು ಶಿವಾಚಾರದಿಂದ ಘನವಿಲ್ಲೆಂಬಲ್ಲಿ; ಮತ್ಸರಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ—ಇಂತೀ ಷಡ್ಗುಣವಿರಬೇಕು, ಬೇಡೆಂಬುದಕ್ಕೆ : ಕಾಮ ಬೇಡ ಪರಸ್ತ್ರೀಯರಲ್ಲಿ ; ಕ್ರೋಧ ಬೇಡ ಗುರುವಿನಲ್ಲಿ ; ಲೋಭ ಬೇಡ ತನುಮನಧನದಲ್ಲಿ ; ಮೋಹ ಬೇಡ ಸಂಸಾರದಲ್ಲಿ; ಮದ ಬೇಡ ಶಿವಭಕ್ತರಲ್ಲಿ : ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ. ಇಂತೀ ಷಡ್ಗುಣವನರಿದು ಮರೆಯಬಲ್ಲಡೆ ಆತನೇ ಸಹಜ ಸದ್ಭಕ್ತ ಕಾಣಾ ಕೂಡಲ ಸಂಗಮ ದೇವಾ !' ಕಾಮ—ಕ್ರೋಧ ಶೋಕ-ಮೋಹಾದಿಗಳು ಪ್ರಕೃತಿಯೊಳಗಿನ ಆಕಾಶಾಂಗದ ತತ್ವಗಳು. ಇವು ಅನಿವಾರ್ಯ. ಇವನ್ನು ಚನ್ನಬಸವಣ್ಣನವರು ಹೇಳಿದಂತೆ ವಿಚಾರಪೂರ್ಣವಾಗಿ ಒಳ್ಳೆಯದಕ್ಕೆ ಉಪಯೋಗಿಸಿಕೊಳ್ಳಬೇಕು. ಆಕಾಶಾಂಗದಲ್ಲಿ ವಾಯ್ವಂಗ ಸೇರಿ ಕಾಮವುಂಟಾಗುತ್ತದೆ; ವಾಯುವಿನಂತೆ ಚಲನವುಳ್ಳದಾಗಿದೆ, ಇನ್ನು ಆಕಾಶಾಂಗದಲ್ಲಿ ತೇಜಾಂಗ ಕೂಡಿ ಕ್ರೋಧವುದಯಿಸುವುದು. ತೇಜದಂತೆ ತಪ್ತತೆಯನ್ನುಂಟು ಮಾಡುವುದು; ಇವು ಭೋಗಾಂಗ ಧರ್ಮಗಳಾಗಿವೆ.

ಸದಾ ಸಂತುಷ್ಟ ಹೃದಯನಾಗಿರಬೇಕೆಂದು ಶ್ರೀ ರೇಣುಕ ಜಗದ್ಗುರುವಿನಪ್ಪಣೆ! ಮಾಹೇಶ್ವರನ ಮನಸ್ಸು ಆನಂದ ತುಂದಿಲವಾಗಿರಬೇಕು, ನಗೆಮೊಗದಿಂದ ನಿತ್ಯ ನಲಿಯುತ್ತಿರಬೇಕು. ಆನಂದವೂ ಒಂದು ಸ್ವರೂಪಲಕ್ಷಣ. ಆತ್ಮಾನಂದದಿಂದಿರುವುದೂ ಒಂದು ಮಹಾ ತಪಸ್ಸು. ಶೋಕಸಂತಪ್ತರಾಗಿರುವುದಕ್ಕಿಂತ ಸಂತೋಷ ಸಂತೃಪ್ತರಾಗಿರುವುದು ಲೇಸು. 'ಸದಾ ಸಂತೋಷಚಿತ್ತಾನಾಂ ಸಂಪದಸ್ತು ಪದೇಪದೇ' ಎಂದು ನೀತಿ ಸೂಕ್ತಿ ! 'ಸಮರತಿ ಸಮಕಳೆ ಸಮಸುಖಸ್ವಾನುಭಾವ ಹಿರಿದು—ಕಿರಿದಾದುದನಾರೂ ಅರಿಯರು !' 'ಆಡಿ ಅಳುಪದಿರಾ, ಲೇಸ ಮಾಡಿ ಮರುಗದಿರಾ ಎಲೆ ಮನವೆ !' 'ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ?' 'ಉದರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನ ಭಕ್ತಿ. ಹೆಣ

ಮೂಳನು ನಾನು ಕೂಡಲ ಸಂಗಮದೇವಾ ಕ್ಷಣ ಹುದುಳವಿರದೆ ಬಾಯ ಟೊಣೆದೇ ಹೋಯಿತ್ತೆನ್ನ ಭಕ್ತಿ !' 'ಈ ಕಯ್ಯಲೆ ಸುಖವು ; ಈ ಕಯ್ಯಲೆ ದುಃಖವು ! ಏಕಯ್ಯಾ. ನೀ ನಮ್ಮ ಬರಿದೆ ಬಳಲಿಸುವೆ ?' 'ಅಚ್ಚುಗವೇಕಯ್ಯಾ ಸಂಸಾರದೊಳಗೆ ? ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು !' 'ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು ; ಹಾಡಿ ನಾಲಗೆ ದಣಿಯದು : ಇನ್ನೇವೆ ನಿನ್ನೇವೆ ? ಕೂಡಲ ಸಂಗಮದೇವ ಕೇಳಯ್ಯಾ, ನಿಮ್ಮುದರವ ಬಗಿದು ಹೋಗುವ ಭರವೆನಗೆ !' ಈ ಮಾತುಗಳನ್ನು ಮೆಲುಕು ಹಾಕಬೇಕು.

ಚಿಂತೆಯೇ ಮುಪ್ಪು, ಸಂತೋಷವೇ ಯೌವನ. ಸಂತೋಷವೇ ನಿಧಿ ನಿಧಾನ. ಸಂತೋಷವೇ ಜೀವನ. 'ಆನಂದವೇ ಬ್ರಹ್ಮ' ಎಂಬುದನ್ನು ಅರಿತು ಆನಂದದಲ್ಲಿ ಬಾಳಬೇಕು. ತ್ರಿಕರಣಗಳಲ್ಲಿ ಯಾವ ಬಗೆಯ ಕಳವಳವಿರಬಾರದು. ಬಂದ ಬರುವ ದುಃಖವನ್ನೂ ಸುಖವನ್ನಾಗಿ ಭಾವಿಸಿ ಅನುಭವಿಸುವುದೇ ನಿಜ ವಾದ ತ್ಯಾಗಯುಕ್ತ ಯೋಗ. ಇದನ್ನು ಮಾಹೇಶ್ವರನು ಮೈಗೂಡಿಸಿಕೊಂಡಿರ ಬೇಕು.

ಮಾಹೇಶ್ವರನು ಪ್ರಾಕೃತಲೋಕಗಳಿಂದ ಅಪ್ರಾಕೃತಲೋಕಕ್ಕೇರಬೇಕು. ಸಚ್ಚಿಲ್ಲೋಕಗಳನ್ನು ದಾಟಿ ಆಚೆ ಆನಂದಲೋಕದಲ್ಲಿ ಲೀನನಾಗಬೇಕು. ಆ ವಸ್ತುವಿನ ಅನುಭವಾನಂದದಲ್ಲಿ ತಾನಾಗಿರಬೇಕು, ಉನ್ಮನದಿಂದ ಅನಾಹತ ವಿಶುದ್ಧಾದಿ ಲೋಕಗಳನ್ನು ಮೀರಿ ಏರಿ ಆಜ್ಞಾಕಮಲದಲ್ಲಿ ಅನಂದ ಮಕರಂದ ವನ್ನು ಆಸ್ವಾದಿಸುವವನಾಗಬೇಕು. ಕುಂಡಲಿನಿ ಸ್ವಾಧಿಷ್ಠಾನದಲ್ಲಿ ಸುರಸಸಿದ್ಧಿ ಯನ್ನು ಪಡೆದು ಉನ್ಮುಖವಾಗಿ ಉದ್ಗಮಿಸುವಾಗ ಆ ಆಚಕ್ರದಲ್ಲಿಯೂ ರಸಾನು ಭವವನ್ನು ರಸಾನಂದವನ್ನು ಪಡೆಯುತ್ತದೆ. ಅಂತಾದಾಗ ಅಚ್ಚಳಿಯದಾನಂದ ಸ್ಥಿತಿಯೊದಗುತ್ತದೆ.

ಮಾಹೇಶ್ವರನು ಸರ್ವಭೂತಹಿತದಲ್ಲಿ ರತನಾಗಿರಬೇಕೆಂದು ಹೇಳಿ ಸರ್ವೋ ತ್ತಮವಾದ ಸದುಪದೇಶವನ್ನು ಮಾಡಿದ್ದಾರೆ. ಸಮದರ್ಶಿಯೊಗುವುದಕ್ಕಿಂತ ಸರ್ವರಿಗೆ ಸುಖವಾಗಲೆಂದು ಬರೀ ಹರಸುವುದಕ್ಕಿಂತ ಸರ್ವಪ್ರಾಣಿಗಳ ಸುಖ ಕ್ಕಾಗಿ ಶ್ರಮಿಸುವುದು ಸರ್ವೋತ್ತಮವಲ್ಲದೆ ಮತ್ತೇನು ? 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲ ಸಂಗನ ಶರಣರೇ ಕುಲಜರು' ಎಂಬೀ ಬಸವಣ್ಣ

ನವರ ಭಾವೋಕ್ತಿಯನ್ನು ಕಾರ್ಯದಲ್ಲಿ ತರುವಂತೆ ತಿಳಿಸುವ ಈ ಕ್ರಿಯಾಪರವಾಣಿ ಪೂರ್ಣಗಮನಾರ್ಹವಾಗಿದೆ.

"ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥"

ಈ ಈಶಾವಾಸ್ಯೋಪನಿಷತ್ತಿನ ನಿರುಕ್ತಿಯಂತೆ ಸರ್ವಭೂತಾತ್ಮಭಾವವನ್ನು ಮಾಹೇಶ್ವರನು ಬೆಳಸಿಕೊಂಡು ಜಗತ್ಕಲ್ಯಾಣಕ್ಕಾಗಿ ಯಾವಾಗಲೂ ಕಾರ್ಯನಿರತನಾಗಿರುತ್ತಾನೆ. ಸರ್ವಸಮಭಾವವುಳ್ಳವನಾಗುತ್ತಾನೆ. ಭವದ ಕೋಟಲೆಯನ್ನೂ ಬಾಳಿನ ಕೀಟಲೆಯನ್ನೂ ಗೆಲ್ಲುತ್ತಾನೆ:

"ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥"

ಈ ಗೀತೋಕ್ತಿಯಂತೆ ಸರ್ವಭೂತಗಳಲ್ಲಿ ಸಮತೆಯಿಂದಿರುವವನು ಇಹದಲ್ಲಿ ನಿರ್ದೋಷಿಯಾಗಿ ಆಭ್ಯುದಯವಂತನಾಗಿ ನಿಶ್ರೇಯಸಶಾಲಿಯಾಗಿ ಜನ್ಮಕರ್ಮಗಳನ್ನು ಜಯಿಸುವನು; ಸಮರೂಪ ಬ್ರಹ್ಮದಲ್ಲಿ ಸಮರಸಗೊಳ್ಳುವನು. ಸರ್ವಭೂತ ಹಿತದಲ್ಲಿ ರತನಾದ ಮಾಹೇಶ್ವರನು ಸರ್ವಭೂತ ಸ್ವರೂಪನಾದ ಆ ಮಹೇಶ್ವರನನ್ನೇ ಆರಾಧಿಸಿದ ಪುಣ್ಯವನ್ನು ಪಡೆಯುತ್ತಾನೆ. ವಿಶ್ವರೂಪನನ್ನು ವಿಶ್ವದಲ್ಲೆಲ್ಲಾ ಕಂಡು ನಲಿದಾಡುವನು. ಯಾವ ಪ್ರಾಣಿಯಲ್ಲಿಯೂ ದ್ವೇಷವನ್ನು ತೋರನು. ಎಲ್ಲೆಲ್ಲಿಯೂ ಎಲ್ಲ ಪ್ರಾಣಿಗಳಲ್ಲಿಯೂ ಶಿವನಿರುವನೆಂದು ತಿಳಿದ ಮಾಹೇಶ್ವರನು ಸರ್ವೋದ್ಧಾರಕ್ಕಾಗಿ ಸರ್ವಹಿತಕ್ಕಾಗಿ ಸಹಜವಾಗಿ ಶ್ರಮಿಸುತ್ತಾನೆ.

"ನಮಃ ಶಿವಾಯೇತಿ ಶಿವಂ ಪ್ರಪದ್ಯೇ। ಶಿವ ಪ್ರಸೀದೇತಿ
ಶಿವಂ ಪ್ರಪದ್ಯೇ ॥ ಶಿವಾತ್ಪರಂ ನೇತಿ ಶಿವಂ ಪ್ರಪದ್ಯೇ ।
ಶಿವೋ ಹಮಸ್ಮೀತಿ ಶಿವಂ ಪ್ರಪದ್ಯೇ ॥"

ಸರ್ವಭಾವದಿಂದ ಮಾಹೇಶ್ವರನು ಶಿವನಿಗಾಗಿ ತನ್ನನ್ನು ಮೀಸಲಾಗಿರಿಸುತ್ತಾನೆ, ಇದನ್ನೇ ಮುಂದಿನ ಮಂತ್ರಗಳಲ್ಲಿ ಕಾಣಬಹುದಾಗಿದೆ. ಸರ್ವವೂ ಶಿವಸ್ವರೂಪವೆಂದು ಸರ್ವಭೂತ ಹಿತದಲ್ಲಿ ರತನಾಗುತ್ತಾನೆ.

"ನಿವಾರಣ ಸಮುದ್ಯೋಗೀ ಶಿವಕಾರ್ಯವಿರೋಧಿನಾಂ
ಸಹಚಾರೀ ಸದಾಕಾಲಂ ಶಿವೋತ್ಕರ್ಷಾಭಿಧಾಯಿಭಿಃ ।
ಶಿವಾಪಕರ್ಷಸಂಪ್ರಾಪ್ತೌ ಪ್ರಾಣತ್ಯಾಗೇಪ್ಯಶಂಕಿತಃ
ಶಿವೈಕನಿಷ್ಠಸ್ಸರ್ವಾತ್ಮಾ ವೀರಮಾಹೇಶ್ವರೋ ಭವೇತ್ ॥"

ಶಿವಕಾರ್ಯಗಳಿಗೆ ವಿರೋಧಿಗಳಾದವರು ಶಿವದ್ರೋಹಿಗಳು: ಕಲ್ಯಾಣ ವಿಘಾತಕರು. ಅಶುಭರು, ಅವರನ್ನು ಮಾಹೇಶ್ವರನು ತೊಲಗಿಸಬೇಕು. ಇಲ್ಲವೆ ಶಿವಕಾರ್ಯಗಳಿಗೆ ಸಹಕಾರಿಗಳನ್ನಾಗಿಸಬೇಕು. ಶಿವಾಧಿಕ್ಯವನ್ನು ಸಾರುವವರೊಡನೆ ಯಾವಾಗಲೂ ಚರಿಸುವವನಾಗಬೇಕು. ಶಿವನಿಂದೆಯು ಸಂಭವಿಸಿದರೆ ತನ್ನ ಉಸಿರನ್ನು ಪಣಕ್ಕಿಟ್ಟಾದರೂ ಅದನ್ನು ನಿಸ್ಸಂದೇಹವಾಗಿ ನಿವಾರಿಸಬೇಕು. ಶಿವೈಕನಿಷ್ಠನಾಗಿರಬೇಕು. ಸರ್ವಾತ್ಮನಾಗಿರಬೇಕು. ಅವನು ವೀರಮಾಹೇಶ್ವರನೆನಿಸುತ್ತಾನೆ.

ಮಾನವ ಜೀವನಕ್ಕೆ ಎರಡು ಪಥಗಳುಂಟು, ಒಂದು ಶಿವಪಥ, ಇನ್ನೊಂದು ಆಶಿವ ಪಥ. ಮೊದಲಿನದು ಗ್ರಾಹ್ಯ; ಎರಡನೆಯದು ಅಗ್ರಾಹ್ಯ. ಅಶುಭ ಪಥದಲ್ಲಿ ಅಡಿಯಿಟ್ಟವರನ್ನು ತಿದ್ದುವುದು ಮಾಹೇಶ್ವರನ ಮಣಿಹ. ಒಂದು ವೇಳೆ ಅವರು ದಾರಿಗೆ ಬರದಿದ್ದರೆ ಅವರನ್ನು ಬಿಟ್ಟು ಬಿಡಬೇಕು.

"ಸಗಣಿಯ ಬೆನಕಂಗೆ ಸಂಪಿಗೆಯ ಅರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣ ! ಮಣ್ಣ ಪುತ್ತಳಿಯ ಮಾಣದೆ ತೊಳೆದರೆ ನಿಚ್ಚ ಕೆಸರಹುದಲ್ಲದೆ ಅದರ ಅಚ್ಚುಗ ಬಿಡದಣ್ಣ ! ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವರೇಕೆ ಸದ್ಭಕ್ತರಹರು ಕೂಡಲ ಸಂಗಮದೇವಾ ? ಇದು ಅಣ್ಣನ ಕೊರಗು; ಮನ ಖಚಿತಗೊಂಡ ಕೇಳಿಕೆ. ಶಿವ ಸಂಸ್ಕಾರವಿಲ್ಲದವನಂ ಶಿವ ಕಾರ್ಯಕ್ಕೆ ಸಹಕರಿಸನು. ಜಗದ್ಗುರು ರೇಣುಕರು ಅಪ್ಪಣೆಯಿತ್ತಂತೆ ಅಂಥವರನ್ನು ನಿವಾರಿಸುವುದೇ ನಿರಾವಿಲಕಾರ್ಯ. ಬೇವಿನ ಬೀಜದಲ್ಲಿ ಮಾವಿನ ಮೊಳಕೆ ಬಾರದು. ಪೋಷಕ ದ್ರವ್ಯ ಎಷ್ಟೇ ಸತ್ವಶಾಲಿಯಾಗಿದ್ದರೂ ಶುದ್ಧ ಶೀಲವುಳ್ಳುದಾದರೂ ಸಾಧ್ಯವಿಲ್ಲ. ಬೇವಿನ ಹಣ್ಣು ಕಾಗೆಗೆ ಆಹಾರವಲ್ಲದೆ ಕೋಗಿಲೆಗಾಗದು. ಕಾರಣ ಶಿವಕಾರ್ಯ ವಿರೋಧಿಗಳನ್ನು ದೂರೀಕರಿಸಲು ಪೂರ್ಣ ಪ್ರಯತ್ನಿಸಬೇಕು, ಶಿವ

ಜೀವಿಗಳಲ್ಲದವರು ಕಾಯವಂಚಕರು; ಜೀವವಂಚಕರು. ಅವರ ಬಾಳು ಹಸನಾಗಿರದು. ಅವರ ಸಂಗ ಸಹವಾಸಗಳಿಂದ ಯಾವ ಫಲವುಂಟಾಗದು.

ಶಿವ ಜೀವಿಗಳ ಸಂಗ ಸಹವಾಸದಿಂದ ಸತ್ಫಲವುಂಟು. ಶಿವ ಸಂಸ್ಕಾರಕ್ಕೆ ಕಳೆ ಕಟ್ಟುವುದುಂಟು. "ಆರಾರ ಸಂಗವೇನೇನ ಮಾಡುವುದಯ್ಯಾ ? ಕೀಡಿ ಕುಂಡಲಿಗನಾಗದೆ ಆಯ್ಯಾ ? ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ ಬೇವು ಬೊಬ್ಬುಳಿ ತರುಗಳು ಗಂಧಂಗಳಾಗವೆ ? ನಮ್ಮ ಕೂಡಲ ಸಂಗನ ಶರಣರ ಸನ್ನಿಧಿಯಿಂದ ಕರ್ಮ ನಿರ್ಮಳವಾಗದಿಹುದೆ ? ಶಿವೋತ್ಕೃಷ್ಟ ಸಾಧಕರೊಡನಿದ್ದರೆ ಶಿವನಿಗೆ ಶರಣಾದವರೊಡನಿದ್ದರೆ ಮಾಡಿದ ಕರ್ಮ ನಿರ್ಮಳವಾಗುತ್ತದೆ. ದೈವೀ ಜೀವನ ಸಂವರ್ಧಿಸುತ್ತದೆ. ಆದ್ದರಿಂದ ಮಾಹೇಶ್ವರನು ಶಿವ ಜೀವಿಗಳಲ್ಲಿ ಹೆಚ್ಚು ಅಭಿಮಾನವುಳ್ಳವನಾಗಿ ಅವರೊಡನಿರಬೇಕು; ಶಿವನೇ ಪ್ರಾಣವಾಗಿ ಬಾಳಬೇಕು. ಶಿವೈಕನಿಷ್ಠನಾಗಿರಬೇಕು. "ಮರೆಯಲಾಗದೆ ಹರಿಯ ? ಮರೆಯಲಾಗದೆ ಬ್ರಹ್ಮನ ? ಮರೆಯಲಾಗದೆ ತೆತ್ತೀಸ ಕೋಟಿ ದೇವರ್ಕಳ ? ನಮ್ಮ ಕೂಡಲಸಂಗಮ ದೇವರ 'ಮರೆ'ಯಲಿಹುದು."

ಹರಿವಿರಂಚಿ ಮುಂತಾದ ಮೂವತ್ತು ಮೂರು ಕೋಟಿ ದೇವತೆಗಳ ಮರೆಯಬಹುದು; ಅವರ ಮೊರೆಯಲ್ಲಿ ಇಲ್ಲದೆ ಬಾಳಬಹುದು. ಮಹೇಶ್ವರನ ಮರೆತು ಮೊರೆಯೊಳಿಲ್ಲದೆ ಬಾಳಲು ಸಾಧ್ಯವಿಲ್ಲ. ಸಮಯಬಿದ್ದರೆ ಮಾರಿಕೊಂಬ ದೇವತೆಗಳಿಗೂ ಮಾರಾಂತಕ ಮಹಾದೇವನಿಗೂ ಮಹದಂತರ ತಾನೆ ? ಆದ್ದರಿಂದ ಮಾಹೇಶ್ವರನೆನಿಸುವನು ಮಹೇಶ್ವರನಲ್ಲಿಯೇ ಏಕನಿಷ್ಠನಾಗಿರಬೇಕು. ಕಂಡಲ್ಲಿ ಮನವೆಳಸಿದರೆ ಮಾಹೇಶ್ವರತ್ವ ಮೈಗೂಡದು. ಅದರಲ್ಲಿಯೂ ವೀರ ಮಾಹೇಶ್ವರತ್ವ ಮತ್ತೂ ಬಾರದು. ವೀರಮಾಹೇಶ್ವರನೆನಿಸಬೇಕಾದರೆ ಸರ್ವಾತ್ಮನಾಗಬೇಕು. 'ಶಿವ ಏವ ಜಗತ್ಸರ್ವಂ ಶಿವಾದನ್ಯನ್ನವಿದ್ಯತೇ' ಎಂಬ ಶಿವ ಸರ್ವಭಾವ ಬೆಳೆದು ಬರಬೇಕು. ಸರ್ವವನ್ನೂ ತನ್ನಂತೆ ಭಾವಿಸುವ ವಿಶಾಲ ಮನೋಭಾವವುಳ್ಳವನಾಗಬೇಕು. ಪರಿಪೂರ್ಣ ಅಖಂಡ ಶಿವಭಾವದಿಂದ ಸಹಿತನಾಗಬೇಕು. ಆದಾಗ ವೀರಮಾಹೇಶ್ವರತ್ವ ಸಿದ್ಧಿಸುವುದು.

ಮಾಹೇಶ್ವರನು ಆತ್ಮನ ಪರಮತೆಯನ್ನು ಅರಿತವನಾಗಿ ಆ ಪರಮಾತ್ಮ ಚೈತನ್ಯದ ವಿಶ್ವಾಧಿಕತೆಯನ್ನು ವಿಶಿಷ್ಟಶಕ್ತಿಯನ್ನು ವಿಶುದ್ಧತೆಯನ್ನು

ಸರ್ವೋತ್ತಮ ಸರ್ವೇಶ್ವರ ಸರ್ವಾನುಗ್ರಹ ಸಮರ್ಥ ಅನಾದಿಮುಕ್ತ ಏಕೈಕ ಎಂಬುದನ್ನು ದೃಢವಾಗಿ ನಂಬಿ ತದಾಸಕ್ತ ಚಿತ್ತನಾಗಿ ಸ್ಥಿರಬುದ್ಧಿಯುಳ್ಳವನಾಗಿ ಬುದ್ಧಿಯೋಗಿಯೆನಿಸುತ್ತಾನೆ. ಆ ಪರಬ್ರಹ್ಮೈಶ್ವರ್ಯದ ಮುಂದೆ ಉಳಿದ ಪ್ರಾಕೃತಿಕ ಐಶ್ವರ್ಯಗಳು ಐಂದ್ರಿಕ ಭೋಗಗಳು ತೃಣಪ್ರಾಯವೆಂದು ತಿಳಿದು ತ್ಯಾಗಮಾಡಿ ಅಂತಃಕರಣ ವೃತ್ತಿಗಳನ್ನೆಲ್ಲ ಜಯಿಸಿ ಶಿವಸತ್ತೆಯಲ್ಲಿ ಶಿವಜ್ಞಾನದಲ್ಲಿ ಶಿವಾನಂದದಲ್ಲಿ ಶಿವೈಕನಿಷ್ಠೆಯಲ್ಲಿ ಸಮುತ್ಕಂಠನಾಗಿ ಸರ್ವಭಾವದಿಂದ ಸರ್ವ ಪ್ರಾಣಿಗಳ ಹಿತದಲ್ಲಿ ರತನಾಗಿ ಸರ್ವಾತ್ಮಸ್ವರೂಪನಾಗಿ ವೀರ ವಿಶೇಷಣವನ್ನು ತಳೆಯುತ್ತಾನೆ. ಭಕ್ತಿ ಜ್ಞಾನ ವೈರಾಗ್ಯಗಳಿಂದ ವೀರನೆನಿಸುತ್ತಾನೆ, ವಿಶಾಲ ಮನೋಭಾವದಿಂದ ವಿಶ್ವಜೀವ ಕಾರುಣ್ಯದಿಂದ ವೀರಮಾಹೇಶ್ವರನೆನಿಸುತ್ತಾನೆ. ಶರೀರೇಂದ್ರಿಯಾಂತಃಕರಣ ನಿಷ್ಠನಾಗದೆ ಮುಖ್ಯವಾಗಿ ಶಿವೈಕನಿಷ್ಠನಾಗಿ ವೀರಮಾಹೇಶ್ವರ ಸ್ಥಲ ಸಂಪನ್ನನಾಗುವನು.

ಸರ್ವಜೀವನಿಷ್ಠನೂ ಜಗನ್ನಿಷ್ಠನೂ ಆಗಿರುವನು ಮಾಹೇಶ್ವರನು. ಏಕೆಂದರೆ ತನ್ನ ಪೂರ್ಣ ಸಂವಿನ್ನೇತ್ರದಿಂದ ಬೋಧೈಕ ರೂಪನಾಗಿದ್ದು ಸರ್ವ ಜೀವಿಗಳಲ್ಲಿ ಜಗತ್ತಿನಲ್ಲಿ ಬೋಧೈಕ್ಯವನ್ನು ಸಂಪಾದಿಸಿರುತ್ತಾನೆ. ಪಡಿ ಪದಾರ್ಥದಲ್ಲಿ ಪೂರ್ಣಬೋಧವನ್ನು ಕಾಣುತ್ತಾನೆ. ತನ್ನ ಶುದ್ಧವಾದ ಪ್ರಬುದ್ಧವಾದ ಬುದ್ಧಿಯಿಂದ ಆ ಪೂರ್ಣ ಸಂವಿತ್ತನ್ನು ಪಡೆದಿರುತ್ತಾನೆ. 'ಏಕಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ' ಎಂಬ ಶ್ರುತಿ ಮತವನ್ನು ಮಾಹೇಶ್ವರನು ಮೈಗೂಡಿಸಿಕೊಂಡಿರುತ್ತಾನೆ. ವಿಜ್ಞಾನಾತ್ಮನಾದ ಆತನದು ಎಟುಕದ ಎತ್ತರ; ಬಳಸದ ಬಿತ್ತರ. ಬೆಟ್ಟದ ಮೇಲಿರುವವನ ದೃಷ್ಟಿ ಹೇಗೆ ದೂರ ದೂರ ಹರಿಯಬಲ್ಲುದೋ ಹಾಗೆ ಬೋಧೈಕ್ಯತೆಯನ್ನು ಪಡೆದ ವಿಶಾಲಾತ್ಮನಾದ ಮಾಹೇಶ್ವರನ ಬುದ್ಧಿ ಭಾವೇಂಗಿತತತ್ವವುಳ್ಳುದಾಗುತ್ತದೆ. ಸರ್ವ ಪ್ರಾಣಿಗಳನ್ನು ಸರ್ವೇಶ್ವರ ಸ್ವರೂಪವನ್ನಾಗಿ ತಿಳಿಯುತ್ತದೆ. ಸರ್ವ ಪ್ರಾಣಿಗಳು ತನ್ನಾತ್ಮ ಸ್ವರೂಪವೆಂದು ಮಾಹೇಶ್ವರನ ಬುದ್ಧಿಯು ಭಾವಿಸುತ್ತದೆ. ಮಾಹೇಶ್ವರನಿಗೆ ದ್ರಷ್ಟೃವಿನಂತೆ ದೃಶ್ಯವೂ ಚಿದ್ರೂಪವಾಗಿ ತೋರುತ್ತದೆ; ಚಿದಾನಂದ ರೂಪಾಗಿರುತ್ತದೆ. ಆದ್ದರಿಂದ ಮಾಹೇಶ್ವರನು ಸಂವಿತ್‌ಪ್ರಬುದ್ಧನು. ಆತನು ಆಡದೆ ಬೋಧಿಸಬಲ್ಲನು. ಏನನ್ನೂ ಮಾಡದೆ ಪ್ರಾಣಿಗಳನ್ನು ಸುಖಿಗಳಾಗಿಸಬಲ್ಲನು. ತಾನು 'ಸದಾ

ಸಂತುಷ್ಟ ಹೃದಯನಾಗಿರುವುದರಿಂದ ಸರ್ವ ಪ್ರಾಣಿಗಳಿಗೆ ಹಿತವನ್ನುಂಟು ಮಾಡಲು ಸಮರ್ಥನಾಗುವನು. ಆತನ ಆ ಬೌದ್ಧಿಕ ಕ್ರಿಯೆ ಅಸಾಮಾನ್ಯವಾಗಿ ರುತ್ತದೆ; ಅಪಾರ ಸಾಮರ್ಥ್ಯ ಸಂಪನ್ನವಾಗಿರುತ್ತದೆ.

ಮಾಹೇಶ್ವರನು ಕ್ರಿಯಾನಿಷ್ಠನೂ ಜ್ಞಾನನಿಷ್ಠನೂ ಆಗಿರಬೇಕು; ಆಗಿರುತ್ತಾನೆ. ಭಕ್ತನು ಕ್ರಿಯೆಯಲ್ಲಿ ಕೇವಲ ಶ್ರದ್ಧೆಯನ್ನು ವಹಿಸಿರುತ್ತಾನೆ. ಕ್ರಿಯೆಯಲ್ಲಿ ಅನನ್ಯ ಮನಸ್ಸಿನಿಂದ ತೊಡಗಿದಾಗ ಆತನೇ ಮಾಹೇಶ್ವರನೆನಿಸುತ್ತಾನೆ. ಆಂತೆಯೇ ಜ್ಞಾನದಲ್ಲಿ ಶ್ರದ್ಧೆ ಹುಟ್ಟಿದಾಗ ಭಕ್ತನೆನಿಸುತ್ತಾನೆ. ಅದೇ ಜ್ಞಾನಾಚಾರದಲ್ಲಿ ಬಿಡದೆ ತೊಡಗಿದಾಗ ಮಾಹೇಶ್ವರನೆನಿಸುತ್ತಾನೆ. ಆದ್ದರಿಂದ ಯಾವುದರಲ್ಲಿಯೇ ಆಗಲಿ ಶ್ರದ್ಧಾಳುವಾದವನು ಭಕ್ತ. ನಿಷ್ಠಾಳುವಾದವನು ಮಾಹೇಶ್ವರ. ಮಾಹೇಶ್ವರನು ಕರ್ತವ್ಯದಲ್ಲಿ ಜ್ಞಾತವ್ಯದಲ್ಲಿ ಅಳೆದೆಯ ವ್ಯಕ್ತಿಯಲ್ಲ; ಕೆಚ್ಚೆದೆಯ ಕಲಿ. ಶಮದಮೆಗಳಲ್ಲಿ ಶೂರ. ಆದ್ದರಿಂದ ವೀರಮಾಹೇಶ್ವರ.

ವೀರ ಮಾಹೇಶ್ವರನೆಂದರೆ ಸಂಯಮಿ, ಸ್ವತಂತ್ರ, ಸಮ್ಯಜ್ಞಾನಿ, ಸತ್ಯನಿಷ್ಠ ಪೂರ್ವಗ್ರಹ ನಿರಾಸಕ, ಮಾನವತಾ ವಾದಿ; ಇಷ್ಟಿದ್ದೂ ನಿರಹಂಕಾರಿ. ಇವೆಲ್ಲಕ್ಕೂ ಸರ್ವೋತ್ತಮನೂ ಸರ್ವಾಂತರ್ಯಾಮಿಯೂ ಆದ ಆ ಮಹೇಶ್ವರೋಪಾಸಕ. ಬುದ್ಧಿ ಬಲ್ಲಿದ. ಬುದ್ಧಿಯೋಗಿ, ಸ್ಥಿರಪ್ರಜ್ಞ, ಶಾರೀರಿಕ ಸಾಮಾಜಿಕ ಸ್ವಾಮ್ಯವುಳ್ಳವ. ಅಜ್ಞಾನಿಯಾಗಿ ಆಚಾರ ಮಾಡುವುದು—ಅರ್ಚನೆ ಮಾಡುವುದು ಶ್ವಾನನ ನಿದ್ದೆಯಂತೆ ವ್ಯರ್ಥವೆಂದು ಅರಿದಾತ. ಮಾತಿನ ಮಲ್ಲನಲ್ಲ. ಮಾಡುವಲ್ಲಿ ವೀರ. ತ್ರಿಕರಣಗಳನ್ನು ತೀಡುವಲ್ಲಿ ಧೀರ. ಮತಿಯನ್ನು ಮಲ್ಲಿಗೆಯಂತೆ ಅರಳಿಸುವ ಅಚ್ಚ ಬೆಳಗನು ಬೀರುವ ಭಾಸ್ಕರ. ಅಂಗ ವಿಕಾರದ ಸಂಗ ವಳಿದ ನಿಸ್ಸಂಗ. ಯಾವ ಹಂಗಿಗನಲ್ಲ ವೀರಮಾಹೇಶ್ವರಾಂಗ, ವೈದ್ಯನಿಗೆ ಹಸ್ತಗುಣ ಹೇಗೋ ಮಾಹೇಶ್ವರನಿಗೆ ಬುದ್ಧಿಯೋಗ ಹಾಗೆ ! ರೋಗಿಗೆ ಪಥ್ಯ ಹೇಗೋ ವೀರಮಾಹೇಶ್ವರನಿಗೆ ನಿಷ್ಠೆ ಹಾಗೆ ! ಶಿವೈಕನಿಷ್ಠೆಯನ್ನು ಬಿಟ್ಟು ಆತನ ಪ್ರಾಣವಿರದು. "ಶಿವಸ್ವರೂಪನೆಂದು, ಶಿವನೊಡನಾಡಿ, ಶಿವನೊಡನುಂಡು, ಶಿವಾಕಾರವಾದ ಶಿವಭಕ್ತನು ದೇವದಾನವ ಮಾನವಾದಿಗಳಲ್ಲಿರ್ದಡೇನು ? ಆತನು ಹುಟ್ಟುಗೆಟ್ಟನಾಗಿ ಆವ ಕುಲಜಾತಿಗಳಲ್ಲಿ ಹುಟ್ಟಿದಡೇನು ? ಶಿವಜ್ಞಾನ

ಸಿದ್ಧನಾದ ಶಿವಭಕ್ತನು ಸಾಧಕರಂತೆ ವರ್ಣಾಶ್ರಮದ ಅಭಿಮಾನಕ್ಕೊಳಗಪ್ಪನೆ ? ಇಲ್ಲಿಲ್ಲ....ಹ್ಯೇಯವಾದ ಮಾಯೆಯ ನಾಯಿಯುಂತರಿದುಳಿದ ಭಕ್ತನು ಮಾಹೇಶ್ವರನೆನಿಸಿಕೊಂಬನಾಗಿ ಜಡಮಾಯಾ ಧರ್ಮವ ಹೊದ್ದಲಮ್ಮನು ಕಾಣಾ ಕೂಡಲ ಚೆನ್ನಸಂಗಮದೇವಾ ! ಲೋಕದವರಂತೆ ಮಾಹೇಶ್ವರನು ಏಕನಿಷ್ಠೆಯಿಲ್ಲದೆ ನಡೆಗೆಟ್ಟು ನುಡಿಗೆಟ್ಟು ನಡೆಯನು; ನುಡಿಯನು. ಶಿವ ಸಂಸ್ಕೃತಿಯಲ್ಲಿಯೇ ಸದಾಕಾಲ ಜೀವಿಸಬಲ್ಲ.

# ಲಿಂಗನಿಷ್ಠಾ ಸ್ಥಲಂ ೨.

ಲಿಂಗವೆಂದರೇನೆಂಬುದನ್ನು ಮೊದಲರಿಯಬೇಕು. ತನ್ನೊಳಗಿರುವ ತನ್ನ ಪಿಂಡಾಂಡವನ್ನೆಲ್ಲ ಒಳಗೊಂಡಿರುವ ಚೈತನ್ಯವೇ ಲಿಂಗ, 'ಲಿಂಗಂ ಬ್ರಹ್ಮಸನಾತನಂ' "ಶಿವಾಭಿಧಾನಂ ಚಿನ್ಮಾತ್ರಂ ಸದಾನಂದ ನಿರಂಕುಶಂ। ಕಾರಣಂ ಸರ್ವ ಲೋಕಾನಾಂ ವೇದಾನಾಮಪಿ ಕಾರಣಂ। ಪೂರಣಂ ಸರ್ವತತ್ತ್ವಸ್ಯ ತಾರಣಂ ಜನ್ಮವಾರಿಧೇಃ। ಜ್ಯೋತಿರ್ಮಯಮನಿರ್ದೇಶ್ಯಂ ಯೋಗಿನಾಮಾತ್ಮನಿ ಸ್ಥಿತಂ। ತದೇವಲಿಂಗಂ ವಿಜ್ಞೇಯಂ ಶಾಂಕರಂ ಸರ್ವಕಾರಣಂ। ಪರಂ ಪವಿತ್ರಮಮಲಂ ಲಿಂಗಂ ಬ್ರಹ್ಮ ಸನಾತನಂ॥" ಎಂದು ರೇಣುಕ ಜಗದ್ಗುರುಗಳು ಲಿಂಗಲಕ್ಷಣವನ್ನು ನಿರ್ದಿಷ್ಟಗೊಳಿಸಿದ್ದಾರೆ.

"ತನುವೊದಗಿದಲ್ಲಿ ಮನವಾಯಿತ್ತು. ಮನವೇಧಿಸಿ ಭಾವವಾಯಿತ್ತು. ಭಾವವೇಧಿಸಿ ಜ್ಞಾನವಾಯಿತ್ತು. ಜ್ಞಾನವೇಧಿಸಿ ಲಿಂಗವಾಯಿತ್ತು. ಲಿಂಗ ವೇಧಿಸಿ ಪರಿಪೂರ್ಣವಾಯಿತ್ತು, ಸೌರಾಷ್ಟ್ರಸೋಮೇಶ್ವರನೆಂಬ ನುಡಿಗೆಡೆಯಿಲ್ಲವಾಯಿತ್ತು."

"....ಸಮ್ಯಕ್ ಜ್ಞಾನವಿಲ್ಲದವರಲ್ಲಿ ಲಿಂಗವನರಸಲುಂಟೆ ?
ಸೌರಾಷ್ಟ್ರಸೋಮೇಶ್ವರನ ನಿಜವನರಿಯದವರಲ್ಲಿ ನಿಜಸುಖವನರಿಯಲುಂಟೆ ?"
ಈ ಶರಣ ವಾಣಿಯಲ್ಲಿ ಲಿಂಗ ಯಾವುದೆಂಬುದು ಇನ್ನೂ ಸ್ಫುಟವಾಗಿದೆ. ಸಚ್ಚಿದಾನಂದಸ್ವರೂಪ ಚೈತನ್ಯವೇ ಲಿಂಗವೆಂದು ತಿಳಿದುಬರುತ್ತದೆ. ಸತ್ ಚಿತ್ ಆನಂದ ಸಾಧನೆಯಲ್ಲಿ ನಿಷ್ಠೆ ನಿಜಕ್ಕೂ ಅತ್ಯಗತ್ಯ. ನಿಷ್ಠೆಯ ನಿಲವು: ಒಂದೇ ವಿಶಿಷ್ಟವಸ್ತುವಿನಲ್ಲಿ ಬುದ್ಧಿಯನ್ನಿಟ್ಟುಕೊಂಡಿರುವುದೇ ನಿಷ್ಠೆ. ಹಲವಕ್ಕೆ ಹರಿದಾಡದಂತೆ ಏಕನಿಷ್ಠನಾಗಿರುವುದೇ ನಿಜನಿಷ್ಠೆ. ಇದರಿಂದ ತ್ಯಾಗಾಂಗಶುದ್ಧಿ. ಹಿರಿಯತನ ಸಿದ್ಧಿ. ಹಲವಕ್ಕೆ ಹರಿದಾಡುವುದು ಹಿರಿಯತನಕ್ಕೆ ಹಿರಿದಾದ ಕೇಡು. ಮಾಹೇಶ್ವರತ್ವವು ನಿಷ್ಠೆಯ ಮೇಲೆ ನಿಂತಿರುತ್ತದೆ. ನಿಷ್ಠೆ ವಿಚಾರದೊಡನೆ ರೂಪಿತವಾಗಬೇಕು. ಆಚಾರವೇದಿಕೆಯ ಮೇಲೆ ಪ್ರತಿಷ್ಠಿತವಾಗಿರಬೇಕು. ಬುದ್ಧಿ

ಹಸ್ತದಲ್ಲಿ ಬೆಳೆಯಬೇಕು. ಜ್ಞಾನಶಕ್ತಿ ಸಂಪನ್ನವಾಗಬೇಕು. ಷಡ್ಗುಣೈಶ್ವರ್ಯ ಸಂಪತ್ತುಳ್ಳದ್ದಾಗಿರಬೇಕು. ಈಶತ್ವಕ್ಕೆ ಈಶಾನತ್ವಕ್ಕೆ ಏರುವ ಶಕ್ತಿಸಂಪನ್ನವಾಗಿರಬೇಕು ನಿಷ್ಠೆ! ಸರ್ವಪಾಲನ ಶಕ್ತಿಯೇ. ಈಶತ್ವ. ಸರ್ವವಿದ್ಯಾಪ್ರೇರಕತ್ವವೇ ಈಶಾನತ್ವ. ಇವಾಗಬೇಕಾದರೆ ಗುರುಲಿಂಗದಲ್ಲಿ ಪರಮಪಾವನ ಪ್ರೇಮಸಿದ್ಧಿಯುಂಟಾಗಬೇಕು. ಶುದ್ಧಾಂಗವಾಗಿ ಗಟ್ಟಿಗೊಳ್ಳಬೇಕು, ಅಂದರೆ ತನ್ನ ಮಧುರ ಭಾವ ಗುರುಲಿಂಗಾರ್ಪಣವಾಗಬೇಕು; ಗುರುಲಿಂಗದಲ್ಲಿ ಪರಿಣಾಮಗೊಳ್ಳಬೇಕು: ಗುರುಲಿಂಗವೇ ಪ್ರಾಣವಾಗಬೇಕು. ಅದರ ಧ್ಯಾನವೇ ಅಮೃತಪಾನವಾಗಿ, ಅದರ ಧಾರಣವೇ ಅಮರಸಂಜೀವಿನಿಯಾಗಬೇಕು. ಈ ಬಗೆಯ ನಿಷ್ಠೆನೆಲೆಗೊಂಡಲ್ಲಿ ಮಾಹೇಶ್ವರತ್ವ ಪ್ರಾಪ್ತಿ; ಮಹಾ ಬುದ್ಧಿಯೋಗ ಸಂಪ್ರಾಪ್ತಿ,

''ಗೀತವ ಬಲ್ಲಾತ ಜಾಣನಲ್ಲ. ಮಾತು ಬಲ್ಲಾತ ಜಾಣನಲ್ಲ; ಜಾಣನು ಜಾಣನು: ಅತ ಜಾಣನು—ಲಿಂಗವ ನೆರೆನಂಬಿದಾತ!...

ಲಿಂಗವಿಲ್ಲದೆ ನಡೆವವರ ಲಿಂಗವಿಲ್ಲದೆ ನುಡಿವವರ ಲಿಂಗವಿಲ್ಲದೆ ಉಗುಳ ನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯಾ! ಏನೆಂಬೆ ಏನೆಂಬೆನಯ್ಯಾ? ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ;-ಮುಟ್ಟಲಾಗದು. ಲಿಂಗವಿಲ್ಲದೆ ನುಡಿವ ಶಬ್ದ ಸೂತಕ, ಕೇಳಲಾಗದು. ಲಿಂಗವಿಲ್ಲದೆ ಗಮಿಸಿದೊಡೆ ಆ ನಡೆನುಡಿಗೊಮ್ಮೆ ವ್ರತಗೇಡಿ ಕೂಡಲಸಂಗಮದೇವ,'' "ಲಿಂಗಕ್ಕಲ್ಲದೆ ಮಾಡೆನೀ ಮನವನು" ''ಅಂಗದ ಮೇಲಣ ಲಿಂಗವ ಹಿಂಗಿ ಬಂದ ಸುಖವನಾರಿಗೆ ಅರ್ಪಿಸುವೆ? ಹಿಂಗಲಾಗದು ಲಿಂಗವ!" ಈ ಶರಣವಾಣಿ ಲಿಂಗನಿಷ್ಠೆಗೆ ನಿದರ್ಶನ. ಜಾಗ್ರತ್ ಸ್ವಪ್ನಸುಷುಪ್ತಿಗಳಲ್ಲಿ ಬೇರೊಂದನ್ನು ನೆನೆಯದಂತಿರಬೇಕು. ಗುರುಲಿಂಗಾರ್ಚನ ಮತ್ತು ಪ್ರಸಾದವನ್ನಲ್ಲದೆ ಬೇರೊಂದನ್ನು ರುಚಿಸದಂತಿರಬೇಕು. ಹರಣವಿರುವವನೆವಿಗೂ ಗುರುಚರಣದ ನೆನಹನ್ನು ಮಾಣದೆಂತಿರಬೇಕು.

ನಿಷ್ಠೆಯಿಲ್ಲದ ಜ್ಞಾನ. ನಿಷ್ಠೆಯಿಲ್ಲದ ಕ್ರಿಯೆ ನಿಷ್ಪ್ರಯೋಜನ, ಅಂತೆಯೇ ನಿಷ್ಠೆಯಿಲ್ಲದ ಜೀವನ ನಿರರ್ಥ. ಅಡುಗೆಯಲ್ಲಿ ನೀರಿನ ಸ್ಥಾನ ಯಾವುದೋ ಮಾನವನ ಕ್ರಮವಿಕಾಸದಲ್ಲಿ ನಿಷ್ಠೆಯ ಸ್ಥಾನ ಅಂತಹದು. ನಿಷ್ಠೆ ಆವಿರ್ಭವಿಸದೆ, ನಿಷ್ಠೆ ಸ್ಥಾಯಿಯಾಗದೆ ಮಾನವತೆಗೆ ಕಳೆಯಿಲ್ಲ. ಪ್ರಜ್ಞಾಪ್ರತಿಷ್ಠಾಕಲೆಯುಂಟಾಗುವುದಿಲ್ಲ, ನಿಷ್ಠೆಯಿಂದ ದುರ್ಜೇಯವು ಸುಜೇಯವಾಗುತ್ತದೆ. ಮಾಹೇಶ್ವರನಿಗೆ

ಬೌದ್ಧಿಕನಿಷ್ಠೆಯೊಡನೆ ಗುರುಲಿಂಗನಿಷ್ಠೆ ಅಪರಿಹಾರ್ಯ. ಜಡಪ್ರಕೃತಿಯಲ್ಲಿ ಜ್ಯೋತಿರ್ಮಯಸ್ವರೂಪವನ್ನು ಸಾಕ್ಷಾತ್ಕರಿಸಿಕೊಡುತ್ತದೆ ನಿಷ್ಠೆ; ನಡುವಿರುವ ಅಂತರವನ್ನು ನಿವಾರಿಸಿ ಅನ್ಯೋನ್ಯತೆಯನ್ನುಂಟುಮಾಡುತ್ತದೆ. ಬಾಳನಿಲವೆಯನ್ನು ಮೇಲಕ್ಕೆತ್ತಿ ಹಿಡಿಯುತ್ತದೆ.

"ಪ್ರಣಾಮದರ್ಶನ ಸ್ಪರ್ಶಪೂಜಾದ್ಯೈರ್ನಿಯಮೇನ ಯತ್।
ಶಿವಲಿಂಗಸ್ಯ ಭಜನಂ ಲಿಂಗನಿಷ್ಠೇತಿ ಗೀಯತೇ ॥"—ಸ್ಕಾಂದ

ನಿತ್ಯ ನಿಯಮದಿಂದ ನಿರ್ದಿಷ್ಟವಾದಂತೆ ಶ್ರದ್ಧಾತಿಶಯದಿಂದ ಪೂಜೆ, ಪ್ರಣಾಮ, ದರ್ಶನ. ಸ್ಪರ್ಶನ, ಭಜನ, ಶ್ರವಣಾದಿಗಳನ್ನು ಮಾಡುವುದು 'ಲಿಂಗನಿಷ್ಠೆ'ಯೆಂದು ಸ್ಕಾಂದ ಪುರಾಣದಲ್ಲಿ ಉಕ್ತವಾಗಿದೆ. "ಆರೆ ಭಕ್ತರಾದವರ ನೆರೆಯಲ್ಲಿರಲಾಗದು; ಲಿಂಗ ನಿಷ್ಠೆಯಿಲ್ಲದವರ ಅಂಗಳ ಮುಟ್ಟಲಾಗದು........" ಎಂದು ಚೆನ್ನಬಸವಣ್ಣನವರು ನಿಷ್ಠಾಹೀನರನ್ನು ನಿರಾಕರಿಸಲು ಹೇಳಿದ್ದಾರೆ. ಇಷ್ಟಲಿಂಗವಿರಲು ಬಾಹ್ಯ ಜಡ ಬಹುಲಿಂಗಗಳ ಪೂಜೆಗೆಳಸಿದರೆ ಲಿಂಗ ನಿಷ್ಠೆಗೆ ಹೊರಗೆಂದು ಹೇಳಿದ್ದಾರೆ. ನಿತ್ಯವಿಲ್ಲದ ಭಕ್ತಿ, ನಿಷ್ಠೆಯಿಲ್ಲದ ಪೂಜೆ ಎಷ್ಟು ಕಾಲ ಮಾಡಿದರೂ ಫಲವಿಲ್ಲ, ಪರಿಣಾಮವಿಲ್ಲ; ಭಾವ ನೆಲಗೊಳ್ಳದು, ನಿಜ ನಿಲುಕದು. ಸಹಜ ಸಮನಿಸದು, ಲಿಂಗ ತಂದೆಗೆ ಸಮ್ಮತವಾಗದು. ಮಾಹೇಶ್ವರತ್ವ ಮೈಗೂಡದು. ಆದ ಕಾರಣ ಆತ್ಮ ಸಾಕ್ಷಾತ್ಕಾರವನ್ನು ಬಯಸುವ ಮಾಹೇಶ್ವರನು ಗುರುಲಿಂಗ ಜಂಗಮರಲ್ಲಿ ನೆರೆ ನಂಬುಗೆ (ನಿಷ್ಠೆ)ಯಿರಬೇಕು. "ನೆರೆ ನಂಬೋ. ನೆರೆ ನಂಬೋ ಗುರು-ಲಿಂಗ-ಜಂಗಮರ!........ ನೆರೆ ನಂಬಿದೆಯಾದಡೆ ತನ್ನನೀವ ಕೂಡಲಚೆನ್ನಸಂಗಮದೇವ." ಎಂದಿದೆ ಚೆನ್ನಬಸವಣ್ಣನ ವಚನ. ನೆರೆನಂಬದೆ ಮಾಹೇಶ್ವರನಾಗನು. ಗುರು ಕಾರುಣ್ಯದಿಂದ ಲಿಂಗ ಧಾರಣವಾದರೆ ಭಕ್ತ ಧರಿಸಿದ ಲಿಂಗದಲ್ಲಿ ಧ್ಯೇಯ ರೂಪ ಲಿಂಗದಲ್ಲಿ ಚಿತ್ತವಿಟ್ಟು ಚಿಂತನ (ಧ್ಯಾನ) ಮಾಡುವಾತನೇ ಮಾಹೇಶ್ವರನು. ಲಿಂಗವೇ ಅಂಗವೆಂದು. ಧ್ಯಾನ ನಿಷ್ಠನಾದವನಿಗೆ ಲಿಂಗ ಜ್ಞಾನವುಂಟಾಗುತ್ತದೆ.

ಅಸ್ಯ ಮಾಹೇಶ್ವರಸ್ಯೋಕ್ತಂ ಲಿಂಗನಿಷ್ಠಾ ಮಹಾಸ್ಥಲಂ
ಪ್ರಾಣಾತ್ಯಯೇಽಪಿ ಸಂಪನ್ನೇ ಯದತ್ಯಾಜ್ಯಂ ವಿಧೀಯತೇ ।

ಅಪಗಚ್ಛತು ಸರ್ವಸ್ವಂ ಶಿರಶ್ಛೇದನಮಸ್ತುವಾ
ಮಾಹೇಶ್ವರೋ ನ ಮುಂಚೇತ ಲಿಂಗಪೂಜಾಮಹಾವ್ರತಂ॥"

ಪ್ರಾಣ ಹೋಗುವ ಪ್ರಸಂಗ ಪ್ರಾಪ್ತವಾದರೂ ಕೈಬಿಡದೆ ನಡೆಸುವುದೇ ಲಿಂಗನಿಷ್ಠೆ. ಇದು ಮಹಾಸ್ಥಲವೆನಿಸಿದೆ. ಇದನ್ನು ಮಾಹೇಶ್ವರನು ತಪ್ಪದೆ ಆಚರಿಸಬೇಕು. ತನ್ನ ಸರ್ವಸ್ವವು ಅಳಿದುಹೋದರೂ ಶಿರಸ್ಸನ್ನು ಕತ್ತರಿಸಿದರೂ ಮಾಹೇಶ್ವರನು ಮಾತ್ರ ಲಿಂಗಪೂಜಾ ಮಹಾವ್ರತವನ್ನು ಬಿಡಬಾರದು.

ಲಿಂಗನಿಷ್ಠೆ ಅದೊಂದು ಮಹಾಸ್ಥಲ. ಅದು ಮಾಹೇಶ್ವರನಿಗೆ ಮೀಸಲಾದ ಮಹಾಸ್ಥಲ. ಮಹಾ ಎಂಬ ಮಾತು ಮನನೀಯವಾದುದು. ಜೀವನವು ಲಿಂಗನಿಷ್ಠವಾಗಿದೆ, ಲಿಂಗವೆಂದರೆ ಚೈತನ್ಯ ಅಥವಾ ಆತ್ಮ, ಅದರಲ್ಲಿಯೇ ಇರುವುದು ಅದರಲ್ಲಿಯೇ ಲೀನವಾಗುವುದು. ಆದ್ದರಿಂದ ಅದು ಲಿಂಗನಿಷ್ಠೆಯ 'ಮಹಾಸ್ಥಲ'ವೆಂದು ಸಾರ್ಥಕನಾಮವುಳ್ಳುದಾಗಿದೆ.

ಸಾಮಾನ್ಯವಾಗಿ ಸರ್ವರದು ಲಿಂಗನಿಷ್ಠ ಜೀವನವಾಗಿದ್ದರೂ ಅರಿವಿನಾಚರಣೆಯಲ್ಲಿ ಅದು ಬಂದಿರುವುದಿಲ್ಲ; ಆತ್ಮಶಕ್ತಿ ಅಪಾಮಾರ್ಗದಲ್ಲಿ ವ್ಯಯವಾಗದಂತೆ ಎಚ್ಚರಿಕೆಯನ್ನು ತಳೆಯುವುದಿಲ್ಲ. ಮಾಹೇಶ್ವರನು ಮಾತ್ರ ಲಿಂಗನಿಷ್ಠೆಯ ನಿಜಾಚರಣೆಯ ಮಾರ್ಗದಿಂದ ಕದಲುವಂತಿಲ್ಲ. ಕದಲಬಾರದು; ಕದಲಿದರೆ ಮಾಹೇಶ್ವರತ್ವ ಪ್ರಾಪ್ತಿಯಿಲ್ಲ.

ಲಿಂಗದೊಳಿದ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಿಂ। ಲಿಂಗದಿನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತಮಾ । ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ। ಲಿಂಗನಿಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ॥ 'ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳ ಕೋಡಿ ಮರಿಯುತ್ತ ನೋಟವೇ ಪ್ರಾಣವಾಗಿ ಎಂದಿಪ್ಪೆನೋ ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ? ಕೂಡಲಸಂಗಮದೇವಾ ಲಿಂಗ, ಲಿಂಗ ಎನ್ನುತ್ತ !' 'ಆಲಿಕಲ್ಲು ಹರಳಿನಂತೆ, ಅರಗಿನ ಪುತ್ತಳಿಯಂತೆ ತನುಕರಗಿ ನೆರೆವ ಸುಖವ ನಾನೇನೆಂಬೆ ? ಕಡೆಗೋಡಿವರಿದುವೆನಗಯ್ಯಾ ನಯನದ ಸುಖ ಜಲಂಗಳು ! ನಮ್ಮ ಕೂಡಲಸಂಗಮದೇವರ ಮುಟ್ಟಿ ನೆರೆವ ಸುಖವ ನಾನಾರಿಗೇನೆಂಬೆ ?"

ಲಿಂಗ ನಿಷ್ಟೆಯ ಕುರುಹಿಗೆ ಈ ಮೂರು ಮಾತು ಸಾಕೆನಿಸುತ್ತದೆ. ಈ ಸ್ಥಿತಿಯಲ್ಲಿರುವುದು ಮಹಾಸ್ಥಲವಲ್ಲದೆ ಮತ್ತೇನು ? ಸಚ್ಚಿದಾನಂದ ಸ್ವರೂಪ ನಾಗಿರುವುದಕ್ಕಿಂತ ಮತ್ತೊಂದು ಮಹಾಸ್ಥಲವಿಲ್ಲ. ಸಚ್ಚಿದಾನಂದಸ್ವರೂಪ ಸಾಕ್ಷಾತ್ಕಾರಕ್ಕಿಂತ ಬೇರೆ ಹೆಚ್ಚಿನ ಹೊಲಬಿಲ್ಲ ಮಾಹೇಶ್ವರನಿಗೆ. ಪ್ರಾಣಗಳನ್ನು ಹೊತ್ತಿರುವುದು ಅದಕ್ಕಾಗಿಯೇ ! ಅದಕ್ಕಾಗಿ ಪ್ರಾಣಗಳನ್ನು ತೆತ್ತರೂ ತಪ್ಪಿಲ್ಲ. ಅದಕ್ಕಿಂತ ಘನವಿಲ್ಲ. ಆದರಿಂದಾಗಿ ಮಾಹೇಶ್ವರನು ಲಿಂಗಪೂಜೆಯ ಮಹಾವ್ರತವನ್ನು ಆಮರಣವೂ ಬಿಡಬಾರದು. 'ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಪಥವನರಿಯದ ಶರಣರು ಸರ್ಪದ ಹೆಡೆಯ ಮಾಣಿಕದಂತಿಪ್ಪರು, ಭೂಷಣರಾಗಿ; ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು. ಕೂಡಲಸಂಗಮದೇವಾ, ನಿಮ್ಮ ಶರಣರು,'

ಲಿಂಗಪೂಜಾ ಮಹಾವ್ರತದ ಮಹಾಫಲವಿದು. ಇಂತಹ ಲಿಂಗಪೂಜಾ ಮಹಾವ್ರತಕ್ಕೆ ಲಿಂಗನಿಷ್ಠೆಯೇ ಜೀವಾಳ, ಲಿಂಗ ನಿಷ್ಠೆಯಿಲ್ಲದ ಪೂಜೆ ನೀರ ಕಡೆದಂತೆ, ಮಳಲ ಹೊಸದಂತೆ, ಬಿದಿರೆಲೆಯ ಮೆಲಿದಂತೆ ನಿಷ್ಪ್ರಯೋಜನ, ನೀರಸ. ಎಳ್ಳಿಲ್ಲದೆ ಗಾಣವನಾಡಿದಂತೆ ವ್ಯರ್ಥ ಶ್ರಮ. 'ನಿಮ್ಮ ನಂಬಿಯೂ ನಂಬದ ಡಂಭಕರಿಗೆ ಮಳಲಗೋಡೆಯನಿಕ್ಕಿ ನೀರಿನಲ್ಲಿ ತೊಳೆದಂತಾಯಿತ್ತು.' ಇದರಿಂದಾಗಿ ನಿಷ್ಠೆಯಿಂದ ನಿಜಲಿಂಗ ಪೂಜೆಯನ್ನು ಮಾಡಿ ಪರಿಣಾಮಿಸಬೇಕು. ನಿಷ್ಠೆಯಲ್ಲಿ ಮನದೊಲವು, ಹರಿವ ನದಿಯ ನೀರಿನಂತೆ ಬಿಡುವಿಲ್ಲದೆ ಹೊಂದಿಕೊಂಡಿರಬೇಕು. 'ಸದಾಶಿವನೆಂಬ ಲಿಂಗವ ನೆರೆ ನಂಬುವುದು, ನಂಬಲೊಡನೆ ನೀ ವಿಜಯ ಕಂಡಣ್ಣಾ !....' ಎಂಬ ಮಾತನ್ನು ನಂಬಿ ಲಿಂಗನಿಷ್ಠೆಯನ್ನು ಲಿಂಗ ಪೂಜೆಯನ್ನು ಬಿಡದೆ ನಡೆಯಿಸಿಕೊಂಡು ಬರಬೇಕು. ಲಿಂಗಪೂಜೆಯೇ ತನ್ನ ಬಾಳಿನ ಸರ್ವಸ್ವವಾಗಬೇಕು. ಲಿಂಗಪೂಜಾ ಮಹಾವ್ರತವೇ ಮಹಾಪರ್ವವಾಗಿ ಪರಿಣಮಿಸಬೇಕು.

ಲಿಂಗಪೂಜೆಯೇ ಶಿವಯೋಗ. ಲಿಂಗಪೂಜೆಯಲ್ಲಿ ಶಿವಭಕ್ತಿ ಶಿವಜ್ಞಾನ. ಶಿವಧ್ಯಾನ ಶಿವವ್ರತಗಳು ಸಮಾವೇಶಗೊಂಡಿವೆ, ಶಿವಯೋಗ ರೂಪ ಲಿಂಗ ಪೂಜೆಯು ಮಂತ್ರ, ಲಯ, ಹಠ, ರಾಜ–ಯೋಗಗಳಿಗಿಂತ ಶ್ರೇಷ್ಠವಾದುದು.

ಅದ್ದರಿಂದ ಇದು "ಮಹಾವ್ರತ'ವೆಂದು ಜಗದ್ಗುರು ರೇಣುಕರ ನಿರೂಪಣೆ. ಅಷ್ಟಾಂಗಯೋಗ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಇವೆಲ್ಲವೂ ಶಿವ ಪೂಜಾ ಮಹಾವ್ರತದಲ್ಲಿ ಅಡಕವಾಗಿರುತ್ತವೆ. ಮಂತ್ರಾನುಷ್ಠಾನದಿಂದ ಮಂತ್ರ ಯೋಗವೂ, ಮನನಿಶ್ಚಲವಾಗಿ ನಿಷ್ಠೆಗೊಳಗಾಗುವುದರಿಂದ ಲಯಯೋಗವೂ, ಜೀವ ನಿರ್ಮಲವಾಗಿ ಶಿವಲಕ್ಷ್ಯವುಳ್ಳದಾಗಿರುವುದರಿಂದ ರಾಜಯೋಗವೂ ಶಿವ ಪೂಜಾ ಮಹಾವ್ರತದಲ್ಲಿ ಸಮರಸವಾಗಿರುತ್ತದೆ.

ಲಿಂಗಪೂಜಾಮಕೃತ್ವಾತು ಯೇ ನ ಜಾನಂತಿ ಮಾನವಾಃ
ತೇಷಾಂ ಮಹಾತ್ಮನಾಂ ಹಸ್ತೇ ಮೋಕ್ಷ ಲಕ್ಷ್ಮೀರುಪಸ್ಥಿತಾ ।
ಕಿಮನ್ಯೈಃ ಧರ್ಮಕಲಿಲೈಃ ಕೀಕಷಾರ್ಥ ಪ್ರದಾಯಿಭಿಃ
ಸಾಕ್ಷಾನ್ಮೋಕ್ಷಪ್ರದಃ ಶಂಭೋರ್ಧರ್ಮೋ ಲಿಂಗಾರ್ಚಸಾತ್ಮಕಃ ॥"

ಯಾರು ನಿಷ್ಠೆಯಿಂದ ಲಿಂಗಪೂಜೆಯನ್ನು ಮಾಡದೆ ಆರೋಗಣೆಯನ್ನು ಮಾಡುವದಿಲ್ಲವೋ ಅವರು ಮಾನವರಲ್ಲ, ಮಹಾನುಭಾವರು. ಅವರಿಗೆ ಮೋಕ್ಷ ಸಂಪತ್ತು ಹಸ್ತಗತವಾಗಿರುತ್ತದೆ. ಲಿಂಗಪೂಜೆ ಅದೊಂದು ಸತ್ಯಶುದ್ಧ ಕಾಯಕ. ಅದನ್ನು ಮಾಡದೆ ಉಣ್ಣುವ ಹಕ್ಕಿಲ್ಲ. ಮಾಡಿ ನೀಡಬೇಕು. ನೀಡಿ ಪಡೆಯಬೇಕು.

ಲಿಂಗ ಪೂಜೆಗೆ ಹೊರತಾದ ಧರ್ಮಗಳು ಮಹಾವ್ರತಗಳಲ್ಲ. ಮಹಾ ಫಲದಾಯಕಗಳಲ್ಲ. ನೇರವಾಗಿ ತಾವೇ ಮೋಕ್ಷ ಪ್ರದಗಳಲ್ಲ. ಅದೇ ಲಿಂಗಾ ರ್ಚನ ಧರ್ಮವು ಸಾಕ್ಷಾತ್ತಾಗಿ ಮೋಕ್ಷವನ್ನು ಕೊಡತಕ್ಕುದು. ಜ್ಞಾನ, ಭಕ್ತಿ, ಧ್ಯಾನ, ವ್ರತಗಳಿಂದ ಕೂಡಿದ ಲಿಂಗ ಪೂಜೆಗೆ ಆ ಮಹಾ ಶಕ್ತಿಯಿದೆ.

ದೇಹಮೋಹದ ಮಾತು ದೂರ ಉಳಿಯಿತು. ಅಂಗ ಪ್ರೇಮವೂ ಅರತು ಹೋಗಬೇಕು. ಲಿಂಗ ಪ್ರೇಮವು ಬಲಿತು ಬರಬೇಕು. ಲಿಂಗ ನಿಷ್ಠೆ ಕರಿಗೊಳ್ಳದೆ ಲಿಂಗಪೂಜಾ ಮಹಾವ್ರತ ನಡೆಯದು. "ತನುಗುಣ, ಮನ ಗುಣ, ಪ್ರಾಣಗುಣಾದಿಗಳಲ್ಲಿ ಹುದುಗಿದಡೆ, ಪಂಚೇಂದ್ರಿಯ ಅರಿಷಡ್ವರ್ಗಂ ಗಳೊಳು ಮನಕೂರ್ತು ಬೆರಸಿದಲ್ಲಿ ಆ ಮನದ ಹಸ್ತದಲ್ಲಿ ಲಿಂಗವಿಲ್ಲ; ಲಿಂಗವಿಲ್ಲ ವಾಗಿ ಭಕ್ತಿಯಿಲ್ಲ. ಭಕ್ತಿಯಿಲ್ಲವಾಗಿ ವಿವೇಕವಿಲ್ಲ; ವಿವೇಕವಿಲ್ಲವಾಗಿ ಅರಿವಿಲ್ಲ; ಅರಿವಿಲ್ಲವಾಗಿ ಸುಜ್ಞಾನವಿಲ್ಲ, ಸುಜ್ಞಾನವಿಲ್ಲವಾಗಿ ಪರಮಾರ್ಥ ಘಟಿಸದು,

ಇವೆಲ್ಲವ ಕಳೆದುಳಿದಲ್ಲಿ ಮನದ ಹಸ್ತದಲ್ಲಿ ಲಿಂಗವಿದ್ದಿತ್ತು. ಲಿಂಗದಲ್ಲಿ ಮನ ಸಂದಿತ್ತು. ಮನಸಂದಲ್ಲಿ ಸೌರಾಷ್ಟ್ರ ಸೋಮೇಶ್ವರನು ಸುಸ್ಥಿರವಾದನು.'

ಇಂತಾಗಿ ಲಿಂಗವ ಪೂಜಿಸಬೇಕು. ಲಿಂಗಪೂಜೆಯಲ್ಲಿ ಲಿಂಗಕ್ಕೆ ತನ್ನನ್ನೇ ಸರ್ವಭಾವದಿಂದ ಸಮರ್ಪಿಸಬೇಕು. ''ಕಾಯವೆಂಬ ಘಟಕ್ಕೆ ಚೈತನ್ಯವೇ ಸುಯಿಧಾನ, ಸಮತೆಯೆಂಬ ಜಲ, ಕರಣಾದಿಗಳೇ ತ್ರಪಣ, ಜ್ಞಾನವೆಂಬ ಅಗ್ನಿಯನಿಕ್ಕಿ ಮತಿಯೆಂಬ ಸಟ್ಟುಗದಲ್ಲಿ ಘಟ್ಟಿಸಿ ಪಾಕಕ್ಕೆತಂದು, ಭಾವದಲ್ಲಿ ಕುಳ್ಳಿರಿಸಿ, ಪರಿಣಾಮದೋಗರವ ನೀಡಿದರೆ ಕೂಡಲಸಂಗಮಂಗೆ ಆರೋಗಣೆಯಾಯಿತ್ತು,"

ಹೀಗೆ ಲಿಂಗಪೂಜೆಯಲ್ಲಿ ಪ್ರಥಮದಲ್ಲಿ ತನ್ನ ಪೂರ್ಣ ಪರಿಣಾಮದೋಗರವನ್ನು ಲಿಂಗಕ್ಕೆ ಆರೋಗಿಸಬೇಕು. ಬಳಿಕ ಆ ಲಿಂಗಪ್ರಸಾದವನ್ನು ತಾನು ಆರೋಗಿಸಬೇಕು. ಅಂಥವರಿಗೆ ಸಮರಸಸುಖ ಸಮನಿಸುತ್ತದೆ; ಇಲ್ಲದಿದ್ದರಿಲ್ಲ.

''ಲಿಂಗವ ಪೂಜಿಸಿ ಫಲವೇನಯ್ಯ? ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ ? ಲಿಂಗವ ಪೂಜಿಸಿ ಫಲವೇನಯ್ಯ ? ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ ?''

ನಿಷ್ಠೆಯಿಂದೊಡಗೂಡಿದ ಲಿಂಗಪೂಜೆಯಲ್ಲಿ ಸಮರತಿ, ಸಮಕಳೆ, ಸಮಸುಖಗಳುಂಟು. ಬೇರೆ ಧರ್ಮಗಳಲ್ಲಿ ಈ ಯೋಗವಿಲ್ಲ. ಅವೆಲ್ಲ ಪರಂಪರೆಯಲ್ಲಿ ಸಮಸುಖಕ್ಕೆ ಕರೆದೊಯ್ಯುವವು. ಲಿಂಗಪೂಜಾಮಹಾವ್ರತವಾದರೂ ಸಾಕ್ಷಾತ್ತಾಗಿ ಸಮಕಳೆ ಸಮಸುಖಕ್ಕೆ ಕರೆದೊಯ್ದು ಕರಿಗೊಳಿಸುವ ಕಲಿತನವುಳ್ಳದ್ದು. ಲಿಂಗವನ್ನು ಪೂಜಿಸುವ ಅಂಗನು ಲಿಂಗವನ್ನು ನೋಡುತ್ತ ಲಿಂಗದೊಡನೆ ಮಂತ್ರಮಯವಾಗಿ ಮಾತಾಡುತ್ತ ಲಿಂಗವನ್ನೇ ನೆನೆಯುತ್ತ ಭಾವಿಸುತ್ತ ಲಿಂಗಾಕಾರವೇ ತಾನಾಗುವನು, ಲಿಂಗವೇ ತಾನಾಗುವನು

''ಶುದ್ಧಸ್ಫಟಿಕ ಸಂಕಾಶಃ ಶುದ್ಧ ಚಾಮೀಕರದ್ಯುತಿಃ ।
ಶುದ್ಧದೇಹೋ ಭವೇದ್ದೇವಿ ನರೋ ಲಿಂಗಾರ್ಚನೇ ರತಃ॥ -ಶಿವಾಗಮ"
''ಕ್ರಮಾನ್ಮೋಕ್ಷಂಚ ಗಚ್ಛಂತಿ ಯೇ ನರಾ ಲಿಂಗಮಾಶ್ರಿತಾಃ। ''-ಲೈಂಗ್ಯ
''ಮೂರ್ಖೋ ವಾ ಪಂಡಿತೋ ವಾಪಿ ಬ್ರಾಹ್ಮಣೋವಾನ್ಯಏವ ವಾ।
ಶಿವಲಿಂಗಾರ್ಚನಾ ನಿಷ್ಠಃ ಶಿವವನ್ನಾನ್ಯ ಏವ ಸಃ॥"-ಶಿವಧರ್ಮೋತ್ತರ
''ಯಶ್ಚೈಕಾಂತೇನ ಮನಸಾ ಶಿವಲಿಂಗೈಕತತ್ಪರಃ ।

ಲಿಂಗೇ ವಿಲೀನಸರ್ವಾರ್ಥಃ ಶಿವ ಏವ ನ ಸಂಶಯಃ ॥''-ಸ್ಕಾಂದ

"ಶಿವಾರ್ಚನವಿಹೀನೋ ಯಃ ಪಶುರೇವ ನ ಸಂಶಯಃ ।
ಸ ತು ಸಂಸಾರಚಕ್ರೇಽಸ್ಮಿನ್ನಜಸ್ರಂ ಪರಿವರ್ತತೇ॥ ''

—ಶಿವಯೋಗ ಪ್ರದೀಪಿಕೆ

ಈ ಎಲ್ಲ ಪುರಾತನೋಕ್ತಿಗಳು ಶಿವಲಿಂಗಪೂಜೆಯಿಂದ ಸಾಕ್ಷಾನ್ಮೋಕ್ಷವಾಗುತ್ತದೆಂಬುದಕ್ಕೆ ಉಪಷ್ಟಂಬಕಗಳಾಗಿದ್ದಾವೆ. ತ್ರಿವಿಧ ಲಿಂಗಪೂಜೆಯನ್ನು ತ್ರಿಕಾಲದಲ್ಲಿ ಮಾಡುವುದೇ ಮಹಾವ್ರತ.

"ಅರ್ಪಿತೇನಾನ್ನಪಾನೇನ ಲಿಂಗೇ ನಿಯಮ ಪೂಜಿತೇ ।
ಯೇ ದೇಹವೃತ್ತಿಂ ಕುರ್ವಂತಿ ಮಹಾ ಮಾಹೇಶ್ವರಾ ಹಿ ತೇ ॥"

ಲಿಂಗಾರ್ಚನ ಫಲವನ್ನು ನಿರೂಪಿಸಿದ ಮೇಲೆ ಲಿಂಗಾರ್ಪಣವನ್ನು ಲಿಂಗಾರ್ಪಣ ಪ್ರಸಾದ ಸ್ವೀಕಾರ ಫಲವನ್ನು ಪರಿವಿಡಿದು ಪ್ರತಿಪಾದಿಸುತ್ತಿದ್ದಾರೆ.

ಗುರೂಕ್ತವಾದ ಪೂಜಾವಿಧಾನದಂತೆ ಪರಮ ಪ್ರೇಮದಿಂದ ಲಿಂಗವನ್ನು ಪೂಜಿಸಿದ ಬಳಿಕ ಅಣಿಯಾದ ಅನ್ನಪಾನಾದಿಗಳನ್ನು ಸ-ಬುದ್ಧಿ ಹಸ್ತದಿಂದ ಲಿಂಗಕ್ಕೆ ಅರ್ಪಿಸಬೇಕು. ಅವಧಾನದಿಂದ ಅರ್ಪಿಸಿದ ಪದಾರ್ಥವು ಪ್ರಸಾದವಾಗುತ್ತದೆ. ಆ ಪ್ರಸಾದವನ್ನು ಪ್ರಸನ್ನ ಮನಸ್ಕನಾಗಿ ತಾನು ಆರೋಗಿಸಬೇಕು. ಆರೋಗಿಸಿ ಪ್ರಸನ್ನ ಕಾಯನಾಗಬೇಕು. ಪ್ರಸನ್ನಕಾರ್ಯ ಪ್ರವೃತ್ತನಾಗಬೇಕು. ಅಂದರೆ ಸತ್ಯಶುದ್ಧ ಕಾಯಕನಿರತನಾಗಿರಬೇಕು. ಅಂಥವನು ಮಹಾಮಾಹೇಶ್ವರನೆನಿಸುತ್ತಾನೆ.

"ಅಧರ ತಾಗುವ ರುಚಿಯ, ಉದರ ತಾಗುವ ಸುಖವ,
ಲಿಂಗಾರ್ಪಿತವಿಲ್ಲದೆ ಕೊಂಡರೆ ಕಿಲ್ಬಿಷ-ನೋಡಾ !
ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು ಮೊದಲಾದ
ಸರ್ವೇಂದ್ರಿಯಂಗಳಲ್ಲಿ ಮುಟ್ಟಿದ ಸಕಲ ಪದಾರ್ಥಂಗಳನು
ಲಿಂಗಕ್ಕೆ ಕೊಟ್ಟು ಕೊಂಡರೆ, ಅದು ಮಹಾ ಪ್ರಸಾದವಯ್ಯಾ,
ಕೂಡಲ ಸಂಗಮದೇವಾ !"

ಲಿಂಗ ಮಹಾಪ್ರಸಾದವನ್ನು ಸ್ವೀಕರಿಸಿದ ತನು ಲಿಂಗಕಾಯವಾಗಿ ಪರಿಣಮಿಸುತ್ತದೆ. ಅಂಗಗುಣಗಳೆಲ್ಲ ಕಳಚಿ ಲಿಂಗಗುಣಗಳು ಅನುಗೂಡುತ್ತವೆ. ಲಿಂಗಕಳೆಗಳು ಮೈಗೂಡುತ್ತವೆ, ದೇಹ ಮೋಹ, ದೇಹಲೋಭ, ದೇಹ ಮದಗಳು ದೂರಾಗುತ್ತವೆ. ಅಲ್ಪಗುಣಗಳೆಲ್ಲ ಅಳಿದು ಅನಲ್ಪ ಗುಣ ಧರ್ಮಗಳು ಅಳವಡುತ್ತವೆ. 'ಲಿಂಗಪ್ರಸಾದ ಸೋಂಕಿನಿಂದ ಇರುಹೆ ರುದ್ರವಾಯಿತು.' ಲಿಂಗ ಪ್ರಸಾದ ಸೋಂಕಿನಿಂದ ಬಿಬ್ಬಿಬಾಚಯ್ಯ ಸ್ವಯಲಿಂಗವಾದ. ಲಿಂಗ ಪ್ರಸಾದ ಸೋಂಕಿನಿಂದ ವಿಷವನಮೃತವ ಮಾಡಿ ಮೆರೆದ ಬಸವಣ್ಣ...... ಕೂಡಲ ಚೆನ್ನಸಂಗಯ್ಯಾ, ನಿಮ್ಮ ಪ್ರಸಾದದ ಮಹಿಮೆ ವೇದ ವಾಕ್ಯವ ಮೀರಿದುದ ನಾನೇನೆಂಬೆ ?"

"ತನುವಮುಟ್ಟಿಹ ಮನ, ಮನವ ಮುಟ್ಟಿದ ತನು; ತನುಮನವ ಮುಟ್ಟಿಹ ಸರ್ವ ಕರಣಂಗಳ ನೋಡಾ ! ಕಾಯದ ಕರಣಂಗಳ ಮುಟ್ಟಿಹ ಜೀವನ ನೋಡಾ ! ಕಾಯ ಜೀವ ಕರಣಂಗಳ ಶುದ್ಧ ಪರಮಾತ್ಮ ಲಿಂಗದಲ್ಲಿ ಮುಟ್ಟಿಸಬಲ್ಲರೆ ಅದೇ ಅರ್ಪಿತ; ಅದೇ ಪ್ರಸಾದ ನೋಡಾ ! ಆ ಪ್ರಸಾದ ಎಂದೂ ಪ್ರಳಯ ವಿರಹಿತ ನೋಡಾ ! ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ !"

ಜಗದ್ಗುರು ರೇಣುಕವಾಣಿಗೆ ಈ ವಚನಗಳು ಕಿರಣಗಳಂತಿವೆ. ದೇವ ಅಭಿಪ್ರಾಯ ಪ್ರಕಾಶವನ್ನು ಹೊರಸೂಸಿವೆ. ಲೈಂಗ್ಯ ಪುರಾಣವು ಸಹ ಇದೇ ಅಭಿಪ್ರಾಯವನ್ನು ಹೀಗೆ ಹೇಳಿದೆ :

"ಅರ್ಥ ಪ್ರಾಣಾಭಿಮಾನೇಷು ವಂಚನಂ ನೈವ ಕುತ್ರಚಿತ್ ।
ಯಥಾ ಭಾವಸ್ತಥಾ ದೇವಶ್ಚರೋಚ್ಛಿಷ್ಟಂ ವಿಶೇಷತಃ॥
ಸ್ವೇಷ್ಟಲಿಂಗಾಯ ದತ್ವಾತು ಪುನಃ ಸೇವೇತ ಭಕ್ತಿಮಾನ್।
ಸ ಏವ ಷಟ್‌ಸ್ಥಲಬ್ರಹ್ಮೀ ಪ್ರಸಾದೀ ಸ್ಯಾನ್ಮಹೇಶ್ವರಃ ॥"

"ಚಿನ್ಮಯೇ ಶಾಂಕರೇ ಲಿಂಗೇ ಸ್ಥಿರಂ ಯೇಷಾಂ ಮನಸ್ಸದಾ ।
ವಿಮುಕ್ತೇತರ ಸರ್ವಾರ್ಥಂ ತೇ ಶಿವಾ ನಾತ್ರಸಂಶಯಃ ॥
ಲಿಂಗೇ ಯಸ್ಯ ಮನೋ ಲೀನಂ ಲಿಂಗಸ್ತುತಿ ಪರಾಚ ವಾಕ್ ।
ಲಿಂಗಾರ್ಚನಪರಾ ಹಸ್ತೌ ಸ ರುದ್ರೋ ನಾತ್ರ ಸಂಶಯಃ ॥"

ಅರ್ಪಣ ವಿಧಾನವಾದ ನಂತರ ಅನುಭವಕ್ಕೆ ಅಳವಡಿಸಿಕೊಳ್ಳುವ ಅಂತಿಮ ಕ್ರಮವನ್ನು ಆತ್ಮಾನುಭಾವಿ ಶ್ರೀ ರೇಣುಕರು ಪ್ರಸ್ತಾಪಿಸಿದ್ದಾರೆ.

ಅನುಭವಕ್ಕೆ ಬರಬೇಕಾದರೆ ಅನನ್ಯಮನಸ್ಸು ಆಗತ್ಯ. ಅನುಭವ ಪಡೆಯ ಲಿಕ್ಕೆ ಅನನ್ಯಮನಸ್ಸೇ ಮೂಲ. ತ್ಯಾಗಾಂಗ-ಭೋಗಾಂಗಗಳೆರಡರ ಬೀಜವಾಗಿದೆ ಮನ. ಅಂತಹ ಮನಸ್ಸು ಬೇರೆ ಎಲ್ಲ ಬಗೆಯ ಭೋಗ ಸಾಧನಗಳನ್ನು ಸ್ವರ್ಗಾದಿ ಫಲಗಳನ್ನು ಅರ್ಥಾಭಿಲಾಷೆಯನ್ನು ಬಿಟ್ಟು ಸಂವಿನ್ಮಯವೂ ಸುಖ ಮಯವೂ ಆದ ಲಿಂಗದಲ್ಲಿ ನೆರೆನಂಬಿ ನೆಲೆಗೊಂಡರೆ ಅದೇ ನಿಜವಾದ ಅಪ ರೋಕ್ಷಾನುಭವ. ಅದುಳ್ಳವನೇ ಈ ಲೋಕದ ಪ್ರತ್ಯಕ್ಷ ಪರಮ ಶಿವಸ್ವರೂಪ. ಇದರಲ್ಲಿ ಯಾವ ಸಂದೇಹವಿಲ್ಲ.

ಲಿಂಗದಲ್ಲಿ ಲೀನವಾದ ಮನವುಳ್ಳ ಮಹಾನುಭಾವನ ವಾಣಿ ಯಾವಾಗಲೂ ಲಿಂಗಸ್ತುತಿಯಲ್ಲಿಯೇ ನಿರತವಾಗಿರುತ್ತದೆ. ಕೈಗಳೆರಡೂ ಲಿಂಗಾರ್ಚನೆಯಲ್ಲಿಯೇ ನಿರತವಾಗಿರುತ್ತವೆ.

ಹೀಗೆ ತ್ರಿಕರಣಗಳು ಲಿಂಗದಲ್ಲಿ ವಿಶ್ರಾಂತಿಗೊಂಡು ನಿಷ್ಪತ್ತಿಯಾದ ಬಳಿಕ ಆತನು ರುದ್ರರೂಪನಲ್ಲದೆ ಮತ್ತೇನಾದಾನು ? ಲಿಂಗಪ್ರೇಮ ಬೆಳೆದ ಬಳಿಕ ಅಂಗವಿಕಾರಕ್ಕೆಂಬಿರುವುದಿಲ್ಲ.

"ದ್ರಷ್ಟುಂ ರೂಪಾಂತರಂ ತಸ್ಯ ವೀಕ್ಷಣೇ ನ ವಿಚಕ್ಷಣೇ ।
ರಸಯೇತ್ತಸ್ಯ ರಸನಾ ಹರನಾಮಾಕ್ಷರಾಮೃತಂ ॥
ಶಿವಾಂಘ್ರಿಕಮಲಾಮೋದಾನ್ನಾನ್ಯತ್ತದ್ ಘ್ರಾಣಮಿಚ್ಛತಿ ।
ಕರೌ ತತ್ಕೌತುಕಕರೌ ಮನುತೇ ನಾಪರಂ ಮನಃ ॥"

ಎಂದು ಲೈಂಗ್ಯ ಪುರಾಣ ವಚನವು ಇದನ್ನೇ ಸಮರ್ಥಿಸಿದೆ.

"ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿಗಳು
ತುಂಬಿದ ಬಳಿಕ ಕೇಳಲಿಲ್ಲ. ಕೈಗಳು ತುಂಬಿದ ಬಳಿಕ
ಪೂಜಿಸಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ.
ಮಹಂತ ಕೂಡಲ ಸಂಗಮದೇವನ."

"ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ. ಲಿಂಗಾನುಭವದಿಂದ ನಿಮ್ಮ ಕಂಡೆನ್ನ ಮರೆದೆ ಕೂಡಲ ಸಂಗಮದೇವಾ."

ಮನಸ್ಸು ಯಾವುದರಲ್ಲಿ ಲೀನವಾಗುತ್ತದೆಯೋ ಅದನ್ನೇ ಅದು ಅನುಭವಿಸುತ್ತದೆ. ಇದನ್ನನುಸರಿಸಿ ಚಿದಾನಂದ ರೂಪ ಲಿಂಗದಲ್ಲಿ ಸ್ಥಿರವಾದ ಮನಸ್ಸು ಮತ್ತೊಂದನ್ನು ಬಯಸುವುದಿಲ್ಲ. ಮತ್ತೊಂದನ್ನು ನೆನೆಯುವುದಿಲ್ಲ. ಮತ್ತೊಂದನ್ನು ಸ್ತುತಿಸುವುದಿಲ್ಲ. ಮತ್ತೊಂದನ್ನು ಯಜಿಸುವುದಿಲ್ಲ. ಲಿಂಗಸ್ವರೂಪವೇ ತಾನಾಗುತ್ತದೆ. ಅರಿತದ್ದನ್ನೆ ಅನುಭವಿಸುತ್ತದೆ. ಅನುಭವದ ರೂಪವೇ ಅದಾಗುತ್ತದೆ.

ಚಿನ್ಮಯ ಶಿವಲಿಂಗದಲ್ಲಿ ಸ್ಥಿರವಾದ ಮನಸ್ಸುಳ್ಳವನೇ ಮಹೇಶ್ವರನಾದ ಶಿವಸ್ವರೂಪನೆಂದು ಜಗದ್ಗುರು ರೇಣುಕರ ದಿವ್ಯೋಪದೇಶ, 'ಸರ್ವವೆಲ್ಲವನು ಚಿದಾತ್ಮಭಾವನೆ ಗಂಡು ಸರ್ವಸಮತ್ವದಿಂದರೆ ಭಕ್ತಿ' ಎಂದು ನಿಜಗುಣರು ನಿರೂಪಿಸಿದ್ದಾರೆ. ಚಿದಾತ್ಮಭಾವ ಸರ್ವಸಮತ್ವಭಾವ ನಿಷ್ಠಾಭಕ್ತಿಯ ನಿಜಧ್ಯೇಯ, ಶಿವತ್ವಪ್ರಾಪ್ತಿ. 'ವಿಮುಕ್ತೇತರ ಸರ್ವಾರ್ಥಂ' ಎಂಬುದನ್ನೇ 'ಆತ್ಮೈವೇದಂ ಸರ್ವಂ' ಎಂಬುದಾಗಿ ವೇದವಾಣಿ ಸಮರ್ಥಿಸಿದೆ. ಸರ್ವವನ್ನು ಬೇರೆಯೆಂದು ಭಾವಿಸದೆ ಸ್ವಸ್ವರೂಪವೆಂದೇ ಭಾವಿಸುವನು ಮಾಹೇಶ್ವರನು.

"ಲಿಂಗನಿಷ್ಠಸ್ಯ ಕಿಂ ತಸ್ಯ ಕರ್ಮಣಾ ಸ್ವರ್ಗಹೇತುನಾ ।
ನಿತ್ಯಾನಂದ ಶಿವಪ್ರಾಪ್ತಿರ್ಯಸ್ಯ ಶಾಸ್ತ್ರೇಷು ನಿಶ್ಚಿತಾ ॥
ಲಿಂಗನಿಷ್ಠಾಪರಂ ಶಾಂತಂ ಭೂತಿರುದ್ರಾಕ್ಷ ಸಂಯುತಂ ।
ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾ ದೇವತಾ ಮುದಾ ॥"

ಲಿಂಗನಿಷ್ಠನಾದ ಮಾಹೇಶ್ವರನಿಗೆ ಶಾಶ್ವತ ಸುಖವುಳ್ಳ ಶಿವತ್ವ ಪ್ರಾಪ್ತಿಯಾಗುವುದೆಂದು ವೇದಾಗಮಗಳಲ್ಲಿ ನಿಶ್ಚಿತವಾಗಿದೆ. ಹೀಗಿರುವಾಗ ಮಾಹೇಶ್ವರನಿಗೆ ಸ್ವರ್ಗ ಫಲಗಳನ್ನು ಕೊಡುವ ಅಗ್ನಿ ಹೋತ್ರಾದಿ ಕರ್ಮಗಳು ಅನವಶ್ಯಕಗಳಾಗಿವೆ. ಇವನ್ನು ಮಾಹೇಶ್ವರನು ಎಂದಿಗೂ ಅಪೇಕ್ಷಿಸುವುದಿಲ್ಲ; ಅಪೇಕ್ಷಿಸಬಾರದು.

ಶಾಂತನೂ ಅಂದರೆ ರಾಗದ್ವೇಷಾದಿಗಳಿಗೆ ಒಳಗಾಗದವನೂ ವಿಭೂತಿ

ರುದ್ರಾಕ್ಷಿಗಳನ್ನು ಧರಿಸಿದವನೂ ಲಿಂಗನಿಷ್ಠಾವಂತನೂ ಆದ ಮಾಹೇಶ್ವರನನ್ನು ಬ್ರಹ್ಮಾದಿ ದೇವತೆಗಳು ಸಂತೋಷದಿಂದ ಸಂತತವಾಗಿ ಸೊಗಸಾಗಿ ಹೊಗಳುತ್ತಾರೆ.

ಚಿದಾನಂದಮಯ ಲಿಂಗನಿಷ್ಠನಿಗೆ ಅಸಾಧ್ಯವೆಂಬುದಿರುವುದಿಲ್ಲ: ಅಕಿಂಚನತೆಯಿರುವುದಿಲ್ಲ. ಸರ್ವಸಮರ್ಥನಾಗಿ ಸತ್ಯ ಶ್ರೀಮಂತನಾಗಿ ಬಾಳುತ್ತಾನೆ. ಆತನ ಪಂಚೇಂದ್ರಿಯಗಳು ಪಂಚಪರುಷಗಳಾಗಿ ಪರಿಣಮಿಸುತ್ತವೆ. ಆತನು ನೋಡಿದ್ದು ಪಾವನವಾಗುತ್ತದೆ. ಮುಟ್ಟಿದ ಜಡವಸ್ತುವಿನಲ್ಲಿ ಜೀವಕಳೆ ತುಂಬಿ ಬರುತ್ತದೆ. ಹೀಗಿರುವಾಗ ಅವನು ಕ್ಷಯಿಸುವ ಸ್ವರ್ಗೀಯ ಸಂಪತ್ತುಗಳಿಗೆ ಬಾಯ್ನೀರು ಬಿಡನು. ಅವನ್ನು ಸಂಪಾದಿಸುವ ಜಡ ಕರ್ಮಗಳಿಗೆ ಕೈ ಹಾಕನು. ನಿತ್ಯಾನಂದ ರೂಪ ಶಿವತ್ವ ಪ್ರಾಪ್ತಿಯಿಂದ ಸಂತೃಪ್ತನಾದ ಅವನಿಗೆ ಸಾಮಾನ್ಯ ಸಂಪತ್ಸುಖಗಳ ಮೇಲೆ ಎಳ್ಳಿನ ಮೊನೆಯಷ್ಟೂ ಮನಸ್ಸನ್ನು ಮಾಡನು; ಕಡೆಗಣ್ಣನ್ನೂ ಬಿಡನು. ಆತನ ರಾಗ–ದ್ವೇಷಗಳ ವಿಪ್ಲವಕ್ಕೆ ಎಂದಿಗೂ ಸಿಕ್ಕು ಬೀಳನು. ಸದಾ ಶಾಂತನಾಗಿ ವಿಭೂತಿ ರುದ್ರಾಕ್ಷಿ ಧಾರಕನಾಗಿ ಲಿಂಗನಿಷ್ಠೆಯಲ್ಲಿ ತಲ್ಲೀನನಾಗಿ ತಾನೆ ತಾನಾಗಿರುವನು. ಅಂತಹ ಆ ಮಾಹೇಶ್ವರನು ಸ್ಥಿರಚಿತ್ತನಾಗಿರುತ್ತಾನೆ. ದಿವ್ಯ ದೃಷ್ಟಿಯುಳ್ಳವನಾಗಿರುತ್ತಾನೆ. ವಿಶಾಲ ಮನೋಭಾವವುಳ್ಳವನಾಗಿ, ಅಸಾಧಾರಣ ತ್ಯಾಗಶೀಲನಾಗಿ, ಪೂರ್ಣ ಪ್ರಜ್ಞೆಯುಳ್ಳವನಾಗಿ, ಪ್ರತಿಭೆಯುಳ್ಳವನಾಗಿ, ಸರ್ವ ಪ್ರಾಣಿಗಳಲ್ಲಿ ಪ್ರೇಮವುಳ್ಳವನಾಗಿ, ಸದಾ ಹಸನ್ಮುಖಿಯಾಗಿ, ತ್ಯಾಗಶೀಲನಾಗಿ ಸರ್ವದೇವ ಮಾನವ ವಂದ್ಯನಾಗಿ ಬಾಳುವನು. "ಶಿವನನು ತನ್ನೊಡನವಿನಾ ಭಾವನೆಯೊಳು ಸುವಿಚಾರದಿಂದೆ ಕಾಣ್ಬಾತಂಗೆ । ಭವಬಂಧವಳಿಗು ಮನ್ಯರಿಗೆ ಸಂಸೃತಿಯೆಂದು । ಪವಣವೆನಿಪ ವೇದ ಮೊರೆವುದು ॥" ಎಂದು ನಿಜಗುಣ ಶಿವಯೋಗಿಗಳು ತಮ್ಮ ಪರಮಾನುಭವ ಬೋಧೆಯ ಸದ್ಭಕ್ತಿ ಲಕ್ಷಣ ನಿರೂಪಣೆಯಲ್ಲಿ ಹೇಳಿ 'ಲಿಂಗ ನಿಷ್ಠನಿಗೆ ನಿತ್ಯಾನಂದ ಶಿವಪ್ರಾಪ್ತಿಯೆಂದು ಶಾಸ್ತ್ರಗಳಲ್ಲಿ ನಿಶ್ಚಯವಾಗಿದೆ.' ಎಂಬ ಜಗದ್ಗುರು ರೇಣುಕರ ದಿವ್ಯ ಬೋಧೆಯೊಡನೆ ಏಕೀಭವಿಸಿದ್ದಾರೆ. "ನಂಬುಗೆಗೆ ಇಂಬಾಗದೆ ನೈಷ್ಠೆ ನೆಲೆಗೊಳ್ಳದು; ನೈಷ್ಠೆ ನೆಲೆಗೊಳ್ಳದೆ ಎಚ್ಚರವಚ್ಚೊತ್ತದು: ಎಚ್ಚರವಿಲ್ಲದೆ ಅನುಭವವು ಮನಂಗೊಳ್ಳದು ; ಅನುಭವವಿಲ್ಲದೆ ಆನಂದವು ತಲೆದೋರದು; ಆನಂದ

ವಿಲ್ಲದೆ ಶಿವಲಿಂಗದಲ್ಲಿ ಸಮರಸವಾಗದು. ಇಂತೀ ಆರು ತೆರನಾದ ಭಕ್ತಿಯ ಗೊತ್ತನರಿದಡೆ ಭಕ್ತನೆಂಬೆನು, ಮಾಹೇಶ್ವರನೆಂಬೆನು ಕಾಣಾ !"

"ಅಂಗದಾಶ್ರಯವಳಿದು ಲಿಂಗದಾಶ್ರಯವಾದ ಬಳಿಕ, ಲಿಂಗಕ್ಕೆ ಲಿಂಗಾ ಚಾರವಲ್ಲದೆ ಅಂಗಕ್ರಿಯೆಂಬುದನಂಗವಿಸಗು ನೋಡಾ! ಲಿಂಗದಲ್ಲಿನಿಷ್ಠೆವಂತರಾದ ಬಳಿಕ, ಅನ್ಯನಾಮವಿಡಿದು ಬಳಲುವ ಭ್ರಾಂತಿಯಿನ್ನೆಲ್ಲಿಯದು ? ಇದು ಕಾರಣ; ಕೂಡಲಚನ್ನ ಸಂಗನ ಶರಣರು ಅನ್ಯವನಾಚರಿಸುವರಲ್ಲ.

ನಿಷ್ಠಾಭಕ್ತಿಯು ಪ್ರತಿಷ್ಠೆಗೊಳ್ಳುವುದು ಕಷ್ಟ. ಅದು ಪ್ರತಿಷ್ಠೆಗೊಳ್ಳದೆ ಶಾಂತಿ ಸಮನಿಸುವುದಿಲ್ಲ. ಶಿವತ್ವಪ್ರಾಪ್ತಿಯಾಗುವುದಿಲ್ಲ. ನಿಷ್ಠಾಭಕ್ತಿ ಅದೊಂದು ನಿರ್ಮಲರಸ: ಅದು ಹೃದಯದಲ್ಲಿ ಹೊಮ್ಮಿ ಹರಿಯಬೇಕು. ಅಂತಃಕರಣ ಗಳನ್ನು ತೀವಿ ತುಳುಕಬೇಕು ಅದರಿಂದ ಜೀವನ ಫಲವತ್ತಾಗುತ್ತದೆ, ರಸ ಪೂರ್ಣವಾಗುತ್ತದೆ. ನಿಷ್ಠೆ ನಿಜಕ್ಕೂ ಒಂದು ಮಹಾಶಕ್ತಿ; ಮಹಾ ಚೇತನ. ನಿಷ್ಠೆಯಿಂದ ಮನದಸಂಕಲ್ಪಸಿದ್ಧಿ ಶೀಘ್ರದಲ್ಲಿ ಸಂಭವಿಸುತ್ತದೆ. ಬಾಳಿನ ಹಲವಾರು ನೋವುಗಳು ನಿವಾರಣೆಯಾಗುತ್ತವೆ.

ಸಟೆಯೊಲವು ನಿಷ್ಠೆಯಲ್ಲ. ದಿಟದೊಲವು ನಿಷ್ಠೆ. ನಂಬಿ ನಚ್ಚುವುದು ನೆರೆನಂಬುವುದು ಸಲೆನಂಬುವುದು ಅರಿದು ಕಟ್ಟಳ್ಕರಿಂದಿರುವುದು ಪರಿಶುದ್ಧ ಪ್ರೇಮ ರಸದಿಂದ ತುಂಬಿ ತೀವಿರುವುದು ನಿಷ್ಠೆ. ಇಷ್ಟಪ್ರಾಣಭಾವಲಿಂಗನಿಷ್ಠೆಯಿಂದ ಶಾಂತಸ್ವಭಾವವುಂಟಾಗುತ್ತದೆ. ಶಾಂತಗುಣನಿಷ್ಠೆಗೆ ನಿದರ್ಶನವಾದುದು. ಅಂತೆಯೆ ವಿಭೂತಿ ರುದ್ರಾಕ್ಷ ಧಾರಣವೂ ನಿಷ್ಠೆಯನ್ನು ತೋರುವ ಕುರು ಹುಗಳು,

"ಶ್ರೀ ವಿಭೂತಿ ರುದ್ರಾಕ್ಷಿ ಇದ್ದವರ ಲಿಂಗವೆಂಬೆ; ಇಲ್ಲದವರ ಭವಿಯೆಂಬೆ. ಕೂಡಲಸಂಗಮದೇವಾ.'' ಎಂದರು ಬಸವಣ್ಣನವರು. ಈ ನಿಷ್ಠೆಯ ಕುರುಹು ಗಳನ್ನು ಕಾಯದಲ್ಲಿ ಧರಿಸಿ ಮನದಲ್ಲಿ ದೃಢಭಕ್ತಿಯಿರಿಸಿ ಪೂಜಿಸಿ ಪರಮಪರಿಣಾಮ ದಲ್ಲಿರುವವನು ಶಾಂತನು; ರಾಗದ್ವೇಷರಹಿತನು; ವಿಬುಧವಂದ್ಯನು. ಮಾಹೇ ಶ್ವರ ಪ್ರಶಂಸಾಸ್ಥಲ ಮತ್ತು ಲಿಂಗನಿಷ್ಠಾಸ್ಥಲ ಇವೆರಡನ್ನು ಅಳವಡಿಸಿಕೊಂಡ

ಮಾಹೇಶ್ವರನು 'ಇಹಲೋಕವೀರ'ನೆನಿಸುತ್ತಾನೆ, ಇದರಿಂದಾಗಿ ಈತನನ್ನು ವಿಬುಧರು ಹೊಗಳುತ್ತಾರೆ.

ಮಾಹೇಶ್ವರನು ಲಿಂಗಭಾವವೆ ಭಾವವಾಗಿ, ಲಿಂಗಪ್ರಾಣವೇ ಪ್ರಾಣವಾಗಿ, ಲಿಂಗಾಕಾಯವೇ ತನ್ನ ಕಾಯವಾಗಿ ಲಿಂಗಸಂಗವೇ ಸ್ವಯವಾಗಿ ಇರುವನು. ಲಿಂಗ ಸುಖಿಯಾಗಿ ಬಾಳುವನು.

# ಪೂರ್ವಾಶಯ ನಿರಸನಸ್ಥಲಂ ೩

ಪೂರ್ವಾಶ್ರಯ ನಿರಸನವು ಷಟ್‌ಸ್ಥಲದಲ್ಲಿನ ಪರಮಾರ್ಥನಿಷ್ಠ ಮಾತ್ರವಲ್ಲ; ಪ್ರಕೃತಿನಿಷ್ಠವೂ ಆಗಿದೆ. ಸಮಷ್ಟಿ-ವ್ಯಷ್ಟಿ ಪ್ರಕೃತಿಗಳೆರಡರಲ್ಲಿಯೂ ಕಾಣುತ್ತೇವೆ. ಸಮಷ್ಟಿ ಪ್ರಕೃತಿಯು ದಿನದಿನಕ್ಕೂ ಮಾಸಮಾಸಕ್ಕೂ ಋತುಋತುವಿಗೂ ವರ್ಷವರ್ಷಕ್ಕೂ ಹಳೆಯದನ್ನು ಹಳಚಿ ಹೊಸದಾಗುತ್ತದೆ. ಅಂತೆಯೇ ವ್ಯಷ್ಟಿ ಪ್ರಕೃತಿಯೂ ದಿನದಿನಕ್ಕೆ ಸ್ಥಿತ್ಯಂತರವನ್ನು ತಾಳುತ್ತದೆ. ಬಾಲ್ಯ ಕೌಮಾರ ಯೌವನ ವೃದ್ಧಾಪ್ಯ ಮುಖಾಂತರ ಅವಸ್ಥಾಂತರಗಳನ್ನು ತಾಳುತ್ತದೆ. ಲೌಕಿಕದಲ್ಲಿ ಪಿತೃಗೃಹದಿಂದ ಪತಿಗೃಹಕ್ಕೆ ಹೋದ ಹೆಣ್ಣು ಪೂರ್ವಾಶ್ರಯ ನಿರಸನವನ್ನು ಆಚರಿಸುವುದುಂಟು. 'ಕೊಟ್ಟಹೆಣ್ಣು ಕುಲಕ್ಕೆ ಹೊರಗು'ಎಂಬ ಮಾತು ಏನನ್ನು ಬೋಧಿಸುತ್ತದೆ? ತವರುಮನೆಯ ಕುಲಗೋತ್ರಗಳನ್ನೆಲ್ಲ ತ್ಯಜಿಸಿ ಗಂಡನ ಮನೆಯ ಕುಲಗೋತ್ರಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಅಂತೆಯೇ ಪರಮಾರ್ಥದಲ್ಲಿಯೂ ಸತ್ಯಸಾಧಕನು ಪೂರ್ವಾಶ್ರಯ ನಿರಾಸಕನಾಗಬೇಕಾಗುತ್ತದೆ.

"ಗುರುಸಂಸ್ಕೃತ ಭಾವಃಸನ್ ಗುರುನಿರ್ಮಿತದೇಹವಾನ್ ।
ವಿಸ್ಮೃತ್ಯ ಪೂರ್ವದುರ್ಭಾವಂ ತದಧೀನಃ ಸಮಾಚರೇತ್ ॥"

-ಯೋಗಜಾಗಮ.

ಶ್ರೀ ಗುರುವಿನಿಂದ ಶಿವಸಂಸ್ಕಾರವನ್ನು ಪಡೆದವನ ತ್ರಿಕರಣಗಳು ತಂತಮ್ಮ ಪೂರ್ವ ಪ್ರಾಕೃತತೆಯನ್ನು ಕಳೆದುಕೊಂಡಿರುತ್ತವೆ, ಮಾಂಸಪಿಂಡವಳಿದು ಮಂತ್ರ ಪಿಂಡವಾಗಿರುತ್ತವೆ. ಮನಭಾವಗಳು ಸುಸಂಸ್ಕೃತವಾಗಿರುತ್ತವೆ. ತ್ರಿಮಲಗಳಿಂದ ನಿರ್ಮಲವಾಗಿರುತ್ತವೆ. ಲಿಂಗನಿಷ್ಠವಾಗಿ ಲಿಂಗಾಧೀನವಾಗಿರುತ್ತವೆ.

"ಲಿಂಗೈಕ ನಿಷ್ಠಹೃದಯಃ ಸದಾ ಮಾಹೇಶ್ವರೋ ಜನಃ ।
ಪೂರ್ವಾಶ್ರಯಗತಾನ್ ಧರ್ಮಾಂಸ್ತ್ಯಜೇತ್ ಸ್ವಾಚಾರರೋಧಕಾನ್ ॥
ಸ್ವಜಾತಿಕುಲಜಾನ್ ಧರ್ಮಾನ್ ಲಿಂಗನಿಷ್ಠಾವಿರೋಧಿನಃ ।
ತ್ಯಜೇನ್ಮಾಹೇಶ್ವರೋ ಜ್ಞೇಯಃ ಪೂರ್ವಾಶ್ರಯ ನಿರಾಸಕಃ ॥"

ಲಿಂಗನಿಷ್ಠೆಯ ನಿಬ್ಬೆರಗಿನಲ್ಲಿ ತಲ್ಲೀನವಾದ ತನ್ನನ್ನೇಮರೆದ ಹೃದಯವುಳ್ಳ ಮಾಹೇಶ್ವರನು ತನ್ನ ಶಿವಾಚಾರಕ್ಕೆ ಸಮಯಾಚಾರಕ್ಕೆ ಸರಿಯಿಲ್ಲದ ಗುರಿಗೆಡಿಸುವ ಪೂರ್ವಾಶ್ರಯದ ಪ್ರಾಕೃತಾಚಾರಗಳನ್ನು ವಿಕೃತಧರ್ಮಗಳನ್ನು ಬಿಟ್ಟುಬಿಡಬೇಕು,

ಲಿಂಗನಿಷ್ಠೆಗೆ ವಿರೋಧಗಳಾದ ಪೂರ್ವಕುಲಧರ್ಮಗಳನ್ನು ಕೈಬಿಟ್ಟ ಮಾಹೇಶ್ವರನು ಪೂರ್ವಾಶ್ರಯ ನಿರಾಸಕನೆನಿಸುತ್ತಾನೆ. ಪೂರ್ವದ ಕುಲಾಭಿಮಾನ. ಕುಲಮದ, ಕುಲಮೋಹಗಳನ್ನು ಕೈಬಿಡುತ್ತಾನೆ.

ಪ್ರೌಢಾವಸ್ಥೆಗೆ ಬಂದವನು ಮರಳಿ ಬಾಲ್ಯಕ್ಕೆ ಬಾರನು. ಕೆಂಡವಾದುದು ಮರಳಿ ಕಾಷ್ಠವಾಗದು. ಮುತ್ತಾದ ನೀರು ಮರಳಿ ನೀರಾಗದು. "ಕುಲಮದ ವಳಿಯದನ್ನಕ್ಕ ಶರಣನಾಗಲೇಕೆ? ವಿಧಿವಶ ಬಿಡದನ್ನಕ್ಕ ಭಕ್ತನಾಗಲೇಕೆ? ಹಮ್ಮಿನ ಸೊಮ್ಮಿನ ಸಂಬಂಧಬಿಟ್ಟು ಕಿಂಕಲ ಕಿಂಕಲ ಕಿಂಕಲನಾಗಿರಬೇಕು! ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು, ಕೂಡಲಸಂಗಮದೇವಾ, ನಿಮ್ಮ ಶರಣರು."

"ಲಿಂಗದೇವನ ಪೂಜಿಸಿ ಕುಲವನರಸುವರೇ ಅಯ್ಯಾ?
ಕೂಡಲಸಂಗಮದೇವ, ಭಕ್ತಕಾಯ ಮಮಕಾಯವೆಂಬುದಾಗಿ;"

ಉದಕದೊಳಗೆ ಉದಯವಾದ ರತ್ನದಂತಿರುವನು ಮಾಹೇಶ್ವರನು. ಶಿವಪಥಕ್ಕೆ ಬಂದಬಳಿಕ ಅಶಿವಪಥಕ್ಕೆ ಹೆಜ್ಜೆಹಾಕನು: ಹಾಕಬಾರದು.

"ಶಿವಸಂಸ್ಕಾರ ಯೋಗೇನ ವಿಶುದ್ಧಾನಾಂ ಮಹಾತ್ಮನಾಂ ।
ಕಿಂ ಪೂರ್ವಕಾಲಿಕೈರ್ಧರ್ಮೈಃ ಪ್ರಾಕೃತಾನಾಂ ಹಿತೇ ಮತಾಃ ॥
ಶಿವಸಂಸ್ಕಾರಯೋಗೇನ ಶಿವಧರ್ಮಾನುಷಂಗಿಣಾಂ ।
ಪ್ರಾಕೃತಾನಾಂ ನ ಧರ್ಮೇಷು ಪ್ರವೃತ್ತಿರುಪಪದ್ಯತೇ ॥"

ಶಿವಜ್ಞಾನವನ್ನಿತ್ತು ಮಲತ್ರಯವನ್ನು ಕಿತ್ತುಹಾಕುವುದು ಶಿವಸಂಸ್ಕಾರ. ಪೂರ್ವಜನ್ಮಕರ್ಮಗಳನ್ನು ನಿರ್ಮೂಲಮಾಡುವುದು ಶಿವದೀಕ್ಷೆ. ಅಂತಹ ಶಿವಸಂಸ್ಕಾರವನ್ನು ಶ್ರೀಗುರುವಿನಿಂದ ಪಡೆದು ವಿಶುದ್ಧರಾದ ವಿಶಾಲಾತ್ಮರಾದ ಮಹಾತ್ಮರಿಗೆ ಪೂರ್ವಾಶ್ರಯದ ಪ್ರಾಕೃತಧರ್ಮಗಳ ಅವಶ್ಯಕತೆಯಿರುವುದಿಲ್ಲ. ಲಿಂಗೈಕನಿಷ್ಠೆಯಿಂದ ಇರುವವರಿಗೆ, ಶಿವಸಂಸ್ಕಾರದಂತಹ ಉತ್ತಮಯೋಗದಿಂದ

ಶಿವಧರ್ಮದಲ್ಲಿ ನಿರತರಾದವರಿಗೆ ಪ್ರಾಕೃತಧರ್ಮಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ: ಪೂರ್ವಾಶ್ರಮದ ಪ್ರಾಕೃತ ನಿತ್ಯನೈಮಿತ್ತಕಾದಿ ಕರ್ಮಕೋಟಿಗಳಲ್ಲಿ ಕಾಂಕ್ಷೆಯುಂಟಾಗುವುದಿಲ್ಲ. ಅವುಗಳ ಪರಿತ್ಯಾಗದಿಂದ ಪ್ರತ್ಯವಾಯವುಂಟಾಗುವುದಿಲ್ಲ. ಶಿವಧರ್ಮಗಳಾದ ಲಿಂಗನಿಷ್ಠೆ, ವಿಭೂತಿರುದ್ರಾಕ್ಷಧಾರಣ, ಪಂಚಾಕ್ಷರ ಜಪಾನುಷ್ಠಾನ ಪಾದೋದಕ ಪ್ರಸಾದ ಆರೋಗಣಗಳಿಂದ ಎಂತಹ ಪಾತಕಗಳಿದ್ದರೂ ಪರಿಹಾರವಾಗುತ್ತವೆ. ಶಿವಧರ್ಮದಲ್ಲಿ ಅಲ್ಪಕ್ರಿಯೆಯಿಂದ ಬಹುಫಲಪ್ರಾಪ್ತವಾಗುವ ಭಾಗ್ಯವಿದೆ. ಹೀಗಿರುವಾಗ ಬಹುಕಷ್ಟಕರ ಕರ್ಮಗಳನ್ನು ಮಾಡಿ ಅತ್ಯಲ್ಪ ಪಡೆವ ಪೂರ್ವಾಶ್ರಯಧರ್ಮ ಪರಿತ್ಯಾಗದಲ್ಲಿ ಯಾವ ಬಗೆಯ ದೋಷವಿಲ್ಲ. ಪ್ರತಿಯಾಗಿ ಅವನ್ನು ಅಂಗೀಕರಿಸಿದರೆ ಅಚ್ಚಳಿಯದ ಅಪರಾಧವುಂಟು.

"ಅಲೌಕಿಕ ಗುಣಾಚಾರಃ ಪುಮಾಂಚ್ಛಿವಸಮಾಶ್ರಿತಃ।
ಆತ್ಮಪ್ರಯತ್ನ ನಿರ್ವರ್ತ್ಯೋಽಭವೇತ್ಸೋಽಪಿ ನಿರಾಶ್ರಯಃ॥"

ಎಂಬುದಾಗಿ ಶೈವರತ್ನಾಕರವು ಸಮರ್ಥನೆಯನ್ನಿತ್ತಿದೆ.

"ಯೋದೀಕ್ಷಿತಸ್ತು ಶ್ರಾದ್ಧಾದೌ ಸ್ವಪೂರ್ವಂ ವಿಧಿಮಾಚರೇತ್ ।
ತಸ್ಯ ತನ್ನಿಷ್ಫಲಂ ಸರ್ವಂ ಸಮಯೇನ ಚ ಲಂಘ್ಯತೇ ॥"

ಶಿವದೀಕ್ಷಾಸಂಸ್ಕಾರವನ್ನು ಪಡೆದು ಶಿವಧರ್ಮಿಯಾದವನು ಮರಳಿ ತನ ಪೂರ್ವಾಶ್ರಮದ ಶ್ರಾದ್ಧಾದಿಕರ್ಮಗಳನ್ನು ಆಶ್ರಯಿಸಿದರೆ ಅವುಗಳಿಂದ ಯಾವ ಫಲವುಂಟಾಗುವುದಿಲ್ಲ. ಮತ್ತು ಸಮಯಾಚಾರವನ್ನು ಮೀರಿ ನಡೆದ ದೋಷಕ್ಕೆ ಗುರಿಯಾಗಬೇಕಾಗುತ್ತದೆಯೆಂದು ಸಿದ್ಧಾಂತಶೇಖರ ವಚನವು ಉದ್ಘೋಷಿಸಿದೆ;

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"
ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್॥

ಎಂದು ಗೀತೆಯೂ ಅನನ್ಯನಿಷ್ಠೆಯೊಂದೇ ಸಾಕೆಂದು ಅಭಿಕ್ರಮನಾಶವಾಗಲಿ ಪ್ರತ್ಯವಾಯದೋಷವಾಗಲಿ ಇಲ್ಲೆಂದು ನಿಷ್ಠಾಧರ್ಮವು ಕಿಂಚಿತ್ತಾದರೂ ಆದರಿಂದ ಮಹಾಭಯವು ನಿವಾರಣವಾಗುವುದೆಂದು ಸ್ಪಷ್ಟವಾಗಿ ಸಾರಿದೆ.

"ಬಾಧೆಗೊಳಿಸುವ ಪೂರ್ವಸಾಧನಂಗಳನಿಲ್ಲಿ । ಬೋಧಿಪುದನುಳಿದೆನವು ಮುನ್ನವೇ ಪುರಸ-।ದೀ ಧರೆಯೊಳುಪ್ಪುತಿಹವಾಗಿ॥" ಎಂದು ನಿಜಗುಣ ಶಿವ ಯೋಗಿಗಳು ತಮ್ಮ ಅನುಭವಸಾರದಲ್ಲಿ ಪೂರ್ವಸಾಧನಗಳನ್ನು ನಿರಾಕರಿಸಿದ್ದಾರೆ.

'ಮಡಕೆ ದೈವ, ಮೊರದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೋ !
ಕೊಳಗದೈವ, ಗಿಣ್ಣಿಲು ದೈವ, ಕಾಣಿರೋ !
ದೈವ. ದೈವವೆಂದು ಕಾಲಿಡಲಿಂಬಿಲ್ಲ ಕಾಣಿರೋ :
ದೈವನೊಬ್ಬನೇ ಕೂಡಲಸಂಗಮದೇವ.'

'ನೀರ ಕಂಡಲ್ಲಿ ಮುಳುಗುವರಯ್ಯ. ಮರನ ಕಂಡಲ್ಲಿ ಸುತ್ತುವರಯ್ಯ, ಬತ್ತುವ ಜಲವನೊಣಗುವ ಮರನ ಮಚ್ಚಿದವರು ನಿಮ್ಮನೆತ್ತ ಬಲ್ಲರು, ಕೂಡಲ ಸಂಗಮದೇವಾ ? ಎಂಬಿವೇ ಮೊದಲಾದ ವಚನಗಳಿಂದ ಬಸವಣ್ಣನವರು ಪೂರ್ವಾಶ್ರಯ ಧರ್ಮಗಳ ನಿರಸನವನ್ನು ನಿರೂಪಿಸಿದ್ದಾರೆ.

'ಅಣ್ಣ ತಮ್ಮ ಹೆತ್ತವ್ವ ಗೋತ್ರವಾಡಡೇನು ? ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ ! ನಂಟುಭಕ್ತ ನಾಯಕನರಕ ಕೂಡಲಸಂಗಮ ದೇವಾ:"

ಪೂರ್ವಾಶ್ರಯದ ಧರ್ಮಗಳನ್ನು ಮಾತ್ರವಲ್ಲ ಪೂರ್ವಾಶ್ರಮದ ಧರ್ಮಿಗಳನ್ನೂ ಸಹ ಲಿಂಗ ಸಾಹಿತ್ಯಕ್ಕೆ ಬಾರದಿದ್ದರೆ ಬಿಡಬೇಕೆಂದು ಬಸವಣ್ಣನವರು ಹೇಳಿದ್ದಾರೆ; ಹೇಳಿದಂತೆ ನಡೆದಿದಾರೆ. ಬಿಡದಿದ್ದರೆ ನಾಯಕ ನರಕವೆನ್ನುತ್ತಾರೆ. ಲಿಂಗ ನಿಷ್ಠನಿಗೆ ನಂಟುಭಕ್ತಿ ಉಚಿತವಲ್ಲ.

'ಕರ್ಮಜಾತನ ಕಳೆದು ಶ್ರೀಗುರು ಲಿಂಗವ ಕೊಟ್ಟು ಪುಣ್ಯಜಾತನ ಮಾಡಿದ ಬಳಿಕ, ಆತನಿಗೆ ಶಿವಕುಲವಲ್ಲದೆ ಬೇರೆ ಮತ್ತೊಂದು ಕುಲವುಂಟೆ ? ಸಾಕ್ಷಿ: 'ಮಾತಾಗೌರೀ ಪಿತಾರುದ್ರ ಐಶ್ವರಂ ಕುಲಮೇವಚ । ಬಾಂಧವಾಃ ಶಿವ ಭಕ್ತಾಶ್ಚ ಸ್ವದೇಶೋ ಭುವನತ್ರಯಂ'–ಎಂಬುದಾಗಿ ಕೂಡಲ ಚನ್ನಸಂಗಯ್ಯಾ ನಿಮ್ಮ ಮಾಹೇಶ್ವರ ಕುಲಕ್ಕೆ ಪ್ರತಿಯ ಕಾಣೆ.'

"ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃಸ್ಮೃತಾಃ ।
ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ॥"

ಮನುಷ್ಯರಲ್ಲಿ ವಿಶುದ್ಧರು ಅಶುದ್ಧರು ಅಂದರೆ ಪ್ರಾಕೃತರು ಎಂದು ಎರಡು ಪ್ರಕಾರವುಂಟು. ಶಿವ ಸಂಸ್ಕಾರವುಳ್ಳವರು ಶುದ್ಧರು. ಶಿವಸಂಸ್ಕಾರವಿಲ್ಲದ ಉಳಿದವರೆಲ್ಲರೂ ಅಶುದ್ಧರು. ಅಥವಾ ಪ್ರಾಕೃತರು.

ಶಿವಸಂಸ್ಕಾರವುಳ್ಳವರು ಭವದ ಬಳ್ಳಿಯ ಬೇರನ್ನು ಕತ್ತರಿಸಿರುತ್ತಾರೆ. ಶಿವ ಸಂಸ್ಕಾರವಿಲ್ಲದವರು ಭವದ ಬಳ್ಳಿಯನ್ನು ಬೆಳೆಸಿರುತ್ತಾರೆ; ಶಿವ ಸಂಸ್ಕಾರಿಗಳು ಲಿಂಗನಿಷ್ಠೆಯೆಂಬ ಮಣಿ ಮುಕುರದಲ್ಲಿ ತಮ್ಮನ್ನು ತಾವು ಕಾಣುತ್ತಿರುತ್ತಾರೆ ಭವ ಭಾರಿಗಳು ತಮ್ಮನ್ನು ತಾವು ಅರಿಯದೆ ಬಹಿರ್ಮುಖರಾಗಿರುತ್ತಾರೆ. ಶಿವ ಸಂಸ್ಕಾರಿಗಳು ಮಾಂಸಮಯಪಿಂಡವಳಿದು ಮಂತ್ರಮಯಪಿಂಡರಾಗಿರುತ್ತಾರೆ. ತನಭಾವ ತೊಲಗಿ ಅಂಗಭಾವವನ್ನು ಅಂಗವಿಸಿಕೊಂಡಿರುತ್ತಾರೆ. ಲಿಂಗನಿಷ್ಠೆಯಲ್ಲಿ ಲೀನವಾಗಿರುತ್ತಾರೆ. ಹುಸಿ ನಡೆ–ನುಡಿಗಳನ್ನು ನಿರಾಕರಿಸಿರುತ್ತಾರು ಭಯ ಸಂಶಯಗಳನ್ನು ಈಡಾಡಿರುತ್ತಾರೆ. ಹಮ್ಮು ಬಿಮ್ಮುಗಳನ್ನು ಬಿಟ್ಟೋಡಿಸಿರುತ್ತಾರೆ. ವಿಷಯಗೋಷ್ಠಿಗಳನ್ನು ಕಳೆದು ವಿಶುದ್ಧ ವಿಚಾರಗೋಷ್ಠಿಗಳನ್ನು ತಳೆದು ಪ್ರಸನ್ನರಾಗಿರುತ್ತಾರೆ; ಮುಚ್ಚು ಮರೆಯಿಲ್ಲದೆ ಬಚ್ಚ ಬರಿಯ ಸೊಗದಲ್ಲಿ ಬಿಚ್ಚಿ ಬೇರಿಲ್ಲದಂತಿರುತ್ತಾರೆ. ಉತ್ಪಾದ್ಯ, ವಿಕಾರ್ಯ, ಸಂಸ್ಕಾರ್ಯ, ಪ್ರಾಪ್ಯವೆಂಬ ನಾಲ್ಕುಗೆಯ ಕರ್ಮ ಕೋಟಲೆಗೆ ನಿಲುಕುವವರಲ್ಲ. ಇವರ ಶಿವ ಸಂಸ್ಕಾರ ಜನ್ಯ ಸಚ್ಚಿತ್ಕಳೆಗಳು ಬೇರೊಬ್ಬರಿಂದ ಉತ್ಪಾದ್ಯಗಳಲ್ಲ. ಹಾಲು ಕೆಟ್ಟು ಮೊಸರಾದಂತೆ ವಿಕಾರ್ಯಗಳಲ್ಲ. ಬಾಹ್ಯ ಜಡ ಸಂಸ್ಕಾರಗಳಿಂದ ಬರತಕ್ಕವುಗಳಲ್ಲ. ಬೇರೊಂದೆಡೆಯಲ್ಲಿ ಪಡೆಯತಕ್ಕವುಗಳಲ್ಲ. ಆದ್ದರಿಂದ ಶಿವ ಸಂಸ್ಕಾರಿಗಳು ವಿಶುದ್ಧರು.

ಇನ್ನು ಪ್ರಾಕೃತರು ಪ್ರಕೃತಿ ಧರ್ಮಕ್ಕೆ ಪಕ್ಕಾಗಿ ಆತ್ಮ ಸಂಸ್ಕಾರವಿಲ್ಲದೆ ನಾನಾ ಕರ್ಮಗಳಿಗೆಳಸುತ್ತಾರೆ. ನಿಜ ಜ್ಞಾನಕ್ರಿಯೆಗಳಿಗೆ ವಂಚಿತರಾಗುತ್ತಾರೆ. ಹಮ್ಮು ಬಿಮ್ಮುಗಳಿಗೊಳಗಾಗುತ್ತಾರೆ. ತಾಪತ್ರಯ ಪಂಚಕ್ಲೇಶ ಅರಿಷಡ್ವರ್ಗ ಅಷ್ಟ ಮದ ಸಪ್ತ ವ್ಯಸನಗಳಿಗೆ ಸಿಲುಕಿರುತ್ತಾರೆ. ಸಂಕುಚಿತ ಸ್ವಾರ್ಥಭಾವಗಳ ಬೀಡಾಗಿರುತ್ತಾರೆ. ಸಹಜತೆ ಸಿಗದಂತಿರುತ್ತದೆ. ಸತ್ಸಂಗಕ್ಕೆಳಸರು. ಸದಾಚಾರಕ್ಕೆ ಮನಸ್ಸು ಮಾಡರು. ಬಾಹ್ಯ ಪ್ರಾಕೃತಿಕ ಭಾವವು ಮಿಗಿಲಾಗಿ ಅಳವಟ್ಟು ಕೆಟ್ಟು ಹೋಗುತ್ತಾರೆ. ಬಾಳಿನಲ್ಲಿ ನಸುವಾದರೂ ಲೇಸು ತೋರದು. ಏಸು ಕಾಲಕ್ಕೂ

ಪರಮಾರ್ಥದ ಲಕ್ಷ್ಯಬಾರದು. ವಿಕೃತಿಯನ್ನುಂಟು ಮಾಡುವ ಸಂಸ್ಕೃತಿಯಲ್ಲಿಯೇ ಮುಳುಗಿರುತ್ತಾರೆ. ಸಂಸ್ಕೃತಿಯಿಂದ ಮಹತಿಗೇರುವ ಮತಿಯಿಲ್ಲದವರಾಗಿರುತ್ತಾರೆ.

'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ, ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ. ಶಿವದೀಕ್ಷಾ ಸಂಸ್ಕಾರವಾಗಿ ಅಂಗದ ಮೇಲೆ ಲಿಂಗವಿಲ್ಲದವರು ಭವಿಗಳು ಎಂದು ಹೇಳಿ ಬಸವಣ್ಣನವರೂ ಸಹ ಭಕ್ತ ಭವಿ ಎಂದು ಎರಡು ಬಗೆಯಾಗಿ ವಿಂಗಡಿಸಿರುವರು. ಶ್ರೀ ಜಗದ್ಗುರು ರೇಣುಕರು ಹೇಳುವ ವಿಶುದ್ಧರೇ ಭಕ್ತರು. ಪ್ರಾಕೃತರೇ ಭವಿಗಳು. ಶಿವಭಕ್ತರು ಶುದ್ಧರು. ಶಿವಭಕ್ತರೇ ಅಧಿಕರು. ಏಕೆಂದರೆ ಶಿವಭಕ್ತರ ಅಂಗವೂ ಸಹ ಸದಾ ದೇವ ಸಹಿತವಾಗಿರುತ್ತದೆ.

'ಉಪಮಿಸಬಾರದ ಉಪಮಾತೀತರು, ಕಾಲಕರ್ಮ ರಹಿತರು. ಕೂಡಲ ಸಂಗಮದೇವಾ, ನಿಮ್ಮ ಶರಣರು."

ಶಿವ ಸಂಸ್ಕಾರಿಗಳು ಕಾಲಕರ್ಮಗಳನ್ನು ಮಾಯಾ ಮೋಹಗಳನ್ನು ಜಯಿಸಿರುತ್ತಾರೆ. ಪ್ರಾಕೃತರಂತೆ ಕಾಲಕರ್ಮಗಳಿಗೆ ಒಳಗಾಗಿರುವುದಿಲ್ಲ. ಕಾಲಕ್ಕೆಂದರೆ ಮೃತ್ಯುವಿಗೆ ಅಂಜುವವರಲ್ಲ. ನಾಳೆ ಬರುವ ಮೃತ್ಯು ಇಂದೇ ಬರಲೆಂದು ಹೇಳುವ ಸ್ಥೈರ್ಯವುಳ್ಳವರು. ಲೇಸೆನಿಸಿಕೊಂಡು ಕರ್ಮದ ಬಾಯ ಟೊಣೆದು ಬಾಳಿದಷ್ಟೇ ಬದುಕಿದಷ್ಟೇ ಸಾಕೆನ್ನುವರು. 'ಮರಣವೇ ಮಹಾನವಮಿ' ಎಂದು ಅಂತಃಕರಣಪೂರ್ವಕವಾಗಿ ಸಂತಸಗೊಳ್ಳುವವರು. ಪ್ರಕೃತಿ ಧರ್ಮಕ್ಕೆ ಪಾಲು ಮಾರುವವರಲ್ಲ. ಪರಮಾರ್ಥ ಧರ್ಮಕ್ಕೆ ಪರಿಣಮಿಸುವ ಪಾವನಾತ್ಮರು.

ಶಿವ ಸಂಸ್ಕಾರ ಪಡೆದವರ ತನಂ ಶುದ್ಧ, ಮನಶುದ್ಧ; ಧನ ಶುದ್ಧ, ಏಕೆಂದರೆ ತ್ರಿವಿಧ ತನುಗಳಲ್ಲಿರುವ ಮಲಗಳನ್ನು ಶ್ರೀಗುರು ತ್ರಿವಿಧ ದೀಕ್ಷೆಗಳಿಂದ ತೊಳೆದು ತ್ರಿವಿಧ ಲಿಂಗಗಳನ್ನು ಕರುಣಿಸಿರುತ್ತಾನೆ. ಇದರಿಂದಾಗಿ ಇವರು ಪವಿತ್ರರು, ಅಪ್ರಾಕೃತರು. ಇವರಿಗೆ ಪ್ರಕೃತಿ ಗುಣ, ಪ್ರಕೃತಿ ವಾಸನ, ಪ್ರಕೃತಿ ಸಂಬಂಧ–ಅಭಿಮಾನಾದಿಗಳು ಇರುವುದಿಲ್ಲ.

ಪ್ರಾಕೃತರು ಹುಟ್ಟಿದವರು ಹುಟ್ಟಿದಂತೆಯೇ ಇರುತ್ತಾರೆ. ಇವರಲ್ಲಿ ಇನ್ನು ಕೆಲವರು ಪ್ರಕೃತಿ ರೂಪದಿಂದ ವಿಕೃತಿ ರೂಪಕ್ಕೆ ಮೈಯೊಡ್ಡಿರುತ್ತಾರೆ; ಇವ

ರಿಗೆ ಯಾವ ಸಂಸ್ಕಾರವಿರುವುದಿಲ್ಲ, ಯಾವ ಸಂಸ್ಕೃತಿಯ ಸಂಗವಿರುವುದಿಲ್ಲ, ಹೀಗಿರುವಾಗ ಶುದ್ಧರಾಗುವುದೆಂತು ? ಹೇಗೆ ಕಲಿಯದೆ ವಿದ್ಯಾವಂತರಾಗುವುದಿಲ್ಲವೋ ಹಾಗೆ ಸಂಸ್ಕಾರವಾಗದೆ ಶುದ್ಧರಾಗುವುದಿಲ್ಲ, ಶುದ್ಧರಾಗದೆ ಪ್ರಭಾವವುಂಟಾಗುವುದಿಲ್ಲ, ಗೌರವ ಸಿಕ್ಕುವುದಿಲ್ಲ; ಯಾವುದಕ್ಕೂ ಸಂಸ್ಕಾರಬೇಕು; ಸಂಸ್ಕಾರದಿಂದ ಕಲೆ, ಬೆಲೆ.

ಸಂಸ್ಕಾರ ಪಡೆಯಲು ಒಂದು ಪಕ್ವಾವಸ್ಥೆ ಬೇಕು; ಅಪಕ್ವಹೃದಯರು ಶಿವ ಸಂಸ್ಕಾರ ಪಡೆದು ಬರೀ ಹೊರಗೆ ಭಕ್ತರೆನಿಸಿದರೆ ಸಾಲದು, ಭಕ್ತತ್ವಬಾರದು. "ಓಲೆಯಕಾರ ಭಕ್ತನಾದಡೇನು ? ಮನದ ಕ್ರೋಧ ಬಿಡದು. ಒಕ್ಕಲಿಗ ಭಕ್ತನಾದಡೇನು ? ಅವನ ಪೂರ್ವಾಶ್ರಯ ಬಿಡದು. ಹಾರುವ ಭಕ್ತನಾದಡೇನು ? ಆವನ ಜಾತಿ ಸೂತಕ ಬಿಡದು ವ್ಯವಹಾರಿ ಭಕ್ತನಾದಡೇನು ? ಒಂದು ಮಾತಿನಿಂದ ಭಕ್ತಿ ಹೋಯಿತ್ತು; ಅರಸು ಭಕ್ತನಾದಡೇನು ? ಅರಸಿ ನೋಡಲಿಲ್ಲ; ಸೂಳೆಯ ಭಕ್ತಿ ಹದಿನೆಂಟು ಜಾತಿಯ ಎಂಜಲು ತಿಂದಲ್ಲಿ ಹೋಯಿತ್ತು, ಕೂಡಲ ಚನ್ನ ಸಂಗಯ್ಯಾ, ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆ?'

ಪ್ರಾಕೃತರು ತಮೋಗುಣ ಪ್ರಧಾನರು. ಜಡ ಭಾವ ಮಾತ್ರವುಳ್ಳವರು, ಪ್ರಕೃತಿ ವಾಸನೆಯಲ್ಲಿ ಗುಣಗಳಲ್ಲಿ ವಾಸಿಸುವಂಥವರು. ಪ್ರಾಕೃತಿಕಾಹಂಕಾರ ಮಮಕಾರಗಳಲ್ಲಿಯೇ ಬಾಳುವಂಥವರು. ಇದರಿಂದಾಗಿ ಈ ಪ್ರಾಕೃತಿಕ ಸಂಬಂಧವನ್ನು ಬಿಡಲು ಸಮರ್ಥರಾಗರು, ಪ್ರಾಕೃತಿಕ ಮಾಯಾ ಜಾಲದಲ್ಲಿಯೇ ಬಿದ್ದು ಒದ್ದಾಡುತ್ತಾರೆ, ಭೌತಿಕ ದೈಹಿಕ ಭ್ರಾಂತಿಯಲ್ಲಿರುತ್ತಾರೆ.

'ಬೆಲ್ಲದ ನೀರೆರೆದಡೇನು, ಬೇವು ಸಿಹಿಯಪ್ಪುದೆ ? ಕತ್ತುರಿಯ ಲೇಪವಿತ್ತಡೇನು, ನೀರುಳ್ಳಿಯ ದುರ್ಗಂಧ ದೂರಪ್ಪುದೆ ? ಕಸುಗಾಯ ಹಿಸುಕಿದಡೇನು; ಹಣ್ಣಿಗೆ ಹವಣಪ್ಪುದೆ ? ಕಿರಿಯ ಮನದ ಮಾನವಂಗೆ ಬಹಿರಂಗದ ಬರಿಯ ಸಂಸ್ಕಾರವಾದಡೇನು, ಭವಿಯಾಗಿಪ್ಪನಲ್ಲದೆ ಭಕ್ತನಪ್ಪನೆ? ಕೂಡಲ ಚನ್ನ ಸಂಗಮದೇವಾ, ಪೂರ್ವ ಗುಣವಳಿದು ಪುನರ್ಜಾತನಾಗದನ್ನಕ್ಕ ?

"ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿ ದ್ವಿಧಾ ಮತಾ!
ಏಷಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥
ಶಿವೋಕ್ತ ಧರ್ಮನಿಷ್ಠಾತು ಶಿವಾಶ್ರಮಷೇವಿಣಾಂ ।
ಶಿವ ಸಂಸ್ಕಾರ ಹೀನಾನಾಂ ಧರ್ಮ; ಪೈತಾಮಹಃ ಸ್ಮೃತಃ ॥"

ವರ್ಣಾಶ್ರಮಾದಿ ಧರ್ಮಗಳಲ್ಲಿಯೂ ಎರಡು ಬಗೆಯುಂಟು, ಒಂದು ಶಿವನಿಂದ ನಿರ್ದಿಷ್ಟವಾದುದು, ಇನ್ನೊಂದು ನಾಲ್ಮೊಗದ ಬೊಮ್ಮನು ಹೇಳಿದುದು.

ಶಿವಾಶ್ರಮ ನಿರತರಾದ ವೀರಶೈವರಿಗೆ ಶಿವನು ಹೇಳಿದ ಧರ್ಮದಲ್ಲಿ ನಿಷ್ಠೆಯಿರುವುದು. ಶಿವದೀಕ್ಷಾ ಸಂಸ್ಕಾರವಿಲ್ಲದ ಪ್ರಾಕೃತರಿಗೆ ನಾಲ್ಮೊಗದ ಬ್ರಹ್ಮನ ಧರ್ಮವು ವಿಹಿತವಾಗಿರುವುದು.

ಶಿವೋಕ್ತವಾದ ವರ್ಣಾಶ್ರಮ ಧರ್ಮಗಳು ಜನ್ಮ ನಿರ್ದಿಷ್ಟಗಳಲ್ಲ. ಗುಣ ನಿರ್ದಿಷ್ಟಗಳು. ಬ್ರಹ್ಮೋಕ್ತವಾದ ವರ್ಣಾಶ್ರಮಗಳು ಕುಲಕರ್ಮಗಳಿಂದ ನಿರ್ದಿಷ್ಟವಾದವುಗಳು. ವೀರಶೈವ ವರ್ಣಾಶ್ರಮಗಳಲ್ಲಿ ಭೇದಗಳಿಲ್ಲ. ಪೈತಾಮಹ ವರ್ಣಾಶ್ರಮಗಳಲ್ಲಿ ಭೇದವುಂಟು. ಇದನ್ನೇ ರೇಣುಕ ಜಗದ್ಗುರುಗಳು;

"ಶಿವಸಂಸ್ಕಾರಯುಕ್ತೇಷು ಜಾತಿಭೇದೋ ನ ವಿದ್ಯತೇ ।
ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನ ವಿದ್ಯತೇ ॥
ತಸ್ಮಾತ್‌ಸರ್ವ ಪ್ರಯತ್ನೇನ ಶಿವ ಸಂಸ್ಕಾರ ಸಂಯುತಃ ।
ಜಾತಿಭೇದಂ ನ ಕುರ್ವೀತ ಶಿವಭಕ್ತೇ ಕದಾಚನ ॥"

ಹೀಗೆ ಹೇಳಿದ್ದಾರೆ. ಶಿವ ಸಂಸ್ಕಾರವುಳ್ಳ ವೀರಶೈವರಲ್ಲಿ ವರ್ಣಬೇದವಿಲ್ಲ. ಮಾವು ಬೇವು ಹಲಸು ಹುಣಸೆ ಮೊದಲಾದ ಕಟ್ಟಿಗೆಗಳು ಬೆಂಕಿಯಲ್ಲಿ ಸುಟ್ಟು ಕೆಂಡವಾದಾಗ ಮರಳಿ ಮೊದಲಿನ ಜಾತಿ ಭೇದಗಳಿರುವುದಿಲ್ಲ, ಅಂತೆಯೇ ಶಿವದೀಕ್ಷಾ ಸಂಸ್ಕಾರವು ಒಂದು ಜ್ವಲಂತ ಜ್ಯೋತಿ, ಅದಕ್ಕೆ ಒಳಸಟ್ಟವರ ಪೂರ್ವದ ವರ್ಣ ಕುಲ ಜಾತಿಗಳು ಉಳಿಯುವುದಿಲ್ಲ.

"ಶಿವ ಸಂಸ್ಕಾರ ಸಂಯುಕ್ತೇ ಜಾತಿ ಭೇದಂ ನ ಕಾರಯೇತ್ ।
ಶಿವಲಿಂಗೇ ಶಿಲಾಬುದ್ಧಿಂ ಕುರ್ವಾಣ ಇವ ಪಾತಕಃ'

ಎಂಬುದಾಗಿ ಶಿವರಹಸ್ಯವಚವವು ಸಾಕ್ಷಿಯಾಗಿದೆ.

'ಗುರು ಹಸ್ತದೊಳು ಪುನರ್ಜಾತನಾದ ಬಳಿಕ ಭಕ್ತನಲ್ಲಿ ಆವ ಜನ್ಮ ಜಾತಿಯ ಬೆದಕಲಪ್ಪುದು ? ಅವೆಲ್ಲ ಪ್ರಾಕೃತಿರಿಗಲ್ಲದೆ ಅಪ್ರಾಕೃತರಿಗುಂಟೆ ಹೇಳಾ? ಸಾಕ್ಷಿ. "ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಂಬುಜಾತ್ । ಪುನರ್ಜಾತ

ಸ್ವಾತ್ಮ ಜನ್ಮ ಜಾತ್ಯಾದೀನ್ನ ಚ ಕಲ್ಪಯೇತ್'-ಎಂಬ ಆಗಮನರಿಯದೆ ನಿಮ್ಮ ಶರಣರಲ್ಲಿ ಜಾತಿಯ ಹುಡುಕುವ ಕಡು ಪಾತಕಿಗಳ ಎನ್ನುತ್ತ ತೋರದಿರಯ್ಯ ಕೂಡಲ ಚನ್ನ ಸಂಗಮದೇವ.'

ವೀರಶೈವರಲ್ಲಿ ವರ್ಣಗಳಿವೆಯೆಂದರೆ ಅವು ನಾಲ್ಕೂ ಪ್ರತಿವ್ಯಕ್ತಿಯಲ್ಲಿ ಗುಣ ಪ್ರಧಾನವಾಗಿರುತ್ತದೆ. ಇತರರಂತೆ ವರ್ಗೀಭವಿಸಿ ಇರುವುದಿಲ್ಲ. ಆದ್ದರಿಂದ ಶಿವಬಕ್ತರಲ್ಲಿ ಜಾತಿ ಭೇದವನ್ನು ಎಂದಿಗೂ ಮಾಡಬಾರದು; ಮಾಡಿದರೆ ಮಹಾ ದೋಷ ಬಿಡದು.

'ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ಕುಲವುಂಟೆ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ ? ಅಪವಿತ್ರ ನುಡಿಯ ನುಡಿವ ಸೂತಕವೇ ಪಾತಕ !'

ದಾಸೀ ಪುತ್ರನಾಗಲಿ, ವೇಶ್ಯಾಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ. ಹೀಗಲ್ಲದೆ ಉದಾಶೀನವ ಮಾಡಿ ಬಿಡುವವರಿಗೆ ಪಂಚ ಮಹಾ ಪಾತಕ, ಕಾಣಾ ಕೂಡಲಸಂಗಮದೇವಾ.'

ಶಿವ ಸಂಸ್ಕಾರದ ವಿಶುದ್ಧತೆಗೆ ವೈಶಾಲ್ಯತೆಗೆ ಈ ವಚನಗಳು ನಿಕಷವಾಗಿವೆ. ಮಾಹೇಶ್ವರನು ಪೂರ್ವಾಶ್ರಯದ ವರ್ಣ ಕುಲ ಜಾತಿಗಳಿಗೆ ಬಲಿಯಾಗುವುದಿಲ್ಲ. ಇವುಗಳನ್ನು ಮೀರಿ ವಿಶಾಲವಾಗಿ ಭಾವ ವಿಕಾಸವನ್ನು ಪಡೆದು ಸಾರ್ವಜನಿಕರ ಸೇವೆಗೆ ಸಮರ್ಥನಾಗುತ್ತಾನೆ. ಎಲ್ಲರೂ ಶಿವ ಸಂಸ್ಕಾರ ಪಡೆದು ವಿಶುದ್ಧರಾಗ ಬೇಕೆಂಬುದೇ ಮಾಹೇಶ್ವರನ ಮನೀಷೆ, ಆದರಿಂದಾಗಿ ಪೂರ್ವಾಶ್ರಯ ಕರ್ಮಗಳನ್ನು ಕುಲವನ್ನು ಪೂರ್ವಾಶ್ರಯಕ್ಕೆ ಅಂಟಿಕೊಂಡಿರುವ ಬಂಧು ಬಳಗವನ್ನು ಸಹ ಸಂಶಯವಿಲ್ಲದೆ ನಿಶ್ಚಯ ಮನಸ್ಸಿನಿಂದ ನಿರಸನ ಮಾಡಿ ಮೊದಲು ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸುತ್ತಾನೆ. ವಿಶ್ವಾದರ್ಶವನ್ನಾಗಿಸುತ್ತಾನೆ. ಮಾನವೀಯ ಮಂಗಳ ಭಾವನೆಗಳನ್ನು ಬೆಳಸುತ್ತಾನೆ. ಮಹಾತ್ಮತೆಯನ್ನು ಮೈಗೂಡಿಸಿ ಕೊಳ್ಳಲು ಮನಸ್ಸು ಮಾಡುತ್ತಾನೆ, ಇದು ತುಂಬಾ ಕಠಿಣ ಕಾರ್ಯ, ಕಷ್ಟಕರ ಕಾರ್ಯ, ಆದರೂ ನಿಜವಾದ ಮಾಹೇಶ್ವರನು ಧೈರ್ಯ ಸಾಹಸ ಔದಾರ್ಯಗಳಿಂದ ಕೈಗೊಂಡು ಮುಂದುವರಿಸುತ್ತಾನೆ. ಕರ್ಮ ಜನ್ಮ ಜನ್ಯ ಜಾತಿವರ್ಣಗಳೆಂಬ ರೋಗಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡುತ್ತಾನೆ.

"ಪೃಥ್ವಿಯ ಪೂರ್ವಾಶ್ರಯವನಳಿದ ಭಕ್ತಂಗೆ ಆಚಾರ ಲಿಂಗ ಸಾಹಿತ್ಯ. ಅಪ್ಪುವಿನ ಪೂರ್ವಾಶ್ರಯವನಳಿದ ಮಾಹೇಶ್ವರಂಗೆ ಗುರು ಲಿಂಗ ಸಾಹಿತ್ಯ; ಅಗ್ನಿಯ ಪೂರ್ವಾಶ್ರಯವನಳಿದ ಪ್ರಸಾದಿಗೆ ಶಿವಲಿಂಗ ಸಾಹಿತ್ಯ. ವಾಯುವಿನ ಪೂರ್ವಾಶ್ರಯವನಳಿದ ಪ್ರಾಣಲಿಂಗಿಗೆ ಜಂಗಮಲಿಂಗ ಸಾಹಿತ್ಯ. ಆಕಾಶದ ಪೂರ್ವಾಶ್ರಯವನಳಿದ ಶರಣಂಗೆ ಪ್ರಸಾದ ಲಿಂಗ ಸಾಹಿತ್ಯ. ಆತ್ಮನ ಪೂರ್ವಾಶ್ರಯವನಳಿದ ಐಕ್ಯಂಗೆ ಮಹಾಲಿಂಗ ಸಾಹಿತ್ಯ. ಇಂತಿ ಕ್ಷಡಂಗಂಗಳ ಪೂರ್ವಾಶ್ರಯವನಳಿದ ನಿರಾಳಂಗೆ ಸೌರಾಷ್ಟ್ರ ಸೋಮೇಶ್ವರ ಲಿಂಗ ಒಮ್ಮುಖ."

ಇದು ಪೂರ್ವಾಶ್ರಯ ನಿರಸನದ ಮತ್ತೊಂದು ಹಂತ. ಪೂರ್ವಾಶ್ರಮ ನಿರಸನ, ಪೂರ್ವವರ್ಣ ನಿರಸನ, ಪೂರ್ವಜಾತಿ ನಿರಸಗಳನ್ನು ಮಾಡಿದ ಬಳಿಕ ಪೂರ್ವ ಭೂತ, ಆತ್ಮ, ತನ್ಮಾತ್ರಗಳ ಆಶ್ರಯ ನಿರಸನವನ್ನು ನಿರೂಪಿಸಿದೆ. ಈ ಆದಯ್ಯನ ವಚನ. "ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಇಚ್ಛೆಯುಳ್ಳನ್ನಕ್ಕ ಜಂಗಮ (ಮಾಹೇಶ್ವರ) ನಲ್ಲ. ಪುತ್ರ ಮಿತ್ರ ಕಳತ್ರರಲ್ಲಿ ಮೋಹವುಳ್ಳನ್ನಕ್ಕ ಭಕ್ತನಲ್ಲ. ಮಾತಿನ ಮಾಲೆಯ ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕ ಅದ್ವೈತಿಯಲ್ಲ. ಅಂಗ ಪ್ರಾಣದಾಶೆಯುಳ್ಳನ್ನಕ್ಕ ನಿಸ್ಪೃಹನಲ್ಲ. ಸೌರಾಷ್ಟ್ರ ಸೋಮೇಶ್ವರ ಲಿಂಗವನರಿಯುದವನ್ನಕ್ಕ ಸ್ವಾನುಭಾವಿಯಲ್ಲ."

ಈ ವಚನದಲ್ಲಿ ಮಾಹೇಶ್ವರನು ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಪೂರ್ವಾಶ್ರಯ ನಿರಸವನ್ನು ಮಾಡಬೇಕೆಂದು ಹೇಳಿ ಇಂದ್ರಿಯ ನಿರಸನವನ್ನು ಸೂಚಿಸಿದೆ, ಭಕ್ತ, ಅದ್ವೈತಿ, ನಿಸ್ಪೃಹಿ ಇವರ ನಿರಸನಗಳನ್ನು ವಿವರಿಸಿದೆ, ನಿರಸನ ಮಾಡುವುದೊಂದು ವಿಧಾನ. ನಿಜವನ್ನು ಅರಿಯುವುದು ಇನ್ನೊಂದು ವಿಧಾನ, ಅನುಭಾವಿಯಾಗಬಹುದು ಸ್ವಾನುಭಾವಿಯಾಗುವುದು ಕಠಕಷ್ಟ. ನಿಜ ಲಿಂಗವನರಿಯದೆ ಅಳವಡಿಸಿಕೊಳ್ಳದೆ ಸ್ವಾನುಭಾವಿಯಾಗಲು ಸಾಧ್ಯವಿಲ್ಲ, ಅಂತೆಯೇ ಮಾಹೇಶ್ವರನು ಹಿಂದೆ ಹೇಳಿದವುಗಳನ್ನೆಲ್ಲ ನಿರಸನ ಮಾಡಿ ತನ್ನದೇ ಆದ ಗುರು ಲಿಂಗವನ್ನು ಅರಿತಾಗಬೇಕು. ಆಚಾರ ಲಿಂಗವನ್ನರಿತರೆ ಸ್ವಾನುಭಾವಿ ಭಕ್ತ, ಗುರು ಲಿಂಗವನ್ನರಿತರೆ ಸ್ವಾನುಭಾವಿ ಮಾಹೇಶ್ವರ.

'ಕಾವಿಂಸಿ ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು ತನ್ನ ಕಾಯವ ಮುಟ್ಟಲೀಯದೆ ಲಿಂಗಾರ್ಪಿತವ ಮಾಡುವಲ್ಲಿ ಪ್ರಸಾದಿ. ಕಲ್ಪಿಸಿ ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು ತನ್ನ ಭಾವವ ಮುಟ್ಟಲೀಯದೆ ಲಿಂಗಾರ್ಪಿತವ

ಮಾಡುವಲ್ಲಿ ಪ್ರಸಾದಿ. ಭಾವಿಸಿ ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು ತನ್ನ ಮನವ ಮುಟ್ಟಲೀಯದೆ ಲಿಂಗಾರ್ಪಿತವ ಮಾಡುವಲ್ಲಿ ಪ್ರಸಾದಿ. ಇಂತೀ ಅರ್ಪಿತಾವಧಾನದ ಮರ್ಮವನರಿಯಬಲ್ಲಡೆ ಕೂಡಲ ಚನ್ನ ಸಂಗಯ್ಯನಲ್ಲಿ ಆತನೇ ಅಚ್ಚ ಪ್ರಸಾದಿ,"

ಮಾಹೇಶ್ವರ ಪ್ರಸಾದಿಯಾಗ ಬೇಕಾದರೆ ಈ ತ್ರಿವಿಧ ಪದಾರ್ಥಗಳ ಪೂರ್ವಾಶ್ರಯನಿರಸನವನ್ನಾಚರಿಸಬೇಕು. ಮಾಹೇಶ್ವರ ಪ್ರಾಣಲಿಂಗಿಯ ಪ್ರಾಣ ವಾಯು ಸ್ಪರ್ಶತ್ವಕ್ಕುಗಳ ಪೂರ್ವಾಶ್ರಯವ ಕಳೆಯಬೇಕು. ಮಾಹೇಶ್ವರಶರಣನು ಜ್ಞಾನ, ಆಕಾಶ, ಶಬ್ದ, ಕರ್ಣಗಳ ಪೂರ್ವಾಶ್ರಯವನ್ನು ಪರಿಹರಿಸಬೇಕು. ಮಾಹೇಶ್ವರ ಐಕ್ಯನು ಭಾವ, ಆತ್ಮ, ತೃಪ್ತಿಗಳ ಪೂರ್ವಾಶ್ರಯವನ್ನು ನಿರಾಕರಿಸಬೇಕು.

"ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ? ಗುರುಕಾರುಣ್ಯವ ಪಡೆದ ಭಕ್ತರನು ಹಿಂದಣ ಪೂರ್ವಾಶ್ರಯವ ಬೆರಸಿದಡೆ, ಆಚಾರದ್ರೋಹ. ಗುರುದ್ರೋಹ, ಲಿಂಗದ್ರೋಹ, ಜಂಗಮದ್ರೋಹ ಪಾದೋದಕದ್ರೋಹ, ಪ್ರಸಾದ ದ್ರೋಹ! ಇಂತೀ ಷಡ್ವಿಧದ್ರೋಹ ಬೆಂದುದೆಂದರಿಯದವಂಗೆ, ಕುಂಭೀಪಾಕ ನಾಯಕ ನರಕದಲ್ಲಿಕ್ಕುವ ಕೂಡಲಚನ್ನಸಂಗಯ್ಯ."

"ಅಂಗದ ಮೇಲೆ ಲಿಂಗಧಾರಣವಾದ ಬಳಿಕ, ಮರಳಿ ಭವಿಯ ನಂಟನೆಂದು ಬೆರಸಿದಡೆ ಕೊಂಡ ಮಾರಿಗೆ ಹೋಹುದು ತಪ್ಪದು. ಈ ತ್ರಿವಿಧ ನಾಸ್ತಿಕರು ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆ, ಅಗ್ನಿಯಲ್ಲಿ ಶುದ್ಧವಾದ ಬಳಿಕ, ಅದು ತನ್ನ ಪೂರ್ವಕುಲವ ಬೆರಸುವುದೆ? ಸಾಕ್ಷಿ: "ಅಗ್ನಿದಗ್ಧಪಟಃ ಪ್ರಾಹುರ್ನ ಭೂಯೋ ಮೃತ್ತಿಕಾಯತೇ। ತಚ್ಛಿವಾಚಾರಸಂಗೇನ ನ ಪುನರ್ಮಾನುಷೋ ಭವೇತ್॥" ಇದು ಕಾರಣ, ಪೂರ್ವನಾಸ್ತಿಯಾದ ಭಕ್ತನಪೂರ್ವ, ಕೂ. ಚ. ಸಂ. ದೇವಾ." ಎಂದು ಚನ್ನಬಸವಣ್ಣನವರ ಅರ್ಥಪೂರ್ಣ ಅಭಿಪ್ರಾಯ. ಮತ್ತು "ಶಿಲೆಯೆಂಬ ಪೂರ್ವಾಶ್ರಯವ ಕಳೆದು ಲಿಂಗವೆಂದ. ನರನೆಂಬ ಪೂರ್ವಾಶ್ರಯವ ಕಳೆದು ಗುರುವೆಂದ. ಜಾತಿಸೂತಕದ ಪೂರ್ವಾಶ್ರಯವ ಕಳೆದು ಜಂಗಮವೆಂದ. ಎಂಜಲವೆಂಬ ಪೂರ್ವಾಶ್ರಯವ ಕಳೆದು ಪ್ರಸಾದವೆಂದ. ಇಂತೀ ಚತುರ್ವಿಧದ ಪೂರ್ವಾಶ್ರಯವ ಕಳೆಯಬಲ್ಲನಾಗಿ ಕೂಡಲಚನ್ನಸಂಗಾ, ನಿಮ್ಮ ಶರಣ ಸ್ವತಂತ್ರನು." ತನುವಿನ ಸ್ವಾರ್ಥಕ್ಕೆ ಪದಾರ್ಥದ ಪೂರ್ವಾಶ್ರಯವ ಕಳೆದು

ಲಿಂಗಕ್ಕೆ ಕೊಟ್ಟು ಕೊಂಬುದು ಶುದ್ಧ. ಮನದ ಸ್ವಾರ್ಥಕ್ಕೆ ರುಚಿಯ ಪೂರ್ವಾಶ್ರಯವ ಕಳೆದು ಲಿಂಗಕ್ಕೆ ಕೊಟ್ಟು ಕೊಂಬುದು ಸಿದ್ಧ. ಈ ಉಭಯ ಕ್ರಿಯಾಭಾವವಳಿದುಳಿದ ಪ್ರಸಿದ್ಧ ಪ್ರಸಾದವ ಕೂಡಲ ಚನ್ನಸಂಗಯ್ಯಾ, ನಿಮ್ಮ ಶರಣ ಬಸವಣ್ಣ ಬಲ್ಲ." ಅಂಗವೆಂಬ ಪೂರ್ವಾಶ್ರಯವನ್ನು ಕಳೆದು ಅಂಗವೆಲ್ಲ ಲಿಂಗವಾಗಿ ಅಂತೆಯೇ ಮನ ಭಾವಗಳ ಕಳೆದು ಲಿಂಗವಾಗಿ ಇರುತ್ತಾನೆ ಮಾಹೇಶ್ವರನು. ಲಿಂಗಪ್ರಸಾದಿಯಾಗಿರುತ್ತಾನೆ.—ಎಂದು ಹಾಡಿ ಪೂರ್ವಾಶ್ರಯ ನಿರಸನ ವಿಧಾನಗಳನ್ನು ಪೂರ್ಣಗೊಳಿಸಿದ್ದಾರೆ ಚನ್ನಬಸವಣ್ಣನವರು.

## ನಿರಸನವಾದ-ನೇತಿವಾದ

ನಿರಸನವಾದ ಶಿವಸಿದ್ಧಾಂತದ್ದು; ನೇತಿವಾದ ವೇದಾಂತದ್ದು. ನಿರಸನ ವಾದಕ್ಕೆ ಏಕಮುಖ. ನೇತಿವಾದಕ್ಕೆ ದ್ವಿಮುಖ. ನಿರಸನವೆಂದರೆ ಪದಾರ್ಥಗಳಲ್ಲಿ ಪ್ರಕೃತಿಯಲ್ಲಿ ಇರುವ ಸಲ್ಲದ ಗುಣ ಧರ್ಮಗಳನ್ನು ನಿರಾಕರಿಸುವುದು. ದ್ರವ್ಯಗಳ ನ್ನಾಗಲಿ ದೇಹಾದಿಗಳನ್ನಾಗಲಿ ಶಿವಾದ್ವೈತವು ನಿರಾಕರಿಸುವುದಿಲ್ಲ. ಅವನ್ನು ದಿವ್ಯವಾಗಿಸಲು ಪ್ರಯತ್ನಿಸುತ್ತದೆ. ಇನ್ನು ವೇದಾಂತದಲ್ಲಿ ನೀತಿ, ನಿರಾಕರಣ ವೆಂದು ಇಬ್ಬಗೆಯಾಗಿದೆ. ನೇತಿಯೆಂದರೆ ದ್ರವ್ಯಗಳಾಗಲಿ ದೃಶ್ಯವಾಗಲಿ ದೇಹಾದಿ ಗಳಾಗಲಿ ಇಲ್ಲ ಮತ್ತು ಅಲ್ಲ ಎಂದು ಪೂರ್ಣವಾಗಿ ಅಲ್ಲಗಳೆಯುದು. ನಿರಾಕರಣ ವೆಂದರೆ ದ್ರವ್ಯಾದಿಗಳ ಗುಣ ಧರ್ಮಗಳು ಆತ್ಮನಲ್ಲಿ ಇಲ್ಲೆಂದು ಹೇಳುವುದು. ನಿದರ್ಶನಕ್ಕಾಗಿ, ಜಗತ್ತು ಸುಳ್ಳೆಂಬುದು ನೇತಿವಾದ. ಜಗದ್ರೂಪಾದ ಪಂಚ ಭೂತಗಳ ಗುಣ ಧರ್ಮಗಳು ಆತ್ಮನಿಗಿಲ್ಲೆಂಬುದು ನಿರಾಕರಣವಾದ. ತನು ಸುಳ್ಳೆಂ ಬುದು ನೇತಿವಾದ. ತನುವಿನ ಗುಣಧರ್ಮಗಳು ಆತ್ಮನಿಗಿಂಲ್ಲೆಂಬುದು ನಿರಾಕರಣ ವಾದ. ಈ ನೇತಿ ನಿರಾಕರಣವಾದ ಇದೊಂದು ವಿಚಿತ್ರವಾದ. ಒಂದಕ್ಕೊಂದು ವಿರುದ್ಧವಾದ. ದ್ರವ್ಯವೇ ಇಲ್ಲದ ಬಳಿಕ ದ್ರವ್ಯದ ಗುಣಧರ್ಮಗಳೆಲ್ಲಿಂದ ಬರು ವವೋ ತಿಳಿಯದ ಮಾತಾಗಿದೆ. ಇಂದ್ರಿಯ ಗುಣ ಧರ್ಮಗಳು ಅಂತಃಕರಣ ಗುಣ ಧರ್ಮಗಳು ಅತ್ಮನಿಗಿಲ್ಲೆಂದು ಹೇಳುವುದು ಅಷ್ಟೇ ಆಚ್ಚರಿಯ ಮಾತಾಗಿದೆ. ಸುಖ-ದುಃಖ, ಪುಣ್ಯ ಪಾಪ, ಮಾನಾಪಮಾನಗಳು ದೇಹಕ್ಕೋ ಆತ್ಮಕ್ಕೋ ಎಂಬಪ್ರಶ್ನೆ ಎದುರಿಸುತ್ತದೆ. ದೇಹಕ್ಕೆಂದರೆ ದೇಹಜಡ. ಸುಳ್ಳು. ಆತ್ಮಕ್ಕೆಂದರೆ ಅದು ಆಜಡ, ಬಯಲು. ಇದರಿಂದಾಗಿ ದೇಹಾತ್ಮಗಳೆರಡಕ್ಕೂ ಉಂಟಾ ಗುತ್ತವೆಯೆಂದು ಹೇಳಬೇಕು. ದೇಹಸಂಗದಿಂದ ಆತ್ಮಕ್ಕೂ ಆತ್ಮಸಂಗದಿಂದ ದೇಹಕ್ಕೂ ಉಂಟಾಗುತ್ತವೆ. ಆತ್ಮನು ಅಂಶನಾಗಿರುವುದರಿಂದ ನ್ಯೂನಾಧಿಕ ಭಾವಗಳು ಇದ್ದೇಇರುತ್ತವೆ. ಇರುವುದರಿಂದ ನಿರ್ದ್ವಂದ್ವನಾಗೆಂದು ಆತ್ಮನಿಗೆ ಉಪದೇಶವಿರುತ್ತದೆ. ಅಲ್ಲದೆ ದುಃಖಕ್ಕೆ ಪಾಪಕ್ಕೆ ಕಾರಣಗಳಾದ ಅಜ್ಞಾನ— ಅನಾಚಾರಗಳನ್ನು ನಿರಸನಮಾಡೆಂದು; ಸುಖ-ಪುಣ್ಯಗಳಿಗೆ ಸಾಧನಗಳಾದ ಜ್ಞಾನ

(ವಿದ್ಯೆ) ಆಚಾರಗಳನ್ನು ಅಂಗೀಕರಿಸೆಂದು ಬೋಧಿಸುವ ಪ್ರಸಕ್ತಿಯುಂಟು; ಪ್ರಪತ್ತಿಯುಂಟು. ಕಾಯ್ದ ಕಬ್ಬಿಣದ ಸಂಗದಿಂದ ಬೆಂಕಿಯೂ ಚಮಟಿಯ ಏಟುಗಳನ್ನು ತಿನ್ನುವಂತೆ ತನುವಿಡಿದ ಆತ್ಮನೂ ಸುಖ–ದುಃಖಾದಿಗಳಿಗೆ ಭಾಗಿಯಾಗುತ್ತಾನೆ. ಸುಖಸ್ವರೂಪನಾಗಿದ್ದರೂ ದುಃಖಿಯಾಗುವುದುಂಟು; ಸವಿದ್ರೂಪನಾದರೂ ಅಜ್ಞಾನಿಯೆನಿಸುವುದುಂಟು; ಸದ್ರೂಪನಾದರೂ ಅಸದ್ರೂಪನೆನಿಸುವುದುಂಟು. ಇಲ್ಲವಾದರೆ "ಅಸತೋ ಮಾಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ; ಮೃತ್ಯೋರ್ಮಾ ಅಮೃತಂ ಗಮಯ" ಎಂಬ ಶ್ರುತಿನುತಿ ವ್ಯರ್ಥವಾಗಬೇಕಾದೀತು?

ಈ ಅವಸ್ಥೆಗಳಿಗೆ ಈ ಸಂಗದೋಷಗಳಿಗೆ ಕಾರಣಗಳು ಅಹಂಕಾರ ಮಮಕಾರಗಳು. ಪೂರ್ವಾಶ್ರಮದ ಸಹೋದರ ಸಹೋದರಿಯರು ತಂದೆ–ತಾಯಿಗಳು ತನ್ನಂತೆ ಶಿವಸಂಸ್ಕಾರಕ್ಕೆ ಬರದಿದ್ದರೆ ಅವರ ಮಮಕಾರವನ್ನು ಬಿಡಬೇಕು. ಅಂತೆಯೇ ಪೂರ್ವಾಶ್ರಯದ ಕುಲ ಜಾತಿಗೋತ್ರಗಳನ್ನು ಬಿಡಬೇಕು. ಕಾಯಕರಣೇಂದ್ರಿಯಾದಿಗಳ ಮಮಕಾರ ಅಹಂಕಾರಗಳೆರಡನ್ನೂ ಪೂರ್ವಭಾವದಲ್ಲಿ ಬಿಡಬೇಕು. ಇವೇ ಲಿಂಗಪೂಜೆಗಾಗಿ ಸನ್ನದ್ಧವಾದಲ್ಲಿ ಗುರು ಜಂಗಮ ಸೇವೆಗಾಗಿ ಸಾಮಾಜಿಕ ಸಾರ್ವಜನಿಕ ಸೇವೆಗಾಗಿ ಸನ್ನದ್ಧವಾದಲ್ಲಿ ಇವನ್ನು ಕೆಡಿಸದೆ ಕಾಪಾಡಬೇಕು. ಇವೆಲ್ಲ ಶಿವಾಂಶಗಳೆಂದು ಶಿವನವೆಂದು ಭಾವಿಸಬೇಕು. ತಾನೂ ಶಿವಾಂಶಕನೆಂಬ ಭಾವವನ್ನು ಬೆಳಸಬೇಕು. ಗುರುಕಾರುಣ್ಯವನ್ನು ಪಡೆದು ಶಿವತ್ವವು ಸಮವೇಧಿಸಿಕೊಂಡ ಬಳಿಕ ಶಿವಾದ್ವೈತದಲ್ಲಿ ಯಾವುದೂ ಹೇಯವಲ್ಲ; ಎಲ್ಲವೂ ಉಪಾದೇಯ. ತಾನು ಅಂಗನಾದ ಬಳಿಕ ಎಲ್ಲವೂ ಮಂಗಲಮಯ. ಲಿಂಗಕ್ಕೆ ಗುರು—ಜಂಗಮಕ್ಕೆ ಅರ್ಪಣವಾದುದೆಲ್ಲವೂ ಪ್ರಸಾದ; ಪರಿಣಾಮನೀಯ. ಶಿವಾಚಾರ ಶಿವವಿಚಾರಗಳಲ್ಲಿರುವ ಕಾಯಕರಣೇಂದ್ರಿಯಗಳಿಂದ ಶಿವಾರ್ಪಿತವಾದ ಪ್ರತಿಪ್ರಸಾದದಿಂದ ಅಭ್ಯುದಯ ಶ್ರೇಯಗಳೆರಡು ಉಂಟಾಗುತ್ತವೆ. ಇದು ವೀರಶೈವ ಬಿಡುವ ಬಿಡದಿರುವ ಬಗೆಗಿರುವ ವಿಶ್ಲೇಷಣ ಸಂಶ್ಲೇಷಣ ವಿಚಾರ.

ಪರಿಶುದ್ಧ ಪ್ರಸಾದ ಪರಿಣಾಮ, ಪರಿಶುದ್ಧ ಅಂಗೋಪಾಂಗಗಳ ಗುಣಧರ್ಮಗಳ ಪರಿಣಾಮ ಲಿಂಗಕ್ಕೆ ಅಂದರೆ ಚೈತನ್ಯಕ್ಕೆ ಆಗುವುದುಂಟು. ಆ ಲಿಂಗಸಂಗದಿಂದ ಇವಕ್ಕೂ ಲಿಂಗಸ್ವರೂಪ, ಲಿಂಗಪರಿಣಾಮವಾಗುವುದುಂಟು. ಕಾಯ್ದು ಕೆಂಪಾದ ಕಬ್ಬಿಣದ ಪಿಂಡೆಲ್ಲ ಕೆಂಡವೇ ಆಗಿರುವಂತೆ ಲಿಂಗವ ಪೂಜಿಸಿ ಲಿಂಗಧರ್ಮ

ವನ್ನಾಚರಿಸಿ ಲಿಂಗಾನುಭವ ಲಿಂಗಾನಂದಗಳನಳವಡಿಸಿಕೊಂಡು ಲಿಂಗಸ್ವರೂಪವೇ ಆಗುವ ಸಲುವಾಗಿ ಇದಕ್ಕೆ ಅಡೆ ತಡೆಯಾಗುವ ಪೂರ್ವಾಶ್ರಯಗಳನ್ನು ನಿರಸನ ಮಾಡಹೇಳುವುದು ವೀರಶೈವ ಸಿದ್ಧಾಂತ. ಪದಾರ್ಥ ಹೇಯ; ಪ್ರಸಾದ ಉಪಾದೇಯ. ಮಾಂಸಮಯದೇಹ ಮಮಕಾರ ಹೇಯ; ಮಂತ್ರಮಯ ಕಾಯ ಮಮಕಾರ ಧ್ಯೇಯ. ಜೀವಭಾವ ಹ್ಯೇಯ; ಲಿಂಗಾಭಾವ ಉಪಾದೇಯ.

ಅಯಃಪಿಂಡವನ್ನು ತನ್ನಂತೆಮಾಡಿಕೊಳ್ಳುವ ಶಕ್ತಿ ಹೇಗೆಕೆಂಡಕ್ಕುಟೋ ಹಾಗೆ ಕಾಯ ಕರಣಾದಿಗಳನ್ನು ಅಂಗವನ್ನು ತನ್ನಂತೆಮಾಡಿಕೊಳ್ಳುವ ಶಕ್ತಿ ಲಿಂಗಕ್ಕುಂಟು. ಅಂತೆಯೇ 'ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ' ಎಂದು ರೇಣುಕಜಗದ್ಗುರುಗಳು ಹೇಳಿದ್ದಾರೆ. ಇಲ್ಲಿ ವಿಶೇಷಣಗಳಾದ ಅಂತಃಕರಣ–ದೇಹ ಪದಗಳು ಗಮನಾರ್ಹವಾದವು. ವೇದಾಂತದಂತೆ ಶಿವಸಿದ್ಧಾಂತವು ಶುದ್ಧ ದೇಹಾಂತಃಕರಣಗಳನ್ನು ನೇತಿಗಳೆಯುವುದಿಲ್ಲ. ಲಿಂಗೋಪಭೋಗಗಳನ್ನು ನೇತಿಗಳೆಯುವುದಿಲ್ಲ. ಶಿವಾದ್ವೈತದ್ದು ನಿತ್ಯನಿರಸನವಲ್ಲ; ಪೂರ್ಣ ನಿರಸನವಲ್ಲ, ದೇಹಾದಿಯಲ್ಲಿರುವ ಅಸತ್ತನ್ನು ನಿರಸನಮಾಡುತ್ತಾರೆ; ಸತ್ತೆಯನ್ನು ನಿರಸನ ಮಾಡುವುದಿಲ್ಲ. ಭವಿಯನ್ನು ನಿರಸನಮಾಡುತ್ತಾನೆ; ಅದೇ ಭವಿ ಭಕ್ತನಾದರೆ ನಿರಸನಮಾಡುವುದಿಲ್ಲ. ದ್ವೈತದಲ್ಲಿರುವಾಗ ಅದ್ವೈತವನ್ನು ನಿರಸನಮಾಡುತ್ತಾರೆ. ಇದಕ್ಕೆ ಮುಂದಿನ ಉಪಸ್ಥಲವಾದ 'ಸರ್ವಾಂಗ್ವೈತ ನಿರಸನ'ವು ನಿದರ್ಶನವಾಗಿದೆ. ಗುರುಕಾರುಣ್ಯಕ್ಕೆ ಮೊದಲು ಶರೀರಾದಿಗಳು–ಸಂಸಾರವು ಹ್ಯೇಯವೆನ್ನುತ್ತಾರೆ; ಗುರುಕಾರುಣ್ಯವಾದ ಬಳಿಕ ಹ್ಯೇಯವೆನ್ನುವುದಿಲ್ಲ. ಪ್ರಾಕೃತ ಪೈತಾಮಹಧರ್ಮಗಳನ್ನು ನಿರಸನಮಾಡುತ್ತಾರೆ. ಪರಿಶುದ್ಧ ಪರಮಾರ್ಥ ಧರ್ಮಗಳನ್ನು ಗುಣಗಳನ್ನು ನಿರಸನಮಾಡುವುದಿಲ್ಲ. ಪೂರ್ವಾಶ್ರಯ ನಿರಾಸಕರೇ ಹೊರತು ಉತ್ತರಾಶ್ರಯ ನಿರಾಸಕರಲ್ಲ.

# ಸರ್ವಾದ್ವೈತ ನಿರಸನಸ್ಥಲಂ-೪.

ಲಿಂಗನಿಷ್ಠೆಗೆ ಪ್ರತಿಕೂಲವಾದ ಪೂರ್ವಾಶ್ರಯದ ಗುಣಧರ್ಮಗಳನ್ನು ಧರ್ಮಿಗಳನ್ನು ನಿರಸನ ಮಾಡಹೇಳಿದಂತೆ ಅದೇ ಲಿಂಗನಿಷ್ಠೆಗೆ ದ್ವೈತಾಪತ್ತಿಯಲ್ಲಿ ಉಪಾಸ್ಯ—ಉಪಾಸಕ ಭಾವದಲ್ಲಿ ಅನುಕೂಲವಲ್ಲದ ಸರ್ವಾದ್ವೈತ ಭಾವವನ್ನೂ ಸಹ ಮಾಹೇಶ್ವರನು ನಿರಸನಮಾಡಬೇಕಾಗುತ್ತದೆ. ಸರ್ವಾದ್ವೈತ ಭಾವವನ್ನಿಟ್ಟುಕೊಂಡರೆ ಲಿಂಗಾಂಗ ಭಾವವಿರುವುದಿಲ್ಲ; ಪೂಜ್ಯ–ಪೂಜಕತೆ, ಸ್ವಾಮಿ-ಭೃತ್ಯ ಸಂಬಂಧ ಆಳವಡುವುದಿಲ್ಲ.

"ಸರ್ವಂ ಶಿವಮಯಂ ಜಗತ್." "ಸರ್ವಂ ಖಲ್ವಿದಂ ಬ್ರಹ್ಮ"

ಇವು ಸಮಷ್ಟಿ ಸರ್ವಾದ್ವೈತೋಕ್ತಿಗಳು.

"ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮಥಾಪಿ ವಾ।
ಶೇಷತ್ವಂ ನೈವ ಶೇಷಿತ್ವಂ ಸ ಮುಕ್ತಃ ಪರ ಉಚ್ಯತೇ॥

ಅಂಗನು ಕಾರ್ಯಕಾರಣತ್ವಗಳನ್ನು ಶೇಷಶೇಷಿತ್ವಗಳನ್ನು ಭೋಕ್ತೃತ್ವ ಜ್ಞಾತೃತ್ವಗಳನ್ನು ಸ್ವಪರಭಾವವನ್ನು ಜ್ಞಾತೃಜ್ಞೇಯ ಭಾವವನ್ನು ಪರಾಪರ ಮತ್ತು ಭಾವಾಭಾವ ವಿವೇಚನೆಯನ್ನು ವಿಧಿ ನಿಷೇಧಗಳನ್ನು ಪೂಜ್ಯ ಪೂಜಕತ್ವವನ್ನು ನಿಷ್ಪತ್ತಿಗೊಳಿಸಿಕೊಂಡರೆ ಅಂದರೆ ಕಳೆದುಕೊಂಡರೆ ವ್ಯಷ್ಟಿ ಸರ್ವಾದ್ವೈತವೆನಿಸುತ್ತದೆ. ಕ್ರಿಯಾಶೀಲನಾದ ಜ್ಞಾನಲೋಲನಾದ ಮಾಹೇಶ್ವರಾಂಗನಿಗೆ ಈ ಉಭಯ ಸರ್ವಾದ್ವೈತಗಳು ಇದೀಗ ಬೇಕಾಗಿಲ್ಲ. ಸಾಧಕನಾದ ಮಾಹೇಶ್ವರನಿಗೆ ಸರ್ವಾದ್ವಯ ಭಾವ ಸಮರ್ಪಕವಲ್ಲ. ಅರ್ಚನಾರ್ಪಣಾದಿ ಸಾಧನ ಸಾಗದು.

"ಪೂಜ್ಯ ಪೂಜಕಯೋರ್ಲಿಂಗ ಜೀವಯೋರ್ಭೇದವರ್ಜನೇ।
ಪೂಜಾಕರ್ಮಾದ್ಯಸಂಪತ್ತೇರ್ಲಿಂಗ ನಿಷ್ಠಾ ವಿರೋಧತಃ॥

ಸರ್ವಾದ್ವೈತ ವಿಚಾರಸ್ಯ ಜ್ಞಾನಾಭಾವೇ ವ್ಯವಸ್ಥಿತೇಃ।
ಭವೇನ್ಮಾಹೇಶ್ವರಃ ಕರ್ಮೀ ಸರ್ವಾದ್ವೈತನಿರಾಸಕಃ॥"

ಪೂಜ್ಯ-ಪೂಜಕರಾದ ಲಿಂಗಾಂಗರಿಗೆ ಭೇದವಿಲ್ಲದ ಹೋದರೆ ಪೂಜಾಕ್ರಿಯುಗಳಿಗೆ ಎಡೆಯಿಲ್ಲದಾಗುತ್ತದೆ; ಮಾಹೇಶ್ವರನ ಲಿಂಗನಿಷ್ಠೆಗೆ ಭಂಗ ಬರುತ್ತದೆ.

ಸರ್ವಾದ್ವೈತಪರನಿಗೆ ಜ್ಞಾನಶೂನ್ಯತ್ವವು ಪ್ರಾಪ್ತವಾಗುತ್ತದೆ. ಮಾಹೇಶ್ವರನಾದರೋ ಜ್ಞಾನಾರಾಧಕನಾಗಿರುತ್ತಾನೆ. ಶಿವತತ್ತ್ವದ ಸಂಪೂರ್ಣಜ್ಞಾನವನ್ನು ಸಂಪಾದಿಸದೆ ಸಾರ್ವಾದ್ವೈತವೂ ಸಂಭವಿಸದು. ಆದರಿಂದಾಗಿ ಕ್ರಿಯಾಜ್ಞಾನನಿರತನಾದ ಮಹೇಶ್ವರನು ಸರ್ವಾದ್ವೈತದ ನಿರಾಸಕನಾಗಿಯೇ ತೀರಬೇಕಾಗುತ್ತದೆ ಸದ್ಯಕ್ಕೆ!

ಮಾಹೇಶ್ವರನು ಭೇದವಾದಿ. ಪೂಜಾಕ್ರಿಯಾನಿರತ. ಶಿವಜ್ಞಾನ ಸಾಧಕ. ಹೀಗಿರುವಾಗ ಇವನಿಗೆ ಕೊನೆಯದಾದ ಸರ್ವಾದ್ವೈತ ಸ್ವರೂಪವು ಅನವಸ್ಯಕ; ಸರ್ವಾದ್ವೈತ ಸಿದ್ಧಿಯೂ ಅಸಾಧ್ಯ.

ಬೀಜ ಬಿತ್ತಿದೊಡನೆ ಫಲಿಸಲಾರದು; ಫಲಿಸಬಾರದು. ಮೊಳೆದು ಬೆಳೆದು ಬರಬೇಕು. ಹೀಗಾಗಲು ಕೃಷಿಯಾಗಬೇಕು. ಕಾಪಾಡುವ ಕ್ರಿಯೆ ನಡೆಯಬೇಕು. ಕೃಷಿ-ಕ್ರಿಯೆಗಳನ್ನು ಹದನೋಡಿ ಕಾಲ ಕಾಲಕ್ಕೆ ಏನೇನು ಹೇಗೇಗೆ ಮಾಡಬೇಕೆಂಬ ಜ್ಞಾನಬೇಕು. ಕಸಿಗಿಡಗಳು ಎಳೆಯದರಲ್ಲಿಯೇ ಕಾಯಾಗುತ್ತವೆ. ಮುಂದಿನ ದೃಷ್ಟಿಯಿಂದ ಆಕಾಯಿಗಳನ್ನು ಉಳಿಸಬಾರದು. ತರಿದುಹಾಕಬೇಕು. ಫಲನಿರಸನ ಮಾಡಬೇಕು. ಇದರಿಂದ ಮುಂದೆ ಪೂರ್ಣಲಾಭವಿದೆ. ಇದರಂತೆ ದೃಕ್ಕ್ರಿಯೆಗಳಳವಡದೆ ಸರ್ವಾದ್ವೈತ ಭಾವನೆಯನ್ನು ಸಾಧಕನಿಗೆ ತಂದುಕೊಡುವುದು ವಿಹಿತವಲ್ಲ. ಒಳಗೂ ಹೊರಗೂ ಕೂಡ ಮಾಹೇಶ್ವರನು ಸರ್ವಾದ್ವೈತವನ್ನು ಸ್ವೀಕರಿಸಬಾರದು 'ಬಳಸದಿರದ್ವೈತವನು ಬಾಹ್ಯದಲ್ಲಿ' ಎಂದರು ನಿಜಗುಣರು.

ಚಿತ್ತಶುದ್ಧಿಯಾಗದೆ ಚಿತ್ತೈಕಾಗ್ರತೆ ಯುಂಟಾಗದೆ ಬುದ್ಧಿಬಲ ಬೆಳೆಯದೆ 'ಸರ್ವಾದ್ವೈತ'ದ ಸುದ್ದಿಗೆ ಹೋಗಬಾರದು. ಚಿತ್ತಶುದ್ಧಿಗೆ ಲಿಂಗಾರ್ಚನೆ, ಚಿತ್ತೈಕಾಗ್ರತೆಗೆ ಲಿಂಗನಿಷ್ಠೆ ಮಾಹೇಶ್ವರನಿಗೆ ಮುಖ್ಯವಾಗಿರಬೇಕು ಈ ಸತ್ಕ್ರಿಯೆಯಿಂದ ಮಾಹೇಶ್ವರನ ಚಿತ್ತಸತ್ವ ಸಮೃದ್ಧಿಯಾಗುತ್ತದೆ. ಬುದ್ಧಿಬಲವೃದ್ಧಿ

ಯಾಗಬೇಕಾದರೆ ಜ್ಞಾನಶಕ್ತಿ ಬೆಳೆಯಬೇಕು. ಇದಾಗಬೇಕಾದರು ಇಷ್ಟಲಿಂಗಾಂ ರ್ಗತ ಪ್ರಾಣಲಿಂಗ—ಭಾವಲಿಂಗಗಳ ವಿಚಾರವನ್ನು ಪೂರ್ಣ ಅರಿಯಬೇಕತ ಆಚಾರಕ್ರಿಯೆಯಿಂದ ಕಾಯೇಂದ್ರಿಯಗಳನ್ನು ಶುದ್ಧವಿಸಿದರೆ ವಿಚಾರರೂಪ ಜ್ಞಾನ ದಿಂದ ಅಂತಃಕರಣಗಳ ಸತ್ವವನ್ನು ಅಚ್ಚನೆಲೆಯಲ್ಲಿ ಹೆಚ್ಚುವಂತಾಗಿಸಬೇಕು.

ಇಷ್ಟಾಗಬೇಕಾದರೆ ಲಿಂಗಾಂಗಗಳಲ್ಲಿ ಪೂಜ್ಯ—ಪೂಜಕಭಾವ, ಸ್ವಾಮಿ—ಭೃತ್ಯಭಾವ ಇದ್ದಾಗಬೇಕು. ಜ್ಞಾತೃ ಜ್ಞಾನಜ್ಞೇಯ ಭಾವಬೇಕು. ಇವಿಲ್ಲದೆ ಸರ್ವಾದ್ವೈತಸಿದ್ಧಿಯು ಸಂಪೂರ್ಣವಾಗಿ ಪ್ರತಿಷ್ಠಿತವಾಗದು. ಕ್ರಿಯಾಹೀನ—ಜ್ಞಾನಹೀನ ಸರ್ವಾದ್ವೈತವು ಕೇವಲ ವಾಗದ್ವೈತವಾದೀತು, ಆಗುತ್ತದೆ. ಇದರಿಂದ ಏನು ಫಲ?

ಈ ಭೇದಭಾವವು ಅಭೇದಕ್ಕೆ ಅತ್ಯಂತ ಅಸಂಗತಿ ಪಾದುದಲ್ಲ. ದೇಹೇಂದ್ರಿಯಗಳಂತೆ ವೃಕ್ಷಶಾಖೆಗಳಂತೆ ನೀರು ತೆರೆಗಳಂತೆ ಅಭೇದದೊಳಗಿನ ಭೇದ. ಇಂದ್ರಿಯಗಳಿಲ್ಲದ ದೇಹ ಪೂರ್ಣವಲ್ಲ. ಶಾಖೆಗಳಿಲ್ಲದ ಅಥವಾ ಎಲೆ ಹೂವು ಕಾಯಿಗಳಿಲ್ಲದ ವೃಕ್ಷ ಪೂರ್ಣವಲ್ಲ. ಕ್ರಿಯೆ ಜ್ಞಾನಾವಧಾನ ಅನುಭ ವಾನಂದಗಳಿಲ್ಲದ ಅಥವಾ ಅಳವಡದ 'ಸರ್ವಾದ್ವೈತ'ವು ಶೋಭಿಸದು, ಸ್ಥಿರ ವಾಗದು; ಸರ್ವಕ್ಕೂ ವೇಧಿಸದು. ಇವನ್ನು ಅಳವಡಿಸಿಕೊಳ್ಳುವಾಗ ಇವುಗಳಿಂದ ನ್ಯೂನ್ಯವಾಗಿರುವಾಗ 'ನಾನೇ ಶಿವ'ನೆಂದು ಬರೀ ಹೇಳಿಕೊಂಡರೆ ಬಂದ ಭಾಗ್ಯ ವೇನು? ಬರೀ ಮಾತಿನ ಮಾಲೆಯಿಂದ ಸರ್ವಾದ್ವೈತವು ಸರ್ವಾಂಗದಲ್ಲಿ ಸರ್ವ ಜಗರಂಗದಲ್ಲಿ ಸಮನಿಸುವುದಲ್ಲ. "ಆನು ಬಲ್ಲೆನೆಂಬ ನುಡಿ ಎನ್ನನಿರದಿರಿದು ಸುಡದೆ?" ಎಂದ ಚನ್ನಬಸವಣ್ಣನವರು. "ಅದ್ವೈತಿಗಳು ಲಿಂಗಾರಾಧನೆ ಹುಸಿ ಯೆಂದು ಕೆಟ್ಟರು." ಎಂದು ಅವರೇ ಹೇಳಿರುವರು.

ಉಪಾಸ್ಯ ಉಪಾಸಕರು ಲಿಂಗಾಂಗರು. ಅಧಿಕ ನ್ಯೂನ ಭಾವವುಳ್ಳವರು. ಲಿಂಗಾಂಗಸ್ಥಲ ಭೇದವುಳ್ಳವರು. ಶಿವನಲ್ಲಿ ಶಕ್ತಿಯ ಕ್ಷೋಭೆಯಿಂದ ಅಂದರೆ ಕಿಂಚಿಚ್ಚಲನದಿಂದ ತೆರೆಯಿಲ್ಲದ ಕಡಲಲ್ಲಿ ತೆರೆ ತೋರುವಂತೆ ತೋರಿದರು. ಶಿವನ ಅಧಿಕಾಂಶವು ಲಿಂಗದಲ್ಲಿ ನ್ಯೂನಾಂಶವು ಅಂಗನಲ್ಲಿ ಇರುವುದು. ಲಿಂಗಾಂಗ ಭಾವದಿಂದ ಭೇದವಾಗಿದ್ದರೂ ಶಿವಸ್ವರೂಪದಿಂದ ಅಭಿನ್ನರಾಗಿದ್ದಾರೆ. ಮಾಹೇಶ್ವರಾಂಗನು ಮಾರ್ಗಕ್ರಿಯೆಯಲ್ಲಿ ಉಪಾಸನೆಯ ಸ್ಥಿತಿಯಲ್ಲಿ ಭೇದದಂತಿರು

ವರು. ಅಂಗನು ಲಿಂಗವನ್ನು ಪೂಜಿಸುವ ಪ್ರಕ್ರಿಯೆಯಲ್ಲಿ ಲಿಂಗನಿಷ್ಠೆಯಲ್ಲಿ ಲಿಂಗ ಜ್ಞಾನಾರ್ಜನೆಯಲ್ಲಿ ನಿರತನಾಗಿರುವುದರಿಂದ ಭೇದ ಪ್ರತಿಪತ್ತಿಯಿದೆ; ಸರ್ವಾದ್ವೈತ ನಿರಸನವಿದೆ.

ಮಾಹೇಶ್ವರಾಂಗನ ಉಪಾಶ್ಯ ಮೂರ್ತಿಯಾದ ಗುರುಲಿಂಗವು ಕರ್ತೃಸಾದಾಖ್ಯವಾಗಿದೆ. ಮಾಹೇಶ್ವರಾಂಗನು ಜಲತತ್ತ್ವದಿಂದ ಪರಿಣಮಿಸಿದ್ದಾನೆ. ಇದರಿಂದಾಗಿ ಗುರುಲಿಂಗಕ್ಕೆ ಉಪಾಶ್ಯತ್ವವು ಸಹಜವಾಗಿದೆ. ಅಲ್ಲದೆ ಸಂಕೋಚವೇ ಮಲ; ಸಂಕೋಚ ಸ್ಥಿತಿಯೇ ಅಂಗ. ವಿಕಾಸವೇ ಕಲೆ ಅಥವಾ ಕಳೆ: ವಿಕಾಸ ಸ್ಥಿತಿಯೇ ಲಿಂಗ. ಕ್ರಿಯಾ ಸಂಕೋಚ ನಿವೃತ್ತಿಯೇ ಕಾರ್ಮಿಕ ಮಲ ನಿವೃತ್ತಿ. ಕ್ರಿಯಾ ವಿಕಾಸ ಸ್ಥಿತಿಯೇ ಆಚಾರಲಿಂಗ, ಮತ್ತು ಅದರ ನಿವೃತ್ತಿ ಕಳೆ. ಅಂತೆಯೇ ಜ್ಞಾನ ಸಂಕೋಚತೆಯನ್ನು ತೊಡೆಯುವುದೇ ಮಾಯೀಯಮಲ ನಿವೃತ್ತಿ. ಜ್ಞಾನವಿಕಾಸ ಸ್ಥಿತಿಯೇ ಗುರುಲಿಂಗ, ಮತ್ತು ಅದರ ಪ್ರತಿಷ್ಠಾ ಕಳೆ. ಇದು ಲಿಂಗನಿಷ್ಠೆಯಿಲ್ಲದೆ ಪ್ರತಿಷ್ಠೆಯಾಗುವುದಿಲ್ಲ. ಲಿಂಗ ಪ್ರತಿಷ್ಠೆಯಾಗದೆ ಜ್ಞಾನವುಂಟಾಗುವುದಿಲ್ಲ. ಲಿಂಗನಿಷ್ಠೆಯೆಂದರೆ ಲಿಂಗಕ್ರಿಯೆ. ಧಾರಣ ಧ್ಯಾನ ಅರ್ಚನಾದಿಗಳೇ ಕ್ರಿಯೆಗಳು.

ಜ್ಞಾನ ಶೂನ್ಯತ್ವವೇ ಸರ್ವಾದ್ವೈತ ಸ್ಥಿತಿ. ಸರ್ವಾಧ್ವೈತನಿಗೆ ಜ್ಞಾನವಿಲ್ಲದ ಬಳಿಕ ಕ್ರಿಯೆ ಘಟಿಸುವುದಿಲ್ಲ ಜ್ಞಾನ ಕ್ರಿಯಾಶೂನ್ಯನು ಮಾಹೇಶರನೆನಿಸಲಾರನು. ಇದರಿಂದಾಗಿ ಜ್ಞಾನಕ್ರಿಯೆಗಳ ವಿಕಾಸ ಮಾರ್ಗದಲ್ಲಿರುವ ಮಾಹೇಶ್ವರನು ತನ್ನ ಉದ್ದೇಶಕ್ಕೆ ಹೊರತಾದ ಸರ್ವಾದ್ವೈತವನ್ನು ನಿರಸನ ಮಾಡಬೇಕು.

ತನ್ನ ಸದ್ರೂಪ ಚಿದ್ರೂಪಗಳನ್ನು ಪೂರ್ಣವಾಗಿ ಅಳವಡಿಸಿಕೊಳ್ಳದೆ ಸರ್ವಾದ್ವೈತತತ್ವವು ಸಂಪ್ರಾಪ್ತವಾಗದು. ಆಚಾರ ವಿಚಾರಗಳಿಲ್ಲದೆ ಸಚ್ಚಿದ್ರೂಪವು ಸಮನಿಸದು. ಅಜ್ಞತೆ ಅಲ್ಪಕ್ರಿಯತೆ ಸರ್ವಾದ್ವೈತ ಲಕ್ಷಣವಲ್ಲ.

"ಅಜ್ಞಸ್ಯಾಲ್ಪ ಪ್ರಯತ್ನಸ್ಯ ಸರ್ವಂ ಬ್ರಹ್ಮೇತಿ ಯೋ ವದೇತ್ ।
ಮಹಾನರಕ ಜಾಲೇಷು ಸಸ್ತೇನ ವಿನಿಯೋಚಿತಃ॥"

ಅಜ್ಞನಿಗೆ ಅಲ್ಪಕ್ರಿಯೆಯುಳ್ಳವನಿಗೆ ಸರ್ವಾದ್ವೈತ ಬೋಧೆಯನ್ನು ಮಾಡ ಬಾರದೆಂದೂ ಮಾಡಿದರೆ ಮಹಾನರಕವೆಂದು ಯೋಗವಾಸಿಷ್ಠದಲ್ಲಿ ಉಕ್ತವಾಗಿದೆ.

"ಅವಿದಿತ್ವಾ ಪರಂ ತತ್ತ್ವಂ ಶಿವತ್ವಂ ಜಲ್ಪಿತಂ ತು ಯೈಃ ।
ತೇಚಾತ್ಮೋಪಾಸಕಾಶ್ಚೈವ ನ ಗಚ್ಛಂತಿ ಶಿವಂ ಪದಂ॥"

ಆ ಪರಶಿವತತ್ತ್ವವನ್ನರಿಯದೆ ಸರ್ವವು ಶಿವನೆಂದು ಬರೀ ಬಾಯಿಂಲ್ಲಿ ಹೇಳುವವರು ಮೂಢೋಪಾಸಕರು ಕ್ರಿಯಾದ್ವೈತ ವಾದಿಗಳು ಪರಶಿವ ಪದ ವನ್ನು ಪರಮಾರ್ಥವಾಗಿ ಪಡೆಯಲಾರರೆಂದು ಸ್ವಚ್ಛಂದ ಲೀಲಾ ಭೈರವದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ:

"ವೇದವೇದಾಂತವನೋದಿ ಜ್ಞಾನಸೂರೆಯ ಮಾಡುವ ಜಂಗನು
ಕ್ರಿಯಾಹೀನನಾದಡೆ ಆಗಮುಸರಸ ಆತನಲ್ಲ.
ಅದೇನು ಕಾರಣವೆಂದಡೆ : ನುಡಿದಂತೆ ನಡೆಯನು.
ಅಲ್ಲಿ ಕೂಡಲ ಚನ್ನ ಸಂಗಮದೇವ ನಿಲ್ಲಲಾರನು."

"ಯತ್ರ ಜೀವಸ್ತತ್ರ ಶಿವನೆಂಬ ಬಾಲಭಾಷೆಯ ಕೇಳಲಾಗದು.
ಯತ್ರ ಜೀವಸ್ತತ್ರ ಶಿವನಾದಡೆ,
ಜೀವಂಗೆ ಜನನ, ಸ್ಥಿತಿ, ಮರಣ, ರುಜೆ, ಸಂಸಾರ ಬಂಧನವೇಕೋ ?
ಯತ್ರ ಜೀವಸ್ತತ್ರ ಶಿವನಾದಡೆ,
ಪುಣ್ಯ, ಪಾಪ, ಪ್ರಳಯ, ಕಾಲ, ಕಲ್ಪಿತಂಗಳೇಕೊ ?
ಇದು ಕಾರಣ, ಯತ್ರ ಜೀವಸ್ತತ್ರ ಶಿವನಲ್ಲ;
ಉತ್ಪತ್ತಿ ಸ್ಥಿತಿ ಪ್ರಳಯ ವಿರಹಿತನು ಸದ್ಭಕ್ತರಲ್ಲಿಪ್ಪನಲ್ಲದೆ
ಮತ್ತೆಲ್ಲಿಯೂ ಇಲ್ಲ ಕೂಡಲ ಚನ್ನಸಂಗಮದೇವ.!"

"ಸರ್ವಗತ ಶಿವನೆಂಬುದೀಜಗವೆಲ್ಲ; ಶಿವ ಶಿವಾ, ನಿರ್ಬುದ್ಧಿ ಜನಂಗಳನೇನೆಂಬೆ ? ಸರ್ವವೂ ಶಿವನಾದಡೆ, ಹಿಂದಣ ಯುಗ ಪ್ರಳಯಂಗಳೇಕಾದವು. ಸರ್ವವೂ ಶಿವನಾದಡೆ, ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳೇಕಾದುವು ? ಸೂತ್ರಧಾರಿ ನರರಿಗಾಗಿ ಯಂತ್ರವನಾಡಿಸುವಲ್ಲಿ ಸೂತ್ರದ ಹಾಹೆಯು ಹೊರಗಿರ್ದಾ

ಡಿಸುವನಲ್ಲದೆ ತಾನೊಳಗಿರ್ದಾಡಿಸುವನೆ ? ಆ ಹಾಗೆ, ಶಿವನು ತನ್ನಧೀನವಾಗಿರ್ಪ ತ್ರಿ ಜಗದ ಸಚರಾಚರಗಳೆಂಬ ಹಾಹೆಯನು ಹೊರಗಿರ್ದಾಡಿಸುವನಲ್ಲದೆ ತಾನಾಡು ವನೆ ? ಸರ್ವ ಯಂತ್ರವೂ ತಾನಾದಡೆ ಸಕಲ ತೀರ್ಥಕ್ಷೇತ್ರ ಯಾತ್ರೆಗೆ ಹೋಗ ಲೇಕೆ ? ಇದು ಕಾರಣ ಸರ್ವವು ಶಿವನೆನಲಾಗದು. ಮತ್ತೆಲ್ಲಿಹನೆಂದಡೆ ಸದಾ ಚಾರ ಸದ್ಭಕ್ತಿ ಸನ್ನಿಹಿತ ಲಿಂಗ ಜಂಗಮದೊಳಗಿರ್ಪ ಮತ್ತೆಲ್ಲಿಯೂ ಇಲ್ಲ ಕೂಡಲ ಚನ್ನಸಂಗಮದೇವ."

ಎಂಬುದಾಗಿ ಬಿಚ್ಚಿ ಹೇಳಿ ಮಾಹೇಶ್ವರನ ಸರ್ವಾದ್ವೈತ ನಿರಸನವನ್ನು ಚನ್ನಬಸವಣ್ಣನವರು ಚೆನ್ನಾಗಿ ಸಮರ್ಥಿಸಿದ್ದಾರೆ. ಲಿಂಗದಲ್ಲಿ ಸರ್ವಾದ್ವೈತವಿದೆ ಆದ್ದರಿಂದ ಅಂಗನು ಅದನ್ನು ನಿಷ್ಠೆಯಿಂದ ಆರಾಧಿಸಿ ಪಡೆಯಬೇಕೆಂದು ಪ್ರತಿ ಪಾದಿಸಿದ್ದಾರೆ; ಇದಲ್ಲದೆ, "ಶೂನ್ಯವ ನುಡಿದು ದುರ್ಗತಿಗಿಳಿದವರ, ಅದ್ವೈತವ ನುಡಿದು ಅಹಂಕಾರಿಗಳಾದವರ, ಬ್ರಹ್ಮವ ನುಡಿದು ಭ್ರಮಿತರಾದವರ, ತ್ರಿಕಾಲ ಲಿಂಗ ಪೂಜೆಯ ಮಾಡಿದವರ, ಬ್ರಹ್ಮದ ಅನವರತ ಮಾತ ಕೇಳಿ ಹಿಡಿದ ವ್ರತ ನೇಮಗಳ ಬಿಡುವರ–ಈ ದುರಾಚಾರಿಗಳ ಮೆಚ್ಚ ಕೂಡಲ ಚನ್ನ ಸಂಗಾ, ನಿಮ್ಮ ಶರಣ !"

ಚೆನ್ನ ಬಸವಣ್ಣನವರ ಈ ವಚನವು "ಭವೇನ್ಮಾಹೇಶ್ವರಃ ಕರ್ಮೀ"– ಮಾಹೇಶ್ವರನು ಲಿಂಗಾರ್ಚನ ಕ್ರಿಯಾನಿರತನೆಂಬ ರೇಣುಕ ಜಗದ್ಗುರುವಿನ ವಾಣಿ ಯನ್ನು ಅನುಮೋದಿಸಿದೆ,

"ಪ್ರೇರಕಂ ಶಂಕರಂ ಬುಧ್ವಾ ಪ್ರೇರ್ಯಮಾತ್ಮಾನಮೇವ ಚ ।
ಭೇದಾತ್ತಂ ಪೂಜಯೇನ್ನಿತ್ಯಂ ನ ಚಾದ್ವೈತಪರೋಭವೇತ್॥"

ಶಿವನು ಪ್ರೇರಕನು. ಜೀವನು ಪ್ರೇರ್ಯನು. ಈ ಭೇದದಿಂದ ನಿತ್ಯ ಶಿವ ಪೂಜೆಯನ್ನು ಮಾಡಬೇಕಲ್ಲದೆ ಅದ್ವೈತದಲ್ಲಿ ಪ್ರವೇಶಿಸಬಾರದು.

ಲಿಂಗಾಯಗರು ಪರಿವಿಡಿದು ಪ್ರೇರಕ ಪ್ರೇರ್ಯರಾಗಿದ್ದಾರೆ. "ಧಿಯೋ ಯೋ ನಃ ಪ್ರಚೋದಯಾತ್" ಎಂಬೀ ಗಾಯತ್ರೀ ಮಂತ್ರವು ಶಿವ ಪ್ರೇರತತ್ವವನ್ನು ಒಪ್ಪಿಕೊಂಡಿದೆ. ಮತ್ತು "ನೈಷಾ ತರ್ಕೇಣ ಮತಿರಾಽಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।" "ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿ

ವಾಧೂಮಕಃ । ಈಶಾನೋ ಭೂತ ಭವ್ಯಸ್ಯ ಸ ಏವಾದ್ಯ ಸ ಉಶ್ವಃ । ಏತ ದ್ವೈತತ್ ಬುದ್ಧಿಯು ಬರೀ ತರ್ಕದಿಂದ ಲಭ್ಯವಲ್ಲ; ಬೇರೊಬ್ಬರ ಪ್ರೇರಣೆ ಯಿಂದ ಪ್ರವಚನದಿಂದ ಒಳ್ಳೇ ಜ್ಞಾನಾಚಾರಕ್ಕೆ ಪ್ರೇರ್ಯವಾಗುವುದೆಂದು ಕಠೋಪ ನಿಷತ್ತು ಹೇಳಿದೆ. ಇವೆಲ್ಲವುಗಳಿಗಿಂತ ಈ ಕೇನೋಪನಿಷದುಕ್ತಿಗಳು ಪ್ರೇರ ಪ್ರೇರಕ ಭಾವವನ್ನೇ ಚೆನ್ನಾಗಿ ಚಿತ್ರಿಸಿವೆ ;

"ಯದ್ವಾಚಾ ನಭ್ಯುದಿತಂ ಯೇನವಾಗಭ್ಯುದ್ಯತೇ ।
ಯನ್ಮನಸಾ ನ ಮಮತೇ ಯೇನಾಹುರ್ಮನೋ ಮತಂ ।
ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ ।
ಯತ್ ಶ್ರೋತ್ರೇಣ ನ ಶ್ರುಣೋತಿ ಯೇನ ಶ್ರೋತ್ರಮಿದಂಶ್ರುತಂ ।
ಯತ್ ಪ್ರಾಣೇನ ನ ಪ್ರಾಣತಿ ಯೇನ ಪ್ರಾಣಃ ಪ್ರಣೀಯತೇ ।

ಅದು ವಾಣಿಗೆ ವಾಣಿಯಾಗಿ, ಮನಸ್ಸಿಗೆ ಮನವಾಗಿ, ಕಣ್ಣಿಗೆ ಕಣ್ಣಾಗಿ, ಕಿವಿಗೆ ಕಿವಿಯಾಗಿ, ಪ್ರಾಣಕ್ಕೆ ಪ್ರಾಣವಾಗಿ ಇವೆಲ್ಲಕ್ಕೂ ಪ್ರೇರಕವಾಗಿದೆ ಹೃದ ಯಾಂತರ್ಗತ ಚೈತನ್ಯ. ಇದೇ ಅಭಿಪ್ರಾಯವನ್ನು ಶರಣ ವಾಣಿಯಲ್ಲಿ ಶ್ರವಣ ಮಾಡೋಣ :

"ಹುಟ್ಟು ಗರುಡನ ಕಯ್ಯಲು ಕೋಲು ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ !" "ಶಿವ ಶಿವಾ ಎಂದೋದಿಸಯ್ಯಾ; ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು." "... ಉರದಲೊತ್ತಿ ಬಾರಿಸು." "ಸುಬುದ್ಧಿಯೆಂಬುದಕವ ನೆರೆದು, ನೋಡಿ ಸಲಹಯ್ಯಾ" "ಅಯ್ಯಾ ನೀ ಬಿಡಿಸಿದರೆ ಬಿಟ್ಟಿತ್ತು ತಾಮಸವಯ್ಯಾ !" "ಅಯ್ಯಾ, ನೀ ಹುಟ್ಟಿಸಿದಲ್ಲಿ ಹುಟ್ಟಿದೆ, ನೀ ಕೊಂದಲ್ಲಿ ಸಾಯದೆ, ಎನ್ನ ವಶವೇ ಅಯ್ಯಾ ? ನೀವಿರಿಸಿದಲ್ಲಿರದೆ ಎನ್ನ ವಶವೇ ಅಯ್ಯಾ ?" ಕರ್ತೃ ಕೂಡಲ ಸಂಗಮದೇವರ ಒಲವಿನ ದಯದ ಚಿತ್ತವಿಡಿದವರ್ಗಲ್ಲದೆ ಶಿವತತ್ತ್ವ ಸಾಹಿತ್ಯ ವಾಗದು " ಪರಮಾತ್ಮನು ಪ್ರೇರಕನು, ಆತನ ಪ್ರೇರಣೆಯಿಲ್ಲದೆ ಏನೂ ಆಗ ದೆಂಬುದನ್ನು ಈ ವಚನಾಂಶಗಳು ವರ್ಣಿಸಿವೆ. ನಿಜಕ್ಕೂ ಆತನ ಪ್ರೇರಣೆ ಯಿಲ್ಲದೆ ಕಣ್ಣು ಕಾಣದು, ಕಿವಿ ಕೇಳದು, ಮೂಗು ಮೂಸದು, ರಸನೆ ರುಚಿ ಸದು, ತೊವಲು ಮುಟ್ಟದು, ಮನ ನೆನೆಯದು, ಬುದ್ಧಿ ನಿಶ್ಚಯಿಸದು, ಭಾವ

ಭಾವಿಸದು. ಆದ್ದರಿಂದ ಆ ಪರಮನ ಪ್ರೇರಣೆಯನ್ನು ಪಡೆಯಲು ಆತನನ್ನು ಪರಾಭಕ್ತಿಯಿಂದ ಪೂಜಿಸಬೇಕು. ನಾನೂ ಆ ಪರಶಿವ ಸ್ವರೂಪನಿದ್ದೇನೆಂದು ಅಹಂಕರಿಸಿ ಅರ್ಚಿಸದೆ ಅರಿಯದೆ ಅನುಭವಿಸದೆ ಕೊರಡಾಗಿ ಕುಳಿತಿರಬಾರದು. ವಾಗದ್ವೈತದಲ್ಲಿ ಬಾಳಿರಬಾರದು. ಲಿಂಗಾಂಗ ಸಂಬಂಧ ಸಕೀಲವನ್ನು ಸರ್ವಾಂಗವಾಗಿ ತಿಳಿದು ತಳೆದು ಬಾಳಬೇಕು. ಪ್ರೇರ್ಯ ಪ್ರೇರಕ ಸಂಬಂಧವನ್ನು ಸಾಧಕನು ತೆಗೆದು ಹಾಕಲು ಸಾಧ್ಯವಿಲ್ಲ. ಭೇದ ಭಾವದಲ್ಲಿ ಪೂಜಿಸಬೇಕಲ್ಲದೆ ಅಭೇದ ಭಾವದಲ್ಲಿ ಪೂಜೆ ಘಟಿಸದು. ಪೂಜೆ ಘಟಿಸದ ಬಳಿಕ ಪರಮ ಪರಿಣಾಮವುಂಟಾಗದು.

"ಪತಿಃ ಸಾಕ್ಷಾನ್ಮಹಾದೇವಃ ಪಶುರೇಷಸ್ತದಾಶ್ರಯಃ ।
ಅನಯೋಃಸ್ವಾಮಿ ಭೃತ್ಯತ್ವಮಭೇದೇ ಕಥಮಿಷ್ಯತೇ ॥
ಸಾಕ್ಷಾತ್ಕೃತಂ ಪರಂ ತತ್ತ್ವಂ ಯದಾ ಭವತಿ ಬೋಧತಃ।
ತದಾಽದ್ವೈತ ಸಮಾಪತ್ತಿರ್ಜ್ಞಾನ ಹೀನಸ್ಯ ನ ಕ್ವಚಿತ್ ॥"

ಜಗಜ್ಜೀವಿಗಳಿಗೆ ಮಹಾದೇವನು ಸಾಕ್ಷಾತ್ತಾಗಿ ಪತಿಯಾಗಿದ್ದಾನೆ. ಈ ಆತ್ಮನು ಆತನ ಆಶ್ರಯದಲ್ಲಿರುವ ಪಶುವಾಗಿರುವನು. ಈ ಪತಿ ಮತ್ತು ಪಶು ಭಾವದಿಂದ ಇಬ್ಬರಲ್ಲಿ ಭೇದವಿದೆ. ಭೇದವಿಲ್ಲದೆ ಹೋದರೆ ಇವರಲ್ಲಿ ಸ್ವಾಮಿ-ಭೃತ್ಯ ಭಾವವಳವಡದು. ಅಂತೆಯೇ ಈ ಮಾಹೇಶ್ವರ ಸ್ಥಲದಲ್ಲಿಯೂ ಲಿಂಗ ಪತಿ, ಅಂಗ ಪಶುವಾಗಿ ಅಂದೆ ಸ್ವಾಮಿ-ಭೃತ್ಯರಾಗಿರುವರು. ಆ ಮಹಾದೇವನು ಮಹೇಶ್ವರನು; ಈ ಶುದ್ಧಜೀವನು ಆ ಮಹೇಶ್ವರನ ಅಂಶನಾದ ಮಾಹೇಶ್ವರನು. ಮಹೇಶ್ವರ-ಮಾಹೇಶ್ವರ ಈ ನಾಮುಗಳೇ ಅಂಶಾಂಶಿ ಭಾವವನ್ನು ನಿರ್ದೇಶಿಸುತ್ತವೆ: ಇದರಿಂದ ಉಪಾಸ್ಯ-ಉಪಾಸಕ ಭಾವವುಂಟಾಗುತ್ತದೆ.

ಶ್ರೀ ಗುರುವಿನ ಬೋಧದಿಂದ ಪರತತ್ತ್ವದ ಪೂರ್ಣ ಸಾಕ್ಷಾತ್ಕಾರವಾದಾಗ ಶಿವಾದ್ವೈತ ಸಮಾಪತ್ತಿಯುಂಟಾಗುತ್ತದೆ. ಜ್ಞಾನಹೀನನಿಗೆ ಎಂದಿಗೂ ಶಿವಾದ್ವೈತ ಸಿದ್ಧಿಯಾಗುವುದಿಲ್ಲ.

ದೃಶ್ಯ ಜಗತ್ತು ಇದೊಂದು ಪಾಶ. ಈ ಜಾಗತಿಕ ಪಾಶ ಬದ್ಧನಾದ ಜೀವನೇ ಪಶು. ಈ ಪಶುವನ್ನು ಪೋಷಿಸುವ ಪರಶಿವನೇ ಪತಿ. ಆದ್ದರಿಂದ

ಇವನಿಗೆ ಪಶುಪತಿಯೆಂದು ಹೆಸರಿದೆ. ಪಶುವಾದ ಜೀವನು ಭೃತ್ಯಭಾವದಿಂದ ಭಕ್ತಿ ಭರಿತನಾಗಿ ತನ್ನ ಸ್ವಾಮಿಯಾದ ತನ್ನ ಸರ್ವಸ್ವವಾದ ಆ ಮಹಾದೇವನನ್ನು ಅರ್ಚನಾರ್ಪಣಾದಿಗಳಿಂದ ಸೇವಿಸಿ ಪಾಶಮುಕ್ತನಾಗಬೇಕು ಅಂದರೆ ತನಗಿರುವ ಕ್ರಿಯಾಹೀನತೆ ಜ್ಞಾನಹೀನತೆಗಳನ್ನು ಕಳೆದುಕೊಳ್ಳಬೇಕು. ಮಲ ಮಾಯಾ ಮೋಹಾದಿ ಪಾಶಮುಕ್ತನಾಗಬೇಕು, ಇವೆಲ್ಲವೂ ಭೇದದಲ್ಲಿ ಘಟಿಸುವವಲ್ಲದೆ ಅಭೇದ ಸ್ಥಿತಿಯಲ್ಲಿ ಘಟಿಸವು. ಮತ್ತು ಕ್ರಿಯಾಜ್ಞಾನಗಳು ಉಂಟಾಗದೆ ಅಭೇದ ಸ್ಥಿತಿಯು ಉಂಟಾಗದು. ಇದೆಲ್ಲ ಆಗಬೇಕಾದರೆ ಶ್ರೀ ಗುರುವಿನ ಬೋಧವನ್ನು ಪಡೆದಾಗಬೇಕು,

"ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಂ !
ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶ ಮೀಡ್ಯಂ
ಸ ಏವ ಕಾಲೋ ಭುವನಸ್ಯ ಗೋಪ್ತಾ ವಿಶ್ವಾಧಿಪಃ ಸರ್ವಭೂತೇಷು ಗೂಢಃ ॥"

ಶಿವನು ಪತಿಯೆಂಬುದಾಗಿ ಶ್ರುತಿಯು ಸಾರಿದೆ. ಈ ಶ್ರುತಿವಚನ ಪ್ರಮಾಣವನ್ನು ಅನುಸರಿಸಿ ಬಸವಣ್ಣನವರು ಹೀಗೆ ಹೇಳಿದ್ದಾರೆ; "ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಿಡಿವುದಲ್ಲದೆ ಬೇರೆ ಗತಿಯುಂಟೆ ? ಶಿವಾ ಶಿವಾ ! ಹೋದಹೆ, ಹೋದಹೆನಯ್ಯಾ! ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ, ಪಶುವಾನು ಪಶುಪತಿ ನೀನು! ತುಡುಗಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ, ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲಸಂಗಮದೇವಾ."

"ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯ. ಪಶು ವೇನು ಬಲ್ಲುದು ಹಸುರೆಂದೆಳೆಸುವುದಲ್ಲದೆ ?...."

"ಹೊಲಬು ಗೆಟ್ಟ ಶಿಶು ತನ್ನ ತಾಯ ಬಯಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ, ಬಯಸುತ್ತಿರ್ದೆನಯ್ಯಾ ನಿಮ್ಮ ಬರವನು..."

"ಸ್ವಾಮಿ ನೀನು, ಶಾಶ್ವತ ನೀನು; ಎತ್ತಿದೆ ಬಿರುದ ಜಗವೆಲ್ಲರಿಯಲು. ಮಹಾದೇವ ಮಹಾದೇವ ! ಇಲ್ಲಿಂದ ಮುಂದೆ ಶಬ್ದವಿಲ್ಲ. ಪಶುಪತಿ ಜಗಕ್ಕೆ

ಏಕೋ ದೇವ !" "ಸ್ವಾಮಿ ಭೃತ್ಯ ಸಂಬಂಧಕ್ಕೆ ಆಹುದು ಪದವೇದರೆ; ದಿಟವ ನುಡಿವುದು, ನುಡಿದಂತೆ ನಡೆವುದು ನುಡಿದು ಹುಸಿವ, ನಡೆದು ತಪ್ಪುವ ಪ್ರಪಂಚಿಯನೊಲ್ಲ, ಕೂಡಲಸಂಗಮದೇವ." ಕಡೆಯ ಈ ಎರಡು ವಚವಗಳು ಜಗದ್ಗುರು ರೇಣುಕರ ಮೊದಲ ಮಂತ್ರದ ಪ್ರತಿ ಶಬ್ದವನ್ನೂ ಲಕ್ಷೀಕರಿಸಿ ವಿವರಿಸಿ ಹೇಳಿದಂತಿವೆ. ಅವರ ಮೊದಲ ಮಂತ್ರದ ಮೊದಲ ಚರಣವಾದ "ಪತಿಃ ಸಾಕ್ಷಾನ್ಮಹಾದೇವಃ" ಎಂಬುದನ್ನು "ಸ್ವಾಮಿ ನೀನು ಶಾಶ್ವತ ನೀನು...." ಎಂಬೀ ವಚನವನ್ನು ಪೂರ್ಣ ಪ್ರತಿನಿಧಿಸಿ ಪ್ರತಿಪಾದಿಸಿದೆ. ಮುಂದಿನ ವಚನವು ಮುಂದಿನ ಮೂರು ಮಂತ್ರ ಪಂಕ್ತಿಗಳ ಪೂರ್ಣಭಾವಾನುವಾದವನ್ನು ಮಾಡಿದಂತಿದೆ.

ಲಿಂಗವು ಆಶ್ರಯದಾತ, ಅಂಗವು ಆಶ್ರಯಿ. ಹೀಗಿರುವಾಗ ಇವರಿಗೆ ಸ್ವಾಮಿ ಭೃತ್ಯತ್ವ ಅನಿವಾರ್ಯ. ಆಶ್ರಯದಾತನ ಪೂರ್ಣ ಗುಣ ಧರ್ಮಗಳು ಲಕ್ಷಣವು ತನ್ನಲ್ಲಿ ಆಳವಡುವವರೆವಿಗೂ ಭೇದ ಭಾವ ಅನಿವಾರ್ಯ; ಆರಾಧನೆ ಅಪರಿಹಾರ್ಯ.

"ಭೇದಸ್ಯ ಕರ್ಮಹೇತುತ್ವಾದ್ವ್ಯವಹಾರಃ ಪ್ರವರ್ತತೇ
ಲಿಂಗ ಪೂಜಾಪರಸ್ತಸ್ಮಾನ್ನಾದ್ವೈತೇ ನಿರತೋ ಭವೇತ್ ।
ಪೂಜಾದಿ ವ್ಯವಹಾರಸ್ಸ್ಯಾದ್ಭೇದಾಶ್ರಯತಯಾ ಸದಾ
ಲಿಂಗಪೂಜಾಪರಸ್ತಸ್ಮಾನ್ನಾದ್ವೈತೇ ನಿರತೋ ಭವೇತ್ ।"

ಭೇದಭಾವಕ್ಕೆ ಕರ್ಮ ಹೇತುತ್ವವಿದೆ. ಕ್ರಿಯಾಹೇತುತ್ವದಿಂದ ಭೇದ ವ್ಯವಹಾರವುಂಟಾಗುತ್ತದೆ. ಲಿಂಗ ಪತಿಗೂ ಅಂಗ ಪಶುವಿಗೂ ವಿಕಾಸ–ಸಂಕೋಚ ಭಾವಗಳಿಂದ ಭೇದವಿದ್ದಾಗಿದೆ. ಇದರಿಂದಾಗಿ ಮಾಹೇಶ್ವರಾಂಗನು ಲಿಂಗ ಪೂಜಾ ಪರನಾಗಿದ್ದಾನೆ. ಲಿಂಗ ಪೂಜಾಕ್ರಿಯೆಯಲ್ಲಿರುವ ಮಾಹೇಶ್ವರನು ಅದ್ವೈತವನ್ನು ಅಂದರೆ ಅಭೇದವನ್ನು ಆಚರಿಸಲಾಗದು. ಮತ್ತು ಭೇದಾಶ್ರಯದಲ್ಲಿ ಪೂಜಾದಿ ವ್ಯವಹಾರಗಳು ಸಾಗುತ್ತಿವೆ. ಅಭೇದ ಭಾವವಿದ್ದರೆ ಯಜನ ಸ್ತವನ ಮೊದಲಾದ ಕ್ರಿಯೆಗಳು ಸಾಗಲು ಸಾಧ್ಯವಿಲ್ಲ

ಶಿವಜೀವರಿಗೆ ಅಂದರೆ ಲಿಂಗಾಂಗರಿಗೆ ಭೇದವಿರುವುದನ್ನು ಶ್ವೇತಾಶ್ವತರ ಶ್ರುತಿಯು ಹೀಗೆ ಸಮರ್ಥಿಸಿದೆ ;

"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನೋ ಅಭಿಚಾಕಶೀತಿ । ಜ್ಞಾ ಜ್ಞೌ ದ್ವಾವಜಾವೀಶನೀಶಾ ವಜಾ ಹ್ಯೇಕಾ ಭೋಕ್ತೃ ಭೋಗ್ಯಾರ್ಥಯುಕ್ತಾ । ಅನಂತಶ್ಚಾತ್ಮಾ ವಿಶ್ವರೂಪೋ ಹ್ಯಕರ್ತಾ-ತ್ರಯಂ ಯದಾ ವಿಂದತೇ ಬ್ರಹ್ಮಮೇತತ್॥"

ಇಬ್ಬರೂ ಒಂದೆಡೆಯಲ್ಲಿದ್ದರೂ ಒಬ್ಬನು ಕ್ರಿಯಾನಿರತನಾಗಿದ್ದಾನೆ. ಇನ್ನೊಬ್ಬನು ಕ್ರಿಯಾ ವಿರಹಿತನಾಗಿದ್ದಾನೆ. ಒಬ್ಬನು ಕ್ರಿಯಾಫಲ ಭೋಕ್ತೃವಾಗಿದ್ದಾನೆ. ಇನ್ನೊಬ್ಬನು ಅಭೋಕ್ತೃವಾಗಿದ್ದಾನೆ; ಸಾಕ್ಷಿಯಾಗಿದ್ದಾನೆ. ಒಬ್ಬನು ಪ್ರೇರ್ಯನಾಗಿದ್ದಾನೆ; ಇನ್ನೊಬ್ಬನು ಪ್ರೇರಕನಾಗಿದ್ದಾನೆ. ಒಬ್ಬನು ಭೃತ್ಯನಾಗಿದ್ದಾನೆ; ಇನ್ನೊಬ್ಬನು ಸ್ವಾಮಿಯಾಗಿದ್ದಾನೆ. ಪೂಜ್ಯ-ಪೂಜಕರಾಗಿ ಲೀಲಾ ವಿನೋದದಲ್ಲಿವ್ದಾರೆ. ಹೀಗಿರುವಾಗ ತನ್ನ ಕೊರತೆಯನ್ನು ತನ್ನ ಕ್ರಿಯಾಜ್ಞಾನಗಳಿಂದ ತುಂಬಿಕೊಳ್ಳಲಿರುವ ಮಾಹೇಶ್ವರಾಂಗನು ಸರ್ವಾದ್ವೈತ ನಿರತನಾಗದೆ ನಿರಾಸಕನಾಗಿರಬೇಕು.

"ಕಾಯದಲ್ಲಿ ಜೀವವು ಪ್ರಚ್ಛನ್ನವೆಂದಡೆ,
ಸರ್ವಾಂಗಕ್ಕೆ ಚೇತನವಾಗಿಪ್ಪುದಾಗಿ ಪಚ್ಛನ್ನವಲ್ಲ.
ಜಗದಲ್ಲಿ ಜೀವ ಪರಿಪೂರ್ಣವೆಂದಡೆ,
'ಯದ್ದೃಷ್ಟಂ ತನ್ನಷ್ಟಂ' ಎಂಬುದಾಗಿ,
ಕಾಯದಿಂದ ಜೀವ ತೊಲಗುವ ದೆಶೆಯಿಂ ಪರಿಪೂರ್ಣವಲ್ಲ.
ಜೀವಂಗೆ ಜೀವವಾದಾತ್ಮನೆ ಪರಮಾತ್ಮನೆಂಬವನು......"

"ಅದ್ವೈತವನೋದಿ ಎರಡಳಿದೆವೆಂಬ ಅಣ್ಣಗಳು ನೀವುಕೇಳಿರೇ! ಅದ್ವೈತಿಯಾದರೆ ತನುವಿಕಾರ, ಮನದ ಸಂಚಲ, ಭಾವದ ಭ್ರಾಂತು, ಅರುವಿನ ಮರಹು ಇಂತೀ ಚತುರ್ವಿಧಂಗಳಲ್ಲಿ ವಿಧಿ-ನಿಷೇಧಗಳಳಿದು, ಚಿದ್‌ಬ್ರಹ್ಮದೊಳವಿರಳಾತ್ಮಕವಾದುದೆ ಅದ್ವೈತ. ಅಂತಪ್ಪ ವಿಧಿ, ನಿಷೇಧಂಗಳು ಹಿಂಗದೆ, ಲಿಂಗವನರಿಯದೆ, ವಾಗದ್ವೈತದಿಂದ ನುಡಿದು ಅದ್ವೈತಿಯೆನಿಸಿಕೊಂಬುದೇ ದ್ವೈತ...."

# ಆಹ್ವಾನ ನಿರಸನಸ್ಥಲಂ ೫

ಶ್ರೀಗುರು ಶಿವದೀಕ್ಷೆಯ ಕಾಲದಲ್ಲಿ ಶಿಷ್ಯನ ಶಿರದರಮನೆಯ ಚಿತ್ಕಳೆಯನ್ನು ತನ್ನ ಚಿನ್ಮುದ್ರೆಯಿಂದ ತಂದು 'ಸ್ಥಾಪಿತೋ ಭವ, ಸನ್ನಿಹಿತೋ ಭವ' ಎಂದು ಆಜ್ಞಾಪಿಸಿ ಎಂದೆಂದಿಗೂ ಅಗಲದಂತಿರಹೇಳಿ ತೆರಹಿಲ್ಲದಂತಿರಿಸಿದ ಬಳಿಕ ಮರಳಿ ಲಿಂಗಾರ್ಚನೆಯಲ್ಲಿ ನಿತ್ಯ ಆಹ್ವಾನಿಸುವ ಕೆಲಸವಿಲ್ಲ. ಎಡೆಬಿಡದೆಯಿರುವಾಗ ಕಳುಹದೆ ಇರುವಾಗ ಕರೆವುದುಹೇಗೆ ? ಕರದಿಷ್ಟದಲ್ಲಿ ಕರಿಗೊಂಡಿರುವಾಗ ಕರೆವುದಿಲ್ಲ. ಕಾಯಕ್ಕೆ ಕ್ರಿಯೆಯಾಗಿ, ಪ್ರಾಣಕ್ಕೆ ಪ್ರಾಣವಾಗಿ, ಭಾವಕ್ಕೆ ಭಾವವಾಗಿ ಬಿಡದಿರುವ ಲಿಂಗದೇವನನ್ನು ಆಹ್ವಾನಿಸುವ ಕಾರ್ಯ ಮಾಹೇಶ್ವರನಿಗಿಲ್ಲ.

"ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು ಎನಿಸುವ-
ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ!
ಉಪಮಾತೀತ ವಾಙ್ಮನಕ್ಕಗೋಚರನು ಎನಿಸುವ-
ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ !
ಶ್ರುತಿತತಿಯ ಶಿರದ ಮೇಲೆ ದಶಾಂಗುಲನು ಎನಿಸುವ-
ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ !
ಭಾವಭರಿತ ಜ್ಞಾನಗಮ್ಯನು ಎನಿಸುವ-
ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ!
ಅಖಂಡೇಶ್ವರನೆಂಬ ಅನಾದಿ ಪರಶಿವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ!"

ಅಣುವಿಗೆ ಅಣುವಾಗಿ ಮಹತ್ತಿಗೆ ಮಹತ್ತಾಗಿ ತುಂಬಿರುವವನನ್ನು ಕರೆವುದೆಲ್ಲಿ ಕಳಿಸುವುದೆಲ್ಲಿ ? ಮಾತಿಗೆ ಮೀರಿದವನನ್ನು ಮಾತಿಂದ ಕರೆವುದು ಹೇಗೆ? ಶ್ರುತಿಗೆ ಶ್ರುತಿಯಾಗಿ ಶ್ರುತಿಯನ್ನು ಮೀರಿದವನಿಗೆ ಕರೆ ಕೇಳುವುದೆಂತು? ತ್ರಿವಿಧ ತನುಗಳಲ್ಲಿ ತುಂಬಿದವನನ್ನು ಕರೆವುದೆಲ್ಲಿಗೆ? 'ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಿತ' 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದೆನಿಸುವ ಲಿಂಗವನ್ನು ಆಹ್ವಾನಿಸುವ ಬಗೆ ಹೇಗೆ?

"ಅಂತರಂಗದೊಳಗಿರ್ದ ನಿರಾಕಾರಲಿಂಗವನು ಸಾಕಾರಲಿಂಗವ ಮಾಡಿ, ಶ್ರೀಗುರುಸ್ವಾಮಿ ಎನ್ನ ಕರಸ್ಥಲಕ್ಕೆ ತಂದು ಕೊಟ್ಟನಯ್ಯಾ. ಇಂತಪ್ಪ ಲಿಂಗವು ಅಂತರಂಗವನಾವರಿಸಿ, ಅಂತರಂಗದ ಕರಣಂಗಳೇ ಕಿರಣಂಗಳಾಗಿ, ಆ ಬೆಳಗುವ ಚಿದಂಶಕವೇ ಪ್ರಾಣಲಿಂಗವು. ಆ ಮೂಲ ಚೈತನ್ಯವೇ ಭಾವಲಿಂಗವು. ಇದನರಿದು ನೋಡುವ ನೋಟ ಭಾವ ಪರಿಪೂರ್ಣವಾಗಿ, ತಾನು ತಾನಾದಲ್ಲದೆ ಇದಿರಿಟ್ಟು ತೋರುವುದಿಲ್ಲವಾಗಿ ಅಖಂಡ ಪರಿಪೂರ್ಣವಪ್ಪ ನಿಜವು ತಾನೆ ಕೂಡಲ ಸಂಗಮದೇವಾ." ಈ ಸಲ್ಲಕ್ಷಣಗಳಿಂದ ತನ್ನಲ್ಲಿ ತಾನೇ ಆಗಿರುವ ಲಿಂಗವನ್ನು ಮತ್ತೆಲ್ಲಿಂದ ಆಹ್ವಾನಿಸುವ ಪರಿಸ್ಥಿತಿಯೊದಗವುದು? ಒದಗುದಿಲ್ಲೆಂಬುದನ್ನು ಮುಂದಿನ ಮಂತ್ರಗಳಿಂದ ಶ್ರೀರೇಣುಕ ಜಗದ್ಗುರುವರ್ಯರು ನಿರೂಪಿಸುತ್ತಾರೆ:

"ಲಿಂಗಾರ್ಚನಪರಃ ಶುದ್ಧಃ ಸರ್ವಾದ್ವೈತ ನಿರಾಸಕಃ
ಸ್ವೇಷ್ಟಲಿಂಗೇ ಶಿವಾಕಾರೇನ ತಮಾಹಾಪಯೇಚ್ಛಿವಂ ।
ಯದಾ ಶಿವಕಲಾಯುಕ್ತಂ ಲಿಂಗಂ ದದ್ಯಾನ್ಮಹಾಗುರುಃ
ತದಾರಭ್ಯ ಶಿವಸ್ತತ್ರ ತ್ರಿಷ್ಠತ್ಯಾಹ್ವಾನಮತ್ರ ಕಿಂ ?॥"

ನಿತ್ಯ ಶುದ್ಧವಾದ ನಿಜಸ್ವರೂಪವಾದ ಲಿಂಗದ ಅರ್ಚನೆಯಲ್ಲಿ ನಿರತನಾದ ಮಾಹೇಶ್ವರಾಂಗನು ನಿತ್ಯ ಶುದ್ಧನಾಗಿರುವನು, ಸೂತಕ ಪಾತಕ ಶೂನ್ಯನಾಗಿರುವನು. ಹಿಂದೆ ಹೇಳಿದಂತೆ ಸರ್ವಾದ್ವೈತ ನಿರಾಸಕನಾಗಿರುವನು. ಇಂತಹ ಮಾಹೇಶ್ವರನು ಶಿವಸ್ವರೂಪವೇ ಆದ ತನ್ನ ಇಷ್ಟಲಿಂಗದಲ್ಲಿ ಮತ್ತೆ ಶಿವನನ್ನು ಆಹ್ವಾನಿಸಬಾರದು; ಆಹ್ವಾನಿಸುವ ಅಗತ್ಯವಿಲ್ಲ.

ತನಗೆ ದೀಕ್ಷೆಯನ್ನು ಕರುಣಿಸಿದ ಮಹಾಗುರುವು ಸಂಸ್ಕಾರ ಸಮಯದಲ್ಲಿ ಲಿಂಗದಲ್ಲಿ ಶಿವ ಕಳೆಯನ್ನು ಸನ್ನಿಹಿತಗೊಳಿಸಿದ್ದಾನೆ. ಅಂದಿನಿಂದ ಪರಶಿವನು ಲಿಂಗದಲ್ಲಿ ಅಗಲದೆ ನೆಲಸಿರುವನು. ಹೀಗಿರುವಾಗ ಆಹ್ವಾನವೆಂದರೇನು ?

ವಿಯೋಗವಿಲ್ಲದ್ದು ಲಿಂಗ. ವಿಯೋಗವಿಲ್ಲದ್ದು ಅರ್ಚನ. ಅಂಗನು ಅನುಗಾಲ ಅಮಲನಾಗಿರುವಾಗ ಅರ್ಚನೆಯನ್ನು ಅಗಲಿರುವುದು ಹೇಗೆ ? ಅರ್ಚನೆ ಅದೊಂದು ಅಗಲಬಾರದ ಕ್ರಿಯೆ. ಆಚರಿಸಿದ್ದೆಲ್ಲ ಅರ್ಚನೆ. 'ಯದ್ಯತ್ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಆತನೊಡನೆ ಅಭೇದ ಸಿದ್ಧಿಗಾಗಿ ಅರ್ಚನೆ ಸದಾ ಸಾಗಿರುತ್ತದೆ. 'ಅರಿವಿಲ್ಲದೆ ಅರ್ಚನೆ ಘಟಿಸದು' ಎಂಬಂತೆ

ಅರಿವಿನಿಂದ ಕೂಡಿದ ಆಚಾರ ರೂಪ ಅರ್ಚನೆ ಸಾಗಿರುತ್ತದೆ, ಈ ಬಗೆಯ ಅರ್ಚನೆಯಲ್ಲಿ ಆನಂದವಿದೆ; ಅನುಭವವಿದೆ, ಇವುಗಳಿಗಾಗಿ ಈ ಮಾಹೇಶ್ವರಾಂಗನು ಸರ್ವಾದ್ವೈತ ನಿರಾಸಕನಾಗಿರುತ್ತಾನೆ. ಅರಿವಿನರ್ಚನೆಗೆ ಅವಕಾಶವಿಲ್ಲದ್ದು ಸರ್ವಾದ್ವೈತ ಸ್ಥಿತಿ. ಅನುಭವ-ಆನಂದಗಳಿಗೂ ಅವಕಾಶವಿಲ್ಲದ್ದು.

ಶಿವನೇ ಆಗಿರುವುದನ್ನು ಮಾಹೇಶ್ವರನು ನಿರಾಕರಿಸಿದ್ದರೂ ಶಿವನಾಗುವ ಭಾವವನ್ನು ಶಿವನಾಗಲು ಸಾಧನವಾದ ಶಿವಾರ್ಚನವನ್ನು ಶಿವಾರ್ಚನೆಗೆ ಸಾಧ್ಯವಾಗುವ ಶಿವಲಿಂಗವನ್ನು ನಿರಸನ ಮಾಡಿರುವುದಿಲ್ಲ. ಶಿವಸ್ವರೂಪವಾದ ಸ್ವೇಷ್ಟಲಿಂಗ ಧಾರಣ ಧ್ಯಾನಗಳಲ್ಲಿ ನಿರತನಾಗಿರುತ್ತಾನೆ.

ಕೇವಲ ಶಿಲೆಯೇ ಲಿಂಗವಲ್ಲ. ಶಿವಕಳೆಯಿಂದ ಕೂಡಿದಂದೇ ಲಿಂಗ ತನ್ನೊಳಗಿರುವ ಆ ಶಿವ ಕಳೆಯನ್ನು ಬಹಿಷ್ಕರಿಸಿ ಶಿಲೆಯ ಪೀಠದಲ್ಲಿರಿಸಿ ಕರುಣಿಸುವ ಸಾಮರ್ಥ್ಯವುಳ್ಳವನು ಗುರುವಲ್ಲ;—ಮಹಾಗುರು. ಆ ಮಹಾಗುರುವು ಸಚ್ಛಿಷ್ಯನಲ್ಲಿ ಆ ಕಳೆಯನ್ನು ಆಯತ್ತ ಸ್ವಾಯತ್ತ ಸನ್ನಿಹಿತವಾಗಿಸಿದ ಬಳಿಕ ಅದು ಅದೆಂದಿಗೂ ಅಗಲದೆ ಪ್ರತಿಷ್ಠಿತವಾಗುತ್ತದೆ. ಆ ಮಹಾಗುರುವಿನ ಸಂಸ್ಕಾರ ಶಕ್ತಿ ಅಂತಹದು.

> "ಸ ಸಂಸ್ಕಾರೇಷು ಲಿಂಗೇಷು ಸದಾ ಸನ್ನಿಹಿತಃ ಶಿವಃ
> ತತ್ರಾಹ್ವಾನಂ ನ ಕರ್ತವ್ಯಂ ಪ್ರತಿಪತ್ತಿವಿರೋಧಕಂ ।
> ನಾಹ್ವಾನಂ ನ ವಿಸರ್ಗಂ ಚ ಸ್ವೇಷ್ಟಲಿಂಗೇ ತು ಕಾರಯೇತ್
> ಲಿಂಗನಿಷ್ಠಾಪರೋ ನಿತ್ಯಮಿತಿ ಶಾಸ್ತ್ರಸ್ಯ ನಿಶ್ಚಯಃ ॥"

ಷಡಧ್ವ ಶೋಧನ, ಕಳಾ ಸ್ಥಿರೀಕರಣ ರೂಪ ಸಂಸ್ಕಾರವುಳ್ಳ ಲಿಂಗತ್ರಯದಲ್ಲಿ ಪರಶಿವನು ನಿತ್ಯ ಸನ್ನಿಹಿತನಾಗಿರುತ್ತಾನೆ. ಶಿವನಲ್ಲಿಯೇ ಶಿವನನ್ನು ಆಹ್ವಾನಿಸುವುದು ಪ್ರಜ್ಞಾವಂತಿಕೆಗೆ ವಿರುದ್ಧವಾಗಿದೆ. ವೀರಶೈವ ವಿಧಿಗೆ ವಿರುದ್ಧವಾಗಿದೆ.

ಅದುದರಿಂದ ನಿತ್ಯ ಲಿಂಗಾನಿಷ್ಠಾ ಪರನಾದ ಮಾಹೇಶ್ವರನು ತನ್ನ ಇಷ್ಟಲಿಂಗದಲ್ಲಿ ಶಿವನ ಆಹ್ವಾನವನ್ನೂ ವಿಸರ್ಜನವನ್ನೂ ಎಂದೂ ಮಾಡಬಾರದು; ಮಾಡುವುದು ಉಚಿತವಲ್ಲವೆಂಬುದೇ ಶಾಸ್ತ್ರನಿಶ್ಚಯ. ನಿಗಮಾಗಮರೂಪ ಶಾಸ್ತ್ರವೇ ಸರ್ವಪ್ರಮಾಣಗಳಲ್ಲಿ ಶ್ರೇಷ್ಠ.

"ಸಂಯೋಗ ವಿಯೋಗವೆಂಬೆರಡಿಲ್ಲದ ನಿಜವನಾರು ಬಲ್ಲರಯ್ಯ ?
ಅದು ಕೂಡಿ ಬೆರಸದು; ಅದು ಅಗಲಿ ಹಿಂಗದು.
ತೆಗಹಕ್ಕೆ ಬಾರದು; ಮೊಗಹಕ್ಕೆ ನಿಲುಕದು.
ಸಗುಣ–ನಿರ್ಗುಣವೆಂಬ ಬಗೆಗೆಡೆಗುಡದ
ಸೌರಾಷ್ಟ್ರ ಸೋಮೇಶ್ವರ ಲಿಂಗವನರಿವುದೇನು, ಮರೆವುದೇನು ?"

"ಆಹ್ವಾನವಿಲ್ಲ ಪ್ರಾಣಲಿಂಗವಾಗಿ; ವಿಸರ್ಜನವಿಲ್ಲ ಆ ಲಿಂಗ ನೆಲೆಗೊಂಡಿತ್ತಾಗಿ. ಇದು ಕಾರಣ. ಆಹ್ವಾನ–ವಿಸರ್ಜನವಿಲ್ಲದ ಶರಣನ ಪರಿ ಬೇರೆ. ಲಿಂಗ ಸಂಗವೇ ಅಂಗ; ಲಿಂಗ ಸಂಗವೇ ಮನ, ಕೂಡಲಚನ್ನಸಂಗನ ಶರಣ ಸುಯಿಧಾನಿ"

"ಅಳೆಯಲು ಬೇಕೆಂದು, ಬಯಲು ರಾಶಿಯ ಮಾಡಿ
ಕೊಳಗದೊಳಗಿರ್ದ ಬಯಲ ಸುರಿವ ಪರಿಯೆಂತೋ ?
ಅಳೆಯಲು ಮೊಗೆಯಲು ಸುರಿಯಲ್ಲಿಲ್ಲದ ಬಯಲು;
ತಿಳಿದು ನೋಡು ನಿನ್ನ ನೀನೆ ತಿಳಿವಡೆ ನೀನೆ !

ಮುನ್ನವೆ ಮುನ್ನವೆ ನೀರು, ಬಳಿಕ ನೀರು ತಾ
ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತು.
ನಿನ್ನ ದೇಹ ಮನಃ ಪ್ರಾಣವಿಂದ್ರಿಚೌಪವು
ಮುನ್ನಿನಂತೆ ಸಚ್ಚಿದಾನಂದ ನೀನೆ ಕಂಡೆಯಾ !

ಆಡಿಯಿಲ್ಲದ ನಡುವಿಲ್ಲದ ಮುಡಿಯಿಲ್ಲದ ಬಯಲು
ಎಡೆಯಿಲ್ಲದಿಪ್ಪುದು ತಾ ಜಗವನೊಡಗೂಡಿ ;
ಹಿಡಿಯಲು ಬಿಡಲಿಲ್ಲದ ಬೆಡಗು ನಿಜ ಗುಣನ
ನುಡಿಯನೊಳಕೊಂಡು ನಿಂದ ಸಹಜ ನೀನೆ ಕಂಡೆಯಾ !

ಹೀಗೆ ಸರ್ವವ್ಯಾಪಕವಾದ ಸರ್ವಾತ್ಮ ರೂಪಾದ ವಸ್ತುವನ್ನು ಆಹ್ವಾನಿಸುವುದೆಂತು ? ವಿಸರ್ಜಿಸುವುದೆಲ್ಲಿಗೆ ? ನಾಮ ರೂಪುಗಳಿಲ್ಲದೆ ಎಲ್ಲೆಲ್ಲಿಯೂ

ಎಡೆಯಿಲ್ಲದಿರುವ ವಸ್ತುವನ್ನು ಹಿಡಿಯುವುದೆಂತು ? ಬಿಡುವುದೆಂತು ? ನುಡಿಗೆ ಆಶ್ರಯವಾಗಿ ನುಡಿಗೆ ವಿಷಯವಾಗದೆ ಇರುವ ಆ ವಸ್ತುವನ್ನು ಕರೆವುದು ಹೇಗೆ? ಸಹಜವಾಗಿರುವುದನ್ನು ಕಳಿಸುವುದೆಲ್ಲಿಗೆ ?

ಕೊನೆಯ ವಚನದ ಮಾತು ಮಾತಿನಲ್ಲಿಯೂ ಮಹತ್ತರವಾದ ಅರ್ಥವಿದೆ. ನುಡಿ ನುಡಿಯನ್ನೂ ತೇಲುಗಣ್ಣಿನಿಂದ ಮಂದ ಬುದ್ಧಿಯಿಂದ ನೋಡಬಾರದು; ವಿಚಾರಿಸಬಾರದು.

# ಅಷ್ಟಮೂರ್ತಿ ನಿರಸನಸ್ಥಲಂ-೬

ಪೃಥಿವಿ, ಆಪ್, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮ-ಇವು ಅಷ್ಟಮೂರ್ತಿಗಳು. ಇವು ಸಮಷ್ಟಿರೂಪ ಈಶ್ವರನ ಅಷ್ಟಾಂಗಗಳು. ಇವುಗಳಲ್ಲಿ ಈಶ್ವರನಿರುವನು.

"ಅಷ್ಟೌ ಪ್ರಸಿದ್ಧಾಃ ತನವಃ ಶಿವಸ್ಯ ಶಿವಶಾಸನೇ ।
ನ ತಾ ಏವ ಶಿವಸ್ಸಾಕ್ಷಾತ್ತಾ ಹ್ಯಧಿಷ್ಠಾಯ ವರ್ತತೇ॥"

ಹೆಸರಾದ ಈ ಎಂಟು ಶಿವನ ಶರೀರಗಳು. ಇವು ಶಿವಸಾಸನಕ್ಕೆ ಬಾಗಿ ವರ್ತಿಸುತ್ತಿವೆ; ವಿಶ್ವಜೀವರ ಜೀವನವನ್ನು ನಿರ್ವರ್ತಿಸುತ್ತಿವೆ. ಇವುಗಳಿಗೆ ಶಿವನು ಸಾಕ್ಷಾತ್ತಾಗಿ ಅಧಿಷ್ಠಾನನಾಗಿದ್ದಾನೆ. ಎಂದು ಆದಿತ್ಯ ಪುರಾಣ ಪ್ರಮಾಣ ವಿದೆ. "ಯಃ ಪೃಥಿವ್ಯಾಂ ತಿಷ್ಠನ್, ಪೃಥಿವ್ಯಾ ಅಂತರೋऽಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಮಂತರೋ ಯಮಯತ್ಯೇ ಷತ ಆತ್ಮಾಂತರ್ಯಾಮ್ಯಮೃತಃ ।" ಎಂದು ಮುಂತಾಗಿ ಹೇಳಿ ಇದರಂತೆ ಉಳಿದ ಏಳಕ್ಕೂ ಇದೇ ರೀತಿ ಬೃಹದಾರಣ್ಯಕೋಪ ನಿಷತ್ತು ಹೇಳಿದೆ,

"ವಿಶ್ವಂ ಮಹೇಶ್ವರ ಭವಾನಧಿತಿಷ್ಠತೀತಿ ವಿಶ್ವಾತ್ಮತಾ ಮುಪ
ಚರಂತಿ ಯದಾಗಮಾಸ್ತೇ"

ಎಲ್ಲೆಲ್ಲಿಯೂ ಇರುವ ಪರಶಿವನೇ ನೀನು ವಿಶ್ವಾತ್ಮನಾಗಿರುವೆಯೆಂದು ಆಗಮಗಳು ಹೇಳಿವೆ. ಜಡ ಭೂತಗಳಿವು. ಚೇತನಾತ್ಮಕನವನು. ಇದಲ್ಲದೆ ಪಂಚಭೂತಗಳು ಮತ್ತು ಮನ-ಬುದ್ಧಿ-ಅಹಂಕಾರ ಇವೆಂಟು ಆತನ ಅಪರಾ ಪ್ರಕೃತಿಯೆಂದು, ಜೀವ ಚೈತನ್ಯವೆ ಪರಾ ಪ್ರಕೃತಿಯೆಂದು ಗೀತೆ ಹೇಳಿದೆ. ಈ

ಪರಾಪರ ಪ್ರಕೃತಿಗಳಿಂತ ಪರಶಿವನು ಭಿನ್ನನಾಗಿದ್ದಾನೆಂದು ಮಾಹೇಶ್ವರನು ಭಾವಿಸುತ್ತಾನೆ,

"ಯಥಾತ್ಮ ಶಿವಯೋರೈಕ್ಯಂ ನ ಮತಂ ಕರ್ಮ ಸಂಗಿನಃ ।
ತಥಾ ಶಿವಾತ್ ಪೃಥಿವ್ಯಾದೇರದ್ವೈತಮಪಿ ನೇಷ್ಯತೇ ॥"

ಲಿಂಗಾರ್ಚನಾದಿ ಕ್ರಿಯಾನಿರತನಾದ ಮಾಹೇಶ್ವರನಿಗೆ ಆತ್ಮ-ಪರಮಾತ್ಮರ ಐಕ್ಯವು ಹೇಗೆ ಅಸಂಮತವೋ ಹಾಗೆ ಪರಮೇಶ್ವರನಿಗೂ ಪೃಥಿವಿ ಮೊದಲಾದ ಅಷ್ಟ ತನುಗಳಿಗೂ ಅದ್ವೈತ ಭಾವವು ಆನಿಷ್ಟವಾದುದು.

ಲಿಂಗ ನಿಷ್ಠೆಗೆ ಚರಜಗತ್ತೇ ವಿರುದ್ಧವೆಂದಿರುವಾಗ ಇನ್ನು ಅಚರ ಜಗತ್ತು ವಿರುದ್ಧವಾಗದೆ ? ಕಂಡುದೆಲ್ಲ ಕರದಿಷ್ಟವೆಂದರೆ ಸಾಕ್ಷಾತ್‌ಕರದಿಷ್ಟದಲ್ಲಿ ನಿಷ್ಠೆ ನಿಲ್ಲುವ ಬಗೆ ಹೇಗೆ ? ಸಮಷ್ಟಿ ಅಷ್ಟಾಂಗಗಳಲ್ಲಿ ಪರಶಿವ ಚೈತನ್ಯವು ಅತ್ಯಂತ ಗೂಢವಾಗಿದೆಯಲ್ಲದೆ ಇವೆಲ್ಲ ಆಂಗಗಳಾಗಿದ್ದಾವೆ. ಆ ಪರಶಿವನು ಅಂಗಿಯಾಗಿದ್ದಾನೆ.

"ಯಥಾ ರಥಸ್ಯ ಸ್ಥೂಲಸ್ಯ ಜ್ಞಾಯತೇ ಪ್ರೇರಕೋ ರಥೀ ।
ತಥಾ ಸರ್ವ ಶರೀರೇಭ್ಯಃ ಶರೀರ್ಯನ್ಯಃ ಪರಃ ಶಿವಃ॥"

ಎಂಬುದಾಗಿ ಸ್ಕಾಂದ ಪುರಾಣ ವಚನವು ಉದ್ಘೋಷಿಸಿದೆ. ಮತ್ತು "ಪರಾತ್ಪರಂ ಶಿವಂ ಪಶ್ಯೇನ್ನತಂ ಭೂಮ್ಯಾದಿ ಸಂಸ್ಮರೇತ್" ಎಂದು ಕೂರ ಪುರಾಣ ಪ್ರಮಾಣವಿದೆ.

ಭೂಮ್ಯಾದಿಗಳೂ ಶಿವ ಸ್ವರೂಪವೆಂದು ಭಾವೈಕ್ಯವನ್ನುಂಟು ಮಾಡಿಕೊಂಡರೆ ಮಾಹೇಶ್ವರನಿಗೆ ಅಡಿಯಿಡಲು ತಾವಿಲ್ಲದಾಗುತ್ತದೆ. ಅಡಿಯಿಟ್ಟು ನಡೆದರೆ ಭಾವನಿಷ್ಠೆಗೆ ಏಟು ಬೀಳುತ್ತದೆ. ಇದರಿಂದಾಗಿ ಪೃಥಿವ್ಯಾದಿಗಳಲ್ಲಿ ಶಿವಾದ್ವೈತ ಭಾವ ಸಲ್ಲದು.

"ಪೃಥಿವ್ಯಾದ್ಯಷ್ಟ ಮೂರ್ತಿತ್ವಮೀಶ್ವರಸ್ಯ ಪ್ರಕೀರ್ತಿತಂ ।
ತದಧಿಷ್ಠಾತೃಭಾವೇನ ನ ಸಾಕ್ಷಾದೇಕಭಾವತಃ ॥

ಪರಶಿವನಿಗೆ ಪೃಥಿವ್ಯಾದಿಗಳು ಅಷ್ಟ ಮೂರ್ತಿಗಳು ಆದರೆ ಎಂಟಂಗಗಳು ಎಂದು ಹೆಸರಾಗಿವೆ, ಆದರೆ ಇವುಗಳಿಗೆ ಆತನು ಅಧಿಷ್ಠಾತೃವಾಗಿರುವನಲ್ಲದೆ ಸಾಕ್ಷಾತ್ತಾಗಿ ಏಕೀಭವಿಸಿಲ್ಲ. ಅಂದರೆ ಇವುಗಳ ಶರೀರಿಯಾಗಿರುವನಲ್ಲದೆ ಬರಿಯ ಶರೀರಗಳಾಗಿಲ್ಲ. ಇದೇ ಅಭಿಪ್ರಾಯವನ್ನು ಲೈಂಗ್ಯ ಪುರಾಣವು ಹೀಗೆ ಹೇಳಿದೆ :

"ಅಧಿಷ್ಠಾತಾರಮೇತಾಸಾಂ ಸರ್ವಾಧಿಷ್ಠಾನಮವ್ಯಯಂ ।
ಭಾವಯನ್ ಭಾವದಾರ್ಢ್ಯೇನ ಭಕ್ತೋ ಯಾತಿ ಪರಂ ಶಿವಂ ॥"

ಶಿವನು ಅಧಿಷ್ಠಾತೃ ಎಂಬುದನ್ನು ಸಾಧಕನು ದೃಢವಾಗಿ ಭಾವಿಸಬೇಕು. ಆದರೆ ವೇದಾಂತ ಮತದಂತೆ ಮಾಯೆಯಲ್ಲಿ ಪ್ರತಿಬಿಂಬಿತ ಅಧಿಷ್ಠಾನ ಬ್ರಹ್ಮನಂತಲ್ಲ. ಏಕೆಂದರೆ ವೇದಾಂತದ ಅಧಿಷ್ಠಾನ ಬ್ರಹ್ಮನು ಪ್ರತಿಬಿಂಬಿತನಾದ್ದರಿಂದ ದ್ರಷ್ಟ ಪ್ರತಿಬಿಂಬದಂತೆ ಜಡತ್ವದೋಷ, ಅಸಾಮರ್ಥ್ಯ ದೋಷಕ್ಕೆ ಗುರಿಯಾಗಿದ್ದಾನೆ. ಸೃಷ್ಟಿ ಕರ್ತನಾದ ಈಶ್ವರನಾಗಲು ಪ್ರತಿಬಿಂಬಕ್ಕೆ ಸಾಧ್ಯವೆ ? ಎಂಬ ಪ್ರಶ್ನೆಗೆ ಅಲ್ಲಿ ಅವಕಾಶವಿದೆ ಇನ್ನು ಶಿವಸಿದ್ಧಾಂತದಲ್ಲಿ ಸರ್ವ ಶೂನ್ಯ ನಿರಾಲಂಬ ವಸ್ತುವೆ ಅನಿರ್ವಾಚ್ಯವಾದ ನಿಶ್ಶೂನ್ಯವಾಗಿ, ಆ ನಿಶ್ಶೂನ್ಯವೇ ತನ್ನಿಂದ ತಾನೇ ಶೂನ್ಯವಾಗಿ ಸ್ವಯಂಭುವೆನಿಸುವುದು. ಆ ಸ್ವಯಂಭು ಶೂನ್ಯ ವಸ್ತುವೆ ಸ್ವಲೀಲೆಯಿಂದ ಶಿವನಾಗಿ ತನ್ನ ಸಂಕಲ್ಪ ಮಾತ್ರದಿಂದ ಜಗದುತ್ಪತ್ತಿಗೆ ಮಹಾಕಾರಣನಾಗಿದ್ದಾನೆ. ಸ್ವಶಕ್ತಿಯಿಂದ ಅಧಿಷ್ಠಾನನಾಗಿದ್ದಾನೆ. ಅದ್ವೈತ ಮತದ ಬ್ರಹ್ಮದಂತೆ ತನಗೆ ಭಿನ್ನವಾದ ಜಡವಾದ ಮಿಥ್ಯೆಯಾದ ಮಾಯೆಯಲ್ಲಿ ಪ್ರತಿಬಿಂಬಿಸಿ ಅಧಿಷ್ಠಾತೃತ್ವವನ್ನು ಸಂಪಾದಿಸುವುದಿಲ್ಲ. ಸ್ವಾಭಿನ್ನ ಶಕ್ತಿಯಿಂದಲೇ ಜಗದಧಿಷ್ಠಾನನಾಗಿದ್ದಾನೆ. ವೇದಾಂತ ಮತದಲ್ಲಿ ಮಾಯೆ ಉಪಾಧಿಯಾಗಿದೆ. ವೀರಶೈವದಲ್ಲಿ ಶಕ್ತಿ ಶಿವನಿಗೆ ಉಪಾಧಿಯಲ್ಲ; ಸ್ವಭಾವ ಸ್ವರೂಪದ್ದು. ಅಂತೆಯೇ ಜಗತ್ತು ಉಪಾಧಿಯಲ್ಲ, ಪರಶಿವಾಧಾರವಾಗಿರುವುದು. ಅಧಿಷ್ಠಾತೃವೆಂದರೆ ಆಧಾರವೆಂದರ್ಥ. ಕಾಯಕ್ಕೆ ಚೈತನ್ಯ ಹೇಗೋ ಹಾಗೆ ವಿಶ್ವಕ್ಕೆ ಶಿವನು ಹಾಗೆ ಅಧಿಷ್ಠಾನನಾಗಿದ್ದಾನೆ. ಸತ್ಯ ಜಗತ್ತಿಗೆ ಆಶ್ರಯನಾಗಿ ಅಧಿಷ್ಠಾತೃವಾಗಿದ್ದಾನೆ,

ಅದ್ವೈತ ಬ್ರಹ್ಮದಂತೆ ಶಿವಾದ್ವೈತ ಶಿವನು ಮಿಥ್ಯ ಜಗತ್ತಿಗೆ ಆಶ್ರಯನಲ್ಲ; ಅಧಿಷ್ಠಾತೃವಲ್ಲ ; ಸರ್ಪಭ್ರಾಂತಿಗೆ ಕಾರಣವಾದ ರಜ್ಜುವಿನಂತೆ ಅಧಿಷ್ಠಾತೃವಲ್ಲ.

"ಪೃಥ್ವ್ಯಾದಿಕಮಿದಂ ಸರ್ವಂ ಕಾರ್ಯಂ ಕರ್ತಾ ಮಹೇಶ್ವರಃ ।
ನೈತತ್ ಸಾಕ್ಷಾನ್ಮಹೇಶೋಽಯಂ ಕುಲಾಲೋ ಮೃತ್ತಿಕಾ ಯಥಾ॥"

ಪೃಥಿವ್ಯಾದಿ ಈ ಅಷ್ಟಮೂರ್ತಿಗಳೆಲ್ಲವೂ ಕಾರ್ಯವಾಗಿದೆ. ಆ ಪರಶಿವನೊಬ್ಬನೇ ಕಾರಣನಾಗಿದ್ದಾನೆ; ಕರ್ತೃವಾಗಿದ್ದಾನೆ. ಸಾಕ್ಷಾತ್ತಾಗಿ ಮಹೇಶನೇ ಕಾರ್ಯವಾಗಿಲ್ಲ. ಮಡಕೆಯನ್ನು ಮಾಡಲು ಕುಂಬಾರನು ಹೇಗೋ ಹಾಗೆ ಈ ಜಗತ್ತನ್ನು ಹುಟ್ಟಿಸಲು ಪರಶಿವನು ಹಾಗೆ ಎಂದು ಮಾಹೇಶ್ವರನು ಮಾತ್ರ ತನ್ನ ಲಿಂಗನಿಷ್ಠೆಯನ್ನು ಉಳಿಸಿಕೊಳ್ಳಲು ಭಾವಿಸಬೇಕು ಲೌಕಿಕ ಪದ್ಧತಿಯಂತೆ ! ಪರಮಾರ್ಥವಾಗಿ ಇದು ಶಿವಾದ್ವೈತ ಸಿದ್ಧಾಂತವಲ್ಲ. ಪರಮಾರ್ಥವಾಗಿ ಶಿವನು ಈ ಜಗತ್ಕಾರ್ಯಕ್ಕೆ ಅಭಿನ್ನನಿಮಿತ್ತೋಪಾದಾನ ಕಾರಣನಾಗಿದ್ದಾನೆ. ಜಗದ್ಗುರುವಿನ ಈ ನಿರೂಪಾಭಿಪ್ರಾಯವನ್ನೇ ಶ್ರೀ ಚೆನ್ನಬಸವಣ್ಣನವರು ತಮ್ಮ ಈ ವಚನದಲ್ಲಿ ಅನುವಾಕವಾಗಿಸಿದ್ದಾರೆ :

"ಸರ್ವವು ಶಿವನಿಂದುದ್ಭವಿಸುವವೆಂದಡೆ; ಉದ್ಭವಿಸುವವೆಲ್ಲವೂ ಶಿವನೆ ? ಸಕಲ ಬೀಜವ ಬಿತ್ತುವವ ಒಕ್ಕಲಿಗನೆಂದಡೆ, ಆ ಬೆಳೆ ತಾನು ಒಕ್ಕಲಿಗನೆ ? ಮಡಕೆಯ ಮಾಡುವವ ಕುಂಬಾರನೆಂದಡೆ, ಆ ಮಡಕೆ ತಾನು ಕುಂಬಾರನೆ ? ಕಬ್ಬುನವ ಮಾಡುವವ ಕಮ್ಮಾರನೆಂದಡೆ, ಆ ಕಬ್ಬುನ ತಾನು ಕಮ್ಮಾರನೆ ? ಈ ಪರಿಯಲ್ಲಿ ಸಕಲ ಚರಾಚರವನು ಮಾಡುವವ ಶಿವನೆಂದಡೆ,ಆ ಸಚರಾರವು ಶಿವನೆ? ಹಾಗಾದರೆ ಅಷ್ಟಾದಶವರ್ಣಂಗಳೇಕಾದವು ? ಚೌರಾಸಿ ಲಕ್ಷ ಜೀವಂಗಳೇಕಾದವು ? ಉತ್ತಮ ಮಧ್ಯಮ ಕನಿಷ್ಠಂಗಳೇಕಾದವು ? ಪುಣ್ಯ ಪಾಪ ಸ್ವರ್ಗ ನರಕಂಗಳೇಕಾದವು ? ಭವಿಭಕ್ತರೆಂದೇಕಾದರು ? ಇದು ಕಾರಣ, ಸದಾಚಾರ ಸದ್ಭಕ್ತಿಯಲ್ಲಿಪ್ಪಾತನೆ ಶಿವನಲ್ಲದೆ ಸರ್ವವು ಶಿವನೆಂದಡೆ ಅಘೋರ ನರಕ ಕೂಡಲ ಚೆನ್ನ ಸಂಗಮದೇವಾ"

ಪೃಥಿವ್ಯಾದಿಗಳಿಗೂ ಪರಮೇಶ್ವರನಿಗೂ ಕಾರ್ಯ-ಕರ್ತೃತ್ವ ಅಥವಾ ಜನ್ಯ-ಜನಕತ್ವ ಸಂಬಂಧವನ್ನು ಈ ಮಂತ್ರವು ನಿರ್ದೇಶಿಸಿದೆ. ಈ ಸಂಬಂಧವು ಭೇದ ಸೂಚಕವಾಗಿದೆಯಲ್ಲದೆ ಪೂರ್ಣ ಅಭೇದ ಸೂಚಕವಾಗಿಲ್ಲ. "ಬ್ರಹ್ಮ ವಿಷ್ಣು ರುದ್ರೇಂದ್ರಾಸ್ತೇ ಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ ಸಹಭೂತೈರ್ನ ಕಾರಣಂ ಕಾರಣಾನಾಂ ಧ್ಯಾತಾ ಕಾರಣಂತು ಧ್ಯೇಯಸ್ಸರ್ವೈಶ್ವರ್ಯ ಸಂಪನ್ನಶ್ಶಂ ಭುರಾಕಾಶಮಧ್ಯೇ ಧೃವಂ।" ಎಂಬೀ ಅಥರ್ವಶಿಖೋಪನಿಷದ್ವಚನವು ಬ್ರಹ್ಮ ವಿಷ್ಣು ಮೊದಲಾದ ಸಕಲ ಸೃಷ್ಟಿಯು ಶಿವನ ಕಾರ್ಯವಾಗಿದ್ದು ಆ ಪರಶಿವ ನೊಬ್ಬನೇ ಇವೆಲ್ಲಕ್ಕು ಕಾರಣರೂಪನಾಗಿ ಕರ್ತನಾಗಿರುವನೆಂದು ಹೇಳಿ ಜನ್ಯ ಜನಕತ್ವವನ್ನೂ ಕಾರ್ಯಕಾರಣತ್ವವನ್ನೂ ಸ್ಪಷ್ಟವಾಗಿ ಸೂಚಿಸಿದೆ. ಕಾರಣ ರೂಪ ಕರ್ತನ ಗುಣಧರ್ಮಗಳು ಕಾರ್ಯದಲ್ಲಿದ್ದೇ ಇರುತ್ತವೆಯೆಂಬುದನ್ನೂ ಮರೆಯು ವಂತಿಲ್ಲ. ಇದರಿಂದ ಕಾರ್ಯಕಾರಣಗಳಿಗೆ ಭೇದವಿದ್ದಂತೆ ಅಭೇದವೂ ಇದ್ದೇ ಇರುತ್ತದೆ, ಕಾರಣ ಗುಣ ಕಾರ್ಯದಲ್ಲಿರುತ್ತವೆ. ಅಲ್ಲದೆ ಪ್ರಪಂಚವೆಲ್ಲವೂ ಅಂದರೆ ಕಾರ್ಯವೆಲ್ಲವೂ ಕರ್ತನ ಪರಿಣಾಮವಾಗಿರುತ್ತದೆ. ಇದರಿಂದಾಗಿ ಅಭೇದ ವನ್ನು ಅಲ್ಲಗಳೆಯಲಾಗುವುದಿಲ್ಲ. ಆದರೂ ಲಿಂಗದಲ್ಲಿಯೇ ನಿಷ್ಠೆಯನ್ನು ದೃಢ ಗೊಳಿಸುವ ಮಾಹೇಶ್ವರನು ಪೃಥಿವ್ಯಾದಿಗಳಲ್ಲಿ ಕಾರ್ಯಭಾವವನ್ನಿರಿಸಿಕೊಳ್ಳಬೇಕ ಲ್ಲದೆ ಕಾರಣ ರೂಪನಾದ ಕರ್ತನ ಭಾವವನ್ನಿರಿಸಿಕೊಳ್ಳಬಾರದೆಂಬುದಭಿ ಪ್ರಾಯ.

"ಪೃಥಿವ್ಯಾದ್ಯಾತ್ಮಪರ್ಯಂತ ಪ್ರಪಂಚೋ ಹ್ಯಷ್ಟಧಾ ಸ್ಥಿತಃ ।
ದೇಹ ಈಶಸ್ಯ ಚಾತ್ಮಾಯಂ ಸರ್ವತತ್ತ್ವನಿಯಾಮಕಃ ॥
ಶರೀರಭೂತಾದೇತಸ್ಮಾತ್ಪ್ರಪಂಚಾತ್ಪರಮೇಷ್ಠಿನಃ ।
ಆತ್ಮಭೂತಸ್ಯ ದೇವಸ್ಯ ನಾಭೇದೋ ನ ಪೃಥಕ್ ಸ್ಥಿತಿಃ ॥"

ಈ ದೃಶ್ಯ ಜಗತ್ತು ಭೂಮಿ-ಜಲ-ಅಗ್ನಿ-ವಾಯು-ಆಕಾಶ-ರವಿ-ಶಶಿ-ಆತ್ಮ ಎಂದು ಎಂಟು ಬಗೆಯಾಗಿದೆ. ಈ ಎಂಟೂ ಶಿವನ ಮೈಯಾಗಿದೆ. ಎಲ್ಲ ತತ್ತ್ವಗಳನ್ನು ಕಾರ್ಯಗಳಲ್ಲಿ ನಿಯಮಿಸಲು ಸಮರ್ಥನಾದ ಶಿವನು ಈ ಎಣ್ಮೈಗಳಲ್ಲಿ ಚೈತನ್ಯನಾಗಿರುವನು. ಇದರಿಂದ ಈ ಸೃಷ್ಟಿ-ಶಿವರಿಗೆ ದೇಹ-ದೇಹಿ ಸಂಬಂಧ, ನಿಯಮ್ಯ-ನಿಯಾಮಕ ಸಂಬಂಧ ಸೂಚಿತವಾಗುತ್ತವೆ, ಈ ಸಂಬಂಧ ಸೂಚನೆ

ಯಿಂದ ಭೇದಾಭೇದಗಳೆರಡೂ ನಿರ್ದೇಶವಾಗಿವೆ. ಇವೆರಡಕ್ಕೂ ಅತ್ಯಂತ ಭೇದವನ್ನಾಗಲಿ, ಅತ್ಯಂತ ಅಭೇದವನ್ನಾಗಲಿ ಹೇಳಲು ಸಾಧ್ಯವಿಲ್ಲ, ಗುಣಧರ್ಮಗಳ ದೃಷ್ಟಿಯಲ್ಲಿ ನಿರಸನವನ್ನು ಮಾಡಿದರೂ ಸರ್ವವ್ಯಾಪಕನಾದ ಶಿವನು ಶರೀರವಾದ ಪೃಥಿವ್ಯಾದಿಗಳಲ್ಲಿಯೂ ಇರುವುದರಿಂದ ನಿಶ್ಶೇಷವಾಗಿ ನಿರಸನ ಮಾಡುವಂತಿಲ್ಲ, ಜಡ ಭಾಗದಿಂದ ಭೇದ; ಚೇತನ ಭಾಗದಿಂದ ಅಭೇದ. ಈ ಎರಡು ಮಂತ್ರಗಳ ಸಾರವನ್ನು ಚನ್ನಬಸವಣ್ಣನವರ ಈ ವಚನವು ಸೊಗಸಾಗಿ ಪ್ರತಿಪಾದಿಸಿದೆ.

"ಅಷ್ಟತನುಮೂರ್ತಿ ಲಿಂಗವೆಂಬ ಮಾತಿನ ಪಾತಕವ ಕೇಳಲಾಗದು.
ಪೃಥ್ವಿಯಂತೆ ಕಠಿನವುಳ್ಳಾತನೆ ? ಅಪ್ಪುವಿನಂತೆ ಓಟವುಳ್ಳಾತನೆ ?
ತೇಜದಂತೆ ತೃಣಕಾಷ್ಠವಿಲ್ಲದಿರ್ದಡೆ ನಂದುವಾತನೆ ?
ವಾಯುವಿನಂತೆ ಚಲನವುಳ್ಳಾತನೆ ? ಆಕಾಶದಂತೆ ಬಚ್ಚ ಬರಿಯ
ಬಯಲಾದಾತನೆ ? ಸೋಮಸೂರ್ಯರಂತೆ ದಿವಾರಾತ್ರಿಯ ನಡೆಸುವಾ
ತನೆ ? ಜೀವಾತ್ಮನಂತೆ ಜನನ ಮರಣವುಳ್ಳಾತನೆ ? ಇದು ಕಾರಣ,
ಕೂಡಲ ಚನ್ನಸಂಗಯ್ಯಾ, ನೀವು ನಿಮ್ಮಂತೆ; ಇವೆಲ್ಲವು ನೀವಿರಿಸಿದಂತೆ."

ಈ ವಚನದ ಕಡೆ ನುಡಿಯಲ್ಲಿ ನಿಯಮ್ಯ ನಿಯಾಮಕ ಸಂಬಂಧವೂ ಭೇದಾಭೇದ ಭಾವವೂ ಸೂಚ್ಯವಾಗಿವೆ,

ಅಷ್ಟಾವರಣವೇ ಅಂಗ (ಕಾಯ)ವಾದ ಮಾಹೇಶ್ವರನಿಗೆ ಪೃಥಿವ್ಯಾದಿ ಅಷ್ಟಮೂರ್ತಿಗಳೂ ಸಂಬಂಧವುಳ್ಳವಾಗಿವೆ. ಅಷ್ಟಾವರಣಗಳು ತನಗೆ ಅಂಗ ಹೇಗೋ ಅಷ್ಟ ಮೂರ್ತಿಗಳು ಶಿವನಿಗೆ ಹಾಗೆ ಅಂಗಗಳಾಗಿವೆಯೆಂದು ಹೇಳುವಲ್ಲಿ ಹೆಚ್ಚು ಔಚಿತ್ಯವಿದೆ.

ಶಿವನು ಜೀವಾತ್ಮನಾಗಿ ತೋರುವಂತೆ ವಿಶ್ವಾತ್ಮನಾಗಿ ತೋರುವನೆಂಬುದನ್ನು ಈ ಮಂತ್ರಗಳೆರಡು ದೇಹಾತ್ಮ ನ್ಯಾಯದಿಂದ ಸಿದ್ಧಪಡಿಸಿವೆ, ಈ ವಿಶ್ವಕ್ಕೆ ಆತ್ಮಭೂತನಾಗಿದ್ದಾನೆಂದು ಸ್ಪಷ್ಟವಾಗಿ ಹೇಳಲಾಗಿದೆ, ಇಲ್ಲವಾದರೆ ಸರ್ವಾಂತರ್ಯಾಮಿತ್ವವು ಮತ್ತು ಸರ್ವತತ್ತ್ವ ನಿಯಾಮಕತ್ವವು ಶಿವನಿಗೆ ಘಟಿಸದೆ

ಹೋಗುವ ಸಂಭವ ಸಂಪ್ರಾಪ್ತವಾಗುತ್ತಿತ್ತು, ಆದ್ದರಿಂದ ವಿಶ್ವಕ್ಕೂ ವಿಶ್ವಾತೀತನಾದ ಶಿವನಿಗೂ ಭೇದಾಭೇದವೆರಡೂ ಉಂಟೆಂಬ ಸಿದ್ಧಾಂತಕ್ಕೆ ಸಹಜವಾಗಿ ಬರಬೇಕಾಗಿದೆ; ಬಂದಾಗಿದೆ,

"ಪೃಥ್ವಿಯಂತಹ ಭಕ್ತ, ಅಪ್ಪುವಿನಂತಹ ಮಾಹೇಶ್ವರ, ಅಗ್ನಿಯಂತಹ ಪ್ರಸಾದಿ, ವಾಯುವಿನಂತಹ ಪ್ರಾಣಲಿಂಗಿ, ಆಕಾಶದಂತಹ ಶರಣ, ಚಂದ್ರನಂತಹ ನೇಮಸ್ಥ, ಸೂರ್ಯನಂತಹ ಅನುಭಾವಿ, ಆತ್ಮನಂತಹ ಐಕ್ಯ, ಇಂತೀ ಅಷ್ಟತನು ಗಟ್ಟಿಗೊಂಡು ಕೂಡಲ ಚೆನ್ನಸಂಗನ ಶರಣನು ಅನಂತಕುಳ ರಹಿತನು," ಚನ್ನಬಸವಣ್ಣನವರು ಈ ವಚನದಲ್ಲಿ ಭೇದಾಭೇದ ಸ್ಥಿತಿಗಳೆರಡನ್ನೂ ಚೆನ್ನಾಗಿ ಚಿತ್ರಿಸಿದ್ದಾರೆ ;

"ಅಚೇತನತ್ವಾತ್ ಪೃಥ್ವ್ಯಾದೇರಜ್ಞತ್ವಾದಾತ್ಮನಸ್ತಥಾ
ಸರ್ವಜ್ಞಸ್ಯ ಮಹೇಶಸ್ಯ ನೈಕರೂಪತ್ವಮಿಷ್ಯತೇ ।
ಇತಿ ಯಶ್ಚಿಂತಯೇನ್ನಿತ್ಯಂ ಪೃಥ್ವ್ಯಾದೇರಷ್ಟಮೂರ್ತಿತಃ
ವಿಲಕ್ಷಣಂ ಮಹಾದೇವಂ ಸೋಽಷ್ಟಮೂರ್ತಿ ನಿರಾಸಕಃ ॥"

ಅಷ್ಟಮೂರ್ತಿಗಳಲ್ಲಿ ಮೊದಲಿನವೇಳು ಜಡಗಳು, ಎಂಟನೆಯ ಆತ್ಮನು ಅಜ್ಞ ಮತ್ತು ಕಿಂಚಿಜ್ಞ, ಶಿವನು ಸರ್ವಜ್ಞ. ಈ ದೃಷ್ಟಿಯಲ್ಲಿ ಭೇದವಿದೆಯಲ್ಲದೆ ಅಭೇದವಿಲ್ಲ.

ಹೀಗೆ ಪೃಥಿವ್ಯಾದಿ ಅಷ್ಟಮೂರ್ತಿಗಳಿಗಿಂತ ಮಹಾದೇವನು ವಿಲಕ್ಷಣನೆಂದು ಯಾವಾಗಲೂ ಯಾವ ಮಾಹೇಶ್ವರಾಂಗನು ಚಿಂತನ ಮಾಡುವನೋ ಅವನೇ ಅಷ್ಟಮೂರ್ತಿ ನಿರಾಸಕನೆನಿಸುವನು.

ಪರಮೇಶ್ವರನ ದೃಷ್ಟಿಯಿಂದ ಪೃಥಿವ್ಯಾದಿಗಳು ಅಚೇತನವೆನಿಸಿವೆ. ಇವುಗಳ ದೃಷ್ಟಿಯಲ್ಲಿ ಇವೂ ಅತ್ಯಂತ ಗೂಢ ಚೈತನ್ಯವುಳ್ಳವಾಗಿವೆ. ಜೀವಾತ್ಮನು ಅಜ್ಞನೂ ಕಿಂಚಿಜ್ಞನೂ ಆಗಿರುವುದರಿಂದ ಸರ್ವಜ್ಞನಾದ ಮಹಾದೇವನನ್ನು ಆರಾಧಿಸುವವನಾಗಿದ್ದಾನೆ. ಪೃಥಿವ್ಯಾದಿಗಳಲ್ಲಿ ಶಿವಭಾವವನ್ನಿಟ್ಟರೆ ಲಿಂಗನಿಷ್ಠೆಗೆ

ಭಂಗ ಬರುತ್ತದೆ. ಅರ್ಚನೆಗೆ ಅವಕಾಶವಿಲ್ಲದಾಗುತ್ತದೆ. ಆದ ಕಾರಣ ಮಾಹೇಶ್ವರನು ತನ್ನ ಆರಾಧ್ಯ ಲಿಂಗದಲ್ಲಿ ನಿಷ್ಠೆ ನೆಲೆಗೊಳ್ಳುವವರೆವಿಗೂ ಅಷ್ಟ ಮೂರ್ತಿಗಳಲ್ಲಿ ಅಭೇದ ಭಾವವನ್ನು ನಿರಸನ ಮಾಡಬೇಕು.

"ಬ್ರಹ್ಮವೆಂಬ ವೃಕ್ಷದಲ್ಲಿ ಫಲ, ಪತ್ರ, ಕುಸುಮಂಗಳೆಂಬ ಸಚರಾಚರಂಗಳಷ್ಟ ಮೂರ್ತಿಗಳಾದಿಯಾಗಿ ಅಳಿವುತ್ತಿಪ್ಪವಯ್ಯಾ ! ಇದಕ್ಕೆ ಶ್ರುತಿ ;

"ಬ್ರಹ್ಮಾಣಂ ವೃಕ್ಷಮಹತಾ । ಪತ್ರಂತು ಕುಸುಮಿತಂ ಫಲಂ ।
ಸಚರಾಚರಾಷ್ಟಮೂರ್ತಿಂ । ಫಲಿತಂ ಫಲಶೂನ್ಯವತ್ ॥ ಇಂತೆಂದುದಾಗಿ,

ಅಷ್ಟಮೂರ್ತಿಗಳು ನಷ್ಟವಾದಲ್ಲಿ ಸೌರಾಷ್ಟ್ರ ಸೋಮೇಶ್ವರಲಿಂಗ ನಷ್ಟವಾಯಿತ್ತೆಂಬ ಮಿಟ್ಟೆಯ ಭಂಡರನೇನೆಂಬೆನಯ್ಯಾ ?"

ಇನ್ನೊಂದು ಬಗೆಯಲ್ಲಿ ವಿಚಾರಿಸಿದರೆ ಈ ಅಷ್ಟಮೂರ್ತಿಗಳಿಗೂ ವೀರ ಶೈವರ ಅಷ್ಟಾವರಣಗಳಿಗೂ ಸಂಬಂಧವಿರುವುದನ್ನು ಅಲ್ಲಗಳೆಯುವಂತಿಲ್ಲ. ಸೂರ್ಯಚಂದ್ರಾತ್ಮರು ಗುರು–ಲಿಂಗ-ಜಂಗಮರಾಗಿ, ನೆಲ-ಜಲಗಳು ಪ್ರಸಾದ-ಪಾದೋಪಕಗಳಾಗಿ, ಅಗ್ನಿ ವಾಯು ಆಕಾಶಗಳು, ರುದ್ರಾಕ್ಷಿ-ವಿಭೂತಿ-ಮಂತ್ರ ಗಳಾಗಿ ಏರ್ಪಡುತ್ತವೆ. ಹೀಗಿದ್ದರೂ ಅಷ್ಟಮೂರ್ತಿಗಳು ಅತ್ಯಂತ ಸ್ಥೂಲ ವಾಗಿವೆ ಬಹಿರಂಗವಾಗಿವೆ ಆದ್ದರಿಂದ ಮುಂದುವರಿಯಲಿರುವ ಮಾಹೇಶ್ವರನು ಇವೆಲ್ಲವುಗಳಲ್ಲಿ ಹಾಸುಹೊಕ್ಕಾಗಿದ್ದು ಇನ್ನೂ ಅತೀತನಾಗಿರುವ ಆ ಮಹಾದೇವ ನನ್ನು ಇವುಗಳಿಗೆ ವಿಲಕ್ಷಣನನ್ನಾಗಿ ಲಕ್ಷಿಸಬೇಕೆಂದು ಶ್ರೀ ಜಗದ್ಗುರು ರೇಣುಕರು ಬೋಧಿಸಿದ್ದಾರೆ.

ಆ ಪರಶಿವನಿಚ್ಛೆಯಿಂದಲೇ ಆವಿರ್ಭವಿಸಿದೆ ಈ ಅಷ್ಟಮೂರ್ತಿ ರೂಪ ವಿಶ್ವವು. ಇದು ಮಿಥ್ಯವೆಂದಿಗೂ ಅಲ್ಲ, ಅಚೇತನತೆಯಿಂದ ಅಪೂರ್ಣವೆಂದು ಹೇಳಲಾಗಿದೆ, ಅಂತೆಯೇ ವ್ಯಷ್ಟಿ ಜೀವನವೂ ಅಪೂರ್ಣವೆನಿಸಿದೆ, ಮುಮ್ಮೊದಲು ವ್ಯಷ್ಟಿ ಜೀವನವನ್ನು ಅರಳಿಸಿ ಪೂರ್ಣವಾಗಿಸಿ ಬಳಿಕ ಸಮಷ್ಟಿ ಸೃಷ್ಟಿಯನ್ನು ಸಂಪೂರ್ಣ ದೃಷ್ಟಿಯಲ್ಲಿ ಕಾಣುವಂತಾಗಬೇಕೆಂಬ ಉದಾತ್ತ ಉದ್ದೇಶವು ಜಗದ್ಗು

ರುವಿನಲ್ಲಿದೆ, 'ಮನೆಗೆದ್ದು ಮಾರುಗೆದೆ' ಎಂಬ ನಾಣ್ಣುಡಿಯ ಅಭಿಪ್ರಾಯ ವನ್ನು ಈ ನಿರಸನ ಪದದಲ್ಲಿ ತುಂಬಿದ್ದಾರೆ, ತಾನಿನ್ನೂ ಅಜ್ಞನಾಗಿರುವಾಗ ಅಚೇತನದ ಬೆನ್ನು ಬೀಳುಬಾರದೆಂಬುದೇ ಆಶಯ, ಅಜ್ಞನು ಸರ್ವಜ್ಞನ ಬೆನ್ನು ಬಿದ್ದರೆ ಲಾಭ,

ಈ ಅಷ್ಟಮೂರ್ತಿ ರೂಪ ವಿಶ್ವದೇಹದ ಆತ್ಮವಾದ ಪರಮಾತ್ಮನ ಉಪಾ ಸನೆಯಲ್ಲಿಯೇ ಇರುವಾಗ, ಸ್ವರೂಪ ಚಿಂತನದಲ್ಲಿರುವಾಗ ಬಾಹ್ಯ ಬಹುರೂಪ ಚಿಂತನೆಯ ಅನ್ವೇಷ್ಟಿಕತೆ ಅನವಶ್ಯಕವೆಂಬುದೇ ಜಗುದ್ಗುರುವಿನ ಭಾವೇಂಗಿತ, ಮನೆಯ ಒಡೆಯನನ್ನೇ ಒಲಿಸಿದರೆ ಹೇಗೆ ಮನೆಯವರೆಲ್ಲರೂ ಒಲಿವರೋ ಅಥವಾ ಮನೆಯೊಳಗೆ ಸುಲಭವಾಗಿ ಪ್ರವೇಶ ಸಿಕ್ಕುವುದೋ ಹಾಗೆ ವಿಶ್ವನಾಥನನ್ನು ಒಲಿಸಿದರೆ ವಿಶ್ವದ ಒಲುಮೆ ತಾನೇ ಸಿದ್ಧಿಸುವುದು. ವಿಶ್ವನಾಥನನ್ನು ಒಲಿಸದ ಮುನ್ನ ವಿಶ್ವಮುಖವಾಗಬಾರದು; ಆದರೆ ಪೂರ್ಣ ಪ್ರಯೋಜನವಿಲ್ಲ, ಮೊದಲಿಡಬೇಕಾದ ಹೆಜ್ಜೆ ಯಾವುದೆಂಬುದನ್ನು ಮಾಹೇಶ್ವರನು ಮೊದಲರಿತು ಕೊಳ್ಳಬೇಕೆಂಬುದೇ ನಿರಸನದ ಮನೀಷೆ.

ಮೊದಲು ಆತ್ಮ ಸಾಕ್ಷಾತ್ಕಾರ. ಬಳಿಕ ವಿಶ್ವಾತ್ಮನೊಡನೆ ತಾದಾತ್ಮ್ಯ. ಅಜ್ಞನು ಸುಜ್ಞನಾಗದೆ ಸರ್ವಜ್ಞನಾಗನು. ಸರ್ವಜ್ಞನಾಗದೆ ಅಂದರೆ ಮಹಾ ಜ್ಞಾನಿಯಾಗದೆ ಸರ್ವಾತ್ಮಭಾವ ಸಹಜವಾಗಿ ಸಮನಿಸದು; ವಿಶಾಲ ದೃಷ್ಟಿಯ ವಿಕಾಸವಾಗದು.

ಮೊದಲು ಜೀವನದಲ್ಲಿ ಪರಿಪೂರ್ಣ ದೈವೀಭಾವ ಆವಿರ್ಭಾವವಾಗ ಬೇಕು. ಅದರ ಅನುಭವಕ್ಕೇರಬೇಕು. ಅದರ ಆನಂದದಲ್ಲಿ ಮುಳುಗಬೇಕು. ಅಂತಾಗುವವರೆವಿಗೂ ಅನನ್ಯತೆ ಅತ್ಯಗತ್ಯ. ಅನ್ಯ ನಿರಸನ ಅಗತ್ಯ.

ಸಾಕಾರವು ನಿರಾಕಾರಕ್ಕೆ ಭಿನ್ನವಲ್ಲ. ನಿರಾಕಾರವು ಉಪಮೆಗೆ ತಕ್ಕುದಲ್ಲ. ಪ್ರಮಾಣಕ್ಕೆ ಸಿಕ್ಕುವುದಲ್ಲ. ವ್ಯಷ್ಟಿ ಆತ್ಮನು ತಾನು ತೊಟ್ಟ ಅಷ್ಟಾಂಗ ರೂಪ ತನುವಿನಲ್ಲಿ ತನುಭಾವವನ್ನು ಅಂಗಭಾವವನ್ನು ಸಹ ಹೇಗೆ ನಿರಸನ ಮಾಡಬೇಕೋ ಹಾಗೆ ಸಮಷ್ಟಿ ಅಷ್ಟ ಮೂರ್ತಿಗಳಲ್ಲಿಯೂ ಅಷ್ಟ ಮೂರ್ತಿ ಯೆಂಬ ಭಾವವನ್ನು ನಿರಸನ ಮಾಡಬೇಕು.

ಭಿನ್ನ ಸೃಷ್ಟಿ ಭಾವದಲ್ಲಿ ಅಷ್ಟಮೂರ್ತಿ ನಿರಸನ. ಅಭಿನ್ನ ಸಂಸೃಷ್ಟಿಯಲ್ಲಿ ನಿರಸನ ಸರಸನಗಳಿಗಿಂಬಿಲ್ಲ, ಚನ್ನಬಸವಣ್ಣನವರು ತಮ್ಮ "ಕರಣಹಸಿಗೆ" ಎಂಬ ಕೃತಿಯಲ್ಲಿ ಹೀಗೆ ಹೇಳಿದ್ದಾರೆ ;

"ಭೂಜಲಾಗ್ನಿ ಮರುದ್ವ್ಯೋಮಭಾಸ್ಕರಾತ್ಮಶಿ ಚೇತನಾ: ।
ದಿವಾ ಪ್ರಕಾಶತೇ ಸೂರ್ಯೋ ರಾತ್ರೌ ಚಂದ್ರಃ ಪ್ರಕಾಶತೇ !
ಸರ್ವಚೇತನ ಆತ್ಮಾ ಚ ಶಿವಾಂಶೋಽಪ್ಯಷ್ಟ ಮೂರ್ತಯಃ ॥"

ಅಷ್ಟಮೂರ್ತಿಗಳು ಶಿವಾಂಶವೆಂದು ಹೇಳಿದುದನ್ನು ಗಮನಿಸಬೇಕಾಗುತ್ತದೆ.

## ಸರ್ವಗತತ್ವ ನಿರಸನಸ್ಥಲಂ—೭

ಎಲ್ಲವೂ ಒಂದೇ ಎಂಬ ಭಾವದ ಸರ್ವಾದ್ವೈತವು ಹೇಗೆ ಉಪಾಸ್ಯೋಪಾಸಕತ್ವದ ಸಾಧನೆಗೆ ಅನಾನುಕೂಲವೋ ಹಾಗೆ ಎಲ್ಲೆಲ್ಲಿ ಎಲ್ಲದರಲ್ಲಿ ಶಿವನಿರುವನೆಂಬುದೂ ಮಾಹೇಶ್ವರಾಂಗನಿಗೆ ಅನಾನುಕೂಲವು. ಸರ್ವಾದ್ವೈತದ್ದು ಸರ್ವತ್ರ ಏಕಭಾವ; ಸರ್ವಗತತ್ವದ್ದು ಸರ್ವತ್ರ ಶಿವಭಾವ. ಇವೆರಡೂ ಇಷ್ಟಲಿಂಗದ ನಿಷ್ಠೆಗೆ ಭಂಗವನ್ನು ಒಡ್ಡುವವಾಗಿವೆ. "ಜಗತ್ಪ್ರಪಂಚವ ಮಾಡಿ ಈ ಜಗದಲ್ಲಿ ಜೀವರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯಂತಿರಲಿ, ಜೀವನೆ ಶಿವನಾದಡೆ ಶೋಕ, ಮೋಹ, ಋಣ, ರೋಗ, ಪುಣ್ಯಪಾಪ, ಕಾಲ, ಕಲ್ಪಿತ, ಪ್ರಳಯ, ಪ್ರಕೃತಿ, ಸಂಸಾರ ಪಾಶಬಂಧ ಉಂಟೇ ಶಿವಂಗೆ? ಇವೆಲ್ಲವೂ ಜೀವಂಗಲ್ಲದೆ ಶಿವಂಗಿಲ್ಲವಾಗಿ ತ್ರಿಗುಣರಹಿತ ಸೌರಾಷ್ಟ್ರಸೋಮೇಶ್ವರನು." ಆದಯ್ಯನೆಂಬ ಶರಣನು ಈ ವಚನದಲ್ಲಿ ಸರ್ವಶಬ್ದಾರ್ಥವನ್ನು ಮತ್ತೊಂದು ಬಗೆಯಲ್ಲಿ ಮಾಡಿದ್ದಾನೆ. ಸರ್ವಶಬ್ದಕ್ಕೆ ಶೋಕಾದಿಗಳೂ ಬರುತ್ತವೆ. ಸರ್ವಗತತ್ವವನ್ನೊಪ್ಪಿದರೆ ಶೋಕಾದಿಗಳಲ್ಲಿಯೂ ಶಿವನನ್ನೊಪ್ಪುವ ಪ್ರಸಂಗವುಂಟಾಗುತ್ತದೆ. ಮತ್ತು ಶೋಕಾದಿಗಳೂ ಶಿವನಿಗುಂಟೆಂದು ಹೇಳಿದಂತಾಗುತ್ತದೆ. ಇದರಿಂದಾಗಿ ಸರ್ವಗತತ್ವವನ್ನೊಪ್ಪಲು ಸಾಧ್ಯವಿಲ್ಲೆನ್ನುತ್ತಾನೆ. ಇದೇ ವಚನಕಾರನು, ನಾದಬಿಂದು ಕಳಾತೀತನಾದ ಶಿವನು ಜಗನ್ಮಯನಾದರೂ ಜಗದ ಸ್ಥಿತಿಗತಿಗಳಿಗೆ ಒಳಗಾಗುವವನಲ್ಲ. ಭಿನ್ನರಾದ ಜೀವರೇ ಒಳಗಾಗುವರೆಂದು ಅಭಿಪ್ರಾಯಪಟ್ಟಿದ್ದಾನೆ.

"ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ಶ್ರುತಿವಿಡಿದು ಅಣುರೇಣುತೃಣಕಾಷ್ಠದೊಳಗೆ ಶಿವನು ಕೂಡೆ ಜಗಭರಿತನೆಂಬ ಪಾತಕರ ನುಡಿಯ ಕೇಳಲಾಗದು. ಅದೇನು ಕಾರಣವೆಂದಡೆ, ಜನ್ನಕ್ಕೆ ತಂದ ಕನ್ನೆಯಾಡು ಶ್ರುತಿಯಿಂದ ಹೊರಗು. ಸರ್ವವೂ ಶಿವಮಯವೆಂಬ ಪಾತಕರ ನುಡಿಗಿನ್ನೆಂತೊ? ಅಂತ್ಯಜ-ಅಗ್ರಜ, ಮೂರ್ಖ–ಪಂಡಿತರೆಂಬ ಭೇದಕ್ಕಿನ್ನೆಂತೊ? ಜಗದೊಳಗೆ ಶಿವ, ಶಿವನೊಳಗೆ ಜಗವೆಂಬ ಭ್ರಮಿತರ ನುಡಿಗಿನ್ನೆಂತೊ?........"ಎಂದು ಚನ್ನ

ಬಸವಣ್ಣನವರು ಕೇಳಿದ್ದಾರೆ, ಇದೇ ಅಭಿಪ್ರಾಯವು ವಸಿಷ್ಠ ಪುರಾಣದಲ್ಲಿ ಹೀಗಿದೆ;

"ಶಿವಂ ಸರ್ವಪದಾತೀತ ಸರ್ವಸಂಕಲ್ಪನಾತಿಗಃ ।
ಸರ್ವಸಂಕಲ್ಪರಹಿತೋ ನ ಸರ್ವೋ ನ ಚ ಸರ್ವಗಃ ॥"

ಶಿವನು ಎಲ್ಲವನ್ನು ಮೀರಿ ಇರುವಾತನು. ಯಾವ ಸಂಕಲ್ಪಕ್ಕೆ ಸಿಕ್ಕುವವನಲ್ಲ. ನೆನಹಿಗೆ ನಿಲುಕುವವನಲ್ಲ. ಅವನು ಎಲ್ಲವೂ ಅಲ್ಲ; ಎಲ್ಲೆಲ್ಲಿಯೂ ಇಲ್ಲ: ಎಂಬ ಭಾವವನ್ನು ಲಿಂಗನಿಷ್ಠನು ಬೆಳಸಿಕೊಳ್ಳಬೇಕು. ಇಲ್ಲವಾದರೆ ಲಿಂಗನಿಷ್ಠೆ ನೆಲೆಗೊಳ್ಳದು.

"ಪರಿಚ್ಛಿನ್ನಃ ಪ್ರಪಂಚೋಽಯಂ ಶಿವಃ ಪರಮವೈಭವಃ ।
ಕಥಂನು ಶಕ್ಯತೇ ದ್ರಷ್ಟುಮತ್ರ ವಿಶ್ವಾಧಿಕಃ ಶಿವಃ ॥"

ಪ್ರಪಂಚ ಪ್ರಮಾಣಕ್ಕೆ ಒಳಗಾಗಿದೆ. ಶಿವನು ಪ್ರಮಾಣಾತೀತನಾಗಿದ್ದಾನೆ. ಅಂಥವನನ್ನು ಈ ಪ್ರಪಂಚದಲ್ಲಿ ಕಾಣುವುದು ಹೇಗೆ?

"ಸರ್ವಗತ್ವೇ ಮಹೇಶಸ್ಯ ಸರ್ವತ್ರಾರಾಧನಂ ಭವೇತ್
ನ ಲಿಂಗಮಾತ್ರೇ ತನ್ನಿಷ್ಠೋ ನ ಶಿವಂ ಸರ್ವಗಂ ಸ್ಮರೇತ್ ।
ಸರ್ವಗೋಽಪಿ ಸ್ಥಿತಃಶಂಭುಃಸ್ವಾಧಾರೇ ಹಿ ವಿಶೇಷತಃ
ತಸ್ಮಾದನ್ಯತ್ರವಿಮುಖಃ ಸ್ವೇಷ್ಟಲಿಂಗೇ ಯಜೇಚ್ಛಿವಂ ॥"

ಮಾಹೇಶ್ವರನು ಸರ್ವಗತಶಿವನೆಂದು ಒಪ್ಪಿಕೊಂಡರೆ ಎಲ್ಲ ವಸ್ತುಗಳನ್ನೂ ಆರಾಧಿಸಬೇಕಾಗುತ್ತದೆ, ಕೇವಲ ಲಿಂಗದಲ್ಲಿಯೇ ಮಾಡುವ ಆರಾಧನೆಯನ್ನು ಕೈಬಿಡದೇಕಾಗುತ್ತದೆ. ಬಿಟ್ಟರೆ ನಿಷ್ಠೆಗೆ ಭಂಗಬರುತ್ತದೆ. ಆದುದರಿಂದ ಲಿಂಗನಿಷ್ಠನು ಶಿವನು ಸರ್ವಗತನೆಂಬುದನ್ನು ಸ್ಮರಿಸಲಾಗದು.

ಶಿವನ ಇರುವಿಕೆ ಸಾಮಾನ್ಯ, ವಿಶೇಷವೆಂದು ಎರಡು ಬಗೆಯಾಗಿದೆ. ಸಾಮಾನ್ಯವಾಗಿ ಶಿವನು ಸರ್ವಗತನಾದರೂ ತನಗೆ ಆಧಾರವಾದ ಲಿಂಗದಲ್ಲಿ ವಿಶೇಷವಾಗಿರುವನು. ಆದ್ದರಿಂದ ಮಾಹೇಶ್ವರನು ಇತರ ಪದಾರ್ಥಗಳನ್ನು ಪೂಜಿಸದೆ ತನ್ನ ಇಷ್ಟಲಿಂಗವನ್ನೇ ಪೂಜಿಸಬೇಕು. ಅನ್ಯದರಿಂದ ವಿಮುಖನಾಗಬೇಕು.

"ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-,ಅನ್ಯಶಬ್ದವ ಕೇಳನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-,ಅನ್ಯವ ಮುಟ್ಟನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-,ಅನ್ಯವ ನೋಡನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-,ಆಹಾರವ್ಯವಹಾರವನರಿಯನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-,ಅನ್ಯವ ಘ್ರಾಣಿಸನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-, ಬರಿಯ ಶಬ್ದವ ನುಡಿಯನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ-, ಕೂಡಲ ಚನ್ನಸಂಗಯ್ಯಾ, ನೀನಲ್ಲದೆ ಅನ್ಯವನರಿಯನಾ ಶರಣನು."

ಶ್ರೀ ಜಗದ್ಗುರು ರೇಣುಕರು ಹೇಳಿದ 'ಅನ್ಯತ್ರ ವಿಮುಖಃ' ಎಂಬುದನ್ನು ಈ ವಚನವು ಅರ್ಥವತ್ತಾಗಿ ಅನುಭವಪೂರ್ಣವಾಗಿ ಅರಳಿಸಿದೆ. ತನ್ನ ಇಷ್ಟಲಿಂಗದಲ್ಲಿಯೇ ವಿಶೇಷವಾಗಿರುವಾಗ ಅನ್ಯತ್ರ ಶಿವನನ್ನು ಪರಿಭಾವಿಸುವುದು ಭಾವೈಕವೃದ್ಧಿಗೆ ಪ್ರಶಸ್ತವಾದುದುವಲ್ಲ. ಭಾವವು ಹಲವಕ್ಕೆ ಹರಿಯದಂತಿರಬೇಕಾದರೆ ಸಾಧನಾವಸ್ಥೆಯಲ್ಲಿ ಆತ್ಮೈಕನಿಷ್ಠವಾಗಿರಬೇಕು; ಸ್ವೇಷ್ಟಲಿಂಗ ನಿಷ್ಠವಾಗಿರಬೇಕು. ಸೂರ್ಯನು ಬಾನನ್ನೇ ಹಿಡಿದು ಬೆಳಗುವಂತೆ ಮಾಹೇಶ್ವರನು ಲಿಂಗವನ್ನೇ ಹಿಡಿದು ಬೆಳಗಬೇಕು; ಬಲಿಷ್ಠನಾಗಬೇಕು. ಬ್ರಹ್ಮಾಂಡದ ಮಾತಿರಲಿ, ಪಿಂಡಾಂಡದ ಭಾವವನ್ನೂ ಬಿಟ್ಟಿರಬೇಕು, ಆ ಪರಮ ಸಚ್ಚಿತ್ಸುಖರೂಪಾದ ಸ್ವೇಷ್ಟಲಿಂಗವೊಂದನ್ನೇ ಧರಿಸಿ ಧ್ಯಾನಿಸಿ ಚನ್ನಾಗಿ ಮೈಗೂಡಿಸಿಕೊಳ್ಳಬೇಕು. ಆದಿಭೌತಿಕ ಆದಿದೈವಿಕ ಭ್ರಾಂತಿ ಭಾವಗಳನ್ನೆಲ್ಲ ಬಿಟ್ಟು ಬಿಡಬೇಕು. ಏಕಚಿತ್ತನಿಗೆ ಏಕನಿಷ್ಠನಿಗೆ ಏಕೈಕದೃಷ್ಟಿಯೂ ಅತ್ಯಗತ್ಯ, 'ಏಕಂ ಸತ್' ಎಂಬ ಭಾವ ಏಕತ್ರ ಬೆಳೆದು ಬಲಗೊಳ್ಳಬೇಕು. ಮೊದಲು ತನ್ನನ್ನು ಸಾಧಿಸಬೇಕೆಂಬ ಸತ್ಯಸಿದ್ಧಾಂತಕ್ಕೆ ಮಾಹೇಶ್ವರನು ಅಚಲದೆ ಅಂಟಿಕೊಂಡಿರಬೇಕು. ಸ್ವೇಷ್ಟವಾವುದೋ ಅದರಲ್ಲಿಯೇ ನಿಷ್ಠೆ ನೆಲಗೊಳ್ಳಬೇಕು. ತನ್ನಿಷ್ಟಲಿಂಗದಲ್ಲಿ ಅನ್ಯವೆಲ್ಲವೂ ಇದೆ, ತನ್ನಿಷ್ಟಲಿಂಗವನ್ನು ಬಿಟ್ಟು ಅನ್ಯವೆಂಬುದಿಲ್ಲ. ತನ್ನಿಷ್ಟಲಿಂಗವೇ ಎಲ್ಲ. ಇಡೀ ವೃಕ್ಷವನ್ನು ಹೊರದವನು ಆ ವೃಕ್ಷದ ಬೀಜವೊಂದನ್ನು ಹೊತ್ತೊಯ್ಯುವುದು ಜಾಣತನ. ಸರ್ವವನ್ನೊಳಗೊಂಡ ಸ್ವೇಷ್ಟಲಿಂಗವು ತನ್ನ ಕರಸ್ಥಳದಲ್ಲಿರುವಾಗ ಅದರಲ್ಲಿ ಮಾತ್ರ ಶಿವತ್ವವನ್ನು ಭಾವಿಸಿದರೆ ಆರಾಧಿಸಿದರೆ ತಪ್ಪಿಲ್ಲ; ಕುಂದಿಲ್ಲ. ಬೀಜ ಬಲವಾಗಬೇಕು. ಬೀಜ ಬಲವಾಗದೆ ಮೊಳೆತರೆ ಮರ ಪುಷ್ಟವಾಗಿ ಬೆಳೆಯದು;

ಪೂರ್ಣವಾಗಿ ಫಲಿಸದು. ಈ ನ್ಯಾಯವನ್ನನುಸರಿಸಿ ನಿಜ ಲಿಂಗನಿಷ್ಠೆಯನ್ನು ಏಕೀಕರಿಸಿ ಏಳ್ಗೆಯಾಗಿಸಲು ಆದೇಶವನ್ನೀಯುತ್ತಿದ್ದಾರೆ ರೇಣುಕರು 'ಸ್ವೇಷ್ಟ ಲಿಂಗೇ ಯಜೇಚ್ಛಿವಂ' ಎಂದು !

"ಸತ್ತಾತಿವಾಹಕೋ ದೇಹಸ್ತತ್ಪರಂ ಪರಮಾರ್ಥತಃ ।
ಪ್ರತ್ಯಕ್ಷಂ ಪರಮಂ ಯತ್ತತ್ತದಾದ್ಯಂ ಕಚನಂ ಚಿತಃ ॥"

—ಯೋಗವಾಸಿಷ್ಠ

'ಸತ್'–ತಾ ಯಾವುದುಂಟೋ ಅದೇ ಅತಿವಾಹಿಕ ದೇಹವು. ಪರಮಾರ್ಥವಾಗಿ ನೋಡಿದರೆ ಅದೇ ಪರಶಿವವು. ಪ್ರತ್ಯಕ್ಷವಾಗಿ ಪರಮವಾಗಿರುವುದು ಯಾವುದೋ ಅದೇ ಚಿತ್ತಿನ ಪ್ರಥಮ ಕಚನವು ನಿತ್ಯವೂ ಅಪರೋಕ್ಷವೂ ಶುದ್ಧವೂ ಚಿದಂಶವೂ ಸ್ವರೂಪವೂ ಆದುದೇ 'ಕಚನ'ವೆಂದರ್ಥವು, ಅಂದರೆ ತ್ಯಾಗಾಂಗಾವಚ್ಛಿನ್ನ ಚೈತನ್ಯರೂಪ ಇಷ್ಟಲಿಂಗವೆಂದರ್ಥ. ಈ ತ್ಯಾಗಾಂಗಾವಚ್ಛಿನ್ನ ಚೈತನ್ಯಕ್ಕೆ ಇಷ್ಟಲಿಂಗವೆಂದು ವಿಶ್ವವೆಂದು ಹೆಸರುಗಳು. ವೇದಾಂತಿಗಳು ಹೇಳುವ ಈ ವಿಶ್ವ ಎಂಬ ಹೆಸರು ಗಮನಾರ್ಹವಾಗಿದೆ. ಇದನ್ನೇ ಶಿವಾದ್ವೈತಿಗಳು ಇಷ್ಟಲಿಂಗವೆಂದರು. ಇದು ಸತ್ತಾಮಯವಾಗಿದೆ. ಸತ್ ಆಗಿ ತಾನೆನಿಸಿದೆ. ಯೋಗ ವಾಸಿಷ್ಠೋಕ್ತಿಯಂತೆ ಅತಿವಾಹಿಕದೇಹವೂ ಆಗಿದೆ. ಪರಮಾರ್ಥವಾಗಿ ಪರಶಿವಸ್ವರೂಪವಾಗಿದೆ. ಮಿಗಿಲಾಗಿ ಪ್ರತ್ಯಕ್ಷವೂ ಪ್ರಥಮವೂ ಆಗಿದೆ. ಇದನ್ನು ಪ್ರಯೋಗದಲ್ಲಿ ತಂದು ಇಷ್ಟಲಿಂಗವನ್ನಾಗಿಸಿ ಕರಸ್ಥಲಕ್ಕೆ ಕರಿಗೊಳಿಸಿಕೊಂಡಿರುತ್ತಾನೆ ವೀರಶೈವನು. ಆದ್ದರಿಂದ ಮಾಹೇಶ್ವರಾಂಗನು ತನ್ನ ಸರ್ವಸ್ವವಾದ ಸರ್ವವೂ ಆದ ಇಷ್ಟಲಿಂಗದಲ್ಲಿಯೇ ಶಿವಭಾವವು ಬಲಿಯುವಂತೆ ಏಕನಿಷ್ಠನಾಗಿ ಅದನ್ನೇ ಆರಾಧಿಸಬೇಕು.

ಪ್ರತ್ಯಕ್ಷವಾಗಿ ಪ್ರಥಮವಾಗಿ ತನಗೆ ಪ್ರಾಪ್ತವಾದ ವಸ್ತು ಇಷ್ಟಲಿಂಗ. ಇದು ಲೌಕಿಕ ಪರಮಾರ್ಥ ಎರಡನ್ನೂ ಒಳಕೊಂಡ ಕೇಂದ್ರ. ಚಿದಾನಂದ ಸ್ವರೂಪಗಳಾದ ಪ್ರಾಣಲಿಂಗ ಭಾವಲಿಂಗಗಳಿಗೆ ಆಧಾರವಾಗಿದೆ. ಇಷ್ಟಲಿಂಗದಲ್ಲಿ ಏನಿಲ್ಲ; ಏನುಂಟು?–ಎಲ್ಲವೂ ಅದರಲ್ಲಿದೆ. ಆದುದರಿಂದ ಅದನ್ನೇ ಆರಾಧಿಸಲು ಶ್ರೀಗುರುವರ್ಯನ ಶಿವಶಾಸನ.

"ಶಿವಂ ಸರ್ವಗತಶ್ಚಾಪಿ ಸ್ವಾಧಾರೇ ವ್ಯಜ್ಯತೇ ಭೃಶಂ
ಶಮೀಗರ್ಭೇ ಯಥಾ ವಹ್ನಿರ್ವಿಶೇಷೇಣ ವಿಭಾವ್ಯತೇ ।

ಸರ್ವಗತ್ವಂ ಮಹೇಶಸ್ಯ ಸರ್ವಶಾಸ್ತ್ರವಿನಿಶ್ಚಿತಂ
ತಥಾಪ್ಯಾಶ್ರಯಲಿಂಗಾದೌ ಪೂಜಾರ್ಥಮಧಿಕಾ ಸ್ಥಿತಿಃ ॥"

ಬೇರೆ ಬಗೆಯ ಎಲ್ಲ ಮರಗಳಲ್ಲಿ ಬೆಂಕಿಯಿದ್ದರೂ ಬನ್ನಿಯ ಮರದಲ್ಲಿ ಬಹುವಾಗಿರುತ್ತದೆ. ಇದರಂತೆ ಶಿವನು ಸರ್ವವಸ್ತುಗತನಾದರೂ ತನಗಾಧಾರವಾದ ಇಷ್ಟಲಿಂಗದಲ್ಲಿ ಹೆಚ್ಚಳವಾಗಿ ಪಜ್ವಳಿಸುತ್ತಾನೆ.

ಮಹಾದೇವನಾದ ಶಿವನು ಸರ್ವಗತನೆಂದು ಸರ್ವಶಾಸ್ತ್ರಗಳು ನಿಶ್ಚಯಿಸಿವೆ. ಹೀಗಿದ್ದರೂ ತನಗಾಶ್ರಯವಾದ ಲಿಂಗದಲ್ಲಿ ಗುರುಜಂಗಮರಲ್ಲಿ ಪೂಜಾಸ್ವೀಕಾರಕ್ಕಾಗಿ ಪರಶಿವನು ಮಿಗಿಲಾಗಿ ನೆಲಸಿರುವನು.

ತನಗೆ ಆಧಾರವೂ ಆಶ್ರಯವೂ ಆಗಿದೆ ಇಷ್ಟಲಿಂಗ. ಶರೀರಾವಚ್ಛಿನ್ನ ಚೈತನ್ಯವೇ ಲಿಂಗವಾಗಿದೆ. ಅದರಲ್ಲಿಯೂ ಮಹಾಗುರುವು ಶಿವದೀಕ್ಷಾ ಸಂಸ್ಕಾರ ಸಮಯದಲ್ಲಿ ಚಿದ್ರೂಪ ಶಿವಕಳೆಯನ್ನು ಅರೆಕೊರೆಯಿಲ್ಲದಂತೆ ಹೊರಹೊಮ್ಮಿಸಿ ತುಂಬಿರಿಸಿದ್ದಾನೆ. ಮಹಾಲಿಂಗವನ್ನಾಗಿಸಿದ್ದಾನೆ. ಅಲ್ಲದೆ ತನ್ನ ವ್ಯಕ್ತಿತ್ವವನ್ನೆಲ್ಲ ಅದರಲ್ಲಿರಿಸಿದ್ದಾನೆ. ತನ್ನ ಸತ್ಕ್ರಿಯೆ, ತನ್ನ ಸುಜ್ಞಾನ, ತನ್ನ ಶಿವಸುಖ ಇಷ್ಟಲಿಂಗವೇ ಆಗಿದೆ. ಸತ್ಕ್ರಿಯೆ ಸುಜ್ಞಾನ ಶಿವಸುಖಗಳನ್ನು ಬಿಟ್ಟು ತನಗೆ ಇನ್ನಾವ ಆಧಾರ ? ಇನ್ನಾವ ಆಶ್ರಯ ? ತನ್ನ ಜೀವನ ಸರ್ವಸ್ವವೆ ಅದಾಗಿದೆ. ಅದರಿಂದಾಗಿ ಅದೊಂದೇ ತನಗೆ ಆರಾಧ್ಯವಾಗಿದೆ.

ತ್ಯಾಗಾಂಗಾವಚ್ಛಿನ್ನ ಚೈತನ್ಯಕ್ಕೆ ಅಂದರೆ ಸಂಪೂರ್ಣ ಶಿವ ಸಂಸ್ಕಾರವುಳ್ಳ ಇಷ್ಟ ಲಿಂಗಕ್ಕೆ ಏನೆಲ್ಲವೂ ಆಗಬಲ್ಲ ಶಕ್ತಿ ಅದಕ್ಕಿದೆ;

"ಸಗುಣನಾಗಬಲ್ಲ; ನಿರ್ಗುಣನಾಗಬಲ್ಲ; ಸಗುಣ–ನಿರ್ಗುಣವೆರಡೊಂದಾಗಬಲ್ಲ, ಅಣುವಾಗಬಲ್ಲ, ಮಹತ್ತಾಗಬಲ್ಲ; ಅಣು–ಮಹತ್ತುಗಳೆರಡೊಂದಾಗಬಲ್ಲ, ಶಿವನಾಗಬಲ್ಲ, ಜೀವನಾಗಬಲ್ಲ; ಶಿವ—ಜೀವಂಗಳೆರಡೊಂದಾಗಬಲ್ಲ, ಸಕಲನಾಗಬಲ್ಲ. ನಿಃಕಲನಾಗಾಬಲ್ಲ ಸಕಲ–ನಿಃಕಲವೆರಡೊಂದಾಗಬಲ್ಲ. ಶೂನ್ಯನಾಗಬಲ್ಲ. ನಿಃಶೂನ್ಯನಾಗಬಲ್ಲ; ಶ್ಶೂನ್ಯ–ನಿಶ್ಶೂನ್ಯನಾಗಬಲ್ಲ. ಸೌರಾಷ್ಟ್ರ ಸೋಮೇಶ್ವರಲಿಂಗ, ಸರ್ವನಾಗಬಲ್ಲನೊರ್ವನಾಗಬಲ್ಲ, ಸರ್ವನೊರ್ವನೆರಡೊಂದಾಗಬಲ್ಲನಯ್ಯಾ!"

"ಬೀಜದೊಳಗಣ ವೃಕ್ಷ–ಅಂಕುರ,ಪಲ್ಲವ, ಪತ್ರ, ಕುಸುಮ, ಫಲಮೈದೋರದಂತೆ; ಕಾಷ್ಠದೊಳಗಣ ಆಗ್ನಿ–ಉರಿ, ಉಷ್ಣದೋರದಂತೆ; ಪತಂಗನ

ಕರುದೊಳಡಗಿಪ್ಪ ಮರೀಚಿ–ಪ್ರವಹಿಸದಂತೆ; ಬಿಂದುವಿನೊಳಡಗಿಪ್ಪ ನಾದ–ಧ್ವನಿ ದೋರದಂತೆ; ಪಿಂಡ-ಬ್ರಹ್ಮಾಂಡಗಳ ಕೂಡಿಪ್ಪ ಸೌರಾಷ್ಟ್ರಸೋಮೇಶ್ವರಾ, ಲಿಂಗ ವನಾರು ಭೇದಿಸಬಾರದಯ್ಯ!"

"ಶಿವಪಥವರಿತು ಲಿಂಗನಿಷ್ಠೆಯಿಂದೇಕೋಭಾವ ಬಲಿದು, ಕರಿಗೊಂಡ ಘನವೇದ್ಯವಾಗಿ ನಿಂದು, ನಿಜವ ನೆಮ್ಮಿ, ಸಚ್ಚಿದಾನಂದ ಸುಖಮಯನಾಗಿ, ಮಾಯೆ ಕೆಟ್ಟು, ಮರವೆ ಬಿಟ್ಟು ಮರಣವಳಿಯಬೇಕು;..." ಎಂದು ಆದಯ್ಯ ಶರಣನು ಲಿಂಗವು ತನಗೆ ಸರ್ವಾಧಾರ ಸರ್ವಾಶ್ರಯ ಸರ್ವಸ್ವರೂಪವಾಗಿರು ವುದನ್ನು ಸೊಗಸಾಗಿ ಹೇಳಿದ್ದಾನೆ.

ಶಿವನು ಪೂಜಾಪ್ರಿಯನು ಆದರಿಂದಾಗಿ ತನ್ನ ಭಕ್ತರ ಭಾವ ಮನ ದೇಹ ಗಳಲ್ಲಿ ಯಾವಾಗಲೂ ಇರುತ್ತಾನೆ; ಎಲ್ಲೆಲ್ಲಿಯೂ ಇರುವುದಕ್ಕಿಂತ ಹಿರಿದಾಗಿ ಇರುತ್ತಾನೆ. ಅದರಿಂದಾಗಿ....'ಲಿಂಗಾದೌ ಪೂಜಾರ್ಥಮಧಿಕಾ ಸ್ಥಿತಿಃ' ಎಂದರು ಜಗದ್ಗುರು ರೇಣುಕರು.

"ನಿತ್ಯಂ ಭಾಸಿ ತದೀಯಸ್ತ್ವಂ "ಯಾತೇ ರುದ್ರ ಶಿವಾತನೂಃ
ಅಘೋರಾ ಪಾಪ ಕಾಶೀತಿ" ಶ್ರುತಿರಾಹ ಸನಾತನೀ।
ತಸ್ಮಾತ್ಸರ್ವ ಪ್ರಯತ್ನೇನ ಸರ್ವಸ್ಥಾನ ಪರಾಙ್ಮುಖಃ
ಸ್ವೇಷ್ಟಲಿಂಗೇ ಮಹಾದೇವಂ ಪೂಜಯೇತ್ಪೂಜಕೋತ್ತಮಃ॥"

ಸನಾತನ ಶ್ರುತಿಯಾದ ಯಜುರ್ವೇದ ಪ್ರಮಾಣ ವಚನವಿದೆ; "ಯಾತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ" ಎಂಬುದೇ ವೇದ ವಚನ. ಆ ಪರಶಿವನ ಲಿಂಗರೂಪ ಶರೀರವು ಸರ್ವಮಂಗಳಕರವಾದುದು, ಶಾಂತಾಕಾರವಾದುದು, ತ್ರಿಮಲರಹಿತವಾದುದು. ಅಂತಹ ನೀನು ನಿನ್ನ ಭಕ್ತರ ಕರದಿಷ್ಟದಲ್ಲಿ ಕರಿಗೊಂಡು ನಿತ್ಯ ಬೆಳಗುತ್ತಿರುವೆ;

ಹೀಗಿರುವುದರಿಂದ ಇದನರಿದು ಮಾಹೇಶ್ವರಾಂಗನು ಉಳಿದ ಸರ್ವಸ್ಥಾನ ಗಳಲ್ಲಿ ಶಿವನಿರುವನೆಂಬ ಬುದ್ಧಿಯನ್ನು ಸರ್ವ ಪ್ರಯತ್ನದಿಂದ ಬಿಟ್ಟು, ತನ್ನ ಇಷ್ಟ ಲಿಂಗದಲ್ಲಿಯೇ ಆ ಮಹಾದೇವನನ್ನು ಪೂಜಿಸಬೇಕು. ಹೀಗೆ ಪೂಜಿಸುವವನು ಪೂಜಕೋತ್ತಮನೆನಿಸುತ್ತಾನೆ,

ಸಿವಸ್ಯ ಸರ್ವಗತ್ವೇಪಿ ಸರ್ವತ್ರ ರತಿವರ್ಜಿತಃ
ಸ್ವೇಷ್ಟಲಿಂಗೇ ಯಜನ್ ದೇವಂ ಸರ್ವಗತ್ವನಿರಾಸಕಃ॥

ಶಿವನು ಜಗಭರಿತನಾದರೂ ಜಾಗತಿಕ ಜಡ ವಸ್ತುಗಳಲ್ಲೆಲ್ಲ ಶ್ರದ್ಧೆ ನಿಷ್ಠೆಗಳನ್ನಿಡದೆ ತನ್ನ ಇಷ್ಟಲಿಂಗದಲ್ಲಿ ಮಾತ್ರ ನಿಷ್ಠೆಯನ್ನಿಟ್ಟು ಆರಾಧಿಸಿದಲ್ಲಿ ಸರ್ವಗತ್ವ ನಿರಾಸಕನೆನಿಸುತ್ತಾನೆ.

ಶಿವನ ಸರ್ವಸತ್ತೆಯನ್ನು ತನ್ನಲ್ಲಿ ಕೇಂದ್ರೀಕರಿಸಿಕೊಳ್ಳುವುದೇ ಸರ್ವಗತತ್ವ ನಿರಸನದ ನಿಜಗುರಿ, ಇದಕ್ಕಾಗಿ ನಿಜೇಷ್ಟಲಿಂಗದಲ್ಲಿ ನಿಷ್ಠೆ ನಿಯಮ ನಡೆಯಬೇಕು. ಸಂಪೂರ್ಣ ಶಿವಸತ್ತೆಯನ್ನು ಆರ್ಜಿಸುವ ದಿಸೆಯಲ್ಲಿ ನಿಷ್ಠೆ ನಿಯಮ ಸಂಯಮ ಅಗತ್ಯ. ಉಚ್ಚಜೀವಿಯಾಗಬೇಕಾದರೆ ಸಚ್ಚರಿತನಾಗಬೇಕು. ಸಚ್ಚರಿತನಾಗಬೇಕಾದರೆ ಸತ್ಕ್ರಿಯೆ ಸುಜ್ಞಾನಗಳನ್ನು ಸಂಪಾದಿಸಬೇಕು. ಸತ್ಕ್ರಿಯೆಯೆ ಶಿವಪೂಜೆ. ಈಶಿವಪೂಜೆಗೆ ತನ್ನ ಕುರುಹು ಕರದಿಷ್ಟಲಿಂಗ. ಇದರಲ್ಲಿಯೇ ತನ್ನ ಹೃದಯಂನಿಷ್ಠೆ ಹೆಪ್ಪುಗೊಂಡಿರಬೇಕು. ಬುದ್ಧಿ ಸ್ಥಿರವಾಗಿರಬೇಕು. ಭಾವ ಭರಿತವಾಗಿರಬೇಕು. ಇವು ಹೊರಗೆ ಸೂಸಬಾರದು. ಹರವಾಗಿ ಹರಿಯಬಾರದು. ಹರಿದು ಪಲ್ಲಟವಾದರೆ ಶಿವನ ಸಚ್ಚಿದ್ರೂಪವು ತನ್ನಲ್ಲಿ ದೃಢವಾಗಿ ಸಮುವೇಧಿಸದು ಎಲ್ಲೆಲ್ಲಿಯೂ ಆ ಶಿವಸತ್ತೆಯನ್ನು ಕಾಣುವಂತಹ ಶಕ್ತಿಯನ್ನು ಮೊದಲು ತನ್ನಲ್ಲಿ ಪಡೆಯಬೇಕು. ಕನ್ನಡಿ ಶುಚಿಯಾಗಿದ್ದರೆ ಮುಖ ಕಾಣುತ್ತದೆ. ತಾನು ಮೊದಲು ಸತ್ತಾ ಸ್ವರೂಪನಾದರೆ ಬಳಿಕ ಸರ್ವವು ಸ್ವಾಭಾವಿಕವಾಗಿ ಶಿವ ಸತ್ತಾಮಯವಾಗಿ ತೋರುತ್ತದೆ.

ಶಿವಸತ್ತಾಭಾವವು ಕೇವಲ ಅಂತರಂಗದಲ್ಲಿದ್ದರೆ ಸಾಲದು; ಬಹಿರಂಗದಲ್ಲಿಯೂ ಅದು ನೆಲಸಬೇಕು. ನೆಲಸಿ ಬಲಿಯಬೇಕು. ಅಂತರಂಗದ ಅರಿವು ಬಹಿರಂಗದ ಆಚಾರದಲ್ಲಿ ಅರ್ಚನೆಯಲ್ಲಿ ಘಟಿಸಿ ಗಟ್ಟಿಗೊಳ್ಳಬೇಕು. ಪ್ರತೀಂದ್ರಿಯದಲ್ಲಿ ಪ್ರತಿಷ್ಠಿತವಾಗಬೇಕು. ಇದಾಗಬೇಕಾದರೆ ನಿಷ್ಠೆಯಿಂದ ಕೂಡಿದ ನಿಜಲಿಂಗ ಪೂಜೆಯೇ ದಿವ್ಯಮಾರ್ಗ; ದಿವ್ಯಸಾಧನ.

ಈ ಸಾಧನದಲ್ಲಿ ಸಿದ್ಧಿಯಾಗುವವರೆವಿಗೂ ಶಿವನು ಸರ್ವಗತನೆಂಬ ಭಾವವನ್ನು ತಡೆಯಬೇಕು.

"ಈರೇಳು ಭುವನವನು ಒಡಲೊಳಗಿಂಬಿಟ್ಟುಕೊಂಡು, ಲಿಂಗರೂಪಾಗಿ ಭಕ್ತನ ಕರಸ್ಥಲಕ್ಕೆ ಬಂದು ಪೂಜೆಗೊಂಡಿತ್ತು ನೋಡಾ!" ಎಂದು ಚನ್ನಬಸವಣ್ಣನು ಲಿಂಗದ ನಿಜ ಸ್ವರೂಪವನ್ನು ತೋರಿದ್ದಾನೆ. ಸರ್ವಗತನೆಂಬುದನ್ನು

ನಿರಸನ ಮಾಡಿದರೂ ಸರ್ವವೂ ತಾ ಪೂಜಿಸುವ ಲಿಂಗದಲ್ಲಿರುತ್ತದೆ. ಸರ್ವದರಲ್ಲಿ ಶಿವನನ್ನು ನೋಡದೆ ತನ್ನ ಕರದಲ್ಲಿರುವ ಲಿಂಗರೂಪ ಶಿವನಲ್ಲಿ ಸರ್ವವನ್ನು ನೋಡುವುದೇ ಮಾಹೇಶ್ವರನ ಪೂಜಾನಿಷ್ಠೆಯ ಮೂಲಮರ್ಮ.

'ಯತ್ರ ಜೀವಸ್ತತ್ರ ಶಿವಃ' ಎಂಬುದು ಸಾಮಾನ್ಯ ನಿಯಮ, ವಿಶೇಷವಾಗಿ ತನ್ನಲ್ಲಿ ತನ್ನ ಲಿಂಗದಲ್ಲಿರುವುದನ್ನು ಅರಿತು ಅರ್ಚಿಸಿ ಆನಂದಿಸಬೇಕು. ಪತಿಭಾವ ಪುರುಷ ಸಾಮಾನ್ಯವಾಗಿದ್ದರೂ ಗರತಿಯಾದವಳು ತಾನು ಕೈ ಹಿಡಿದಾತನಲ್ಲಿಯೇ ನಿಜವಾದ ಪತಿತ್ವವನ್ನು ಭಾವಿಸಿ ಪತಿ ಸುಖವನ್ನು ಪಡೆವಂತೆ ಲಿಂಗನಿಷ್ಠನು ತನ್ನ ಲಿಂಗವನ್ನೇ ಶಿವಸ್ವರೂಪವನ್ನಾಗಿ ಭಾವಿಸಿ ಆರಾಧಿಸಬೇಕು.

ಶಿವನು ತನ್ನಲ್ಲಿ ಸಹಜಸಂಬಂಧದಿಂದ ತಾದಾತ್ಮ್ಯನಾಗಿರುವನು; ಈ ಅಭಿಪ್ರಾಯವನ್ನು ಅಭಿವ್ಯಕ್ತಿಗೊಳಿಸಲು 'ನಿತ್ಯಂ ಭಾಸಿ' ಎಂದು ಜಗದಾಚಾರ್ಯರೇಣುಕರ ಉಪದೇಶ. ಮತ್ತು ತನ್ನ ಇಷ್ಟಲಿಂಗದಲ್ಲಿರುವ ಶಿವಸಂಬಂಧ ಕೃತಕವಲ್ಲ, ಕಲ್ಪಿತವಲ್ಲ ; ಭಿನ್ನವಲ್ಲ. ತನ್ನದೇ ಸಂಬಂಧವುಳ್ಳುದುರಿಂದ ತನಗಿಷ್ಟವಾದ ಲಿಂಗ. ಇದರಿಂದಾಗಿ ಇಷ್ಟಲಿಂಗ ನಿಷ್ಠನಾಗಿರಬೇಕು,

# ಶಿವಜಗನ್ಮಯ ಸ್ಥಲಂ - ೮.

ಭೂಜಮಯವೆ ಬೀಜವಾಗಿರುವಂತೆ, ಅಂಗಮಯವೆ ಲಿಂಗ (ಆತ್ಮ) ವಾಗಿರುವಂತೆ, ಜಗನ್ಮಯವೆ ಶಿವನಾಗಿರುವನು. ಬೀಜಾಂಕುರ ಮತ್ತು ಆತ್ಮಾಂಗಗಳಂತೆ ಶಿವ ಜಗತ್ತುಗಳು ನಿರಾಕಾರ-ಸಾಕಾರವಾಗಿವೆ. ಬೀಜದ ಸಾಕಾರ ರೂಪವೇ ಅಂಕುರ. ಆತ್ಮನ ಸಾಕಾರ ರೂಪವೇ ಅಂಗ. ಅಂತೆಯೇ ಶಿವನ ಸಾಕಾರ ರೂಪವೇ ಜಗತ್ತು. ಅಂಗರೂಪವೇ ಆತ್ಮರೂಪು. ಜಗದ್ರೂಪವೇ ಶಿವರೂಪು ಶಿವನು ಜಗನ್ಮಯನಾಗಿ ಜಗಕ್ಕಾಧಾರನಾಗಿದ್ದಾನೆ.

"ಬ್ರಹ್ಮ-ಬ್ರಹ್ಮಾಂಡ ಬೇರಿಲ್ಲದಿಪ್ಪಂತೆ, ಆಕಾಶ—ನೀಲ ಬೇರಿಲ್ಲದಿಪ್ಪಂತೆ ಹಣ್ಣು-ರುಚಿ ಬೇರಿಲ್ಲದಿಪ್ಪಂತೆ ದ್ವೈತವೇ ಅದ್ವೈತ ವಾದ ಬಳಿಕ ದ್ವೈತವೆಂದೆನಲುಂಟೆ?—ಇಲ್ಲವಾಗಿ, ಅರಿವು ಮರವಿಗೆ ತೆರಹಿಲ್ಲದೆ ಕರಿಗೊಂಡರಿವು ತಾನಾಗಿರಲು ನಾನಾಪರಿಯ ವಿಚಿತ್ರ ಚಿತ್ರಂಗಳತ್ಯಾಶ್ಚರ್ಯವಪ್ಪಂತೆ ತೋರುತ್ತಿರಲು ಅದು ವಿಪರೀತವೆಂದೆನಲುಂಟೆ ? ಘನ್ನ ತಾನಾಗಿರ್ದು ಇನ್ನು ಬೇರೆನಲುಂಟೆ?—ಇಲ್ಲವಾಗಿ. ಆದಿಮಧ್ಯಾಂತ ವಿರಹಿತವಾದ ಮಹಾಘನವೆ, ಊಹಿಸಲಿಲ್ಲದ ಉಪಮೆ, ಭಾವಿಸಲಿಲ್ಲದ ಭಾವ, ಅರಿಯಲಿಲ್ಲದ ಅರಿವು ತಾನಾಗಿ, ಸೌರಾಷ್ಟ್ರ ಸೋಮೇಶ್ವರನೆಂಬ ನುಡಿಯನೊಳಕೊಂಡು ನಿಂದ ಸಹಜ. ಸರ್ವಭರಿತನಾಗಿರ್ದು ಇಲ್ಲದಂತಿಹ ಭೇದವನೇನೆಂಬೆನಯ್ಯಾ ?"

"ಪೂಜಾವಿಧಾ ನಿಯಮ್ಯತ್ವಾಲ್ಲಿಂಗಮಾತ್ರೇ ಸ್ಥಿತಂ ಶಿವಂ।
ಪೂಜಯನ್ನಪಿ ದೇವಸ್ಯ ಸರ್ವಗತ್ವಂ ವಿಭಾವಯೇತ್॥ "

ಲಿಂಗಮಾತ್ರದಲ್ಲಿಯೇ ಶಿವಸತ್ತೆಯನ್ನು ಕಂಡು ಭಾವಿಸಬೇಕೆಂಬ ನಿಯಾಮಕವು ಅರ್ಚನಾರಂಭದಲ್ಲಿ ಮಾತ್ರವೆಂದು ತಿಳಿಯಬೇಕು. ಶಿವನು ಸರ್ವನಿಯಾಮಕನಾದರೂ ತನ್ನ ಭಕ್ತನ ನಿಯಮಕ್ಕೆ ಒಳಗಾಗಿ ಲಿಂಗದಲ್ಲಿ ಹೆಚ್ಚಳಗೊಂಡಿರುವನು. ಹೀಗಿರುವ ಶಿವಲಿಂಗವನ್ನು ಮಾಹೇಶ್ವರನು ಪೂಜಿಸುವನಾದರೂ ಪ್ರಕಾಶಮಯನಾದ ಆ ಪರಶಿವನು ಸರ್ವಜಗನ್ಮಯನೆಂಬುದನ್ನು ಪರಿಭಾವಿಸಲೇಬೇಕು. ಇಲ್ಲವಾದರೆ ಆ ಪರಶಿವನು ಪರಿಚ್ಛಿನ್ನನಾಗಬೇಕಾದೀತು ? ಮತ್ತು ಮಾಹೇಶ್ವರನಲ್ಲಿ ಯಾವ ಆದರ್ಶಕ್ಕಾಗಿ ಆ ಶಿವಸತ್ತೆಯನ್ನು ವಿಶಾಲವನ್ನೊಳಗೊಂಡ

ಲಿಂಗದಲ್ಲಿ ಆರಾಧಿಸುತ್ತಾನೋ ಆ ಆದರ್ಶತೆ, ಆ ಸಂಪೂರ್ಣ ಸತ್ತಾಭಾವ ಮೈಗೂಡಿ ಬಂದಿರುತ್ತದೆ—ಪೂಜೆ ಪೂರೈಸುವಷ್ಟರಲ್ಲಿ ! ಲಿಂಗದಲ್ಲಿ ಶಿವನನ್ನೇ ನಿಷ್ಠಾಗರಿಷ್ಠತೆಯಿಂದ ಕಂಡ ಮಾಹೇಶ್ವರನಿಗೆ ಶಿವಮಯವಾದ ಜಗತ್ತು ಕಾಣುವುದೊಂದು ಹೆಚ್ಚಲ್ಲ; ಅಚ್ಚರಿಯಲ್ಲ. ಶಿವನು ಅಣುವಾಗಿರುವಂತೆ ಮಹತ್ತೂ ಆಗಿದ್ದಾನೆ. ಅಣುಸ್ವರೂಪವನ್ನು ಸಾಕ್ಷಾತ್ಕರಿಸಿದಲ್ಲಿ ಮಹತ್ಸ್ವರೂಪದ ಸಾಕ್ಷಾತ್ಕಾರವೂ ಸಹಜವಾಗಿ ಸಮವೆನಿಸುತ್ತದೆ. ಲಿಂಗದಲ್ಲಿ ಮಹದ್ರೂಪವನ್ನು ಕಾಣುವುದೇ ಅರ್ಚನೆಯ ಕೊನೆಯ ಗುರಿ, ಪೂಜೆಯ ಪ್ರಕ್ರಿಯೆಯ ಉದ್ದೇಶವೂ ಅದೇ ಆಗಿದೆ. ಮೊದಲು ಅಣುರೂಪನಾದ ಅಂಗನ ಅಳವಿಗೆ ತಕ್ಕಂತೆ ಆರಾಧಿಸಿ ಆಣವಮಲನಿವೃತ್ತನಾದ ಬಳಿಕ ಸಹಜವಾದ ಸರ್ವಭಾವಕ್ಕೆ ಸಮರ್ಥನಾಗುತ್ತಾನೆ. ಮೊದಲು ಬಾಹ್ಯ ಪ್ರಕೃತಿಯತ್ತ ಗಮನವೆಳಸದಂತೆ ನಿಯಂತ್ರಿಸಿ ಪೂಜಾಂತ್ಯದಲ್ಲಿ ಪ್ರಕೃತಿಯನ್ನು ಪರಮಾರ್ಥವನ್ನಾಗಿಸಿಕೊಳ್ಳುವ ಶಕ್ತಿ ಸಂಪನ್ನನಾಗಿ ಸರ್ವವನ್ನೂ ಶಿವನನ್ನಾಗಿ ಭಾವಿಸಲು ಯೋಗ್ಯನೆನಿಸುತ್ತಾನೆ. ಮಾಹೇಶ್ವರನು ಪೂಜಾಂತ್ಯದಲ್ಲಿ ಅಪೂರ್ಣದಿಂದ ಪೂರ್ಣತ್ವಕ್ಕೆ ನಿಲುಕುತ್ತಾನೆ. ಪೂರ್ಣತ್ವವನ್ನು ನಿಲ್ಲಿಸಿಕೊಳ್ಳಲು ಶಕ್ತನಾಗುತ್ತಾನೆ. ಅಕ್ರಿಯೆ ಅಜ್ಞಾನಗಳ ಬಂಧನದಿಂದ ಬಿಡುಗಡೆಯನ್ನು ಪಡೆದು ಸರ್ವಸ್ವತಂತ್ರನಾಗುತ್ತಾನೆ; ಸರ್ವಶಿವಭಾವಿಯಾಗುತ್ತಾನೆ ಆಗ ಅರಿವು ಆಚಾರಯುಕ್ತನಾಗಿ ಸರ್ವಲೋಕಕ್ಕೆ ಆದರ್ಶತೆಯನ್ನು ಅನುಗ್ರಹಿಸುವವನಾಗುತ್ತಾನೆ. ಆ ಅದ್ವಯ ಶಿವನಗಲದ ಬಗೆಗಿಂಬುಗೊಡುತ್ತಾನೆ. ಮಾಹೇಶ್ವರನ ನಿಷ್ಠೆಯ ಶೈವೀ ಸತ್ತೆಯ ವಿಕಾಶಪೂರ್ಣವಾದ ಅನುಭವ ಆನಂದಗಳಿಂದ ತುಂಬುವುದು; ತೇಜಃಪುಂಜವಾಗುವುದು. ವಿಶ್ವಾತ್ಮನಾದ ಆ ಪರಮಾತ್ಮನೊಡನೆ ತಾದಾತ್ಮ್ಯವನ್ನು ಪಡೆಯುವುದು, ಶಿವಸರ್ವ ಜಗನ್ಮಯ ರೂಪಪೂರ್ಣಯೋಗದ ಪ್ರಭುತ್ವವನ್ನು ಪಡೆಯುವನು. ಆ ಪರಶಿವನಿಗೂ ಪ್ರಪಂಚಕ್ಕೂ ಅಭಿನ್ನತ್ವವನ್ನು ಮನಗಾಣುವನು.

"ಕಿರಿದಾದ ಬೀಜದಲ್ಲಿ ಹಿರಿಯ ತರುವಡಗಿದ ಪರಿಯಂತೆ, ಕರಗತವಾದ ಕನ್ನಡಿಯಲ್ಲಿ ಕರಿಗಿರಿಗಳು ತೋರುವ ಪರಿಯಂತೆ, ಜಗದ್ವ್ಯಾಪಕವಾದ ಪರವಸ್ತುವು ಖಂಡಿತಾಕಾರಮಾದ ಶರೀರದಲ್ಲಿ ಅತಿಸೂಕ್ಷ್ಮ ಪ್ರಮಾಣದಿಂದಿರ್ಪಂತೆ, ಪರಶಿವಲಿಂಗವು ಸದ್ಭಕ್ತರನುದ್ಧರಿಪ ಸದಿಚ್ಛೆಯಿಂದ ಲಿಂಗಾಕಾರವಾಗಿ ನೆಲಗೊಂಡಿರ್ಪುದು, ಸಾಕ್ಷಿ; 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬು

ದಾಗಿ, ಪರಬ್ರಹ್ಮರೂಪವಾದ ಲಿಂಗವು ಮಹದ್ರೂಪದಿಂದ ಅಖಂಡವಾಗಿಯೂ ಅನುರೂಪದಿಂದ ಖಂಡಿತವಾಗಿಯೂ ತೋರುವುದು. ಕೂಡಲಚನ್ನಸಂಗಮ ದೇವಾ, ಇದು ನಿಮ್ಮ ದಿವ್ಯ ಲೀಲೆಯಯ್ಯಾ!"

"ಯಸ್ಮಾದೇತತ್ಸಮುತ್ಪನ್ನಂ ಮಹಾದೇವಾಚ್ಚರಾಚರಂ
ತಸ್ಮಾದೇತನ್ನಬಿದ್ಯೇತ ಯಥಾ ಕುಂಭಾದಿಕಂ ಮೃದಃ ।
ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನಭಿದ್ಯತೇ
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನಭಿದ್ಯತೇ ॥

ಈ ಚರಾಚರ ಜಗತ್ತು ಆ ಪರಶಿವನಿಂದ ಉದಯವಾಗಿದೆ. ಮಣ್ಣಿನಿಂದಾದ ಗಡಿಗೆ ಮಡಿಕೆಗಳು ಮಣ್ಣಿಗಿಂತ ಭಿನ್ನವಾಗಿರದಂತೆ, ಈ ಜಗತ್ತು ಅಭಿನ್ನನಿಮಿತ್ತೋಪಾದನಕಾರಣನಾದ ಆ ಶಿವನಿಂದ ಭಿನ್ನವಾಗಿರುವುದಿಲ್ಲ.

ಕಡಲಲ್ಲಿ ಮೈದೋರಿದ ನೊರೆತೆರೆ ಗುಳ್ಳೆಗಳು ಕಡಲೇ ಆಗಿರುವಂತೆ ಶಿವತತ್ತ್ವದಿಂದಾದ ಜಗತ್ತು ಶಿವಸ್ವರೂಪವೇ ಆಗಿದೆ.

ಇದೇ ಅಭಿಪ್ರಾಯವನ್ನು ಒಬ್ಬ ಶರಣನು ಹೀಗೆ ಹೇಳಿದ್ದಾನೆ: "ಘನ ಗಂಭೀರ ಮಹಾ ವಾರುಧಿಯಲ್ಲಿ ಘನ ತರಂಗಬುದ್ಬುದ ಸೀಕರಂಗಳಾದವಲ್ಲದೆ ಬೇರಾಗಬಲ್ಲವೆ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದವಲ್ಲದೆ ಬೇರಾಗಬಲ್ಲವೆ? ಇದು ಬೇರೆಂಬ ಅರೆಮರುಳಗಳನೇನೆಂಬೆ? ವಿಶ್ವವನರಿದು ನೋಡಲು ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ಬೇರಿಲ್ಲ."

ಈ ಚರಾಚರ ಜಗತ್ತು ಶಿವಾದ್ವೈತ ಸಿದ್ಧಾಂತದಲ್ಲಿ ಆ ಪರಶಿವನಿಗೆ ಭಿನ್ನವಾಗಿಲ್ಲ ಕುಂಭ ಮಣ್ಣಿನಿಂದ ಹೇಗೆ ಬೇರಲ್ಲವೋ ತೆರೆ ನೀರಿನಿಂದ ಹೇಗೆ ಬೇರಲ್ಲವೋ ಹಾಗೆ ಶಿವನಿಂದ ಜಗತ್ತು ಭಿನ್ನವಲ್ಲ; ಮತ್ತು ಮಿಥ್ಯೆಯಲ್ಲ. ಸ್ವಗತ ಭೇದವಾಗಿರುವುದು ಕಾರ್ಯದೆಸೆಯಲ್ಲಿ! ಕಾರಣದೆಸೆಯಲ್ಲಿ ಸ್ವಗತಾದಿ ಯಾವ ಭೇದವಿಲ್ಲದೆ ಅಭೇದವಾಗಿರುವುದು. ಒಂದಾದ ಆ ಶಿವತತ್ತ್ವವೇ ವಿಕಾಸವಾಗಿ ವಿಶ್ವವಾಗುತ್ತದೆಯೆಂಬುದನ್ನು ಮುಂದಿನೆರಡು ಮಂತ್ರಗಳಿಂದ ನಿರೂಪಿಸಿದ್ದಾರೆ.

ಮಣ್ಣಿನಿಂದ ಮಡಿಕೆಯು, ನೀರಿನಿಂದ ತೆರೆಯು, ಸ್ವರ್ಣದಿಂದ ಆಭರಣದ–ಸತ್ತೆಯು ಹೇಗೆ ಭಿನ್ನವಲ್ಲವೋ ಹಾಗೆ ಶಿವನಿಂದ ಜಗತ್ತಿನ ಸತ್ತೆಯು ಭಿನ್ನವಲ್ಲ.

ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯ:ಸ್ಮೃತ:
ತಥಾ ಶಿವಾತ್ಸಮುತ್ಪನ್ನಂ ಶಿವ ಏದ ಚರಾಚರಂ !
ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತ:
ಕಂಟೀಭಾವಾದ್ಯಥಾ ಭಾತಿ ಪಟ: ಸ್ವಸ್ಯ ಪ್ರಸಾರಣಾತ್ ॥

ಎಳೆಗಳಿಂದಾದ ಬಟ್ಟೆಯು ಎಳೆಗಳ ರೂಪವೇ ಆಗಿರುವಂತೆ ಶಿವನಿಂದಾದ ಸ್ಥಾವರ ಜಂಗಮಜಗತ್ತು ಶಿವನೇ ಆಗಿರುವುದು. ಘಟಪಟಗಳ ದೃಷ್ಟಾಂತ ಗಳಿಂದ ಶಿವನಿಂದಾದ ಜಗತ್ತಿಗೆ ವಿಕಾರಪರಿಣಾಮವಾದ ಸಂಭವಿಸುವದೆಂಬ ಶಂಕೆ ಯಿಂದ ಮುಂದಿನ ಶ್ಲೋಕದ ದೃಷ್ಟಾಂತದಿಂದ ಅವಿಕಾರ ಪರಿಣಾಮವನ್ನು ಪ್ರತಿಪಾದಿಸಿದ್ದಾರೆ.

ಸುತ್ತಿಟ್ಟ ಬಟ್ಟೆ ಅಥವಾ ಚಾಪೆಯನ್ನು ಬಿಚ್ಚಿ ಹರಡಿದಂತೆ ಶಿವನು ತನ್ನ ಶಕ್ತಿವಿಕಾಸದಿಂದ ಜಗದ್ರೂಪಾಗಿರುವನು. ಅಂದರೆ ತನ್ನ ಶಕ್ತಿಯಿಂದ ವಿಶ್ವ ವಾಗಿ ವಿಕಾಸವಾಗಿ ಪ್ರಕಾಶಿಸುವನೆಂದರ್ಥ. "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಒಂದೇ ಪರವಾಗಿ ಹಲವಾದುದನ್ನು ಋಗ್ವೇದ ಶ್ರುತಿ ಪ್ರತಿಪಾದಿಸಿದೆ. ಶ್ರೀ ಜಗದ್ಗುರು ರೇಣುಕರು 'ಆತ್ಮಶಕ್ತಿ ವಿಕಾಸವೇ ವಿಶ್ವ' ವೆಂದು ಹೇಳಿ ಜಗದ ಹುಟ್ಟನ್ನು ನಿರಾಕರಿಸಿದ್ದಾರೆ. ಹುಟ್ಟಿಲ್ಲದ ಜಗತ್ತಿಗೆ ಸಾವಿಲ್ಲೆಂಬುದು ಸಿದ್ಧಾಂತ ವಾದ ವಿಷಯ. ಜಗತ್ತಿಗೆ ಶಿವಾದ್ವೈತವು ಸಂಕೋಚ-ವಿಕಾಸಗಳನ್ನು 'ಕಟೀ ಭಾವ' ದೃಷ್ಟಾಂತದಿಂದ ದೃಢವಾಗಿ ಸಿದ್ಧಮಾಡಿದೆ. 'ಶಿವೋ ವಿಶ್ವಾತ್ಮನಾ ಸ್ಥಿತಃ' ಎಂದು ಹೇಳಿ ಶಿವನ ಸಾಕಾರರೂಪವೇ ಸೃಷ್ಟಿಯೆಂಬುದನ್ನು ಸ್ಥಿರ ಗೊಳಿಸಲಾಗಿದೆ. ಶಕ್ತಿ ವಿಶಿಷ್ಟಶಿವನ ಸಾಕಾರ ಸ್ವರೂಪವೇ ಈ ಜಗತ್ತು. ಈ ಜಗತ್ತಿಗೆ ಬೇರೊಂದು ಉಪಾದಾನ ಕಾರಣವಿಲ್ಲೆಂಬುದೂ ಖಚಿತವಾಗುತ್ತದೆ. "ಮಯ್ಯೇವ ಸಕಲಂ ಜಾತಂ, ಮಯಿ ಸರ್ವಂ ಪ್ರತಿಷ್ಠಿತಂ ಮಯಿ ಸರ್ವಂ ಲಯಂ ಯಾತಿ" ಎಂಬ ಮಾತು ಸರ್ವವು ಶಿವನಿಂದಾಗಿ ಶಿವವಾಗಿರುವುದೆಂಬು ದನ್ನು ನಿರ್ದಿಷ್ಟಗೊಳಿಸಿದೆ. ಶ್ರೀ ಜಗದ್ಗುರು ರೇಣುಕರು ಇನ್ನೊಂದು ಕಡೆ ಹೀಗೆ ಹೇಳಿದ್ದಾರೆ:

"ಶಿವಾಭಿದಂ ಪರಂ ಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ ।
ಸ್ವರೂಪಮಾದಧೇ ಕಿಂಚಿತ್ ಸುಖಸ್ಫೂರ್ತಿ ವಿಜೃಂಭಿತಂ ॥"

ಶುದ್ಧಾದ್ವೈತ ಮತದಂತೆ ಈ ಜಗತ್ತು ಆರೋಪಿತವಾದುದಲ್ಲ; ಅಧ್ಯಾಸವೂ ಅಲ್ಲ. ಕಲ್ಪಿತ ಮೊದಲೇ ಅಲ್ಲ. ಆ ಶಿವನೇ ವಿಶ್ವಾತ್ಮನಾಗಿರುವಾಗ ಕಲ್ಪಿತ ಹೇಗಾದೀತು? ಶಿವಸ್ವರೂಪವೇ ಆಗಿರುವಾಗ ಆರೋಪದ ಮಾತಿಲ್ಲ.

ಹಗ್ಗದಲ್ಲಿ ಹಾವನ್ನು ಕಾಣುವುದು ಆರೋಪ. ಮೂಲ ಇಲ್ಲದ ವಸ್ತುವನ್ನು ಉಂಟೆನ್ನುವುದು ಅಂದರೆ ಮುಗಿಲಮಲ್ಲಿಗೆಯಂತೆ ಹೇಳುವುದು ಕಲ್ಪಿತ. ಕನ್ನಡಿಯೊಳಗಿನ ಪಡಿನೆಳಲು ಮಿಥ್ಯೆ ಅಥವಾ ಅಧ್ಯಾಸ. ಶಿವಾದ್ವೈತದಲ್ಲಿ ಈ ಮೂರನ್ನೂ ಜಗತ್ತಿಗೆ ಹೇಳುವುದಿಲ್ಲ—ಶಿವನೇ ವಿಶ್ವಾತ್ಮನಾಗಿರುವುದರಿಂದ ! ಮತ್ತು 'ಶಿವ ಏವ ಚರಾಚರಂ' ಎಂಬ ಗಂಭೀರವಾಣಿ ಗಮನಾರ್ಹವಾದುದು. ಚರ—ಅಚರ ಎರಡೂ ಸಾಕ್ಷಾತ್ ಶಿವಸ್ವರೂಪವೇ ಆಗಿವೆಯೆಂದು ಹೇಳಿ ಆರೋಪಾದಿಗಳಿಗೆ ಅದೆಷ್ಟೂ ಅವಕಾಶವೇ ಇಲ್ಲವಾಗಿದೆ. ಶಿವಜಗನ್ಮಯತ್ವವು ನಿಸ್ಸಂದೇಹವಾಗಿ ನಿರ್ದಿಷ್ಟವಾಗಿದೆ.

ಇನ್ನು ಶಿವನ ಆತ್ಮಶಕ್ತಿ ಅಗಾಧವಾದುದು. ಅದಕ್ಕೆ ಅಘಟನ ಘಟನ ಸಾಮರ್ಥ್ಯವಿದೆ. ಸರ್ವಸ್ವತಂತ್ರ ಶಕ್ತಿಯಿದೆ. ಅಭಿನ್ನನಿಮಿತ್ತೋಪಾದಾನ ಕಾರಣವಾಗುವ ವೈಶಿಷ್ಟ್ಯವಿದೆ. "ಕಟಕ ಸೂತ್ರದ ಗೂಡ ಮಾಡಿಕೊಂಡಿದ್ದಲ್ಲಿ, ಸೂತ್ರಕ್ಕೆ ನೂಲನು ಅದೆಲ್ಲಿಂದ ತಂದಿತ್ತು? ರಾಟಿಯಿಲ್ಲ; ಹಂಜಿಯಿಲ್ಲ. ತನ್ನಲ್ಲಿಯೆ ನೂಲ ಕಲ್ಪಿಸಿ, ತಾನದ ಮಾಡಿಕೊಂಡು ಅಡಿ ಅಡಗಿಸಿಕೊಂಡು ಹೋಹಂತೆ, ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚ; ತನ್ನಲ್ಲಿಯೇ ಲಯವನೈದಿಸಿಕೊಂಡು ಕೂಡಲಚನ್ನಸಂಗಯ್ಯ ನಿರ್ವಯಲಾದನು." ಈ ಚನ್ನಬಸವೇಶ್ವರ ವಚನವು 'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ....'ಎಂಬ ಮುಂಡಕ ಶ್ರುತಿ ಪಂಕ್ತಿಯನ್ನು ಕನ್ನಡಿಸಿದೆ. ಆತ್ಮಶಕ್ತಿ ವಿಕಾಸವಾಗಬಲ್ಲುದು; ಸಂಕೋಚವಾಗಬಲ್ಲುದು. ವಿಶ್ವವನ್ನು ವಿಕಾಸಗೊಳಿಸಬಲ್ಲುದು; ತನ್ನೊಳಗೆ ಅಡಗಿಸಿಕೊಳ್ಳಬಲ್ಲುದು.

ಆತ್ಮಶಕ್ತಿ ಅದೊಂದು ಅಪಾರ ಸಾಗರ. ಊರಿಗೆ ಮನೆಗಳು ಚಂದ, ನೀರಿಗೆ ತೆರೆಗಳು ಚಂದ ಪರಶಿವನಿಗೆ ಪೃಥಿವ್ಯಾದಿಗಳು ಚಂದ. ಅಂತೆಯೆ ಆ ಅಪಾರ ಸಾಗರಕ್ಕೆ ಅನಂತ ಜಗತ್ತರಂಗಗಳು ಚಂದ. ತೆರೆಗಳು ಆ ಕಡಲಲ್ಲಿಯೆ ತೋರಿ ಅಡಗುವವು; ಅಡಗಿ ತೋರುವವು.

ಸರ್ವವನ್ನೊಳಕೊಂಡು ಸರ್ವಸಮರ್ಥನಾದ ಶಿವನು ತನ್ನ ಶಕ್ತಿವಿಕಾಸದಿಂದ ವಿಶ್ವರೂಪನಾಗಿದ್ದಾನೆ. ಈ ವಿಶ್ವವು ಶಿವನಿಗೆ ಅನ್ಯವಲ್ಲ.

"ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥"

ಎಲೆ ಹೂವು ಹಣ್ಣು ರೆಂಬೆಗಳ ರೂಪದಲ್ಲಿ ಹೇಗೆ ಮರವಿರುವುದೋ ಹಾಗೆ ನೆಲ ಜಲ ಬೆಂಕಿ ಮೊದಲಾದವುಗಳ ರೂಪದಲ್ಲಿ ಶಿವನೊಬ್ಬನೇ ವಿರಾಜಿಸುವನು.

"ಸೋ ಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ" ಎಂಬ ತಿತ್ತಿರೀಯ ಶ್ರುತ್ಯುಕ್ತಿಯಂತೆ ಶಿವನು ಸ್ವಲೀಲೆಗಾಗಿ ವಿವಿಧವಾದರೂ ಏಕ ವಿಧವಾದ ವಿಶ್ವವಾಗಿ ಬೀಜವೃಕ್ಷವಾಗಿರುವಂತೆ ವಿರಾಜಿಸುವಂತೆ '...ಅಕ್ಷರಾತ್ ಸಂಭವತೀಹ ವಿಶ್ವಂ' ಈ ಮುಂಡಕ ಶ್ರುತಿಯ ಮಾತಿನಂತೆ ಅಕ್ಷರದಿಂದಾದ ವಿಶ್ವ ಅಕ್ಷರವಾಗಿಯೇ ಇದೆ. ಅಂದರೆ ಶಿವನಿಂದಾದ ವಿಶ್ವ ಶಿವವಾಗಿ ಶೋಭಿಸುತ್ತಿದೆ. ಬೀಜದಿಂದಾದ ಭೂಜ ಬೀಜವಾಗಿಯೇ ವಾಸ್ತವವಾಗಿರುವಂತೆ ವಿಶ್ವವೂ ವಾಸ್ತವವಾಗಿ ಶಿವವಾಗಿಯೇ ಕಂಗೊಳಿಸಿದೆ. ಬೀಜಾಂಕುರಗಳಿಗೆ ಹೇಗೆ ಭಿನ್ನಾಭಿನ್ನರೂಪಗಳಿವೆಯೋ ಹಾಗೆ ಶಿವನಿಗೂ ಜಗಕ್ಕೂ ಭಿನ್ನಾಭಿನ್ನ ರೂಪಗಳಿವೆ.

"ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್" ಈ ಶ್ವೇತಾಶ್ವತರ ಶ್ರುತಿಯಂತೆ ಜಗವು ಶಿವನ ಅವಯವವಾಗಿ ಸ್ವಗತ ಭೇದದಿಂದ ಕೂಡಿದೆ. ಜಗದ್ರೂಪ ಅವಯವಗಳೆಲ್ಲೆಲ್ಲ ಆ ಪರಶಿವನು ಹಾಸುಹೊಕ್ಕಾಗಿ ಇರುವುದರಿಂದ ಅಭೇದತೆಯೂ ಇದೆ. ವೃಕ್ಷವು ಪತ್ರಪುಷ್ಪಾದಿಗಳಿಂದ ಭಿನ್ನವಾಗಿದ್ದರೂ ಬೀಜರೂಪದಿಂದ ಒಂದೇ ಆಗಿದೆ. ಅಂತೆಯೇ ಜಗತ್ತು ಭೂಮ್ಯಾದಿಗಳಿಂದ ಭೇದವಾಗಿ ಕಂಡರೂ ಭೂತೇಶನಾದ ಶಿವನು ಸ್ವರೂಪದಿಂದ ಒಂದೇ ಆಗಿದೆ. ಚಿತ್ರಾಸನದ ಬಣ್ಣಗಳು ಬೇರೆ ಬೇರೆಯಾಗಿದ್ದರೂ ಬಟ್ಟೆ ಒಂದೇ ಆಗಿರುತ್ತದೆ.

ವೃಕ್ಷಕಾರ್ಯಾಭಿನ್ನವಾಗಿ ಬೀಜವಿದ್ದಂತೆ ವಿಶ್ವಕಾರ್ಯಾಭಿನ್ನವಾಗಿ ಶಿವನಿ

ದ್ದಾನೆ. ವೃಕ್ಷಾಂಗಗಳು ಭಿನ್ನವಾಗಿರುವಂತೆ ವಿಶ್ವಾಂಗಗಳು ಭಿನ್ನವಾಗಿವೆ. ಅಂಗಿಯಲ್ಲಿ ಅಭಿನ್ನವಾಗಿವೆ.

"....ಅಷ್ಟತನುವಿನೊಳಗಾದ ಜಗದ ರಚನೆ ಆರಿಂದ ಜನಿಸಿತ್ತು ? ಅಧಿಕಾರಲಯಭೋಗಕ್ಕೆ ಆವನೊರ್ವಕರ್ತನೊ, ಸೃಷ್ಟಿಸ್ಥಿತಿ ಸಂಹೃತಿ ತಿರೋಧಾನಾನು ಗ್ರಹವಾವನಿಂದಹುದೋ, ಸರ್ವಜ್ಞತ್ವ, ಕರ್ತೃತ್ವ, ನಿತ್ಯತೃಪ್ತಿತ್ವ, ಅನಾದಿಭೋಧತ್ವ, ಸ್ವತಂತ್ರತ್ವ, ಅಲುಪ್ತಶಕ್ತಿತ್ವವಾವಗುಂಟೋ,–ಆ ಶಿವನೇ ಘೃತ ಕಾಠಿಣ್ಯದಂತೆ ನೀರಾಲಿಕಲ್ಲಂತೆ, ಸಕಲ–ಸಕಲ ನಿಃಕಲ–ನಿಃಕಲವಾದವನು; ಸೌರಾಷ್ಟ್ರ ಸೋಮೇಶ್ವರಲಿಂಗ ಒಬ್ಬನೇ ಕಾಣಿರೋ!

"ಜಗಭರಿತಲಿಂಗ, ಶರಣಭರಿತಲಿಂಗ, ನಾಮರಹಿತಲಿಂಗ! ಜಗಭರಿತಲಿಂಗವೆಂದು 'ಸರ್ವಂ ಖಲಿದಂ ಬ್ರಹ್ಮ' ವೆಂಬ–ವಿಶ್ವಬ್ರಹ್ಮ; ಶರಣಭರಿತಲಿಂಗವೆಂದು 'ಏಕಮೇವ ದೇವನದ್ವಿತೀಯ' ನೆಂಬ-ತಾರಕ ಬ್ರಹ್ಮ ; ನಾಮರಹಿತ ಲಿಂಗವೆಂದು 'ಚಕಿತಮಭಿದತ್ತೇ ಶ್ರುತಿರಪಿ' ಎಂಬ–ಪರಬ್ರಹ್ಮ; ಇಂತೀ ತ್ರಿವಿಧಬ್ರಹ್ಮ ಏಕ ಬ್ರಹ್ಮ,–ನೀನೇ ಸೌರಾಷ್ಟ್ರಸೋಮೇಶ್ವರಾ!"

ಆದಯ್ಯನವರ ಈ ಎರಡು ವಚನಗಳು ವಿಶ್ವರೂಪದಲ್ಲಿ ಶಿವನೊಬ್ಬನೇ ವಿರಾಜಿಸುವನೆಂಬುಪನ್ನು ಸುಂದರವಾಗಿ ಸ್ವಾನುಭವದ ಸೊಗಸಿನಲ್ಲಿ ವಿವರಿಸಿ ವರ್ಣಿಸಿವೆ.

ಜಗವೆಲ್ಲ ಕಣ್ಣು, ಜಗವೆಲ್ಲ ಕಿವಿ. ಜಗವೆಲ್ಲ ಮೊಗ ಶಿವನಿಗೆ !" ಸಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ! ಎಂದು ಸಾರಿದೆ ಪುರುಷ ಸೂಕ್ತ ! 'ದಶದಿಕ್ಕು ಸಚರಾಚರದೊಳಗೆಲ್ಲ ವಿವರಿಸಿ ನೋಡಲು ತನ್ಮಯ ; ಆ ಪರಾಪರ ಹಂಪೆಯ ವಿರುಪಯ್ಯನಲ್ಲದಿಲ್ಲೆಂದು ಶ್ರುತಿ ಸಾರುತ್ತಿವೆ,' ಎದು ಸಾರಿದೆ ಶರಣವಾಣಿ ! "ಊರ್ಧ್ವಮೂಲೋsವಾಕ್ಶಾಖ ಏಷೋsಶ್ವತ್ಥಃ ಸನಾತನಃ ! ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ॥ ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ। ಏತದ್ವೈತತ್॥ ಮೇಲೆ ಬೇರು, ಕೆಳಕ್ಕೆ ರೆಂಬೆ ಇರುವ ಈ ಅಶ್ವತ್ಥವು ಸನಾತನವಾದುದು. ಅದೇ ಶುಭ್ರವೂ ಸಮರ್ಥವೂಆದುದು ಅದೇ ಬ್ರಹ್ಮ ; ಅದೇ ಅಮೃತ. ಎಲ್ಲ ಲೋಕಗಳು ಅದರಲ್ಲಿ ಆಶ್ರಯವನ್ನು ಪಡೆದಿವೆ. ಅದನ್ನು ಯಾರೂ ಮೀರರು. ಇದುವೇ ಅದು, ಇದಕ್ಕೆ ಅದು ಭಿನ್ನವಿಲ್ಲ, ಜಗತೆ

ಜಗದೀಶನ ಸ್ವರೂಪ, ಜಗದೀಶನ ಸ್ವರೂಪವೇ ಜಗತ್ತು ; ಎಂದು ಕಠಶ್ರುತಿಯೂ ಕಂಠೋಕ್ತವಾಗಿಯೂ ಕೈವಾರಿಸಿದೆ.

"ಶಿವ ತನ್ನ ವಿನೋದಕ್ಕೆ ರಚಿಸಿದನನಂತ ವಿಶ್ವವನು. ರಚಿಸಿ ಏನು ವಿಶ್ವಕ್ಕೆ ಹೊರಗಾಗಿದ್ದನೆ ?—ಇಲ್ಲ. ವಿಶ್ವಮಯ ತಾನಾಗಿದ್ದನು, ವಿಶ್ವವೆಲ್ಲವೂ ತಾನಾದನೆಂದೆಡೆ, ವಿಶ್ವದ ಉತ್ಪತ್ತಿ ಸ್ಥಿತಿ ಲಯಕ್ಕೊಳಗಾದನೆ?—ಇಲ್ಲ, ಅದೇನು ಕಾರಣವೆಂದಡೆ, ಅಜಾತನಾಗಿ ಉತ್ಪತ್ತಿಯಿಲ್ಲ. ಸ್ಥಿತಿ ಕರ್ಮರಹಿತನಾಗಿ ಸ್ಥಿತಿಗೆ ಒಳಗಲ್ಲ, ಮರಣ ರಹಿತನಾಗಿ ಲಯಕ್ಕೊಳಗಲ್ಲ. ಇಂತೀ ಗುಣತ್ರಯಂಗಳ ಹೊದ್ದಲರಿಯ ತಾನಿಲ್ಲದೆ ವಿಶ್ವಕ್ಕಾಧಾರವಿಲ್ಲವಾಗಿ ದೂರಸ್ಥನಲ್ಲ. ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ—ಇದಿರಿಲ್ಲ. ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ, ಅರಸು ಕಾಲಾಳಾಗಬಲ್ಲ ತನ್ನ ವಿನೋದಕ್ಕೆ ! ಮರಳಿ ಅರಸಾಗಬಲ್ಲ ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ." ಇದೇ ಅಭಿಪ್ರಾಯವನ್ನು ಶ್ವೇತಾಶ್ವತರ ಶ್ರುತಿಯಲ್ಲಿ ಹೀಗೆ ಹೇಳಿದೆ ; "ದೇವೋsಗ್ನೌ ಯೋsಪ್ಸುಯೋ ವಿಶ್ವಂ ಭುವನಮಾವಿವೇಶ । ಯ ಓಷಧೀಷು ಯೋ ವನಸ್ಪತಿಷು ತಸ್ಮೈ ದೇವಾಯ ನಮೋ ನಮಃ॥" "ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ ತಂ ಜ್ಞಾತ್ವಾsಮೃತಾ ಭವಂತಿ" "ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್"

# ಭಕ್ತದೇಹಿಕಲಿಂಗಸ್ಥಲಂ-೯

ತನುಮನಧನಗಳ ಆಸೆಯನು ತೊರೆದು, ತ್ರಿಮಲಗಳನು ತೊಳೆದು, ಅರ್ಥ ಪ್ರಾಣಾಭಿಮಾನಗಳ ತೊಡೆದು, ಅಷ್ಟಮದಗಳ ಕಳೆದು, ನಿರಹಂಭಾವ ಬಲಿದು ಗುರುಕಾರುಣ್ಯವ ಪಡೆದು. ಸಾಧನಚತುಷ್ಟಯ ಸಂಪನ್ನನಾಗಿ ಸಹಜದಾನಿಯಾಗಿ ಇರುವವನೇ ಭಕ್ತ, ಇಂತಹ ಭಕ್ತನ ಕಾಯ ಪವಿತ್ರ; ಅವಿಮುಕ್ತಕ್ಷೇತ್ರ. ತನು ಶುದ್ಧವಾಯಿತ್ತು ಗುರುವಿನಿಂದೆ, ಮನ ಶುದ್ಧವಾಯಿತ್ತು ಲಿಂಗದಿಂದೆ. ಧನಶುದ್ಧವಾಯಿತ್ತು ಜಂಗಮದಿಂದೆ. ಪ್ರಾಣಶುದ್ಧವಾಯಿತ್ತು ಪ್ರಸಾದದಿಂದೆ ಇಂತೀ ಚತುರ್ವಿಧದಿಂದೆನ್ನ ಸರ್ವಾಂಗ ಶುದ್ಧವಾ ಯಿತ್ತು ಕೂಡಲಚನ್ನಸಂಗಮದೇವಾ" "ನಿಮ್ಮ ಭಕ್ತಂಗೆ ಮಲತ್ರಯವಿಲ್ಲ. ತನುವ ಸದಾಚಾರಕ್ಕರ್ಪಿಸಿ, ಮನವ ಮಹಾಲಿಂಗ ಭಾವದಲಿರಿಸಿ, ಧನವ ನಿಮ್ಮ ಶರಣರ ದಾಸೋಹಕ್ಕೆ ಸವೆಯಬಲ್ಲನಾಗಿ, ಇಂತೀ ತ್ರಿವಿಧವ ತ್ರಿವಿಧಕ್ಕೆ ಕೊಟ್ಟ ಬಳಿಕ. ಆ ಭಕ್ತನ ಮನ ನಿಶ್ಚಿಂತ. ಆ ಭಕ್ತನ ತನು ನಿರ್ಮಳ, ಆ ಭಕ್ತನ ಧನ ನಿರ್ವಾಣ; ಇಂತಪ್ಪ ಭಕ್ತ ಪ್ರಸಾದಕಾಯನಯ್ಯಾ, ಕೂಡಲ ಚನ್ನಸಂಗಮದೇವಾ;" "ಕಾಯದಿಂದ ಲಿಂಗ ದರುಶನ, ಕಾಯದಿಂದ ಜಂಗಮ ದರುಶನ; ಕಾಯದಿಂದ ಪ್ರಸಾದ ಸಂಪತ್ತು. ಕೂಡಲ ಚನ್ನಸಂಗಯ್ಯಾ ಈ ಕಾಯ.ದಿಂದ. ನಿಮ್ಮಿಯ ಕಂಡೆನಯ್ಯಾ," ಚನ್ನಬಸವಣ್ಣನವರ ಸಾಕ್ಷಿವಚನಗಳಂತೆ ಭಕ್ತನ ದೇಹ ನಿರ್ಮಲ; ನಿರುಪಮಮಂಗಲ. ಇದರಿಂದಾಗಿ ಶಿವಲಿಂಗಕ್ಕೆ ಭಕ್ತನ ಕಾಯ ಹೃದಯ ಪರಮಪ್ರಿಯ. ಭಕ್ತಾಂಗದಲ್ಲಿ ವಿಶೇಷವಾಗಿ ವಾಸ ಮಾಡಿದ್ದಾನೆ·

ಸಮಸ್ತ ಜಗದಾತ್ಮಾಪಿ ಶಂಕರಃ ಪರಮೇಶ್ವರಃ
ಭಕ್ತಾನಾಂ ಹೃದಯಾಂಭೋಜೇ ವಿಶೇಷೇಣ ವಿರಾಜತೇ
ಕೈಲಾಸೇ ಮಂದರೇ ಚೈವ ಹಿಮಾದ್ರೌ ಕನಕಾಚಲೇ
ಹೃದಯೇಷು ಚ ಭಕ್ತಾನಾಂ ವಿಶೇಷೇಣ ಶಿವಃ ಸ್ಥಿತಃ॥"

ಲೋಕಕ್ಕೆ ಸುಖದಾಯಕನಾದ ಪರಮೇಶ್ವರನು ಸಕಲ ಜಗತ್ಸ್ವರೂಪ ನಾಗಿದ್ದರೂ ಭಕ್ತರ ಹೃದಯಾರವಿಂದದಲ್ಲಿ ವಿಶೇಷವಾಗಿ ವಿರಾಜಿಸುತ್ತಾನೆ.

ಕೈಲಾಸದಲ್ಲಿ ಮಂದರಶೈಲದಲ್ಲಿ ಹಿಮಾಲಯದಲ್ಲಿ ಕನಕಾಚಲದಲ್ಲಿ ಮತ್ತು ಭಕ್ತರ ಹೃದಯಗಳಲ್ಲಿ ಶಿವನು ನೆರೆ ನೆಲಸಿರುವನು.

ಭಕ್ತರಿಗೆ ಸುಖದಾಯಕನಾಗಿ ಪರಮೇಶ್ವರನಾಗಿದ್ದಾನೆ, ಜಗದ ತುಂಬ ಇದ್ದರೂ ಶಿವನಿಗೆ ತೃಪ್ತಿಯಿಲ್ಲ, ಭಕ್ತರ ಹೃದಯವೆಂದರೆ ಆತನಿಗೆ ಅಚ್ಚು ಮೆಚ್ಚು. ಆದುದರಿಂದ ಭಕ್ತರ ಹೃದಯಗಳಲ್ಲಿ ಆತನು ಇರುವುದು. ಹೆಚ್ಚು. ಅಂತೆಯೇ 'ಭಕ್ತಕಾಯಂ ಮಮಕಾಯ" ಎಂದು ಶಿವನೇ ಶಿವಾಗಮದಲ್ಲಿ ಸ್ತುತಿಸಿದನು. 'ಶರಣ ಜನರ ಸದು ಹುದಯನಳಿನದೊಳು ಪರಿಶೋಭಿಸುತ್ತಿಹುದು ನಿನ್ನ ಪಾದ' ಎಂದು ನಿಜಗುಣ ಶಿವಯೋಗಿಗಳು ಹಾಡಿದರು.

"ವೇದ ವೇದಾಂತ ವ್ಯಾಕ್ಯಾರ್ಥ ಸಂಧಾನಾತೀತ ವರ್ತನಃ।
ಭಕ್ತ ಭಾವ ಪರಾನಂದೋ ಭಕ್ತಭಾವೈಕಗೋಚರಃ॥"

ಎಂದು ಯೋಗಜಾಗಮವು ನಿರೂಪಿಸಿತು.

ಹೊರಗಿನ ಹಗರಣಕ್ಕೆ ಹೃದಯವನ್ನೀಯದೆ ಸದಾಚಾರ ಸತ್ಕ್ರಿಯೆಗಳನ್ನು ಮನವುಟ್ಟಿ ಮಾಡುವವರು ಶಿವನಿಗೆ ಪ್ರಿಯರಾಗುವರು, ಸುವಿಚಾರದಿಂದ ಕಣ್ದೆರೆದವರನ್ನು ಕಂಡರೆ ಶಿವನಿಗೆ ಪಂಚಪ್ರಾಣ, ಶ್ರೀ ಗುರುವಿನ ಕರುಣೆಯಿಂದ ಸ್ವಾನುಭವಿಗಳಾದವರ ಕಂಡರೆ ಶಿವನಿಗೆ ಸುಖದ ಸುಗ್ಗಿ. ಸಾಧಕನು ತನ್ನ ಪ್ರಾಣ ಮನಕರಣಗಳನ್ನು ತನ್ನಲ್ಲಿರಿಸಿದವರೊಡನೆ ತಾನಗಲದೆ ಇರುವನು. ಭಕ್ತರ ಭಾವ ಪೂರ್ಣ ಹೃದಯವೇ ಶಿವನಿಗೆ ಕೈಲಾಸ, ಭಕ್ತರ ಭಕ್ತಿರಸ ಸಮುದ್ರದಲ್ಲಿ ಮಹಾ ದೇವನು ಮುಳಗಿ ಮನದಣಿ ಓಲಾಡುವನು.

"ಕಾಯವೆ ಕಳೆಯಾಗಿ ಪ್ರಾಣವೆ ಲಿಂಗವಾಗಿ ಭಾವ ಭಾವಿಸುತ್ತಿದ್ದಿತ್ತು ನೋಡಾ! ಅನುಭಾವ ಕರಸ್ಥಲವಾಗಿ ಭಾವ ಭಾವಿಸುತ್ತಿದ್ದಿತಂ ನೋಡಾ! ಸಾಕ್ಷಿ:

"ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಃ ಸದಾಶಿವಃ। ತ್ಯಜೇ ದಜ್ಞಾನ ನಿರ್ಮಾಲ್ಯಂ ಸೋಽಹಂ ಭಾವೇನ ಪೂಜಯೇತ್ ॥"

ಎಂದುದಾಗಿ, ಕೂಡಲ ಚೆನ್ನಸಂಗಯ್ಯಾ, ಮಹವ ನುಂಗಿದ ಮಹಂತನ ಬೆಳಗು!" ಆ ಮಹಾಲಿಂಗವನು ತನ್ನೊಳಗಿರಿಸಿಕೊಂಡ ಮಹತ್ತು ಭಕ್ತನದು. ಆ ಮಹಂತಲಿಂಗಕ್ಕೆ ಭಕ್ತನ ಕಾಯವೇ ಕಳೆಯಾಗಿ ಕಂಗೊಳಿಸುತ್ತದೆ. ಭಕ್ತಾಂಗ ಭಗವಲ್ಲಿಂಗಕ್ಕೆ ಭಿನ್ನವಲ್ಲ, ಕರಿಗೊಂಡ ಅನುಭವವೇ ಕರಸ್ಥಲ (ಕ್ರಿಯಾಲಿಂಗ) ವಾಗಿದೆಯೆಂದಾಗ ಬೇರೆ ಮಾತಿಗಿಂಬಿಲ್ಲ. ಕಾಯವೇ ಕ್ರಿಯಾಲಿಂಗವಾಗಿರುವನು ಭಕ್ತ; ಜಗದ್ಗುರು ರೇಣುಕರು ನಿರೂಪಿಸಿದಂತೆ ಹೃದಯಾಂಭೋಜದಲ್ಲಿ ವಿರಾಜಿಸುವ ಜ್ಞಾನ ಲಿಂಗಕ್ಕೂ ಕ್ರಿಯಾಲಿಂಗಕ್ಕೂ ಯಾವ ಭಿನ್ನವಿಲ್ಲ.

"ಹೃದಯದೊಳಿಪ್ಪ ಮಹಾಲಿಂಗಜ್ಯೋತಿಯ ಬೆಳಗು ಪಂಚೇಂದ್ರಿಯಂಗಳಲ್ಲಿ ಪ್ರಭಾವಿಸಿ ತೋರುವ ಬೆಳಗು ಒಂದೇ ಕಾಣಿಭೋ! ಒಂದು ಮೂರಾಗಿ, ಮೂರು ತಾನಾರಾಗಿ, ಆರು ಮೂವತ್ತಾರಾಗಿ, ಮೂವತ್ತಾರು ಇನ್ನೂರು ಹದಿನಾರು ಬೇರುವರಿದು ವಿಸ್ತಾರವ ಪಡೆದವಲ್ಲಾ! ವಿಸ್ವಾಸದಿ ಬೆಳಗುವ ಬ್ರಹ್ಮಕ್ಕೂ ಗಣಿತವುಂಟೆ?..."

ಲಿಂಗಕಾಯನಾದ ಭಕ್ತನಿಗೆ ಒಳಹೊರಗೆಂಬುದಿಲ್ಲ. ಸ್ಥೂಲ ಸೂಕ್ಷ್ಮವೆಂಬ ಪರ್ಯಾಯಭಾವವಿಲ್ಲ. ಉಭಯಾಂಗವೂ ಒಂದೇ ಆಗಿ ಒಳ್ಪಿನಿಂದ ಒಬ್ಬೆಳಗಿನಿಂದ ತೊಳಗಿ ಬೆಳಗುತ್ತದೆ. ಪರಾಭಕ್ತ ಪೂರ್ಣಲಿಂಗಪ್ರಾಣಿಯಾಗಿ ಪ್ರಾಣಲಿಂಗಿಯಾಗಿ ಜೀವಿಸುತ್ತಾನೆ. ಸರ್ವ ಕ್ರಿಯೆಗಳ ಸೋಂಕಿನ ಸುಖವನ್ನೆಲ್ಲ ಸರ್ವಜ್ಞಾನಗಳ ಸವಿಯನ್ನೆಲ್ಲ ತನ್ನ ಲಿಂಗಕ್ಕರ್ಪಿಸುತ್ತಾನೆ. ಲಿಂಗವೇ ಆತನ ಅಂಗವಾಗಿ ಬೇರೆ ಅಂಗವಿರುವುದಿಲ್ಲ. "ಅಂಗದ ಕೊನೆಯಲ್ಲಿ ಲಿಂಗಮುಂತಲ್ಲದೆ ಸಂಗವ ಮಾಡನಾ ಶರಣನು. ನಯನದ ಕೊನೆಯಲ್ಲಿ ಲಿಂಗಮುಂತಲ್ಲದೆ ಅನ್ಯವ ನೋಡನಾ ಶರಣನು. ಶ್ರೋತ್ರದ ಕೊನೆಯಲ್ಲಿ ಲಿಂಗಮುಂತಲ್ಲದೆ ಅನ್ಯವ ಕೇಳನಾ ಶರಣನು. ಘ್ರಾಣದ ಕೊನೆಯಲ್ಲಿ ಲಿಂಗಮುಂತಲ್ಲದೆ ಪರಿಮಳವ ವೇಧಿಸನಾ ಶರಣನು. ಜಿಹ್ವೆಯ ಕೊನೆಯಲ್ಲಿ ಲಿಂಗಮುಂತಲ್ಲದೆ ರುಚಿಯ ನಿಶ್ಚಯಿಸನಾ ಶರಣನು. ಕೂಡಲ ಚೆನ್ನ ಸಂಗಯ್ಯಾ. ನಿಮ್ಮ ಶರಣ ಸರ್ವಾಂಗಲಿಂಗಿಯಾದ ಕಾರಣ!" 'ಲಿಂಗಸಂಬಂಧ ಸಾರಾಯ ಸುಸಂವೇದಿಗಲ್ಲದೆ ವೇಧಿಸದಯ್ಯಾ..' 'ಲಿಂಗಾಭಿಮಾನಿಗೆ ಅಂಗಾಶ್ರಯವಿಲ್ಲನೋಡಾ! 'ಲಿಂಗವೆಂದರಿದಡೆ ಅಂಗವೆಂಬುದಿಲ್ಲ.' 'ಲಿಂಗವಂತನ ಲಿಂಗವೆಂಬುದೇ ಶೀಲ.' ಹೀಗೆ ಲಿಂಗಕ್ಕೆ

ಭಕ್ತನ ತನುಭಾಜನವಾಗಿರುತ್ತದೆ. ದೇಹ ದೇವನಾಗಿರುತ್ತದೆ, ದೇಹದಲ್ಲಿ ದೇಹ ಭಾವವಿರುವುದಿಲ್ಲ. ತನು ಲಿಂಗವನ್ನಪ್ಪಿ ಮಹಾ ತನುವಾಗಿರುತ್ತದೆ, ತನುವಿನಲ್ಲಿ ತನುಗುಣಗಳಿರುವುದಿಲ್ಲ. ಲಿಂಗಕ್ರಿಯೆಗಳಲ್ಲಿ ನಿರತವಾಗಿರುತ್ತದೆ. ಲಿಂಗ ಪ್ರಸಾದ ಕಾಯವಾಗಿರುತ್ತದೆ. ಲಿಂಗಾನುಭಾವದಲ್ಲಿ ಲಿಂಗಾನಂದದಲ್ಲಿ ತನ್ನತಾ ಮರೆದಿರುತ್ತದೆ, ಭಕ್ತದೇಹಿಕ ಲಿಂಗವಾದರೆ ಲಿಂಗಜೀವಿ ಲಿಂಗಪ್ರಾಣಿ ಭಕ್ತನಾಗಿರುತ್ತಾನೆ, ತನುವಿರಹಿತ ಪ್ರಾಣ ಹೇಗಿಲ್ಲವೋ ಲಿಂಗವಿರಹಿತ ಭಕ್ತನಿಲ್ಲ. ಭಕ್ತನಂಗ ವಿರಹಿತಲಿಂಗವಿಲ್ಲ. ಅಂಗದ ಕೈಯಲು ಲಿಂಗವಿಪ್ಪದು. ಲಿಂಗದ ಕೈಯಲು ಅಂಗವಿಪ್ಪದು. ಅಂಗದಲ್ಲಿ ಆಚಾರ ವಿಚಾರ ಅಳವಟ್ಟರೆ ಲಿಂಗವು ಅಂಗದಲ್ಲಿ ಭೇದಿಸಿರುವುದು, ಅಂಗದಮೇಲೆ ಆಚಾರಲಿಂಗ ಸ್ವಾಯತವಾಗಿರುತ್ತದೆ. "ಅಂಗದಮೇಲೆ ಲಿಂಗ ಸಾಹಿತ್ಯವಾದ ಬಳಿಕ, ಅಂಗವೇ ಲಿಂಗ. ಪ್ರಾಣದ ಮೇಲೆ, ಮನದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಅರಿವಿನ ವಿಷಯಾದಿ ಭೋಗಂಗಳೇ ಲಿಂಗ. ಅದು ಕಾರಣ, ಸರ್ವಾಂಗಲಿಂಗ, ಸರ್ವಭೋಗ ಲಿಂಗಭೋಗ, ಕೂಡಲ ಚನ್ನಸಂಗಯ್ಯಾ" ಅಂಗದಿಂದ ಲಿಂಗಸುಖ, ಲಿಂಗದಿಂದ ಅಂಗಸುಖ ; ಅಂಗಲಿಂಗ ಸಂಗದಿಂದ ಪರಮ ಸುಖ ನೋಡಯ್ಯಾ । ಅಂಗದುದ ಸಂಗ ಸುಖವನು ಕೂಡಲಚನ್ನ ಸಂಗಯ್ಯನಲ್ಲಿ ಲಿಂಗೈಕ್ಯನೇ ಬಲ್ಲನು." "ಅಂಗವು ಲಿಂಗದಲ್ಲಿ ಸಂಬಂಧವಾದವರ ಲಿಂಗವೆಂದೇ ಕಾಂಬುದು. 'ಕೀಟೋಪಿ ಭ್ರಮರಾಯತೇ' ಎಂಬ ನ್ಯಾಯದಂತೆ ಅಂಗವು ಲಿಂಗ ಸೋಂಕಿ ಲಿಂಗವಾಯಿತ್ತಾಗಿ, ಲಿಂಗವೆಂದೇ ಕಾಂಬುದು. 'ಸರ್ಪದಷ್ಟಸ್ಯ ಯದ್ದೇಹಂ ತದ್ದೇಹಂ ವಿಷದೇಹವತ್। ಲಿಂಗದಷ್ಟಸ್ಯ ಯದ್ದೇಹಂ ತದ್ದೇಹಂ ಲಿಂಗದೇಹವತ್॥' ಎಂಬುದಾಗಿ ಸರ್ವಾಂಗಲಿಂಗ ಕೂಡಲಚೆನ್ನಸಂಗಾ, ನಿಮ್ಮ ಶರಣ."

ಸಮಷ್ಟಿ ಶಿವಚೈತನ್ಯವು ಜಗನ್ಮಯವಾಗಿರುವಂತೆ ವ್ಯಷ್ಟಿಜೀವಾತ್ಮನು ಭಕ್ತನ ಅಂಗಮಯನಾಗಿರುತ್ತಾನೆ,

"ಸರ್ವಾತ್ಮಾಪಿ ಪರಿಚ್ಛಿನ್ನೋ ಯಥಾ ದೇಹೇಷು ವರ್ತತೇ।
ತಥಾ ಸ್ವಕೀಯ ಭಕ್ತೇಷು ಶಂಕರೋ ಭಾಸತೇ ಸದಾ॥
ನಿತ್ಯಂ ಭಾತಿ ತ್ವದೀಯೇಷು ಯಾತೇ ರುದ್ರ ಶಿವಾ ತನೂಃ।
ಅಘೋರಾಽಪಾಪಕಾಶೀತಿ ಶ್ರುತಿರಾಹ ಸನಾತನೀ॥"

ಶಿವನು ಸರ್ವಾತ್ಮನು. ಆದರೂ ಪರಿಚ್ಛಿನ್ನನಾಗಿ ಪ್ರಪಂಚದ ಜೀವಿಗಳ ದೇಹಗಳಲ್ಲಿ ಚೈತನ್ಯರೂಪನಾಗಿ ವರ್ತಿಸುತ್ತಾನೆ. ಆದರಂತೆ ತನ್ನ ಭಕ್ತರಲ್ಲಿ ತೆರಹಿಲ್ಲದೆ ತೊಳಗಂತ್ತಾನೆ.

ನಿನ್ನ ಭಕ್ತರಲ್ಲಿ ನಿತ್ಯ ಬೆಳಗುವೆಯೆಂದು ಶುದ್ಧನಾಗಿ ಶಾಂತನಾಗಿ ಶೋಭಿಸುವೆ ಯೆಂದು ಯಜುರ್ವೇದವು ಸನಾತನ ಕಾಲದಿಂದಲೂ ಸಾರುತ್ತಾ ಬಂದಿದೆ.

ಶಿವನು ಶಿವಭಕ್ತರಲ್ಲಿ ಶಿವ ಶರಣರಲ್ಲಿ ಇರುವುದಕ್ಕೆ ಇದು ಕಾರಣವಾಗಿದೆ. ಶಿವಭಕ್ತಪ್ರೇಮಿ ಶಿವ ನಾದ ವೇದಗಳಿಗಿಂತ ಹೃದಯಕ್ಕೆ ಆತನ ಒಲುಮೆ ಹೆಚ್ಚು ಹಾರ್ದಿಕತೆಯೇ ಆತನಿಗೆ ಮೆಚ್ಚು. ಶಿವನ ಸಾಂನಿಧ್ಯವನ್ನು ಪಡೆವ ಸಾಧನದಲ್ಲಿ ಭಕ್ತಿಗೆ ಮಿಗಿಲಾದ ಸ್ಥಾನವಿದೆ. ಭಕ್ತಿ ಸುಲಭವಾದ ಉಪಾಯವೂ ಆಗಿದೆ. ಸಾರ್ವಜನಿಕವೂ ಆಗಿದೆ. ಪವಿತ್ರಪ್ರೇಮವು ಅಂತಃಕರಣದಿಂದ ಉಕ್ಕಿ ಬಂದರೆ ಅಂಗಾಂಗಗಳಲ್ಲಿ ಪುಳಕಗಳೇಳುತ್ತವೆ. ರೋಮ ರೋಮಗಳಲ್ಲಿಯೂ ಶಿವಚೇತನ ಚಿಮ್ಮುತ್ತದೆ. ಬಂಧು ಬಳಗಗಳ ಪ್ರೇಮಕ್ಕಿಂತ ಭಗವಂತನ ಪ್ರೇಮ ಪರಮ ಪರಿಣಾಮಕಾರಿಯಾದುದು. ಭಗವತ್ಪ್ರೇಮ ರಾಗ—ದ್ವೇಷಗಳಿಂದ ರಹಿತವಾದುದು. ಅಸ್ಮಿತ ಅಭಿನಿವೇಶಗಳಿಂದ ಅತೀತವಾದುದು. ಚಿತ್ತ ಚಿಮ್ಮಿದ ಪ್ರೇಮ ಯೋಗವದು. ಹಮ್ಮ ಹಳಚಿದ ನೆಮ್ಮುಗೆಯದು. ಶಿವನಲ್ಲಿ ಅನುರಕ್ತನಾದ ಭಕ್ತನು ಶಿವಚಿಹ್ನೆಗಳಿಂದ ಸಮ್ಮಿಲಿತನಾಗಿರುತ್ತಾನೆ. ಶಿವಚೈತನ್ಯದಲ್ಲಿಯೇ ತೀವ್ರಾಸಕ್ತಿಯುಳ್ಳವನಾಗಿ ಲಿಂಗಸಮರಸಭಕ್ತಿ ಭರಿತನಾಗಿರುತ್ತಾನೆ.

"ಶರಣನಂಗ ಲಿಂಗವನಪ್ಪಿತ್ತಾಗಿ, ಶರಣನ ತನುವೆ
ಲಿಂಗದ ತನು ನೋಡಾ। ಲಿಂಗದ ತನು ಶರಣನನಪ್ಪಿತ್ತಾಗಿ,
ಶರಣತನುವೆ ಲಿಂಗದ ತನು ನೋಡಾ; ಶರಣನ ಮನ
ಲಿಂಗವನಪ್ಪಿ, ಲಿಂಗದ ಮನ ಶರಣನಪ್ಪಿದ ಕಾರಣ ಶರಣನ
ಮನವೇ ಲಿಂಗ, ಲಿಂಗದ ಮನವೇ ಶರಣ ನೋಡಾ! ಶರಣನ
ಹರಣ ಲಿಂಗವನಪ್ಪಿ, ಲಿಂಗದ ಹರಣ ಶರಣನಪ್ಪಿದ ಕಾರಣ
ಶರಣನ ಹರಣವೆ ಲಿಂಗ, ಲಿಂಗದ ಹರಣವೆ ಶರಣ ನೋಡಾ!
ಶರಣನ ಭಾವ ಲಿಂಗವನಪ್ಪಿ, ಲಿಂಗದ ಭಾವ ಶರಣನಪ್ಪಿದಕಾರಣ

ಶರಣನ ಭಾವವೇ ಲಿಂಗ. ಲಿಂಗದ ಭಾವವೇ ಶರಣನೋಡಾ!
'ಅಹಂ ಮಾಹೇಶ್ವರಃ ಪ್ರಾಣಃ। ಪ್ರಾಣೋ ಮಾಹೇಶ್ವರೋ ಮಮ।
ತಸ್ಮಾದವಿರಳಂ ನಿತ್ಯಂ। ಶರಣೋ ನಾಮ ವರ್ತತೇ॥'
ಎಂದುದಾಗಿ ಭಾವ ಭೇದವಿಲ್ಲ ಶರಣ-ಲಿಂಗಕ್ಕೆ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!"

ಹೀಗೆ ಬಗವಂತನಿಗೂ ಭಕ್ತನಿಗೂ ಭೇದವಿಲ್ಲದೆ ಬೆರತಿರುವರು. ಚಿದ್ಬಿಂದು ಸ್ವರೂಪವೇ ಲಿಂಗವಾಗಿರುವುದರಿಂದ ಆ ಚಿದ್ಬಿಂದುವನ್ನು ಮಾಹೇಶ್ವರನು ತನ್ನಲ್ಲಿ ಅಳವಡಿಸಿಕೊಂಡಿರುವನು. ಇದರಿಂದಾಗಿ ಇವರಲ್ಲಿ ಬೇರೆ ಭಾವವಿಲ್ಲ, ಬೇರಾಗಿ ರುವುದಿಲ್ಲ. "ಲಿಂಗದೇಹಿ ಶಿವಾತ್ಮಕನು ಲಿಂಗದಾಚಾರದಲ್ಲಿಯೆ ನಡೆವನಯ್ಯಾ, ಲೋಕವರ್ತಕನಲ್ಲ. ಲೋಕಚಾತುರಿಕೆ, ಲೋಕವ್ಯವಹರಣೆಯನನುಕರಿಸಿ ನಡೆವ ವನಲ್ಲ. ಶಿವಜ್ಞಾನ ಶಿವಕ್ರಿಯಾ ಪ್ರಕಾಶವ ಸಂಬಂಧಿಸಿಕೊಂಡು ಸರ್ವಾಂಗವೂ ಲಿಂಗರೂಪಾಗಿ ಇರುವನಯ್ಯ..."ಎಂದು ತೋಂಟದ ಸಿದ್ಧಲಿಂಗೇಶ್ವರರು ಶಿವನು ಭಕ್ತರನ್ನು ಏಕೆ ಪ್ರೀತಿಸುವನೆಂಬುದಕ್ಕೆ ಕಾರಣಕಾರ್ಯಗಳನ್ನು ಇಲ್ಲಿ ಕಾಣಿಸಿದ್ದಾರೆ. ಮತ್ತು

"ಲಿಂಗವ ಹಿಡಿದ ಹಸ್ತವೆ ಲಿಂಗಕ್ಕೆ ಪೀಠ ಕಾಣಿರೋ! ಲಿಂಗವ ಪೂಜಿಸುವ ಹಸ್ತವೆ ಶಿವಹಸ್ತಕಾಣಿರೋ! ಲಿಂಗವ ಧರಿಸಿಪ್ಪ ಅಂಗವೆ ಲಿಂಗದಂಗತಾನೆ ನೋಡಾ! ಲಿಂಗಪ್ರಸಾದವ ಕೊಂಬ ಪ್ರಾಣ, ಲಿಂಗವು ತಾನೆ ನೋಡಾ! ಒಳ ಹೊರಗೆ ಲಿಂಗಭರಿತವಾಗಿಪ್ಪ ಲಿಂಗದೇಹಿ ಲಿಂಗ ಪ್ರಾಣಿಗೆ ಕರ್ಮವ ಕಲ್ಪಿಸಿ ನುಡಿವ ಅಬದ್ಧರನೇನೆಂಬೆನಯ್ಯ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!"

ಲಿಂಗದೇವನಿರುವ ಭಕ್ತನ ಅಂಗ ಲಿಂಗದಂಗವಾಗಿರುತ್ತದಲ್ಲದೆ ಭಕ್ತನಂಗ ವಾಗಿರುವುದಿಲ್ಲ. ಹೀಗಿರುವಾಗ 'ಭಕ್ತೇಷು ಶಂಕರೋ ಭಾಸತೇ ಸದಾ'ಎಂಬ ಜಗದ್ಗುರು ವಾಣಿ ಅರ್ಥಪೂರ್ಣವಾಗಿದೆಯೆಂಬಲ್ಲಿ ಯಾವ ಸಂಶಯವಿಲ್ಲ.

ಶಿವನ ಸತ್ ಚಿತ್‌ಗಳನ್ನು ಆರಾಧಿಸಿ ಅಳವಡಿಸಿಕೊಂಡ ಮಾಹೇಶ್ವರಾಂಗ ನಲ್ಲಿ ಅವೆರಡು ಅವಿರತವಾಗಿದ್ದು ಬೆಳಗುವಲ್ಲಿ ಬೆರಗಾಗುವ ಮಾತೇನಿಲ್ಲ. ಆರಾ ಧನೆಗೆ ಆಶ್ರಯವಾದುದು ಅಂಗ. ಅಂತೆಯೇ ಆ ಆರಾಧ್ಯಲಿಂಗಕ್ಕೂ ಆಶ್ರಯ

ವಾಗಿಯೆ ಇರುತ್ತದೆ. ಆರಾಧಕನ ಅಂಗದಲ್ಲಲ್ಲದೆ ಇನ್ನೆಲ್ಲಿದ್ದಾನು? ಅದು ಎದು ರಿಟ್ಟು ಪೂಜಿಸುವ ವಸ್ತುವಲ್ಲ: ತನು–ಮನ–ಭಾವಗಳಲ್ಲಿಯೇ ಅದನ್ನರಿಸಿಕೊಂಡು ಆರಾಧಿಸಬೇಕು, ಅಳವಡಿಸಿಕೊಳ್ಳಬೇಕು. ಅಳವಡಿಸಿಕೊಳ್ಳುವುದೆಂದರೆ ಇಲ್ಲ ದ್ದನ್ನು ಗಳಿಸುವುದೆಂದಲ್ಲ, ಇದ್ದುದನ್ನೇ ವಿಶೇಷವಾಗಿಸಿಕೊಳ್ಳುವುದು ರಾಜಿಸ ದಿರುವುದನ್ನು ವಿರಾಜಿಸುವಂತಾಗಿಸಿಕೊಳ್ಳುವುದು. ಭಕ್ತನು ಅಥವಾ ಮಾಹೇ ಶ್ವರನು ಹಾಗೆ ಮಾಡಿಕೊಳ್ಳುತ್ತಾನೆ.

ಆರಾಧನೆಗೆ ಬಹಿರಂಗವು ಗೌಣಸಾಧನವೆಂದು ಹೇಳುವವರುಂಟು. ಆದರೆ ಷಟ್‌ಸ್ಥಲ ಸಿದ್ಧಾಂತದಲ್ಲಿ ಉಭಯಾಂಗವೂ ಮುಖ್ಯವಾದವುಗಳು, ಬಹಿಂಂಗ ವಿಲ್ಲದೆ ಅಂತರಂಗದ ಅಭಿವ್ಯಕ್ತಿಯಾಗದು. ಅಂತರಂಗವಿಲ್ಲದೆ ಬಹಿರಂಗ ಬದು ಕದು. ಅಂತರಂಗದ ಅರಿವು ಬಹಿರಂಗದ ಕ್ರಿಯೆಯಲ್ಲಿ ಕಳೆಗೊಳ್ಳಬೇಕು, ಬಹಿರಂಗದ ಕ್ರಿಯಾಚರಣೆಯು ಅಂತರಂಗಕ್ಕೆ ಒಂದು ಬಗೆಯ ಸತ್ವವನ್ನು ಒದಗಿ ಸಬೇಕು, ಒದಗಿಸುತ್ತದೆ, ಅಂತರಂಗದ ವಿಚಾರಶ್ರುತಿಗೆ ಬಹಿರಂಗದಾಚಾರ ಕೃತಿಯು ರೂಪುಗೊಡುವದು. "ಸದಾಚಾರಿಯಾದಡೆ ಉಪ್ಪರಗುಡಿ ಸಿಂಧಪತಾಕೆ ಒಬ್ಬರಿಗೊಬ್ಬರು ಶರಣೆಂಬುದೇ ಸರ್ವತೀರ್ಥ! ಭಕ್ತನ ದೇಹವೇ ತ್ರಿಕೂಟದ ಶಿವಾಲಯ; ಕಾಲೆ ಕಂಬ, ಶಿರವೆ ಸುವರ್ಣದ ಕಳಸ, ಶಿವಾಚಾರವೆ ಪೌಳಿ; ವಿಭೂತಿಯ ಧವಳಿಸಿ ಪರದೈವವ ಹೊಗಲೀಯದೆ, ಪ್ರಣವ ಪಂಚಾಕ್ಷರಿಯ ಗುಳಿದಾರವಟ್ಟವೊಪ್ಪುತ್ತಿರೆ, ವಿನಯವೆ ಅಗ್ಗವಣಿ, ಸಜ್ಜನತ್ವವೆ ಮಜ್ಜನ, ಸದಾಸನ್ನಿಹಿತವೆ ಲಿಂಗಪೂಜೆ; ಸತ್ಯವೆ ಅಡ್ಡಣಿಗೆ, ಸಮತೆಯೆ ಪರಿವಾಣ ಮನವೆ ಮೀಸಲೋಗರ, ಲಿಂಗವಾರೋಗಣೆಯ ಮಾಡುತ್ತಿರಲು ಹರುಷವೆ ಹಸ್ತಮಜ್ಜನ, ಪ್ರೀತಿಯೆ ಕರ್ಪುರದ ವೀಳೆಯ, ಕಲಿತನವೆ ಜೇಗಟೆ, ಫಲಪದವೆ ಭೇರಿ, ವೀರವೆ ಮದ್ದಳೆ ಸಂಪ್ರದಾಯ, ಇದು ಕಾರಣ-ಕೂಡಲಚನ್ನಸಂಗಯ್ಯಾ, ನಿಮ್ಮ ಶರಣ ಸರ್ವಾಂಗಲಿಂಗಿ."

"ಸ್ಥೂಲತನು, ಸೂಕ್ಷ್ಮತನು, ಕಾರಣತನು: ಸ್ಥೂಲತನುವಿನಲ್ಲಿ ಇಷ್ಟಲಿಂಗ ಪ್ರತಿಷ್ಠೆ: ಸೂಕ್ಷ್ಮತನುವಿನಲ್ಲಿ ಪ್ರಾಣಲಿಂಗಪ್ರತಿಷ್ಠೆ; ಕಾರಣತನುವಿನಲ್ಲಿ ತೃಪ್ತಿ ಲಿಂಗಪ್ರತಿಷ್ಠೆ. ಇಂತೀ ಸ್ಥೂಲ ಸೂಕ್ಷ್ಮಕಾರಣವು ಮಹದುದಯದಲ್ಲಿ ಕೊನೆ

ದೋರುತ್ತಿರ್ಪ ಪರಂಜ್ಯೋತಿ ನಿಮ್ಮ ಶರಣನ ಸರ್ವಾಂಗದಲುಂಟು, ಕೂಡಲ ಚೆನ್ನಸಂಗಮದೇವಾ."

ಹೀಗೆ ಅಂತಃಶ್ರುತಿ ಬಹಿಃಕೃತಿಗಳೆರಡು ಹಾಸು ಹೊಕ್ಕಾದಾಗ ಒಂದು ಅಖಂಡ ಲಿಂಗರೂಪು ನಿರೂಪಿತವಾಗುತ್ತದೆ. ಬಹಿರಂತರಂಗಗಳಲ್ಲಿ ಶಿವಲಿಂಗವು ಸಚ್ಚಿತ್ತಾಗಿ ಸಂತತ ಶೋಭಿಸುತ್ತದೆ. ಅಂಗ ಬೇರಲ್ಲ, ಲಿಂಗ ಬೇರಲ್ಲ. ಅಂತೆಯೇ ದೇಹ ಬೇರಲ್ಲ, ದೇವ ಬೇರಲ್ಲ. ಬೀಜವೇ ವೃಕ್ಷವಾಗುವಂತೆ ದೇವನೇ ದೇಹವಾಗಿರುವನು: ಅದರಲ್ಲಿಯೂ ಆರಾಧಕರ ಅಂಗವೇ ತಾನಾಗಿ ಆನಂದಭರಿತನಾಗಿ ಬೆಳಗುತ್ತಿರುತ್ತಾನೆ. ಯಾವಾಗಲೂ ಬೆಳಗುತ್ತಿರುತ್ತಾನೆ.

ಸೃಷ್ಟಿಯಲ್ಲಿ ಅಪರಿಚ್ಛಿನ್ನನಾಗಿರುತ್ತಾನೆ. ಶರೀರದಲ್ಲಿ ಪರಿಚ್ಛಿನ್ನನಾಗಿ ಪ್ರಕಾಶಿಸುತ್ತಾನೆ. ಪರಿಚ್ಛಿನ್ನತೆ ಆರಾಧನೆಗೆ ಅರ್ಹತೆಯನ್ನು ತರುತ್ತದೆ. ಅನುಭವಾನಂದಗಳಿಗೆ ಅನುವಾಗುತ್ತದೆ. ಅನುವರಿಯಲು—ಘನವನಳವಡಿಸಲು ಅನುಕೂಲವಾಗುತ್ತದೆ.

"ನಿತ್ಯಂ ಯದಿಷ್ಟಲಿಂಗಸ್ಯ ಸ್ಪರ್ಶನಾತ್ತ್ವವಿಯೋಗತಃ।
ತತ್ಸಪ್ತದಶಕಂ ಪ್ರೋಕ್ತಂ ವಪುಸ್ಸಾರ್ಥಕತಾಸ್ಪದಂ॥"

ಎಂದು ಚಂದ್ರಜ್ಞಾನಾಗಮವು ಅಂಗ–ಲಿಂಗಗಳ ಸಂಬಂಧ ಅಗಲದಂತಿರಬೇಕೆಂದು ಇದ್ದರೆ ಶರೀರ ಸಾರ್ಥಕವೆಂದು ಬೋಧಿಸಿದೆ.

"ವಿಶುದ್ಧೇಷು ವಿರಕ್ತೇಷು ವಿವೇಕಿಷು ಮಹಾತ್ಮಸು
ಶಿವಸ್ತಿಷ್ಠತಿ ಸರ್ವಾತ್ಮಾ ಶಿವಲಾಂಛನ ಧಾರಿಷು ।
ನಿತ್ಯಂ ಸಂತೋಷಯುಕ್ತಾನಾಂ ಜ್ಞಾನನಿರ್ಧೂತ ಕರ್ಮಣಾಂ
ಮಾಹೇಶ್ವರಣಾಮಂತಸ್ಥೋ ವಿಭಾತಿ ಪರಮೇಶ್ವರ ;॥".

ಶಿವ ಸಂಸ್ಕಾರದಿಂದ ಪರಿಶುದ್ಧರಾದವರಲ್ಲಿ ವಿಷಯಗಳಿಂದ ವಿಮುಖರಾದವರಲ್ಲಿ ಕರ್ತವ್ಯಾಕರ್ತವ್ಯ ವಿವೇಕಿಗಳಲ್ಲಿ ವಿಶಾಲಾಂತಃಕರಣವುಳ್ಳವರಲ್ಲಿ ವಿಭೂತಿ ರುದ್ರಾಕ್ಷ ಮೊದಲಾದ ಶಿವಲಾಂಛನ ಧರಿಸಿದವರಲ್ಲಿ ಸರ್ವಾತ್ಮನಾದ ಶಿವನಿರುತ್ತಾನೆ.

ಸದಾ ಸಂತೋಷಚಿತ್ತರೂ ಶಿವಜ್ಞಾನದಿಂದ ಜಡಕರ್ಮಗಳನ್ನು ಜರಿದವರೂ ಆಗಿರುವ ಮಾಹೇಶ್ವರರ ಹೃದಯಗಳಲ್ಲಿ ಪರಮೇಶ್ವರನು ವಿಶೇಷವಾಗಿ ವಿರಾಜಿಸುವನು.

ಶಿವತ್ವ ಪ್ರಾಪ್ತಿ ಸುಮ್ಮನೆ ಸಂಭವಿಸುವುದಿಲ್ಲ, ಪಂಚಾಚಾರಗಳಿಂದ ಪರಿಶುದ್ಧರಾಗದೆ ಸಾಧ್ಯವಿಲ್ಲ. ಮೊದಲು ಶಿವದೀಕ್ಷಾ ಸಂಸ್ಕಾರವನ್ನು ಪಡೆಯಬೇಕು. ಸದಾಚಾರ ಶಿವಾಚಾರಗಳಲ್ಲಿರಬೇಕು. ಶಿವಾರ್ಚನೆಯಲ್ಲಿ ನಿರತರಾಗಿರಬೇಕು. ಇಷ್ಟಲ್ಲದೆ ವಿಶುದ್ಧತ್ವಬಾರದು. ಸದ್ರೂಪತ್ವ ಸಮನಿಸದು. ಮೊದಲು ಪ್ರಾಕೃತಿಕ ತ್ರಿಮಲದೋಷಗಳಿಂದ ಮುಕ್ತರಾಗಬೇಕು. ಬಳಿಕ ದುರಾಚಾರಗಳಿಂದ ದೂರಾಗಬೇಕು. ನಂತರ ಶಿವಾರ್ಚನಾದಿ ಶುದ್ಧಾಚಾರಗಳಿಂದ ಕೂಡಬೇಕು.

"ಶುಕ್ಲ ಶೋಣಿತದಲ್ಲಿ ಬಲಿದು. ಕರುಳ ಕತ್ತಲೆಯಲ್ಲಿ ಬೆಳೆದು, ಮೂತ್ರ ನಾಳದಲ್ಲಿಳಿದು, ಕರ್ಮವೆ ಕರ್ತೃವಾಗಿ, ಕಪಟವೇ ಆಶ್ರಯವಾಗಿ, ಕೇವಲಜ್ಞಾನ ಶೂನ್ಯವಾಗಿ, ಬರಿಯ ಮಾತ ಬಣ್ಣಿಸಿ, ಬಾಯಮಾತ ಕೊಟ್ಟು. ಬಸುರಮಾತ ತೆಗೆದು, ಜಿಹ್ವೆಗುಹ್ಯಂಗಳ ಹೊರೆವ ಚೋರವಿದ್ಯೆಗೆ ನಿಜವು ಸಾಧ್ಯವಪ್ಪುದೇ ? ಅದು ಹುಸಿ: ಅದೆಂತೆಂದಡೆ 'ಕರ್ಮಕಾಪಟ್ಯಮಾಶ್ರಿತ್ಯ ನಿರ್ಮಲ ಜ್ಞಾನವರ್ಜಿತಾಃ । ವಾಗ್ಬ್ರಹ್ಮಣಿ ಪ್ರವರ್ತಂತೆ ಶಿಶ್ನೋದರ ಪರಾಯಣಾಃ ॥' ಇಂತೆಂದುದಾಗಿ ತ್ರಿಡಂಭಿಂದೊಡಲ ಹೊರೆದು ಕುಟಿಲ ತಮಗಿಲ್ಲವೆಂಬ ಡಂಭಕರನೇನೆಂಬೆನಯ್ಯಾ, ಸೌರಾಷ್ಟ್ರಸೋಮೇಶ್ವರಾ !"

ವಿಶುದ್ಧತೆ ವಿರಕ್ತತೆ ವಿವೇಕ ವಿಶಾಲಭಾವಗಳು ಬೇಕೆಂಬುದಕ್ಕೆ ಆದಯ್ಯನವರ ಈ ವಚನವೊಂದೇ ಸಾಕಾಗಿದೆ. "ಲಲಾಟದಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ಮುಖದಲ್ಲಿ ಶಿವಮಂತ್ರ. ಅಂಗದಮೇಲೆ ಶಿವಲಿಂಗಧಾರಣವುಳ್ಳ ಶಿವಭಕ್ತನೇ ಸಾಕ್ಷಾತ್ ಶಿವ ತಾನೆ ನೋಡಾ. ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!" ಇದು ಶಿವಲಾಂಛನಧಾರಣ. ಇಂಥವರಲ್ಲಿ ಶಿವನಿರುವನು. ಮಾಹೇಶ್ವರನೆನಿಸುವನು. ಇಷ್ಟೆಲ್ಲ ಆಗಬೇಕಾದರೆ ಶ್ರೀಗುರು ಕರುಣೆಗೆ ಪಾತ್ರನಾಗಬೇಕು. "ಶ್ರೀಗುರುವಿನ ಕರುಣದಿಂದ ಪವಿತ್ರ ಗಾತ್ರನಾದೆನದೆಂತೆಂದಡೆ: ಪೂರ್ವಕರ್ಮದ ದುರ್ಲಿಖಿತವನೊರಸಿ, ವಿಭೂತಿಯ ಪಟ್ಟವ ಕಟ್ಟಿದನಯ್ಯಾ

ಶ್ರೀಗುರು! ಎನ್ನಂಗದಲ್ಲಿ ಶಿವಲಿಂಗವ ಹಿಂಗದಂತಿರಿಸಿ, ಭೂತಕಾಯವ ಬಿಡಿಸಿ ಲಿಂಗತನುವ ಮಾಡಿದನಯ್ಯಾ ಶ್ರೀಗುರು! ಕರ್ಣದಲ್ಲಿ ಪ್ರಣಮ ಪಂಚಾಕ್ಷರಿಯ ನೊರೆದು, ಜೀವಿಸ ಕಲಿಸಿ ಮಂತ್ರರೂಪನ ಮಾಡಿದನಯ್ಯಾ ಶ್ರೀಗುರು! ಸಂಸಾರದ ಅಜ್ಞಾನ ಜಡವ ಕೆಡಿಸಿ, ಶಿವ ಜ್ಞಾನಾನುಗ್ರಹ ಮಾಡಿದ. ಆ ಶಿವಜ್ಞಾನವೆನ್ನ ಸರ್ವಕರ್ಮವನುರುಹಿತ್ತು. ಅದೆಂತೆಂದಡೆ: ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮ ಸ್ಯಾತ್ಕುರುತೇ ಶಿವೇ' ಎಂಬುದಾಗಿ ಶ್ರೀಗುರುವಿನ ಪದ ಕಮಲದಲ್ಲಿ ಅನು ಭೃಂಗ ನಾಗಿರ್ದೆನಯ್ಯಾ ಸೌರಾಷ್ಟ್ರ ಸೋಮೇಶ್ವರಾ!"

ಹೀಗೆ ಪಾವನಾಂಗನಾದ ಮಾಹೇಶ್ವರನು ಸದಾ ಸಂತೋಷ ಚಿತ್ತನಾಗಿ ಸದಾಚಾರ ಸುಜ್ಞಾನ ನಿರತನಾಗಿ ಹೀನಕರ್ಮ ರಹಿತನಾಗಿ ಅಂತರಂಗ ಬಹಿರಂಗಗಳಲ್ಲಿ ಯಾವಾಗಲೂ ಲಿಂಗಧಾರಿಯಾಗಿ ಲಿಂಗ ಸಾಹಿತ್ಯಧಾರಿಯಾಗಿ ಇರಬೇಕು. ಹೀಗಿರುವುದೇ ಭಕ್ತದೇಹಿಕ ಲಿಂಗಸ್ಥಲ ಸಂಪನ್ನತೆ! ಬ್ರಹ್ಮಾಂಡದಲ್ಲಿ ಶಿವನಿರುವಂತೆ ಪಿಂಡಾಂಡದಲ್ಲಿಯೂ ಶಿವನಿರುವನು. ಆದರಲ್ಲಿಯೂ ಗುರುಕರುಣೆಯನ್ನು ಪಡೆದವರ ಅಂಗದಲ್ಲಿ ಲಿಂಗದೇವನಾಗಿ ಬಿಡದಿರುವನು.

"....ಶಾಸ್ತ್ರ ಪುರುಷರಿರಾ ನಿಮ್ಮ ಶಾಸ್ತ್ರ ಮಹಾವಾದದ ಹೊನಲಲ್ಲಿ ಹೋದಲ್ಲಿ 'ಭಕ್ತ ದೇಹಿಕ ದೇವ' ನೆಂದರಿಯದೆ ಕೆಟ್ಟಿರಲ್ಲಾ! ಯತ್ರ ಮಾಹೇಶ್ವರಸ್ತತ್ರ ಶಿವ' ನೆಂದು ಹೇಳಿತ್ತು ಮುನ್ನ, ಭಕ್ತಿ ಸನ್ನಿಹಿತ ನಮ್ಮ ಗುಹೇಶ್ವರಾ."

## ಸಹಜ ವೀರ

ಸತ್ಕ್ರಿಯೆಗಳಿಂದ ತನ್ನ ತನುಃಗುಣಗಳನ್ನು ತೊಡೆದು ಲಿಂಗನಿಷ್ಠೆಯಿಂದ ಆತ್ಮಸತ್ತೆಯನ್ನು ಸಂವಿತ್ತನ್ನು ಹೆಚ್ಚಿಸಿಕೊಂಡು ನಿಷ್ಠೆಗೆ ಹೊರಗಾದವುಗಳನ್ನು ನಿರಸನಮಾಡಿ ಜಡಕರ್ಮಗಳನ್ನು ಓಡಿಸಿದ ಮಾಹೇಶ್ವರಾಂಗನೇ 'ಸಹಜ ವೀರ' ನೆನಿಸುವನು. "ಕಳವು ಪರದಾರ ಜೀವಹಿಂಸೆ ಎಂಬಿವನತ್ತತ್ತಲೆ ಕಡೆನೂಂಕಿ, ಕ್ರೋಧ ಲೋಭ ಚಿತ್ತದಲ್ಲಿ ಮೊಳೆಯನ, ಕಪಟ ಕಳವಳ ಬುದ್ಧಿಯಲ್ಲಿ ಬೆಳೆಯ‌ದೆ, ಕುಂದು ನಿಂದೆಗಳಿಂದ ಕಡೆನುಡಿದ ವಾಕು ಮನದಲ್ಲಿ ಪಲ್ಲವಿಸದೆ, ಮದ ಮತ್ಸರ ಅಹಂಕಾರದಲ್ಲಿ ಮುಗುಳೊತ್ತದೆ, ಪ್ರಕೃತಿ ವಿಕೃತಿ ಭ್ರಾಂತು ಭಾವದಲ್ಲಿ ಫಲಿಸದೆ, ಸುಜ್ಞಾನದಿಂದ ಧರ್ಮಾಧರ್ಮಂಗಳ ಮರ್ಮವನರಿತು, ಮನಕ್ಕೆ ಮನ ಸಾಕ್ಷಿಯಾಗಿ ಸದ್ವರ್ತನೆ ಸಮತೆ ಸಾರಹೃದಯ ಅನಿಂದೆ ಅನುಃಬಂಧ ಅಕಪಟ— ಪಟುತರವಾಗಿ ಸಟೆಯುಳಿದು ದಿಟಘಟಿಸಿ ನಿಜ ನಿರುಗೆಯಾದಲ್ಲಿ ಸೌರಾಷ್ಟ್ರ ಸೋಮೇಶ್ವರನೆಡೆ ಬಿಡುವಿಲ್ಲದಿಪ್ಪನು."

ಇದು ಸಹಜ ವೀರನೆನಿಸುವ ಮಾಹೇಶ್ವರನ ಮಾರ್ಗ, ಇಹವೀರ ಪರವೀರ, ಸಹಜವೀರ ಎಂದು ಮಾಹೇಶ್ವರನು ಮೂರು ಬಗೆಯಾಗಿರುವನು. ಲಿಂಗನಿಷ್ಠೆ ಕರಿಗೊಂಡರೆ ಇಹವೀರನೆನಿಸುವನು. ನಿಷ್ಠೆಗೆ ವಿರುದ್ಧವಾದವುಗಳನ್ನು ನೀಃಸನ ಮಾಡಿದರೆ ಪರವೀರನೆನಿಸುವನು. ಶಿವನು ಜಗನ್ಮಯನೆಂದು ಭಾವಿಸಿ ಸರ್ವಸಮತ್ವಭಾವವುಳ್ಳವನಾಗಿ ಸದಾ ಸಂತೋಷಚಿತ್ತನಾಗಿ ಲಿಂಗದೇಹಿಯಾಗಿ ಅನ್ಯಕರ್ಮಗಳನ್ನು ಪರಿಹರಿಸಿದರೆ 'ಸಹಜವೀರ' ನೆನಿಸುವನು. ವೈಯಕ್ತಿಕ ಪಿಂಡಾಂಡ ಸಾಧನೆಯಲ್ಲಿ ಇನ್ನೊಂದು ಬಗೆಯಲ್ಲಿ ಮೂರರ ವಿವರ : ಬಹಿರಂಗದ ಇಂದ್ರಿಯಗಳನ್ನು ಜಯಿಸಿದವನು ಇಹವೀರ. ಅಂತರಂಗದ ಕರಣಗಳನ್ನು ಗೆಲಿದವನು ಪರವೀರ. ಈ ಉಭಯಾಂಗಗಳಿಗೆ ಪ್ರೇರಕವಾದ ಚೈತನ್ಯ ಸ್ವರೂಪ ವನ್ನು ಸಂಪಾದಿಸಲು ಸಮರ್ಥನಾದವನು ಸಹಜವೀರ. ಇನ್ನು ಸರ್ವ ಸಾಮಾನ್ಯ ಬ್ರಹ್ಮಾಂಡ ಸಾಧನೆಯಲ್ಲಿ ಉಂಟಾಗುವ ಮತ್ತೊಂದು ಬಗೆಯ

ಮೂರರ ವಿವರ ; ಈ ಲೋಕದ ವಿಷಯಗಳಲ್ಲಿ ವಿಜಯ ಪಡೆದವನು ಇಹ ಲೋಕದ ವೀರ. ಸ್ವರ್ಗ, ಸತ್ಯ, ವೈಕುಂಠ, ಕೈಲಾಸಾದಿ ಆ ಲೋಕ ಸುಖಗಳ ವಿರಾಗದಲ್ಲಿ ವಿಜಯಿಯಾದನು ಪರಲೋಕ ವೀರ. ಸರ್ವ ಚೈತನ್ಯಗಳಿಗೆ ಮಹಾ ಕಾರಣವಾದ ಅಷ್ಟೇಕೆ ಸರ್ವಶೂನ್ಯ ನಿರಾಲಂಬಕ್ಕೂ ಮೂಲವಾದ 'ಸಹಜ' ವನ್ನು ಸಂಪಾದಿಸುವ ಸಮರ್ಥ ಮಾಹೇಶ್ವರನು ಸಹಜವೀರನೆಸಿಸುವನು.

"ಸಹಜದಿಂದ ನಿರಾಲಂಬವಾಯಿತ್ತು; ನಿರಾಲಂಬದಿಂದ ನಿರವಯ ವಾಯಿತ್ತು; ನಿರವಯದಿಂದ ನಿರಾಕಾರವಾಯಿತ್ತು ; ನಿರಾಕಾರದಿಂದ ಆದಿ ಯಾಯಿತ್ತು ; ಆದಿಯಿಂದ ಮೂರ್ತಿಯಾದನೊಬ್ಬ ಶರಣ; .." ಎಂಬುದಾಗಿ ಸಹಜದ ಮೂಲನಿಲವನ್ನು ಚನ್ನಬಸವಣ್ಣನವರು ನಿರೂಪಿಸಿದ್ದಾರೆ. ಇಂತಹ ಸರ್ವನಾಮಾತೀತ ರೂಪಾತೀತ ವಸ್ತು ಸಾಕ್ಷಾತ್ಕಾರದಲ್ಲಿ ಅಂದರೆ ಸ್ವರೂಪ ಸಮರಸವಾಗುವಲ್ಲಿ ಸಮರ್ಥನಾಗುವುದೇ ಸಹಜ ವೀರತ್ವ. ಇನ್ನು ಸಹಜ ಸಂಬಂಧಾಚಾರ ನಿರತನಾಗಿರುವುದೂ ಸಹಜ ವೀರತ್ವ ಲಕ್ಷಣವೆಂದು ಹೇಳುವು ದುಂಟು. ಇದು ಭಕ್ತಸ್ಥಲದಲ್ಲಿಯೇ ಉಕ್ತವಾಗಿದೆಯಾದ್ದರಿಂದ ಮರಳಿ ಇದನ್ನು ಇಲ್ಲಿ ಸಂಪಾದಿಸುವ ಅವಶ್ಯಕತೆಯಿರುವುದಿಲ್ಲ. ಒಂದು ವೇಳೆ ಇದೆಯೆಂದರೆ, ಮಾಹೇಶ್ವರನ ಭಕ್ತಸ್ಥಲದಲ್ಲಿಯೇ ಇರುತ್ತದೆ.

ಸಹಜ ವೀರ ನಾಮಕ ಮಾಹೇಶ್ವರನು ಪೂರ್ಣಯೋಗದ ಪರಿಣಾಮದಲ್ಲಿ ಪರವಶನಾಗಿರುತ್ತಾನೆ. ಅಲುಪ್ತವೂ ಅನಂತವೂ ಆದ ಸಚ್ಚಿತ್ ಸ್ವರೂಪವನ್ನು ಪಡೆದಿರುತ್ತಾನೆ. ತ್ರಿವಿಧಾಂಗ ವ್ಯತ್ಯವಚ್ಛಿನ್ನ ಸಾಮಾನ್ಯ ಚೈತನ್ಯಗಳಮೂಲ ವಾದ ವಿಶೇಷ ಚೈತನ್ಯ ಸ್ವರೂಪನಾಗಿರುವನು. ವಿಶ್ವವನ್ನೊಳಗೊಂಡು ವಿಶ್ವಾತೀತವಾದ ಚೈತನ್ಯವನ್ನು ಪಡೆಯುವನು. ದೇಶಕಾಲಾತೀತ ವಸ್ತುವನ್ನು ಶಕ್ತಿಯನ್ನು ಪಡೆದು ಸರ್ವಸಮದರ್ಶಿಯಾಗಿರುವನು. ಪರಿಪೂರ್ಣ ಚೈತನ್ಯ ಜ್ಞಾನವನ್ನು ಪಡೆದು ತನ್ನಿಷ್ಠನಾಗುವನು.

ಸಹಜವೀರನು ಅಕರ್ಮ ವಿಕರ್ಮ ಕಾಮ್ಯಕರ್ಮ ನಿಷಿದ್ಧ ಕರ್ಮ ಪ್ರಾಯ ಶ್ಚಿತ್ತ ಕರ್ಮ ಪಾಪಕರ್ಮ ಮೊದಲಾದ ಎಲ್ಲ ಜಡಕರ್ಮಗಳನ್ನು ತನ್ನ ಸತ್ವದಿಂದ ಸದೆ ಬಡಿದಿರುತ್ತಾನೆ. ಕರ್ಮತ್ರಯಗಳನ್ನು ಕಳಚಿರುತ್ತಾನೆ. ನಿತ್ಯಸ್ನಾನ,

ಅರ್ಚನ; ಮಂತ್ರ ಜಪಾನುಷ್ಠಾನಾದಿ ಸತ್ಕ್ರಿಯೆಗಳಲ್ಲಿ ಮಾರ್ಗ ಕ್ರಿಯೆಗಳಲ್ಲಿ ನಿರತನಾಗಿರುತ್ತಾನೆ. ಚಿದಾರಾಧನೆಯಿಂದ ವ್ಯಷ್ಟಿ ಅಜ್ಞಾನ, ಸಮಷ್ಟಿ ಅಜ್ಞಾನ, ಮೂಲ ಅಜ್ಞಾನಾದಿಗಳನ್ನು ಅಳಿದಿರುತ್ತಾನೆ, ಪ್ರಮಾಣ–ಪ್ರಮೇಯಗತ ಸಂಶಯಗಳನ್ನು ನಿವಾರಿಸಿರುತ್ತಾನೆ. ಜ್ಞಾನಾತ್ಮನೂ ಶಾಂತಾತ್ಮನೂ ಮಹಾತ್ಮನೂ ಆಗಿರುತ್ತಾನೆ. ಈಷಣತ್ರಯವನ್ನು ಬಿಟ್ಟಿರುತ್ತಾನೆ. ತಾಪತ್ರಯವನ್ನು ಪಂಚಕ್ಲೇಶಗಳನ್ನು ಪರಿಹರಿಸಿರುತ್ತಾನೆ. ಶ್ರವಣ ಮನನ ನಿಧಿಧ್ಯಾಸಗಳಲ್ಲಿ ಧಾರಣ ಧ್ಯಾನ ಸಮಾಧಿಗಳಲ್ಲಿ ನಿಷ್ಠೆಯುಳ್ಳವನಾಗಿರುತ್ತಾನೆ. ಚಿತ್ತವನ್ನು ನಿರೋಧಿಸಿ ಚಿತ್ತೈಕಾಗ್ರತೆಯನ್ನು ಸಂಪಾದಿಸಿರುತ್ತಾನೆ. ಬುದ್ಧಿ ಮಾಂದ್ಯವನ್ನು ತೊಡೆದು ಬುದ್ಧಿ ವಿಶಾಲತೆಯನ್ನು ತಳೆದಿರುತ್ತಾನೆ. ವಿವೇಕ ವೈರಾಗ್ಯ ಭಕ್ತಿ ಭಾವಗಳಿಂದ ಕೂಡಿರುತ್ತಾನೆ. ಕುಲ ಗೋತ್ರ ಜಾತಿ ವರ್ಣಾಶ್ರಮಗಳ ಭ್ರಮೆಯನ್ನು ಬಿಟ್ಟಿರುತ್ತಾನೆ. ಪ್ರಾಕೃತಿಕ ಮತ್ತು ವೈಕೃತಿಕ ಭಾವಗಳನ್ನೆಲ್ಲ ಬಿಟ್ಟು ಸಾಂಸ್ಕೃತಿಕ ಸಹಜ ಜೀವನದಲ್ಲಿ ಜ್ಯೋತಿರ್ಮಯನಾಗಿರುತ್ತಾನೆ. ಆದ್ದರಿಂದ ಸಹಜವೀರನೆನಿಸುತ್ತಾನೆ. ಸತ್ಯ ಸದಾಚಾರಗಳಲ್ಲಿ ನಡೆದು ಮಿಥ್ಯ ಮೋಸ ವಂಚನಾದಿಗಳನ್ನು ತೊಡೆದು ಚಿತ್ತ ನಿರ್ಮಲತೆಯನ್ನು ಸಾಧಿಸಿದವನು ಸಹಜ ವೀರನು; ಸಮತೆ ಶಾಂತಿ ಸಮಾಧಾನಗಳಿಂದ ಬಾಳುವವನೇ ಸಹಜವೀರನು.

ಕೈಲಾಸ ಪುರಕಿಂದು ದಂಡುದಾಳಿ ಕಾಣಿರೋ ! ॥ಪ॥
ಅತಿರಥ ಸಮರಥ ಮಹಾ ! ರಥರೆಲ್ಲ ನೀವಾಯತವಾಗಿರೋ ! ॥೧॥
ವೀರರು ಧೀರರು ಕಲಿಗಳು । ಸಮತೆಯ ಕೈದುವ ಕೊಳ್ಳಿರೋ ! ॥೨॥
ಕಾಲಾಳ್ಗಳು ಮೇಲಾಳುಗಳೆಲ್ಲ । ಕವಿಯಿರೋ ಮುಂದಕ್ಕೆ ! ॥೩॥
ಸುತ್ತಿ ಮುತ್ತಿ ಪರತತ್ತ್ವದ ಕೋಟೆಯ ಮುತ್ತಿಕೊಳ್ಳಿರೋ । ॥೪॥
ನಮ್ಮ ಕಪಿಲಸಿದ್ಧ ಮಲ್ಲೇಶ್ವರಯ್ಯನ–ಬಿಗಿ ಬಿಗಿದಪ್ಪಿಕೊಳ್ಳಿರೋ !
॥ ೫ ॥

ಶ್ರೀ ಸಿದ್ಧರಾಮ ಶಿವಯೋಗಿಯು ಸಹಜವೀರನು ಮಾಡುವ ದಾಳಿಯನ್ನು ಸೊಗಸಾಗಿ ಸಹಜವಾಗಿ ತತ್ತ್ವ ಸತ್ವಶಾಲಿಯಾಗಿ ಹೊಗಳಿದ್ದಾನೆ. ಈ ಮಲ್ಲನು ಗೆಲ್ಲುವುದು ಆ ಸಿದ್ಧನಾದ ಮಲ್ಲೇಶನನ್ನು ! ಗೆದ್ದು ಸದ್ದಡಗಿ ನನೆಕೊನೆವೋಗಿ ಸಮರಸವಾಗಿ ತಾನಾಗಿ ನಿಲ್ಲುವ ಸಲ್ಲುವ ಸೊಗಸೇ ಸೊಗಸು ! ಇದನ್ನು ಕೇಳಿದ

ಬಳಿಕ, ತಿಳಿದ ಬಳಿಕ–ಬಹುರೂಪಿ ಚೌಡಯ್ಯನವರ ಸಹಜವೀರ ಶ್ರೀ ವಾಣಿಯನ್ನು ಶ್ರವಣ ಮಾಡಬೇಕು :

"ಗಟ್ಟಿ ಬೆಟ್ಟಂಗಳ ಬಟ್ಟೆಯ ಸೋದಿಸಿ. ಹುಟ್ಟುಗೆಟ್ಟು ನಾ ಬಂದೆ !
ಅಟ್ಟಿಯಲೆದು ಕೊಲುತಿಪ್ಪ ಮಾಪತಿಗನ ನಿಟ್ಟೆಲುವುಗಳ ಮುರಿದಿಟ್ಟೆ ನಾಹೋ !

ಕಟ್ಟರ ಸಿಂಗಿಟ್ಟೆಡೆಗಳು ಬಂದಡೆ, ದೃಷ್ಟ ಭೂಮಂಡಲದಲ್ಲಿ !
ಕಟ್ಟಿ ನಾಲ್ವರ, ಮೆಟ್ಟಿ ನಿಂದಾಡಿದೆ, ಬಟ್ಟಬಯಲ ಬಹು ರೂಪನಾದೆ ನಾಹೋ !

ಅರಳಿ ಹೂವಾಯಿತು, ಮರಳಿ ಫಲಗಳಿಲ್ಲ ! ಮರನಾಯಿತು ಸಾಗರ ದೊಳು !
ಹರಿಯ ಮೆಟ್ಟಿ, ಬ್ರಹ್ಮನ ಶಿರಗಂಡೆ, ಧರೆ ಕಾಯುಲು ಹಣ್ಣಾದೆನಾಹೋ!

ಬಂದ ಬಹುರೂಪಿ ನಿಂದ ಕೈಯೊಳು, ಸಂದ ಪುರಾತನರು ಕೇಳಿ!
ಕಂದರ್ಪನ ಕೊಂದು, ನಿಂದು ನಾಟ್ಯವನಾಡಿ–ದಂದುಂದಿನ ಬಹುರೂಪ ನಾಹೋ !

ಆಕಾರವಿಡಿದು ನಿರಾಕಾರವ ಕಂಡೆ ! ಏಕೋದೇವನೆಂದರಿದೆ !
ರೇಕಣ್ಣ ಪ್ರಿಯನಾಗಿನಾಥನಲ್ಲಿ, ಸಾಕಾರವಿಡಿದಾಡಬಂದೆನಾಹೋ !

ಸಹಜವನ್ನು ಸಂಪಾದಿಸುವ ವೀರತನವೇ ದಿಟವಾದ ವೀರತನ. ಆ ಪರ ತತ್ತ್ವ ಕೋಟೆಯ ಮುತ್ತುವ ಆ ವೀರರು ಬೇರೆ ! ಅವರು ಸದ್ಗುಣಸಿದ್ಧರು, ಅವರು ಆತ್ಮರಾಮರು. ಅವರು ಅತೀಂದ್ರಿಯ ಕಲಿಗಳು. ಸಮತೆಯ ಕೈದುವ ಕೊಂಡವರು. ಸತ್ಯಧೀರರು. ಸ್ವಾನುಭವ ಶೂರರು. ನಂಬುಗೆಯ ನಿಷ್ಠರು. ಅಂತೆಯೆ ಸ್ಕಂದ ಪುರಾಣವು ಹೀಗೆ ಹೊಗಳಿದೆ :

"ವೀರಮಾಹೇಶ್ವರಂ ಮಾಂ ಚ ವಿಭಿನ್ನಂ ಪ್ರವದಂತಿ ಯೇ।
ತೇ ಮೂಢಾ ಏವ ಮನುಜಾ ನಾತ್ರ ಕಾರ್ಯಾ ವಿಚಾರಣಾ ॥"

ಸಹಜ ವೀರನಿಗೂ ಶಿವನಿಗೂ ಭಿನ್ನವಿಲ್ಲ. ಇಹ—ಪರಕ್ಕೆ ಮೀರಿರುತ್ತಾನೆ. "ಮರ್ತ್ಯಲೋಕದ ಮಹಾಗಣಂಗಳು ಮೆಚ್ಚುವಂತೆ ಷಡ್ದರ್ಶನಂಗಳ ನಿರಸನವಂ ಮಾಡಿ, ತನ್ನ ಪ್ರಾಣವ ವೆಚ್ಚಿಸುವನಾಗಿ ಇಹಲೋಕವೀರ. ದೇವ ಲೋಕದ ದೇವಗಣಂಗಳು ಮೆಚ್ಚುವಂತೆ ಸರ್ವಸಂಗ ಪರಿತ್ಯಾಗವ ಮಾಡಿ, ಚತುರ್ವಿಧ ಪದಂಗಳ ಧರ್ಮಾರ್ಥಕಾಮ ಮೋಕ್ಷಂಗಳ ಬಿಟ್ಟಿಹನಾಗಿ ಪರಲೋಕ ವೀರ. ಅಂಗ ಲಿಂಗ ಸಂಗದಿಂದ ಸರ್ವಕರಣಂಗಳು ಸನ್ನಿಹಿತವಾಗಿಪ್ಪನಾಗಿ ಲಿಂಗ ವೀರ ಅಂದರೆ ಸಹಜವೀರ." ಈ ಪುರಾತನೋಕ್ತಿಯ ವಿವರಣೆಯಿಂದ ಸಹಜ ವೀರನ ನಿಜದ ನಿಲವು ದಿಟಪುಟವಾಗಿ ದೃಗ್ಗೋಚರವಾಗುತ್ತದೆ.

ಮಾಹೇಶ್ವರತ್ವದ ಉಪಸಂಹಾರವನ್ನು ನಮ್ಮ ಮಾತಿನಲ್ಲಿ ಮಾಡುವುದಕ್ಕಿಂತ ಷಟ್‌ಸ್ಥಲ ಚಕ್ರವರ್ತಿಯಾದ ಚನ್ನಬಸವಣ್ಣನವರ ವಚನ ವಾಣಿಯಲ್ಲಿ ಮೊದಲು ಮಾಡೋಣ ;

"ಪರಧನ, ಪರಸತಿ, ಪರವಾರ್ತೆಯ ತೊರೆಯದನ್ನಕ್ಕರ
ಎಂತು ಮಾಹೇಶ್ವರನಪ್ಪನಯ್ಯಾ ?
ಲಿಂಗಪೂಜೆಯಲ್ಲಿ ಲೀಯವಾಗಿ ಅಂಗಗುಣ ವಿರೋಧಿಯಾಗದನ್ನಕ್ಕರ
ಎಂತು ಮಾಹೇಶ್ವರನಪ್ಪನಯ್ಯಾ ?
ಗುರು ಪ್ರಸಾದದಲ್ಲಿ ನಿಹಿತಾವಧಾನಿಯಾಗದನ್ನಕ್ಕರ
ಎಂತು ಮಾಹೇಶ್ವರನಪ್ಪನಯ್ಯಾ ?
ಕೂಡಲ ಚೆನ್ನಸಂಗಯ್ಯನಲ್ಲಿ ಮಾಹೇಶ್ವರನೆನಿಸಿಕೊಂಬುದು
ಸಾಮಾನ್ಯವೇ ಅಯ್ಯಾ ?

"ನಿಷ್ಠೆ ನಿಬ್ಬೆರಗು ಗಟ್ಟಿಗೊಂಡಡೆ ಏಕೋಭಾವದಲ್ಲಿ
ಸೊಮ್ಮು ಸಂಬಂಧ; ಆಹ್ವಾನ-ವಿಸರ್ಜನ ದ್ವಿಭಾವಬುದ್ಧಿ
ಲಯವಾದಡೆ ಆತ ಮಾಹೇಶ್ವರ;
ಗುರು ಮುಖದಲ್ಲಿ ಸರ್ವ ಶುದ್ಧನಾಗಿ ಪಂಚಭೂತದ ಹಂಗು
ಅಡಗಿದಡೆ ಆತ ಮಾಹೇಶ್ವರ;

ಪರದೈವ, ಮಾನವಸೇವೆ, ಪರಸ್ತ್ರೀ ಪರಧನವ ಬಿಟ್ಟು
ಏಕಲಿಂಗ ನಿಷ್ಠಾಪರನಾಗಿ, ಸಾಕ್ಷಿ :

'ದಾಸತ್ವಂ ವೀರದಾಸತ್ವಂ ಭೃತ್ಯತ್ವಂ ವೀರಭೃತ್ಯತಾ ।
ಸಮಯಃ ಸಕಲಾವಸ್ಥಃ ಸಜ್ಜನಃ ಷಡ್ವಿಧಸ್ತಥಾ॥'

ಎಂಬ ಶ್ರುತ್ಯರ್ಥದಲ್ಲಿ ನಿಯತನಾಗಬಲ್ಲಡೆ ಆತ ಮಾಹೇಶ್ವರನಪ್ಪನಯ್ಯಾ ಗುರುಮಾರ್ಗವೇ ತನಗೆ ಸನ್ಮತವಾಗಿ, ತನ್ನ ಮಾರ್ಗವೇ ಗುರುವಿನಲ್ಲಿ ಸನ್ಮತವಾಗಿ ರಬಲ್ಲಡೆ ಆತ ಮಾಹೇಶ್ವರ. ಈ ಮತವನರಿಯದೆ ನಾನು ಮಾಹೇಶ್ವರನೆಂಬ ಮೂಕೊರೆಯನ ಮೆಚ್ಚುವನೆ, ಕೂಡಲ ಚನ್ನಸಂಗಯ್ಯ ?"

"ಮಾಹೇಶ್ವರಂಗೆ ಅಪ್ಪುವೆ ಅಂಗ;
ಆ ಅಂಗಕ್ಕೆ ಸುಬುದ್ಧಿಯೇ ಹಸ್ತ;
ಆ ಹಸ್ತಕ್ಕೆ ಕರ್ತೃಸಾದಾಖ್ಯ; ಆ ಸಾದಾಖ್ಯಕ್ಕೆ ಜ್ಞಾನಶಕ್ತಿ;
ಆ ಶಕ್ತಿಗೆ ಗುರುಲಿಂಗ; ಆ ಲಿಂಗಕ್ಕೆ ಪ್ರತಿಷ್ಠೆಯೆ ಕಳೆ;
ಆ ಕಳೆಗೆ ಜಿಹ್ವೇಂದ್ರಿಯವೆ ಮುಖ ; ಆ ಮುಖಕ್ಕೆ
ಸುರುಚಿ ದ್ರವ್ಯಂಗಳ ರೂಪು–ರುಚಿ–ತೃಪ್ತಿಯನರಿದು
ನೈಷ್ಠಿಕ ಭಕ್ತಿಯಿಂದರ್ಪಿಸುವುದು. ಆ ಸುರಸ ಪ್ರಸಾದವ
ಭೋಗಿಸಿ ಸುಖಿಸುತ್ತಿಹನು ಕೂಡಲ ಚನ್ನ ಸಂಗಾ,
ನಿಮ್ಮ ಮಾಹೇಶ್ವರನು."

ನೀತಿ ನಿಷ್ಠೆ ನಿಜಾಚರಣೆಗಳಿಂದ ಮಾಹೇಶ್ವರತ್ವವು ಮೈಗೂಡಿ ಬರುತ್ತದೆ. ಗುರುಮಾರ್ಗದಲ್ಲಿ ಗುರುಲಿಂಗಾರಾಧನೆಯಲ್ಲಿ ಸನ್ಮತನಾಗಿರಬೇಕು; ನಿರುತ ನಿಯತನಾಗಿರಬೇಕು.

ಮಾಹೇಶ್ವರನ ಮೂಲಗುಣ ನಿಷ್ಠೆ. ಚಿನ್ಮಯತ್ವದ ಗುರಿಗೆ ಸೇರಲು ಶ್ರದ್ಧಾತಿಶಯದಿಂದ ಸರ್ವಾಂಗಗಳಲ್ಲಿ ಸತ್ಸಾಧನೆಯ ಏಕನಿಷ್ಠ ಸಾಹಸವೇ ನಿಷ್ಠೆ. ಜಲಾಂಗವನ್ನು ಜ್ಯೋತಿರ್ಮಯಾಂಗವನ್ನಾಗಿಸುವುದೇ ಮಾಹೇಶ್ವರನ ನಿಷ್ಠೆಯ, ಮುಖ್ಯಧ್ಯೇಯ. ಅತ್ತಿತ್ತ ಅಲುಗದಂತೆ ತನ್ನ ಸಚ್ಚಿನ್ಮಯ ಲಿಂಗದ ನಿಷ್ಠೆ

ಯಲ್ಲಿಯೇ ನಿಬ್ಬೆರಗಾಗಿ ಗಟ್ಟಿಗೊಂಡಿರುತ್ತಾನೆ ಮಾಹೇಶ್ವರ. ತನ್ನ ಆರಾಧನೆಗೆ ತನ್ನ ಆದರ್ಶತೆಗೆ ಹೊರತಾದುದನ್ನು ಗಂಗೀಕರಿಸನು ಮಾಹೇಶ್ವರನು. ಈ ದಿಸೆಯಲ್ಲಿ ಮಾಹೇಶ್ವರನ ಮನಸ್ಸು ಮಾತ್ರವಲ್ಲ ಕರ್ಮೇಂದ್ರಿಯ ಬುದ್ಧೀಂದ್ರಿಯಗಳೂ ಚಿತ್ತ ಬುದ್ಧಿಗಳೂ ನಿಷ್ಠೆಗೊಳಗಾಗಿ ನಿಜಾಚರಣೆಯಲ್ಲಿ ನಿರತವಾಗಿರುತ್ತವೆ. ಮುಖ್ಯವಾಗಿ ಜಲಾಂಗವೆಲ್ಲ ಜಾಗ್ರತವಾಗಿರುತ್ತದೆ. ರಸರುಚಿಗಳ ಸೆಳವಿಗೆ ಸಿಕ್ಕದಂತೆ ಸಂಯಮಶೀಲನಾಗಿರುತ್ತಾನೆ, ಬುದ್ಧಿಯನ್ನು ಸುಬುದ್ಧಿಯನ್ನಾಗಿಸಿಕೊಂಡು ಸರ್ವ ಸಂಶಯುಗಳನ್ನು ನಿವೃತ್ತಿಮಾಡಿ ನಿಶ್ಚಯ ಪಥದಲ್ಲಿ ನಡೆದಿರುತ್ತಾನೆ. ವಿಚಾರಾಚಾರ ಮಾರ್ಗಕ್ರಿಯೆಗಳಲ್ಲಿ ಕರ್ತೃಸಾದಾಖ್ಯವನ್ನು ಕೈವಿಡಿಸಿರುತ್ತಾನೆ, ಮಾಹೇಶ್ವರನಿಗೆ ನಿಜಜ್ಞಾನವೇ ಶಕ್ತಿ ; ಗುರುಲಿಂಗವೇ ಚೈತನ್ಯ. ಪ್ರತಿಷ್ಠೆಯೇ ಕಳೆ. ಇದರಿಂದಾಗಿ ಸಚ್ಚಿನ್ಮಯನಾಗುವ ಬೌದ್ಧಿಕ ಬಲವನ್ನು ಮಾಹೇಶ್ವರನು ಆರ್ಜಿಸಿರುತ್ತಾನೆ. ವಿರೋಧಶಕ್ತಿಗಳನ್ನು ಭಾವಗಳನ್ನು ನಿರಸನ ಮಾಡುತ್ತಾನೆ. ಹಿತಮಿತವಾದ ಸತ್ವಶುದ್ಧವಾದ ಸುರಸಪ್ರಸಾದಸ್ವೀಕಾರದಿಂದ ತ್ಯಾಗಾಂಗದ ಜಡತೆಯನ್ನು ರೋಗ ರುಜಿನಗಳನ್ನು ನಿವಾರಿಸಿ ತ್ಯಾಗಾಂಗವನ್ನು ಕೆಡಿಸದೆ ಕಡೆಗೆಣಿಸದೆ ಸರ್ವ ಸತ್ಕ್ರಿಯೆಗಳಿಗೆ ಸಮ್ಯಕ್ ಜ್ಞಾನಕ್ಕೆ ಸಾಧನವನ್ನಾಗಿಸಿಕೊಳ್ಳುತ್ತಾನೆ. ಉದಾತ್ತ ಉದ್ದೇಶಕ್ಕಾಗಿ ಉಪಯೋಗಿಸುತ್ತಾನೆ. ಗುರುಲಿಂಗದ ಪರಮ ಪ್ರಭಾವಕ್ಕೆ ಆಕರ್ಷಿತನಾಗಿ ತನ್ನನ್ನು ತಾನೇ ಅರ್ಪಿಸಿಕೊಂಡಿರುತ್ತಾನೆ.

ರಸ ಪದಾರ್ಥವನ್ನು ಸುರಸಪ್ರಸಾದವನ್ನಾಗಿಸಿ ಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಅರ್ಪಣ ಮಾಡುವ ಸತ್ಕ್ರಿಯೆಯಿಂದ ಮಾಹೇಶ್ವರನ ಸತ್ಸಾಧನೆ ಸಿದ್ಧಿಗೇರುತ್ತದೆ, ಅರ್ಚನೆಯಿಂದ ಆರಂಭವಾದದ್ದು ಅರ್ಪಣಾನುಭವಗಳಲ್ಲಿ ಪರಿಣತವಾಗುತ್ತದೆ. ಆನಂದಾವಿರಳ್ಯತೆಗಳಲ್ಲಿ ಪರ್ಯವಸಾನಗೊಳ್ಳುತ್ತದೆ, ತನುಗುಣವಳಿದು ತ್ಯಾಗಾಂಗವನ್ನು ಲಿಂಗ ಸುಖಭೋಗದಿಂದ ಭೋಗಾಂಗವನ್ನು ನಿಜಜ್ಞಾನದಲ್ಲಿ ಬೆಳಸಿ ಯೋಗಾಂಗವನ್ನು ಪರಿಪಕ್ವಗೊಳಿಸಿಕೊಳ್ಳುತ್ತಾನೆ, ಕ್ರಮವಾಗಿ ಸತ್–ಚಿತ್–ಆನಂದಮಯವಾಗಿಸುತ್ತಾನೆ. ಶಿವಸ್ವರೂಪದೊಡನೆ ಸಮರಸಗೊಳಿಸುತ್ತಾನೆ

ಇಷ್ಟಾಗಬೇಕಾದರೆ ಮಾಹೇಶ್ವರನು ಅಹಂಕಾರ, ಮಮಕಾರ, ಅವಿದ್ಯಾ

ಪಂಚಕ, ಅರಿಷಡ್ವರ್ಗಗಳನ್ನು ತೊರೆಯಬೇಕು. ಮಾಹೇಶ್ವರನಿಗೆ ಈ ನಿಯಮ ವಿಶೇಷವಾಗಿ ಅನ್ವಯಿಸುವುದು. ಸ ಚ್ಚಿ ತ್ತು ಗ ಳ ಆವಿಷ್ಕಾರವಾಗಬೇಕಾದರೆ ಕ್ರಿಯಾಜ್ಞಾನಗಳು ಅಳವಡಬೇಕಾದರೆ ಅಹಂಕಾರಾದಿಗಳು ನಿರ್ಮೂಲವಾಗಲೇ ಬೇಕು. ಆಗ ಪರಮ ಪ್ರಜ್ಞೆಯು ಪ್ರಕಟವಾಗುವುದು, ಮಬ್ಬಿನಂತೆ ಮುಸುಕಿ ಬರುವ ಅವಿದ್ಯಾಸ್ಮಿತಾದಿಗಳು, ವೈರಿಗಳಂತೆ ಏರಿಬರುವ ಕಾಮಾದಿಗಳು, ಪಾಶ ಗಳಂತೆ ಬಿಗಿದು ಬೀಗಿ ಬರುವ ಹಮ್ಮು ಬಿಮ್ಮುಗಳು ಬಿಟ್ಟು ತೊಲಗದೆ ಪರಮ ಚಿ ತ್ಕ ಳೆ ಯು ಪ್ರಕಾಶಿಸದು. ಪರಮಾರ್ಥಸತ್ತೆಯು ಪರಿಪೂರ್ಣಗೊಳ್ಳದು. ಮಹಾವಿಭುತ್ವವು ಮೈಗೂಡದು. ದಿವ್ಯದರ್ಶನ ಶಕ್ತಿಬಾರದು, ಸಮದರ್ಶಿತ್ವ-ಸರ್ವಾದರ್ಶತ್ವ ಸಮನಿಸವು.

ಬುದ್ಧಿಯಿಂದ ಮಾನವತೆಯು, ಬುದ್ಧಿಯೋಗದಿಂದ ಮಾಹೇಶ್ವರತೆಯು. "ಬುದ್ಧಿಯೋಗಾತ್ತದಾಸಕ್ತೋ ಭಕ್ತೋ ಮಾಹೇಶ್ವರಃ ಸ್ಮೃತಃ" ಇಂತಹ ಬುದ್ಧಿ ಯೋಗವಿಲ್ಲದಿದ್ದರೆ ಕ್ರಿಯಾಯೋಗವು ಜಡವಾಗುತ್ತದೆ. ಅಂತೆಯೆ ಕ್ರಿಯಾಯೋಗವಿಲ್ಲದ ಬುದ್ಧಿಯೋಗವು ಶುದ್ಧ ಭ್ರಾಂತಿಯೆನಿಸುತ್ತದೆ. ಇದರಿಂದಾಗಿ ಬರಿಯ ಕ್ರಿಯೆ ಕುರುಡ, ಬರಿಯ ಜ್ಞಾನ ಹೆಳವ ಎಂದು ಹೇಳುವು ದುಂಟು. ಕ್ರಿಯಾಜ್ಞಾನಗಳೆರಡರಿಂದ ಕೂಡಿದ್ದೇ ಬುದ್ಧಿ ಯೋಗ. ಇದ ರಿಂದ ಭಕ್ತನು ಮಾಹೇಶ್ವರನೆನಿಸುತ್ತಾನೆ.

ಜಲಾಂಗವೊಂದು ಜಲಾಶಯ. ಪ್ರವಹಿಸುವ ಹಿರಿದಾದ ಹೊಳೆ. ಸೆಳೆ ದೊಯ್ಯುವ ಹೆದ್ದೊರೆ. ಹೋಗುವ ಹೊಲಬಿಗೆ ಅಡ್ಡಾಗಿ ಹೆದ್ದೆರೆಗಳಿಂದ ತುಂಬಿ ಹರಿವ ತೊರೆ, ನಡೆದು ದಾಂಟಲು ಆಗದು. ನಿಷ್ಠೆಯೆಂಬ ಹರಿಗೋಲಿ ಲ್ಲದೆ, ನಿಜಗುರು ದೇವನೆಂಬ ಅಂಬಿಗನಿಲ್ಲದೆ ಆಚೆಯ ದಡವಮುಟ್ಟಲು ಬಾರದು. ಗುರುವೆಂಬ ಅಂಬಿಗನ ನಂಬದೆ ಅಂತಃಕರಣದಲ್ಲಿ ಆತನಿಗಿಂಬಿಲ್ಲದೆ ಅದೆಂದಿಗೂ ಮುಳುಗದೆ ಉಳಿಯಲು, ಮೇಲೆ ತೇಲಲು ಸಾಧ್ಯವಿಲ್ಲೆಂಬುದನ್ನು ಮಹಾದೇವಿ ಯಕ್ಕಗಳು ಮುದ್ದಾಗಿ ಬಣ್ಣಿಸಿದುದನ್ನು ಕೇಳಬನ್ನಿ !

"ನಂಬಿದೆ ಗುರುವೇ ನಂಬಿದೆ, ನಂಬಿದೆ ಸ್ವಾಮಿ ।
ನಂಬಿದೆ ಅಂಬಿಕಾರಮಣ-ನೀನಂಬಿಗ ! ॥ಪ॥

ಹೊಳೆಯು ಬರವ ನೋಡಂಬಿಗ ! ಸೆಳಹು ಬಹಳ ಕಾಣಂಬಿಗ !
ಸುಳುಹಿನೊಳಗೆ ಬಿದ್ದೆನಂಬಿಗ ! ಎನ್ನ–ಸೆಳೆದುಕೊಳ್ಳೋ ನೀನಂಬಿಗ !

ಆರು ತೆರೆಯ ನೋಡಂಬಿಗ ! ಬಲು–ಮೀರಿ ಬರುತಲಿವೆ ಅಂಬಿಗ !
ಹಾರಲೊದೆದು, ಎನ್ನ ತಡಿಗೊಯ್ಯೋ ನೀ–ದೂರ ಮಾಡದಿರು ಅಂಬಿಗ!

ತುಂಬಿದ ಹರುಗೋಲಂಬಿಗ ! ಅದ-ಕೊಂಬತ್ತು ಛಿದ್ರ ನೋಡಂಬಿಗ !
ಸಂಭ್ರಮವನು ನೋಡಂಬಿಗ ! ಇದ-ರಿಂಬರಿದು ತೆಗೆಯಂಬಿಗ !

ಹತ್ತು ಹತ್ತು ನೋಡಂಬಿಗ ! ಹತ್ತಿದರೈವರು ಅಂಬಿಗ !
ಮುತ್ತಿಗೆಗೊಳಗಾದೆ ನಂಬಿಗ ! ಎನ್ನ-ನೆತ್ತಿಕೊಳ್ಳೋ ನೀನಂಬಿಗ !

ಸತ್ಯವೆಂಬ ಹುಟ್ಟಂಬಿಗ ! ಸದ್—ಭಕ್ತಿಯೆಂಬ ಪಥವಂಬಿಗ !
ನಿತ್ಯಮುಕ್ತ ನಮ್ಮ ಚನ್ನಮಲ್ಲಿಕಾರ್ಜುನನ, ಮುಕ್ತಿಮಂಟಪಕೊಯ್ಯೋ-
ಅಂಬಿಗ !

ಜೀವನದಲ್ಲಿ ಜಲಾಂಗದ ಸೆಳತವೇ ಸೆಳತ. ಅದರಲ್ಲಿ ಕೊಚ್ಚಿ ಹೋಗದ ಮಾನವರಿಲ್ಲ. ಏರುಂಜವ್ವನ ಪ್ರವಾಹಕ್ಕೆ ಸಿಕ್ಕದವರು ಯಾರು ? ಅಂಥ ಪ್ರೀತಿಯಲ್ಲಿ ಮತಿಮಂದರಾಗಿ ಜಡ ಜೀವಿಗಳಾಗಿ ಸುಳಿ—ಸುಳುಹು—ಸೆಳಹುಗಳಿಗೆ ಸಿಕ್ಕಿ ಕಜ್ಜಲ ಕುಡಿದು ಕಣ್ಬಡುವ ಪರಿಗೆ ಗುರಿಯಾಗದಿರುವವರು ಯಾರು? ಆರು ತೆರೆಗಳ ಅಬ್ಬರಕ್ಕೆ ಅಳುಕದವರು ಯಾರು ? ಹೀಗಿರುವಾಗ ಬೇರೆ ನೆರವು ಯಾರು ? ಎಲ್ಲರೂ ಅದರಲ್ಲಿ ಬಿದ್ದು ಮುಮ್ಮುಳುಗಿ ಮಮ್ಮಲ ಮರುಗಿ ಕೊರಗಿ ಅರಚುತ್ತಿರುವಾಗ ಕೈವಿಡಿದು ಎತ್ತುವವರು ಯಾರು ? ಜಡತೆಯನ್ನು ತೊಡೆದು ಹಗುರಾಗಿಸಿ ತೇಲಿಸುವವರು ಯಾರು ? ಆಚೆಯ ದಡಕ್ಕೆ ಒಯ್ದು ಉಪಚರಿಸಿ ಪ್ರಸನ್ನತೆಯನ್ನು ಪ್ರಸಾದಿಸುವವರು ಯಾರು ? ಅವನೊಬ್ಬನೇ ಕರುಣಾಳು ಶ್ರೀಗುರು. ಅವನು ಮಂತ್ರ ಹೃದಯಿ. ಅರಿವಿನಂಗನೆಯ ಒಡೆಯ. ಸಚ್ಚಿದಾನಂದವೆಂಬ ತೀರಕ್ಕೊಯ್ಯುವ ಅಂಬಿಗ ! ಅವನನ್ನು ನಂಬಿ ನಚ್ಚಿದವರನ್ನು ಭವದ ಹೊಳೆಯ ಸುಳುಹಿನಿಂದೆತ್ತಿ ಸೆಳಹಿನಿಂದ ಪಾರು ಮಾಡುವ ಬೆಂಬಲಿಗ ! ನಿಜಜ್ಞಾನವನ್ನು ಕರುಣಿಸುವ ಗುರುವನ್ನು ಬಿಟ್ಟು ಬೇರೆ ಯಾರು

ಉದ್ಧಾರಕರಿಲ್ಲ. ಬೇರೆ ಯಾರು ಹತ್ತಿರದವರಿಲ್ಲ. ನಂಬಿದವರಿಗಿಂಬುಗೊಡುವವನು ಶ್ರೀಗುರುವೊಬ್ಬನೆ! ಗತಿಗೊ ಗತಿಹೀನರಿಗೆಡುವವನು ಅವನೊಬ್ಬನೆ! ಮತಿಹೀನರಿಗೆ ಮತಿಗೊಡುವವನೊಬ್ಬನೆ! ಅಣುವಿನಿಂದ ಮಹತ್ತಿಗೆ ಅಸತ್ತಿನಿಂದ ಸತ್ತಿಗೆ ಅಚಿತ್ತಿನಿಂದ ಚಿತ್ತಿಗೆ ನಡೆಯಲು ಶಕ್ತಿಕೊಡುವವನು ಅವನೊಬ್ಬನೆ! ಸಹಜ ಮಾಟಸ್ಥಲದಲ್ಲಿ ನಿಂತ ಭಕ್ತನನ್ನು ಕೈವಿಡಿದು ಕರೆತಂದು ಮಾಹೇಶ್ವರಸ್ಥಲ ಸಂಪನ್ನನಾಗಿಸಿ ಲಿಂಗನಿಷ್ಠೆಯ ನಿಬ್ಬರಗಿನಲ್ಲಿ ಗಟ್ಟಿಗೊಳ್ಳುವಂತೆ ಮಾಡಿದ ಮಹಾಬಂಧು ದಯಾಸಿಂಧು ಶ್ರೀ ಗುರುದೇವನೊಬ್ಬನೆ! ಪ್ರಾಕೃತಿಕ ಪೂರ್ವಾಶ್ರಯಗಳನ್ನೆಲ್ಲ ಪರಿಹರಿಸಿ ನಿಜದ ನಿಲವನ್ನು ತಿಳಿಸಿ ಮನದ ಸಂಶಯವಳಿಸಿ ಚಂಚಲವನುಡುಗಿಸಿ ಲಿಂಗಸಂಗದಿಂದ ಸರ್ವಾಂಗ ಮಂಗಳಮಯವಾಗಿಸುವಾತನು ಶ್ರೀ ಗುರುದೇವನೊಬ್ಬನೆ! ಮಾಂಸ ತುಂಬಿದ ಮೈಯಲ್ಲಿ ಮಂತ್ರವನ್ನು ತುಂಬಿ ಮಂತ್ರಮೂರ್ತಿಯನ್ನು ನಾಲಗೆಯ ನೆಲೆಯಲ್ಲಿ ನಿಲ್ಲಿಸಿ ಸ್ವಾಧಿಷ್ಠಾನವನ್ನು ಶೋಧಿಸಿ ತನಗೆ ಅಧಿಷ್ಠಾನ ತಾನೇ ಆಗುವಂತೆ ಅನುಗ್ರಹಿಸುವಾತನು ಗುರುದೇವನೊಬ್ಬನೆ! ತ್ಯಾಗಾಂಗಕ್ಕೆ ಒಳ್ಳೆಯ ಗಂಧವನ್ನು ಒಳ್ಳೆಯ ರಸವನ್ನು ತುಂಬುವನು. ಉತ್ತಮಾಚಾರ—ಉನ್ನತ-ವಿಚಾರಗಳನ್ನು ಉಪದೇಶಿಸುವನು. ವೀರ ಸ್ವಭಾವವನ್ನು ತ್ಯಾಗಗುಣವನ್ನು ತುಂಬುವನು. ಬಾಳಿನ ಎಲ್ಲ ಸಮಸ್ಯೆಗಳನ್ನು ಬಿಡಿಸಿ ಬದುಕನ್ನು ಸಾರ್ಥಕಗೊಳಿಸುವನು. ದೇಹ-ಚಿತ್ತ-ಬುದ್ಧಿಗಳ ಜಡ ಬಂಧನವನ್ನು ಬಿಡಿಸುವನು. ಆದ್ದರಿಂದು ಶ್ರೀ ಗುರು ಕೋವಿದ ಚಕ್ರವರ್ತಿಯೆಂದು ಹೆಸರಾಗಿರುವನು. ಅಂತೆಯೇ ಷಟ್‌ಸ್ಥಲ ಚಕ್ರವರ್ತಿಯೆಂದೂ ಹೆಸರಾಂತಿರುವನು. ಈ ಗುರುವೇ ಗುರುಲಿಂಗವಾಗಿ ಪರಿಣಮಿಸುವನು. "ಆಚಾರೋಽಯಂ ದೇಹ ಆತ್ಮಾ ಗುರುಃ...." ದೇಹವೇ ಆಚಾರಲಿಂಗ, ಆತ್ಮವೇ ಗುರುಲಿಂಗವೆಂದು ಮೊಗ್ಗೆಯ ಮಾಯಿವಿಭು ತನ್ನ ವಿಶೇಷಾರ್ಥ ಪ್ರಕಾಶಿಕೆಯಲ್ಲಿ ಉಲ್ಲೇಖಿಸಿದ್ದಾನೆ. ಆತ್ಮ ಅಂದರೆ ಚೈತನ್ಯವೇ ಗುರುಲಿಂಗವೆಂಬುದು ಸ್ಪಷ್ಟವಾಗಿ ಗುರುಲಿಂಗದ ಹಿರಿಮೆ ಹೃದ್ಗೋಚರವಾಗುತ್ತದೆ.

ಬುದ್ಧಿ ಬಂಧನವೆಂದರೆ ಸಂಕುಚಿತ ವಿಚಾರ; ಸ್ವಾರ್ಥ ವಿಚಾರ. ಇವೆರಡನ್ನು ದಾಟಿ ಮಾಹೇಶ್ವರನ ಬೌದ್ಧಿಕ ವಿಚಾರ ವಿಶ್ವದಗಲವಾಗಬೇಕು. ಅಷ್ಟೇ ಅಲ್ಲ. ವಿಶ್ವಾಧಿಕವಾಗಬೇಕು. ಮಾಹೇಶ್ವರನ ವಿಚಾರ ವಾಹಿನೀ ವಿಶುದ್ಧವಾಗಿ

ವಿಶಾಲವಾಗಿ ಹಬ್ಬಿ ಹರಿಯಬೇಕು ವಿಶ್ವಕುಟುಂಬಿಯಾಗಿ ಬಾಳಬೇಕು. ಸ್ವಾವಲಂಬಿಯಾಗಿ ಬದುಕಬೇಕು. ಬುದ್ಧಿ ಶಕ್ತಿಲಯವಾಗುವುದೇ ಲಕ್ಷ್ಯ ಅಥವಾ ಮೋಕ್ಷ ಎಂದು ವೇದಾಂತಮತ. ಶುದ್ಧ ಬುದ್ಧಿ ಶಕ್ತಿಯ ವೃದ್ಧಿಯೇ ಲಕ್ಷ್ಯವೆನ್ನುವುದು ಶಿವಾದ್ವೈತ.

ಜಗತ್ತಾದುದು ಜಗದೀಶನಿಂದ ! ಜಗತ್ತು ಜೀವಿಸಿರುವುದು ಜಗದೀಶ ನಿಂದ ! ಅಂತಹ ಆ ಜಗದೀಶನಾದ ಮಹೇಶನ ಆರಾಧಕನಾದ ಮಾಹೇಶ್ವರನು ಅಖಂಡ ಜಾಗತಿಕ ಮನೋಭಾವವನ್ನು ಬೆಳಸುವುದು ಹೆಚ್ಚು ಅಚ್ಚರಿಯ ಮಾತೇ ನಲ್ಲ. ಎಲ್ಲ ಮಾನವ ಕೋಟಿಯು ಒಂದು, ಒಬ್ಬ ದೇವನ ಮಕ್ಕಳು, ಯಾರಿಗೂ ನೋವಾಗಬಾರದು, ಯಾರೂ ಅನೀತಿಗೆ ಒಳಗಾಗಬಾರದೆಂದು ಬಗೆಯುವುದೇ ಮಾಹೇಶ್ವರನ ಮುಖ್ಯ ಧ್ಯೇಯ. ಮಾಹೇಶ್ವರನ ನಿಷ್ಠೆ ಮಾನ ವಿಯ ಅಭ್ಯುದಯ ನಿಷ್ಠೆ. ಮಾನವೀಯ ನೈತಿಕ ನಿಷ್ಠೆ; ಸಾಂಸ್ಕೃತಿಕ ನಿಷ್ಠೆ.

ಎಲ್ಲರೂ ದೈವೀಭಕ್ತರಾಗಿ ಬಾಳಬೇಕು. ದೈವೀಶಕ್ತಿಯಿಂದ ಬದುಕ ಬೇಕು. ಭವಿಗಳಾಗಿ ನಾಸ್ತಿಕರಾಗಿ ಯಾರೂ ಬಾಳಬಾರದು. ದೈವೀ ಭಕ್ತ ರಲ್ಲಿ ಬಣ ಭಾಷೆ ಕುಲ ಗೋತ್ರ ಮುಂತಾದ ಭೇದಗಳನ್ನು ಎಣಿಸಬಾರದು. ಎಲ್ಲರೂ ಪರಮ ಪವಿತ್ರರೆಂದು ದೇವಪುತ್ರರೆಂದು ತಿಳಿಯಬೇಕು. ಏಕೆಂದರೆ ವಿಶ್ವವನ್ನೆಲ್ಲ ಬಳಸಿಕೊಂಡಿರುವ ಸಚ್ಚೈತನ್ಯ ಒಂದೇ ! ವಿಶ್ವದಲ್ಲಿ ವಿಶ್ವನಾಥನ ದರ್ಶನ ಪ್ರತಿಯೊಬ್ಬರ ವಿಚಾರಮುಖದಲ್ಲಿ ಆಗಬೇಕು; ಎಂಬುದೇ ಮಾಹೇಶ್ವರನ ಬುದ್ಧಿಯೋಗದ ಮಹಾವಿಚಾರ. ಆತನ ದೃಷ್ಟಿ ವಿಶ್ವಾಧಿಕ ದೃಷ್ಟಿ; ದಿವ್ಯ ದೃಷ್ಟಿ. ಮಾಹೇಶ್ವರನು ತನ್ನ ಗುರುದೇವನಿಂದ ಅಂತಹ ಉಚ್ಚ ಸಂಸ್ಕಾರ ವನ್ನು ಉದಾತ್ತ ಶಿಕ್ಷಣವನ್ನು ಪಡೆದಿರುತ್ತಾನೆ. ತನ್ನತನದ ತ್ಯಾಗದಿಂದ ವಿಶ್ವಾ ಧಿಕಯೋಗವನ್ನು ಪಡೆದ ಪರಮಜ್ಞಾನಿ ಮಾಹೇಶ್ವರ; ಪರಮ ಕ್ರಿಯಾ ಶಾಲಿ ಮಾಹೇಶ್ವರ.

ಜೀವನ ಶಕ್ತಿಗಳಲ್ಲಿ ಜ್ಞಾನಶಕ್ತಿಯೂ ಒಂದು. ಇದು ಮಾನವ ನಲ್ಲಿ ಮಹತ್ತರವಾಗಿದೆ; ಮುಂದುವರಿದಿದೆ ಆದರೆ ಇದನ್ನು ಈ ಬಗೆಯಲ್ಲಿ

ಬೆಳಸಿಕೊಳ್ಳುವವರು ವಿರಳ. ಇದರ ಪ್ರಯೋಜನವನ್ನು ಪಡೆಯುವವರು ವಿರಳ. ತನ್ನ ಹೊರಗಿನ ವಿಚಾರಗಳೇ ಸಾಲವು. ಒಳಗಿನ ಆಳವಾದ ಅನುಭವ ತತ್ತ್ವಕ್ಕೆ ಹೋಗಿ ಹೊಂದಿಕೊಳ್ಳಬೇಕು. ಅಂತರ್ಗತ ಆ ಆತ್ಮಿಕ ಆನಂದದ ಅರಿವು ಅನುಭವಗಳನ್ನು ಪಡೆಯಬೇಕು. ದುಃಖಕಾರಣಗಳನ್ನು ಅರಿತು ದೂರೀಕರಿಸಬೇಕು. ಪ್ರತಿ ಪದಾರ್ಥವನ್ನು ಪರಮಾರ್ಥವಾಗಿ ಉಪಯೋಗಿಸಿ ಪರಿಣಮಿಸುವ ಪರಿಜ್ಞಾನವನ್ನು ಪಡೆಯಬೇಕು. ದುಃಖಕ್ಕೂ ಸುಖಕ್ಕೂ ಪದಾರ್ಥವೇ ಸಾಧನ. ಪದಾರ್ಥವನ್ನು ಪ್ರಸಾದವನ್ನಾಗಿ ಪರಿವರ್ತಿಸುವ ಪ್ರಜ್ಞೆಯನ್ನು ಪಡೆಯದಿದ್ದರೆ ಮುಂದಿನ ಪ್ರಸಾದಿಸ್ಥಲಕ್ಕೆ ಹೋಗಲು ಮಾಹೇಶ್ವರನು ತಕ್ಕವನಾಗಲಾರನು.

ತನ್ನ ಬಿಟ್ಟು ತತ್ತ್ವಜ್ಞಾನವಿಲ್ಲ. ತನ್ನ ಕ್ರಿಯೆಯನ್ನು ತನ್ನ ಜ್ಞಾನವನ್ನು ತನ್ನ ಇಚ್ಛೆಯನ್ನು ಹೆಚ್ಚಿಸಿಕೊಳ್ಳುವುದೂ ತತ್ತ್ವಜ್ಞಾನವೆನಿಸುತ್ತದೆ. ಕ್ರಿಯಾಶಕ್ತಿ ಹೆಚ್ಚಬೇಕಾದರೆ ಪಾರ್ಥಿವಾಂಗದ ಪೂರ್ಣ ಆಚಾರ ವಿಕಾಸವಾಗಬೇಕು. ಜ್ಞಾನಶಕ್ತಿ ವರ್ಧಿಸಬೇಕಾದರೆ ಸಾಲಿಲಾಂಗದ ಪೂರ್ಣ ವಿಚಾರ ವಿಕಾಸವಾಗಬೇಕು. ಆದಾಗ ಮಾಹೇಶ್ವರ ಸ್ಥಲ ಸಿದ್ಧಿ, ಕ್ರಿಯೆ, ಇಚ್ಛೆ, ಸಾಮರ್ಥ್ಯಗಳಂತೆ ಜ್ಞಾನವೂ ಶಕ್ತಿಯೆನಿಸಿದೆ. ಜ್ಞಾನ ಶಕ್ತಿಯ ವಿಕಾಸವೇ 'ಮಾಹೇಶ್ವರನ ಮಹಾಗುರಿ.

ಷಟ್‌ಸ್ಥಲ ತತ್ತ್ವದಲ್ಲಿ ಸಾಂಖ್ಯ, ದ್ವೈತ, ಅದ್ವೈತ ವಿಶಿಷ್ಟಾದ್ವೈತ ತತ್ತ್ವಗಳೆಲ್ಲವೂ ಸಮನ್ವಯಗೊಂಡಿವೆ. ಷಟ್‌ಸ್ಥಲಗಳಲ್ಲಿ ಸಾಂಖ್ಯ ತತ್ತ್ವವು ಕ್ರಮವಾಗಿ ಮುಂದುವರಿಯುತ್ತದೆ ಅಂತೆಯೇ ದ್ವೈತತತ್ತ್ವವೂ ಮುಂದುವರಿದು ಸಮರಸಗೊಳ್ಳುತ್ತದೆ. ಐಕ್ಯಸ್ಥಲದಲ್ಲ ಅದ್ವೈತವು ನೆಲಸಿರುತ್ತದೆ, ಪ್ರಾಣಲಿಂಗಿ –ಶರಣ ಸ್ಥಲಗಳಲ್ಲಿ ವಿಶಿಷ್ಟಾದ್ವೈತ ತತ್ತ್ವವು ಸಮನ್ವಯವಾಗಿರುತ್ತದೆ

'ತತ್ತ್ವ' ಈ ಪದ ತತ್‌ತ್ವ, ಎಂಬೆರಡು ಶಬ್ದಗಳಿಂದ ಹುಟ್ಟಿದೆ, ತತ್ತ್ವ ಅಂದರೆ ಅದರತನ ಎಂದರ್ಥ. ನಾವು ಯಾವುದರ ವಿಚಾರಕ್ಕೆ ಆರಂಭಿಸುತ್ತೇವೆಯೋ ಅದರ ಸತ್ಯ ಮತ್ತು ಪೂರ್ಣ ವಿಚಾರವನ್ನೇ ತತ್ತ್ವವೆಂದು ಹೇಳುವುದು. ತತ್ತ್ವಗಳು ಷಟ್‌ಸ್ಥಲದಲ್ಲಿ ಮೂವತ್ತಾರಿರುತ್ತವೆ, ಇವೆಲ್ಲದರ

ಜ್ಞಾನಾರ್ಜನೆಯೆ ತತ್ತ್ವವಿಚಾರ; ಅಥವಾ ತತ್ತ್ವಜ್ಞಾನ. ತತ್ತ್ವಜ್ಞಾನವೆಂದರೆ ಷಟ್‌ಸ್ಥಲಸಿದ್ಧಾಂತದಲ್ಲಿ ಕೇವಲ ಆತ್ಮವಿಚಾರವೊಂದೇ ಅಲ್ಲ. ಜಡ ಜಂಗಮಾತ್ಮಕ ಸರ್ವತತ್ತ್ವಗಳನ್ನು ಅಧಿಕರಿಸಿದೆ ಷಟ್‌ಸ್ಥಲಜ್ಞಾನ.

ಆ ಮಹಾದೇವನುಂಟೋ ಇಲ್ಲೋ ಎಂಬುದೊಂದು ಜಟಿಲ ಸಮಸ್ಯೆಯೆಂದು ಹಲವರು ಹೇಳುವರು, ಆದರೆ ಮಾಹೇಶ್ವರನಿಗೆ ಇದು ಸಮಸ್ಯೆಯಾಗಿ ಉಳಿಯುವುದಿಲ್ಲ. ಮಹಾದೇವನುಂಟೆಂದು ನಿಸ್ಸಂದೇಹವಾಗಿ ನಿಶ್ಚಯಿಸಿ, ನಿಷ್ಠೆಯಲ್ಲಿರುತ್ತಾನೆ. ದೇವನಿಲ್ಲದ ದೃಶ್ಯವಿಲ್ಲೆನುತ್ತಾನೆ. ಇವನು ತನ್ನ ಬುದ್ಧಿಯನ್ನು ಶುಷ್ಕತರ್ಕಕ್ಕೆ ಹಚ್ಚದೆ ಶುದ್ಧಪ್ರಬುದ್ಧ ನಿಷ್ಠೆಗೆ ನಿಲುಕಿಸುತ್ತಾನೆ. ದೇವನು ವಿಶ್ವಾತ್ಮನೆಂದು ವಿಶ್ವಾಸವನ್ನು ತಾಳುತ್ತಾನೆ. ಆ ನಿರಾಕಾರಕ್ಕೆ ಸಾಕಾರವೂ ಸ್ವರೂಪವೇ ಆಗಿರುತ್ತದೆಂದು ಭಾವಿಸುತ್ತಾನೆ. ನೀರು ಆಣೆಕಲ್ಲಾಗುವಂತೆ ನಿರಾಕಾರದೇವನು ಸಾಕಾರವಾದ ಜಗದ್ರೂಪಾಗಿರುವನೆಂದು ತಿಳಿಯುತ್ತಾನೆ. ಸಾಕಾರವನ್ನನುಸರಿಸಿಯೇ ನಿರಾಕಾರಜ್ಞಾನವನ್ನು ಪಡೆಯಲು ಪ್ರಯತ್ನಿಸುತ್ತಾನೆ. ದೇವರಿಲ್ಲ—ಜಗತ್ತು ಸುಳ್ಳು ಎಂಬೀ ಎರಡು ವಾದಗಳಲ್ಲಿ ಯಾವ ಹುರುಳಿಲ್ಲವೆಂದು ಮಾಹೇಶ್ವರನು ಚೆನ್ನಾಗಿ ಮನದಟ್ಟಾಗಿರಿಸಿಕೊಂಡಿರುತ್ತಾನೆ. ದೇವರಿಲ್ಲ-ಜಗತ್ತುಸುಳ್ಳು ಎಂಬ ಅಜ್ಞಾನ ಯಾರಲ್ಲಿಯೇ ಇದ್ದರೆ ಅದನ್ನು ಕಳೆಯಲು ಪೂರ್ಣವಾಗಿ ಪ್ರಯತ್ನಿಸುತ್ತಾನೆ. ಮತ್ತು ಮಾಹೇಶ್ವರನು ತನ್ನಲ್ಲಿ ಹಾಗು ಎಲ್ಲೆಲ್ಲಿ ದೇವರಿರುವನೆಂದು ಭಾವಿಸುತ್ತಾನೆ; ಭಾವಿಸಿದಂತೆ ದರ್ಶಿಸುತ್ತಾನೆ.

ತತ್ತ್ವಜ್ಞಾನವು ಬುದ್ಧಿಗತೀತವೆಂಬುದನ್ನು ಮಾಹೇಶ್ವರನು ಒಪ್ಪನು. ತತ್ತ್ವಜ್ಞಾನದ ಅಡಿಗಲ್ಲು ಬುದ್ಧಿತತ್ತ್ವವೆಂದು ಮಾಹೇಶ್ವರನು ತಿಳಿದಿರುತ್ತಾನೆ. ಬುದ್ಧಿಗೋಚರವಾಗದ ಆ ಅನುಭವ, ಆ ಆನಂದ ಆ ಸಾಮರಸ್ಯ ನಿಷ್ಪ್ರಯೋಜನವೆನ್ನುತ್ತಾನೆ ಮಾಹೇಶ್ವರನು. "ಅಣೋರಣೀಯಾನ್" ಆದ ಆತನು ಬುದ್ಧಿಗತೀತ ವಾಙ್ಮನಗಳಿಗೆ ಅತೀತ ಎಂದು ಹೇಗೆ ಹೇಳುವುದು ? ಅವನು ಇವೆಲ್ಲವನ್ನು ಬಳಸಿಕೊಂಡಿರುವನು; ತೆರಹಿಲ್ಲದೆ ತುಂಬಿಕೊಂಡಿರುವನು, "ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಕಿವಿಯಲ್ಲಿ ಕೀರುತಿ

ತುಂಬಿ, ಮನದಲ್ಲಿ ನೆನಹು ತುಂಬಿ, ಕೂಡಲಸಂಗಮದೇವಾ, ನಿಮ್ಮ ಚರಣ ಕಮಲದೊಳಗಾನು ತುಂಬಿ."

ಎಲ್ಲೆಲ್ಲಿ ಹೇಗೆ ಹೇಗೆ ಇರುವನೆಂಬುದನ್ನು ಬಸವಣ್ಣನವರ ಈ ವಚನವು ಸೊಗಸಾಗಿ ನಿರೂಪಿಸಿದೆ. ಇಲ್ಲೆಲ್ಲ ಇರುವ ಆ ದೇವನು ಬುದ್ಧಿಯಲ್ಲಿರಲಾರನೆ? ನಿಷ್ಠೆಯುಳ್ಳ ಬುದ್ಧಿಗೆ ನಿಲುಕಲಾರನೆ? ವಿಚಾರಸ್ವರೂಪನಾದ ದೇವನು ಬುದ್ಧಿಯಲ್ಲಿ ವಿಚಾರರೂಪದಲ್ಲಿರುವನು. ಆದ್ದರಿಂದ ಯಥಾರ್ಥ ಜ್ಞಾನವಾಗಲು ಸಾಧ್ಯ. ಇಲ್ಲವಾದರೆ ತತ್ತ್ವಜ್ಞಾನಕ್ಕೆ ಅವಕಾಶವೇ ಇಲ್ಲದಂತಾಗಬೇಕಾದೀತು? ಜ್ಞಾನ, ವಿಜ್ಞಾನ, ಮಹಾಜ್ಞಾನಗಳಿಗೆ ಅವಕಾಶವಿಲ್ಲದಂತಾದೀತು ?

ಸ್ಥಿರಬುದ್ಧಿಯುಳ್ಳವನಿಗೆ ಯಾವುದೂ ಅಸಾಧ್ಯವಿಲ್ಲೆನ್ನುತ್ತಾನೆ ಷಟ್‌ಸ್ಥಲ ಜ್ಞಾನಿ. ಸರ್ವಸಮತ್ವಭಾವವೇ ಸ್ಥಿರಬುದ್ಧಿಯೆಂದು ಬುದ್ಧಿಯೋಗವೆಂದು ಹೇಳುತ್ತಾನೆ. ಇದಕ್ಕಿಂತ ಹೆಚ್ಚಿನ ಸಾಮರಸ್ಯ ಅಥವಾ ಮುಕ್ತಿ ಬೇರಿಲ್ಲ. ಸುಖ-ದುಃಖಾದಿ ಸರ್ವದ್ವಂದ್ವಗಳನ್ನು ಸಮಗಾಣುವುದೇ ಸ್ಥಿರಬುದ್ಧಿ ಅಥವಾ ಸರ್ವಸಮಭಾವ. ಈ ಬಗೆಯ ಸ್ಥಿರಬುದ್ಧಿಯೇ ಅಂದರೆ ಸ್ಥಿತಪ್ರಜ್ಞೆಯೇ ಮಾಹೇಶ್ವರನ ಜೀವಾಳ.

ಸರ್ವವು ಶಿವಮಯವಾಗಿದೆಯೆಂಬುದನ್ನು ಒಪ್ಪುವುದಾದರೆ ಆ ಸರ್ವದರಲ್ಲಿ ಬುದ್ಧಿಯೂ ಒಂದಾಗಿದೆಯೆಂಬುದನ್ನು ಒಪ್ಪಲೇಬೇಕು. ಅಂತೆಯೇ ಬುದ್ಧಿಯೂ ಶಿವಸ್ವರೂಪವಾಗಬಲ್ಲುದು. ಈ ದೃಷ್ಟಿಯಿಂದ ಬುದ್ಧಿಗತೀತವೆಂಬುದನ್ನು ಒಪ್ಪುವುದು ಹೇಗೆ? ಸರ್ವಾಂತರ್ಯಾಮಿಯಾದ ಆ ದೇವನು ಬುದ್ಧಿಗೆ ಅಗೋಚರನೆಂದು ಹೇಗೆ ಹೇಳುವುದು ?

ಸತ್ಯದ ಜ್ಞಾನವನ್ನು ಪಡೆವ ಕರಣ ಬುದ್ಧಿ. ಇದನ್ನು ಪಡೆದು ಸ್ಥಿರಬುದ್ಧಿಯುಳ್ಳವನಾಗುತ್ತಾನೆ ಮಾಹೇಶ್ವರನು. ಮಾಹೇಶ್ವರನ ಮಹಾದೃಷ್ಟಿಯಲ್ಲಿ ಸತ್ಯದ ವಿಚಾರವನ್ನು ಮಾಡದವರೇ ನಾಸ್ತಿಕರು. ಸತ್ಯದ ವಿಚಾರದಲ್ಲಿ ನಿರತರಾದವರೇ ಆಸ್ತಿಕರು. ಸತ್ಯವಿಚಾರವು ಸ್ಥಿರವಾಗದೆ ಶಾಂತಿಯೊದಗದು. ಆ ಸತ್ಯಜ್ಞಾನವು ಸರ್ವರಿಗೂ ಸಮನಿಸಲಾರದು; ಸುಲಭವಾಗಿ ಸಮನಿಸಲಾರದು.

ಸತ್ಯಜ್ಞಾನವಾಗದೆ ಸತ್ಯಸುಖ ಸಿಗದು. ಸತ್ಯಸುಖಸಿಗದೆ ಸಹಜಸ್ವಭಾವ ಸಂಪ್ರಾಪ್ತವಾಗದು. ಸಹಜಸ್ವಭಾವವೇ ಸಾಮರಸ್ಯ; ಅಥವಾ ಕೈವಲ್ಯಸ್ಥಿತಿ.

ಆ ಸತ್ಯಾನ್ವೇಷಣೆಗೆ ಭಕ್ತಿಕ್ರಿಯೆ ಜ್ಞಾನಗಳು ಅಗತ್ಯ. ಭಕ್ತಿ ಶ್ರದ್ಧೆಯಿಂದ ಪ್ರಾರಂಭವಾಗುತ್ತದೆ. ಭಕ್ತಸ್ಥಲಕ್ಕೆ ಶ್ರದ್ಧಾಭಕ್ತಿ ಹೇಗೆ ಅಗತ್ಯವೊ ಮಾಹೇಶ್ವರ ಸ್ಥಲಕ್ಕೆ ನಿಷ್ಠಾಭಕ್ತಿ ಅಗತ್ಯ. ಜತೆಗೆ ಜ್ಞಾನಶಕ್ತಿ ಅಗತ್ಯ; ಆದರೆ ವೇದಾಂತಿಯಂತೆ ಮಾಹೇಶ್ವರನು ಕೇವಲ ಜ್ಞಾನವನ್ನು ಅವಲಂಬಿಸುವುದಿಲ್ಲ. ಭಕ್ತಿ ಕ್ರಿಯೆಗಳಿಂದೊಡಗೂಡಿದ ಜ್ಞಾನವನ್ನು ಬಳಸಿಕೊಳ್ಳುತ್ತಾನೆ; ಬೆಳಸಿಕೊಳ್ಳುತ್ತಾನೆ. ಆದ್ದರಿಂದ ಈತನ ಜ್ಞಾನ 'ಶಕ್ತಿ' ಯೆನಿಸುತ್ತದೆ. ಸತ್ವಶಾಲಿಯಾಗಿರುತ್ತದೆ. ಜಗತ್ತು ಜೀವ ಈಶ್ವರ ಈ ಮೂರರ ನಿಜದರಿವೇ ಜ್ಞಾನಶಕ್ತಿ; ಅಂಗ–ಲಿಂಗ, ಭಕ್ತಿ–ಶಕ್ತಿಗಳ ತಿಳುವಳಿಕೆಯೆ ಜ್ಞಾನಶಕ್ತಿ. ಅನೇಕದಲ್ಲಿ ಏಕತ್ವವನ್ನು, ಏಕದಲ್ಲಿ ಅನೇಕತ್ವವನ್ನು ಅರಿಯುವುದೇ ಅಖಂಡಜ್ಞಾನಶಕ್ತಿ. ಇವೆಲ್ಲವುಗಳ ಅನುಭವವೇ ಸಾಕ್ಷಾತ್ಕಾರ, ಇದರಿಂದ ಶ್ರೇಯಸ್ಸು.

ಶಿವಾದ್ವೈತದ ಮಾಹೇಶ್ವರಸ್ಥಲದಲ್ಲಿ ಭೇದಾಂಗೀಕಾರವಿರುವುದರಿಂದ ಲಿಂಗ ಈಶ್ವರಾದಿಗಳು ಜ್ಞೇಯವಾಗಿವೆ; ಜ್ಞಾನ ಸಾಪೇಕ್ಷಿತವಾಗಿವೆ. ಪರಿಮಿತವಾಗಿ ಜ್ಞಾನಮೇಯವಾಗಿವೆ. ತ್ರಿಪುಟಿಭಾವವುಂಟಾಗಿ ಆರಾಧನೆಗೆ ಅನುಕೂಲವಾಗಿವೆ. ಶ್ರುತಿಗಳಲ್ಲಿ 'ಅಲಿಂಗ' ಎಂದು ಹೇಳುವುದು ಪೂರ್ಣನಿಷೇಧವಲ್ಲ. ಲಿಂಗರೂಪಕ್ಕೆ ಬಾರದ್ದೆಂದರ್ಥ.

ಅದ್ವೈತದಲ್ಲಿ ಜ್ಞಾನ ಅಗತ್ಯವಿಲ್ಲ; ಏಕೆಂದರೆ ಅಲ್ಲಿ ಅನ್ಯವಾಗಿ ಇರುವುದಿಲ್ಲ. ತ್ರಿಪುಟಿ ರಹಿತವಾಗಿ ಜ್ಞಾನ-ಜ್ಞೇಯಗಳೆರಡೂ ಜ್ಞಾತೃವಿನಲ್ಲಿ ಐಕ್ಯಗೊಂಡಿರುವಾಗ ಜ್ಞಾನದ ಮಾತಿಲ್ಲ; ಜ್ಞಾನದ ಕೆಲಸವಿಲ್ಲ. ಅದ್ವೈತವು ಅದೆಂದಿಗೂ ಜ್ಞೇಯವಲ್ಲ. ಜ್ಞಾನ ಭಿನ್ನವಾಗಿರಲು ವೇದಾಂತದಲ್ಲಿ ಅವಕಾಶವಿಲ್ಲ. "ಜೀವೋ ಬ್ರಹ್ಮೈವ ನಾಪರಃ" ಜ್ಞಾತೃ-ಜ್ಞೇಯಗಳು ಭಿನ್ನವಲ್ಲವೆಂದು ವೇದಾಂತ ಸಾರುತ್ತಿದೆ. ಜಗನ್ಮಿಥ್ಯೆಯೆಂದು ಜರಿದಿದೆ, ಅದರಲ್ಲಿ ದ್ವೈತಕ್ಕೆ ಸ್ಥಾನವಿಲ್ಲ. ಅಲ್ಲಿ ಜ್ಞಾನವೆಂದರೆ ಬ್ರಹ್ಮವೆಂದೇ ಅರ್ಥ. ಅಲ್ಲಿ ಆರಾಧನೆಗೆ ಇಂಬಿಲ್ಲ. ಅಲ್ಲಿ ಬಂಧ ಮೋಕ್ಷಗಳೇ ಇಲ್ಲ. ಎಲ್ಲವೂ ಸುಳ್ಳೆನ್ನುವಾಗ ಬಾಧವೆಲ್ಲಿ ? ಬಂಧ

ವಿಲ್ಲದ ಬಳಿಕ ಮೋಕ್ಷವೆಲ್ಲಿ ? ವಿಸ್ತಾರಗೊಂಡ ವೇದಾಂತಶಾಸ್ತ್ರವೆಲ್ಲ ವ್ಯರ್ಥ. ಹೀಗಿದ್ದರೂ ಜ್ಞಾನಿಯಾಗಬೇಕು; ಜ್ಞಾನದಿಂದ ಕೈವಲ್ಯ ಎಂದು ಹೇಳುವು ದುಂಟು. ಇದು ಎಷ್ಟಕ್ಕೂ ಸಮಂಜಸವೆನಿಸದು. ಅಸಂಬಂಧ ದೋಷ ದೂಷಿ ತವದು. ಈ ದೋಷ ಶಿವಾದ್ವೈತದಲ್ಲಿಲ್ಲ. ಮಾಹೇಶ್ವರನು ದ್ವೈತಿ. ಗುರು ಲಿಂಗೋಪಾಸನವನ್ನು ಮಾಡುವ ಜ್ಞಾನಿ.

ಶಿವಾದ್ವೈತದಲ್ಲಿ ಜಗತ್ತು ಸತ್ಯ. ಇದು ಶಕ್ತಿ (ಪ್ರಕೃತಿ)ಯ ವಿಕಾಸವೂ ಆಹುದು; ಶಿವನ ಆವಿರ್ಭಾವವೂ ಅಹುದು. ಹೇಗೆಂದರೂ ಒಂದೇ ! ಬ್ರಹ್ಮ-ಬ್ರಹ್ಮಾಂಡಗಳಿಗೆ ಇಲ್ಲಿ ಸಾಮ್ಯವಾದವಿದೆ. ಜ್ಞಾನ ಗಮ್ಯತೆಯಿದೆ. "ಚೈತನ್ಯವೇ ಸಂಘಾತದಿಂದ, ಮರ್ಯಾದಿತತೆಯಿಂದ ಮತ್ತು ಆತ್ಯಂತಿಕ ಕೇಂದ್ರೀಕರಣದಿಂದ ಜಡವಾಗಿದೆ. ಇದು ಚೈತನ್ಯ ಕೆಳಮಟ್ಟಕ್ಕೆ ಇಳಿದ ರೀತಿಯಾಯಿತು. ವಿಕಸನ ಪದ್ಧತಿಯಿಂದ ಜಡವು ಮತ್ತೆ ಚೈತನ್ಯವಾದೀತು." ಎಂದು ಶ್ರೀ ಭಾ. ವೆಂ. ದೇಶಪಾಂಡೆಯವರು 'ಭಾರತೀಯ ಸಂಸ್ಕೃತಿಯ ಹಿರಿಮೆ' ಎಂಬ ತಮ್ಮ ಕೃತಿ ಯಲ್ಲಿ ಉದ್ಧರಿಸಿದ್ದಾರೆ. ಈ ವಿಜ್ಞಾನ ಕಾಲದ ಮಾತಿನಲ್ಲಿಯೂ "ಜಡವು ಮತ್ತೆ ಚೈತನ್ಯವಾದೀತು' ಎಂಬುದಾಗಿ ಕೊಂಚ ಕೊರತೆಯನ್ನು ಕಾಣಿಸುತ್ತದೆ. "ಶಿವ ಏವ ಚರಾಚರಂ" ಎಂದು ಜಗದಾಚಾರ್ಯ ರೇಣುಕ ಶಿವಾಚಾರ್ಯರು ಎಂದೋ ನಿರ್ಧರಿಸಿ ಹೇಳಿದ್ದಾರೆ—ಜಡವೂ ಚೇತನವಾಗುತ್ತದೆ; ಆಗಿಯೇ ಇದೆ—ಎಂದು ! ಈ ಜ್ಞಾನಶಕ್ತಿ ಈ ಜ್ಞಾನ ಸಿದ್ಧಾಂತ ಮಾಹೇಶ್ವರನಲ್ಲಿ ಮೈದುಂಬಿರುತ್ತದೆ.

ನೆಲಜಲಗಳಿಂದ ಮುಖ್ಯವಾಗಿ ರೂಪಿತವಾದ ತ್ಯಾಗಾಂಗವನ್ನು ತತ್ತ್ವಮ ಯವಾಗಿಸುವ ಅಧಿಕಾರಿ ಮಾಹೇಶ್ವರ. ಅಂತೆಯೆ ಜಡ ಜಗತ್ತನ್ನೂ ಜಗದೀಶ್ವರನ ಸ್ವರೂಪವನ್ನಾಗಿ ಅರಿಯುವಾತನು ಮಾಹೇಶ್ವರನು. ಮಾನವ ಜೀವನದ ಅವಶ್ಯ ಗಳನ್ನೆಲ್ಲ ಒದಗಿಸುವ ಜಗತ್ತನ್ನು ಜಡಾಂಗವನ್ನು ಧಿಃಕರಿಸುವ ಹೀನ ಮನೋ ಭಾವ ಮಾಹೇಶ್ವರನದಲ್ಲ. ಮಾಹೇಶ್ವರನ ಜ್ಞಾನಶಕ್ತಿಗೆ ಇದು ಉಚಿತವಲ್ಲ. ಮಾಹೇಶ್ವರನ ವೈಚಾರಿಕ ಶಕ್ತಿ, ಬೌದ್ಧಿಕ ಸಿದ್ಧಾಂತ ಆದರ್ಶವಾಗಿವೆ; ಆಲೋಚ ನೀಯವಾಗಿವೆ. ಜೀವನಕ್ಕೆ ನೆರವಾದ ಜಗತ್ತನ್ನು ಸ್ಥೂಲ ದೇಹವನ್ನು ಕಾಣುವ ಕಂಡ ದೃಷ್ಟಿ ದೂರಾಲೋಚನೆಯುಳ್ಳುದು ದಿವ್ಯವಾದುದು ಆಗಿದೆ. ವಿಶ್ವವನ್ನು ಬಿಟ್ಟು ವಿಶ್ವೇಶ್ವರನನ್ನು ಕಾಣುವ ಸಾಹಸ ಅಕ್ಕಿಯನ್ನು ಬಿಟ್ಟು ಅನ್ನವನ್ನು ಕಾಣ

ಬಯಸಿದಂತೆ ! ಅನ್ನ ಬ್ರಹ್ಮವಾದಂತೆ ಆ ಅನ್ನವನ್ನು ಉತ್ಪಾದಿಸುವ ಸ್ಥಾವರ ಜಗತ್ತೂ ಬ್ರಹ್ಮಸ್ವರೂಪವಾಗಿದೆ.

ದೃಷ್ಟಿಯಂತೆ ಸೃಷ್ಟಿ, ಸೃಷ್ಟಿಯಂತೆ ದೃಷ್ಟಿ–ಎಂಬ ಸಮನ್ವಯ ವಾದ ಮಾಹೇಶ್ವರನದು. ಇವೆರಡೂ ಪರಸ್ಪರ ಪೂರಕವಾಗಿವೆ; ಪ್ರೇರಕವಾಗಿವೆ. ದೃಷ್ಟಿಯಿಂದ ಸೃಷ್ಟಿ ಅಸ್ತಿತ್ವವನ್ನು ಪಡೆದಿದೆ; ಅಂತೆಯೇ ಸೃಷ್ಟಿಯಿಂದ ದೃಷ್ಟಿ ಅಸ್ತಿತ್ವವನ್ನು ಪಡೆದಿದೆ. ದೃಷ್ಟಿಯಿದ್ದಂತೆ ಸೃಷ್ಟಿ ಕಾಣುವುದು. ಸೃಷ್ಟಿಯಿದ್ದಂತೆ ದೃಷ್ಟಿ ನೋಡುವುದು. ಆದರೆ ಸೃಷ್ಟಿಯ ಸಹಜ ಮತ್ತು ಸತ್ಯ ಸ್ವರೂಪವನ್ನು ಕಾಣಲು ಸತ್ಯಜ್ಞಾನ ಬೇಕು. ಸಹಜ ವೀರ ಮಾಹೇಶ್ವರನಾಗಿರಬೇಕು. ಅಂಗ-ಲಿಂಗ ಈ ಉಭಯೈಕ ದೃಷ್ಟಿಯಿಂದ ಷಟ್‌ಸ್ಥಲ ವಿಚಾರಾಚಾರಗಳು ಆರಂಭವಾಗುವುದರಿಂದ ಚರಾಚರ ಸಮನ್ವಯವು ಈ ಸಿದ್ಧಾಂತದಲ್ಲಿ ಸಹಜವಾಗಿದೆ.

ಮಾಹೇಶ್ವರನ ಜೀವನ ಕೇವಲ ವೈಯಕ್ತಿಕವಲ್ಲ; ವಿಶ್ವಸಂಬಂಧವುಳ್ಳ ವಿಶಾಲ ಭಾವನೆಯದು, ಅಂತೆಯೆ ವಿಶ್ವಾಧಿಕನಾದ ವಿಶ್ವೇಶ್ವರನವರೆವಿಗೂ ಹೋಗಿ ನಿಲುಕುವಂತಹದು, ಇದರಿಂದಾಗಿ ಇಲ್ಲಿ ಸ್ವಾರ್ಥಜೀವನಕ್ಕೆ ಎಡೆಯಿಲ್ಲ. ಸಂಕುಚಿತ ಭಾವಕ್ಕೆ ಇಂಬಿಲ್ಲ ಪಾಶವೀಯತೆಗೆ ಪ್ರೇರಣೆಯಿಲ್ಲ. ಅಲ್ಪವಿಚಾರಕ್ಕೆ ಅವಕಾಶವಿಲ್ಲ.

ಷಟ್‌ಸ್ಥಲ ತತ್ತ್ವದಂತೆ ಚಿತ್ತ ಮತ್ತು ಬುದ್ಧಿಗಳು ಸ್ಥೂಲವಾದ ತ್ಯಾಗಾಂಗ ಪರಿಣಾಮಗಳು; ಅಂತೆಯೇ ಸದ್ರೂಪ ಚೈತನ್ಯ ಪರಿಣಾಮಗಳು. ಆದ್ದರಿಂದ ಚಿತ್ತದ ಕ್ರಿಯಾಶಕ್ತಿ, ಬುದ್ಧಿಯ ಜ್ಞಾನಶಕ್ತಿ ಚರಾಚರಣೆಗಳೆರಡನ್ನೂ ಪ್ರತಿನಿಧಿಸುತ್ತವೆ. ಜಲತತ್ತ್ವದಿಂದಾದ ಬುದ್ಧಿಯಿಂದ ಮೆದುಳಿನ ವಿಕಾಸವಾಗಿ ರುವುದು ಸಹಜವಾಗಿದೆ. ಮೆದುಳೆಂದರೆ ಜ್ಞಾನಪ್ರಕಾಶ. ಎಲ್ಲವನ್ನು ಅರಿಯ ಬಲ್ಲ ಶಕ್ತಿ. ಅವ್ಯಕ್ತವಾದ ಈ ಜ್ಞಾನಶಕ್ತಿಯನ್ನು ವ್ಯಕ್ತವಾಗಿಸುವುದೇ ಮಾಹೇಶ್ವರನ ಮುಖ್ಯಧ್ಯೇಯ.

ಜಲಮಯವಾದ ಬುದ್ಧಿಯಲ್ಲಿ ಜ್ಞಾನಜ್ವಾಲೆಯು ಅವ್ಯಕ್ತವಾಗಿರುತ್ತದೆ. 'ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತಿ'ರುತ್ತದೆ. ಇದನ್ನು ಹೊರ

ಹೊಮ್ಮಿಸುವುದೇ ಮಾಹೇಶ್ವರನ ಮಹಾಕಾರ್ಯ. ಇದನ್ನು ಕೈಗೂಡಿಸುತ್ತದೆ ಈತನ ನಿಜ ನಿಷ್ಠೆಯ ಸ್ಥೈರ್ಯ.

ಸ್ಥೂಲ–ಜಡ ಚೇತನಗಳೆರಡರ ಸಂಯುಕ್ತ ರೂಪವೇ ತ್ಯಾಗಾಂಗ. ಈ ತ್ಯಾಗಾಂಗದ ಪರಿಣಾಮಗಳಾದ ಚಿತ್ತ–ಬುದ್ಧಿಗಳೆರಡು ಉಭಯಾತ್ಮಕಗಳಾಗಿ ಉಭಯವನ್ನು ಪ್ರತಿನಿಧಿಸುತ್ತವೆ. ಭೌತಿಕ ಮತ್ತು ತಾತ್ತ್ವಿಕ ಜೀವನದ ತಳಹದಿಯಾಗಿವೆ; ಜೀವಾಳವೂ ಆಗಿವೆ. ಚಿತ್ತದ ಕ್ರಿಯಾಶಕ್ತಿಯಿಲ್ಲದೆ ಬುದ್ಧಿಯ ಜ್ಞಾನಶಕ್ತಿಯಿಲ್ಲದೆ ಜೀವನವು ರೂಪಿತವಾಗದು; ಪ್ರಗತಿಯನ್ನು ಪಡೆಯದು

ಅಜಡದಿಂದ ಜಡವನ್ನು ಬೇರ್ಪಡಿಸುವ ವಾದವು ವಿಚಾರ ರಮಣೀಯವಲ್ಲ. ಈ ಜೊಳ್ಳುವಾದವು ಇಂದಿನ ವಿಜ್ಞಾನಭಾನುವಿನ ಮುಂದೆ ಒಡ್ಡಿದ ಮಂಜಿನಂತೆ ಮಾಯವಾಗಿದೆ. "ವ್ಯಕ್ತ ಸೃಷ್ಟಿಯಲ್ಲಿ ಜಡವಾದ ವಸ್ತುವೇನೂ ಇಲ್ಲ. ಎಲ್ಲೆಲ್ಲಿಯೂ ಅನಂತ, ಅಸೀಮಗತಿ ಇದ್ದು ಮನುಷ್ಯನ ಶರೀರ, ಮಾನವೀ ಇಂದ್ರಿಯಗಳು ಮತ್ತು ಮಿದುಳು ಇವೆಲ್ಲ ಆ ಅಖಂಡ ಗತಿಯ ಅಭಿನ್ನ ಅಂಗಗಳಾಗಿವೆ. ಕಾಲ, ಕ್ರಮ ಮತ್ತು ಈ ಗತಿ ಇವುಗಳ ಪರಸ್ಪರ ಪ್ರಮಾಣದಿಂದಾಗಿ ಸೃಷ್ಟಿಯಲ್ಲಿಯ ಪದಾರ್ಥಗಳ ಭಿನ್ನತೆ ಗೋಚರಿಸುತ್ತದೆ. ಇಲ್ಲಿಯವರೆಗೆ ಅರ್ವಾಚೀನ ಶಾಸ್ತ್ರಜ್ಞರು ಬಂದು ತಲ್ಪಿದ್ದಾರೆ. ಇಂತಹ ಸ್ಥಿತಿಯಲ್ಲಿ ಜಡ ದ್ರವ್ಯದ ಕಲ್ಪನೆಯ ಪುರಸ್ಕಾರ ಮಾಡುವುದು, ಅದೂ ಹಟದಿಂದ ಮಾಡುವುದು ವಿಲಕ್ಷಣವಾಗಿ ತೋರುವುದಿಲ್ಲವೆ? ಕೇವಲ ಜಡವಾದದಿಂದ ಸೃಷ್ಟಿಯ ರಹಸ್ಯವನ್ನರಿಯುವ ಪ್ರಯತ್ನವು ಇಂದಿನ ಶಾಸ್ತ್ರೀಯ ಜಗತ್ತಿನಲ್ಲಿ ಅಶಾಸ್ತ್ರೀಯವೆಂದು ಪರಿಗಣಿಸಲಾಗುವುದು."

"ಸೃಷ್ಟಿಯ ಮೂಲದಲ್ಲಿರುವ ಚಿತ್‌ಸಕ್ತಿಗೆ 'ಸಚೇತನ ಜಡತೆ' (Living Matter) ಎಂಬ ಸಂಜ್ಞೆಯಿಂದ ಕರೆಯಬೇಕೆಂದು ಕೆಲವರು ಹೇಳುತ್ತಿದ್ದಾರೆ. ಎಡಿಂಗ್ಟನ್, ಜೀನ್ಸ್, ಬರ್ಗಸನ್ ಮೊದಲಾದ ಚೇತನವಾದಿ ಶಾಸ್ತ್ರಜ್ಞರು ಜಡ ಪರಮಾಣುಗಳನ್ನು ಒಡೆದು ಅದರೊಳಗಿಂದ ಚೇತನನಿರ್ಮಾಣ ಮಾಡಲು ಬರುತ್ತದೆ. ಮತ್ತು ಚೇತನವನ್ನು ಜಡಪರಮಾಣುವಿನಲ್ಲಿ ರೂಪಾಂತರಗೊಳಿಸಲು ಬರುತ್ತದೆ. ಎಂಬುದನ್ನು ಸಿದ್ಧಮಾಡುತ್ತಿದ್ದಾರೆ"

—ಭಾ. ಸಂಸ್ಕೃತಿಯ ಹಿರಿಮೆ

ಜಗತ್ತು ದೇಹ ಇವು ಕೇವಲ ಜಡದ್ರವ್ಯಗಳಲ್ಲ: ಜೀವಂತ ದ್ರವ್ಯಗಳೂ ಆಗಿವೆ ಎಂಬ ಷಟ್‌ಸ್ಥಲ ವಿಚಾರವನ್ನು ಈ ಮಾತುಗಳು ಪರಿಣಾಮಕಾರಿಯಾಗಿ ಪೋಷಿಸಿವೆ. ಬ್ರಹ್ಮಾದ್ವೈತಿಗಳು ತಮ್ಮ ತತ್ತ್ವ ಪ್ರಕ್ರಿಯೆಯಲ್ಲಿ ಜಗತ್ತು ದೇಹಾದಿಗಳಿಗೆ ಸ್ಥಾನವನ್ನಾಗಲಿ ಅಸ್ತಿತ್ವವನ್ನಾಗಲಿ ಎಳ್ಳಷ್ಟೂ ಕೊಡದ ಕಾರಣ ಅವರು ಜಗತ್ತಿಗೆ ಹೊರಗಾಗಿದ್ದಾರೆ; ಜಗತ್ಕಾರ್ಯಕ್ಕೆ ದ್ರೋಹವನ್ನು ಬಗೆದಿದ್ದಾರೆ.

"ಸೃಷ್ಟಿಯೆಂದರೆ ಅನಂತ ಸತ್ತಿನ ಒಂದು ಪ್ರಕಾಶನ ಅಥವಾ ವಿಕಾಸನವೇ ಹೊರತು ನೂತನ ನಿರ್ಮಾಣವಲ್ಲ. ಪ್ರಳಯ ಸ್ಥಿತಿಯಲ್ಲಿ ಸೃಷ್ಟಿಯು ಕಾಣದೆ ಹೋದಾಗ ಎಲ್ಲ ವಸ್ತುಗಳೂ ಸೂಕ್ಷ್ಮಾತಿಸೂಕ್ಷ್ಮಗಳಾಗಿ ತಮ್ಮ ಆದಿಸ್ಥಿತಿಯಲ್ಲಿ ಕೆಲಕಾಲವಿದ್ದು ಹೊರಗೆ ತೋರಲು ಸಿದ್ಧವಾಗಿ ಸಮತೆಯಲ್ಲಿರುತ್ತವೆ,"

ಎಂದು ಶ್ರೀ ಸ್ವಾಮಿ ವಿವೇಕಾನಂದರು 'ವೇದಾಂತ' ಎಂಬ ತಮ್ಮ ಲಾಹೋರ್ ಉಪನ್ಯಾಸದಲ್ಲಿ ಉಗ್ಗಡಿಸಿದ್ದಾರೆ,

ಜೀವಾತ್ಮ ಕೇವಲ ಆಕಾಶದಿಂದ ಇಳಿದು ಬರುವ ವಸ್ತುವಲ್ಲ, ಪಂಚಭೂತಗಳಲ್ಲಿ ಮುಖ್ಯವಾಗಿ ಪೃಥಿವಿಯುಪ್ಪುಗಳಲ್ಲಿ ಮೈದೋರುವ ಕೂಟಸ್ಥ. ಆ ಪರಮ ಚೈತನ್ಯ ಅಂಶತ್ವದಿಂದ ಎಲ್ಲ ಭೂತಗಳಲ್ಲಿರುತ್ತದೆಯೆಂದು ಒಪ್ಪಿದ ಶಿವಾದ್ವೈತಕ್ಕೆ ಈ ವಾದದಲ್ಲಿ ವಿಲಕ್ಷಣತೆಯೇನೂ ಕಾಣದು. ಭೂತಗಳು ಆ ಪರಮ ಚೈತನ್ಯ ಬೀಜದ ಶಾಖೆಗಳು, ಪೃಥ್ವ್ಯಂಗ ಜಲಾಂಗಗಳು ಬೀಜೋತ್ಪತ್ತಿಗೆ ಅಂದರೆ ಅಭಿವ್ಯಕ್ತಿಗೆ ಮುಖ್ಯಾಂಗಗಳು, ಈ ದೃಷ್ಟಿಯಿಂದ ಭಕ್ತ–ಮಾಹೇಶ ಸ್ಥಲಗಳನ್ನೊಳಗೊಂಡ ತ್ಯಾಗಾಂಗ ತತ್ತ್ವಜ್ಞಾನದ ವೈಶಿಷ್ಟ್ಯ ವ್ಯಕ್ತವಾಗುತ್ತದೆ.

ಸೇಶ್ವರ ಸಾಂಖ್ಯಮತ ತತ್ತ್ವಜ್ಞಾನಕ್ಕೂ ಮಾಹೇಶ್ವರಸ್ಥಲದ ತತ್ತ್ವಜ್ಞಾನಕ್ಕೂ ತೀರ ಹತ್ತಿರ ಸಂಬಂಧವಿದೆ, ಅಂತಯೇ ಪ್ರಾಚೀನತೆಯಲ್ಲಿಯೂ ಸಾಮ್ಯವಿದೆ.

ಸಾಂಖ್ಯ ಇಬ್ಬಗೆ. ಸೇಶ್ವರ ಸಾಂಖ್ಯ, ನಿರೀಶ್ವರ ಸಾಂಖ್ಯ. ಸೇಶ್ವರ

ಸಾಂಖ್ಯ ಕರ್ತ ಕಪಿಲ. ಸಾಂಖ್ಯಮತದಲ್ಲಿ ಜಗತ್ಕಾರಣವಾದ ಪ್ರಧಾನ [ಪ್ರಕೃತಿ] ಜಡವಾಗಿದೆ. ಚೇತನ ಪುರುಷ ಅಸಂಗನಾಗಿದ್ದಾನೆ, ಪ್ರಧಾನದೊಡನೆ ಪುರುಷ ನಿಗೆ ಸಂಬಂಧವಿಲ್ಲ, ಸಂಬಂಧವುಂಟಾಗುವುದು ಕಾರ್ಯೋತ್ಪತ್ತಿ, ಪ್ರಧಾನ ವಿಶಿಷ್ಟ ಪುರುಷನೇ ಈಶ್ವರನೆನಿಸುತ್ತಾನೆ; ಅಂತರ್ಯಾಮಿಯೆನಿಸುತ್ತಾನೆ. ಇವಿಷ್ಟನ್ನು ಬಿಟ್ಟರೆ ಉಳಿದ ಕೆಲವಿಚಾರಗಳ ಸಾಮ್ಯವಿದೆ ; ಅವಿವು;

ಆತ್ಮ ಅನೇಕತ್ವವನ್ನು ಪ್ರಕೃತಿ ನಿತ್ಯತ್ವವನ್ನು ಸಾಂಖ್ಯರು ಶಿವಾದ್ವೈತಿಗಳಂತೆ ಒಪ್ಪಿದ್ದಾರೆ. ಸಾಂಖ್ಯರು ಮಾಹೇಶ್ವರಸ್ಥಲಾಂಗನಂತೆ. ಬುದ್ಧಿಯ ಹಿರಿಮೆಯನ್ನು ಕಂಡುಕೊಂಡಿದ್ದಾರೆ. ಇವರ ಬುದ್ಧಿಗೂ ಆತ್ಮದ ವಿವೇಕವಿದೆ, ಬುದ್ಧಿಯ ಸಹಾಯದಿಂದಲೇ ಮೋಕ್ಷವನ್ನು ಪ್ರತಿಪಾದಿಸುತ್ತಾರೆ. ವಿವೇಕ ಪರಿಣಾಮವೇ ಭೋಗ -ಎಂದು ಇವರ ಎಣಿಕೆ. ಜ್ಞಾನ ಸುಖ, ದುಃಖಾದಿಗಳು ಬುದ್ಧಿಯ ಪರಿಣಾಮಗಳು, ಮಾಹೇಶ್ವರ ಸ್ಥಲದಲ್ಲಿ ಬುದ್ಧಿ, ಜ್ಞಾನಶಕ್ತಿಗಳಿಗೆ ಪ್ರಾಶಸ್ತ್ಯವಿರುವಂತೆ ಸಾಂಖ್ಯಶಾಸ್ತ್ರದಲ್ಲಿಯೂ ಇರುತ್ತದೆ,

ನಿರಾಕಾರನಾದ ಆ ಪರವಸ್ತುವು ಶಿವ, ಸದಾಶಿವ, ಮಹೇಶ ಎಂಬುದಾಗಿ ಮುಮ್ಮೊದಲು ಮೂರು ರೂಪಗಳನ್ನು ತಾಳುವನು. ಇವನ್ನೇ ತತ್ತ್ವತ್ರಯ ವೆಂದು ತಿಳಿಯುವುದು. ಇವುಗಳಲ್ಲಿ ಶಿವತತ್ತ್ವವು ಒಂದೇ ಒಂದಾಗಿರುತ್ತದೆ; ಚಿತ್ ಶಕ್ತಿಯೊಡಗೂಡಿರುತ್ತದೆ. ಎರಡನೆಯದಾದ ಸದಾಶಿವ ತತ್ತ್ವವು ಪಂಚ ಸಾದಾಖ್ಯಗಳ ರೂಪನ್ನು ತಾಳುತ್ತದೆ. ಈ ಪಂಚಸಾದಾಖ್ಯಗಳು ಶಿವ, ಅಮೂರ್ತ, ಮೂರ್ತ, ಕರ್ತೃ, ಕರ್ಮ—ಎಂದಿರುತ್ತವೆ. ಇವುಗಳಲ್ಲಿ ಕ್ರಮ ವಾಗಿ ಪರಾ, ಆದಿ, ಇಚ್ಛಾ, ಜ್ಞಾನ, ಕ್ರಿಯಾ-ಶಕ್ತಿಗಳು ಇರುತ್ತವೆ. ಇನ್ನು ಮೂರನೆಯಂದಾದ ಮಹೇಶ್ವರ ತತ್ತ್ವವು ಕರ್ಮ ಕರ್ತೃ ಸಾದಾಖ್ಯಗಳಿಂದ ಕೂಡಿ ಮಹೇಶ್ವರ ಎನಿಸಿ ಇಪ್ಪತ್ತೈದು ಲೀಲೆಗಳಿಂದ ಕೂಡಿದೆಯೆಂದು ವಾತುಲಾದಿ ಶಿವಾಗಮಗಳು ಸಾರುತ್ತವೆ. ಇಂತಹ ಮಹೇಶ್ವರನ ಅಂಶವೇ ಮಾಹೇಶ್ವರ.

"ಮತ್ತೆ ಗುಹ್ಯಸ್ಥಾನ ಧನುರ್ಗತಿಯು ಸ್ವಾಧಿಷ್ಠಾನ ।
ಕರ್ತೃ ಮಾಹೇಶ್ವರಗೆ ಅಪ್ಪು ತತ್ತ್ವದ ದೇಹ !
ಹಸ್ತಂ ಸುಬುದ್ಧಿಯಿಂದಿತ್ತು ಗುರುಲಿಂಗಕ್ಕೆ ವಾರಿ ವರ್ಣದ ಕಂಜದಿಂ
ತಥ್ಯ ಷಟ್ಪ್ರಣಮ ಷಡ್ದಳದ ಮಧ್ಯದೊಳಿಪ್ಪ ।
ಅತ್ಯಧಿಕ ಲಿಂಗಕ್ಕೆ ರಸನೆ ಮುಖದಿಂದೀವ !
ಪಥ್ಯ ಷಡ್ರಸ ಪ್ರಸಾದವ ಕೊಂಬ ಮಾಹೇಶ ವರ್ತಿಸುವ ಪರಬ್ರಹ್ಮದಿ ॥

ಎಂದು ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ ಗ್ರಂಥದಲ್ಲಿ ಉಕ್ತವಾಗಿದೆ. ಸುರಸ ಪ್ರಸಾದ ಪ್ರಾಪ್ತಿಯಿಂದ ಮಾಹೇಶ್ವರನು ಆ ಪರಶಿವನಲ್ಲಿ ಪರವಶನಾಗುವನು.

# ಮಾಹೇಶ್ವರನ ಭಕ್ತಸ್ಥಲ

ಭಕ್ತನಲ್ಲಿಯೆ ಆರುಸ್ಥಲಗಳು ಏರ್ಪಡುವಂತೆ ಮಾಹೇಶ್ವರನಲ್ಲಿಯೂ ಆರು ನೆಲೆಗಳು ಏರ್ಪಡುತ್ತವೆ. ಆ ಆ ಸ್ಥಲದಲ್ಲಿ ಆರು ಲಿಂಗಗಳ ಆರಾಧನೆ ಅಳವಡು ವುದರಿಂದ ಆ ಆ ಸ್ಥಲದ ಅಂಗನಿಗೆ ಆರುಸ್ಥಲಗಳು ಅಂಗವಿಸುವುದು ಅಚ್ಚರಿಯೇ ನಲ್ಲ. ಸ್ವಯಾಚರಣೆಯ ದೃಷ್ಟಿಯಿಂದ ಇದು ಸೂಕ್ತವೂ ಸ್ವಾನುಭವ ಸಂಯು ಕ್ತವೂ ಆಗಿದೆ. "ಜಲವೇ ಅಂಗವಾದ ಮಾಹೇಶ್ವರನಲ್ಲಿ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಭಕ್ತ ಎಂಬ ಅಂಗಪಂಚಕವು ಗರ್ಭೀಕೃತವಾಗಿ ಆ ಮಾಹೇಶ್ವರಂಗೆ ಗುರುಲಿಂಗ ಸಂಬಂಧವಾಗಿ ಆ ಗುರುಲಿಂಗದಲ್ಲಿಯೇ ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ. ಆಚಾರಲಿಂಗವೆನಿಸುವ ಲಿಂಗಪಂಚಕವು ಗರ್ಭೀಕೃತ ವಾಗಿ, ಗುರುಲಿಂಗವೇ ಆಶ್ರಯವಾಗಿ ಇಂತೀ ಷಡಧ್ವಲಿಂಗದಲ್ಲಿಯೆ ಬೆರೆಸಿ ಬೇರಿಲ್ಲ ದಿರಬಲ್ಲರೆ ಮಾಹೇಶ್ವರನೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಭಕ್ತನಲ್ಲಿ ಮಾಹೇಶ್ವರತ್ವಾದಿಗಳು ಸ್ವಯಾಚರಣೆಯಲ್ಲಿ ಆಚಾರಲಿಂಗಾಂ ತರ್ಗತವಾಗಿ ಗರ್ಭೀಕರಿಸಿಕೊಂಡಿರುವಂತೆ ಮಾಹೇಶ್ವರನಲ್ಲಿ ಸ್ವಯಾಚರಣೆಯಲ್ಲಿ ಗುರುಲಿಂಗದ ಅಂತರ್ಗತವಾಗಿ ಭಕ್ತಪ್ರಸಾದಿ ಮುಂತಾದ ಸ್ಥಲಗಳು ಗರ್ಭೀಕರಿಸಿ ಕೊಂಡಿರುತ್ತವೆ. ಗೌಣನ್ಯಾಯದಲ್ಲಿರುತ್ತವೆ. ಭಕ್ತನ ಮಾಹೇಶ್ವರತ್ವವು ಸ್ವಯಾಚರಣೆಗೆ ಸರಿಯಲ್ಲದೆ ಸಾಮಾಜಿಕವಾಗಿ ಸರಿಯಲ್ಲ. ಹಾಗೆ ಮಾಹೇಶ್ವರನ ಭಕ್ತತ್ವವು ತನ್ನ ಆರಾಧನೆಗೆ ತನ್ನ ಆಚರಣೆಗೆ ಅಳವಡುವುದಲ್ಲದೆ ಬಾಹ್ಯಾಂಗವಾಗಿ ಸಾಮಾಜಿಕವಾಗಿ ಅಳವಡದು. ಮೇಲಿನ ವಚನದಲ್ಲಿ ಉಪಯುಕ್ತವಾದ 'ಗರ್ಭೀ ಕೃತವಾಗಿ' ಎಂಬ ಮಾತು ಗಮನಾರ್ಹವೂ ಔಚಿತ್ಯಪೂರ್ಣವೂ ಆಗಿದೆ. ಸಮಾಜ ದಲ್ಲಿ ಆಂದೋಲನವನ್ನು ಎಬ್ಬಿಸುವವರಿಗೆ ಬುದ್ಧಿಗಲಿಸುವಂತಿದೆ,

ಮಾಹೇಶ್ವರಸ್ಥಲ ಸಂಪನ್ನ ಮಾಹೇಶ್ವರನಿಗೆ ಮಾಹೇಶ್ವರತ್ವಮುಖ್ಯ. ಭಕ್ತತ್ವಗೌಣ. ಅಂತೆಯೇ ಭಕ್ತಸ್ಥಲದ ಭಕ್ತನಿಗೆ ಮಾಹೇಶ್ವರತ್ವವು ಗೌಣ,

ಏಕೆಂದರೆ ಮಾಹೇಶ್ವರನ ಆರಾಧ್ಯ ಆಚಾರಲಿಂಗವು ಗುರುಲಿಂಗಗರ್ಭದೊಳಗಿನದು. ಅದಕ್ಕೆ ಅರ್ಪಣೀಯ ಪದಾರ್ಥ ರಸದೊಳಗಿನ ಪರಿಮಳವಲ್ಲದೆ ನೀರವಾದ ಪನಿಮಳವಲ್ಲ. ಆದ್ದರಿಂದ ಮಾಹೇಶ್ವರನ ಭಕ್ತನೆಂದರೆ ಜಿಹ್ವಾಂಗ. ಜಿಹ್ವಾಂಗನ ಆಚಾರಲಿಂಗವೆಂದರೆ ಗುರುಲಿಂಗದಲ್ಲಿ ಗರ್ಭೀಕೃತವಾದ ಅಥವಾ ಗುರುಲಿಂಗದ ಆಶ್ರಯದಲ್ಲಿರುವ ಆಚಾರಲಿಂಗ.

ತ್ಯಾಗಾಂಗನು ಪೃಥ್ವಿಯ ಪೂರ್ವಾಶ್ರಯವನ್ನು ಕಳೆದು ಭಕ್ತನಾದಂತೆ ಜಲದ ಪೂರ್ವಾಶ್ರಯವನ್ನು ಕಳೆದು 'ಮಾಹೇಶ್ವರ'ನೆನಿಸುತ್ತಾನೆ, ತ್ಯಾಗಾಂಗದ ಉಪಾಂಗವಾದ ಘ್ರಾಣವು ಆಚಾರಲಿಂಗಾನುಭಾವದಿಂದ ಪೃಥ್ವಿಜನ್ಯಗಂಧದ ಪೂರ್ವಾಶಯವಾದ ಪದಾರ್ಥತ್ವವನ್ನು ಕಳೆದು ಪ್ರಸಾದವನ್ನಾಗಿಸಿ 'ತ್ಯಾಗಾಂಗ ಭಕ್ತನ ಭಕ್ತ'ಎಂದೆನಿಸುವಂತೆ, ಇದೇ ತ್ಯಾಗಾಂಗನ ಉಪಾಂಗವಾದ ಜಿಹ್ವೆಯು ಗುರುಲಿಂಗಾನುಭವದಿಂದ ಜಲಜನ್ಯರಸರುಚಿಯ ಪೂರ್ವಾಶ್ರಯವಾದ ಪದಾರ್ಥತ್ವವನ್ನು ಕಳೆದುಪ್ರಸಾದವನ್ನಾಗಿಸಿ ಮಾಹೇಶ್ವರನ ಮಾಹೇಶ್ವರವಾಗುತ್ತದೆ. ಆ ಮಾಹೇಶ್ವರನ ಮಾಹೇಶ್ವರನಾದ ಜಿಹ್ವ್ಯಾಂಗಗರ್ಭಿಕೃತಘ್ರಾಣಾಂಗವು ಗುರುಲಿಂಗ ಗರ್ಭೀಕೃತ ಆಚಾರಲಿಂಗಾನುಭಾವದಿಂದ ರಸಾಂತರ್ಗತಗಂಧದ ಪೂರ್ವಾಶ್ರಯವಾದ ಪದಾರ್ಥತ್ವವನ್ನು ಕಳೆದು ಶ್ರದ್ಧೆಯಿಂದ ಪ್ರಸಾದವನ್ನಾಗಿಸಿ'ಮಾಹೇಶ್ವರನ ಭಕ್ತ' ಎಂದೆನಿಸುತ್ತದೆ.

ಮಾಹೇಶ್ವರನ ಭಕ್ತನಾಗದೆ ರಸದೊಳಗಿನ ಸೂಕ್ಷ್ಮವಾದ ಅಂದರೆ ನೇರವಾಗಿ ಘ್ರಾಣಕ್ಕೆ ನಿಲುಕದ ಗಂಧವನ್ನು ಸುಗಂಧಪ್ರಸಾದವನ್ನಾಗಿಸಲು ಸಾಧ್ಯವಾಗದೆ ಹೋಗುವುದು. ತತ್ತ್ವಕ್ಕೆ ಷಟ್‌ಸ್ಥಲಸಿದ್ಧಾಂತಕ್ಕೆ ಕೊರತೆಯುಂಟಾಗುವುದು.

ಮತ್ತೊಂದು ದೃಷ್ಟಿಯಲ್ಲಿ ಮಾಹೇಶ್ವರನ ಘ್ರಾಣಾಂಗವು 'ಮಾಹೇಶ್ವರನ ಭಕ್ತ' ಎನಿಸುತ್ತದೆ. ಇಲ್ಲಿ ಜಿಹ್ವಾಂಗವೇ ಮಾಹೇಶ್ವರ; ಘ್ರಾಣಾಂಗವೇ ಭಕ್ತ. ಈ ಘ್ರಾಣಾಂಗ ಭಕ್ತನು ಜಿಹ್ವಾಂಗದ ಆಶ್ರಯದಲ್ಲಿ ಕೆಲಸಮಾಡುತ್ತದೆ.

ಇನ್ನೊಂದುಬಗೆಯಲ್ಲಿ ವಿಚಾರಿಸಿದಲ್ಲಿ ತ್ಯಾಗಾಂಗಕ್ಕೆ ಘ್ರಾಣ ಜಿಹ್ವೆಗಳೆರಡು ಮುಖಗಳು. ಈ ಇವೆರ್ಡರಿಂದ ಕೂಡಿದ ತ್ಯಾಗಾಂಗನಿಗೆ ಒಳಮೈ ಹೊರಮೈಗಳಿವೆ. ಈತನ ಈ ಅಂತರಂಗವೇ ಮಾಹೇಶ್ವರ; ಬಹಿರಂಗವೇ ಭಕ್ತ. ಈ ಬಗೆಯಲ್ಲಿ ಮಾಹೇಶ್ವರನ ಭಕ್ತತ್ವ ಬಹಿರಂಗಕ್ಕೆ ಬರುತ್ತದೆ.

ಇನ್ನು ಸಾಮಾಜಿಕವಾಗಿ ಹಿರಿಯ ಮಾಹೇಶ್ವರನಿಗೆ ಕಿರಿಯ ಮಾಹೇಶ್ವರನು ಭಕ್ತಸ್ಥಲದಲ್ಲಿರುತ್ತಾನೆ. ಈತನು 'ಮಾಹೇಶ್ವರನ ಭಕ್ತ.' ಇದು ರೂಢಿಯಲ್ಲಿ ಪ್ರಸಿದ್ಧವಾಗಿದೆ. ಆಚರಣೆಯಲ್ಲಿದೆ. ಆಯುಷ್ಯದಲ್ಲಿ ಹಿರಿಯನಾಗಿದ್ದರೂ ಆಚರಣೆಯಲ್ಲಿ ಕಿರಿಯನಾಗಿದ್ದರೆ ಆತನೂ ಮಾಹೇಶ್ವರ ಭಕ್ತನೆನಿಸುತ್ತಾನೆ.

ಮಾಹೇಶ್ವರನಿಗೆ ಕೇವಲ ವಿಚಾರವೊಂದೇ ಸಾಲದು. ಆಚಾರಪ್ರಧಾನನಾದ ಭಕ್ತನಿಗೆ ವಿಚಾರವೂ ಬೇಕಾಗುವಂತೆ ವಿಚಾರಪ್ರಧಾನನಾದ ಮಾಹೇಶ್ವರನಿಗೆ ಆಚಾರವೂ ಬೇಕು. ಆದ್ದರಿಂದ ಆಚಾರಪ್ರಧಾನವಾಗಿದ್ದಾಗ ಮಾಹೇಶ್ವರನು ಮಾಹೇಶ್ವರಭಕ್ತನೆನಿಸುತ್ತಾನೆ. ಮಾಹೇಸ್ವರಭಕ್ತತ್ವಬಾರದೆ ಮಾಹೇಶ್ವರನಿಗೆ ಷಟ್‌ಸ್ಥಲಪೂರ್ಣವಾಗದು.

"ಆಚಾರವಿಲ್ಲದ ಗುರು—ಭೂತಪ್ರಾಣಿ.
ಆಚಾರವಿಲ್ಲದ ಲಿಂಗ—ಶಿಲೆ.
ಆಚಾರವಿಲ್ಲದ ಜಂಗಮ—ಮಾನವ,
ಆಚಾರವಿಲ್ಲದ ಪಾದೋದಕ—ನೀರು.
ಆಚಾರವಿಲ್ಲದ ಪ್ರಸಾದ—ಎಂಜಲು.
ಆಚಾರವಿಲ್ಲದ ಭಕ್ತ—ದುಃಖಿ, ಕರ್ಮಿ.
ಇದು ಕಾರಣ ಅಟ್ಟವನೇರುವುದಕ್ಕೆ ನಿಚ್ಚಣಿಗೆಯೆ ಸೋಪಾನ.
ಹರ-ಪದವ ಎಯ್ದುವರೆ ಶ್ರೀಗುರು ಹೇಳಿದ ಸದಾಚಾರವೇ ಸೋಪಾನ.
ಗುರೂಪದೇಶವ ಮೀರಿ ಮನಕ್ಕೆ ಬಂದಂತೆ ವರ್ತಿಸುವ
ಪಾಪಿಗಳನು ಎನಗೊಮ್ಮೆ ತೋರದಿರಯ್ಯ,
ಮಹಾಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೇ !"

ಇದು ಮಾಹೇಶ್ವರನ ಭಕ್ತಸ್ಥಲದ ವಚನ. ಮಾಹೇಶ್ವರಾದಿಗಳಿಗೂ ಆಚಾರ ಬೇಕೆಂಬುದೇ ಇದರ ಶಾಸನ. ಆ ಆಚಾರವೇ ಲಿಂಗವಾದಕಾರಣ ಆಚಾರ ನಿರತನಾದ ಮಾಹೇಶ್ವರನು ಮಾಹೇಶ್ವರ ಭಕ್ತನೆನಿಸುವುದು ಅನಿವಾರ್ಯ.

ಈ ಎಲ್ಲ ವಿವೇಚನೆಯಿಂದ ಮಾಹೇಶ್ವರನ ಭಕ್ತತ್ವ ಅತ್ಯಗತ್ಯ. ಅದು ಷಟ್‌ಸ್ಥಲ ತಾತ್ತ್ವಿಕ ಸತ್ಯ. ಪ್ರಾಕೃತಿಕ ಪರಮಾರ್ಥ.

ಮಾಹೇಶ್ವರನ ಭಕ್ತತ್ವವಿಲ್ಲದೆ ಮಾಹೇಶ್ವರನಿಗೆ ಗಂಧವನ್ನು ಆಘ್ರಾಣಿಸುವ ಮತ್ತು ಸುಗಂಧ ಪ್ರಸಾದವನ್ನು ಆಚಾರಲಿಂಗಕ್ಕೆ ಅರ್ಪಿಸುವ ಹಕ್ಕಿರದು. ಮಾಹೇಶ್ವರತ್ವಕ್ಕೆ ಆಶ್ರಯವಿರದು.

"ಅಸುವಳಿದ ಕಾಯದಂತೆ ದೆಸೆಗೆಟ್ಟೆನಯ್ಯಾ.
ಅದೇನು ಕಾರಣವೆಂದರೆ :
ಪಶುಪತಿಯ ಭಕ್ತಿವಿಶ್ವಾಸವಿಲ್ಲದೆ ವಿಷಯಾತುರನಾಗಿದ್ದೆನಯ್ಯಾ.
ಇದುಕಾರಣ, ಎನ್ನ ಸಂಸಾರವಿಷಯಂಗಳ ಮಾಣಿಸಿ
ಭಕ್ತನೆಂದೆನಿಸಯ್ಯ; ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ."

ಸಂಸಾರಕ್ಕೆ ಮೂಲ ವಿಷಯವಾಸನೆ. ವಿಷಯವಾಸನೆ ಅಳಿಯದೆ ಸಂಸಾರ ಹಿಂಗದು. ಸಂಸಾರ ಹಿಂಗದೆ ಶ್ರೀ ಗುರುಕಾರುಣ್ಯ ಕೈಗೂಡದು. ಕಾರುಣ್ಯ ಕೈಗೂಡದೆ ಕೈವಲ್ಯವುಂಟಾಗದು.

ವಿಷಯವಾಸನೆಯುಳ್ಳ ಮಾಹೇಶ್ವರತ್ವ ಅಸುವಳಿದ ಕಾಯದಂತೆ! ಮಾಹೇಶ್ವರನು ಸುಚೇತನಾಗಬೇಕಾದರೆ ಭಕ್ತಿರೂಪ ವಿಶ್ವಾಸಬೇಕು. ಅಂದರೆ ಮಾಹೇಶ್ವರನ ಭಕ್ತನಾಗಬೇಕು.

ವಿಷಯವಾಸನೆಯನ್ನು ವಿಷಯಾತುರತೆಯನ್ನು ವಿಲಯಗೊಳಿಸುತ್ತದೆ ಪಶುಪತಿಯ ವಿಶ್ವಾಸ; ಪರಮಾತ್ಮನಲ್ಲಿಟ್ಟ ಭಕ್ತಿ. ಮಾಹೇಶ್ವರನು ಭಕ್ತನಾಗದೆ ತನ್ನ ಪ್ರೇಮವನ್ನು ಪವಿತ್ರಗೊಳಿಸಲಾರ. ಮಾಹೇಶ್ವರ ಭಕ್ತನಾಗದೆ ಮಾಹೇಶ್ವರತ್ವವನ್ನು ಉಳಿಸಿಕೊಳ್ಳಲಾರ. ಮಾಹೇಶ್ವರತ್ವವು ಮಾತಿನಷ್ಟು ಸುಲಭವಲ್ಲ; ಅದು ಭಕ್ತಭೂಮಿಯಲ್ಲಿ ಅಂಕುರಿಸಿದ ಅಂಕುರ, ಭಕ್ತಿರಸದಲ್ಲಿ ಮೊಳೆತ ಮೊಳಕೆ. ಅದು ಮುಂದೆ ಪ್ರಸನ್ನತೆಯಲ್ಲಿ ಬೆಳೆದು ಸಾಮರಸ್ಯಫಲಪ್ರದವಾಗಬೇಕಾಗಿದೆ. ಹಾಗಾಗಲು ಭಕ್ತಿಭಾವದಿಂದ ಮಾಹೇಶ್ವರ ಭಕ್ತನಾಗಿಯೇ ತೀರಬೇಕು ಇಲ್ಲವಾದರೆ,

"ಕಣ್ಣಿನಲ್ಲಿ ಕಾಮ. ಮನದಲ್ಲಿ ಕ್ರೋಧ,
ಪ್ರಾಣದಲ್ಲಿ ಲೋಭ ಬುದ್ಧಿಯಲ್ಲಿ ಮದ, ವಿವೇಕದಲ್ಲಿ ಮಚ್ಚರ, ಅರುಹಿನಲ್ಲಿ ಮಾಯೆಉಳ್ಳನ್ನಕ್ಕರ,

ಎಂತು ಭಕ್ತನೆಂಬೆ, ಎಂತು ಮಾಹೇಶ್ವರನೆಂಬೆ?
ಎಂತು ಪ್ರಸಾದಿ ಎಂಬೆ. ಎಂತು ಪ್ರಾಣಲಿಂಗಿ ಎಂಬೆ?
ಎಂತು ಶರಣ ಎಂಬೆ. ಎಂತು ಐಕ್ಯ ಎಂಬೆ ?
ಎಂತು ಷಟ್‌ಸ್ಥಲದಲ್ಲಿ ಸಂಪೂರ್ಣನೆಂಬೆ ?........
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ,"

ಮಾಹೇಶ್ವರತ್ವಾದಿಗಳು ಮೈಗೂಡವು. ಕರಣೇಂದ್ರಿಯಗಳಲ್ಲಿ ಕಾಮಾದಿ ವಿಷಯವಾಸನೆಗಳಿದ್ದರೆ ಯಾವಸ್ಥಲವೂ ಸಮನಿಸದು. ಯಾವ ಅನುಭಾವವೂ ಅಳವಡದು. ಆದ್ಧರಿಂದ ತ್ಯಾಗಾಂಗನ ಕಣ್ಣಿನಲ್ಲಿ ಕಾಮನ ಮನದಲ್ಲಿ ಕ್ರೋಧ ಪ್ರಾಣದಲ್ಲಿ ಲೋಭ ಮೊದಲಾದವುಗಳು ಇರಬಾರದು ಅಂತಾದಾಗ ಆತನು ನಿಜಭಕ್ತನಾಗಬಲ್ಲ; ಮಾಹೇಶ್ವರನ ಭಕ್ತನೂ ಆಗಬಲ್ಲ. ಆತನ ಪರಿ ಮಾತಿನ ಸಿರಿಗೆ ಸಿಲುಕದು. ಮಣಿದಲ್ಲದೆ ಮತ್ತಾವ ಕೃತಿಗೂ ನಿಲುಕದು

"ಪಂಚೇಂದ್ರಿಯ ಸಪ್ತಧಾತುಗಳ ಮುಟ್ಟದೆ
ಸದಾಶಿವನ ಮುಟ್ಟಿಪ್ಪ ಭಕ್ತನ ಪರಿಯ ನೋಡಾ !
ಕಾಮಾದಿ ಷಡುವರ್ಗಂಗಳ ಸೋಂಕದ
ನಿಸ್ಸೀಮನ ಪರಿಯಾ ನೋಡಾ !
ಗುಣತ್ರಯಂಗಳನರಿಯದ ನಿರ್ಗುಣನ ಪರಿಯನೋಡಾ !
ಅಹಂಕಾರತ್ರಯಂಗಳನಳಿದು ತಾಪತ್ರಯಂಗಳ ನೀಗಿ
ಕೋಪ ಮೋಹಾದಿಗಳ ವಿಸರ್ಜಿಸಿದ ಸದ್ಭಕ್ತನ ಪರಿಯ ನೋಡಾ !
ಒಳಹೊರಗನರಿಯದ ನಿರುಪಾಧಿಕ
ನಿರಾಕುಳನಾದ ನಿಜಭಕ್ತನ ಪರಿಯ ನೋಡಾ !
ತಾನೆಂಬುದ ಮರೆದು, ನೀನೆಂಬುದನಳಿದು,
ತಾನು ತಾನಾದ ಭಕ್ತಂಗೆ ನಮೋ ನಮೋ ಎಂದು
ಬದುಕಿದೆನು ಕಾಣಾ; ಮಹಾಲಿಂಗ ಗುರು ಶಿವ
ಸಿದ್ಧೇಶ್ವರ ಪ್ರಭುವೇ !"

ಮಾಹೇಶ್ವರ ಭಕ್ತನ ಮಹಿಮೆಯಿದು; ಮಹಿಮೆಯ ಮನಂಬಲುಗುವ ಮೀಮಾಂಸೆಯಿದು.

"ತ್ಯಾಂಗಕ್ಕೆ ಅರ್ಚನೆಯೇ ಆಶ್ರಯ
ಅರ್ಚನೆಗೆ ಉಸಿರೇ ಆಶ್ರಯ
ಉಸಿರಕ್ಕೆ ಜಿಹ್ವಾಧಾರಗಳೇ ಆಶ್ರಯ
ಜಿಹ್ವಾಧಾರಗಳಿಗೆ ಸುರಸಪ್ರಸಾದವೇ ಆಶ್ರಯ
ಸುರಸಪ್ರಸಾದಕ್ಕೆ ಕರ್ತೃಸಾದಾಖ್ಯ ಗುರುಲಿಂಗವೇ ಮೂಲಾಶ್ರಯ
ಇಂತಿವನು ನಿಷ್ಠೆಯೊಳಗಣ ಶ್ರದ್ಧೆಯಿಂದ ಅರಿದು ಆಚರಿಸಬಲ್ಲಾತನೆ
ಮಾಹೇಶ್ವರನ ಭಕ್ತ, ಶ್ರೀ ನಿಡುಮಾಮಿಡಿ ಶ್ರೀ ಗಿರಿಸರ್ಯ
ಸಿಂಹಾಸನಾಧೀಶ್ವರ, ಇದು ಮಾಹೇಶ್ವರನ ಭಕ್ತಸ್ಥಲ ನಿರ್ಣಯ."

ಆ ಕೃರ್ತ ಸಾದಾಖ್ಯದ ಗುರುಲಿಂಗದೊಳಗಿನ ಆಚಾರ ಲಿಂಗವನ್ನು ಆರಾಧಿಸುವ ನಿಷ್ಠಾನುಭಾವಿಯೇ ಮಾಹೇಶ್ವರನ ಭಕ್ತ. ಆತನೇ ಮಹಾ ಭಕ್ತ ಶಿವನಿಗಿಂತ ಶ್ರೇಷ್ಠನಾದ ಭಕ್ತ. ಅಂತೆಯೇ ಆತನು ಮಾಹೇಶ್ವರನ ಭಕ್ತ.

ಮಾಹೇಶ್ವರನಿಗೂ ಭಕ್ತಿ ಅಗತ್ಯ. '...ಭಕ್ತಿ ಇಲ್ಲದ ಠಾವಿನಲ್ಲಿ ಯುಕ್ತಿ ಇಲ್ಲ. ಆ ಯುಕ್ತಿ ಇಲ್ಲದವನಲ್ಲಿ ಮುಕ್ತಿ ಇಲ್ಲ. ಈ ಅವಿವೇಕಿಯಾದ ಯುಕ್ತಿ ಶೂನ್ಯನ ಗುರುವೆಂದು ಉಪದೇಶವ ಪಡೆದವನ ಸೊಲ್ಲು ಬೇಡವಯ್ಯಾ.' ಭಕ್ತಿ ಯುಕ್ತಿ ಇಲ್ಲದವನು ಮಾಹೇಶ್ವರನಲ್ಲ, ನಿಜಗುರುವಲ್ಲ. ಸಮಯಕ್ಕೆ ಸಮನಿಸಿದ ಮನುಜ ಎಂದು ಸಮ್ಯಗ್ ಜ್ಞಾನಿ ಚನ್ನಬಸವಣ್ಣನ ನಿರೂಪಣೆ. ಮಾಹೇಶ್ವರನಿಗೆ ಭಕ್ತಿಬೇಕು. ಆದರೆ ಆ ಭಕ್ತಿ ಸತ್ಯವೂ ಸಹಜವೂ ಸಮ್ಮತವೂ ಆಗಿರಬೇಕು.

ಇಂತಹ ಭಕ್ತಿಯಿಲ್ಲದಿದ್ದರೆ 'ಮಾಹೇಶ್ವರನ ಭಕ್ತ' ಎನಿಸನು. ಮಾಹೇಶ್ವರನ ಭಕ್ತನು ಸುಯಿಧಾನ ಭಕ್ತಿ–ಸುಜ್ಞಾನ ಭಕ್ತಿ ಸಂಪನ್ನನೂ ಆಗಿರಬೇಕೆಂದು ಚನ್ನಬಸವಣ್ಣನವರ ಅಭಿಮತ. 'ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು. ವರ್ಮವನರಿಯದ ಮಾಟ ಸಯಿದಾನದ ಕೇಡು. ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲ ಸಂಗಮದೇವ.' ಎಂದು ಬಸವಣ್ಣನವರ ಸಮ್ಮತ-

ಮಾಹೇಶ್ವರನಿಗೆ ಸುಯಿಃದಾನ ಮತ್ತು ಸುಜ್ಞಾನ ಭಕ್ತಿ ಬೇಕೆಂಬುದು ವೆಗ್ಗಳ. ಆ ಭಕ್ತಿಯುಳ್ಳವನೇ ಮಾಹೇಶ್ವರನ ಭಕ್ತ. ಗುರುಲಿಂಗದೊಳಗಿನ ಆಚಾರ ಲಿಂಗವನ್ನು ಜಲಾಂಗದೊಳಗಿನ ಪೃಥ್ವ್ಯಂಗನು ಆರಾಧಿಸಿ ನಿಷ್ಠೆಯೊಳಗಿನ ಶ್ರದ್ಧೆಯಿಂದ ರಸ ಪದಾರ್ಥದೊಳಗಿನ ಗಂಧ ಪದಾರ್ಥವನ್ನು ಬುದ್ಧಿ ಹಸ್ತದೊಳಗಿನ ಚಿತ್ತ ಹಸ್ತದಿಂದ ಜಿಹ್ವಾಮುಖದೊಳಗಿನ ನಾಸಿಕ ಮುಖದಿಂದ ಅರ್ಪಿಸಿ ಜ್ಞಾನ ಶಕ್ತಿಯೊಳಗಿನ ಕ್ರಿಯಾಶಕ್ತಿಯನ್ನು ಕೈಗೂಡಿಸಿಕೊಳ್ಳುವವನೇ ಮಾಹೇಶ್ವರನ ಭಕ್ತ.

# ಮಾಹೇಶ್ವರನ ಮಾಹೇಶ್ವರ ಸ್ಥಲ

ತ್ಯಾಗಾಂಗದೊಳಗಿನ ಜಲಾಂಗ ಮಾಹೇಶ್ವರ. ಜಲಾಂಗದೊಳಗಿನ ಜಿಹ್ವೆ ಮಾಹೇಶ್ವರನ ಮಾಹೇಶ್ವರ. ಗುರುಲಿಂಗವನ್ನು ಆರಾಧಿಸುತ್ತಾನೆ ಜಲಾಗ ಮಾಹೇಶ್ವರ. ಗುರುಲಿಂಗದೊಳಗಿನ ಗುರುಲಿಂಗವನ್ನು ಅಂದರೆ ಗುರುಲಿಂಗತ್ವವನ್ನು ಆರಾಧಿಸುತ್ತದೆ ಜಿಹ್ವಾಂಗ. ಪದ (ಶಬ್ದ) ನಿಷ್ಠ ಮತ್ತು ಪದಾರ್ಥ (ಅನ್ನ) ನಿಷ್ಠ ರಸವನ್ನು ಸುರಸ ಪ್ರಸಾದವನ್ನಾಗಿಸುವ ಮುಖ್ಯ ಕರ್ತವ್ಯರೂಪ ಅಧಿಕಾರ ಅದರದಾಗಿದೆ ತ್ಯಾಗಾಂಗ ಮಾಹೇಶ್ವರನಿಗೆ ಜಿಹ್ವೆಯಿಲ್ಲದೆ ಆಸ್ವಾದನ ಆಟ ಸಾಗದು'

ತ್ಯಾಗಾಂಗ ಜಲದ ಪೂರ್ವಾಶ್ರಯವನ್ನು ಕಳೆದರೆ ಜಿಹ್ವಾಂಗ ಜಲಜನ್ಯ ರಸದ ಪೂರ್ವಾಶ್ರಯವನ್ನು ಕಳೆಯುತ್ತದೆ, ಇದರಿಂದಾಗಿ ಜಿಹ್ವಾಂಗಕ್ಕೆ ಮಾಹೇಶ್ವರನ ಮಾಹೇಶ್ವರತ್ವವುಂಟಾಗುತ್ತದೆ ಗುರುಲಿಂಗದೊಳಗಿನ ಆಚಾರ ಲಿಂಗವನ್ನು ಆರಾಧಿಸಿ ಮಾಹೇಶ್ವರ ಭಕ್ತನೆನಿಸಿದರೆ, ಅದೇ ಗುರುಲಿಂಗದೊಳಗಿನ ಗುರುಲಿಂಗವನ್ನು ಆರಾಧಿಸಿ 'ಮಾಹೇಶ್ವರನ ಮಾಹೇಶ್ವರ' ಎನಿಸುತ್ತದೆ.

ಗುರು ಲಿಂಗವು ಉಳಿದೆಲ್ಲ ಲಿಂಗಗಳಿಗೆ ತನ್ನ ಚಿತ್ಕಳಾ ಚೈತನ್ಯ ಸತ್ವವನ್ನೀಯಬಲ್ಲುದಾಗಿ ಅದು ಹೇಗೆ 'ಗುರು' ಅಂದರೆ ಮಹಾ ಎಂದೂ ಲಿಂಗವೆಂದರೆ ಈಶ್ವರ ಎಂದೂ ಗುರುಲಿಂಗವೆಂದರೆ ಮಹೇಶ್ವರ ಎಂದೂ ಹೇಳಿಸಿಕೊಳ್ಳುತ್ತದೆ. ಅದರ ಅಂಗವಾದ ಜಿಹ್ವೆಯು ಉಳಿದೆಲ್ಲ ಅಂಗೋಪಾಂಗಗಳಿಗೆ ಕ್ರಿಯಾಸತ್ವವನ್ನು ಕೊಡುವದಾಗಿ ಇದು ಹಾಗೆ ಮಾಹೇಶ್ವರ ಎನಿಸುತ್ತದೆ. ಮಹೇಶ್ವರ ಎನಿಸುವ ಗುರುಲಿಂಗಕ್ಕೂ ರಸಯೋಗವನ್ನುಂಟು ಮಾಡುವುದರಿಂದ ಇದಕ್ಕೆ ಮಾಹೇಶ್ವರನ ಮಾಹೇಶ್ವರತ್ವ ಮೈಗೂಡುತ್ತದೆ.

ಪಾದ, ಹಸ್ತ, ಮಂತ್ರಗಳ ಸ್ಪರ್ಶದಿಂದ ಸಮಷ್ಟಿ ಜಲಶುದ್ಧಿಯಾದರೆ, ಆ ಜಲಜನ್ಯರಸವು ಪಾದ, ಹಸ್ತ, ಮಂತ್ರ, ಭೂತಿಗಳ ಜತೆಗೆ ಜಿಹ್ವೆಯ ಸ್ಪರ್ಶ

ದಿಂದ ತನ್ನ ರಸದೋಷವನ್ನು ಕಳೆದುಕೊಳ್ಳುತ್ತದೆ. ತನ್ನಲ್ಲಿಗೆ ಬಂದ ಆ ರಸವನ್ನು ಗುರುಲಿಂಗಕರ್ಪಿಸಿ ಸುರಸ ಪ್ರಸಾದವ ಪರಮ ಪ್ರಭುತ್ವ ಜಿಹ್ವೆಗಿರುತ್ತದೆ. ಆ ಸುರಸ ಪ್ರಸಾದವನ್ನು ಸವಿದು (ಉಪಭೋಗಿಸಿ) ಅದರ ಸತ್ವದಿಂದ ಘ್ರಾಣ ಭಕ್ತನನ್ನು ನೇತ್ರಪ್ರಸಾದಿಯನ್ನು ತ್ವಕ್‌ಪ್ರಾಣಲಿಂಗಿಯನ್ನು ಶ್ರೋತ್ರ ಶರಣನನ್ನು ಹೃದಯೈಕ್ಯನನ್ನು ಬಾಳಿಸಿ ಪ್ರೇರೇಪಿಸುವ ಪರಮ ಪ್ರಭುತ್ವ ಗುರುಲಿಂಗಾಶ್ರಯದ ಜಿಹ್ವಾಂಗಕ್ಕಿದೆ. ಇದರಿಂದಾಗಿ ಇದು ಮಾಹೇಶ್ವರನ ಮಾಹೇಶ್ವರತ್ವಕ್ಕೆ ಸಲ್ಲುತ್ತದೆ. ರಸವನ್ನು ಗುರುಲಿಂಗಕ್ಕರ್ಪಿಸಿದರೆ ರಸತ್ವವನ್ನು ಗುರುಲಿಂಗದೊಳಗಿನ ಗುರುಲಿಂಗಕ್ಕರ್ಪಿಸುತ್ತದೆ,

"ತ್ಯಾಗಾಂಗಕ್ಕೆ ಕ್ರಿಯಾಜ್ಞಾನಗಳೇ ಆಧಾರ
ಕ್ರಿಯಾಜ್ಞಾನಗಳಿಗೆ ಪ್ರಾಣವೇ ಆಧಾರ
ಪ್ರಾಣಕ್ಕೆ ಜಿಹ್ವೆಯೇ ಆದಿ ಆಧಾರ
ಜಿಹ್ವೆಗೆ ಸುರಸ ಪ್ರಸಾದವೇ ಆಧಾರ
ಸುರಸ ಪ್ರಸಾದಕ್ಕೆ ಕರ್ತೃಸಾದಾಖ್ಯ ಗುರುಲಿಂಗವೇ ಮುಖ್ಯಾಧಾರ.
ಆ ಗುರುಲಿಂಗದೊಳು ಸಮರಸಗೊಂಡ
ಜಿಹ್ವತ್ಯಾಂಗನೇ ಮಾಹೇಶ್ವರನ ಮಾಹೇಶ್ವರನೆಂಬನು
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರನು."

ಸಹಜ ಸುಯ್ಧಾನ ಸತ್ಕ್ರಿಯೆಯಿಂದ ತ್ಯಾಗಾಂಗ ಮಾಹೇಶ್ವರ ಸ್ಥಲ ಸಂಪನ್ನವಾಗಿರುತ್ತದೆ. ಈ ತ್ಯಾಗಾಂಗ ಮಾಹೇಶ್ವರನಿಗೆ ಸುರಸ ಪ್ರಸಾದ ಜ್ಞಾನಾನುಭವ ಪ್ರದಾನದಿಂದ. ಜಿಹ್ವಾಂಗತ್ವವು ಮಾಹೇಶ್ವರನ ಮಾಹೇಶ್ವರ ಎನಿಸುತ್ತದೆ. ಆ ಜ್ಞಾನಾನುಭವದ ಆನಂದದಲ್ಲಿ ಸಮರಸಗೊಳಿಸುವುದರಿಂದಲೂ ಆ ಹಿರಿತನಕ್ಕೆ ಹಿರಿದಾದ ನೆಲೆ ಹೊಂದಿಬರುತ್ತದೆ. ತ್ಯಾಗಾಂಗವನ್ನು ಆ ಸುರಸ ಪ್ರಸಾದ ರೂಪ ಗುರುಲಿಂಗಾನಂದ ಸಮರಸದಲ್ಲಿರಿಸುವ ಪರಮಾಧಿಕಾರಿ ಜಿಹ್ವೆಯು. ಅಂತಹ ಆ ತ್ಯಾಗಾಂಗದಲ್ಲಿ ಗುರುಲಿಂಗರೂಪ ಚಿತ್ಕಳೆಯನ್ನು ಪ್ರತಿಷ್ಠೆಯ ಮಾಡುವ ಪೇರೊಡೆತನವುಳ್ಳುದು ಜಿಹ್ವೆಯು,

"ಕಾಯದ ಮೇಲೆ ಲಿಂಗವ ಧರಿಸಿ ದೇವಪೂಜೆಯ ಮಾಡಿ
ಕಾಯವಳಿದು ದೇವತಾಭೋಗವನು ಎಯ್ದ್ಹೆನೆಂಬ

ಗಾವಿಲರನೆನಗೊಮ್ಮೆ ತೋರದಿರಯ್ಯಾ !
ಕಾಯವನೂ ಜೀವವನೂ ಲಿಂಗದಲ್ಲಿ ಇರಿಸಬಲ್ಲರೆ,
ಮಹಾದೇವನೆಂಬುದು ಬೇರುಂಟೆ ?
ಆ ಮಹಾ ಮಾಹೇಶ್ವರಂಗೆ ನಮೋ ನಮೋ ಎಂಬೆನು ಕಾಣಾ,
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ !"

ದೇಹಭಾವ ಜೀವ ಭಾವಗಳೆರಡನ್ನೂ ಗುರುಲಿಂಗದಾಶ್ರಯದಲ್ಲಿ ಪ್ರಾಪ್ತವಾಗುವ ಸುರಸ ಪ್ರಸಾದ ಪರಿಣಾಮದಲ್ಲಿ ಪರ್ಯವಸಾನಗೊಳಿಸುವ ಪರಮ ಪ್ರಭುತ್ವ ರಸನಾಂಗಕ್ಕಿರುವುದರಿಂದ ಈ ಮಹಾ ಮಾಹೇಶ್ವರತ್ವಕ್ಕೇರುತ್ತದೆ.

ಕರ್ಮ ಸಾದಾಖ್ಯಸ್ವರೂಪವಾದ ಆಚಾರಲಿಂಗಾರಾಧಕ ಘ್ರಾಣಾಂಗವು ಆ ಆಚಾರ ಲಿಂಗಾಂತರ್ಗತ ಗುರುಲಿಂಗಾರಾಧನೆಯಿಂದ ಘ್ರಾಣವು ಮಾಹೇಶ್ವರನೆನಿಸುತ್ತದೆ. ಈ ಘ್ರಾಣ ಮಹೇಶ್ವರನಿಗೆ ಜಿಹ್ವಾಂಗವು ಜನಕ ಭಾವದಿಂದ ಮಾಹೇಶ್ವರನೆನಿಸುತ್ತದೆ.

ಗುರು ಲಿಂಗದೊಳಗಿನ ಗುರುಲಿಂಗವನ್ನು ಜಿಹ್ವಾಂಗದೊಳಗಿನ ಜಿಹ್ವಾಂಗನು ನಿಷ್ಠೆಯೊಳಗಿನ ನಿಷ್ಠೆಯಿಂದ ಆರಾಧಿಸಿ ಬುದ್ಧಿಯೊಳಗಿನ ಬುದ್ಧಿ ಹಸ್ತದಿಂದ ಜಿಹ್ವೆಯೊಳಗಿನ ಜಿಹ್ವೆಮುಖಕ್ಕೆ ರಸದೊಳಗಿನ ರಸ ಪದಾರ್ಥವನ್ನು ಗುರುಲಿಂಗದೊಳಗಿನ ಗುರುಲಿಂಗಕ್ಕೆ ಅರ್ಪಿಸಿ ಜ್ಞಾನದೊಳಗಿನ ಸುಜ್ಞಾನವನ್ನು ಆರ್ಜಿಸಿಅನುಭವಿಸಿ ಪ್ರತಿಷ್ಠಾ ಕಳೆಯಿಂದೊಡಗೂಡುವವನೇ ಮಾಹೇಶ್ವರನ ಮಾಹೇಶ್ವರ.

ಜಿಹ್ವಾವಚ್ಛಿನ್ನ ಶುದ್ಧಾಂಗನು ಗ್ರಾಹಕ ಮಾಹೇಶ್ವರನ ಮಾಹೇಶ್ವರನಾದರೆ ಸ್ವಾಧಿಷ್ಠಾನಾವಚ್ಛಿನ್ನ ಶುದ್ಧಾಂಗನು ಧಾರಕ ಮಾಹೇಶ್ವರನ ಮಾಹೇಶ್ವರನೆಂದೆನಿಸುತ್ತಾನೆ.

## ಮಾಹೇಶ್ವರನ ಪ್ರಸಾದಿ :

ತ್ಯಾಗಾಂಗದೊಳಗೆ ಭೋಗಾಂಗವಿದೆ. ಜಿಹ್ವೆ ಮುಖದೊಳಗೆ ನೇತ್ರಾಂಶವಿದೆ, ಗುರುಲಿಂದೊಳಗೆ ಶಿವಲಿಂಗವಿದೆ. ಸುರಸಪ್ರಸಾದದಲ್ಲಿ ಸುರೂಪಪ್ರಸಾದವಿದೆ. ಇದರಿಂದಾಗಿ ಗುರುಲಿಂಗದೊಳಗಿನ ಶಿವಲಿಂಗೋಪಾಸನೆಯಿಂದ ತ್ಯಾಗಾಂಗ ಮಾಹೇಶ್ವರನಿಗೆ ಪ್ರಸಾದಿಯಾಗುತ್ತದೆ ಜಿಹ್ವೋಪಾಂಗ. ಸುರಸಪ್ರಸಾದದೊಳಗಿನ ಸುರೂಪ ಪ್ರಸಾದವನ್ನು ನಿರಹಂಕಾರ ಹಸ್ತದಿಂದ ಸಮರ್ಪಿಸುತ್ತದೆ—ಗುರುಲಿಂಗದೊಳಗಿನ ಶಿವಲಿಂಗಕ್ಕೆ ಅವಧಾನಭಕ್ತಿಯಿಂದ ಜಿಹ್ವೆದೊಳಗಿನ ನೇತ್ರವು. ಇದರಿಂದಾಗಿ ನೇತ್ರಾಂಶದಿಂದ ಕೂಡಿದ ಜಿಹ್ವೆಯು ತ್ಯಾಗಾಂಗ ಮಾಹೇಶ್ವರನ ಪ್ರಸಾದಿಯೆನಿಸುತ್ತದೆ,

ಜಿಹ್ವೆಯಲ್ಲಿಯೂ ತೇಜತತ್ತ್ವವಿದೆ. ಅಂತೆಯೇ ನಾಲಗೆಯ ಮೇಲಿರಿಸಿದ ಹಲವು ಅನ್ನಾಂಶಗಳು ನಾಲಗೆಯ ಮೇಲೆಯೇ ಜೀರ್ಣವಾಗುತ್ತದೆ. ರೂಪ ಪದಾರ್ಥದ ಪೂರ್ವಾಶ್ರಯವನ್ನು ಕೆಲಮಟ್ಟಿಗೆ ಪರಿಹರಿಸಬಲ್ಲದು ನಾಲಗೆ! ಗುರುಲಿಂಗದೊಳಗಿನ ಶಿವಲಿಂಗವು ಸುರಪ್ರಸಾದದ ಸುರೂಪಪ್ರಸಾದವನ್ನು ಪರಿಗ್ರಹಿಸಬಲ್ಲುದು.

ಸುರಸಪ್ರಸಾದವನ್ನು ಆರೋಗಿಸುವಾಗ ಮಾಹೇಶ್ವರನು ಹೆಚ್ಚಿನ ಎಚ್ಚರಿಕೆಯನ್ನು ನಿರ್ವಹಿಸುವುದೇ 'ಮಾಹೇಶ್ವರನ ಪ್ರಸಾದಿ'ತನ.

"ಕೈಯ ಮರೆದು ಕಾದುವ ಕಾಳಗವದೇನೋ ?
ಮೈಯ ಮರೆದು ಮಾಡುವ ಮಾಟವದೇನೋ ?
ಬಾಯ ಮರೆದು ಉಂಬ ಊಟವದೇನೋ ?

ಸನ್ಮಾನ ಸಾವಧಾನ ಸನ್ನಿಹಿತವಿಲ್ಲದ
ಲಿಂಗಸಂಧಾನ ಜನ್ಮದ ಮೃತ್ಯು ನೋಡಾ !
ಎಚ್ಚರಿಕೆ ಇಲ್ಲದ ಅರ್ಪಿತ ವಿಕಾರ ನೋಡಾ!
ಸಂಕಲ್ಪ ವಿಕಲ್ಪವಿಲ್ಲದೆ ಮನಲಿಂಗಸಾಹಿತ್ಯವಾದರೆ ಅರ್ಪಿತ;
ಅದು ಪ್ರಸಾದ ನೋಡಾ !
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಮಾಹೇಶ್ವರನ ಪ್ರಸಾದಿ ಆಗದೆ ಸುರಸಪ್ರಸಾದವನ್ನು ಆರೋಗಿಸಬಾರದು. ಆರೋಗಿಸಿದರೆ ಕೈ ಮರೆದು ಕಾದಿದಂತೆ, ಮೈಮರೆದು ಮಾಡಿದಂತೆ, ಬಾಯ್ಮರೆದು ಉಂಡಂತೆ ನಿರರ್ಥ. ಮತ್ತು ಸಾವಧಾನವಿಲ್ಲದ ಲಿಂಗಸಂಧಾನ, ಎಚ್ಚರಿಕೆಯಿಲ್ಲದ ಅರ್ಪಿತ ಪರಿವಿಡಿದು ವಿನಾಶ-ವಿಕಾರಗಳಿಗೆ ಸಾಧನ. ಸಂಕಲ್ಪ ವಿಕಲ್ಪಗಳಿಲ್ಲದಿರುವುದೇ ಮನದ ಅವಧಾನ; ಎದೆಯ ಎಚ್ಚರಿಕೆ. ಅಂತಹ ಪ್ರಸನ್ನ ಮನದಿಂದ ಲಿಂಗಸಂಧಾನವಾಗಬೇಕು. ಲಿಂಗಸಾಹಿತ್ಯವಾಗಬೇಕು; ಆಗ ಅದು ಅರ್ಪಿತವಾಗುತ್ತದೆ; ಅದು ಪ್ರಸಾದವೆನಿಸುತ್ತದೆ. ಅದನ್ನು ಆರೋಗಿಸಿದರೆ ಮಾಹೇಶ್ವರ ಪ್ರಸಾದಿತನ ಪ್ರಾಪ್ತವಾಗುತ್ತದೆ.

ಮನೇಂದ್ರಿಯಗಳನ್ನು ಮತ್ತೊಂದಕ್ಕೆ ತುಳುಕದಂತೆ ತನ್ನಲ್ಲಿಯೇ ತನ್ಮಯಗೊಳಿಸಿಕೊಂಡು ಪ್ರಶಾಂತನಾಗಿರುವುದೇ ಮಾಹೇಶ್ವರ ಪ್ರಸಾದಿಯ ಪ್ರಕ್ರಿಯೆ. ದೃಢಚಿತ್ತನಾಗಿ ದೃಢನಿಶ್ಚಯನಾಗಿ ದೃಢ ಸಂಯಮಿಯಾಗಿ ಮುನ್ನಡೆವುದೇ ಮಾಹೇಶ್ವರದ ಪ್ರಸಾದಿತನ. ಮನದ ಮರವೆಯನ್ನು ಕಳೆದುಕೊಳ್ಳುವುದೇ ಮಾಹೇಶ್ವರನ ಪ್ರಸಾದಿಯ ಸಾವಧಾನ.

"ಶಿಶು ತಾಯ ಮರೆವುದೇ ಅಯ್ಯಾ ?
ಹಸು ಕರುವ ಮರೆವುದೇ ಅಯ್ಯಾ?
ಅಂಗನೆ ರಮಣನ ಮರೆವಳೆ ಅಯ್ಯಾ ?
ಲಿಂಗ ಸಾವಧಾನಿಯಾದಾತ

ಲಿಂಗದ ನೆನಹ ಮರವನೇ ಅಯ್ಯಾ ?
ಮಹಾಲಿಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೇ."

ಅಂಗಸಾವಧಾನಿ ಆಗಬಹುದು, ಲಿಂಗಸಾವಧಾನಿ ಆಗುವುದು ಕರಕಷ್ಟವಾದರೂ ಕೈಗೂಡಿಸಿಕೊಳ್ಳದೆ ವಿಧಿಯಿಲ್ಲ; ಪ್ರಸಾದಿಯ:ಲ್ಲ. ಮನದ ಅವಧಾನಕ್ಕೂ ರಸನೇಂದ್ರಿಯ ಧಾರಣಕ್ಕೂ ಸನ್ನಿಹಿತ ಸಂಬಂಧವಿದೆ. ಹಸಿವಾಯಿತೆಂದು ಉಣಬಾರದು. ರುಚಿಯೆಂದು ಹಚ್ಚಿಚ್ಚಾಗಿ ಉಣಬಾರದು. ಲಿಂಗಾರ್ಪಿತಕ್ಕೆ ಸಲ್ಲದ ರಾಜಸ ತಾಮಸಾಹಾರವನ್ನು ಉಣಬಾರದು. ಲಿಂಗಾರ್ಪಣವಾಗದ್ದನ್ನು ಉಣಬಾರದು. ಉಂಡರೆ ಅಂಗಭೋಗವಾಗಿ ಅವಧಾನ ತಪ್ಪುತ್ತದೆ. ಕರಣೇಂದ್ರಿಯವಿಕಾರ ಉದ್ಬುದ್ಧವಾಗುತ್ತದೆ. ಆದಬಳಿಕ ಮನೇಂದ್ರಿಯಗಳ ಮೇಲೆ ಮಾಹೇಶ್ವರತ್ವ (ಒಡೆತನ) ನಿಲ್ಲದು. ಮಾನಸಿಕ ಪ್ರಸನ್ನತ್ವಪ್ರಾಪ್ತವಾಗದು. ತನುಮನಭಾದ ತೊಲಗದು, ತನುಮೋಹಿಗೆ ತತ್ತ್ವಸಂಪತ್ತಿನ ಸಂಪಾದನೆಯಾಗದು; ನಿತ್ಯತೆ ನಿರ್ಮಲಭ್ಯಾವಗಳು ಅಳವಡವು.

"ತನು ಮುಟ್ಟಿಹ ಮನ, ಮನವ ಮುಟ್ಟಿಹ ತನು;
ತನುಮನವ ಮುಟ್ಟಿಹ ಸರ್ವಕರಣಂಗಳು ನೋಡಾ !
ಕಾಯದ ಕರಣಂಗಳ ಮುಟ್ಟಿಹ ಜೀವನ ನೋಡಾ!
ಕಾಯ ಜೀವ ಕರಣಂಗಳ ಶುದ್ಧ ಪರಮಾತ್ಮಲಿಂಗದಲ್ಲಿ
ಮುಟ್ಟಿಸಬಲ್ಲರೆ ಅದೇ ಅರ್ಪಿತ, ಅದೇ ಪ್ರಸಾದ ನೋಡಾ!
ಆ ಪ್ರಸಾದಿ ಎಂದೂ ಪ್ರಳಯವಿರಹಿತನು ನೋಡಾ!
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !"

ಕಾಯಕರಣ ಜೀವಗಳು ಮಾಹೇಶ್ವರ ಪ್ರಸಾದಿಗೆ ಪದಾರ್ಥತ್ರಯಗಳು. ಇವು ಪ್ರಪಂಚದತ್ತ ಹರಿಯದೆ ಪರಮಾರ್ಥದಲ್ಲಿ ಪರಮ ಆಸಕ್ತಿಯ ವಹಿಸಿ ಪರಮಾತ್ಮನ ಧ್ಯಾನಧಾರಣಗಳಲ್ಲಿ ನಿರತವಾದರೆ ಇವುಗಳ ಪದಾರ್ಥತ್ವವು ಹೋಗಿ ಪ್ರಸಾದತ್ವವು ಪ್ರಾಪ್ತವಾಗುತ್ತದೆ. ಪ್ರಸನ್ನಕಾಯಕರಣ ಜೀವವುಳ್ಳವನೇ ಪ್ರಸಾದಿಯೆನಿಸುತ್ತಾನೆ.

"ಕಾಯಲಿಂಗಾರ್ಪಿತವಾದ ಬಳಿಕ,
ಕರ್ಮತ್ರಯಂಗಳು ಇರಲಾಗದು ನೋಡಾ!
ಜೀವಲಿಂಗಾರ್ಪಿತವಾದ ಬಳಿಕ,
ಸಂಸಾರಪ್ರಾಪ್ತಿಯಾಗುವ ಜೀವನಗುಣ ಇರಲಾಗದು;
ಅದು ಅರ್ಪಿತವಲ್ಲ ನೋಡಾ!
ಕರಣಂಗಳು ಲಿಂಗಾರ್ಪಿತವಾದ ಬಳಿಕ,
ಆ ಕರಣಂಗಳೆಲ್ಲವೂ ಲಿಂಗ ಕಿರಣಂಗಳಾಗಿ
ಆ ಲಿಂಗ ಕಿರಣಂಗಳೇ ಹರಣವಾಗಿರಬೇಕು-ನೋಡಾ !
ಕಾಯದ ಜೀವದ ಕರಣದ ಗುಣವ ಕಳೆಯದೆ,
ಲಿಂಗಾರ್ಪಿತ ಪ್ರಸಾದಿಗಳೆಂಬ ಪ್ರಪಂಚಿಗಳ ಮೆಚ್ಚನು ಕಾಣಾ,
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಮಾಹೇಶ್ವರನ ಪ್ರಸಾದಿಯು ಕಾಯಪ್ರಸಾದವನ್ನು ಇಷ್ಟಲಿಂಗಾಂತರ್ಗತ-ಆಚಾರಲಿಂಗಕ್ಕರ್ಪಿಸಿ ಸಂಚಿತ ಆಗಾಮಿ ಪ್ರಾರಬ್ಧವೆಂಬ ಮೂರು ಕರ್ಮಗಳಿಂದ ಮುಕ್ತನಾಗಿರುತ್ತಾನೆ. ತನ್ನ ಜೀವವನ್ನು ಅದೇ ಇಷ್ಟಲಿಂಗಾಂತರ್ಗತ ಗುರು ಲಿಂಗಕ್ಕೆ ಅರ್ಪಿಸಿ ಜೀವಗುಣಗಳನ್ನು ಜಯಿಸಿರುತ್ತಾನೆ. ಜೀವಗುಣಗಳಿಲ್ಲದ ಬಳಿಕ ಜೀವನದ ಜಂಜಾಟವಿರದು. ಜೀವಗುಣಗಳೇ ಸಂಸಾರ. ಈ ಸಂಸಾರದಲ್ಲಿ ರುವುದೇ ಸಂಕಟ. ತಾಪತ್ರಯದಲ್ಲಿ ತೊಳಲಿ ಬಳಲುವವನ ಜೀವವು ಲಿಂಗಾ ರ್ಪಿತವಾಗದು; ತನ್ನ ಜೀವ ಭಾವವನ್ನು ಜಯಿಸದು. ಇನ್ನು ಕಾಯ ಜೀವ ರನ್ನು ಬಳಸಿಬಂದ ಕರಣಗಳು ಲಿಂಗಜ್ಯೋತಿಯ ಕಿರಣಗಳಾಗಬೇಕಾದರೆ, ಆ ಲಿಂಗ ಕಿರಣಗಳೇ ತನ್ನ ಹರಣಗಳಾಗಬೇಕಾದರೆ ಆ ಆ ಕರಣಗಳು ಆ ಆ ಲಿಂಗಗಳಿಗೆ ಸಮ ರ್ಪಣವಾಗಬೇಕು. ಆದಾಗ ಕಾಯ ಜೀವ ಕರಣಗಳಿಗೆಲ್ಲ ಮಾಹೇಶ್ವರನಾಗಿ ಮನಪ್ರಸನ್ನನಾಗಿ 'ಮಾಹೇಶ್ವರನ ಪ್ರಸಾದಿ' ಎನಿಸಲು ಎಲ್ಲ ಬಗೆಯಲ್ಲಿ ಸಮರ್ಥ ನಾಗುತ್ತಾನೆ. ಶಿವ ಪ್ರಸಾದದಲ್ಲಿ ಸದಾ ಸುಖಿಯಾಗಿರುತ್ತಾನೆ.

"ಎನ್ನ ಕಾಯ ಕಾಮಾರಿಯಲ್ಲಿ ಸಾವಧಾನವಾಗಿತ್ತಾಗಿ, ಕಾಯವೆನಗಿಲ್ಲ ನೋಡಾ !
ಎನ್ನ ಮನ ಮಹೇಶ್ವರನಲ್ಲಿ ಸಾವಧಾನವಾಯಿತ್ತಾಗಿ,
ಮಾಯಾ ಪ್ರಪಂಚು ಹೆರೆತೆಗೆದೋಡಿತ್ತು ನೋಡಾ !
ಎನ್ನ ಪ್ರಾಣ ಪರಮೇಶ್ವರನಲ್ಲಿ ಸಾವಧಾನವಾಯಿತ್ತಾಗಿ,
ಪ್ರಾಣಾದಿ ವಾಯುಗಳ ಪ್ರಪಂಚಿನ ಗಮನಾಗಮನಂಗಳು ನಾಸ್ತಿಯಾಗಿ ದ್ಧವು ಕಾಣಾ !
ಎನ್ನ ಭಾವ ಭವಹರನಲ್ಲಿ ಸಾವಧಾನವಾಯಿತ್ತಾಗಿ,
ಭಾವಾಭಾವ ಭ್ರಮೆಗಳು ಅಳಿದು ಹೋದವು ನೋಡಾ !
ಭಾವ ನಿರ್ಭಾವವಾಗಿ ಬ್ರಹ್ಮವ ಮುಟ್ಟಿತ್ತಾಗಿ
ನಿಮ್ಮ ಪ್ರಸಾದ ಎನ್ನನೊಳಕೊಂಡಿತ್ತು ನೋಡಾ !
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಶಿವ ಪ್ರಸಾದ ಸಿಕ್ಕುವುದು, ಸಿಕ್ಕ ಶಿವಪ್ರಸಾದಿ ಆಗುವುದು ಬಾಯ್ಮಾತ್ರಲ್ಲ. ಕಾಯಮನ ಪ್ರಾಣ ಭಾವಗಳೆಲ್ಲ ಆ ಶಿವನಿಗೆ ಸಮರ್ಪಣವಾಗಬೇಕು. ಸಮರ್ಪಣವಾಗಿ ಕಾಯಗುಣ, ಮಾಯಾ ಪ್ರಪಂಚ, ಪ್ರಾಣಗಮನ, ಭಾವ ಭ್ರಮೆ, ಭಾವತನ—ಇವೆಲ್ಲ ಬಯಲಾಗಬೇಕು. ಆಗ ಪ್ರಸನ್ನಪ್ರಸಾದ ಒಳಗೊಳುತ್ತದೆ. ಆತ ಮಾಹೇಶ್ವರನ ಪ್ರಸಾದಿ ಆಗತ್ತಾನೆ. ಈ ವಿರೂಪದಲ್ಲಿ ಅಹಂಕಾರವಳಿದು ಆ ತನ್ನ ಸ್ವರೂಪ ಸಾಕ್ಷಾತ್ಕಾರವಾಗಿ ಶಾಂತನಾಗಿ ಇರುವಾತನೇ ಮಹಾ ಪ್ರಸಾದಿ.

"ತ್ಯಾಗಾಂಗದೊಳು ಭೋಗಾಂಗವಿಪ್ಪುದು ನೋಡಾ ! ಭೋಗಾಂಗದ ಒಮ್ಮೆಗೆ ದೃಕ್ಕ್ರಿಯೆ ಆಧಾರ ನೋಡಾ ! ದೃಕ್ಕಿನೊಳಗಣ ಈ ಕ್ರಿಯೆ ಮೀರಿದ ಕ್ರಿಯೆ ನೋಡಾ ! ಈ ದೃಕ್ಕ್ರಿಯೆಗೆ ಮಣಿಪೂರವೇ ಆಧಾರ ನೋಡಾ ! ಮಣಿಪೂರಕ್ಕೆ ನೇತ್ರವೇ ಆಧಾರ ನೋಡಾ ! ನೇತ್ರಕ್ಕೆ ಸುರೂಪ ಪ್ರಸಾದವೇ ಆಧಾರ ನೋಡಾ ! ಆ ಪ್ರಸಾದಕ್ಕೆ ಮೂರ್ತ ಸಾದಾಖ್ಯ ರೂಪ ಶಿವಲಿಂಗವೇ

ಆಧಾರ ನೋಡಾ ! ಆ ಶಿವಲಿಂಗದೊಳು ದೃಷ್ಟಿ ಸೂಸದಂತಿಪ್ಪುದೇ ಮಾಹೇಶ್ವರನ ಪ್ರಸಾದಿ ನೋಡಾ ! ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ !" ಗುರು ಲಿಂಗದೊಳಗಿನ ಶಿವಲಿಂಗವನ್ನು ಜಿಹ್ವಾಂಗದೊಳಗಿನ ನೇತ್ರಾಂಗವು ನಿಷ್ಠೆಯೊಳಗಿನ ಅವಧಾನದಿಂದ ಆರಾಧಿಸಿ ಬುದ್ಧಿಯೊಳಗಿನ ಅಹಂಕಾರ ಹಸ್ತದಿಂದ ಜಿಹ್ವೆಯೊಳಗಿನ ನೇತ್ರ ಮುಖಕ್ಕೆ ರಸದೊಳಗಿನ ರೂಪ ಪದಾರ್ಥವನ್ನು ಗುರುಲಿಂಗದೊಳಗಿನ ಶಿವಲಿಂಗಕ್ಕೆ ಅರ್ಪಿಸಿ ಜ್ಞಾನದೊಳಗಿನ ಇಚ್ಛೆಯನ್ನು ಗಳಿಸಿ ವಿದ್ಯಾ ಕಳೆಯಿಂದ ಕೂಡಿದವನೇ ಮಾಹೇಶ್ವರನ ಪ್ರಸಾದಿ.

# ಮಾಹೇಶ್ವರನ ಪ್ರಾಣಲಿಂಗಿ

ಮಾಹೇಶ್ವರಾಂಗ. ಆತನ ತ್ಯಾಗಾಂಗದೊಳಗಿನ ಸೂಕ್ಷ್ಮ ಭೋಗಾಂಗ. ಆತನ ರಸನೆಯಲ್ಲಿ ತ್ವಗಂಶವಿದೆ. ಅದರಲ್ಲಿ ಜಂಗಮ ಲಿಂಗವಿದೆ; ಗುರುಲಿಂಗ ಗರ್ಭದಲ್ಲಿದೆ. ಈ ಗುರುಲಿಂಗದೊಳಗಿನ ಜಂಗಮ ಲಿಂಗ (ಚೈತನ್ಯ)ಕ್ಕೆ ವಾಯು ಸ್ಪರ್ಶ ಅಥವಾ ಪ್ರಾಣಸ್ಪರ್ಶ ರೂಪ ಪದಾರ್ಥವನ್ನು ಮನಮುಟ್ಟಿ ಅರ್ಪಿಸಿ ಮಾಹೇಶ್ವರಾಂಗನು ಪ್ರಾಣಲಿಂಗಿ ಆಗುತ್ತಾನೆ. ಸುರಸ ಪ್ರಸಾದದೊಳಗಿನ ಸುಸ್ಪರ್ಶ ಪ್ರಸಾದವನ್ನು ಮನದ ಹಸ್ತದಿಂದ ಗುರುಲಿಂಗದೊಳಗಿನ ಜಂಗಮ ಲಿಂಗಕ್ಕೆ ಜಿಹ್ವೆಯೊಳಗಿನ ತ್ವಕ್ಕು ಸಮರ್ಪಿಸಿ ತ್ವಗಂಶ ಸಹಿತವಾದ ಜಿಹ್ವೆಯೂ ಸಹ ತ್ಯಾಗಾಂಗ ಮಾಹೇಶ್ವರನ ಪ್ರಾಣಲಿಂಗಿ ಎಂದೆನಿಸುತ್ತದೆ.

ಜಿಹ್ವೆಯಲ್ಲಿಯೂ ವಾಯುತತ್ತ್ವವಿದೆ ಅಂತೆಯೇ ಅಲ್ಲಿರಿಸಿದ ಅನ್ನದ ಸ್ಪರ್ಶ ಆದಕ್ಕಾಗುತ್ತದೆ. ಅಂಗಕ್ಕಾಗುವ ಪ್ರಾಕೃತಿಕ ಸ್ಪರ್ಶ ಸುಖವನ್ನು ಲಿಂಗ ಕ್ಕರ್ಪಿಸಿ ಪರಮಾರ್ಥಗೊಳಿಸುವುದೇ ರಸನೆಗೆ ಪ್ರಾಣಲಿಂಗಿತ್ವ. ಹೀಗಾಗುವುದ ರಿಂದ ಸ್ಪರ್ಶ ಪದಾರ್ಥದ ಪೂರ್ವಾಶ್ರಯವು ಪರಿಹಾರವಾಗುತ್ತದೆ; ಪ್ರಸಾದವೆನಿ ಸುತ್ತದೆ, ಪ್ರಸಾದವಾಗುವುದರಿಂದ ಪ್ರಾಣವು ಲಿಂಗವಾಗುತ್ತದೆ. ಅದುಳ್ಳ ವನೇ ಪ್ರಾಣಲಿಂಗಿ ಎನಿಸುತ್ತಾನೆ.

ಸುರಸ ಪ್ರಸಾದವನ್ನು ಸ್ವೀಕರಿಸುವಾಗ ಮಾಹೇಶ್ವರನು ಆ ಸುರಸ ಪ್ರಸಾದ ದೊಳಗಿನ ಸುಸ್ಪರ್ಶ ಪ್ರಸಾದದ ಅನುಭವವನ್ನು ಅಳವಡಿಸಿ ಕೊಳ್ಳುವುದೇ 'ಮಾಹೇಶ್ವರನ ಪ್ರಾಣಲಿಂಗಿ'ತನ. ಆ ಸುಸ್ಪರ್ಶಾನುಭವದಿಂದ ಅಲ್ಲಿರುವ ಪ್ರಾಣ ವಾಯುವಿಗೆ ಪರಮಕಳೆ, ಪರಮ ಪರಿಣಾಮಗಳುಂಟಾತ್ತವೆ. ಪರಮ ಚೇತನ ವುಂಟಾಗಿ ಪ್ರಾಣಲಿಂಗತ್ವ ಪ್ರಾಪ್ತಿಯಾಗುತ್ತದೆ. ಅವರಿಂದಾಗಿ ರಸನೆಯು ಪ್ರಾಣಲಿಂಗಿಯೆನಿಸುತ್ತದೆ. ಆಗ ರಸನೆ ಇಂದ್ರಿಯವೆಂಬ ಭಾವವೂ ಆರಸನೇಂದ್ರಿ ಯಗತ ಪ್ರಾಣವು ವಾಯುಭೂತವೆಂಬ ವಿಚಾರವೂ ಉಂಟಾಗದು. ಉಂಟಾಗದ ಬಳಿಕ ಇಂದ್ರಿಯ ಬಂಧನ, ಪ್ರಾಣಬಂಧನಗಳುಂಟಾಗವು.

"ಇಂದ್ರಿಯಂಗಳು ಉಳ್ಳನ್ನಕ್ಕರ,
ಪ್ರಾಣಂಗೆ ಬಂಧನ ಮಾಣುವುದೇ ಭವದುಃಖಿಗಳಿರಾ ?
ಇಂದ್ರಿಯಂಗಳೆಲ್ಲವನು ಲಿಂಗಸಂಧಾನವ ಮಾಡಬಲ್ಲರೆ,
ಪ್ರಾಣನ ಬಂಧನ ಬಿಟ್ಟೋಡುವುದು ನೋಡಾ !
ಪ್ರಾಣ ಲಿಂಗವಾಗಿಯಲ್ಲದೆ ಪ್ರಳಯವ ಗೆಲಬಾರದು
ಪ್ರಳಯ ಪ್ರಳಯದ ಹಳೆಯರಾಗಿಪ್ಪವರ
ಪ್ರಾಣಲಿಂಗ ಸಂಬಂಧಿಗಳೆಂತೆಂಬೆನಯ್ಯಾ,
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ ?

ತೋಂಟದ ಸಿದ್ಧಲಿಂಗೇಶ್ವರರ ಈ ವಚನದಲ್ಲಿ ಪ್ರಾಣಲಿಂಗವಾಗುವ ಪರ ಮಾನುಭವದ ವೈಖರಿಯಿದೆ. ಪ್ರಾಣಕ್ಕೂ ಇಂದ್ರಿಯಕ್ಕೂ ನಿವಾರಿಸದ ನಂಟು. ಪ್ರಾಣೇಂದ್ರಿಯ ಭಾವವಿರುವಲ್ಲಿ ಬಂಧನ ಮಾಣದಿರುತ್ತದೆ. ಈ ಬಂಧನವೇ ಭವದುಃಖ. ಈ ದುಃಖದಲ್ಲಿರುವವರೇ ಬಹಳ. ಭವದುಃಖದಿಂದ ಬಿಡುಗಡೆ ಯಾಗಬೇಕಾದರೆ ಇಂದ್ರಿಯ ವಾಸನೆ ಇಲ್ಲವಾಗಬೇಕು. ಇಂದ್ರಿಯಗಳಲ್ಲಿ ಲಿಂಗ ಸಂಬಂಧ ಆಯತ್ತವಾಗಿ ಸ್ವಾಯತ್ತವಾಗಿ ಸನ್ನಿಹಿತಗೊಂಡಿರಬೇಕು. ಆಗ ಅದು 'ಲಿಂಗ ಸಂಧಾನ'ವೆನಿಸುತ್ತದೆ. ಆ ಸಂಧಾನದಿಂದ ಪ್ರಾಣ ಬಾಧನ ಬುಡವಿಲ್ಲದ ಮರದಂತೆ ಉರುಳುತ್ತದೆ. ಪ್ರಾಣ ಪರಲಿಂಗವಾಗುತ್ತದೆ. ಪ್ರಾಣಲಿಂಗ ವಾದರೆ ಪ್ರಳಯವೊದಗದು. ಪ್ರಾಣವಿದ್ದಲ್ಲಿ ಪ್ರಳಯವಿದೆ. ಪ್ರಾಣಲಿಂಗ ವಿದ್ದಲ್ಲಿ ಪ್ರಳಯರಹಿತ ಪರಮ ಪರಿಣಾಮವಿದೆ; ಪರಮ ಸತ್ತೆಯಿದೆ. ಕಾರಣ ಪ್ರಾಣಲಿಂಗಿಯಾಗಬೇಕು.

ಪ್ರಾಣಲಿಂಗಿಯಾಗಬೇಕಾದರೆ ವಿಷಯ ಪ್ರಾಣಿಯಾಗಿ ಬಾಳಬಾರದು; ಕೇವಲ ಪ್ರಪಂಚ ಪ್ರಾಣಿಯಾಗಿ ಬಾಳಬಾರದು.

"ಹೊನ್ನು ಪ್ರಾಣವೆ ಪ್ರಾಣವಾಗಿಪ್ಪರಯ್ಯ.
ಹೆಣ್ಣು ಪ್ರಾಣವೆ ಪ್ರಾಣವಾಗಿಪ್ಪರಯ್ಯ
ಮಣ್ಣು ಪ್ರಾಣವೆ ಪ್ರಾಣವಾಗಿಪ್ಪರಯ್ಯ

ಈ ಹೊನ್ನು ಹೆಣ್ಣು ಮಣ್ಣು ಎಂಬಿವು
ಪ್ರಾಣಂಗೆ ಪ್ರಪಂಚು ಭಾವವೆಂದರಿದು
ಪ್ರಾಣಂಗೆ ಲಿಂಗ ಕಳೆಯ ಸಂಬಂಧಿಸಿ
ಲಿಂಗಕ್ಕೆ ಪ್ರಾಣ ಕಳೆಯ ಸಂಬಂಧಿಸಿ
ಪ್ರಾಣಲಿಂಗವೆಂಬ ಪ್ರತಿಭಾವ ತೋರದೆ
ಅಪ್ರತಿಮ ಲಿಂಗಸಂಬಂಧಿಯಾಗಿದ್ದನು ಕಾಣಾ
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ"

ಕೇವಲ ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಮನಸೋಲುವುದು ಮಾನವತೆಯ ಲಕ್ಷಣವಲ್ಲ. ಇವುಗಳಲ್ಲಿಯೇ ಪ್ರಾಣವನ್ನಿಟ್ಟುಕೊಂಡು ಪ್ರಪಂಚದಲ್ಲಿ ಬಿದ್ದು ಪರಮಾರ್ಥವನ್ನು ದೂರೀಕರಿಸಿಕೊಂಡು ಬಳಲುವುದು ಮಾನವತೆಗೆ ಮಾನ ತರುವುದಿಲ್ಲ, ವೈಷಯಿಕ ವ್ಯಾಮೋಹದಿಂದ ಪಾರಾಗಿ ಪರಮ ಕಳೆಗೆ ಕಣ್ಣಿಡಬೇಕು; ಪ್ರಾಣವನ್ನು ಮುಡುಪಿಡಬೇಕು. ಪರಸ್ಪರ ಪರಮಕಳೆ ಪೂರ್ಣವಾಗಿ ಪ್ರಸರಿಸಿರಬೇಕು. ಅಂತಾದಾಗ ಅಲ್ಲಿ ಪ್ರಪಂಚ ಭಾವಕ್ಕೆ ಇಂಬಿರುವುದಿಲ್ಲ

"ಜ್ಯೋತಿ ಇದ್ದ ಮನೆಯಲ್ಲಿ ಕತ್ತಲೆಯುಂಟೆ ?
ಲಿಂಗವಿದ್ದ ಅಂಗದಲ್ಲಿ ಅಜ್ಞಾನವುಂಟೆ ?
ಅಜ್ಞಾನವಿಲ್ಲವಾಗಿ ಅಂಗವಿಕಾರವಿಲ್ಲ.
ಅಂಗವಿಕಾರವಿಲ್ಲವಾಗಿ ಹೆಂಗಳಿಗೆ ಸೋಲರು
ಹೆಂಗಳಿಗೆ ಎಣಿಸರು; ಮಹಾಲಿಂಗೈಕ್ಯರಯ್ಯ ನಿಮ್ಮ ಪ್ರಮಥರು;
—ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ"

ಮಾನವನ ಪ್ರಗತಿಗೆ ಪ್ರತಿಕೂಲವಾಗಿ ಪರ್ವತದಂತ ನಿಂತಿರುವುದು ಅಜ್ಞಾನಾಂಧಕಾರ, ಅದು ತೊಲಗಬೇಕಾದರೆ ತೊಲಗಿ ತೊಳಗಬೇಕಾದರೆ ಲಿಂಗಕಳೆ ಪ್ರಕೃತಿಯಲ್ಲಿ ಪ್ರಾಣದಲ್ಲಿ ಪ್ರಜ್ವಳಿಸಬೇಕು. ಆಗ ಅಂಗವಿಕಾರ ಅಳಿಯುತ್ತದೆ. ಅಂಗವಿಕಾರವನ್ನು ಅಳಿಸಲು ಲಿಂಗಪ್ರಾಣಿಯಾಗಲೇ ಬೇಕು, ಲಿಂಗ ಶ್ರದೆ ಲಿಂಗನಿಷ್ಠೆ. ಲಿಂಗಾವಧಾನ, ಲಿಂಗಾನುಭಾವ ಮುಮ್ಮೈಗಳಲ್ಲಿ ಮುಮ್ಮಡಿ

ಯಾಗಿ ಮೂಡಿ ದೃಢಗೊಳ್ಳಬೇಕು. ಆಗ ಸಾಧಕನು ಅಪ್ರತಿಮನಾಗುತ್ತಾನೆ, ಅಸಾಧರಣ ಪ್ರಗತಿ ಶೀಲನಾಗುತ್ತಾನೆ,

"ಅಂಗನೆಯು ಚಿತ್ತ ರಮಣನ ಸುತ್ತಿ ಮುತ್ತಿ
ಅಪ್ಪಿ ಅಗಲದೆ ಇಪ್ಪಂತೆ ಜಾಗರ ಸ್ವಪ್ನ ಸುಷುಪ್ತಿಯಲ್ಲಿ
ಶರಣನ ಚಿತ್ತರತಿ ಶಿವಲಿಂಗವ ಸುತ್ತಿ ಮುತ್ತಿ
ಅಪ್ಪಿ ಆಗಲದಿಪ್ಪರೆ ಆ ಮಹಾತ್ಮನ ಎಂತು
ಉಪಮಿಸುವೆನಯ್ಯಾ ಲಿಂಗಪ್ರಾಣಿಯು, ಪ್ರಾಣಲಿಂಗ ಸಂಬಂಧಿಯ
ಸ್ವತಂತ್ರ ವಸ್ತುವಿನಲ್ಲಿ ಅರಿವು ಅರತು
ಬೆರಗು ನಿಬ್ಬೆರಗಾದ ಘನಲಿಂಗ ಪ್ರಾಣಿಗೆ ನಮೋ ನಮೋ
ಎಂಬೆನಯ್ಯಾ, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ"

ಈ ವಚನದಲ್ಲಿ ಉಪಯೋಗಿಸಿದ ಅಂಗನೆ ಎಂಬ ಪದ ಅತ್ಯಂತ ಸೂಕ್ತ ಸಾಂಕೇತಿಕ; ಅಂಗನನ್ನು ಅಂಗನೆಯೆಂದು ಹೇಳುವ ಧ್ವನಿ ಸೂಚಕ. ಅಂಗ ಅಂಗನೆ, ಲಿಂಗ ರಮಣ ಅಂಗನ ಚಿತ್ತರತಿ ಲಿಂಗವನ್ನು ಅಪ್ಪಿ ಅಗಲದಂತಾದಾಗ ಲಿಂಗಪ್ರಾಣಿಯೆನಿಸುತ್ತಾನೆ; ಪ್ರಾಣಲಿಂಗ ಸಂಬಂಧಿಯೆನಿಸುತ್ತಾನೆ. ಲಿಂಗ ಪ್ರಾಣಿ ಆಗುವುದು ಸುಲಭವಲ್ಲ; ಸಾಧಾರಣವಲ್ಲ. ಸರ್ವಸ್ವತಂತ್ರ ವಸ್ತುವಿನಲ್ಲಿ ಜ್ಞಾನಶೂನ್ಯವಾಗಿ ಬೆರಗು ನಿಬ್ಬೆರಗಾಗಿ ನಿಷ್ಪತ್ತಿಗೊಳ್ಳಬೇಕು; ನಿರಾಳಗೊಳಬೇಕು. ಆಗ ಘನ ವಿಶೇಷಣ ವಿಶಿಷ್ಟ ಲಿಂಗಪ್ರಾಣಿಯಾಗುತ್ತಾನೆ, ಉಪಮಾತೀತನಾಗುತ್ತಾನೆ.

"ಭೋಗಾಂಗದ ಒಳಮೈಗೆ ಅನುಭವವೇ ಆಸರ
ಅನುಭವದೊಳಗಿಪ್ಪುದು ಮೀರಿದ ಕ್ರಿಯೆ. ಅನುಭವಕ್ಕೆ
ಅನಾಹತವೇ ಆಸರ. ಅನಾಹತಕ್ಕೆ ತ್ವಗಂಗವೇ ಆಸರ.
ತ್ವಗಂಗಕ್ಕೆ ಸುಸ್ಪರ್ಶ ಪ್ರಸಾದವೇ ಆಸರ.
ಸುಸ್ಪರ್ಶ ಪ್ರಸಾದಕ್ಕೆ ಅಮೂರ್ತ ಸಾದಾಖ್ಯರೂಪ ಜಂಗಮ
ಲಿಂಗವೇ ಆಸರ. ಆ ಜಂಗಮಲಿಂಗದೊಳು ತ್ವಗಂಗ

ತೆಕ್ಕನೇ ತಕ್ಕೈಸಿಪ್ಪುದೇ ಮಾಹೇಶ್ವರನ ಪ್ರಾಣಲಿಂಗಿ ನೋಡಾ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ."

ಮಾಹೇಶ್ವರಾಂಗದೊಳಗಣ ಪ್ರಾಣಲಿಂಗ್ಯಂಗವೇ ಭೂಮಿಕೆ
ನಿಷ್ಠೆಯೊಳಗಣ ಅನುಭವವೇ ಅಚ್ಚಳಯದ ಭಕ್ತಿ
ಜ್ಞಾನದೊಳಗಣ ಆದಿಭಾವವೇ ಅಪರೋಕ್ಷ ಶಕ್ತಿ
ಬುದ್ಧಿಯೊಳಗಣ ಮನವೇ ಕರಣ ಹಸ್ತ,
ಜಿಹ್ವೆಯೊಳಗಣ ಚರ್ಮವೇ ಆರೋಗಣೆಯ ಮುಖ
ರಸದೊಳಗಣ ಸ್ಪರ್ಶವೇ ಪದಾರ್ಥ
ಸುರಸದೊಳಗಣ ಸುಸ್ಪರ್ಶವೇ ಪ್ರಸಾದ
ಗುರುಲಿಂಗದೊಳಗಣ ಜಂಗಮಲಿಂಗವೇ ಚೈತನ್ಯ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ,
ಇದರನುಭವವುಳ್ಳಾತನೇ ಮಾಹೇಶ್ವರನ ಪ್ರಾಣಲಿಂಗಿ,"

ಈ ಅನುಭವವನ್ನು ಅಳವಡಿಸಿಕೊಂಡು ಮಾಹೇಶ್ವರನ ಪ್ರಾಣಲಿಂಗಿ ಆಗುವ ಸಾಧನೆ ಸಣ್ಣದಲ್ಲ. ಇದು ಸಂಸ್ಕೃತಿಯ ಸಾಧನ. ಪ್ರಗತಿಯ ಪ್ರಯಾಣ.

# ಮಾಹೇಶ್ವರನ ಶರಣ

ಮಾಹೇಶ್ವರನ ಶರಣನಿಗೆ ವಿಹಿತವಾದುದು ತ್ಯಾಗಾಂಗದೊಳಗಿನ ಯೋಗಾಂಗ; ಅಥವಾ ಕಾರ್ಯಾಂಗದೊಳಗಿನ ಕಾರಣಾಂಗ, ಮಾಹೇಶ್ವರನ ಶರಣನ ರಸನೆಯಲ್ಲಿ ಶ್ರೋತ್ರಾಂಶವಿದೆ. ಆ ಶ್ರೋತ್ರಾಂಶದಲ್ಲಿ ಆಕಾಶಾಂಶವಿದೆ. ಆ ಆಕಾಶಾಂಶದಲ್ಲಿ ಶಬ್ದ ಪದಾರ್ಥವಿದೆ. ಗುರುಲಿಂಗದೊಳಗಿನ ಪ್ರಸಾದ ಲಿಂಗಕ್ಕೆ ಶಬ್ದ ಪದಾರ್ಥವನ್ನರ್ಪಿಸಿ ಸುಶಬ್ದ ಪ್ರಸಾದವನ್ನಾಗಿಸಿಕೊಂಡು ಆಲಿಸಿ ಆರೋಗಿಸಿ ಮಾಹೇಶ್ವರಾಂಗನು ಶರಣನೆನಿಸುತ್ತಾನೆ. ಸುರಸ ಪ್ರಸಾದದೊಳಗಿನದು ಸುಶಬ್ದ ಪ್ರಸಾದ. ಗುರುಲಿಂಗದೊಳಗಿನದು ಪ್ರಸಾದ ಲಿಂಗ. ಜಿಹ್ವೆಯ ಮುಖದೊಳಗಿನದು ಶ್ರೋತ್ರ ಮುಖ. ತ್ಯಾಗಾಂಗದ ಜಿಹ್ವಾಂಗವೂ ಮಾಹೇಶ್ವರನ ಶರಣ ಎಂದೆನಿಸುತ್ತದೆ.

ರಸನೆಯಲ್ಲಿ ಆಕಾಶತತ್ತ್ವವೂ ಇದೆ. ಅಂತೆಯೇ ಅಲ್ಲಿ ಶಬ್ದೋತ್ಪತ್ತಿ ಸಂಭವಿಸುತ್ತದೆ. ವೈಖರಿಯಾಗಿ ಹೊರ ಹೊಮ್ಮುತ್ತದೆ. ಗುರುಲಿಂಗದಲ್ಲಿ ಪ್ರಸಾದ ಲಿಂಗವೂ ಇರುತ್ತದೆಯಾಗಿ ಶಬ್ದಾರ್ಪಣವಾಗಿ ಶಬ್ದ ಪದಾರ್ಥವು ಪ್ರಸಾದವಾಗುತ್ತದೆ. ಆ ಪ್ರಾಸಾದಿಕ ವೈಖರಿಗೆ ಶ್ರೋತ್ರವನ್ನಿತ್ತು ಮಾಹೇಶ್ವರನು ಶರಣನೆನಿಸುತ್ತಾನೆ. ಆ ಮಾಹೇಶ್ವರ ಶರಣನಿಗೆ ಆದರಿಂದ ಸುಜ್ಞಾನೋದಯವಾಗುತ್ತದೆ. ನಿಶ್ಚಯ ನೆಲೆಗೊಳ್ಳುತ್ತದೆ. ನಿಶ್ಚಯಭಾವದಿಂದ ಆನಂದ ಆವಿರ್ಭವಿಸುತ್ತದೆ. ಅಲ್ಲಿ ಮರಳಿ ಸಂದೇಹಕ್ಕೆ ಇಂಬಿಲ್ಲ; ಸಂತಾಪಕ್ಕೆ ಸಂದಿಲ್ಲ.

"ಮಸಿ ಕಪ್ಪಾಯಿತೆಂದು, ಹಾವು ಮೆಕ್ಕೆಯ ಹಣ್ಣು
ಕಹಿಯಾಯಿತ್ತೆಂದು, ತಿಪ್ಪೆಯ ಹಳ್ಳ ಕದಡಿತ್ತೆಂದು,

ಹಂದಿ ಹುಡುಹುಡುಗುಟ್ಟಿತ್ತೆಂದು, ನಾಯಿ ಬಗುಳಿತ್ತೆಂದು,
ಸಂದೇಹಿಸಿದವರುಂಟೆ? ಇದು ಕಾರಣ, ಅರಿಯದ ಅಜ್ಞಾನಿಗಳು
ನುಡಿದರೆ ಶರಣನ ಅರುಹಿಂಗೆ ಭ್ರಮೆಯುಂಟೆ, ಮಹಾಲಿಂಗಗುರು
ಶಿವಸಿದ್ಧೇಶ್ವರ ಪ್ರಭುವೇ?"

ಈ ವಚನದಲ್ಲಿ ಶರಣನ ಸಂದೇಹನಿವೃತ್ತಿ ಸುಜ್ಞಾನ ಸಂಪ್ರಾಪ್ತಿಗಳ ನಿಷ್ಠೆ–ಪ್ರತಿಷ್ಠೆಗಳು ಪ್ರತಿಪಾದಿತವಾಗಿವೆ. ಭ್ರಮೆ ಭ್ರಮಾನವ ನಿಷ್ಠವಾದುದು. ಪ್ರಮೆ ಅಂದರೆ ಅರಹು ಶರಣ ನಿಷ್ಠವಾದುದು. ಶರಣನ ಸಚ್ಚಾರಿತ್ರವನ್ನು ಶಿವಲೀಲೆಯನ್ನು ತಿಳಿಯದ ನರನು ಆಡಿಕೊಳ್ಳುವುದು ಸಹಜ. ಮಸಿ ಕಪ್ಪಾಗಿರುವುದು. ಹಾವುಮೆಕ್ಕೆಯ ಹಣ್ಣು ಕಹಿಯಾಗಿರುವುದು ಎಷ್ಟು ಸಹಜವೋ ಅಷ್ಟೇ ನರನು ಭ್ರಮಿಷ್ಟನಾಗಿರುವುದು ಸಹಜ. ನರನ ನಿಂದೆಗೆ, ಭವಿಯ ಭ್ರಮೆಗೆ ಶರಣನು ಸಂದೇಹಿಸಬೇಕಿಲ್ಲ; ಕುಂದುಗೊಳ್ಳಬೇಕಾಗಿಲ್ಲ. ನಿಸ್ಸಂದೇಹನಾಗಿ ನಿಜ ಪ್ರಮೆಯಲ್ಲಿರುವುದೇ ಶರಣನ ಸಹಜಗುಣ: ಸಹಜ ಸ್ವಭಾವ.

"ಡಂಬು ಮಾತ್ಸರ್ಯಕ್ಕೆ ಇಂಬುಗೊಡದೆ ಇರಬಲ್ಲರೆ ಶರಣ.
ಶಂಭುಪದ ಭಕ್ತಿ ನಂಬುಗೆವಿಡಿದು ಅಗಲದೆ ಇರಬಲ್ಲರೆ ಶರಣ.
ಸೂಸಲೀಯದೆ ಮನವ ಈಶವಾಸ (ಪದ)ದಲ್ಲಿ ಮೀಸಲಾಗಿ
ಇರಿಸಿಕೊಂಡಿರಬಲ್ಲರೆ ಶರಣ
ಆ ಶರಣನ ಜಗದೀಶನೆಂಬೆನು ಕಾಣಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಸಂದೇಹ, ಭ್ರಮೆಗಳಿಗೆ ಇಂಬುಗೊಡುತ್ತವೆ-ಡಂಬು ಮಾತ್ಸರ್ಯಗಳು. ಆದ್ದರಿಂದ ಷಟ್‌ಸ್ಥಲ ಸಾಧಕನು ಇವುಗಳಿಗೆ ಅವಕಾಶ ಕೊಡಬಾರದು. ಮತ್ಸರ ಮನಸ್ಸನ್ನು ಮಾಣಿಸಿ ನಂಬುಗೆಗೆ ಇಂಬುಗೊಡಬೇಕು. ನಂಬುಗೆಯಿರುವಲ್ಲಿ ಸಂದೇಹವಿರದು; ಸಂದೇಹವಿಲ್ಲದಲ್ಲಿ ಭ್ರಮೆಯಿರದು. ಭ್ರಮೆಯಿಲ್ಲದಲ್ಲಿ ಪ್ರಮೆಗೆ ಅವಕಾಶವಿರುತ್ತದೆ. ಪರಮಪ್ರಮೆಯುಳ್ಳಾತನೇ ಶರಣ; ಮಾಹೇಶ್ವರ

ಶರಣ. ಶಿವಚರಣದಲ್ಲಿ ಹರಣವುಳ್ಳಾತನೇ ಶರಣ, ಆತನು ಭವ ಹರಣ, ಡಂಭಾ ಚಾರಕ್ಕೆ ಒಳಗಾಗನು. ವಂದಿಸಿ ನಿಂದಿಸುವ, ನಿಂದಿಸಿ ವಂದಿಸುವ ದ್ರೋಹಕ್ಕೆ ಒಳಗಾಗನು. ಒಳಗೊಂದು ಹೊರಗೊಂದು ಮಾಡಿ ನಡೆಯನು, ನುಡಿಯನು. ಅನುಸರಣೆಯ ಆಚರಣೆಯುಳ್ಳಿರನು. ಮಹೇಶ್ವರನಲ್ಲದೆ ಮತ್ತೊಂದಕ್ಕೆ ಶರಣು ಹೋಗನು. ಶರಣನ ಅಂಗ ಮನ ಭಾವಗಳು ಲಿಂಗವನ್ನಲ್ಲದೆ ಅನ್ಯವನ್ನು ಅಂಗವಿಸವು. ಮಾಹೇಶ್ವರನ ಶರಣ ತನ್ನ ಮಹಾಗುರುವಿನಲ್ಲಿ ಮನ ಮಾರು ಹೋಗಿರುತ್ತಾನೆ; ಜ್ಞಾನ ಕರಿಗೊಂಡಿರುತ್ತದೆ.

"ಮಾಹೇಶ್ವರಾಂಗದೊಳಗಣ ಶರಣಾಂಗವೇ ಸದ್ಭೂಮಿಕೆ
ನಿಷ್ಠೆಯೊಳಗಣ ನಿಜಾನಂದವೇ ನಿಜಭಕ್ತಿ.
ಜ್ಞಾನದೊಳಗಣ ಪರಾಭಾವವೇ ಪಾವನಶಕ್ತಿ
ಬುದ್ಧಿಯೊಳಗಣ ಜ್ಞಾನವೇ ಕಾರಕಹಸ್ತ
ಜಿಹ್ವೆಯೊಳಗಣ ಶ್ರೋತ್ರವೇ ಆರೋಗಿಸುವ ಮುಖ
ರಸದೊಳಗಣ ಶಬ್ದವೇ ಪದಾರ್ಥ
ಸುರಸದೊಳಗಣ ಸುಶಬ್ದವೇ ಪ್ರಸಾದ
ಗುರುಲಿಂಗದೊಳಗಣ ಪ್ರಸಾದಲಿಂಗವೇ ಚೈತನ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನಲ್ಲಿ
ಇದನರಿತವನೇ ಮಾಹೇಶ್ವರನ ಶರಣ ಕಾಣಾ !"

ಕಾರಣಾಂಗಮಪ್ಪ ಯೋಗಾಂಗಕ್ಕೆ ಆನಂದವೇ ಆಸರ.
ಆನಂದಕ್ಕೆ ವಿಶುದ್ಧಿಯೇ ಆಸರ
ವಿಶುದ್ಧಿಗೆ ಶ್ರೋತ್ರಾಂಗವೇ ಆಸರ
ಶ್ರೋತ್ರಾಂಗಕ್ಕೆ ಸುಶಬ್ದ ಪ್ರಸಾದವೇ ಆಸರ
ಸುಶಬ್ದ ಪ್ರಸಾದಕ್ಕೆ ಶಿವಸಾದಾಖ್ಯರೂಪ ಪ್ರಸಾದ ಲಿಂಗವೇ ಆಸರ
ಆ ಪ್ರಸಾದ ಲಿಂಗದೊಳು ಜಿಹ್ವಾಂಗದೊಳಗಣ ಶ್ರೋತ್ರಾಂಗವು
ಸ್ವೈರಗಾದುದೇ ಮಾಹೇಶ್ವರನ ಶರಣ ಕಾಣಾ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾನಾಧೀಶ್ವರ"

ಇವೆರಡು ನುಡಿಗಳಿಂದ ಸ್ವಾನುಭವದ ಸೀರ್ವನಿಯನ್ನು ಸಿಂಪಡಿಸಿಲಾಗಿದೆ. ವಚನ ವೈಖರಿಯ ಉಸುರಿನಲ್ಲಿ ಉಲಿಯಲಾಗಿದೆ. ಕಿವಿಗೆ ಇಂಪನ್ನು ಎದೆಗೆ ತಂಪನ್ನು ಕೊಡುವಂತಿದ್ದರೆ ಸಾರ್ಥಕ. ಮಾಹೇಶ್ವರತ್ವವನ್ನು ಮೈಗೂಡಿಸಿ ಕೊಳ್ಳುವುದೇ ಮಹಾಕಷ್ಟವೆಂದರೆ ಮಾಹೇಶ್ವರನ ಶರಣತ್ವವನ್ನು ಮೈಗೂಡಿಸಿ ಕೊಳ್ಳುವುದು ಮತ್ತೂ ಕಷ್ಟವೆಂದೇ ಹೇಳಬೇಕು. ಸತ್ಯಛಲದಿಂದ ಸಾಗಿದರೆ ಮಾತ್ರ ಸಾದ್ಯ, ಸಂವೇದ್ಯ.

# ಮಾಹೇಶ್ವರನ ಐಕ್ಯ

ಮಾಹೇಶ್ವರೈಕ್ಯನ ಹೃದಯದಲ್ಲಿ ಆತ್ಮತತ್ತ್ವವಿದೆ. ಆ ಆತ್ಮತತ್ತ್ವದಲ್ಲಿ ತೃಪ್ತಿಪದಾರ್ಥವಿದೆ. ಆ ತೃಪ್ತಿ ರಸಪದಾರ್ಥದೊಳಗಿನದು. ಅದನ್ನು ಗುರುಃಲಿಂಗ ದೊಳಗಿನ ಮಹಾಲಿಂಗಕ್ಕೆ ಅರ್ಪಿಸಿ ಸುತೃಪ್ತಿಪ್ರಸಾದವನ್ನಾಗಿಸಿಕೊಂಡು ಅದರಲ್ಲಿ ಪರಿಣಮಿಸಿ ಪರವಶವಾಗಿ, ಮಹಾಲಿಂಗದಲ್ಲಿ ಅವಿರಳ ಅಂತಃಕರಣವುಳ್ಳವನಾಗಿ ಮಾಹೇಶ್ವರಾಂಗನು ಮಾಹೇಶ್ವರೈಕ್ಯನೆನಿಸುತ್ತಾನೆ.

ರಸನೆಯಲ್ಲಿ ಹೃದಯಾಂಶವಿದೆ. ಅಂತೆಯೇ ಅದರಲ್ಲಿ ರಸಜನ್ಯತೃಪ್ತಿ ಉತ್ಪತ್ತಿಯಾಗುತ್ತದೆ. ಗುರುಲಿಂಗದಲ್ಲಿ ಮಹಾಲಿಂಗವಿರುವುದರಿಂದ ತೃಪ್ತಿ ಅದಕ್ಕೆ ಅರ್ಪಣವಾಗುತ್ತದೆ. ಅರ್ಪಿತ ತೃಪ್ತಿಪದಾರ್ಥ ಪ್ರಸಾದವಾಗುತ್ತದೆ. ಆ ಪರಮಪ್ರಸಾದದಲ್ಲಿ ಮಾಹೇಶ್ವರನ ಹೃದಯ ತಲ್ಲೀನವಾಗುತ್ತದೆ. ಆ ತಲ್ಲೀನತೆಗೆ ಐಕ್ಯ ಅಥವಾ ಸಾಮರಸ್ಯವೆಂದು ಹೇಳಲಾಗುತ್ತದೆ.ಆ ಸ್ಥಿತಿಯನ್ನೇ 'ಶೂನ್ಯ' ಎಂದು ವೀರಶೈವ ಸಂಕೇತ, ಆ ಶೂನ್ಯದಲ್ಲಿ ಏನೆಲ್ಲವೂ ಇರುತ್ತದೆ. ಅದು ಪೂರ್ಣರೂಪ. ಯಾವ ಕೊರತೆಯಿಲ್ಲದ ಸ್ವರೂಪ. ಅಲ್ಲಿ ಎಲ್ಲ ಪ್ರಸಾದಗಳೂ ಪರಿಸ್ಥಿತಿಗಳೂ ನಿಷ್ಪತ್ತಿಗೊಂಡಿರುತ್ತವೆ. ಭೂಜದ ಅಂಗಾಂಗಗಳೆಲ್ಲ ಬೀಜದಲ್ಲಿ ನಿಷ್ಪತ್ತಿಗೊಂಡಂತೆ ಸುಗಂಧ ಸುರಸಾದಿ ಪ್ರಸಾದಗಳು ಪರ್ಯವಸಾನ (ನಿಷ್ಪತ್ತಿ) ಗೊಂಡಿರುತ್ತವೆ. ಅಂದರೆ ಅಳಿದು ಉಳಿದಿರುತ್ತವೆ. ಸ್ಥೂಲವಾಗಿ ತೋರದಿದ್ದರೂ ಸೂಕ್ಷ್ಮವಾಗಿ ಇರುತ್ತವೆ. ಈ ಇರುವಿಕೆಯೇ ಐಕ್ಯ ಅಥವಾ ಸಾಮರಸ್ಯ.

ಆ ಐಕ್ಯತೆ ಆ ಸಾಮರಸ್ಯತೆ ಬರಿಯ ಅರಿವಿನಿಂದ ಬರುವುದಿಲ್ಲ, ಅರಿದಂತೆ ಆಚರಿಸಿ ಅನುಭವಿಸಿದಾಗ ಬರುತ್ತದೆ; ಆ ಐಕ್ಯರೂಪ ಕೈವಲ್ಯಕ್ಕೇರುವ ಶಕ್ತಿ ಸಮ ನಿಸುತ್ತದೆ. ಭಕ್ತ ಭಕ್ತನಾಗಿ, ಮಾಹೇಶ್ವರ ಮಹೇಶ್ವರನಾಗಿ ಕುಳಿತಿದ್ದರೆ ಕೈವಲ್ಯ ಕೈಗೂಡದು, ಆ ಯೋಗಾಂಗಕ್ಕೆ ಹೋಗಬೇಕು. ಆ ಯೋಗಾಂಗವನ್ನು ಆ

ಮಹಾಲಿಂಗದಲ್ಲಿ ಸಂಯೋಗವಾಗಿಸಬೇಕು. ಭಾವ ನಿರ್ಭಾವವಾಗಬೇಕು, ಜ್ಞಾನಶೂನ್ಯವಾಗಬೇಕು, ಆಗ ಆ ಸ್ವರೂಪಪ್ರಾಪ್ತಿ.

"ಭೂಲೋಕದಲ್ಲಿ ಕುಳ್ಳಿರ್ದು
ಆಕಾಶದ ಸುದ್ಧಿಯ ನುಡಿದರೆ
ಆ ಆಕಾಶದ ನೆಲೆಯ ಬಲ್ಲರೇ ಅಯ್ಯಾ ?
ಪಾತಾಳಲೋಕದಲ್ಲಿದ್ದವರು,
ಕೈಲಾಸದ ಸುದ್ಧಿಯ ನುಡಿದರೆ
ಕಂಡಂತೆ ಆಗಬಲ್ಲುದೇ ಆಯ್ಯಾ ?
ತತ್ತ್ವಶಾಸ್ತ್ರವನೋದಿ
ತತ್ತ್ವಮಸ್ಯಾದಿ ವಾಕ್ಯಾರ್ಥಂಗಳ ತಿಳಿದು
ತತ್ತ್ವ ಮಸಿಯಾದೆನೆಂಬವರೆಲ್ಲ ಎತ್ತ ಹೋದರೋ ?
ವ್ಯರ್ಥವಾಗಿಯೇ ಸತ್ತುಹೋದರಲ್ಲಾ !
ಇದು ಕಾರಣ ನಿಮ್ಮ ಶರಣರು,
ಉತ್ಪತ್ತಿಸ್ಥಿತಿ ಪ್ರಳಯರಹಿತವಾದ ಮಹಾಲಿಂಗದಲ್ಲಿ
ಸಂಯೋಗವಾಗಿ ಅಚ್ಚಲಿಂಗೈಕ್ಯರಯ್ಯಾ;
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !"

'ತತ್ತ್ವಮಸಿ' ಅದು ನೀನಾಗಿರುವೆ ಎಂಬಲ್ಲಿ ಬರೀ ಅರಿಯುವ ಕೆಲಸವಿದೆ. ಯಲ್ಲದೆ ಆಚರಿಸುವ ಕೆಲಸವಿಲ್ಲ, 'ಅದು ನಾನಾದೆ'ಎಂದು ಬರೀತಿಳಿದವರೆಲ್ಲ ವ್ಯರ್ಥ ವಾಗಿ ಸತ್ತುಹೋಗುವರು; ಅವರ ತತ್ತ್ವವೆಲ್ಲ ಮಸಿ (ಮಣ್ಣು) ಆಗುವುದು. ಅದೇ 'ತ್ವಂತದಸಿ' ನೀನು ಅದಾಗು ಎಂದು ಹೇಳುವಲ್ಲಿ ಅರಿದಾಚರಿಸುವ ಹೊಲ ಬಿದೆ. ಆಚರಿಸಿ ಉತ್ಪತ್ತಿಸ್ಥಿತಿ ಪ್ರಳಯಗಳನ್ನು ಕಳೆದು ಉಳಿವ ಯೋಗವಿದೆ.

'ತತ್ತ್ವಮಸಿ'ಯ ಬೋಧೆಯು ಇಹಲೋಕದಲ್ಲಿದ್ದು ಪರಲೋಕದ ಸುದ್ದಿಯ ಮಾತೆತ್ತಿದಂತೆ ! ಆಕಾಶದ ನೆಲೆಯನ್ನೆ ಕಾಣದವರು ಪರಲೋಕದ ನೆಲೆ ಯನ್ನು ಇನ್ನೇನು ಕಂಡಾರು ? 'ತ್ವಂತದಸಿ' ಅಂದರೆ ಅಂಗ–ಲಿಂಗಸಾಮರಸ್ಯ ವನ್ನು ಪ್ರತಿಪಾದಿಸುವ ವೀರಶೈವರು ಇಹ–ಪರಗಳಿಗೆ ಷಟ್‌ಸ್ಥಲರೂಪ ನಿಚ್ಚಣಿಕೆ

ಯನ್ನು ಹಚ್ಚಿ ಅದರ ಆಧಾರದಲ್ಲಿ ಹಂತ ಹಂತವಾಗಿ ಏರಿ ಐಕ್ಯಗೊಳ್ಳುವರು; ಅದನ್ನೇ "ಮಹಾಲಿಂಗಸಂಯೋಗ"ವೆನ್ನುವರು; 'ಲಿಂಗೈಕ್ಯ'ವೆನ್ನುವರು.

"ಶತಂ ಚೈಕಾಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ।
ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಞ್ಯಾ ಉತ್ಕ್ರಮಣೇ
ಭವಂತಿ॥"—ಕಠ

ಹೃದಯದಲ್ಲಿ ನೂರೊಂದು ನಾಡಿಗಳಿವೆ. ಅವುಗಳಲ್ಲೊಂದು ಮಸ್ತಕಕ್ಕೇರಿದೆ, ಅದರ ಮೂಲಕ ಅಲ್ಲಿಗೆ (ಶಿರಕ್ಕೆ)ಏರಿದವನು ಅಮೃತತ್ತ್ವವನ್ನು ಪಡೆಯುತ್ತಾನೆ. ಉಳಿದ ಕಡೆಯಲ್ಲಿ ಹರಡಿದ ನಾಡಿಗಳು ಸಂಸರಣಕ್ಕೆ ಕಾರಣವಾಗುತ್ತದೆ. ಸಿದ್ಧೇಶ್ವರ ವಚನಕ್ಕೆ ಸಾಕ್ಷಿಯಾಗಿದೆ ಈ ಕಠಶ್ರುತಿ.

ಅದು ಅರಿತರೆ ಆಡಿದರೆ ಸಿಕ್ಕುವುದಲ್ಲ. ಅದು ಆಚರಣೆಗೆಅಳವಡುವವಸ್ತು, ಅನುಭವಿಸಿ ಆನಂದಿಸಿದ ಬಳಿಕ ಲಭ್ಯವಾಗುವ ತತ್ತ್ವ. ಮರ ಎಲೆಯಾಗದೆ ಹೂವಾಗದೆ ಹಣ್ಣನ್ನು ಬಿಡದು. ಇದರಂತೆ ಅರಿತುದನ್ನು ಆಚರಿಸಿ ಅನುಭವಿಸಬೇಕು; ಅನುಭವಿಸಿ ಆನಂದಿಸಬೇಕು, ಆನಂದಿಸಿ ಅವಿರಳವಾಗಬೇಕು. ಅಂತಾದಾಗ ಅದು ಇದು ಎಂಬುದಿರುವುದಿಲ್ಲ. ಜ್ಞಾತೃಜ್ಞಾನಗಳಿರುವುದಿಲ್ಲ. ಇದನರಿಯದೆ ಅದನ್ನು ಬಲ್ಲೆವೆಂದು ಬಾಯ್‌ಬಿಟ್ಟರೆ ಸುಖವಿಲ್ಲ.

"ತತ್ತ್ವಾರ್ಥವ ಬಲ್ಲೆವೆಂಬರಯ್ಯ ತತ್ತಿಯೊಳಗಣ ಬಾಲಕರು.
ತತ್ತ್ವಾನುಭಾವ ಸಂಭವಿಸಿದರೆ ಸತ್ತುಹೋಗಲುಂಟೆ?
ಸತ್ತು ಹೋಗುವ ಪ್ರಾಣಿಗಳ
ಶಿವತತ್ತ್ವಾನುಭಾವಿಗಳೆಂತೆಂಬೆನಯ್ಯಾ ?

ಅನುಪಮ ಅದ್ವಯರೆಂದೆಂತೆಂಬೆನಯ್ಯಾ?,
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ!"

ತತ್ತ್ವಾರ್ಥವನ್ನು ಬಲ್ಲವರು ಬಹಳ. ತತ್ತ್ವತಾವಾದವರು ವಿರಳ. ಬಲ್ಲೆವೆಂಬವರು ಬಾಲಿಶರು; ಏನೊಂದು ರೂಹಿಲ್ಲದ ತತ್ತಿಯೊಳಗಿನ ಬಾಲಕರು, ತತ್ತ್ವಾನುಭಾವವುಂಟಾದರೆ ಮೃತ್ಯುವಿಗೆ ಅಂಜಬಾರದು. ತತ್ತ್ವಕ್ಕೆ ಸಾವಿಲ್ಲ.

ಸಾವಗೆದೆ ಒಡೆವುದು, ಮರಣಕ್ಕೆ ಮನ ಕುಗ್ಗುವುದು ತಾತ್ತ್ವಿಕತೆಯ ಕುರುಹಲ್ಲ. ಅಂತೆಯೇ ಪ್ರಾಜ್ಞತೆಯೂ ಪ್ರಾಪ್ತಿಗೆ ಪ್ರಮಾಣವಲ್ಲ, ತತ್ತ್ವಾರ್ಥವನ್ನು ತಿಳಿಯುವದಕ್ಕಿಂತ ತತ್ತ್ವವನ್ನೇ ತಳೆಯುವುದು ತಾತ್ತ್ವಿಕತೆ! ತತ್ತ್ವವೇ ತಾನಾದರೆ ಮೃತ್ಯುಭಯವಿಲ್ಲ, ಪಾಪಭಯವಿಲ್ಲ, "ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುಃ" ಎಂದಿದೆ ಕಠೋಪನಿತ್ತು. 'ಪ್ರಾಪ್ತ' ಪದದಲ್ಲಿದೆ ಪ್ರಾಜ್ಞತೆಯ ಆಚಿನ ಸ್ಥಿತಿಸತ್ತೆ, ತತ್ತ್ವಸತ್ತೆಯ ಸ್ವರೂಪವೇ ತಾನಾಗುವಿಕೆಯ ಸೂಚನೆ! ಅನುಪಮ ಅದ್ವಯ ಪರಬ್ರಹ್ಮವೇ ತಾವಾಗುವ ಶಿವತತ್ತ್ವಾನುಭಾವಿಗಳು ಮಾತಿಗೆ ಮೀರಿದ ಮಾಹೇಶ್ವರನ ಐಕ್ಯ' ಸ್ವರೂಪದಲ್ಲಿರುತ್ತಾರೆ. ಅವರಿಗೆ ರೂಪಿದ್ದರೂ ರೂಪಿರುವುದಿಲ್ಲ, ಕ್ರಿಯೆಯಿದ್ದರೂ ಕ್ರಿಯೆಯಿರುವುದಿಲ್ಲ, ನಿಷ್ಪತ್ತಿಗೊಂಡಿರುತ್ತವೆ, ಅವರು ರೂಪಿದ್ದು ನಿರೂಪರು. ಕ್ರಿಯೆಯಿದ್ದು ನಿಷ್ಕ್ರಿಯರು, ಅವರು ಸಾವಿಲ್ಲದವರು; ಕೇಡಿಲ್ಲದವರು. ರೂಹಿಲ್ಲದ ಚಲುವರು, ಅವರು ಭವದಲ್ಲಿದ್ದು ನಿರ್ಭವರು; ನಿರ್ಭಯರು. ಅವರು ಯಾವ ದ್ವಂದ್ವಕ್ಕೆ ಸಿಲುಕರು; ಸಿಲುಕಿ ಅಳುಕರು. ಅಳುಕಿ ಅಳಿಯರು, ಅವರು ಆ ಲಿಂಗಾನುಭವದಲ್ಲಿ ಆ ಲಿಂಗಾನಂದದಲ್ಲಿ ಲೀನವಾಗಿರುವರು

"ನಿರೂಪನು ರೂಪ ಮಾಡಬಲ್ಲರೆ ಶರಣ,
ರೂಪು–ನಿರೂಪುವಿಡಿದಾಚರಿಸಿ
ತನು ಮನವ ಬಯಲ ಮಾಡಬಲ್ಲರೆ ಶರಣ.
ರೂಪು–ನಿರೂಪಳಿದುಳಿದು ನಿರ್ವಯಲಾದರೆ ಆತನು ಲಿಂಗೈಕ್ಯನು!
ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!
ಒಳಗಿಪ್ಪಾತನ ಹೊರಗೆ ನೋಡಿ ಕಂಡೆನಯ್ಯ.
ಹೊರಗಿಪ್ಪಾತನನು ಒಳಗೆ ನೋಡಿ ಕಂಡೆನಯ್ಯ.
ಒಳಹೊರಗಿಪ್ಪವರಿಬ್ಬರು ಒಂದಾಗಿ ನಿಂದ ನಿಲವು,
ಬಯಲು ಬಯಲ ಬೆರಸಿದಂತೆ ನಿರಾಳವಾಯಿತ್ತು ಕಾಣಾ;
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ,
ನೇಮ ನೆಲಗತವಾಯಿತ್ತು, ಸೀಮೆ ನಿಸ್ಸೀಮೆಯಾಯಿತ್ತು;
ನೀರು ಕಿಚ್ಚು ನುಂಗಿ ಊರೆಲ್ಲವನಾವರ್ತಿಸಿತ್ತು ನೋಡಾ!
ಊರು ಬೆಂದು ಉಳುಹ ಅಳಿದು ಉಳಿದು

ಸೀಮೆ ನಾಮವ ಮೀರಿ ತಾನು ಪರಾಪರನು ನೋಡಾ!
ತನ್ನಿಂದ ಅನ್ಯವಾಗಿ ಇನ್ನೇನೂ ಇಲ್ಲ.
ಅನ್ಯ ಅನನ್ಯವೆಂಬುದ ಅಳಿದು ಉಳಿದು
ಅದ್ವೈತ ಪರವಸ್ತುವಾದೆನು ಕಾಣಾ;
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!"

ಈ ಮೂರು ವಚನಗಳು ಮಾಹೇಶ್ವರನ ಐಕ್ಯನ ಸತ್ಯಸ್ವರೂಪವನ್ನು ವಾಸ್ತವ ವಸ್ತುತೆಯನ್ನು ಪ್ರಸ್ತಾಪಿಸಿವೆ, ರೂಪು ನಿರೂಪುಗಳೆರಡನ್ನೂ ಹಿಡಿದಾಚರಿಸಿ ತನುಮನಗಳನ್ನು ಬಯಲ ಮಾಡುವ ಶಿವಾಚಾರದ ಬೆಡಗನ್ನು ಬಣ್ಣಿಸಿವೆ, "ನ ಸಂದೃಶೇ ತಿಷ್ಠತಿ ರೂಪಮಸ್ಯ; ನ ಚಕ್ಷುಷಾ ಪಶ್ಯತಿ ಕಶ್ಚನೈನಂ।" ಇವನ ರೂಪವು ಇತರರಿಗೆ ದೃಗೋಚರವಾಗುವುದಿಲ್ಲ. ಇವನನ್ನು ಯಾವನೂ ಈ ಕಣ್ಣಿನಿಂದ ಕಾಣಲಾರನು. ಎಂಬ ಕಠೋಪನಿಷತ್ತಿನ ಉಕ್ತಿಯ ಉತ್ತಮ ಅನುಭವವನ್ನು ಈ ವಚನಗಳು ಅರಳಿಸಿವೆ. ಅಳಿದುಳಿವ ಮೋಡಿಯನ್ನು ನಿರ್ವಯಲಾಗುವ ಲಿಂಗೈಕ್ಯದ ಗಾಡಿಯನ್ನು ಕಾಣಿಸಿವೆ. ಒಳಗಿಪ್ಪದನ್ನು ಹೊರಗೆ ಹೊರಗಿಪ್ಪದನ್ನು ಒಳಗೆ ನೋಡುವುದು ನಿಜಕ್ಕೂ ನಿಜಾನುಭಾವದ ದೃಷ್ಟಿಗೆ ಮಾತ್ರ ಸಾಧ್ಯ' ಅದರಲ್ಲಿಯೂ ಒಳ ಹೊರಗಿನವರಿಬ್ಬರೂ ಒಂದಾಗಿ ನಿಂದ ನಿಲವನ್ನು ಬಯಲು ಬಯಲ ಬೆರಸಿದ ನಿರಾಳತೆಯನ್ನು ಕಂಡು ಕಾಣಿಸಲು ಸಮರ್ಥರಾಗಿರುವುದ ಸರ್ವರಿಗೆ ಸಾಧ್ಯವಾಗುವ ಮಾತಲ್ಲ, ನೇಮಸೀಮೆಗಳನ್ನು ಮೀರಿ ನಿಸ್ಸೀಮನಾಗಿ ನೀರು ಕಿಚ್ಚನ್ನು ನುಂಗಿದ್ದರೂ ಊರು ಬೆಂದು ಶಬ್ದಮುಗ್ಧವಾಗಿ ಅಳಿದು ಉಳಿದ ವ್ಯಕ್ತಿಯ ಕೌಶಲ್ಯ ಮೆಚ್ಚತಕ್ಕುದು. ಅಷ್ಟಾದ ಬಳಿಕ, ಅನ್ಯ ಅನನ್ಯ ಏನಿದ್ದೀತು? ತನ್ನಿಂದ ಅನ್ಯವೇನಿದ್ದೀತು ? ಆಗ ಆತ ಸಮದರ್ಶಿಯಾಗಿ ಸರ್ವಸಮನ್ವಯ ಸಂಭಾವಿಯಾಗಿ ಎಲ್ಲವೂ ತಾನಾಗಿ ಇರುವನು ಮಾಹೇಶ್ವರನ ಐಕ್ಯನು|| ಇಹದಲ್ಲಿದ್ದು ಪರವಸ್ತು ತಾನಾಗುವನು. ರುಚಿ ರೂಪುಗಳ ಗೆದ್ದು ಗಂಭೀರನಾಗಿರುವನು, ರುಚಿಯಿಂದೊದಗುವ ತೃಪ್ತಿಯನ್ನು ತನಗೆಂದು ಅಂಗವಿಸದೆ ಲಿಂಗಕ್ಕರ್ಪಿಸಿ ಲಿಂಗಸಂಗನಾಗಿರುತ್ತಾನೆ, ಮಾಹೇಶ್ವರನ ಐಕ್ಯಾಂಗನ ಅರ್ಚನ ಮಹಾರ್ಚನ, ಅರ್ಪಣ ಮಹಾರ್ಪಣ; ಅನುಭಾವ ಮಹಾನುಭಾವ.

"ಮಾಹೇಶ್ವರಾಂಗದೊಳಗಣ ಐಕ್ಯಾಂಗವೇ ಮಹಾಭೂಮಿಕೆ,
ನಿಷ್ಠೆಯೊಳಗಣ ನಿಜಸಾಮರಸ್ಯವೇ ಮಹಾಭಕ್ತಿ.
ಜ್ಞಾನದೊಳಗಣ ಚಿದ್ಭಾವವೇ ಮಹಾಶಕ್ತಿ
ಬುದ್ಧಿಯೊಳಗಣ ಭಾವವೇ ಮಹಾಹಸ್ತ.
ಜಿಹ್ವೆಯೊಳಗಣ ಹೃದಯವೇ ಮಹಾಮುಖ,
ರಸದೊಳಗಣ ತೃಪ್ತಿಯು ಮಹಾಪದಾರ್ಥ.
ಸುರಸದೊಳಗಣ ಸುತೃಪ್ತಿಯೇ ಮಹಾಪ್ರಸಾದ.
ಗುರುಲಿಂಗದೊಳಗಣ ಮಹಾಲಿಂಗವೇ ಮಹಾಚೈತನ್ಯ.
ಶ್ರೀನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಇವನರಿತು ಅನುಭವಿಸಿದಾತನೇ ಮಾಹೇಶ್ವರನ ಐಕ್ಯ ಕಾಣಾ!
ಮಾಹೇಶ್ವರನ ಭಕ್ತ ಪೃಥ್ವಿಜನ್ಯ ಗುಹ್ಯೇಂದಿಯು.
ಮಾಹೇಶ್ವರನ ಮಾಹೇಶ್ವರ ಉದಕಜನ್ಯ ರಸ.
ಮಾಹೇಶ್ವರನ ಪ್ರಸಾದಿ ಅಗ್ನಿಜನ್ಯ ಜಿಹ್ವಾಂಗ.
ಮಾಹೇಶ್ವರನ ಪ್ರಾಣಲಿಂಗಿ ವಾಯುಜನ್ಯ ಅಪಾನ ವಾಯು.
ಮಾಹೇಶ್ವರನ ಶರಣ ಆಕಾಶ ಜನ್ಯ ಬುದ್ಧಿ.
ಮಾಹೇಶ್ವರನ ಐಕ್ಯಸ್ಥಲ ಆತ್ಮ ಜನ್ಯ ಗುರುಲಿಂಗ ಕಾಣಾ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸ್ಯೂರ್ಯಸಿಂಹಾಸನಾಧೀಶ್ವರ!
ಕಾರಣದಲ್ಲಿ ನಿಷ್ಪತ್ತಿಗೊಂಡ ಯೋಗಾಂಗಕ್ಕೆ
ಸಮರಸವೇ ಸನ್ನಿಹಿತ ಆಸರ.
ಸಮರಸಕ್ಕೆ ಆಜ್ಞಾಚಕ್ರವೇ ಆಸರ,
ಆಜ್ಞಾಚಕ್ರಕ್ಕೆ ಹೃದಯಾಂಗವೇ ಆಸರ
ಹೃದಯಾಂಗಕ್ಕೆ ಸುತೃಪ್ತಿ ಪ್ರಸಾದವೇ ಆಸರ,
ಸುತೃಪ್ತಿ ಪ್ರಸಾದಕ್ಕೆ ಮಹಾಸಾದಾಖ್ಯರೂಪ ಮಹಾಲಿಂಗವೇ ಆಸರ.
ಆ ಮಹಾಲಿಂಗದೊಳು ಜಿಹ್ವಾಂಗದೊಳಗಣ ಹೃದಯಾಂಗವು
ಬೆರೆದೇಕವಪ್ಪುದೇ ಮಾಹೇಶ್ವರನ ಐಕ್ಯ ಕಾಣಾ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸಿಂಹಾಸನಾಧೀಶ್ವರ!"

ಈ ಎಲ್ಲ ವಿವರವು ಮಾಹೇಶ್ವರಾಂಗನ ಉಪಾಂಗ ಷಟ್‌ಸ್ಥಲಗಳು. ಮುಖ್ಯವಾದ ಜಿಹ್ವ ಮುಖದಲ್ಲಿಯೇ ಆಚರಿಸುವ ಆಚರಣೆಗಳು. ಇವನ್ನು ಆಚರಿಸಿ ಆಳವಡಿಸಿಕೊಂಡಾಗ ಮಾಹೇಶ್ವರನು ಪೂರ್ಣ ಮಾಹೇಶ್ವರನೆನಿಸುತ್ತಾನೆ: ಮಾಹೇಶ್ವರ ಸ್ಥಲದಲ್ಲಿದ್ದುಕೊಂಡೇ ಷಟ್‌ಸ್ಥಲ ಜ್ಞಾನಾನುಭವ ಸಂಪನ್ನನಾಗುತ್ತಾನೆ. ಷಡಂಗಾಂಗ ಶುದ್ಧಿ ಸಂಸ್ಕಾರಗಳನ್ನು ಪಡೆದು ಸರ್ವಾಂಗ ಸಮರಸವನ್ನು ಸಂಪಾದಿಸಿ ಮಾಹೇಶ್ವರನು ಮಹಾ ಜೀವನ್ಮುಕ್ತಿಯನ್ನು ಅಳವಡಿಸಿಕೊಳ್ಳುತ್ತಾನೆ, ಮಾರ್ತ್ಯದ ಜೀವಿಗಳನ್ನೆಲ್ಲ ತನ್ನಂತೆ ತಿಳಿಯುತ್ತಾನೆ. ತನ್ನಂತೆ ತಿಳಿಯುವುದೇ ತತ್ತ್ವಲಕ್ಯತೆ. ಆ ತತ್ತ್ವಲಕ್ಯತೆಯಲ್ಲಿ ತನ್ನನ್ನೇ ತಾನು ಮರೆತಿರುತ್ತಾನೆ, ಆ ಮಾಹೇಶ್ವರನ ಪಂಚಜ್ಞಾನೇಂದ್ರಿಯಗಳು ಪರವಸ್ತುವಿನಲ್ಲಿ ಪರವಶವಾಗಿರುತ್ತವೆ,

"ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ।
ಬುದ್ಧಿಶ್ಚ ನ ವಿಚೇಷ್ಟತೇ ತಾಮಾಹುಃ ಪರಮಾಂ ಗತಿಂ॥"

ಈ ಕಠೋಪನಿಷತ್ತು ಮಾಹೇಶ್ವರನ ಐಕ್ಯಸ್ಥಿತಿಯನ್ನು ಸುಂದರವಾದ ಸ್ವಾನುಭವದಲ್ಲಿ ಪ್ರಬೋಧಿಸಿದೆ. ಮಾಹೇಶ್ವರನ ಐಕ್ಯಸ್ಥಲದಲ್ಲಿ ಮಾಹೇಶ್ವರಾಂಗನ ಪಂಚಜ್ಞಾನೇಂದ್ರಿಯಗಳು ಮನಸ್ಸಿನೊಂದಿಗೆ ಶಾಂತವಾಗುವವು. ಮತ್ತು ಬುದ್ಧಿಯೂ ಚಲಿಸದೆ ನಿಷ್ಪತ್ತಿಗೊಳ್ಳುವುದು. ಹಾಗಾಗುವುದೇ ಆತನ ಪರಮಗತಿ.

ಹೀಗೆ ಮಾಹೇಶ್ವರ ಸ್ಥಲವು ಮುಕ್ತಾಯಗೊಳ್ಳುವಲ್ಲಿ ಕ್ರಿಯಾಯೋಗವು ಖಚಿತವಾಗಿ ಸಿದ್ಧಿಯನ್ನು ಸೇರುತ್ತದೆ. ಮಾಹೇಶ್ವರೈಕ್ಯನು ಕ್ರಿಯಾಯೋಗ ಸಿದ್ಧನೆಂದು ಹೇಳಿಸಿಕೊಳ್ಳುತ್ತಾನೆ. ಸತ್ಕ್ರಿಯೆಗಳಲ್ಲಿ ಸರ್ವೇಂದ್ರಿಯಗಳನ್ನು ಸಂಯಮನ ಅಥವಾ ಧಾರಣ ಮಾಡುವುದೇ ಕ್ರಿಯಾಯೋಗ:

"ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯ ಧಾರಣಾಂ।
ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ॥"

ಸ್ಥಿರವಾಗಿ ಇಂದ್ರಿಯ ಧಾರಣೆಯೇ ಯೋಗ ಆ ಯೋಗದಲ್ಲಿರುವಾಗ ಅಪ್ರಮತ್ತನಾಗಿರುತ್ತಾನೆ ಯೋಗಿ. ಅಂದರೆ ಎಚ್ಚರಿಕೆಯಿಂದಿರುತ್ತಾನೆ

ಕ್ರಿಯಾಲೋಪವಾಗದಂತೆ ಎಚ್ಚರಿಕೆಯುಳ್ಳವನಾಗಿರುತ್ತಾನೆ. ಕ್ರಿಯಾಕುಶಲತೆಯಿಂದ ಕೂಡಿರುತ್ತಾನೆ. ಇವಿಲ್ಲವಾದರೆ ಯೋಗ ಹುಟ್ಟಿ ಸಾಯಬಲ್ಲುದು. ಎಂದು ಕಠೋಪನಿಷತ್ತು ಭಕ್ತ ಮಾಹೇಶ್ವರ ಸ್ಥಳಗಳೆರಡರ ಅರ್ಚನಕ್ರಿಯಾ ಯೋಗದ ಸ್ವರೂಪ ನಿರೂಪಣೆಯನ್ನು ಸೊಗಸಾಗಿ ಮಾಡಿದೆ.

ಮಾಹೇಶ್ವರನು ಅರ್ಚನದ ರುಚಿಯನ್ನು ಅರ್ಪಣದ ರುಚಿಯನ್ನು ಅನುಭವದ ರುಚಿಯನ್ನು ಬೆಳಸಿಕೊಳ್ಳಬೇಕು; ಮಾಹೇಶ್ವರನ ರುಚಿಗಾರಿಕೆಯಲ್ಲಿ ಮಹತ್ವಪೂರ್ಣ ವಿಶಾಲಪೂರ್ಣ ವಿವರಣೆಯಿದೆ. ಅದನ್ನಿಲ್ಲಿ ನಸು ನೋಡೋಣ.

## ರುಚಿ—ಅಭಿರುಚಿ

ರಸದ ರುಚಿಯನ್ನು ಅರಿಯುವುದೇ ರುಚಿಯಲ್ಲ; ಉಳಿದ ಶ್ರೋತ್ರ ನೇತ್ರಾದಿಗಳ ಮುಖದಲ್ಲಿ ಅಭಿವ್ಯಕ್ತವಾಗುವ ಪ್ರಸಾದಗಳ ಸತ್ಕಲೆಗಳ ಉಚಿತ ರುಚಿಯಲ್ಲಿ ಶುಚಿತ್ವವನ್ನು ಅಳವಡಿಸಿಕೊಳ್ಳುವ ಅಭಿರುಚಿಯುಂಟಾಗುವುದೂ ಸಹ ರುಚಿಯ ವೈವಿಧ್ಯಮುಖ. ಪಂಚಜ್ಞಾನೇಂದ್ರಿಯಗಳ ಮನ ಬುದ್ಧಿ ಭಾವಗಳ ಅಭಿರುಚಿಯನ್ನು ಲಿಂಗೋಚಿತವಾದವುಗಳನ್ನಾಗಿಸುವುದೇ ಮಾಹೇಶ್ವರನ ಮುಖ್ಯಧ್ಯೇಯ ವಿಶುದ್ಧ ವಿಶಾಲೇಂಗಿತಜ್ಞಾನ. ಪದಾರ್ಥರುಚಿಯನ್ನು ಪ್ರಾಸಾದಿಕ ರುಚಿಯನ್ನಾಗಿಸುವಂತೆ ಪ್ರಾಕೃತಿಕರೂಪನ್ನು ಪರಮಾರ್ಥ ಸುಂದರವನ್ನಾಗಿಸುವುದೂ ಮಾಹೇಶ್ವರನ ಮಹಾಮಣಿಹ. ದಿವ್ಯಸೌಂದರ್ಯದ ಅಭಿರುಚಿಯನ್ನು ಅಳವಡಿಸಿಕೊಳ್ಳಬೇಕು. ಕೇಡಿಲ್ಲದ ಚಲುವಿನ ಉಪಾಸನಾಸಕ್ತಿ ಉತ್ಕಟವಾಗಬೇಕು. ನಿಸರ್ಗದ ನಯನ ಮನೋಹರ ಸೌಂದರ್ಯದಲ್ಲಿಯೂ ಸಾತ್ವಿಕಭಾವ—ಶುಭ ದೃಷ್ಟಿಗಳು ಚೆಲ್ಲವರಿಯಬೇಕು. ಇದರಂತೆ ಸ್ಪರ್ಶ—ಶಬ್ದಗಳ ವಿಷಯದಲ್ಲಿ ವಿಶುದ್ಧಾಭಿರುಚಿ ವಿವರ್ಧಿತವಾಗಬೇಕು. ಆತ್ಮಾನುಭವದ ಆತ್ಮಾನಂದದ ಅಭಿರುಚಿಗಳನ್ನು ಹೆಚ್ಚಿಸಿಕೊಂಡು ಆತ್ಮತೃಪ್ತಿಯನ್ನು ಅಭಿವರ್ಧಿಸಿಕೊಂಡು ಅಂತರಂಗ ಬಹಿರಂಗ ವಿಕಾಸವಾಗಿ ಆದರ್ಶ ಜೀವಿಯಾಗುವ ರುಚಿ ವೃದ್ಧಿಯಾಗಬೇಕು. ಇದು ಋಜು ಮಾರ್ಗದಲ್ಲಿ ರುಚಿವರ್ಧನ.

ರುಚಿಯ ಅಭಿರುಚಿ ಅದಾರಿಗಿಲ್ಲ ? ಆದರೆ ಶುಚಿಯಾದ ರುಚಿಯ ಅಭಿರುಚಿ ಇರುವವರೆಷ್ಟು ಜನ ? ಅದರಲ್ಲಿಯೂ ಶಿವರುಚಿಯುಳ್ಳವರು ತೀರ ವಿರಳ. ವಿಶುದ್ಧವಾದ ವಿಚಾರ-ಆಚಾರಗಳ ಅಭಿರುಚಿಯುಳ್ಳವರು ಇದ್ದದ್ದೂ ವಿರಳ.

ರುಚಿಗಳಲ್ಲಿ ಸಾಹಿತ್ಯಾಭಿರುಚಿಯೂ ಒಂದು ಉತ್ತಮವಾದ ರುಚಿ; ಅಂತೆಯೇ ಕಾವ್ಯರುಚಿಯೂ ಅಹುದು. ತತ್ವಸಾಹಿತ್ಯ, ಶಿವಕಾವ್ಯಗಳ ಅಭಿರುಚಿಯನ್ನು ಬೆಳಸಿಕೊಳ್ಳುವುದು ಆದರ್ಶ ಜೀವನಕ್ಕೊಂದು ಆಧಾರ. ಅನುಭವಗಳ ಅರ್ಜನೆಗೂ ಅತ್ಯಂತ ಅನುಕೂಲ. ಆನಂದ ಜೀವನದ ಆಗರ.

ಪ್ರತಿಯೊಬ್ಬರ ಅಂತರಂಗದಲ್ಲಿ ಒಂದಿಲ್ಲೊಂದು ಬಗೆಯ ಕಲಾಭಿರುಚಿ ಅಣುಬೀಜವಾಗಿ ಇದ್ದೇ ಇರುತ್ತದೆ. ಅನ್ಯರ ಕಲೆಯನ್ನು ನೋಡಿ ಮೆಚ್ಚುವುದೊಂದು ಬಗೆಯಾದರೆ ತನ್ನ ಅಂತಸ್ಥಕಲೆಯನ್ನು ಕೃತಿರೂಪದಲ್ಲಿ ನಿರ್ಮಿಸಿ ಕಮನೀಯವಾಗಿ ಕಾಣಿಸುವಂತೆ ಪ್ರಯತ್ನಿಸುವ ಸ್ವಭಾವ ಬೆಳೆದು ಬರಬೇಕು. ಕಲೆ ಪ್ರತಿಷ್ಠಿತವಾಗುವಲ್ಲಿ ಸೊಬಗಿದೆ. ಏಕೆಂದರೆ ಪ್ರಕೃತಿ ನಿಷ್ಠ ಕಲೆಯಲ್ಲಿ ಪರಿಪೂರ್ಣತೆಯಿಲ್ಲ. ಅದರಲ್ಲಿರುವ ಕೊರತೆಯನ್ನು ತುಂಬಿ ತರಲು ಮಾಹೇಶ್ವರನು ಪ್ರಯತ್ನಿಸಬೇಕು. ಕೆಲವೆಡೆಯಲ್ಲಿ ಕೊರತೆಯಂತೆ ಕಳಂಕವೂ ಇರುವುದುಂಟು ಇವೆರಡನ್ನು ತೊಡೆದು ಕಳಾಪೂರ್ಣವನ್ನಾಗಿಸಬೇಕು. ದೈವಿಕ ಕಳೆಯನ್ನು ತುಂಬಬೇಕು. ಆಗ ಕಲೆ ಸತ್ಯ ಸುಂದರವಾಗುತ್ತದೆ ; ಶಿವಸಂಪನ್ನವಾಗುತ್ತದೆ. ಈ ಅಭಿರುಚಿಯನ್ನು ಹೆಚ್ಚಿಸಿಕೊಳ್ಳಬೇಕು ಮಾಹೇಶ್ವರನು. ಅದರಲ್ಲಿಯೂ ಲಿಂಗಪೂಜೆಯಲ್ಲಿ ಪರಿಪೂರ್ಣವಾಗಿ ಪರಿಣಾಮಕಾರಿಯಾಗಿ ಕಲಾಭಿರುಚಿಯನ್ನು ಮಾಹೇಶ್ವರನು ಮೈಗೂಡಿಸಿಕೊಳ್ಳಬೇಕು.

ಯಾವ ಒಂದು ಪದಾರ್ಥ ಪ್ರಸಾದವಾಗಿ ಅರ್ಪಣವಾಗಬೇಕಾದರೆ ಮೊದಲು ಅದಕ್ಕೆ ಸಂಬಂಧಪಟ್ಟ ಲಿಂಗಕ್ಕೆಂದು ಭಾವಿಸಿ ಜ್ಞಾನಾರ್ಪಣವಾಗಬೇಕು ಬಳಿಕ ಕ್ರಿಯಾರ್ಪಣವಾಗಬೇಕು. ನಿದರ್ಶನಕ್ಕಾಗಿ ಸುಗಂಧಪ್ರಸಾದ ಆಚಾರಲಿಂಗಕ್ಕೆ, ಸುರುಚಿ ಪ್ರಸಾದ ಗುರುಲಿಂಗಕ್ಕೆ, ಸುರೂಪ ಪ್ರಸಾದ ಶಿವಲಿಂಗಕ್ಕೆ ಸುಸ್ಪರ್ಶ ಪ್ರಸಾದ ಜಂಗಮಲಿಂಗಕ್ಕೆ, ಸುಶಬ್ದಪ್ರಸಾದ ಪ್ರಸಾದಲಿಂಗಕ್ಕೆ ಸುತೃಪ್ತಿ ಪ್ರಸಾದ ಮಹಾಲಿಂಗಕ್ಕೆ ಅರ್ಪಣವಾಗಿಸುವ ಅಭಿರುಚಿ ಅಭಿವರ್ಧಿಸ

ಬೇಕು. ಈ ಆರು ರುಚಿಗಳು ಆರು ಲಿಂಗಗಳಿಗೆ ಅರ್ಪಣವಾಗುತ್ತವೆ. ಈ ಆರು ರುಚಿಗಳು ಪ್ರತಿ ಪದಾರ್ಥದಲ್ಲಿರುತ್ತವೆ, ಈ ಆರು ರುಚಿಗಳನ್ನು ಆಸ್ವಾದಿಸುವ ಅಭಿರುಚಿ ಆರು ಜ್ಞಾನೇಂದ್ರಿಯ ಪರಿಚಿತ್ವನ್ನ ಆರು ಲಿಂಗಗಳಿಗಿರುತ್ತದೆ.

ರುಚಿ ಒಂದಲ್ಲ, ಹಲವಾರು. ಅಂತೆಯೇ ಅಭಿರುಚಿಯೂ ಹಲದಾರು, ಅವರವರ ಅಭಿರುಚಿ ಅವರವರದೆ ! ಒಬ್ಬರಿಗೆ ಹಿಡಿಸಿದ ರುಚಿ ಇನ್ನೊಬ್ಬರಿಗೆ ಹಿಡಿಸದು ; ಹಿಡಿಸುವುದು ಅಪರೂಪ. 'ಲೋಕೋ ಭಿನ್ನರುಚಿಃ, ಎಂಬುದನ್ನಿಲ್ಲಿ ರುಚಿಗಾರರು ಮೆಲಕು ಹಾಕಬೇಕು. ಒಬ್ಬೊಬ್ಬರಿಗೆ ಒಂದೊಂದು ರಸದ ಮೇಲೆ ಹೆಚ್ಚು ಪ್ರೇಮ. ಒಬ್ಬರಿಗೆ ಹಿಡಿಸಿದ ಬಣ್ಣ (ರೂಪು) ಇನ್ನೊಬ್ಬರಿಗೆ ಹಿಡಿಸದು. ಒಬ್ಬರಿಗೆ ನೆಚ್ಚಿದ ಹೆಸರು (ಶಬ್ದ) ಇನ್ನೊಬ್ಬರಿಗೆ ನೆಚ್ಚದು. ಒಬ್ಬರಿಗೆ ಒಗ್ಗಿದ ಗಂಧ (ವಾಸನೆ) ಇನ್ನೊಬ್ಬರಿಗೆ ಒಗ್ಗದು. ಗಡ್ಡ, ಮೀಸೆ, ವೇಷ, ಭೂಷ ಮೊದಲಾದ ಎಲ್ಲ ವಿಚಾರಗಳಲ್ಲಿಯೂ ಎಲ್ಲರ ರುಚಿ ಭಿನ್ನ. ರಾಗ ಭೋಗ ಯೋಗ ತ್ಯಾಗಗಳ ವಿಚಾರದಲ್ಲಿಯೂ ಅಷ್ಟೆ ! ಮನೆ ಮತ್ತು ಮನಗಳನ್ನು ಕಟ್ಟುವ ಕೆಲಸದಲ್ಲಿಯೂ ಬಗೆ ಬಗೆಯ ಅಭಿರುಚಿಗಳನ್ನು ಅವಲೋಕಿಸುತ್ತೇವೆ, ಆಟ ಪಾಠಗಳಲ್ಲಿಯೂ ನೋಟ ಮಾಟಗಳಲ್ಲಿಯೂ ಅಭಿರುಚಿ ಅನೇಕ, ಒಬ್ಬನಲ್ಲಿಯೇ ದಿನ ದಿನಕ್ಕೂ ರುಚಿಯು ಅಭಿರುಚಿ ಭಿನ್ನವಾಗಿರುತ್ತದೆ. ರುಚಿ-ಅಭಿರುಚಿಗಳ ವಿಚಾರದಲ್ಲಿ ಹೀಗೆಯೇ ಎಂದು ಇಷ್ಟೇ ಎಂದು-ಇಂತಹದೇ ಎಂದು ಹೇಳಲು ಯಾರಿಗೂ ಆಗದಮಾತು. 'ಇಕ್ಷು ಕ್ಷೀರ ಗುಡಾದೀನಾಂ ಮಾಧುರ್ಯಸ್ಯಾಂತರಂ ಮಹತ್ । ತಥಾಪಿನ ತದಾಖ್ಯಾತುಂ ಸರಸ್ವತ್ಯಾಪಿ ಶಕ್ಯತೇ ॥" ಎನುದುದುಂಡಿ ಕವಿಯು ರುಚಿ ಅನಿರ್ವಾಚ್ಯವೆಂದು ಅಭಿಪ್ರಾಯ ಪಟ್ಟಿದಾನೆ. ಶಿವಾದ್ವೈತ ಸಿದ್ಧಾಂತದಲ್ಲಿ ರುಚಿಯು ಗುರುಲಿಂಗಕ್ಕೆ ಸಂವೇದ್ಯ. ಅಂತೆಯೇ ಪ್ರಾಣಲಿಂಗಕ್ಕೂ ಸಂವೇದ್ಯ. ಉಳಿದ ಪದಾರ್ಥಗಳಲ್ಲಿರುವ ಗೌಣಾಂಗವಾಗಿರುವ ರುಚಿಯನ್ನು ಆಸ್ವಾದಿಸುವ ರುಚಿಗಾರಿಕೆ ಆ ಆ ಲಿಂಗಗಳಿಗೆ ಸಂವೇದ್ಯ.

ರುಚಿ ಚೇತಸೋತ್ಪಾದಿ. ಅದರಲ್ಲಿ ಹೆಚ್ಚಾಗಿ ಜೀವನ ಶಕ್ತಿಯಿದೆ. ಆದರಿಂದ ಚೇತನ ಶಕ್ತಿ ಅರಳುವುದು. ಚಲುವಿನ ಶಕ್ತಿಯೂ ಅರಳುವುದು. ಆಯುಷ್ಯ ಅಭಿವೃದ್ಧಿ ಸುವುಮ-ಇದರಿಂದಾಗಿ ರುಚಿಯನ್ನು ಶುಚಿಯಾಗಿಸಿಕೊಳ್ಳಬೇಕು. ರುಚಿ ಶುಚಿಯಾದರೆ ಜೀವನದ ಸೌಂದರ್ಯ ಹೆಚ್ಚುತ್ತದೆ. ಜ್ಞಾನಾಭಿರುಚಿ ವಿಕಾಸ

ವಾಗುತ್ತದೆ. ಎಲ್ಲ ಕಲೆಗಳಲ್ಲಿ ಅಭಿರುಚಿಯುಂಟಾಗುತ್ತದೆ. ರುಚಿಯನ್ನು ಶುಚಿಗೊಳಿಸುವುದೇ ಮಾಹೇಶ್ವರನ ನೈಷ್ಠಿಕೋಪಾಸನೆ, ಆರು ಬಗೆಯ ರುಚಿಗಳಲ್ಲಿ ಶುಚಿತ್ವವನ್ನು ಅಳವಡಿಸಿ ಅವುಗಳಲ್ಲಿ ಅಭಿರುಚಿಯನ್ನು ಅಭಿವೃದ್ಧಿಗೊಳಿಸಬಲ್ಲ ; ಮಿತವಾಗಿಸಬಲ್ಲ ಮಾಹೇಶ್ವರ.

ರುಚಿ ಹೊರಗಿಲ್ಲ. ಅದು ತನ್ನೊಳಗಿದೆ. ರುಚಿ ಚೈತನ್ಯನಿಷ್ಠ ಧರ್ಮಶಕ್ತಿ, ಚೈತನ್ಯದಿಂದ ಅದು ಹೊರ ಹೊಮ್ಮಿ ಚೈತನ್ಯವನ್ನು ಅದು ಅಂಗಾಂಗಗಳಲ್ಲಿ ರೂಪಿಸುತ್ತದೆ. ಅದು ಇಂದ್ರಿಯಂಗಳನ್ನು ಬಳಸಿದ್ದರೂ ಅತೀಂದ್ರಿಯ ಶಕ್ತಿ. ಅಂತೆಯೇ ಅದು ಅವಿನಾಶಿ ; ಅಪರಿಚ್ಛಿನ್ನ. ದೈವೀಶಕ್ತಿಗೆ ಈ ಗುಣಗಳಿರುವುದು ಸಹಜ. ನೀರೊಳಗೆ ಸಕ್ಕರೆಯು ಬೆರೆಯುವಂತೆ ಮಾಹೇಶ್ವರನಲ್ಲಿ ಶುದ್ಧರುಚಿಯು ಬೆರಸಿರುತ್ತದೆ. ಅದರಿಂದಾಗಿ ಆತನಲ್ಲಿ ಕಲೆ ಬಿಂದು ನಾದಗಳ ಅಚ್ಚ ಅಭಿರುಚಿ ಅಭಿವೃದ್ಧಿಯಲ್ಲಿರುತ್ತದೆ.

ಅಮೃತ ರುಚಿಯಂತಿರುವ ಜೀವನವನ್ನು ಅಜ್ಞಾನವು ಆವರಿಸಿ ಅರುಚಿಗೊಳಿಸುತ್ತದೆ ; ಅಶುಚಿಯನ್ನಾಗಿಸಿರುತ್ತದೆ. ಬಾಳಿನ ಅಜ್ಞಾನಾಂಧಕಾರದಲ್ಲಿ ಮಾಹೇಶ್ವರನು ಜ್ಞಾನಚಂದ್ರನನ್ನು ಮೂಡಿಸುತ್ತಾನೆ ; ಅಮೃತಕಿರಣಗಳನ್ನು ಹರಡಿಸುತ್ತಾನೆ. ಅಮೃತ ರುಚಿ ಅಭಿರುಚಿಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ತನ್ನ ಮಾಹೇಶ್ವರತ್ವದ ಶೀಲಸೌಂದರ್ಯಗಳನ್ನು ಉಳಿಸಿಕೊಳ್ಳುತ್ತಾನೆ, ವಿವಿಧ ಮಾಧುರ್ಯಗಳನೂಡುತ್ತಾನೆ. ಸಕಲ ಸತ್ಕಲೆಗಳ ಸೊಬಗನ್ನು ಸೊಗಸನ್ನು ತೋರುತ್ತಾನೆ, ಮಾಹೇಶ್ವರನು ರುಚಿಯ ಶುಚಿತ್ವ ಪೋಷಕ ; ಶುದ್ಧ ರುಚಿಯ ಅಭಿರುಚಿ ಪ್ರದಾಯಕ.

ಕಾಲ ಕಳೆಯದಂತೆ, ಕೆಲಸ ಕೆಡದಂತೆ, ಅರ್ಥ ವ್ಯರ್ಥವಾಗದಂತೆ, ಶಕ್ತಿ ಹ್ರಾಸವಾಗದಂತೆ, ಬುದ್ಧಿ ಮಂಕಾಗದಂತೆ, ಆರೋಗ್ಯ ಅನ್ಯಾಯವಾಗದಂತೆ ಇರುವ ಅಭಿರುಚಿಯನ್ನು ತಾನು ಅಳವಡಿಸಿಕೊಂಡು ಉಳಿದವರಿಗೂ ಅಳವಡಿಸುವ ಮಹಿತಾತ್ಮ ಮಾಹೇಶ್ವರ. ಸತ್ವಪೂರ್ಣವಾದ ಶುದ್ಧವಾದ ಉತ್ತಮ ರುಚಿಯನ್ನು ಅಭಿರುಚಿಯನ್ನು ಬೆಳಸಿಕೊಳ್ಳುವುದು ಮಾಹೇಶ್ವರನ ಉತ್ತಮೋದ್ದೇಶ, ಇದುವೇ ಆತನ ಜೀವನಾದರ್ಶ. ಈ ಉದ್ದೇಶ ಈ ಆದರ್ಶಗಳನ್ನು ಉಳಿಸಿ

ಬೆಳಸಿಕೊಂಡು ಬರುತ್ತವೆ ಮಾಹೇಶ್ವರ ಸ್ಥಲದೊಳಗಿನ ಆರು ಉಪಾಂಗಸ್ಥಲಗಳು: ಪರಮೋತ್ತಮ ರಸರುಚಿಯಲ್ಲಿ ಅಭಿರುಚಿಯನ್ನು ತೋರಿ ಅದರಲ್ಲಿಯೇ ತಲ್ಲೀನನಾಗುವುದೇ ಮಾಹೇಶ್ವರನ ಐಕ್ಯಸ್ಥಲ ನಿರ್ದೇಶ.

ಮಾಹೇಶ್ವರನು ಉತ್ತಮ ಅಭಿರುಚಿಯುಳ್ಳವನಾಗಬೇಕೆಂಬುದನ್ನು ಬೋಧಿಸುತ್ತವೆ ಈ ಮುಂದೆ ಹೇಳುವ ಮಾಹೇಶ್ವರನ ಷಡ್ವಿಧಗಳು : ಆಚಾರ ನಿಷ್ಠೆ, ಗುರುನಿಷ್ಠೆ, ಲಿಂಗನಿಷ್ಠೆ, ಪ್ರಸಾದ ನಿಷ್ಠೆ ಮಹನ್ನಿಷ್ಠೆ—ಇವು ಮಾಹೇಶ್ವರನು ಬೆಳಸಿಕೊಳ್ಳುವ ಉತ್ತಮ ರುಚಿ ಅಭಿರುಚಿಗಳನ್ನು ಸೂಚಿಸುವ ಆರು ನಿಷ್ಠೆಗಳು.

ಆಚಾರ ನಿಷ್ಠೆಯಿಂದ ಅನಾಚಾರಗಳು, ಗುರುನಿಷ್ಠೆಯಿಂದ ದುಸ್ಸಂಗ ದುರ್ಗುಣ ಅಜ್ಞಾನಾದಿಗಳು, ಲಿಂಗನಿಷ್ಠೆಯಿಂದ ದುಷ್ಕರ್ಮಗಳು, ಚರನಿಷ್ಠೆಯಿಂದ ನಿಂದ್ಯಾಹಾರ ನಿಂದ್ಯಪಾನಾದಿಗಳು, ಪ್ರಸಾದ ನಿಷ್ಠೆಯಿಂದ ರಾಜಸ ತಾಮಸಗುಣಗಳು, ಮಹನ್ನಿಷ್ಠೆಯಿಂದ ಸಣ್ಣಸ್ವಭಾವಗಳು ದೂರಾಗುತ್ತವೆ. ಆದ್ದರಿಂದ ಇವುಗಳ ಅನುಷ್ಠಾನವು ಮಾಹೇಶ್ವರನಿಗೆ ನಿರ್ದಿಷ್ಟವಾಗಿದೆ. ಈ ನಿರ್ದಿಷ್ಟತೆಯಲ್ಲಿ ಉತ್ಕೃಷ್ಟ ಅಭಿರುಚಿಯನ್ನು ಬೆಳಸುವ ಬಗೆಯಿದೆಯೆಂದು ಬೇರೆ ಬರೆಯಬೇಕಿಲ್ಲ. ಈ ಷನ್ನಿಷ್ಠೆಗಳಿಂದ ಅನ್ಯ ಅನಿಷ್ಟ ರುಚಿ ಅಭಿರುಚಿಗಳೆಲ್ಲ ಅಳಿದು ಹೋಗುತ್ತವೆ.

"ಕೇಳುವ ಸಂಗೀತ ನೋಡುವ ಸುರೂಪಗಳ
ಲಿಂಗಾರ್ಪಿತವ ಮಾಡಬಲ್ಲರೆ ಪರಮ ಪ್ರಸಾದಿ ಎಂಬೆನು.
ವಾಸಿಸುವ ಸುಗಂಧ, ರುಚಿಸುವ ಸುರಸಂಗಳ
ಲಿಂಗಾರ್ಪಿತವ ಮಾಡಬಲ್ಲರೆ ಪರಮ ಪ್ರಸಾದಿ ಎಂಬೆನು,
ತಟ್ಟು ಮುಟ್ಟು ತಾಗು ನಿರೋಧ ಸೋಂಕು ಸಂಬಂಧಗಳ
ಲಿಂಗಾರ್ಪಿತ ಮಾಡಬಲ್ಲರೆ ಪರಮ ಪ್ರಸಾದಿ ಎಂಬೆನು.
ಹಲ್ಲುಕಡ್ಡಿ, ದರ್ಪಣ ಮೊದಲಾದ ಪದಾರ್ಥಂಗಳ
ಲಿಂಗಾರ್ಪಿತ ಮಾಡಬಲ್ಲರೆ ಪರಮ ಪ್ರಸಾದಿ ಎಂಬೆನು.
ಚಳಿಮಳೆ ಗಾಳಿ ಬಿಸಿಲು ಸಿಡಿಲು ಮಿಂಚು ನೆಳಲುಗಳ
ಲಿಂಗಾರ್ಪಿತ ಮಾಡ ಬಲ್ಲರೆ ಪರಮ ಪ್ರಸಾದಿ ಎಂಬೆನು.
ಪೃಥ್ವಿ ಗಗನ ತತ್ವ ತೋರಿಕೆ ಸೂರ್ಯ ಚಂದ್ರ ಅಗ್ನಿ ತಾರೆ ಪ್ರಕಾಶಂಗಳ

ಲಿಂಗಾರ್ಪಿತ ಮಾಡ ಬಲ್ಲರೆ ಪರಮ ಪ್ರಸಾದಿ ಎಂಬೆನು.
ಇತೀ ಲಿಂಗಾರ್ಪಿತ ಸಕೀಲವನರಿಯದೆ ಬರಿದೆ ಪ್ರಸಾದಿಗಳೆಂಬ
ನುಡಿವ ಜಾಣರ ಕಂಡು ನಾಚಿದೆನಯ್ಯಾ ಅಖಂಡೇಶ್ವರ"

ಪ್ರಸಾದಿ ಸ್ಥಲ, ವಚನ-೪೭

ಎಲ್ಲದರಲ್ಲಿಯೂ ಎಲ್ಲ ಬಗೆಯ ಒಳಿತಾದ ಅಭಿರುಚಿಗಳನ್ನು ಬೆಳೆಯಿಸಿ ಕೊಳ್ಳಬೇಕೆಂಬುದಕ್ಕೆ ಈ ವಚನ ಉತ್ತಮ ಸಾಕ್ಷಿಯಾಗಿದೆ. ಪರಮ ಪ್ರಸಾದಿ ಯಾಗುವುದೆಂದರೆ ಪ್ರತಿಯೊಂದರಲ್ಲಿಯೂ ಪವಿತ್ರ ಅಭಿರುಚಿಯನ್ನು ಅಭಿವೃದ್ಧಿಸಿ ಕೊಳ್ಳುವುದೆಂದಭಿಪ್ರಾಯ-ಅತ್ಯಂತ ಅಪ್ಯಾಯನವಾಗಿದೆ. ಅಚ್ಚ ಅಭಿರುಚಿಯ ಉಚ್ಚ ಸಂಸ್ಕೃತಿಯ ಚೆಲುವ ಚಿತ್ರಣವಿದೆ, ಚಿನ್ಮಯಾನುಭವಾಮೃತ ರಸಾಸ್ವಾದ ರಸಸ್ವರೂಪತೆಯಿದೆ. ವಿಶಾಲ ವಿಶ್ವಾಭಿರುಚಿಯಿದೆ,

ರಸ ಲೌಕಿಕ ಅಲೌಕಿಕ ಎಂದು ಇಬ್ಬಗೆ: ಲೌಕಿಕ ರಸ ಅನೇಕಾನೇಕ. ಅಲೌಕಿಕ ರಸ ಏಕೈಕ. ರಸೋ ವೈಸಃ ರಸಗ್‌ಂಹ್ಯೇವಾಯಂಲಬ್ಧ್ವಾ ಆನಂದೀ ಭವತಿ' ಎಂದಿದೆ ಶ್ರುತಿ. ಈ ಅಚ್ಚಳಿಯದಾನಂದವನ್ನುಂಟು ಮಾಡುವ ಆ ಅಲೌಕಿಕ ರಸ ಸ್ವರೂಪದಲ್ಲಿ ಸಮರಸವಾಗುವ ಅಭಿರುಚಿ ತಿಳಿಯಾಗಬೇಕು. ತಿಳಿ ರಸಗಳನ್ನು ತಳೆವ ತವಕ ತೀವ್ರವಾಗಬೇಕು. ಇದನ್ನು ನಿರೂಪಿಸಿ ರೂಪಿಸುವುದೇ ಮಾಹೇಶ್ವರ ಸ್ಥಲದ ಸಮರಸ ಭಕ್ತಿಯ ಸತ್ಕಾರ್ಯ. ಅಂತೆಯೇ ಮಾಹೇಶ್ವರ ಸ್ಥಲದ ಉಪಸ್ಥಲವಾದ ಐಕ್ಯಸ್ಥಲ ಸದ್ಧ್ಯೇಯ, ಇದನ್ನು ಸಂಗಳಿಸುವುದರಲ್ಲಿದೆ ಮಾಹೇಶ್ವರಾಂಗನ ಮಹಾ ಜೀವನ ಸಾರ್ಥಕ್ಯ ; ರುಚಿ ಬ್ರಹ್ಮನಲ್ಲಿ ಅಗಲದ ಐಕ್ಯ.

# ವೀರಶಿವಾಗಮ ವಿಭೇದಗಳು

ಅಭಿರುಚಿಯನ್ನು ಬೆಳಸಿಕೊಳ್ಳಲು ಆಗಮಿಕ ವಿಧಾನಗಳು ವಿಭೇದಗಳು ವಿಶೇಷ ಅನುಕೂಲವಾಗಿವೆ. ಅವುಗಳಲ್ಲಿ ಸೂಕ್ಷ್ಮಾಗಮವು ಹೀಗೆ ವಿವರಿಸಿದೆ.

ಗುರುಲಿಂಗಮೋಹೀ, ಗುರುಲಿಂಗಭಕ್ತ, ಗುರುಲಿಂಗಾರ್ಚಕ, ಗುರುಲಿಂಗ ವೀರ, ಗುರುಲಿಂಗಪ್ರಸಾದಿ, ಗುರುಲಿಂಗಪ್ರಾಣಿ–ಎಂಬುದಾಗಿ ಮಾಹೇಶ್ವರಾಂಗನು ಷಡ್ವಿಧ.

ತನ್ನ ಶಿವ ವಿಚಾರಕ್ಕೆ ವಿರುದ್ಧರಾದವರು ತಂದೆತಾಯಿಗಳಾದರೂ ಅವರಲ್ಲಿ ಅನುರಾಗವನ್ನು ಇಟ್ಟುಕೊಳ್ಳಬಾರದು. ಅರ್ಥವಿಲ್ಲದ ವಿಶುದ್ಧವಲ್ಲದ ವಿಚಾರಗಳನ್ನು ಮಾಡಬಾರದು. ಅರ್ಥವತ್ತಾದ ಅತ್ಯಂತ ಶುದ್ಧವಾದ ಆತ್ಮವಿಚಾರಗಳನ್ನು ಬಿಡಬಾರದು, ಇಂತಹ ಆತ್ಮವಿಚಾರವನ್ನು ಬೋಧಿಸುವ ಗುರುಲಿಂಗೈಕ ಮೋಹವುಳ್ಳಾತನೆ ಗುರುಲಿಂಗಮೋಹಿ ಎನಿಸುತ್ತಾನೆ. ಈತನಿಗೆ ವಿಶುದ್ಧವಾದ ವಿಶಾಲವಾದ ವಿಚಾರಾಭಿರುಚಿ ಬೆಳೆದು ಬರುತ್ತದೆ.

ವಿಶುದ್ಧ ವಿಚಾರಗಳಲ್ಲಿ ಹಗಲಿರುಳು ಹರುಷಿಸುವಾತನೆ 'ಗುರುಲಿಂಗಭಕ್ತ' ಎಂದೆನಿಸುತ್ತಾನೆ.

ತನ್ನ ಗುರುಲಿಂಗಪೂಜೆಯಲ್ಲಿ ವಿಶುದ್ಧ ವಿಚಾರಾಭಿವೃದ್ಧಿಯಲ್ಲಿ ನಿಷ್ಠೆಯಿಂದ ನಿರತನಾದವನೇ "ಗುರುಲಿಂಗೈಕಪೂಜಕ" ನೆನಿಸುತ್ತಾನೆ.

"ಗುರೂಪದಿಷ್ಟಮೇವಾಥ ಸಮಾಚರಣಮಾಚರನ್ ।
ಯಶ್ಚ ತ್ಯಕ್ತೇತರಾಚಾರೋ ಗುರುವೀರಃ ಸ ಉಚ್ಯತೇ ॥"

ತನ್ನ ಗುರುವಿನ ಉಪದೇಶದಂತೆಯೇ ತನ್ನ ಆಚಾರವಿರಬೇಕು. ಇತರರು ಹೇಳುವ ಇತರಾಚಾರಗಳಲ್ಲಿ ಅಭಿರುಚಿಯನ್ನು ತೋರದಾತನೇ "ಗುರುವೀರ" ನೆನಿಸುತ್ತಾನೆ.

ಎಂದಿಗೂ ಯಾವನಿಮಿಷಕ್ಕೂ ತನ್ನ ಗುರು ಶಾಸನವನ್ನು ಉಲ್ಲಂಘಿಸದಿರುವವನು ಮತ್ತು ಇತರ ಶಾಸನ ನಿವೃತ್ತಿಯುಳ್ಳವನು "ಗುರುಪ್ರಸಾದಿ" !

ಬೇರೆ ಬೇರೆ ಸೇವೆಗಳನ್ನುಳಿದು ಗುರುಸೇವೆಯಲ್ಲಿಯೇ ಸ್ಥಿರತರನಾಗಿ ನಿರತನಾದವನೇ "ಗುರುಲಿಂಗಪ್ರಾಣಿ" !

"ಏವಂ ಭೇದೈಶ್ಚ ಮಾಂ ದೇವಿ ಗುರುಮೂರ್ತಿಧರಂ ಶಿವಂ ।
ಭಜತೇ ಽನನ್ಯಚಿತ್ತೋ ಯಸ್ಸ ಮುಕ್ತ ಸ್ಯಾನ್ನ ಸಂಶಯಃ "

—ಸೂಕ್ಷ್ಮಾಗಮ

ಹೀಗೆ ಶಿವಾತ್ಮ ವಿದ್ಯಾನಿಧಿಯಾದ ತನ್ನ ಶ್ರೀಗುರುವಿನಲ್ಲಿ ತನ್ನ ಗುರು ಸ್ವರೂಪವಾದ ಲಿಂಗದಲ್ಲಿ ಅನನ್ಯಚಿತ್ತನಾಗಿ ಅನುರಾಗವನ್ನಿರಿಸಿಕೊಂಡು ಆರಾಧಿಸುವವನು ಅಜ್ಞಾನಬಂಧನದಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಪಾರಮೇಶ್ವರಾಗಮದ ಆರನೆಯ ಪಟಲದಲ್ಲಿ ಮಾಹೇಶ್ವರ ಸ್ಥಲದೊಳಗಾಗುವ ಆರು ಭೇದಗಳನ್ನು ಹೀಗೆ ಹೇಳಿರಲಾಗಿದೆ.

ಭಕ್ತಸ್ಥಲದಲ್ಲಿ ಆದಂತೆ ಮಾಹೇಶ್ವರಸ್ಥಲದಲ್ಲಿಯೂ ಭಕ್ತಿ, ಕರ್ಮಕ್ಷಯ, ಶುದ್ಧಬುದ್ಧಿ. ಸುವಿಚಾರ, ದರ್ಪಕ್ಷಯ, ಸಮ್ಯಕ್‌ಜ್ಞಾನ ಎಂಬುದಾಗಿ ಆರು ಬಗೆಗಳನ್ನು ವಿಂಗಡಿಸಲಾಗಿದೆ.

೧. ಮಾಹೇಶ್ವರನಿಗೆ ಮಹೇಶ್ವರನಲ್ಲಿ ಪರಾಭಕ್ತಿಯಿರಬೇಕು. ಇದುವೆ ಈತನಿಗೆ ಕಾಮಧೇನು, ಕಲ್ಪತರು; ಕರಸ್ಥಲದಲ್ಲಿರುವ ಅಮೃತಾಹಾರ.

೨. ಭಕ್ತಸ್ಥಲದಲ್ಲಿ ಸ್ಥೂಲಕರ್ಮಗಳು ತೊಲಗಿದರೆ ಮಾಹೇಶ್ವರ ಸ್ಥಲದಲ್ಲಿ ಸೂಕ್ಷ್ಮಕರ್ಮಗಳು ಕ್ಷಯಿಸುತ್ತವೆ. ಈ ಸೂಕ್ಷ್ಮಕರ್ಮಕ್ಷಯವಾಗದೆ ಮಾಹೇಶ್ವರತ್ವವು ಕೈಗೂಡದು. ಜಡಕರ್ಮಕ್ಕೆಳಸುವ ಸಂಕಲ್ಪಗಳನ್ನು ವಿಚಾರಗಳನ್ನು ವಿಸರ್ಜಿಸಬೇಕು.

೩. ಸೂಕ್ಷ್ಮಕರ್ಮಗಳಾದ ಅಸತ್‌ಸಂಕಲ್ಪ ಅವಿಚಾರಾದಿಗಳು ತೊಲಗುವುದರಿಂದ ಬುದ್ಧಿ ಶುದ್ಧವಾಗುತ್ತದೆ. ವೈಷಯಿಕ ವಾಸನೆಯಿಂದ ವಿರಹಿತವಾಗು

ತ್ತದೆ. ಸ್ಥಿರಬುದ್ಧಿಯುಂಟಾಗುತ್ತದೆ. ನಿರ್ಮಲತೆ ನೆಲಸುತ್ತದೆ. ಮಹೇಶನಲ್ಲಿ ಮತಿ ನಿಶ್ಚಲವಾಗಿರುತ್ತದೆ.

೪. ಬುದ್ಧಿ ಶುದ್ಧವಾದರೆ ವಿಚಾರಸ್ಥಲ ಅಳವಡುತ್ತದೆ. ಅಂದರೆ ಸುವಿಚಾರಸಂಪ್ರಾಪ್ತವಾಗುತ್ತದೆ. ಗುರೂಕ್ತ ವಾಕ್ಯಾರ್ಥವನ್ನು ಚಿಂತನಮಾಡುವ, ಚಿಂತನಮಾಡಿ ನಿಶ್ಚಯಿಸಿಕೊಳ್ಳುವ, ನಿಶ್ಚಯವಾದುದರಲ್ಲಿ ಹಿತಾಹಿತಗಳನ್ನು ವಿಂಗಡಿಸುವ, ವಿಂಗಡಿಸಿ ಹಿತರೂಪ ಪ್ರಯೋಜನವನ್ನು ಪಡೆಯುವ ಸಾರ್ಥಕಶಕ್ತಿ ಸಂಭವಿಸುತ್ತದೆ. ಇದನ್ನೇ ವಿಚಾರಸ್ಥಲವೆಂದು ಪಾರಮೇಶ್ವರಾಗಮವು ಪ್ರತಿಪಾದಿಸಿದೆ.

೫. ಪ್ರಯೋಜನವನ್ನು ಪಡೆದಬಳಿಕ ಸಾಮಾನ್ಯವಾಗಿ ಗರ್ವವುಂಟಾಗುವುದು ಸಹಜ. ಅಂತಹ ಅಹಂಕಾರಕ್ಕೆ ಒಳಗಾಗದಿರುವುದೇ "ದರ್ಪಸಂಕ್ಷಯಸ್ಥಲ". ಇದೇ ಮಾಹೇಶ್ವರನ ಶರಣಸ್ಥಲ. ಇದರಿಂದ ಸಹಜವಾದ ಸ್ವರೂಪಜ್ಞಾನವುಂಟಾಗುತ್ತದೆ.

೬. ಇದನ್ನೇ ಆರನೆಯದಾದ ಮಾಹೇಶ್ವರಾಂಗನ ಸಮ್ಯಗ್ ಜ್ಞಾನಸ್ಥಲವೆಂದು ನಿರೂಪಿಸಲಾಗಿದೆ. ಇದುಂಟಾದ ಮಾಹೇಶ್ವರೈಕ್ಯನು ತನ್ನಂತೆ ಸರ್ವ ಪ್ರಾಣಿಗಳನ್ನು ಕಾಣುತ್ತಾನೆ, ಮತ್ತು ಪರಮಾತ್ಮಸ್ವರೂಪವನ್ನಾಗಿಯೂ ಭಾವಿಸುತ್ತಾನೆ. ಮಾಹೇಶ್ವರೈಕ್ಯನಿಗೆ ತನ್ನಲ್ಲಿ ಜೀವರಲ್ಲಿ ಜಗದೀಶ್ವರನಲ್ಲಿ ಸಮಭಾವವನ್ನು ಅಳವಡಿಸಿಕೊಳ್ಳುತ್ತಾನೆ.

"ಯಸ್ಯ ಸರ್ವಜ್ಞತಾ ಭಕ್ತಿರ್ಯಾತೃಪ್ತಿಃ ಕರ್ಮಸಂಕ್ಷಯಃ ।
ಅನಾದಿಬೋಧೋ ಯೋ ಬುದ್ಧಿರ್ವಿಚಾರೋ ಮೇ ಸ್ವತಂತ್ರತಾ॥
ಅಲುಪ್ತಶಕ್ತಿರಿತಿ ಯಾ ಸಾ ಚ ಮೇ ಗರ್ವಸಂಕ್ಷಯಃ ।
ಅನಂತಶಕ್ತಿರಿತಿ ಮೇ ಸಮ್ಯಗ್‌ಜ್ಞಾನಂ ದದಾತಿ ಸಾ ॥
ಅಂಗೋಪಾಂಗಾತ್ಮಭಾವೇನ ಸ್ಥಲಷಟ್ಕಸ್ಯ ನಿರ್ಣಯಂ ।
ಯೋ ಜಾನಾತಿ ಸ ದೇವೇಶಿ ಶಿವ ಏವ ನ ಸಂಶಯಃ ॥

ಮಾಹೇಶ್ವರನ ಭಕ್ತಿಯು ಸರ್ವಜ್ಞತೆಯನ್ನು, ಕರ್ಮಕ್ಷಯ ಸ್ಥಲವು ತೃಪ್ತಿಯನ್ನು, ಶುದ್ಧಬುದ್ಧಿಯು ಅನಾದಿಬೋಧವನ್ನು, ವಿಚಾರಸ್ಥಲವು ಸ್ವತಂತ್ರತೆ

ಯನ್ನು, ದರ್ಪಸಂಕ್ಷಯಸ್ಥಲವು ಅಲುಪಶಕ್ತಿಯನ್ನು, ಸಮ್ಯಗ್ಜ್ಞಾನಸ್ಥಲವು ಅನಂತಶಕ್ತಿಯನ್ನು ಕೊಡುತ್ತವೆ.

ಭಕ್ತಸ್ಥಲದ ಭಕ್ತಿಯಿಂದ ಭವಿತನ ಬಿಟ್ಟುಹೋದರೆ ಮಾಹೇಶ್ವರಸ್ಥಲದ ಭಕ್ತಿಯಿಂದ ಎಲ್ಲಾ ಅಜ್ಞಾನ ಬಿಟ್ಟೋಡುತ್ತದೆ. ಭಕ್ತನ ಕರ್ಮಕ್ಷಯವು ಶಕ್ತಿಯನ್ನುಂಟುಮಾಡಿದರೆ ಮಾಹೇಶ್ವರನ ಕರ್ಮಕ್ಷಯಸ್ಥಲವು ತೃಪ್ತಿಯನ್ನು ತರುತ್ತದೆ. ಭಕ್ತನ ಶುದ್ಧಬುದ್ಧಿಶ್ಥಲವು ಚಿತ್ತಶುದ್ಧಿಯನ್ನು ಅನಾದಿಕ್ರಿಯೆಯನ್ನು ಒದಗಿಸಿದರೆ ಮಾಹೇಶ್ವರನದು ಅನಾದಿಬೋಧವನ್ನು ಅಳವಡಿಸುತ್ತದೆ. ಭಕ್ತನ ವಿಚಾರಸ್ಥಲವು ಆಚಾರ ತಂತ್ರತೆಯನ್ನುಂಟುಮಾಡಿದರೆ ಮಾಹೇಶ್ವರನ ವಿಚಾರವು ಸರ್ವಸ್ವತಂತ್ರತೆಯನ್ನುಂಟುಮಾಡುತ್ತದೆ. ಭಕ್ತನ ಧರ್ಮಕ್ಷಯವು ಆಹಂಕಾರವನ್ನಳಿದರೆ ಮಾಹೇಶ್ವರನದಂ ಅಲುಪ್ತಶಕ್ತಿಯನ್ನು ಅಳವಡಿಸುತ್ತದೆ. ಭಕ್ತನ ಸಮ್ಯಗ್ಜ್ಞಾನವು ಅನನ್ಯೈಕಶಕ್ತಿಯನ್ನು ಅನುಗ್ರಹಿಸಿದರೆ ಮಾಹೇಶ್ವರನಸಮ್ಯಗ್ಜ್ಞಾನವು ಅನಂತಶಕ್ತಿಯನ್ನು ಅನುಗ್ರಹಿಸುತ್ತದೆ.

"ಗುರುಲಿಂಗ ಮೋಹಿತನಾದಡೆ, ಮಾತಾಪಿತರ ಮೋಹವ ಮರೆಯಬೇಕು, ಗುರುಲಿಂಗ ಭಕ್ತನಾದಡೆ ಪೂರ್ವಬಂಧುಪ್ರೇಮವ ಮಾಡಲಾಗದು. ಗುರುಲಿಂಗ ಪೂಜಕನಾದಡೆ, ಅನ್ಯಪೂಜೆಯ ಮಾಡಲಾಗದು. ಗುರುಲಿಂಗವೀರನಾದಡೆ, ಗುರುಮಾರ್ಗಾಚಾರದಲ್ಲಿ ನಡೆಯಬೇಕು, ಗುರುಲಿಂಗಪ್ರಸಾದಿಯಾದಡೆ ಗುರುವಾಜ್ಞೆಯ ಮೀರಲಾಗದು, ಗುರುಲಿಂಗಪ್ರಾಣಿಯಾದಡೆ, ಹುಲುಮಾನವರ ಸೇವೆ ಮಾಡಲಾಗದು. ಇದುಕಾರಣ ಕೂಡಲಚನ್ನಸಂಗಯ್ಯನಲ್ಲಿ ಈ ಆರು ಸಹಿತ ಗುರುಲಿಂಗಭಕ್ತಿ."

ಮಾಹೇಶ್ವರನು ಗುರುಲಿಂಗ-ಮೋಹಿ, ಭಕ್ತ, ಪೂಜಕ, ವೀರ, ಪ್ರಸಾದಿ ಪ್ರಾಣಿ ಎಂಬುದಾಗಿ ಆರು ಬಗೆಯಾಗುವನೆಂಬ ಆಗಮಾಭಿಪ್ರಾಯವನ್ನು ಚನ್ನಬಸವಣ್ಣನವರು ಅಂಗೀಕರಿಸಿ ವಿವರಿಸಿದ್ದಾರೆ. ಇವರನ್ನು ಗುರುಲಿಂಗ ಷಡ್ಭಕ್ತರೆಂದು ಆಗಮವು ಉಲ್ಲೇಖಿಸಿದೆ. ನಿಜಗುಣರೂ ಒಪ್ಪಿದ್ದಾರೆ,

# ಒಂದಾರು ಆರೊಂದು

ಷಟ್‌ಸ್ಥಲಗಳು ಭಿನ್ನವಲ್ಲ, ಅಭಿನ್ನವೂ ಅಲ್ಲ, ಭಿನ್ನಾಭಿನ್ನಸ್ವರೂಪಗಳು. ಭಾವದಲ್ಲಿ ಕ್ರಿಯೆಯಲ್ಲಿ ಭಿನ್ನಾಭಿನ್ನಗಳಾಗಿಯೇ ಇರುತ್ತವೆ. ಇವನ್ನು ಅಳವಡಿಸಿ ಕೊಳ್ಳುವವರ ಅಳವಿನಲ್ಲಿದೆ ಈ ಅನುಭವ. ಷಟ್‌ಸ್ಥಲವು ಅಂಗ-ಲಿಂಗಸ್ಥಲ ಗಳು ಸೇರಿ ೪೩೨ ಸಕೀಲಸ್ತರಗಳುಳ್ಳದಾಗಿದೆ. ಇವೆಲ್ಲವೂ ಅವ್ಯಕ್ತವಾಗಿ ಅಂತ ರ್ಹಿತವಾಗಿರುತ್ತವೆ. ವ್ಯಕ್ತೀಕರಣವೇ ಷಟ್‌ಸ್ಥಲ ಸಾಧಕನ ಕರ್ತವ್ಯ. ವ್ಯಕ್ತೀ ಕರಣವು ಕ್ರಿಯೆ ಜ್ಞಾನ ಅನುಭವಗಳ ಮುಖದಲ್ಲಿ ಸಂಭವಿಸುತ್ತದೆ. ಸರ್ವ ಸಕೀಲ ಗಳಳವಟ್ಟು ನಿಷ್ಪತ್ತಿಗೊಂಡಾಗ ನಿಷ್ಥಲತೆ ಅಥವಾ ನಿರವಯತೆ ನೆಲಗೊಳ್ಳುತ್ತದೆ. ನಿರವಯತೆಯೆಂದರೆ ವಿದೇಹ ನಿರ್ವಾಣವಲ್ಲ, ಸದೇಹ ನಿರ್ವಾಣ (ಜೀವನ್ಮುಕ್ತಿ) ಸಂಭವಿಸಿ ಅಂಗ ಪ್ರತ್ಯಂಗ ಸಾಂಗೋಪಾಂಗಗಳಲ್ಲಿದ್ದರೂ ಇಲ್ಲದಂತಿರುವಿಕೆ.

ಕ್ರಮಕ್ರಮವಾಗಿ ಷಟ್‌ಸ್ಥಲಗಳು ಸಮನಿಸುತ್ತವೆಯೆಂದು ಭಾವಿಸುವುದೂ ಸಹ ಸಹಜವಲ್ಲ,

"ಪ್ರಥಮದಲ್ಲಿ ಭಕ್ತನಾದೆನೆಂಬರು, ದ್ವಿತೀಯದಲ್ಲಿ ಮಾಹೇಶ್ವರನಾದೆನೆಂ ಬರು, ತೃತಿಯದಲ್ಲಿ ಪ್ರಸಾದಿಯಾದೆನೆಂಬರು, ಚತುರ್ಥದಲ್ಲಿ ಪ್ರಾಣಲಿಂಗಿಯಾದೆ ನೆಂಬರು, ಐದನೆಯದರಲ್ಲಿ ಶರಣನಾದೆನೆಂಬರು, ಆರನೆಯದರಲ್ಲಿ ಐಕ್ಯನಾದೆನೆಂ ಬರು, ಆರುಸ್ಥಲವ ಮೀರಿ ನಿರವಯಸ್ಥಲವನೈದಿಹೆನೆಂಬರು. ಇದು ಖಂಡಿತ ಷಟ್‌ಸ್ಥಲಜ್ಞಾನ ನಿರ್ಣಯವಲ್ಲ. ಆವಾವಸ್ಥಲವಂಗಂಗೊಂಡಡೂ, ಆ ಆ ಸ್ಥಲ ದಲ್ಲಿ ಷಡ್ವಿಧ ಲಿಂಗದಲ್ಲಿ ಬೆರಸಿ ಬೇರಿಲ್ಲದಿರಬಲ್ಲಡೆ ಸದ್ಭಕ್ತನೆಂಬೆನಯ್ಯಾ ಮಹಾ ಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !"

ಭಕ್ತಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯರೆಂದು ಬೇರೆಮಾಡಿನಡೆವು, ಬೇರೆಮಾಡಿ ನುಡಿವ ಭಿನ್ನವಿಲ್ಲ. ಅಂತರಂಗದಲ್ಲಿ ಅರಿವು ಪರಿಪೂರ್ಣ, ಬಹಿರಂಗ ದಲ್ಲಿ ದಾಸೋಹಸಂಪನ್ನ-ಮನೋವಾಕ್ಕಾಯ ಕರ್ಮಂಗಳಲ್ಲಿ ಸದ್ಭಕ್ತಿ ಸಂಪನ್ನ-

ಎಡತೆರಹಿಲ್ಲದೆ ಲಿಂಗಸಂಪನ್ನ–ಸರ್ವಾಂಗದಲ್ಲಿ ಸರ್ವಾಚಾರಸಂಪನ್ನ ಕೂಡಲಚೆನ್ನ ಸಂಗಮದೇವ,

"ಜಲವೆ ಅಂಗವಾದ ಮಾಹೇಶ್ವರನಲ್ಲಿ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಭಕ್ತನಪ್ಪ ಅಂಗಪಂಚಕವು ಗರ್ಭೀಕೃತವಾಗಿ ಆ ಮಾಹೇಶ್ವರಂಗೆ ಗುರುಲಿಂಗ ಸಂಬಂಧವಾಗಿ, ಆ ಗುರು ಅಂಗದಲ್ಲಿಯೆ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ, ಆಚಾರಲಿಂಗವೆನಿಸುವ ಲಿಂಗಪಂಚಕವು ಗರ್ಭೀಕೃತವಾಗಿ ಗುರುಲಿಂಗವೆ ಆಶ್ರಯವಾಗಿ, ಇಂತೀ ಷಡ್ವಿಧಲಿಂಗದಲ್ಲಿಯೇ ಬೆರಸಿ ಬೇರಿಲ್ಲದಿರಬಲ್ಲರೆ ಮಾಹೇಶ್ವರನೆಂಬೆನಯ್ಯಾ-ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!"

ಆವ ವರ್ಣಕೂಡಿದಡೂ ಅಪ್ಪುಮಯ ತಪ್ಪದಂತೆ, ಸರ್ವಗುಣಸಂಪನ್ನನಾದಲ್ಲಿ ಭಕ್ತನೆಂಪಡೂ ತಾನಾಗಿ. ಮಾಹೇಶ್ವರನೆಂದದೂ ತಾನಾಗಿ, ಪ್ರಾಣಲಿಂಗಿ ಎಂದಡೂ ತಾನಾಗಿ, ಶರಣನೆಂದಡೂ ತಾನಾಗಿ, ಐಕ್ಯನೆಂದಡೂ ತಾನಾಗಿ, ಒಂದನಹುದು (ಒಂದಹುದು)ಒಂದನಲ್ಲ ಎನ್ನದೆ ಕತ್ತಲೆಯಲ್ಲಿ ಹಾಲಕೊಂಡಡೆ ಸಿಹಿ ತಪ್ಪುವುದೆ? ಸತ್ತು ಚಿತ್ತಾನಂದವೆಂಬ ಗೊತ್ತ ಹರಿದವಂಗೆ ತಟ್ಟು ಮುಟ್ಟು ಹತ್ತುವ ಭಾವ. ಒಂಗೂ ಇಲ್ಲ, ಕಾಮ ಬೀಮ ಜೀವದನದೊಡೆಯ ತಾನು ತಾನೆ.

ಬಣ್ಣ ಆರು, ನೀರು ಒಂದು. ನೀರು ಯಾವ ಬಣ್ಣದಲ್ಲಿ ಬೆರೆದರೂ ಆ ಬಣ್ಣದಂತಾಗುತ್ತದೆ. ಇದನ್ನು ಅರಿಯದವರಾರು? ಅಂತೆಯೇ ಸಾಧಕನು ಸರ್ವಗುಣ, ಸರ್ವಶೀಲಗಳಿಂದ ಸಂಪನ್ನನಾದರೆ ಸಾಕು; ಆತನು ಯಾವೊಂದು ಸ್ಥಲದಲ್ಲಿದ್ದರೂ ಉಳಿದೆಲ್ಲ ಸ್ಥಲಗಳು ಸಮನಿಸುತ್ತವೆ. ಒಂದರಲ್ಲಿ ಇನ್ನೊಂದಾಗದೆಂಬ ಸಂದೇಹಕ್ಕೆ ಇಂಬಿಲ್ಲ. ಹಗಲಲ್ಲಿ ಹಾಲು ಕುಡಿದರೇನು? ಕತ್ತಲಲ್ಲಿ ಹಾಲು ಕುಡಿದರೇನು? ಸಿಹಿ ಬೇರಾಗದು. ಏನೆಲ್ಲವೂ ಸಾಧಕನ ಸಾಧನೆಯಲ್ಲಿದೆ. ಸರ್ವದರಲ್ಲಿಯೂ ಷಡ್ಭಕ್ತಿಗಳನ್ನು ಬಳಸಿ ಸತ್‌ಚಿತ್ ಆನಂದಗಳನ್ನು ಗಳಿಸಿಕೊಳ್ಳಬೇಕು. ಅಂದರೆ ಸದ್ರೂಪ ಅಂಗ ಚಿದ್ರೂಪ ಲಿಂಗ, ಆನಂದರೂಪೆಭಕ್ತಿ ಅಂದರೆ ಸಮರಸ ಉಂಟಾದರೆ ಎಲ್ಲ ತಟ್ಟುಮುಟ್ಟುಗಳು ಎಲ್ಲ ಭಿನ್ನಭಾವಗಳು ತೊಲಗುತ್ತವೆ. ಆಗ ಇದು ಅಂಗ, ಅದು ಲಿಂಗ ಎಂಬ ಬಿರುಕಿನ ಅರಿವೂ ಸಹ ಇರದೆ

ಕುಳ-ಸ್ಥಳಗಳೊಂದಾಗಿ ಅಂಗವೇ ಲಿಂಗವಾಗಿ ಪಶುಭಾವ ಹೋಗಿ ಪಶುಪತಿಭಾವ ಪ್ರಕಟವಾಗಿ ತಾನೇ ತಾನಾಗುತ್ತಾನೆ.

"ಸ್ಥಳಕುಳವನರಿಯಬೇಕೆಂಬರು. ಭಕ್ತನಾಗಿ ಮಾಹೇಶ್ವರನಾಗಬೇಕೆಂಬರು ಮಾಹೇಶ್ವರನಾಗಿ ಪ್ರಸಾದಿಯಾಗಬೇಕೆಂಬರು. ಪ್ರಸಾದಿಯಾಗಿ ಪ್ರಾಣಲಿಂಗಿಯಾಗಿ ಶರಣನಾಗಬೇಕೆಂಬರು. ಶರಣನಾಗಿ ಐಕ್ಯನಾಗಬೇಕೆಂಬರು; ಐಕ್ಯನಾಗಿ ಏತರಿಂದ ಕೂಟನಾನರಿಯೆ! ಒಳಗಣ ಮಾತು ಹೊರಹೊಮ್ಮಿಯಲ್ಲದೆ ಎನಗರಿಯಬಾರದು, ಎನಗಾದರೂ ಐಕ್ಯನಾಗಿ ಶರಣನಾಗಬೇಕು. ಶರಣನಾಗಿ ಪ್ರಾಣಲಿಂಗಿಯಾಗಬೇಕು. ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು. ಪ್ರಸಾದಿಯಾಗಿ ಮಾಹೇಶ್ವರನಾಗಬೇಕು. ಮಾಹೇಶ್ವರನಾಗಿ ಭಕ್ತನಾಗಬೇಕು. ಭಕ್ತನಾಗಿ ಸಕಲಯುಕ್ತನಾಗಬೇಕು. ಯುಕ್ತಿನಿಶ್ಚಯವಾದಲ್ಲಿಯೇ ಐಕ್ಯಸ್ಥಲ-ಒಳಹೊರಗಾಯಿತ್ತು. ಅಲೇಕವೇ ಲೇಕವಾಯಿಂತ್ತು. ಎನಗೆ ಕಾಣಬಂದಿತ್ತು. ಆಲೇಕನಾದ ಶೂನ್ಯಶಿಲೆಯ ಹೊರಹೊಮ್ಮಿ ಕಂಡೆ-ನಿನ್ನನು."

ಇದಿನ್ನೊಬ್ಬ ಶರಣನ ಭಾವ. ಇನಿದಾದ ಅನುಭಾವ. ಸ್ಥಳಕುಳಗಳಲ್ಲಿ ಸಮಭಾವ. ಸ್ಥಳಸ್ಥಳಗಳಲ್ಲಿಯೂ ಸಮರಸಭಾವ ಒಳಗಿರುವುದು ಹೊರಹೊಮ್ಮಬೇಕು. ಒಳಹೊರಗೂ ಒಂದಾಗಬೇಕು, ಕಾಣದ್ದು ಕಾಣಬೇಕು. ಇದಾಗಬೇಕಾದರೆ ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ಹೋಗಬೇಕೆಂದು ಹೇಳುವಂತೆ-ಐಕ್ಯಸ್ಥಲದಿಂದ ಭಕ್ತಸ್ಥಲಕ್ಕೂ ಬರಬೇಕು. ಇತ್ತಿಂದತ್ತ ಅತ್ತಿಂದಿತ್ತ ಹಾಸುಹೊಕ್ಕಾಗಬೇಕು: ಅಗಮ್ಯಗಮ್ಯವಾಗಬೇಕು, ಅದೃಶ್ಯ ದೃಶ್ಯವಾಗಬೇಕು. ಅಂದರೆ ಅಗೋಚರ ಗೋಚರವಾಗಬೇಕು. ಎಂತಹ ಸುಂದರ ಸ್ವಾನುಭವ ವಚನವಿದು ; ಸಕ್ಕರೆ ತಾನಾದ ಬಳಿಕ ಒಳ ಹೊರಗೆಂಬುದೇನು ? ಕೇವಲ ಅವ್ಯಕ್ತ ಮಧುರಕ್ಕಿಂತ ವ್ಯಕ್ತಾವ್ಯಕ್ತ ಮಧುರತೆ ಯುಕ್ತತಾನೆ ? ಹೊರಹೊಮ್ಮಿಸಿ ಕಾಣುವ ಕಳೆ ದಿಟಕ್ಕೂ ಬೆಲೆಯುಳ್ಳದ್ದು ; ಕಳೆಯುಳ್ಳದ್ದು.

"ಕುಂಭದಲ್ಲಿ ಅಪ್ಪುವಿನ ಸಂಗದಲ್ಲಿ ತಂಡುಲವ ಹಾಕಿ, ಅಗ್ನಿ ಪುಟದಿಂ ಬೇಯಿಸಲಿಕ್ಕಾಗಿ ಒಂದೊಂದು ತಂಡುಲ ಹಿಂಗಿ ಬೆಂದಂತೆ, ಆ ಅಪ್ಪು ಬೆಂಕಿಯ ಸಂಗವ ಮಾಡಿತ್ತು. ಆ ಅಗ್ನಿ ತಂಡುಲಕ್ಕೊಂದೊಂದು ಬಾರಿ ಉರಿಯಿತ್ತು,

ಇಂತೀ ವಿವರಗಳ ಭೇದವನರಿತು, ಅಂಗದಲ್ಲಾರು ಸ್ಥಲವನಂಗೀಕರಿಸಿದಲ್ಲಿ ಬೇರೆ ಒಂದೊಂದರಲ್ಲಿ ಹಿಂಗಿ ನೋಡಿಹೆವೆಂದೊಡೆ ಮೂರಕ್ಕಾರು, ಆರಕ್ಕೆ ಮುವತ್ತಾರು , ಮತ್ತವರೊಳಗಾದ ಗುಣನಾಮ ಅತೀತಕ್ಕೆ ಅತೀತವಾಗಿಪ್ಪುದು: ಇಂತೀ ಸ್ಥಲಂಗಳ ಅಹುದೆಂದು ಒಪ್ಪದೆ, ಅಲ್ಲ ಎಂದು ಬಿಡದೆ, ಅಲ್ಲಿಯ ಸ್ಥಲದಲ್ಲಿ ಏಕೀಕರಿಸಿ, ಅಲ್ಲಿಯ ಭಾವವ ತೋರಿದಲ್ಲಿಯೇ ಲೇಪವ ಮಾಡಿ, ಹಿಡಿದಡೆ ಹಿಡಿಕೆಗೆ ಬಾರದೆ, ಬಿಟ್ಟಡೆ ಹರವರಿಯಲ್ಲಿ ಹರಿಯದೆ, ವಸ್ತುಕದಲ್ಲಿ ವರ್ಣಕ ತೋರಿ, ಆ ವರ್ಣಕಕ್ಕೆ ವಸ್ತುಕ ಅಧೀನವಾಗಿ, ಇಪ್ಪ ಉಭಯಸ್ಥಲವನು ಅರಿತಲ್ಲಿ ವಿಶ್ವಸ್ಥಲ ನಾಶವಾಗಿ ಸದ್ಯೋಜಾತ ಲಿಂಗವು ವಿನಾಶವಾಗಬೇಕು.

ಭಕ್ತಾದ್ಯೈಕ್ಯಾಂತವಹ ಷಡಂಗಕ್ಕೆ ಭಕ್ತಿ ಅಂಗವೇ ಆದಿಯಾಗಿ, ಆ ಭಕ್ತಂಗೆ ಪೃಥ್ವಿಯೇ ಅಂಗವಾಗಿ, ಆ ಪೃಥ್ವಿ ಅಂಗವುಳ್ಳ ಭಕ್ತನಲ್ಲಿಯೇ ಮಾಹೇಶ್ವರ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನಪ್ಪ ಅಂಗಪಂಚಕವು ಗರ್ಭೀಕೃತವಾಗಿ ಆಚಾರಲಿಂಗವೇ ಕಾರಣವಾಗಿ ಇಂತೀ ಷಡ್ವಿಧಲಿಂಗದಲ್ಲಿಯೇ ಬೆರಿಸಿ ಬೇರಿಲ್ಲದಿರ ಬಲ್ಲಡೆ, ಭಕ್ತನೆಂಬೆನಯ್ಯ ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಇದರಂತೆ ಮಾಹೇಶ್ವರಾಂಗನನ್ನೂ ಭಾವಿಸಬೇಕು. ಮಾಹೇಶ್ವರನ ಷಡಂಗಕ್ಕೂ ನಿಷ್ಠಾಭಕ್ತಿಯೇ ಮೂಲ. ಆ ನಿಷ್ಠಾವಂತ ಮಾಹೇಶ್ವರನಿಗೆ ಅಪ್ ಅಂಗ, ಅಪ್ ಅಂಗನಾದ ಮಾಹೇಶ್ವರನಲ್ಲಿ ಭಕ್ತ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಉಳಿದ ಅಂಗವೈದು ಗರ್ಭೀಕೃತವಾಗಿರುತ್ತವೆ. ಮಂತ್ರಮಯವಾದ ಗುರುಲಿಂಗವೇ ಮಾಹೇಶ್ವರಾಂಗನಿಗೆ ಕಾರಣವಾಗಿರುತ್ತದೆ. ಉಳಿದ ಅಯ್ದು ಲಿಂಗಗಳು ಆತನ ಆ ಗುರುಲಿಂಗಾಂತರ್ಗತವಾಗುತ್ತವೆ. ತ್ಯಾಗಾಂಗದಂತೆ ಭೋಗಾಂಗ ಯೋಗಾಂಗ ಮಾಹೇಶ್ವರತ್ವವೂ ಸಿದ್ಧವಾಗಿರುತ್ತದೆ. ಹೀಗಾಗುವುದರಿಂದ ಅಂಗಸ್ಥಲ ಮೂವತ್ತಾರಾಗಲು ಸಾಧ್ಯವಾಗುತ್ತದೆ. ಲಿಂಗಸ್ಥಲಗಳೂ ಮೂವತ್ತಾರಾಗಲು ಅನುಕೂಲವಾಗುತ್ತದೆ. ಮೂವತ್ತಾರರ ಹಸುಗೆ ಮೂವತ್ತಾರು ತತ್ತ್ವದ್ಯೋತಕವೂ ಆಗದಿಲ್ಲ,

"ಲಿಂಗ ಸ್ಥಲ ಮೂವತ್ತಾರು, ಅಂಗಸ್ಥಲಗಳು ಮೂವತ್ತಾರು ಪ್ರಕಾರವು ಅವಾವಯ್ಯ ಎಂದು ಶಿವಯೋಗಿ ಸಿದ್ಧರಾಮೇಶ್ವರನು ಶಂಕಿಸಿ ಬೆಸಗೊಂಬಲ್ಲಿ ಕೇಳ್ಳೈ ಯೋಗಿಭಕ್ತ : ಶ್ರದ್ಧಾಭಕ್ತಿಯನುಳ್ಳ ಭಕ್ತ ಮಾಹೇಶ್ವರ : ನೈಷ್ಠಿಕಾ ಭಕ್ತಿಯುಕ್ತನಾದ ಮಾಹೇಶ್ವರ ಪ್ರಸಾದಿ ; ಸಾವಧಾನ ಭಕ್ತಿಯುಕ್ತನಾದ

ಪ್ರಸಾದಿ ಪ್ರಾಣಲಿಂಗಿ ; ಅನುಭಾವ ಭಕ್ತಿಯುಕ್ತವಾದ ಪ್ರಾಣಲಿಂಗಿ ಶರಣ ; ಆನಂದ ಭಕ್ತಿಯುಕ್ತವಾದ ಶರಣ ಐಕ್ಯ ; ಸಮರಸ ಭಕ್ತಿಯುಕ್ತನಾದ ಐಕ್ಯನು. ಈ ಆರು ಅಂಗಸ್ಥಲಗಳು, ಅಲ್ಲಿ ಭಕ್ತನ ಷಡಾಧಾರ ಚಕ್ರ ಕಂಜದಲ್ಲಿರ್ದ ಷಡ್ವಿಧ ಲಿಂಗದಲ್ಲಿ ಷಡ್ವಿಧ ಭಕ್ತಿಯಿಂದೆ ಕೂಟಸ್ಥವಾದಂತಹ ಅಂಗಸ್ಥಲವಾರು ; ಅವಾವೆಂದೊಡೆ, ಕೇಳಯ್ಯ ಯೋಗಿ ಸದ್ಭಕ್ತ,

ಶ್ರದ್ಧಾ ಭಕ್ತಿಯುಕ್ತವಾದ ಭಕ್ತ. ಆ ಭಕ್ತನ ಸ್ವಾಧಿಷ್ಠಾನ ಚಕ್ರದ ಆರೆಸಳ ಕಂಜದಲಿರ್ದ ಆಚಾರಲಿಂಗದೊಳಗಣ ಗುರುಲಿಂಗದಲ್ಲಿ ಶ್ರದ್ಧಾಭಕ್ತಿಯೊಳಗಣ ನೈಷ್ಠಿಕಾ ಭಕ್ತಿಯಿಂದ ಕೂಟಸ್ಥವಾದಂಥಾತನೇ ಭಕ್ತನೊಳಗಣ ಮಾಹೇಶ್ವರ, ಆ ಭಕ್ತನ ಯೋಗ ಪ್ರಸಾದಿ : ಆ ಭಕ್ತನ ಮಣಿಪೂರಕದ ಹತ್ತೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಶಿವಲಿಂಗದಲ್ಲಿ ಶ್ರದ್ಧಾಭಕ್ತಿಯೊಳಗಣ ಸಾವಧಾನ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನ ಪ್ರಸಾದಿ. ಆ ಭಕ್ತನ ಯೋಗಪ್ರಾಣಲಿಂಗಿ : ಆ ಭಕ್ತನ ಶ್ರದ್ಧಾಭಕ್ತಿಯುಕ್ತವಾದ ಭಕ್ತನ ಅನಾಹತ ಚಕ್ರದ ಹನ್ನೆರಡೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಜಂಗಮದಲ್ಲಿ ಶ್ರದ್ಧಾ ಭಕ್ತಿಯೊಳಗಣ ಅನುಭಾವ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನೊಳಗಣ ಪ್ರಾಣಲಿಂಗಿಯು, ಆ ಭಕ್ತನ ಯೋಗ ಶರಣ ಆ ಶ್ರದ್ಧಾ ಭಕ್ತಿಯುಕ್ತವಾದಭಕ್ತನ ವಿಶುದ್ಧಿ ಚಕ್ರದ ಹದಿನಾರೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಪ್ರಸಾದಲಿಂಗದಲ್ಲಿ ಶ್ರದ್ಧಾ ಭಕ್ತಿಯೊಳಗಣ ಆನಂದ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನೊಳಗಣ ಶರಣನು. ಆ ಭಕ್ತನ ಯೋಗ ಐಕ್ಯನು. ಆ ಶ್ರದ್ಧಾ ಭಕ್ತಿಯುಕ್ತವಾದ ಭಕ್ತನ ಜ್ಞಾನ ಚಕ್ರದ ಎರಡೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಮಹಾ ಲಿಂಗದಲ್ಲಿ ಶ್ರದ್ಧಾ ಭಕ್ತಿಯೊಳಗಣ ಸಮರಸ ಭಕ್ತಿಯಿಂದೆ ಕೂಟಸ್ಥವಾದಂಥಾತನೆ ಭಕ್ತನೊಳಗಣ ಐಕ್ಯನು. ಇಂತುಭಕ್ತನ ಯೋಗಾಂಗ ಸ್ಥಲವಾರು. ಭಕ್ತನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಲಿಂಗಳಲ್ಲಿ ಷಡ್ವಿಧ ಭಕ್ತಿಯಿಂದೆ ಕೂಡಿದಂಥ ಶರೀರಸ್ಥಲಂಗಳು ಷಟ್ ಪ್ರಕಾರವು.

ಇನ್ನು ಇಪ್ಪರ ಮೇಲೆ ಷಡಂಗವೇದ್ಯನೇ ಮಾಹೇಶ್ವರ. ಆ ಮಾಹೇಶ್ವರನ ಷಡಾಧಾರ ಚಕ್ರ ಕಂಜದಲ್ಲಿರ್ದ ಷಡ್ವಿಧ ಭಕ್ತಿಯಿಂದೆ ಷಡ್ವಿಧಾಂಗವನು ವ್ಯಾಪಿಸಲ್ತಕ್ಕಾತನೆ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನು. ಆ ಮಾಹೇಶ್ವರನ ಯೋಗ ಭಕ್ತ : ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನ ಆಧಾರ ಚಕ್ರದ ನಾಲ್ಕೆಸಳ ಕಂಜ

ದಲ್ಲಿ ಗುರುಲಿಂಗದೊಳಗಣ ಆಚಾರಲಿಂಗದಲ್ಲಿ ನೈಷ್ಠಿಕಾ ಭಕ್ತಿಯೊಳಗಣ ಶ್ರದ್ಧಾ ಭಕ್ತಿಯಿಂದೆ ಕೂಟಸ್ಥವಾದಾತನೇ ಮಾಹೇಶ್ವರನೊಳಗಣ ಭಕ್ತನು, ಆಮಾಹೇಶ್ವರನ ಯೋಗಪ್ರಸಾದಿ : ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನ ಮಣಿಪೂರಕ ಚಕ್ರದಪತ್ತೆಸಳ ಕಂಜದಲ್ಲಿರ್ದ ಗುರುಲಿಂಗದೊಳಗಣ ಶಿವಲಿಂಗದಲ್ಲಿ ನೈಷ್ಠಿಕಾ ಭಕ್ತಿಯೊಳಗಣ ಸಾವಧಾನ ಭಕ್ತಿಯಿಂದೆ ಕೂಟಸ್ಥವಾದಾತನೇ ಮಾಹೇಶ್ವರನೊಳಗಣ ಪ್ರಸಾದಿ. ಆ ಮಾಹೇಶ್ವರನ ಯೋಗಪ್ರಾಣಲಿಂಗಿ : ಆ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನ ಅನಾಹತ ಚಕ್ರದ ಹನ್ನೆರಡೆಸಳ ಕಂಜದಲ್ಲಿರ್ದ ಗುರುಲಿಂಗದೊಳಗಣ ಜಂಗಮಲಿಂಗದಲ್ಲಿ ನೈಷ್ಠಿಕಾಭಕ್ತಿಯೊಳಗಣ ಅನುಭಾವ ಭಕ್ತಿಯಿಂದೆ ಕೂಟಸ್ಥವಾದಾತನೇ ಮಾಹೇಶ್ವರನೊಳಗಣ ಪ್ರಾಣಲಿಂಗಿ. ಆ ಮಾಹೇಶ್ವರನ ಯೋಗ ಶರಣ : ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನ ವಿಶುದ್ಧ ಚಕ್ರದ ಹದಿನಾರೆಸಳ ಕಂಜದಲ್ಲಿರ್ದ ಗುರುಲಿಂಗದೊಳಗಣ ಪ್ರಸಾದ ಲಿಂಗದಲ್ಲಿ ನೈಷ್ಠಿಕಾ ಭಕ್ತಿಯೊಳಗಣ ಆನಂದ ಭಕ್ತಿಯಿಂದೆ ಕೂಟಸ್ಥವಾದಾತನೇ ಮಾಹೇಶ್ವರನೊಳಗಣ ಶರಣನು. ಆ ಮಾಹೇಶ್ವರನ ಯೋಗ ಐಕ್ಯ. ಆ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನ ಆಜ್ಞಾ ಚಕ್ರದ ಎರಡೆಸಳ ಕಂಜದಲ್ಲಿರ್ದ ಗುರುಲಿಂಗದೊಳಗಣ ಮಹಾಲಿಂಗದಲ್ಲಿ ನೈಷ್ಠಿಕಾ ಭಕ್ತಿಯೊಳಗಣ ಸಮರಸ ಭಕ್ತಿಯಿಂದ ಕೂಟಸ್ಥವಾದಾತನೇ ಮಾಹೇಶ್ವರನೊಳಗಣ ಐಕ್ಯನು. ಇಂತು ಈ ಪ್ರಕಾರದ ದೆಸೆಯಿಂದ ಮಾಹೇಶ್ವರನ ಯೋಗಾಂಗಸ್ಥಲವಾರು. ಆ ಮಾಹೇಶ್ವರನ ಷಡಾಧಾರ ಚಕ್ರ ಕಂಜದಲ್ಲಿರ್ದ ಷಡ್ವಿಧಲಿಂಗದಲ್ಲಿ ಷಡ್ವಿಧಾಂಗನ ಷಡ್ವಿಧ ಭಕ್ತಿಯಿಂದೆ ಕೂಟಸ್ಥಲವಾದಂಥಶರೀರ ಸ್ಥಲ ಷಟ್ ಪ್ರಕಾರವು,

ದ್ವಿತೀಯಾಂಗ ಸ್ಥಲ–೧೨

ಈ ಎಲ್ಲ ಪುರಾತನೋಕ್ತಿಗಳಿಂದ ಒಂದಾರಾಗುವ ಮತ್ತು ಆರೊಂದಾಗುವ ಬೆಡಗಿನ ಕಲೋದಯವನ್ನು ಕಂಡೆವು. ಇದು ಅಂಗವಿಕಾಸವಾಗುವ ಮತ್ತು ಸಂಕೋಚವಾಗುವ ಸಂವಿಧಾನ. ಅಂಗವಿಕಾಸವಾಗಲು ಆ ಆ ಅಂಗದ ಲಿಂಗವೇ ಕಾರಣ. ಆ ಆ ಲಿಂಗನಾಮಗಳೇ ವಿಕಾಸಸೂಚಕಗಳಾಗಿವೆ. ವಿಕಾಸದ ಅಡಿಗಲ್ಲು ಆಚಾರ. ಆಚಾರವೊಂದು ಆದಿಲಿಂಗ, ಇದರ ಅನುಷ್ಠಾನದಿಂದ ಆರಾಧನೆಯಿಂದ ಭಕ್ತಾಂಗನ ವಿಕಾಸವಾಗುತ್ತದೆ. ಆಚಾರಾಂಗ ಗೌಣಾಂಗ

ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗವಾಗಿ ಪೃಥ್ವ್ಯಂಗ ಪ್ರಗತಿ ಗೊಂಡು ಭಕ್ತಸ್ಥಲ ವಿಕಾಸವಾಗುತ್ತದೆ. ಮಹದಂಗವಾಗಿ ಮಹಾಲಿಂಗಾರಾಧನ ಸೌಭಾಗ್ಯವನ್ನು ಪಡೆಯುತ್ತದೆ. ಅಂತೆಯೇ ಮಾಹೇಶ್ವರಾಂಗನು ಸಹ ನೈಷ್ಠಿಕ ಭಕ್ತಿಯಿಂದ ಮುಂದುವರಿದು ಆಚಾರ ನಿಷ್ಠೆ, ಗುರು ನಿಷ್ಠೆ, ಲಿಂಗನಿಷ್ಠೆ, ಚರ ನಿಷ್ಠೆ, ಪ್ರಸಾದನಿಷ್ಠೆ, ಮತ್ತು ಮಹನ್ನಿಷ್ಠೆಗಳ ಹಂತಗಳಲ್ಲಿ ಹತ್ತಿ ಮಹಾ ವಿಕಾಸ ವನ್ನು ಪಡೆಯುತ್ತಾನೆ. ನಿರಾಮಯತ್ವಕ್ಕೆ ನಿಲುಕುತ್ತಾನೆ.

"ನಿರಾಮಯವೆಂಬ ಮಾಹೇಶ್ವರಂಗೆ ನಿರಾಮಯವೇ ಅಂಗ, ನಿರಾ ಮಯವೇ ಹಸ್ತ, ನಿರಾಮಯವೇ ಗುರುಲಿಂಗ, ನಿರಾಮಯ ಮುಖದಲ್ಲಿ ನಿರಾ ಮಯಾನಂದವೆಂಬ ಸುಖವನೇ ಸಮರ್ಪಣವಂ ಮಾಡಿ ತೃಪ್ತಿಯನೇ ಭೋಗಿಸು ವನು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಹೀಗೆ ಮಾಹೇಶ್ವರನು ನಿರಾಮಯಾಂಗನಾದ ಬಳಿಕ ನಿರಂಜನಾತೀತನಾಗು ತ್ತಾನೆ. ಅಂದರೆ ನಿರಂಜನತೆಯನ್ನೂ ನಿಕ್ಕರಿಸಿ ಅಂದರೆ ಮೀರಿ ಮುಂದು ವರಿಯುತ್ತಾನೆ.

"ನಿರಂಜನಾತೀತ ಮಾಹೇಶ್ವರಂಗೆ, ನಿರಂಜನಾತೀತನೇ ಲಿಂಗ, ನಿರಂಜನಾ ತೀತವೇ ಹಸ್ತ, ನಿರಂಜನಾತೀತವೇ ಗುರುಲಿಂಗ, ನಿರಂಜನಾತೀತವೆಂಬ ಮುಖ ದಲ್ಲಿ ನಿರಂಜನಾತೀತಾನಂದ ವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ."

ನಿರಂಜನತೆಯೂ ಒಂದವಸ್ಥೆ. ರಂಜನತೆಯ ಮೀರಿ ವರ್ತಿಸುವುದೂ ಒಂದು ವೃತ್ತಿ. ನಿರಂಜನತೆಯು ನಿರಾಮಯತ್ವಕ್ಕೆ ನಿಲುಕುವ ನಿಕಟ ಸಮೀಪ ದ್ದಾದರೂ ಒಂದವಸ್ಥೆಯಾದುದರಿಂದ ನಿರಂಜನತೆಯನ್ನೂ ಮೀರಿಮುಂದುವರಿಯ ಬೇಕೆಂದು ಶರಣರ ಅಭಿಪ್ರಾಯ. ಆಕೃತಿ, ದ್ರವ್ಯ, ಮುಖ, ಹಸ್ತ ಭೂತಾದಿ ಗಳು ನಿವೃತ್ತಿಯಾಗಬೇಕು ; ನಿಷ್ಪತ್ತಿಯಾಗಬೇಕು. ಸ್ಥಲಾದಿ ತತ್ವಗಳೂ ನಿಸ್ಥಲಕ್ಕೇರಬೇಕು. ಏರುವ ಬಗೆ ಹೀಗೆ : "ಗುಹ್ಯ, ಜಿಹ್ವೆ, ಬುದ್ಧಿ, ರಸ ಅಪ್ ವಿಷ್ಣು ಈ ಆರು ತತ್ವಗಳು ಆ ಅಖಂಡ ಮಹಾಜ್ಯೋತಿ ಪ್ರಣವದ ದಂಡಾ ಕಾರವಾಗಿಹ ಪಿಂಡ ಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ."

ಇವುಗಳಂತೆ ಅಂಗ ಲಿಂಗಗಳು, ಭಕ್ತಿ ಶಕ್ತಿಗಳು ಸಹ ದಂಡಾಕಾರ ಪ್ರಣವದಲ್ಲಿ ಅಡಗುತ್ತವೆ. ಸಿವ–ಸದಾಶಿವಾದಿ ಅಧಿದೇವತೆಗಳು ಕ್ಷೇತ್ರಜ್ಞ-ಆಕಾಶಾದಿ ಭೂತಾಂಗಗಳು, ಕರ್ತ–ಶಬ್ದಾದಿ ತನ್ಮಾತ್ರ ಯೋಗಾಂಗಗಳು,ಚೈತನ್ಯ-ಶ್ರೋತ್ರಾದಿ ಜ್ಞಾನಾಂಗಗಳು, ಅಂತರ, ವಾಕ್ ಪಾದಾದಿ ಕರ್ಮಾಂಗಗಳು, ಭಾವ, ಜ್ಞಾನ ಮನಾದಿ ಕಾಮಾಂಗಳು ಕ್ರಮವಿಡಿದು ಚಿತ್–ಪರಾ ಆದಿ–ಜ್ಞಾನ-ಕ್ರಿಯಾ–ಇಚ್ಛಾ ಶಕ್ತಿಗಳಲ್ಲಿ ಅಡಗುವುವು. ಮೂವತ್ತಾರು ತತ್ವಗಳಡಗಿ ಶೂನ್ಯವೆನಿಸುತ್ತದೆ. ಶಕ್ತಿಗಳಡಗಿ ನಿಶೂನ್ಯವೆನಿಸುತ್ತದೆ. ಅಂಗ–ಲಿಂಗಗಳಡಗಿ ಸರ್ವಶೂನ್ಯ ನಿರಾಲಂಬವೆನಿಸುತ್ತದೆ.

"ಅಯ್ಯಾ ಒಳಗೆ ನೋಡಿದರೆ ಬಯಲು, ಹೊರಗೆ ನೋಡಿದರೆ ಬಯಲು; ನೆನೆದಿಹೆನೆಂದರೆ ಬಯಲು, ನೆನೆಯಿಸಿಕೊಂಡಿಹೆನೆಂದರೆ ನೀವಿಲ್ಲವಾಗಿ ನಾನು ಬಯಲು, ನೀನು ಬಯಲು ನೋಡಾ. ಭಾವಿಸಿಕೊಂಬ ವಸ್ತುವಿಲ್ಲವಾಗಿ ಭಾವ ಬಯಲೆಂಬೆನು ನೋಡಾ. ಮರಹು ನಷ್ಟವಾಯಿತ್ತಾಗಿ ಅರುಹು ಶೂನ್ಯವಾಯಿತ್ತು ನೋಡಾ. ತನುವುಳ್ಳನ್ನಕ್ಕರ ನಿನ್ನ ಸಾವಯವೆಂದೆ. ಮನವುಳ್ಳನ್ನಕ್ಕರ ನಿನ್ನ ಸಾವಯವ ನಿರವಯನೆಂದೆ. ಅನುಭಾವವುಳ್ಳನ್ನಕ್ಕರ ನಿನ್ನ ನಿರವಯನೆಂದೆ, ನಾನುಳ್ಳನ್ನಕ್ಕರ ನೀನೆಂದೆ. ನಾ ಸತ್ತ ಬಳಿಕ ನೀನೆಲ್ಲಿಯವನು ಹೇಳಾ ? ಇದು ಕಾರಣ ಸಾಯವವನ್ನೆ, ನಿರವಯವನ್ನೆ ನೋಡಾ. ನಿಶ್ಚಲವೆಂಬ ನಿರ್ದೇಹಿಯ ಮೇಲೆ ಸಚ್ಚಿದಾನಂದವೆಂಬ ಪದವು ಬಂದೆರಗಿ ಐದಿ ನುಂಗಿತ್ತು ನೋಡಾ. ಐದಿ ನುಂಗಲಾಗಿ ಕಾರ್ಯವೆನಲಿಲ್ಲ, ಕಾರಣವೆನಲಿಲ್ಲ, ಪರಮ ಕಾರಣವೆನಲಿಲ್ಲ; ಜೀವವೆನಲಿಲ್ಲ, ಪರಮನೆನಲಿಲ್ಲ, ಜೀವ ಪರಮೈಕ್ಯವನೊಳಕೊಂಡು ಶಿವಿ ಪರಿಪೂರ್ಣ ಪರಾಪರವೆನಲಿಲ್ಲ; ಲಕ್ಷವೆನಲಿಲ್ಲ, ನಿರ್ಲಕ್ಷವೆನಲಿಲ್ಲ. ಅಲಕ್ಷನದ್ವಯ ನಿಶ್ಶೂನ್ಯನೆನಲಿಲ್ಲ, ಮಹಾ ಶೂನ್ಯನೆನಲಿಲ್ಲ; ಏನೂ ಎನಲಿಲ್ಲದ ನಿರಾಕಾರ ಬಯಲು, ನಿಶ್ಶಬ್ದಮಯ ಪರಬೊಮ್ಮನು, ಚಿದಾದಿತ್ಯ ಬಯಲ ಬೆಳಗಿನೊಳು ಬಯಲಾದ ಗೊಹೇಶ್ವರಲಿಂಗಕ್ಕಾವ ತೊಡಕುಂಟು ಹೇಳಾ ?

ಆದಿಯಿಲ್ಲದ ಬಯಲು, ಅನಾದಿಯಿಲ್ಲದ ಬಯಲು, ಶೂನ್ಯವಿಲ್ಲದಬಯಲು, ನಿಶ್ಶೂನ್ಯವಿಲ್ಲದ ಬಯಲು, ಸುರಾಳವಿಲ್ಲದ ಬಯಲು, ನಿರಾಳವಿಲ್ಲದ ಬಯಲು,

ಅಖಂಡೇಶ್ವರನೆಂಬ ಬಯಲಲ್ಲಿಯ ಬಯಲು ಮಹಾಘನ ಅಚ್ಚ ಬರಿಯ ಬಯಲೊಳಗೆ ಎಚ್ಚರವಡಗಿ ನಾನೆತ್ತ ಹೋದೆನೆಂದರಿಯೆ.

ಏನೆಂಬೆನೇನೆಂಬೆ, ಏನೆಂಬೆನೇನೆಂಬೆ ಎರಡೊಂದಾದುದ ? ಏನೆಂಬೆನೇನೆಂಬೆ ನವಿರಳ ಘನವ? ಮಹಾದಾನಿ ಕೂಡಲಸಂಗಮದೇವ ತಾನೇ ಬಲ್ಲ.

ಅಂಗಲಿಂಗ ಸಾಮರಸ್ಯಸ್ವರೂಪ ಚಿತ್ರಣವಿದು.

ಅಂಗಸ್ಥಲಗಳು ಕೇವಲ ಧಾರ್ಮಿಕ ವಿಚಾರ ವಿವೇಚನೆಯಿಂದ ಕೂಡಿದವುಗಳಲ್ಲ, ಜತೆಗೆ ಸಾಮಾನ್ಯವಾಗಿ ಕ್ರಿಯಾತ್ಮಕ ವಿಚಾರಗಳೂ ಬರುವುದುಂಟು. ಅಂತೆಯೇ ಮುಂದಿನ ಲಿಂಗಸ್ಥಲಗಳಲ್ಲಿ ತಾತ್ತ್ವಿಕ ವಿಚಾರಗಳೊಡನೆ ಕ್ರಿಯಾತ್ಮಕ ವಿಚಾರಗಳೂ ಹಾಸುಹೊಕ್ಕಾಗಿ ಬರುತ್ತವೆಯೆಂಬುದನ್ನು ಮುಂಬರುವ ವಿವರಣೆಗಳಿಂದ ವಿಶದವಾಗುತ್ತದೆ.

ಭಕ್ತಸ್ಥಲದ ಉಪಾಂಗಸ್ಥಲಗಳು ಹದಿನಯ್ದು, ಈ ಮಾಹೇಶ್ವರಸ್ಥಲದ ಉಪಾಂಗಸ್ಥಲಗಳು ಒಂಬತ್ತು ಸೇರಿ ಇಪತ್ತುನಾಲ್ಕು ಅಂಗಸ್ಥಲಗಳ ವಿವೇಚನೆ ಈ ಎರಡು ಸಂಪುಟಗಳಿಂದಸಾಗಿ 'ತ್ಯಾಗಾಂಗ' ವಿಕಾಸ ವಾದ ಪೂರ್ಣಗೊಂಡಿದೆ.

ಪಂಚಕರ್ಮೇಂದ್ರಿಯಗಳು ಭಕ್ತನೆನಿಸಿ ಪಂಚಜ್ಞಾನೇಂದ್ರಿಯಗಳು ಮಾಹೇಶ್ವರ ಎನಿಸುತ್ತವೆ. ಅಂತರಂಗದಲ್ಲಿ ಚಿತ್ತಭಕ್ತನಾಗಿ ಬುದ್ಧಿ ಮಾಹೇಶ್ವರಸ್ಥಲ ಸಂಪನ್ನವಾಗುತ್ತದೆ. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಘ್ರಾಣ ಭಕ್ತ; ಜಿಹ್ವೆ ಮಾಹೇಶ್ವರ. ತನು ಭಕ್ತ. ಪ್ರಾಣ ಮಾಹೇಶ್ವರ. ಈ ಸದ್ಭಾವದಲ್ಲಿ ತ್ಯಾಗಾಂಗದ ದಿನಾಚರಣೆಗಳು ನಡೆದು ತ್ಯಾಗಾಂಗ ತಿಳಿಗೊಳ್ಳುತ್ತದೆ; ತೊಳಗುತ್ತದೆ. ಸತ್ಕ್ರಿಯೆ-ಸಮ್ಯಗ್ ಜ್ಞಾನಗಳಿಂದ ತ್ಯಾಗಾಂಗಪೂರ್ಣ ವಿಕಾಸವಾಗುತ್ತದೆ. ಭಕ್ತತ್ವವೆಂಬ ವಾಹನವನೇರಿ ಮಾಹೇಶ್ವರತ್ವವೆಂಬ ಕರ್ತನು ಸಾಗಿ ತ್ಯಾಗಾಂಗ ಕರ್ತವ್ಯವನ್ನು ತುದಿಗಾಣಿಸುತ್ತಾನೆ. ನಿಷ್ಠೆ, ನಿಶ್ಚಯ, ನಿರಸನಗಳಿಂದ ಸ್ಥೈರ್ಯ ಸಾಹಸಗಳಿಂದ ತ್ಯಾಗಾಂಗರೂಪ ಭಕ್ತನಲ್ಲಿ ಆಚಾರ ಮತ್ತು ಗುರುರೂಪ ಭಗವಂತ (ಲಿಂಗ) ನನ್ನು ಪ್ರತಿಷ್ಠಿಸುತ್ತಾನೆ. ಭಕ್ತನ ಕಾಯವೇ ಭಗವಂತನ ಕಾಯವಾಗುತ್ತದೆ. ಭಕ್ತನ ಕ್ರಿಯೆ–ಜ್ಞಾನಗಳನ್ನು ಸಕಲ ಸದ್ಗುಣಗಳನ್ನು ಭಕ್ತದೇಹಿಕನಾಗಿ ಬೆಳಸುತ್ತಾನೆ. ಶ್ರದ್ಧೆಯನ್ನು ವೃದ್ಧಿಗೊಳಿಸುತ್ತಾನೆ.

ನಿಷ್ಠೆಯನ್ನು ನಿಶ್ಚಲಗೊಳಿಸುತ್ತಾನೆ. ಲಿಂಗಧಾರಣ, ಲಿಂಗಧ್ಯಾನಾರ್ಚನಗಳನ್ನು ಗಟ್ಟಿಗೊಳಿಸುತ್ತಾನೆ. ತನ್ನ ಲಿಂಗಾಚಾರಕ್ಕೆ ತನ್ನ ಮಂಗಳ ವಿಚಾರಕ್ಕೆ ಹೊಂದಿ ಬಾರದವರನ್ನು ಆಶ್ರಯಿಸುವ ಭಾವವನ್ನು ನಿರಸನಗೊಳಿಸುತ್ತಾನೆ. ಬರೀ ಮಾತು ಗಾರಿಕೆಗೆ ಮನಮಾಡದಂತೆ, ಬಾಹ್ಯವ್ಯವಹಾರಗಳಲ್ಲಿ ಅದ್ವೈತಭಾವವನ್ನು ಬಳಸ ದಂತೆ, ಅನಾಚಾರಗಳಿಗೆ ಅವಿಚಾರಗಳಿಗೆ ಇಂಬಾಗದಂತೆ ನೋಡಿಕೊಳ್ಳುತ್ತಾನೆ. ನಿಷ್ಠೆಗೆ ಹೊರಗಾಗಿರುವ ಮತ್ತು ಕೊರತೆ ತರುವ ಆಹ್ವಾನ ವಿಸರ್ಜನಗಳನ್ನು ಅನ್ಯದೇವ ಮೂರ್ತಿಗಳನ್ನು ಅಂಗೀಕರಿಸದೆ ಆರಾಧಿಸದೆ ಸದಾಚಾರ ಸತ್ಕ್ರಿಯೆ ಗಳಲ್ಲಿ ಯಾವಾಗಲೂ ನಿರತನನ್ನಾಗಿಸುತ್ತಾನೆ. ಶಿವನು ಸರ್ವದರಲ್ಲಿ ಸರ್ವದಾ ಇರುವನೆಂದು ಭಾವಿಸಿ ಸದಾಚಾರಕ್ಕೆ ಸತ್‌ಶೀಲಕ್ಕೆ ಹೊರಗಾಗದಂತಿರಿಸುತ್ತಾನೆ. ಹಾಲಿನಲ್ಲಿ ತುಪ್ಪ ಅವ್ಯಕ್ತವಾಗಿರುವಂತೆ ಸಮಷ್ಟಿಯಲ್ಲಿ (ಸೃಷ್ಟಿಯಲ್ಲಿ) ಶಿವನಿರು ವನು; ವ್ಯಷ್ಟಿಯಲ್ಲಿ ಅಂದರೆ ಭಕ್ತನಲ್ಲಿ ಶಿವನು ಹೆಪ್ಪಿಕ್ಕಿ ಕಡೆದು ಕಾಯಿಸಿ ತೆಗೆದ ತುಪ್ಪದಲ್ಲಿ ತುಪ್ಪ ಇರುವಂತಿರುತ್ತಾನೆಂದು ಮಾಹೇಶ್ವರಾಂಗನು ಮನದಟ್ಟಾಗಿಸಿ ಕೊಂಡಿರುತ್ತಾನೆ. ಆದ್ದರಿಂದ ಮಾಹೇಶ್ವರಾಂಗನಲ್ಲಿ ಮಹೇಶ್ವರ ಸ್ವರೂಪನಾದ ಲಿಂಗದೇವನು ಅಂದರೆ ಗುರುಲಿಂಗದೇವನು ಮನೆಮಾಡಿಕೊಂಡಿರುತ್ತಾನೆ. ಈತನ ತನುವೇ ಆತನಿಗೆ ಮಾಮನೆಯಾಗುತ್ತದೆ. ಬಗೆಯೇ ಬಂಗಾರದ ಗದ್ದುಗೆಯಾಗಿ ರುತ್ತದೆ. ಇಷ್ಟಾದ ಬಳಿಕ ಮಾಹೇಶ್ವರತ್ವವು ಮೈಗೂಡದೇನು? ತನುವಿನಲ್ಲಿ ಆಚಾರ, ಮನದಲ್ಲಿ ಮಂತ್ರವಿಚಾರ ನೆಲೆಗೊಂಡಲ್ಲಿ ಮಾಹೇಶ್ವರತ್ವವು ತಾನೇ ತಾನಾಗಿರುತ್ತದೆ. ಶ್ರೀಗುರುತತ್ವ ಸಮನಿಸುತ್ತದೆ.

ಮಾಹೇಶ್ವರನ ಸ್ಥೈರ್ಯ'ಮೇರುವಿನಂತಹದು, ಮರಣ ಬಂದರೂ ಈತನ ಮನ ಅಲ್ಪವಾದರೂ ಅಳುಕದು ಜರೆ ಬಂದರೂ ಜಂಕದು. ಮನದಲ್ಲಿ ಮತ್ತೊಂದನ್ನು ನೆನೆಯನು. ಮತ್ತೊಬ್ಬರನ್ನು ಕೈಯಾಂತು ಬೇಡನು. ಮತ್ತೊಂದನ್ನು ಕಣ್ಣೆಟ್ಟು ನೋಡನು. ಲಿಂಗವನ್ನು ಅರ್ಚಿಸಿ ಆರಾಧಿಸಿ ಆ ಲಿಂಗದ ಹಂಗಿಗೇನೆ ಒಳಗಾಗದವನು ಇನ್ನಾರ ಹಂಗಿಗೆ ಒಳಗಾದಾನು ? ತನ್ನತನವನ್ನು ಹುಡಿಗೇಡು ಮಾಡಿಯಾನು ?

"ಲಂಚ ವಂಚನೆಗೆ ಕೆಯ್ಯಾನದ ಭಾಷೆ.
ಬಟ್ಟೆಯಲ್ಲಿ ಹೊನ್ನ ವಸ್ತ್ರ ಬಿದ್ದಿದ್ದರೆ ಕೈಮುಟ್ಟಿ ಎತ್ತಿದೆನಾದಡೆ

ಅಯ್ಯಾ, ನಿಮ್ಮಾಣೆ—ನಿಮ್ಮ ಪ್ರಮಥರಾಣೆ.
ನೀನಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ,
ಶಂಭು ಜಕ್ಕೇಶ್ವರದೇವಯ್ಯ ನಿಮ್ಮಾಣೆ !"

ಮಾಹೇಶ್ವರಾಂಗನ ನಿರಸನ ನೇಮವಿದು ; ನಿರಾಕರಿಸುವ ಛಲವಿದು. ಇದ ರಿಂದ ತನಗೂ ಸಮಾಜಕ್ಕೂ ಕ್ಷೇಮ. ಕೈಯಾಸೆ ಮಾಡೆನೆಂಬ ಭಾಷೆಯನ್ನು ಪ್ರತಿಯೊಬ್ಬರು ತೊಟ್ಟರೆ ಅದೆಂತಹ ಕ್ಷೇಮ ಉಂಟಾದೀತು ವ್ಯೆಯುಕ್ತಿಕ ಮತ್ತು ಸಾರ್ವಜನಿಕ ಜೀವನದಲ್ಲಿ ! ಲಂಚಗುಳಿಯಾಗದೆ ಯಾಚನೆಯ ಮಾಡದೆ ಹೆರವರ ಒಡವೆ ಎಲ್ಲಿದ್ದರೂ ಎಳ್ಳಷ್ಟೂ ಆಸೆ ಮಾಡದೆ ತನಗೆ ದೇವ ನಿತ್ತುದೇ ತನ್ನ ದುಡಿಮೆಗೆ ತಕ್ಕಾಗಿ ಬಂದುದೇ ತನಗೆ ಸಾಕೆಂದು ತನಗದೇ ಸಾವಿರೆಂದು ಬಾಳುವುದಕ್ಕಿಂತ ಬೇರೆ ನಿಷ್ಕಂಟಕ ಜೀವನವುಂಟೆ ?

"ಆದಂತೆ ಆಗಲಿ, ಮಾದಂತೆ ಮಾಣಲಿ ಎನಲಾಗದು ;
ನೇಮದಾತಂಗೆ ಛಲ ಬೇಕು, ಛಲ ಬೇಕಯ್ಯ.
ಹಿಡಿದುದ ಬಿಡಲಾಗದು. ಪುಲಿಗೆರೆಯ ವರದ
ಸೋಮನಾಥನ ಮನ ಮುಟ್ಟಿದ ಅಧಿಕಂಗಲ್ಲದೆ ಸೋಲುವವನಲ್ಲ."

ಅನ್ಯದಕ್ಕೆ ಆಸೆ ಮಾಡದಂತಿರುವುದು ಎನಿತು ಲೇಸವೊ ಆದರಂತೆ ತನ್ನ ಕರ್ತವ್ಯದಲ್ಲಿ ಆಲಸದಂತಿರುವುದೂ ಲೇಸು. ಆದರಾಗಲಿ ಹೋದರೆ ಹೋಗಲಿ ಎಂಬ ಉದಾಸೀನವಿರಕೂಡದು ; ಸೋಮಾರಿತನ ಮತ್ತೂ ಇರಕೂಡದು. ಕರ್ತವ್ಯದಲ್ಲಿ ಪ್ರೇಮವಿರಬೇಕು. ಸತ್ಯನೇಮದಲ್ಲಿ ಛಲವಿರಬೇಕು. ಹಿಡಿದ ಕೆಲಸವನ್ನು ಹಿಡಿದ ಸತ್ಯ ವ್ರತವನ್ನು ಕಡೆಗಾಣಿಸಬೇಕು ; ಈ ಕರ್ತವ್ಯ ಭೂಮಿಕೆಯಲ್ಲಿ ಜನಗಳ ಮಾತಿರಲಿ, ಜಗದೀಶನೇ ಅಡ್ಡ ಬಂದರೂ ಬಿಡದೆ ಬಲದಿಂದ ಮುನ್ನಡೆಯಬೇಕು.

"ಅಡಿಗಡಿಗೆ ಬಂದಡರುತಿಪ್ಪ ಕಡು ಛಲ ನಿನಗೆ ಬೇಡ ಕಂಡಾ !
ಮೃಡನೇ ಎನ್ನೊಡನೆ ನೀ ತೊಡರಿ ಸಸಿನೆ ಹೋಗಲರಿಯೆ !
ಎಂತೆಂದೊಡೆಯೂ ನಾನಂಜುವವನಲ್ಲ,

ಸಂತತ ಗಾಸಿ ಮಾಡಿದಡೆಯೂ ಒಡವೆಯ ಸವೆದು ಒಡಲೊಡ್ಡುವೆ
ಕಡಗುವಡೊಮ್ಮೆ ಹಳಚಿ ನೋಡುವೆ ! ಬಡವನ ಕೈ
ಕಡುಹ ನೋಡು ನೋಡಯ್ಯ ಸಂಗಪ್ರಿಯ ಚನ್ನ ಬಂಕೇಶ್ವರ !"

ನಿಷ್ಠೆಯೊಳಗಿರುವ ಗಟ್ಟಿತನವನ್ನು ಈ ದಿಟ್ಟ ನುಡಿಯಲ್ಲಿ ನಿಟ್ಟಿಸುವುದಾಗ ಬೇಕು. ನಿಷ್ಠಾವಂತ ಮಾಹೇಶ್ವರನು ಆ ಮಹಾ ದೇವನಿಗೆ ಎಚ್ಚರಿಕೆಯೊಡನೆ ಸವಾಲನ್ನು ಹಾಕಿದ್ದಾನೆ ಮೆಚ್ಚಿನ ಕೆಚ್ಚೆದೆಯಿಂದ! ಎನ್ನ ಎದೆಗಾರಿಕೆಯನ್ನು ನೀನು ಕಂಡ ಬಳಿಕ ಅಡಿಗಡಿಗೆ ಎಡರೊಡ್ಡುವ ಛಲ ನಿನಗೆ ಬೇಡ. ಎನ್ನೆದೆಗೆ ಬಂದ ನೀನು ಸುಲಭವಾಗಿ ನನ್ನಿಂದ ತಪ್ಪಿಸಿಕೊಳ್ಳಲಾರೆ. ನೀನು ಎಂತಾಡಿದರೂ ಎಂತಹ ಗಾಸಿಗೊಳಗಾಗಿಸಿದರೂ ಎನ್ನ ನೋಂಪಿಗಡ್ಡ ಬಂದರೂ ಅಂಜದೆ ಅಳ ಕದೆ ಇರುವೆ ಒಡವೆಯನ್ನೆಲ್ಲ ನಿನಗೆ ಸಲ್ಲಿಸಿ ಸವೆಸಿ ಮೇಲೆ ಒಡಲನೊಡ್ಡುವೆ. ಮೈದೆಗೆದು ಕಣ್ಮುಚ್ಚಿದಾಗಲೂ ನಿಮ್ಮ ಹಳಚಿ ನೋಡುವೆ. ಈ ಬಡವನ ಕೈ ಕಲಿತನವನೊಮ್ಮೆ ನೋಡು ದೇವನೆ—ಎಂದು ಎದೆಗೆಡದೆ ಏಕೈಕ ನಿಷ್ಠೆಯ ನುಡಿ ಯನ್ನಿಲ್ಲಿ ನೋಡಿ ನಲಿಯಬೇಕು. ದೈವೀ ನೋವು ಅದೆಷ್ಟೇ ಬರಲಿ, ಅದೇನೇ ಬರಲಿ ಅದನ್ನೆಲ್ಲ ನಲವಿನ ಛಲದಿಂದ ಒಲವಿನ ಬಲದೀಂದ ಅಪ್ಪುವ ಆತ್ಮಸ್ಥೈರ್ಯ ಅಗಾಧವಾದುದು ; ಅನನ್ಯ ಆದರ್ಶವಾದುದು.

"ದೆಸೆ ದೆಸೆಯಲ್ಲಿ ನಿಮ್ಮನೇ ಕಾಂಬೆ. ಎದ್ದು ನೋಡಿ ನಿಮ್ಮನೇ ಕಾಂಬೆ. ನಿದ್ದೆಗೆಯ್ದು ನಿಮ್ಮನೇ ಕಾಂಬೆ. ಅಹೋರಾತ್ರಿ ನಿಮ್ಮ ಧ್ಯಾನದಲ್ಲಿರಿಸು ಮಹಾ ಲಿಂಗ ಕಲ್ಲೇಶ್ವರಾ."

"ಎಲು ಒಡೆದು ತನು ತರಗಿ, ಮನವು ಜಜ್ಜರಿಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಿಸಬೇಕು. ಜಂಗಮದಲ್ಲಿ ವಾರಿಕಲ್ಲಾಗಿ ಕರಗಬೇಕು. ಸರ್ವಾಂಗ ಪುಳಕಂಗಳೊಡೆದು ಕಡಲುಗಳಾಗಿ ನಿರ್ವಾಣ ನಿಜವೆಂದಪ್ಪುದೋ ಉಳಿಯು ಮೇಶ್ವರಾ ?

ನಿಷ್ಠೆ ಕರಿಗೊಂಡು ನಿಬ್ಬೆರಗಾಗುವ ಹೊಲಬಿದು. ಎಲ್ಲೆಲ್ಲಿಯೂ ಎಲ್ಲ ಅವಸ್ಥೆಗಳಲ್ಲಿಯೂ ಆತನನ್ನೇ ಕಣ್ಣು ಕಾಣಬೇಕು, ಹಗಲಿರುಳು ಆತನ ಧ್ಯಾನದಲ್ಲಿ ಮನ ಮುಳುಗಿರಬೇಕು, ಮತ್ತೊಂದರ ಚಿಂತೆ ಮನಕ್ಕೆ ಅಂಟಿರಬಾರದು.

"ಅಮೃತಸಾಗರದೊಳಗಿರ್ದು ಆಕಳ ಚಿಂತೆ ಏಕೆ ?
ಮೇರು ಮಂದಿರದೊಳಗಿರ್ದು ಜಲಗರದ ಚಿಂತೆಯೇಕೆ ?
ಶ್ರೀಮತ್ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆಯೇಕೆ ?
ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಮತ್ತಾವ ಚಿಂತೆ ಏಕೆ ಗುಹೇಶ್ವರಾ ?

ಅನನ್ಯ ನಿಷ್ಠೆ ಅದೊಂದು ಅಮೃತ ಸಾಗರ, ಮೇರು ಮಂದಿರ, ಶ್ರೀಮತ್ಪ್ರಸಾದ. ಅದನ್ನು ಕುಡಿದವರಿಗೆ ತೃಷ್ಣೆಯಿಲ್ಲ. ಅದನ್ನು ಪಡೆದವರಿಗೆ ಬಡತನವಿಲ್ಲ, ಅದನುಂಡವರಿಗೆ ಹಸಿವಿಲ್ಲ ; ಮುಕ್ತಿಯ ಚಿಂತೆಯಿಲ್ಲ. ಹೀಗಿರುವಾಗ ಇಂತಹ ನಿಷ್ಠೆಗೆ ನೆಲೆಯಾದ ಕ್ರಿಯಾಲಿಂಗವು ಕರಸ್ಥಲದಲ್ಲಿ ಗುರುಕರುಣೆಯಿಂದ ಕರಿಗೊಂಡ ಬಳಿಕ ಬೇರೆ ಭಾಗ್ಯವಿಲ್ಲ, ಬೇರೆ ಬೇಗುದಿಯಿಲ್ಲ. ಬೇರೆ ಬೇರೆ ಆಶ್ರಯ ಪಡೆವ ಆಶೆಯೂ ಬಾರದು. ಸರ್ವಸ್ವವೂ ಅದೇ ಆಗಿ ಅದರ ಆ ಸತ್ಯಸುಖದಲ್ಲಿ ತಾನೆ ತಾನಾಗಿರುತ್ತಾನೆ ಮಾಹೇಶ್ವರಾಂಗ ! "ಪೂರ್ವಾಶ್ರಯವ ಕಳೆದೆವೆಂಬಿರಿ ! ಪೂರ್ವವಾವುದು-ಆಶ್ರಯ ವಾವುದು ಬಲ್ಲರೆ ನೀವು ಹೇಳಿರೇ ! ಪೂರ್ವವೆಂಬುದೇ ಬಂದ ಬಟ್ಟೆ, ಆಶ್ರಯವೆಂಬುದೇ ಕರಣಾದಿ ಗುಣಂಗಳು. ಈ ಉಭಯವಳಿದು ಕೂಡಲ ಚೆನ್ನಸಂಗಯ್ಯನಲ್ಲಿಪ್ಪ ಶರಣಂಗೆ ನಾನು ಶರಣೆಂಬೆನು." ಕಾಮ ಕ್ರೋಧಾದಿಗಳೂ ಪೂರ್ವಾಶ್ರಯಗಳು, ಇವನ್ನು ಪರಿಹರಿಸಿ ಪರಶಿವಲಿಂಗದ ಆಸ್ರಯದಲ್ಲಿರುವುದೇ ನಿಜವಾದ ಪೂರ್ವಾಶ್ರಯ ನಿರಸನ. ಇದು ತನ್ನ ಆಚರಣೆಯಲ್ಲಿರಬೇಕಲ್ಲದೆ ಆಡಿ ತೋರಬಾರದು. ಆದರಲ್ಲಿಯೂ ಆ ಸ್ಥಿತಿ ಅಳವಡದೆ ಒರೀ ವಾಗದ್ವೈತವನ್ನು ನುಡಿಯಬಾರದು.

"ಗತಿ ಮತಿ ಶಬ್ದ ಚೈತನ್ಯವುಳ್ಳನ್ನಕ್ಕ ಕ್ರಿಯಂತಂತೆ ನಡೆವುದು.
ಉರವಣೆ ಬೇಡ ಕಂಡಾ ಎಲೆ ಮನವೆ ! ಕ್ರಿಯಂತಂತೆ ನುಡಿವುದು.
ಹೂಮಿಡಿಯ ಹರಿದಡೆ ಹಣ್ಣಾಗಬಲ್ಲುದೆ ? ಲಿಂಗದಲ್ಲಿ ಮನ ಲೀಯ
ವಾಗದನ್ನಕ್ಕ ದೇವ ಸಕಳೇಶ್ವರ ನೊಲಿಸಲು ಬೇಕಯ್ಯ."

ಮಾಡುವಿಕೆಯೊಂದಿಲ್ಲದೆ ಮಾತುಗಾರಿಕೆ ಅದೆಷ್ಟಿದ್ದರೂ ಸೊಗವಿಲ್ಲ. ಮಾತಾಡುವಷ್ಟನ್ನು ಮಾಡಬೇಕು, ಮಾಡಿದ್ದನ್ನು ಮಾತಾಡಬೇಕು. ಶಬ್ದಶಕ್ತಿ, ಶಬ್ದ ಸಂಪತ್ತು ಸಾಕಷ್ಟಿದೆಯೆಂದು ಸಿಕ್ಕಂತೆ ನುಡಿಯಬಾರದು. ಶಾಬ್ದಿಕ ಗತಿಮತಿಗಳು ಅತಿಶಯವಾಗಿವೆಯೆಂದು ಮಾತಿನ ಮಾಟಪವನ್ನು ಕಟ್ಟಬಾರದು. ತನ್ನ

ಕ್ರಿಯಾಚಾರವಿಷ್ಟಿದ್ದರೆ ಅಷ್ಟನ್ನು ಉರವಣಿಸದೆನುಡಿವುದು ಉಚಿತಆಚರಣೆಯಿಲ್ಲದೆ ಆಡುವ ನುಡಿ ಹೂಮಿಡಿಯನ್ನು ಹರಿದು ಹಣ್ಣು ಮಾಡುವ ಸಾಹಸವಿದ್ದಂತೆ! ನಡೆ ನುಡಿ ಎರಡೊಂದಾಗಿ ಸರಿಬರಿಯಾಗಿ ಶಿವನೊಲಿಸಬೇಕಲ್ಲದೆ ಬರೀ ನುಡಿಯೊಂದ ರಿಂದ ಒಲಿಸಲು ಸಾಧ್ಯವಿಲ್ಲ ; ಶಿವನೊಲಿಯುವುದಿಲ್ಲ.

"ಗುರು ಸಾಧಕರ ಕಾಣೆನಯ್ಯ ; ಬಲ್ಲೆನೆಂಬವರು ಹೊಲಬುಗೆಟ್ಟರು ! ಲಿಂಗಸಾಧಕರನಾರನೂ ಕಾಣೆನಯ್ಯಾ ; ಬಲ್ಲೆನೆಂಬುವರು ಹೊಲಬುಗೆಟ್ಟರು ! ಪಾದೋದಕ ಪ್ರಸಾದ ಸೇವಕನಾರನೂ ಕಾಣೆನಯ್ಯಾ ; ಬಲ್ಲೆನೆಂಬುವರು ಹೊಲಬುಗೆಟ್ಟರು. ಇದು ಕಾರಣ ಕೂಡಲಚನ್ನಸಂಗಯ್ಯ ವಚನಸಾಧಕರ ಕಂಡು ಮನ ನಾಚಿತ್ತು."

"ಪಂಚಭೂತ ಸೂತಕದ ಬಳಿವಿಡಿದು, ಪ್ರಜ್ವಲಿಸುವ ಆತ್ಮಜ್ಯೋತಿ ಎಂಬುದು ಮಾತಿನೊಳಗಲ್ಲ. ನಾದ ಬಿಂದು ಕಳಾತೀತವೆಂದು ನುಡಿವರು. ಹೆಸರಿಲ್ಲದ ಬಯಲ ತಮ್ಮ ತಮ್ಮ ಮುಖಕ್ಕೆ ಹೆಸರಿಟ್ಟು ತಮತಮಗೆ ಕರ ತಳಾಮಳಕವೆಂಬರು. ಅದರ ಆದಿ ಅಂತ್ಯವನರಿಯರು. ಎಂತು ಬಲ್ಲರು ಸಿಮ್ಮಲಿಗೆ ಚೆನ್ನರಾವ ನನು ಶಬ್ದದ ಉದ್ದೇಶಿಗಳು ?"

ನುಡಿದು ನಡೆಯದಿದ್ದರೆ ನಿಷ್ಪ್ರಯೋಜನ. ನುಡಿದಂತೆ ನಡೆಯಗಲಿಯಬೇಕು. ನುಡಿಗಲಿವುದು ಸುಲಭ. ನಡೆಗಲಿವುದು ದುರ್ಲಭ. ಗುರು, ಲಿಂಗ, ಪಾದೋದಕ, ಪ್ರಸಾದಗಳನ್ನು ಸಾಧಿಸಬೇಕಾದರೆ ಬರೀ ನುಡಿಯಿಂದಾಗದು. ಹೊಲಿಬಿಗನಾಗಬೇಕಾದರೆ ನಡೆಗಲಿಯಬೇಕು.

ಭೂತ ಸೂತಕ ಕಳೆಯದೆ ಶಬ್ದಮುಗ್ಧರಾಗದೆ ಆತ್ಮಜ್ಯೋತಿಯನ್ನು ಒಣ ಮಾತಿನಿಂದ ಕಾಣಲಾಗದು. ನಾಮರೂಪಾತೀತವಾದ ಆ ಜ್ಯೋತಿಯನ್ನು ನುಡಿಗೆ ನಿಲುಕಿಸುವೆನೆಂಬುದು ಸಾರ್ಥಕವಿಲ್ಲದ ಸಾಹಸ. ಹೀಗಿರುವಾಗ ಕರೆದು ಕಳಿಸುವೆನೆಂಬುದು ಕೈಗೂಡದ ಕೆಲಸ, ಖಚಿತವಾಗಿ ಒಪ್ಪದ ಕೆಲಸ.

"ನಿತ್ಯ ಪರಿಪೂರ್ಣನೆಂದು ಪ್ರತ್ಯಕ್ಷ ಶ್ರುತಿ ಸಾರುತ್ತಿರಲು, ಮತ್ತೆ ಪರಿ ಭಾವಿಸಲೇನುಂಟು ಹೇಳಾ ? ಕರೆದರೆ ಬಂದಿತ್ತು, ಕಳೆದಡೆ ಹೋಯಿತ್ತು ಎಂಬ

ಕರ್ಮ ಕೌಟಿಲ್ಯದಲ್ಲಿ ಬಂದವನಲ್ಲ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಜಡರುಗಳಿಗೆಲ್ಲಿಯದೋ ?"

ಕರೆದು ಕಳಿಸುವೆನೆಂಬವನೊಬ್ಬ ಕರ್ಮಿ, ಕುಟಿಲಾತ್ಮ, ಹುಸಿಗಾರ; ನಿತ್ಯ ಪರಿಪೂರ್ಣನನ್ನು ಆತ ಕರೆವುದೆಲ್ಲಿಗೆ ? ಕಳುಹುವುದೆಲ್ಲಿಗೆ ? ಅಂತಹ ಸಮರ್ಥನೇ ಈತನು ? ತಾನೇ ಜಡನಾಗಿ ಜಂಜಡದಲ್ಲಿರುವಾಗ ಈತನ ಕರೆಗೆ ಆತ ಬರಬಲ್ಲನೆ? ಜಡಕರ್ಮದಲ್ಲಿ ನಿರತನಾದವನಿಗೆ ಇದು ಸಲ್ಲದ ಸೊಲ್ಲು, ಸಲ್ಲದ ಕ್ರಿಯೆ. ಜ್ಞಾನವೇ ಪ್ರಸಾದ ಕಾಯ, ಜ್ಞೇಯವೇ ಚಿನ್ಮಯಲಿಂಗ. ಜ್ಞಾನಜ್ಞೇಯ ಸಂಪುಟದಿಂದ ಶರಣನೆನಿಸಿಕೊಂಡವಂಗೆಆಹ್ವಾನ ವಿಸರ್ಜನವೆಲ್ಲಿಯದೋ ಉರಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ?" ಈ ಅನುಭವವಿಲ್ಲದ ಕ್ರಿಯೆ ಕರ್ಮಕ್ಕಿಂತ ಕಡೆ. ಅಂಗ-ಲಿಂಗ ಗಳೆರಡು ಸಂಪುಟಗೊಂಡು ಸಮರಸಗೊಂಡ ಬಳಿಕ ಬರಮಾಡುವವನಾರು ? ಬರುವವನಾರು ?

ಸಮಷ್ಟಿ ಲಿಂಗ ಮುಖ್ಯವಲ್ಲ. ಆರಾಧಕನಿಗೆ ಆತ್ಮಲಿಂಗ ಮುಖ್ಯ. ಸಮಷ್ಟಿಯಲ್ಲಿ ತಾನೆಂಬುದು ತನಿಯಾಗಿರಲಾದು, ಇರುವುದಿಲ್ಲ : ವ್ಯಷ್ಟಿಯಲ್ಲಿ ಸಮಷ್ಟಿ ಇರುತ್ತದೆ. ಇದನರಿಯ.ದೆ,

"ಪೃಥ್ವಿ ಲಿಂಗವೆಂದು ಗತವಾದರು ಹಲಬರು ಅಪ್ಪು ಲಿಂಗವೆಂದು ತಪ್ಪಿದರು ಶಿವಪಥಕ್ಕೆ ಹಲಬರು. ತೇಜಲಿಂಗವೆಂದು ವಾದಿಗಳಾದರು ಹಲವರು ವಾಯುಲಿಂಗವೆಂದು ಪೂಜಿಸಿ ವಾಯುವಾದರು ಹಲಬರು. ಆಕಾಶಲಿಂಗವೆಂದು ಶೂನ್ಯವಾದಿಗಳಾದರು ಹಲಬರು. ಇಂತೀ ಹುಸಿ ಶಬ್ದವನೆ ತೊಡೆದು ನಿಜಲಿಂಗ ನಿತ್ಯ ಪ್ರಸಾದದ ನಿಜವ ತೋರಿದಾತ ಬಸವಣ್ಣ ಕಾಣಾ ಕಲಿದೇವಯ್ಯ.

"ಹೊರಗೆಂಟು ತನು, ಒಳಗೆ ನಿರಂಜನ ಜ್ಯೋತಿ ; ತೆರಹಿಲ್ಲಿದಿಪ್ಪುದನೆಲ್ಲರೂ ಬಲ್ಲವರಿಲ್ಲ ಕೇಳಿರೋ ! ಶಿವನಲ್ಲದೆ ಬೇರೆ ದೈವವಿಲ್ಲ, ಹುಲಿಗೆರೆಯ ವರದ ಸೋಮನಾಥನು ಏಕೋ ರುದ್ರನೆಂದುದು ಶ್ರುತಿ."

ಪೃಥಿವ್ಯಾದಿಗಳಲ್ಲಿ ಸಾಕ್ಷಾತ್ತಾಗಿ ಲಿಂಗ ಸ್ವರೂಪವಿಲ್ಲೆಂದು ಭೇದವಾದಿ ಭೇದಸಾಧಕನಾದ ಮಾಹೇಶ್ವರಾಂಗನು ಪರಿಭಾವಿಸಬೇಕು. ನಿಜಲಿಂಗದಲ್ಲಿ ನಿತ್ಯ ಪ್ರಸಾದ ಗ್ರಾಹಕನಾಗಬೇಕು, ಅಷ್ಟತನುಗಳಿಗೂ ಅಂತರ್ಜ್ಯೋತಿಗೂ ತೆರಹವಿಲ್ಲ ದಿರುವಿಕೆಯನ್ನು ಪೂಜಾಂತ್ಯದಲ್ಲಿ ಮಾಹೇಶ್ವರಾಂಗನು ಮನನ ಮಾಡಬೇಕು,

ಪರುಷದ ಪುತ್ತಳಿಗೆ ಕಬ್ಬುನದ ಅಭರಣಗಳುಂಟೇ? ಎಂದು ಕೇಳುತ್ತಾನೆ ಪ್ರಭು. ಈ ಕೇಳಿಕೆಯಲ್ಲಿ ಉಭಯಧ್ವನಿಯಿದೆ. ಪರುಷದ ಬೊಂಬೆಗೆ ಕಬ್ಬುನದ ಒಡವೆಗಳನ್ನು ಹಾಕಿ ಅಲಂಕರಿಸಬಾರದು, ಒಂದು ವೇಳೆ ಅಲಂಕರಿಸಿದರೆ ಕಬ್ಬುನ ಕನಕವಾಗದೆ ಉಳಿಯದು. ಕನಕವಾದರೂ ಪರುಷವೇ ಆಗುವುದಿಲ್ಲವೆಂಬುದನ್ನು ಮರೆಯಲಾಗದು. ಅಂತೆಯೇ ಅಷ್ಟತನುವಷ್ಟ ಲೋಕಕ್ಕೂ ಅಪ್ರಮಾಣ ಲಿಂಗಕ್ಕೂ ಸಂಬಂಧವಿರುತ್ತದೆಂದು ಮಾಹೇಶ್ವರನ ಮನವರಿತಿರಬೇಕು, ಮುಂದುವರಿದಂತೆ ಈತನು ಜಲತರಂಗನ್ಯಾಯದಂತೆ ಜಗದೀಶ್ವರ ಜಗತ್ತುಗಳೆಂದು ತಿಳಿಯಬೇಕು. ಹೀಗೆ ಅರಿದು ಆಚರಿಸುವ ಮಾಹೇಶ್ವರಾಂಗನ ಪಿಂಡ ಮಂತ್ರಮಯವಾಗಿ ಮಂಗಳಮಯವಾಗುತ್ತದೆ ; ಆ ಮಹಾಲಿಂಗ ನಿಲಯವಾಗುತ್ತದೆ.

"ಪ್ರಸಾದ ಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ ಪ್ರಾಣಲಿಂಗವಾದ ಬಳಿಕ ಸದಾ ಸನ್ನಿಹಿತ ಲಿಂಗ ಶರಣನಲ್ಲಿ ಭಾವಭೇದವಿಲ್ಲ. ನಿರಂತರ ಲಿಂಗಸಂಗಿ, ಅಕಾಯ, ಭಕ್ತಕಾಯವೆಂದುದು ಕೂಡಲ ಚನ್ನ ಸಂಗಯ್ಯನ ವಚನ.

ಲಿಂಗವೇ ಪ್ರಾಣವಾಯಿತ್ತಾಗಿ ಆಚಾರ–ವಿಚಾರವಿಲ್ಲವಯ್ಯ,
ಪ್ರಸಾದಕಾಯವಾಯಿತ್ತಾಗಿ ಸತ್ವ ರಜ ತಮ ಕ್ರೋಧವಿಲ್ಲವಯ್ಯ.
ಜಂಗಮ ಮುಖ ಲಿಂಗವಾದ ಕಾರಣ ಲಿಂಗದಲ್ಲಿ ಅನುಭವಿಸಿ ನೋಡುತ್ತಿರ್ದೆನಯ್ಯಾ ಭಕ್ತಕಾಯ ಮಮಕಾಯವಾಗಿ
ಕೂಡಲ ಚನ್ನ ಸಂಗನ ಬಸವನಲ್ಲಿ ಸುಖಿಯಾಗಿರ್ದೆನಯ್ಯಾ."

"ಭಾವ ಮೂರ್ತಿಯಾಗಬೇಕು ಆ ಲಿಂಗಕ್ಕೆ ! ಅರಿವು ಮೂರ್ತಿಯಾಗಬೇಕು ದಾಸೋಹಕ್ಕೆ ! ಸತ್ಕ್ರಿಯೆ ಮೂರ್ತಿಯಾಗಬೇಕು ಜಂಗಮಲಿಂಗಕ್ಕೆ ! ಭಕ್ತಿ ಮೂರ್ತಿಯಾಗಬೇಕು ಪ್ರಸಾದಕ್ಕೆ ! ನಿರ್ಭಾವ ಮೂರ್ತಿಯಾಗಬೇಕು ಅನುಭಾವಕ್ಕೆ! ಜ್ಞಾನ ಮೂರ್ತಿಯಾಗಬೇಕು ಸ್ವಾನುಭವಕ್ಕೆ !ಇಂತೀ ಪ್ರಜ್ವಲಿತವಾದ ತನುವಿನ ಸಂಗದಲ್ಲಿಪ್ಪನು ಕಲಿವೀರನು.

"ನೆಲನನೊಳಗೊಂಡ ಸಲಿಲ. ಸಲಿಲವನೊಳಕೊಂಡ ಅನಲ. ಅನಲವನೊಳಕೊಂಡ ಅನಿಲ, ಅನಿಲವನೊಳಕೊಂಡ ಆಕಾಶ, ಆಕಾಶವನೊಳಕೊಂಡ ಮನ,

ಮನವನೊಳಕೊಂಡ ಬುದ್ಧಿ, ಬುದ್ಧಿಯನೊಳಕೊಂಡ ಪ್ರಕೃತಿ, ಪ್ರಕೃತಿಯನೊಳಕೊಂಡ ಪುರುಷ. ಪ್ರಕೃತಿ ಪುರುಷ ರೂಪು ಜಗವೆಲ್ಲ; ಇವೆಲ್ಲವನೊಳಕೊಂಡ ಜ್ಞಾನ. ಆ ಜ್ಞಾನಕಾಯವೆ ಶಿವಭಕ್ತ, ಆ ಭಕ್ತ ದೇಹಿಕವೇವ ನಮ್ಮ ಉರಿ ಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ."

ಈ ನಾಲ್ಕು ವಚನಗಳಲ್ಲಿ ಮಾಹೇಶ್ವರಾಂಗನ ಸಾಧನೆ ಉತ್ತರೋತ್ತರ ಉತ್ತಮಗೊಂಡು ಬ್ರಹ್ಮಾಂಡ-ಪಿಂಡಾಂಡಗಳೆರಡನ್ನೂ ದೇವಮಯವನ್ನಾಗಿಸಿಕೊಳ್ಳುವ ಮೇಲಿನ ಮಟ್ಟಕ್ಕೆ ಮಂಗಳಮಯ ಮಟ್ಟಕ್ಕೆ ಏರಿ ನಿಲ್ಲುವುದನ್ನು ನಿರುಕಿಸುತ್ತೇವೆ. ಆತನಿಗೆ ಹೊರ ಒಳಗೂ ಶಿವಭಾವವುಂಟಾಗುತ್ತದೆ, ಮಾಹೇಶ್ವರನಲ್ಲಿಯೇ ವಾಸವಾಗಿರುವಂತಾಗುತ್ತದೆ.

"ಆಚಾರಲಿಂಗಭಕ್ತಿ ಗುರುಲಿಂಗಭಕ್ತಿ ಶಿವಲಿಂಗಭಕ್ತಿ ಜಂಗಮಲಿಂಗಭಕ್ತಿ ಪ್ರಸಾದಲಿಂಗಭಕ್ತಿ ಮಹಾಲಿಂಗಭಕ್ತಿ ಇಂತೀ ಆರು ಸಹಿತ ಆಚಾರ, ಆಚಾರ ಸಹಿತ ಗುರು, ಗುರು ಸಹಿತ ಲಿಂಗ, ಲಿಂಗ ಸಹಿತ ಜಂಗಮ, ಜಂಗಮ ಸಹಿತ ಪ್ರಸಾದ, ಪ್ರಸಾದ ಸಹಿತ ಮಹಾಲಿಂಗ ; ಇಂತೀ ಎಲ್ಲ ಸ್ಥಲಂಗಳು ತಾನಾಗ ಬಲ್ಲಡೆ ಕೂಡಲ ಚನ್ನ ಸಂಗಯ್ಯನಲ್ಲಿ ಲಿಂಗೈಕ್ಯವು."

# ಆಶ್ರಯ-ಆಶ್ರಯಿ

ಮಾಹೇಶ್ವರಾಂಗ ಆಶ್ರಯ ; ಭಕ್ತಾಂಗ ಆಶ್ರಯಿ. ಭಕ್ತಾಂಗಕ್ಕೆ ಮಾಹೇಶ್ವರಾಂಗನು ಆಶ್ರಯನಾಗಿರುತ್ತಾನೆ. ಭಕ್ತಸ್ಥಲದ ಹದಿನಯ್ದು ಉಪಾಂಗ ಸ್ಥಲಗಳು, ಮಾಹೇಶ್ವರ ಸ್ಥಲದ ಒಂಭತ್ತು ಉಪಾಂಗಸ್ಥಲಗಳು ಮತ್ತು ಉಭಯ ಸ್ಥಲಗಳ ಹದಿನೆಂಟು ಉಪ ಲಿಂಗ ಸ್ಥಲಗಳು ಸೇರಿ ನಾಲ್ವತ್ತೆರಡು ಉಪಸ್ಥಲಗಳಿಗೆ ಮಾಹೇಶ್ವರಾಂಗನು ಆಶ್ರಯನಾಗಿದ್ದಾನೆ. ಎಪ್ಪತ್ತೆರಡು ತತ್ವ ಸಕೀಲಗಳಿಗೂ ಆಶ್ರಯನಾಗಿದ್ದಾನೆ. ಪೂರ್ಣ ಯೋಗಾಂಗಕ್ಕೆ ಪೂರ್ಣ ಇಷ್ಟಲಿಂಗಕ್ಕೆ ಆಶ್ರಯನಾಗಿದ್ದಾನೆ. ಶ್ರದ್ಧೆ–ನಿಷ್ಠೆಗಳಿಗೆ ಕ್ರಿಯಾ–ಜ್ಞಾನಗಳಿಗೆ, ಚಿತ್ತ–ಬುದ್ಧಿಗಳಿಗೆ, ಘ್ರಾಣ–ಜಿಹ್ವೆಗಳಿಗೆ, ಗಂಧ ರಸಗಳಿಗೆ ಆಶ್ರಯನಾಗಿದ್ದಾನೆ. ನೆಲ-ಜಲಗಳಿಗೆ ಆಧಾರ–ಸ್ವಾಧಿಷ್ಠಾನಗಳಿಗೆ, ಪೀತ-ಶ್ವೇತಗಳಿಗೆ, ಕರ್ಮ-ಕರ್ತೃಗಳಿಗೆ, ಬ್ರಹ್ಮ-ವಿಷ್ಣುಗಳಿಗೆ, ನಕಾರ-ಮಕಾರಗಳಿಗೆ, ತಾರಕ–ದಂಡಕಾಕೃತಿಗಳಿಗೆ, ಪೂರ್ವ–ಪಶ್ಚಿಮಗಳಿಗೆ, ಋಗ್–ಯಜುರ್ವೇದಗಳಿಗೆ, ನಿವೃತ್ತಿ-ಪ್ರತಿಷ್ಠಾಕಲೆಗಳಿಗೆ, ಭ್ರಮರ–ವೇಣು ನಾದಗಳಿಗೆ, ಪರ-ಗೂಢಸಂಜ್ಞೆಗಳಿಗೆ, ಸತ್–ಚಿತ್‌ಲಕ್ಷಣಗಳಿಗೆ, ಆಶ್ರಯವಾಗಿದೆ ಮಾಹೇಶ್ವರಸ್ಥಲ. ಸ್ಥಲವನ್ನಾಶ್ರಯಿಸಿ ಅಂಗ, ಅಂಗವನ್ನಾಶ್ರಯಿಸಿ ಲಿಂಗ. ಒಮ್ಮೆ ಇದ್ದರೆ ಲಿಂಗವನ್ನಾಶ್ರಯಿಸಿ ಅಂಗ, ಅಂಗವನ್ನಾಶ್ರಯಿಸಿ ಸ್ಥಲ ವೊತ್ತೊಮ್ಮೆ ಇರುತ್ತವೆ. ಹೀಗೆ ಇವು ಪರಸ್ಪರ ಆಶ್ರಯ ಆಶ್ರಯ ಭಾವವುಳ್ಳವಾಗಿವೆ.

ಮರೆತ ಮನ ಅರಿತು ಲಿಂಗಧ್ಯಾನದಲ್ಲಿ ನಿರತವಾದರೆ ಆಗ ಮನ ಲಿಂಗಕ್ಕೆ ಆಶ್ರಯವಾದಂತೆ ! ಅದೇ ಲಿಂಗ ತನ್ನ ನೆನೆವ ಮನವನ್ನು ಕರುಣಿಸಿ ಘನವನ್ನಾಗಿಸಿದಾಗ ಮನಕ್ಕೆ ಲಿಂಗ ಆಶ್ರಯವಾದಂತೆ ! ಇದು ಅಂಗಲಿಂಗಗಳಿಗಿರುವ ಪರಸ್ಪರ ಆಶ್ರಯ ಆಶ್ರಯಿ ಭಾವ.

# ಉತ್ತರ ಭಾಗ

## (ಮಾಹೇಶ್ವರ ಸಂಪುಟ)

## ಲಿಂಗ ಸ್ಥಲಗಳು

# ಮಾಹೇಶ್ವರ ಸ್ಥಲದ ಲಿಂಗಸ್ಥಲಗಳು

## (ನಿರವಯ ಸ್ಥಲ)

## ತತ್ತ್ವ ವಿಚಾರ :

ತತ್ ಅಂದರೆ ಅದು. ತತ್‌ತ್ವ ಅಂದರೆ ಅದರತನ. ತತ್ ಅಂದರೆ ಪರಶಿವ, ತತ್‌ತ್ವ ಅಂದರೆ ಪರಶಿವ ಸ್ವರೂಪ. ಅವಿಚ್ಛಿನ್ನ ಸಚ್ಚಿದಾನಂದ ಸ್ವರೂಪ. ಷಟ್‌ಸ್ಥಲಸಿದ್ಧಾಂತವು ಮೂವತ್ತಾರು ತತ್ತ್ವಗಳನ್ನು ಒಪ್ಪಿಕೊಂಡಿದೆ. ಇವುಗಳಲ್ಲಿ ಮೊದಲಿನದೇ ಶಿವತತ್ತ್ವ. ಇದರಲ್ಲಿ ಉಳಿದ ಮೂವತ್ತೈದು ತತ್ತ್ವಗಳು ಅಡಕವಾಗಿರುತ್ತವೆ. ಇವೆಲ್ಲವೂ ಸತ್ಯ, ಶಿವಸ್ವರೂಪ. ಇವುಗಳಲ್ಲಿ ಕೆಲವು ಪ್ರತ್ಯಕ್ಷ ಪ್ರಮಾಣ ಗೋಚರವಾಗಿವೆ. ಬೇರೆ ಕೆಲವು ಆಗಮ ಪ್ರಮಾಣಕ್ಕೆ ಇನ್ನು ಕೆಲವು ಅನುಮಾನ ಪ್ರಮಾಣಕ್ಕೆ ಗೋಚರವಾಗುತ್ತವೆ. ಇವು ಬ್ರಹ್ಮಾಂಡದಲ್ಲಿ ವಿಶೇಷವಾಗಿರುತ್ತವೆ; ಪಿಂಡಾಂಡದಲ್ಲಿ ಸೂಕ್ಷ್ಮವಾಗಿರುತ್ತವೆ.

"ಆಪ್ರಳಯಂ ಯತ್ತಿಷ್ಠತಿ ಸರ್ವೇಷಾಂ ಭೋಗದಾಯಿ ಭೂತಾನಾಂ । ತತ್ತ್ವಮಿತಿ ಪ್ರೋಕ್ತಂ ನ ಶರೀರ ಘಟಾದಿ ತತ್ತ್ವಮತಃ॥" ಪ್ರಪಂಚದ ಆದಿಯಿಂದ ಪ್ರಳಯ ಪರ್ಯಂತರವಿದ್ದು ಸರ್ವಪ್ರಾಣಿಗಳಿಗೆ ಭೋಗವನ್ನುಂಟುಮಾಡುವುದೇ ತತ್ತ್ವ. ಉಳಿದ ಪರಿಚ್ಛಿನ್ನ ಶರೀರ ಘಟ ಪಟಾದಿಗಳು ಸೃಷ್ಟಿಯ ತುದಿಯವರೆವಿಗೂ ಇರುವುದಿಲ್ಲವಾಗಿ ಇವು ತತ್ತ್ವಗಳಲ್ಲ. ತತ್ತ್ವಗಳು ಪ್ರಳಯ ಪರ್ಯಂತರ ವ್ಯಕ್ತವಾಗಿದ್ದು ಬಳಿಕ ಅವ್ಯಕ್ತವಾಗಿ ಆ ಪರವಸ್ತುವಿನಲ್ಲಿರುತ್ತವೆ. ಶರೀರ ಘಟಾದಿಗಳು ಪೂರ್ಣ ತತ್ತ್ವಗಳಲ್ಲದಿದ್ದರೂ ತತ್ತ್ವಾಂಶಗಳಾಗಿವೆ. ಏಕೆಂದರೆ ತತ್ತ್ವಗಳಿಗೆ ಹೊರತಾದ ದ್ರವ್ಯಗಳೇ ಜಗತ್ತಿನಲ್ಲಿರುವುದಿಲ್ಲ. ಅವಿಕೃತ ಪರಿಣಾಮ ಕಾರ್ಯಗಳಾದ ಶರೀರಾದಿಗಳೂ ಶಾಶ್ವತಗಳೇ ಆಗಿವೆ

ಮೂವತ್ತಾರು ತತ್ತ್ವಗಳನ್ನು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ಇವುಗಳಲ್ಲಿ ಮೊದಲಿನ ಅಯ್ದಾದ ಶಿವ ಶಕ್ತಿ ಸದಾಶಿವ ಈಶ್ವರ ಶುದ್ಧವಿದ್ಯೆ ಇವು ಶುದ್ಧಾಧ್ವಗಳೆನಿಸಿವೆ. ಕಾಲ ಕಲಾ ವಿದ್ಯಾ ನಿಯತಿ ರಾಗ ಪ್ರಕೃತಿ ಪುರುಷ ಇವೇಳು ಮಿಶ್ರಾಧ್ವ ಅಥವಾ ಶುದ್ಧಾಶುದ್ಧಾಧ್ವಗಳೆಂದು ಹೇಳಿಸಿಕೊಂಡಿವೆ. ಇನ್ನುಳಿದ ಪ್ರಕೃತಿ ಬುದ್ಧಿ ಅಹಂಕಾರ ಮನ ಪಂಚಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ ಪಂಚತನ್ಮಾತ್ರ ಪಂಚಭೂತ ಈ ಇಪ್ಪತ್ತುನಾಲ್ಕು ತತ್ತ್ವಗಳು ಅಶುದ್ಧಾಧ್ವಗಳೆನಿಸಿವೆ.

ಇನ್ನೊಂದು ಬಗೆಯಲ್ಲಿ ಈ ಮೂವತ್ತಾರನ್ನು ಮೂರು ಬಗೆಯಾಗಿ ವಿಂಗಡಿಸುವುದುಂಟು. ಇವನ್ನೇ ಆತ್ಮತತ್ತ್ವ, ವಿದ್ಯಾತತ್ತ್ವ, ಶಿವತತ್ತ್ವ ಎಂದು ಹೇಳುತ್ತಾರೆ. ಇವುಗಳಲ್ಲಿ ಆತ್ಮತತ್ತ್ವವು: ಪಂಚಭೂತ, ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ, ಪಂಚಪ್ರಾಣ, ಅಂತಃಕರಣ ಚತುಷ್ಟಯ, ಮತ್ತು ಜೀವ ಇವು ಇಪ್ಪತ್ತೈದು ಆತ್ಮತತ್ತ್ವ, ಕಲೆಯೆಂದು ಪರ್ಯಾಯನಾಮವುಳ್ಳ ಪಂಚಶಕ್ತಿ, ಸಾದಾಖ್ಯ ಪರ್ಯಾಯನಾಮವುಳ್ಳ ಪಂಚಲಿಂಗ–ಈ ಹತ್ತು ವಿದ್ಯಾತತ್ತ್ವ. (ಇವುಗಳಲ್ಲಿ ಚಿಚ್ಛಕ್ತಿ–ಮಹಾಲಿಂಗಗಳೆರಡು ಸೇರುವುದಿಲ್ಲ.) ಈ ಮೂವತ್ತೈದಕ್ಕೆ ಮಿಗಿಲಾದ ಒಂದೇ ಒಂದಾದ ಆಶ್ರಯವಾದ ತತ್ತ್ವವೆಂದರೆ ಶಿವತತ್ತ್ವ. ಆ ಶಿವತತ್ತ್ವದ ನಿರೀಕ್ಷಣನಾದದಿಂದ ಆತ್ಮತತ್ತ್ವ, ಪ್ರಕಾಶನ ಕಳೆಯಿಂದ ವಿದ್ಯಾತತ್ತ್ವವುಂಟಾಗುತ್ತವೆ. ಈ ಮೂರನ್ನು ಮತ್ತೆ ಎರಡು ಗುಂಪು ಮಾಡುತ್ತಾರೆ–ಅಂಗತತ್ತ್ವ, ಲಿಂಗತತ್ತ್ವ ಎಂದು. ಜೀವನಿಂದ ಕೂಡಿದ ಆತ್ಮತತ್ತ್ವವೇ ಅಂಗ ತತ್ತ್ವ; ಹತ್ತು ವಿದ್ಯಾತತ್ತ್ವ–ಒಂದು ಶಿವತತ್ತ್ವ ಕೂಡಿ ಹನ್ನೊಂದು ಲಿಂಗ ತತ್ತ್ವ. ಅಂಗ ಅಥವಾ ಆತ್ಮತತ್ತ್ವ ಇಪ್ಪತ್ತೈದು ಕುಳಗಳು. ಲಿಂಗ ಅಥವಾ ವಿದ್ಯಾ ಮತ್ತು ಶಿವತತ್ತ್ವ ಹನ್ನೊಂದು ಸ್ಥಲಗಳು. ಇವೆರಡಕ್ಕೂ ಅಂದರೆ ೩೬ ತತ್ತ್ವಗಳಿಗೆ ಕುಳಸ್ಥಳಗಳೆಂದು ನಿವೃತ್ತಿ ಮುಖದಲ್ಲಿ ಹೇಳುವುದುಂಟು. ಪ್ರವೃತ್ತಿಯಲ್ಲಿ ಸ್ಥಳಕುಳಗಳೆನ್ನುತ್ತಾರೆ. ಒಟ್ಟಿನಲ್ಲಿ ಪರಶಿವ–ನಿಃಸ್ಥಲ, ಲಿಂಗ–ಸ್ಥಲ, ಅಂಗ–ಕುಳ ಎಂದೆನಿಸಿಕೊಳ್ಳುತ್ತವೆ. ಇವನ್ನೇ ಕ್ರಮವಾಗಿ ಶುದ್ಧ, ಶುದ್ಧಾಶುದ್ಧ, ಅಶುದ್ಧ ಎಂದು ಹೇಳುವರು. ಈ ಮೂರು ಗುಂಪನ್ನು ಪರಿವಿಡಿದು ಚಿತ್–ಚಿದಚಿತ್–ಅಚಿತ್ ತತ್ತ್ವಗಳೆಂದೂ ಹೇಳುತ್ತಾರೆ.

ಶಿವತತ್ತ್ವ ಶಕ್ತಿವಿಶಿಷ್ಟವಾಗಿ, ಸದಾಶಿವತತ್ತ್ವ ಶುದ್ಧವಿದ್ಯಾವಿಶಿಷ್ಟವಾಗಿ, ಈಶ್ವರತತ್ತ್ವ ಮಾಯಾ ವಿಶಿಷ್ಟವಾಗಿರುತ್ತವೆ. ಮಾಯಾ ವಿಶಿಷ್ಟನಾದ ಈಶ್ವರನು 'ಮಹೇಶ್ವರ'ನೆಂದೆನಿಸುತ್ತಾನೆ. 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಃ' ಎಂಬ ಶ್ವೇತಾಶ್ವತರಶ್ರುತಿ ಸಾಕ್ಷಿಯಾಗಿದೆ. ಮುಖ್ಯವಾದ ಈ ಮೂರು ತತ್ತ್ವಗಳನ್ನು ವಾತುಲ ತಂತ್ರವು ಒಪ್ಪಿಕೊಂಡಿರುವುದನ್ನು ಓದಿ ;

"ತತ್ತ್ವಂತು ತ್ರಿವಿಧಂ ಜ್ಞೇಯಂ ತಸ್ಯ ಭೇದಂ ಶೃಣುಷ್ವ ಹಿ।
ಶಿವಃ ಸದಾಶಿವಃ ಚೈವ ಮಹೇಶಃ ತ್ರಿವಿಧಃ ಸ್ಮೃತಂ ॥
ಶಿವತತ್ತ್ವಂ ಮಹಾಸೇನ ನಿಷ್ಕಲಂ ಚೇತಿ ಕೀರ್ತಿತಂ ।
ಸಕಲಂ ನಿಷ್ಕಲಂ ಚೈವ ಸದಾಶಿವಮಿತಿ ಸ್ಮೃತಂ ॥
ಮಹೇಶಂ ಸಕಲಂ ವಿದ್ಯಾತ್ತ್ರಿವಿಧಂ ತದ್ಭವೇದ್ಯಥಾ।"

— ವಾತುಲಾಗಮ, ಪಟಲ-೧.

ಈ ಮೂರು ತತ್ತ್ವಗಳು ಕ್ರಮವಾಗಿ ಸಕಲ, ಸಕಲ ನಿಷ್ಕಲ, ನಿಷ್ಕಲ ಎಂದು ನಿರೂಪಿತವಾಗಿವೆ. ಇವುಗಳಲ್ಲಿ ನಿಷ್ಕಲವಾದ ಶಿವರೂಪವು ತತ್ತ್ವವೆಂದು ಸಕಲವೆನಿಸಿದ ಮಹೇಶ್ವರ ರೂಪವು ಮೂರ್ತಿಯೆಂದು ಹೇಳಿಸಿಕೊಳ್ಳುತ್ತವೆ. 'ಶಿವಶ್ಚ ತತ್ತ್ವಮಿತ್ಯುಕ್ತಂ ಮೂರ್ತಿಶ್ಚೈವ ಮಹೇಶ್ವರಃ !' ಎಂದಿದೆ ವಾತುಲ ತಂತ್ರ. ಸಕಲ-ನಿಷ್ಕಲ ಸಂಯುಕ್ತಸ್ವರೂಪವಾದ ಸದಾಶಿವವನ್ನು ಪ್ರಭಾವ'ವೆಂದು 'ಸಕಲಂ ನಿಷ್ಕಲಂ ಚೈವ ಪ್ರಭಾವಮಿತಿ ಕೀರ್ತಿತಂ !' ಆದೇ ವಾತುಲವು ವಚಿಸಿದೆ.

ಪಿಂಡಾಂಡದಲ್ಲಿರುವ ದೇಹಿಯೇ ನಿಷ್ಕಲತತ್ತ್ವ. ದೇಹವೇ ಸಕಲ ತತ್ತ್ವ! ಇವೆರಡರ ಸಂಬಂಧವೆ ಸಕಲ ನಿಷ್ಕಲ ತತ್ತ್ವ. ಇವುಗಳಲ್ಲಿ ಸಕಲ ತತ್ತ್ವವು ಧಾರಣಕ್ಕೆ, ಸಕಲ ನಿಷ್ಕಲ ತತ್ತ್ವವು ಧ್ಯಾನಕ್ಕೆ, ನಿಷ್ಕಲ ತತ್ವವು ಸಮಾಧಿರೂಪ ಸಮರಸಕ್ಕೆ ಕಾರಣಗಳಾಗಿವೆ.

ಪರಾದಿಶಕ್ತಿ ಸಂಬಂಧದಿಂದ ಶಿವಾದಿ ಪಂಚ ಸಾದಾಖ್ಯಗಳು ವಿಕಾಸವಾಗುತ್ತವೆ, ಶಾಂತ್ಯತೀತವೆ ಪರಾಶಕ್ತಿ. ಪರಾಶಕ್ತಿಗೆ ಶಾಂತ್ಯತೀತವೆಂಬುದು ಪರ್ಯಾಯ ನಾಮ. ಅಂತಹ ಆ ಪರಾಶಕ್ತಿಯ ದಶಾಂಶದಿಂದ ಶಿವ ಸಾದಾಖ್ಯವುಂಟಾಗುತ್ತದೆ.

ಇದು ಶುದ್ಧವಾಗಿರುವುದರಿಂದ ಶಿವವೆಂದು ಹೇಳಿಸಿಕೊಳ್ಳುತ್ತದೆ. ಇದು ಸೂಕ್ಷ್ಮವಾಗಿದ್ದು ಜ್ಯೋತಿರೂಪಾಗಿರುತ್ತದೆ. ಸರ್ವತೋಮುಖವಾಗಿರುತ್ತದೆ, ಈ ಶಿವ ತತ್ತ್ವವು ಮಿಕ್ಕ ಎಲ್ಲ ತತ್ತ್ವಗಳಿಗೆ ಆಲಯವಾಗಿರುತ್ತದೆ.

ಶಾಂತಿಕಲೆಯೇ ಆದಿಶಕ್ತಿ; ಆದಿಶಕ್ತಿಗೆ ಶಾಂತಿಯೆಂಬುದು ಪರ್ಯಾಯ ನಾಮ. ಅಂತಹ ಆ ಆದಿಶಕ್ತಿಯ ದಶಾಂಶದಿಂದ ಅಮೂರ್ತಸಾದಾಖ್ಯವು ಆವಿರ್ಭವಿಸುತ್ತದೆ. ಆದಿಶಕ್ತಿಯು ಮೂರ್ತರೂಪವಲ್ಲವಾದ ಕಾರಣ ಅದರಿಂದಾದ ಸಾದಾಖ್ಯಕ್ಕೆ ಅಮೂರ್ತ ಸಾದಾಖ್ಯವೆಂದು ಹೆಸರು. ಅಮೂರ್ತವಾಗಿರುವ ಕಾರಣ ಅದು ಕಲಾಹೀನವಾಗಿರುತ್ತದೆ. ಅದರ ರೂಪ ಲಿಂಗದಂತಿರುತ್ತದೆ. ಕೋಟಿ ಸೂರ್ಯ ಪ್ರಕಾಶವಾಗಿ ಒಂದು ಜ್ಯೋತಿಸ್ತಂಭದಂತಿರುತ್ತದೆ, ಈ ದಿವ್ಯ ಲಿಂಗವನ್ನೇ ಮೂಲಸ್ತಂಭವೆಂದು ಹೇಳುತ್ತಾರೆ. ಇದರಿಂದ ಈ ದೃಶ್ಯವೆಲ್ಲವೂ ಉದಯಿಸಿ ಇದರಲ್ಲಿಯೇ ಲಯಿಸುತ್ತದೆ. ಸೃಷ್ಟಿ ಸಂಹಾರಗಳನ್ನು ಸೂಚಿಸುವುದೇ ಲಿಂಗನಾಮದ ಸಾರ್ಥಕ್ಯ.

ವಿದ್ಯಾ ಕಲೆಯೇ ಇಚ್ಛಾಶಕ್ತಿ. ಇಚ್ಛಾಶಕ್ತಿಗೆ ವಿದ್ಯಾಕಲೆಯೆಂಬುದು ಮತ್ತೊಂದು ಹೆಸರು. ಈ ಇಚ್ಛಾಶಕ್ತಿಯ ಹತ್ತನೆಯ ಒಂದಂಶದಿಂದ ಮೂರ್ತಸಾದಾಖ್ಯವು ಮೈದಾಳುತ್ತದೆ.

ಇಚ್ಛಾಶಕ್ತಿಯ ಗುಣದಿಂದ ಇದು ಮೂರ್ತತ್ವವನ್ನು ತಳೆಯುತ್ತದೆ. ಮೂರ್ತತ್ವದಿಂದ ಕಲಾಯುಕ್ತವಾಗಿ ರೂಪವನ್ನು ಧರಿಸುತ್ತದೆ. ಇದು ಜ್ವಾಲಾಗ್ನಿ ಸದೃಶವಾಗಿರುತ್ತದೆ. ದಿವ್ಯಲಿಂಗಾಕೃತಿಯುಳ್ಳದಾಗಿರುತ್ತದೆ. ಇದರ ಊರ್ಧ್ವದಲ್ಲಿ ಏಕಮುಖವುಳ್ಳದಾಗಿರುತ್ತದೆ. ಇದಕ್ಕೆ ಮೂರು ಕಣ್ಣು. ಚಲುಮೊಗ; ಸರ್ವಾವಯವ ಸಂಯುತ. ಕೈಯಲ್ಲಿ ಕಪ್ಪು ಕೊಡಲಿ; ವರಗಳನ್ನು ಕೊಡುವ ಅಭಯಹಸ್ತ, ಈ ಎಲ್ಲ ಲಕ್ಷಣಗಳಿಂದ ಕೂಡಿ 'ಲಿಂಗಮೂರ್ತ' ಎಂದು ಹೇಳಿಸಿಕೊಳ್ಳುತ್ತದೆ.

ಇನ್ನು ಪ್ರತಿಷ್ಠಾ ಕಲೆಯೇ ಜ್ಞಾನಶಕ್ತಿ; ಜ್ಞಾನ ಶಕ್ತಿಗೆ ಪ್ರತಿಷ್ಠಾ ಕಲೆ ಎಂಬುದು ನಾಮಾಂತರ. ಈ ಜ್ಞಾನಶಕ್ತಿಯ ಹತ್ತನೆಯ ಒಂದಂಶದಿಂದ ಕರ್ತೃಸಾದಾಖ್ಯವುಂಟಾಗುತ್ತದೆ. ಜ್ಞಾನಕ್ಕೆ ಕರ್ತೃತ್ವ ಸ್ವಭಾವವಾಗಿರುವುದರಿಂದ ಕರ್ತೃಸಾದಾಖ್ಯ ಎಂಬ ಸಾರ್ಥಕ ಹೆಸರು. ಜ್ಞಾನವು ಶುದ್ಧರೂಪ. ಅದರಿಂದ ಈ ಸಾದಾಖ್ಯಕ್ಕೆ ಸ್ಫಟಿಕಪ್ರಕಾಶ. ಇದೂ ಸಹ ದಿವ್ಯಲಿಂಗವೆಂದೆನಿಸುತ್ತದೆ. ಇದು

ಮಹಾಸ್ಥೂಲವೂ ಮಹಾದೀರ್ಘವೂ ಆಗಿರುತ್ತದೆ. ಇದರ ಮಧ್ಯದಲ್ಲಿ ಸರ್ವ ಕಾರಣನಾದ ಮಹೇಶ್ವರ ಮೂರ್ತಿ ಇರುತ್ತಾನೆ. ಇವನಿಗೆ ನಾಲ್ಕುತಲೆ, ನಾಲ್ಕು ಮೊಗ, ಹನ್ನೆರಡು ಕಣ್ಣು ಇರುತ್ತವೆ. ನಾಲ್ಕು ಬಣ್ಣ, ಎಂಟು ಕಿವಿ, ಎಂಟು ಕೈ, ಎರಡು ಕಾಲು, ಇದ್ದು ಸರ್ವಾಂಗ ಸುಂದರನಾಗಿರುತ್ತಾನೆ. ಶೂಲ, ಪರಶು, ಖಡ್ಗ, ಅಭಯ ಇವು ಬಲಹಸ್ತಗಳಲ್ಲಿರುತ್ತವೆ. ಪಾಶ, ನಾಗ, ಗಂಟೆ, ವರದ ಇವು ಎಡದ ಕೈಗಳಲ್ಲಿರುತ್ತವೆ, ಈತನು ಎಲ್ಲ ಕರಣಗಳಿಂದ ಎಲ್ಲ ಆಭರಣ ಗಳಿಂದ ಕೂಡಿ ಕಂಗೊಳಿಸುತ್ತಾನೆ.

ನಿವೃತ್ತಿ ಕಲೆಯೇ ಕ್ರಿಯಾಶಕ್ತಿ. ಕ್ರಿಯಾಶಕ್ತಿಗೆ ನಿವೃತ್ತಿ ಕಲೆಯೆಂಬುದು ಇನ್ನೊಂದು ಹೆಸರು. ಈ ಕ್ರಿಯಾಶಕ್ತಿಯ ಹತ್ತನೆಯ ಒಂದಂಶದಿಂದ ಕರ್ಮ ಸಾದಾಖ್ಯ ಸಮನಿಸುತ್ತದೆ. ಕ್ರಿಯೆಯಿಂದ ಇದು ಜ್ಞೇಯವಾಗುವುದರಿಂದ ಕರ್ಮ ಸಾದಾಖ್ಯ ಎಂದೆನಿಸುತ್ತದೆ. ಲಿಂಗದ ಪೀಠದಂತಿದು ಇರುತ್ತದೆ. ನಾದವೆ ಲಿಂಗ, ಬಿಂದುವೇ ಪೀಠ. ನಾದ–ಬಿಂದು ಸಂಬಂಧವುಳ್ಳುದೇ ಲಿಂಗರೂಪ; ಅಥವಾ ಲಿಂಗಕಲೆ ! ಲಿಂಗವೇ ಶಿವ, ಪೀಠವೇ ಶಕ್ತಿ. ಇದು ಜಗತ್ ಸೃಷ್ಟಿಗೆ ಕಾರಣ. ಸೃಷ್ಟ್ಯರ್ಥ ಕಾರಣವೂ ಅಹುದು. ಇವೆಲ್ಲವುಗಳ ಸಂಯೋಗ ಭಾವವೇ ಕರ್ಮರೂಪ, ಬಿಂದುವಿನ ಮಧ್ಯದಲ್ಲಿ ನಾದ, ನಾದಮಧ್ಯದಲ್ಲಿ ಮೂರ್ತಿ, ಮೂರ್ತಿಮಧ್ಯದಲ್ಲಿ ತತ್ತ್ವ, ತತ್ತ್ವಮಧ್ಯದಲ್ಲಿ ಶಿವನಿರುತ್ತಾನೆ. ಈ ಬಗೆಯಾದ ಲಿಂಗವು ಶಿವಮಯ. ಇದು ಸರ್ವತತ್ತ್ವಾಧಾರ. ಸ್ಥಾವರ ಜಂಗಮಾತ್ಮಕ ವಾದ ಈ ಜಗತ್ತೆಲ್ಲವು ಲಿಂಗದಲ್ಲಿ ಜನಿಸುತ್ತದೆ. ಇದರಿಂದಾಗಿ ಲಿಂಗವು ವಿಶೇಷವಾಗಿ ಕರ್ಮರೂಪವೆಂಬುದಾಗಿ ಉದಾಹೃತವಾಗಿದೆ, ಕರ್ಮೋದಯವೇ ಸೃಷ್ಟಿ. ಕರ್ಮಲಯವೇ ಸಂಹೃತಿ, ಸೃಷ್ಟಿ ಸ್ಥಿತಿ ಲಯ ರೂಪಾದುದೇ ಕರ್ಮ ಸಾದಾಖ್ಯ ಸ್ವರೂಪ. ಈ ಕರ್ಮ ಸಾದಾಖ್ಯವು ಪಂಚಸಾದಾಖ್ಯಗಳಿಂದ ಕೂಡಿರುತ್ತದೆ.

ಶಿವಸಾದಾಖ್ಯವು ವಿಶೇಷವಾಗಿ ಶಿವರೂಪದಿಂದ ಕೂಡಿರುತ್ತದೆ. ಅಮೂರ್ತ ಸಾದಾಖ್ಯವು ಶಿವಸಾದಾಖ್ಯಾಶ್ರಿತವಾಗಿರುತ್ತದೆ. ಮೂರ್ತ ಸಾದಾಖ್ಯವು ಅಮೂರ್ತ ಶಿವ ಸಾದಾಖ್ಯಾಶ್ರಿತವಾಗಿರುತ್ತದೆ. ಕರ್ತೃಸಾದಾ ಖ್ಯವು ಮೂರ್ತಾಮೂರ್ತ ಶಿವ ಸಾದಾಖ್ಯತ್ರಯಾಶ್ರಿತವಾಗಿರುತ್ತದೆ. ಕರ್ಮ

ಸಾದಾಖ್ಯವು ಕರ್ತೃ ಮೂರ್ತಾ ಮೂರ್ತ ಶಿವ ಸಾದಾಖ್ಯ ಚತುಷ್ಟಯಾಶ್ರಿತವಾಗಿರುತ್ತದೆ. ಇದರಿಂದಾಗಿ ಇದು ಪಂಚತತ್ತ್ವಾಶ್ರಿತವಾಗಿರುತ್ತದೆ, ಪಂಚತತ್ವಾತ್ಮಕವೂ ಸರ್ವಾಧಾರವೂ ಆಗಿರುತ್ತದೆ. ಆದಕಾರಣ ಇದು ಪಿಂಡರೂಪಾಗಿದೆ. ಇದನ್ನೇ ಪಿಂಡಮೂರ್ತಿಯೆಂದು ಪಿಂಡಕಾಯವೆಂದು ಹೇಳುತ್ತಾರೆ. ಇದು ಶಿವ ಸೃಷ್ಟಿ, ಇದು ಶಿವಾಗಮ ದೃಷ್ಟಿ. ಇದು ಶಿವಸತ್ವ, ಇದು ಶಿವತತ್ತ್ವ; ಶಿವ ಸಿದ್ಧಾಂತ.

ಒಂದಾದ ಆ ಪರತತ್ತ್ವವು ಶಿವತತ್ತ್ವ, ಸದಾಶಿವತತ್ತ್ವ, ಮಹೇಶ್ವರ ತತ್ವ ಎಂದು ಮೂರಾದುದನ್ನು ಈ ಮೂರು ಮರಳಿ ಶಿವ ಸಾದಾಖ್ಯ ಅಮೂರ್ತ ಸಾದಾಖ್ಯ, ಮೂರ್ತ ಸಾದಾಖ್ಯ, ಕರ್ತೃ ಸಾದಾಖ್ಯ, ಕರ್ಮ ಸಾದಾಖ್ಯ ಎಂಬುದಾಗಿ ಪಂಚತತ್ವಗಳಾಗಿರುವುದನ್ನು ವಿವರಿಸಿಯಾಯಿತು.

ಪಂಚತತ್ತ್ವಾಶ್ರಯವಾದುದು ಕರ್ಮಸಾದಾಖ್ಯ, ಈ ಕ್ರಿಯಾ ಸಾದಾಖ್ಯವೇ ಪಿಂಡವೆನಿಸುವುದು. ಈ ಪಿಂಡವೇ ಶಿವಮಯ ಸೃಷ್ಟಿ; ಸರ್ವತತ್ತ್ವಾಶ್ರಯಿ. ಪಂಚಮೂರ್ತಿಮಯಿ. ಮತ್ತು ಪಂಚತತ್ವಾತ್ಮಕ ಮಯಿ.

"ತಸ್ಮಾದ್ವೈ ಕರ್ಮ ಸಾದಾಖ್ಯಂ ಪಿಂಡರೂಪಮುದಾಹೃತಂ !
ಏತಚ್ಛಿವಮಯಂ ಪಿಂಡಂ ಸರ್ವತತ್ವಾಲಯಂ ವಿದುಃ||
ಪಂಚಮೂರ್ತಿಮಯಂ ದೇವಂ ಪಂಚತತ್ತ್ವಾತ್ಮಕಂ ಭವೇತ್।
ಮೂರ್ತಿನಾಂ ದೇಹಭೇದೈಸ್ತು ಗುಣೈಃ ಪಂಚಾನನಂ ವಿದುಃ॥
ತದ್ದೇಹಸ್ತು ಮಹೇಶಾದಿ ಸರ್ವತತ್ವಾದಿ ಸಂಭವಃ।
ತಸ್ಯ ವಕ್ತ್ರೇಷು ಸಂಭೂತಾಃ ಸಿದ್ಧಾಂತ ಶೈವ ತಾಂತ್ರಿಕಾಃ||
ತತ್ವಾರ್ಥೇತು ಮಹೇಶಾದಿ ಸರ್ವತತ್ವ ಸಮುದ್ಭವಃ!
ಸರ್ವಜ್ಞಾನಮಯಂ ದೇಮ ಸರ್ವಕಾರಣ ಕಾರಣಂ||"

– ವಾತುಲ ತಂತ್ರ,

ನಿರವಯ ಪರಶಿವ ಪಿಂಡ, ಸಾವಯವ ಶಿವರೂಪ ಮೂರ್ತಿ ಪಿಂಡ; ಮೃತ್ಪಿಂಡ, ಕಾಯಪಿಂಡ ಮುಂತಾಗಿ ಪಿಂಡಮಯವಾಗಿದೆ ಸಕಲವು. ದೇಹ ಭೇದದಿಂದ ಮೂರ್ತಿ ಭೇದಗಳು ; ಗುಣ ಭೇದಗಳು. ದೇಹವಾದರೂ ದೂಷ್ಯವಲ್ಲ, ಮಹೇಶ್ವರಾದಿ ಸರ್ವತತ್ವೋತ್ಪತ್ತಿಗೆ ಸಾಧನ.

ಮಹೇಶ್ವರನ ಮುಖದಿಂದ ಸರ್ವ ಸಿದ್ಧಾಂತಗಳಾದ ಶೈವತಂತ್ರಗಳು ಸಂಜನಿಸಿದವು ಇಲ್ಲಿ ಮಹೇಶ್ವರಾಂಗನು ಮುಖ್ಯವಾಗಿ ಉಪಾಶಿಸುವ ಅಥವಾ ಮಾಹೇಶ್ವರಾಂಗ ನಿಗೆ ಮೂಲ ಚೈತನ್ಯವಾದ ಮಹೇಶ್ವರನಿಗಿರುವ ಪ್ರಾಶಸ್ತ್ಯವನ್ನು ಪರಿಗಣಿಸ ಬೇಕು.

"ಏವಂ ಲಿಂಗಂತು ಕರ್ಮೇಶಂ ಧ್ಯಾಯೇತ್ಸಕಲ ನಿಷ್ಕಲಂ।
ದೇಹಸ್ಥಂ ಸಕಲಂ ಜ್ಞೇಯಂ ನಿಷ್ಕಲಂ ದೇಹವರ್ಜಿತಂ॥
ದೇಹಂ ತ್ವೇತತ್ಕಲೋಪೇತಂ ಧಾತುಪಿಂಡ ಮಿತಿಸ್ಮೃತಂ।
ಷಟ್ಕಲಾಶ್ಚೈವ ಶಾಸ್ತ್ರಜ್ಞಃ ಷಡಂಗೇಷು ಪ್ರಕಲ್ಪಯೇತ್॥
ಸರ್ವಾಂಗೈರಪಿ ಸಂಪೂರ್ಣಂ ಸರ್ವಾಯವ ಸುಂದರಂ।
ಏವಂ ತತ್ಸ್ಮೃತಿ ಮಾತ್ರೇಣ ಮೂರ್ತಿಸ್ಸಕಲರೂಪಧೃತ್॥
ಧ್ಯಾನ ಲಕ್ಷಣ ಮಿತ್ಯುಕ್ತ ಮಂಗಭಾವಮಥೋಚ್ಯತೇ॥
ಅಂಗಭೇದೋ ಮಹಾಸೇನ ಚತುರ್ಭಿರ್ಭೇದ ಉಚ್ಯತೇ॥
ಅಂಗ ಪ್ರತ್ಯಂಗ ಸಾಂಗಂ ಚೋಪಾಂಗಂ ಚತ್ವಾರಿಚಕ್ರಮಾತ್।

ದೇಹ ಗತಜ್ಞೇಯವಾದ ನಿಷ್ಕಲ ತತ್ತ್ವವೇ ಲಿಂಗ. ಸಕಲ ತತ್ತ್ವವೇ ಅಂಗ. ಅಂಗವು ಷಟ್ಕಲೆಗಳಿಂದ ಕೂಡಿದೆ. ಧಾತು ಪಿಂಡವೆನಿಸಿದೆ. ಷಡಂಗಗಳಲ್ಲಿ ಷಟ್ಕಲೆಗಳಿವೆ ; ಷಡ್ಲಿಂಗಗಳಿವೆ. ಅಂಗ, ಪ್ರತ್ಯಂಗ, ಸಾಂಗ, ಉಪಾಂಗ ಎಂದು ಅಂಗ ನಾಲ್ಕು ಬಗೆ. ತಲೆ ಮುಖ ಹೃದಯಗಳು ಅಂಗ. ಎದೆ, ಕೊರಳು, ಮೊಲೆ, ತೋಳು, ಹೊಕ್ಕುಳ, ಗುಹ್ಯ, ಹೊಟ್ಟೆ, ಕಣ್ಣು, ಮೂಗು, ಮೊಗ, ಕಿವಿ. ಕೈ, ಕಾಲು, ಬೆರಳು, ತೊಡೆ, ಮೊಣಕೈ, ಮೊಣಕಾಲು-ಪ್ರತ್ಯಂಗ, ಮೂರ್ತಿಗಳ ಆ ಆ ಗುಣರೂಪಗಳು ಸಾಂಗವೆನಿಸುತ್ತವೆ, ಇಲ್ಲಿ ಗುಣವೆಂದರೆ ಗುರುತು ಅಥವಾ ಚಿಹ್ನೆ. ಇವು ಹತ್ತು ಬಗೆಯಾಗಿವೆ ತ್ರಿಶೂಲ, ಪರಶು, ಖಡ್ಗ, ವಜ್ರ ಅಭಯ, ನಾಗ, ಪಾಶ, ಅಂಕುಶ, ವರ್ಣ (ನಾದ) ಅಗ್ನಿ—ಇವು ಹತ್ತು ಚಿಹ್ನೆಗಳು ಇವು ಸಾಂಗ. ಇನ್ನು ವಸ್ತ್ರ, ಉಪವೀತ, ಮಾಲ್ಯ, ಗಂಧ, ಆಭರಣ, ಆವರಣ ಇವು ಉಪಾಂಗ. ಇವೆಲ್ಲವೂ ಶೈವೋಪಾಸಕರ ಉಪಾಸ್ಯ ದೇವತೆಗಳಿಗಿರಬೇಕಾ ದವು. ವೀರಶೈವಾಂಗನ ಲಿಂಗಕ್ಕೆ ಮೂರ್ತಿ ರೂಪವಿಲ್ಲ. ತನ್ನ ಆತ್ಮನಲ್ಲಿರುವ

ಚಿತ್ಪ್ರಕಾಶವೇ ಲಿಂಗವಾಗಿರುತ್ತದೆ. ಇದು ನಿರಮಯವಿ ; ನಿರಾಮಯಿ. ಮಂತ್ರಮಯಿ.

"ಸಾದಾಖ್ಯ ಲಕ್ಷಣಂ ಪ್ರೋಕ್ತಂ ಮಹೇಶಂ ಶ್ರುಣು ಷಣ್ಮುಖ।
ಕರ್ಮೇಶಸ್ಯ ಸಹಸ್ರಾಂಶಾನ್ಮಹೇಶಸ್ಯ ಸಮುದ್ಭವಃ
ಮಹೇಶಂ ಸಕಲಂ ವಿದ್ಯಾತ್ ಸೃಷ್ಟಿಸ್ಥಿತಿಲಯಾತ್ಮಕಂ।
ಪಂಚವಿಂಶತಿ ಭೇಧೈಸ್ತು ತನ್ಮೂರ್ತಿರ್ವಿವಿಧಾ ಭವೇತ್॥

—ವಾತುಲಾಗಮ

ಮಹೇಶನಿಗೂ ಸಾದಾಖ್ಯ ಲಕ್ಷಣಕ್ಕೂ ಅಭಿನ್ನತೆ ! ಮಹೇಶನ ಸಹಸ್ರಾಂಶದಿಂದ ಕರ್ಮಸಾದಾಖ್ಯದ ಸಮುತ್ಪತ್ತಿ ! ಸೃಷ್ಟ್ಯಾದಿ ಸಕಲವು ಮಹೇಶ ಸ್ವರೂಪ. ವಿಶ್ವದ ವಿವಿಧ ರೂಪಗಳು ಮತ್ತು ಮರ್ತ್ಯದ ಮಾಹೇಶ್ವರರು ಮಹೇಶಾಂಶರು; ಕ್ರಿಯಾಕರ್ತೃತ್ವಾಧಿಕಾರಿಗಳು.

ಇದಷ್ಟು ಶಿವಾಗಮ ತತ್ವ ನಿರೂಪಣೆ ! ಶಿವಶರಣರು ಷಟ್ ಸಾದಾಖ್ಯ ತತ್ವಗಳನ್ನು ನಿರೂಪಿಸುವ ಕ್ರಮವೆಂತಿದೆ:

ಆ ಅನಾದಿ ಪರಶಿವರೂಪ ನಿಃಕಲ ಶಿವತತ್ವದಲ್ಲಿ ಜ್ಞಾನ ಚಿತ್ತು ಉದಯವಾಯಿತ್ತು. ಆ ಚಿತ್ತಿನಿಂದ ಅಕಾರ ಉಕಾರ ಮಕಾರಗಳೆಂಬ ಅಕ್ಷರತ್ರಯಂಗಳಾದವು. ಅಕಾರವೆ ನಾದ, ಉಕಾರವೆ ಬಿಂದು, ಮಕಾರವೆ ಕಳೆ—ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು. ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವ ಉತ್ಪತ್ತಿಯಾಯಿತ್ತು. ಆ ಪ್ರಣವವೇ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ ! ಆ ಮಹಾಲಿಂಗದಿಂದ ಪಂಚ ಸಾದಾಖ್ಯ ಮೂರ್ತಿ ಉತ್ಪತ್ತಿಯಾಯಿತ್ತು ನೋಡಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !

ಇದೇ ಸಿದ್ಧಲಿಂಗೇಶ್ವರರು ಇನ್ನೊಂದು ದೀರ್ಘವಚನದಲ್ಲಿ ಷಟ್ ಸಾದಾಖ್ಯಗಳ ಸೃಷ್ಟಿಯನ್ನು ಹೀಗೆ ವಿವರಿಸಿದ್ದಾರೆ :

೧. "ನಿಃಕಲ ಶಿವನ ಮಧ್ಯದಲ್ಲಿ ಚಿತ್‌ಶಕ್ತಿ ಉದಯವಾದಳು : ಆ ಚಿತ್ ಶಕ್ತಿಯ ಮಧ್ಯದಲ್ಲಿ ಶಾಂತತೀತೋತ್ತರಿ ಎಂಬ ಕಳೆ. ಆ ಕಳೆಯ ಮಧ್ಯ ದಲ್ಲಿ ಮಹಾಲಿಂಗ. ಆ ಮಹಾಲಿಂಗದ ಮಧ್ಯದಲ್ಲಿ ಪಶುಪತಿಯೆಂಬ ಕಲಾಮೂರ್ತಿ. ಆ ಕಲಾಮೂರ್ತಿ. ಆ ಕಲಾಮೂರ್ತಿಯ ಮಧ್ಯದಲ್ಲಿ ಶಿವನೆಂಬ ಐಕ್ಯನು. ಆ ಶಿವನೆಂಬ ಐಕ್ಯನ ಮಧ್ಯದಲ್ಲಿ ಆತ್ಮನು. ಇಂತು ಮಹಾ ಸಾದಾಖ್ಯ ಸೃಷ್ಟಿ !

೨. ಆ ನಿಃಕಲ ಶಿವನ ಮಧ್ಯದಲ್ಲಿ ಪರಾಶಕ್ತಿ. ಆ ಪರಾಶಕ್ತಿಯ ಮಧ್ಯದಲ್ಲಿ ಶಾಂತ್ಯತೀತ ಎಂಬ ಕಳೆ. ಆ ಕಳೆಯ ಮಧ್ಯದಲ್ಲಿ ಪ್ರಸಾದಲಿಂಗ. ಆ ಪ್ರಸಾದಲಿಂಗದ ಮಧ್ಯದಲ್ಲಿ ಶಿವಸಾದಾಖ್ಯ. ಆ ಶಿವ ಸಾದಾಖ್ಯದ ಮಧ್ಯ ದಲ್ಲಿ ಮಹಾದೇವನೆಂಬ ಕಳಾಮೂರ್ತಿ. ಆ ಮಹಾದೇವನೆಂಬ ಕಳಾ ಮೂರ್ತಿಯ ಮಧ್ಯದಲ್ಲಿ ಕ್ಷೇತ್ರಜ್ಞನೆಂಬ ಶರಣ, ಆ ಶರಣಮಧ್ಯದಲ್ಲಿ ಸದಾಶಿವನು, ಆ ಸದಾಶಿವನ ಮಧ್ಯದಲ್ಲಿ ಆಕಾಶ. ಇಂತುಶಿವ ಸಾದಾಖ್ಯದ ಸೃಷ್ಟಿ !

೩. ಆ ನಿಃಕಲ ಶಿವನ ಮಧ್ಯದಲ್ಲಿ ಆದಿಶಕ್ತಿ. ಆದಿಶಕ್ತಿಯ ಮಧ್ಯದಲ್ಲಿ ಶಾಂತಿ ಎಂಬ ಕಳೆ. ಆ ಶಾಂತಿ ಎಂಬ ಕಳೆಯ ಮಧ್ಯದಲ್ಲಿ ಜಂಗಮಲಿಂಗ. ಆ ಜಂಗಮಲಿಂಗದ ಮಧ್ಯದಲ್ಲಿ ಅಮೂರ್ತಿಸಾದಾಖ್ಯ. ಅಮೂರ್ತಿ ಸಾದಾಖ್ಯದ ಮಧ್ಯದಲ್ಲಿಭೀಮೇಶ್ವರ ಭೀಮೇಶ್ವರನೆಂಬ ಕಳಾಮೂರ್ತಿಯ ಮಧ್ಯದಲ್ಲಿ ಕರ್ತಾರನೆಂಬ ಪ್ರಾಣಲಿಂಗಿ. ಆ ಪ್ರಾಣಲಿಂಗಿಯ ಮಧ್ಯ ದಲ್ಲಿ ಈಶ್ವರ. ಈಶ್ವರನ ಮಧ್ಯದಲ್ಲಿ ವಾಯು. ಇಂತು ಅಮೂರ್ತಿ ಸಾದಾಖ್ಯದ ಸೃಷ್ಟಿ !

೪. "ಆ ನಿಃಕಲ ಶಿವನ ಮಧ್ಯದಲ್ಲಿ ಇಚ್ಛಾಶಕ್ತಿ. ಆ ಇಚ್ಛಾಶಕ್ತಿಯ ಮಧ್ಯ ದಲ್ಲಿ ವಿದ್ಯೆ ಎಂಬ ಕಲೆ. ಆ ವಿದ್ಯೆ ಎಂಬ ಕಲೆಯ ಮಧ್ಯದಲ್ಲಿ ಮೂರ್ತಿ ಸಾದಾಖ್ಯ. ಆ ಮೂರ್ತಿಸಾದಾಖ್ಯದ ಮಧ್ಯದಲ್ಲಿ ಮಹಾರುದ್ರನೆಂಬ ಕಳಾ ಮೂರ್ತಿ. ಆ ಕಳಾಮೂರ್ತಿಯ ಮಧ್ಯದಲ್ಲಿ ಭಾವನೆಂಬ ಪ್ರಸಾದಿ. ಆ ಭಾವನೆಂಬ ಪ್ರಸಾದಿಯ ಮಧ್ಯದಲ್ಲಿ ರುದ್ರನು. ರುದ್ರನ ಮಧ್ಯದಲ್ಲಿ ಅಗ್ನಿ. ಇಂತು ಮೂರ್ತಿ ಸಾದಾಖ್ಯದ ಸೃಷ್ಟಿ !

೫. "ಆ ನಿಃಕಲ ಶಿವನ ಮಧ್ಯದಲ್ಲಿ ಜ್ಞಾನಶಕ್ತಿ. ಆ ಜ್ಞಾನ ಶಕ್ತಿಯ ಮಧ್ಯ ದಲ್ಲಿ ಪ್ರತಿಷ್ಠೆ ಎಂಬ ಕಲೆ. ಆ ಪ್ರತಿಷ್ಠೆ ಎಂಬ ಕಲೆಯ ಮಧ್ಯದಲ್ಲಿ ಗುರು ಲಿಂಗ. ಆ ಗುರುಲಿಂಗದ ಮಧ್ಯದಲ್ಲಿ ಕರ್ತೃ ಸಾದಾಖ್ಯ. ಆ ಕರ್ತೃ ಸಾದಾಖ್ಯದ ಮಧ್ಯದಲ್ಲಿ ಶರ್ವನೆಂಬ ಕಳಾಮೂರ್ತಿ. ಆ ಶರ್ವನೆಂಬ ಕಳಾಮೂರ್ತಿಯ ಮಧ್ಯದಲ್ಲಿ ಚೈತನ್ಯನೆಂಬ ಮಹೇಶ್ವರ. ಆ ಚೈತನ್ಯ ನೆಂಬ ಮಹೇಶ್ವರನ ಮಧ್ಯದಲ್ಲಿ ವಿಷ್ಣು. ಆ ವಿಷ್ಣುವಿನ ಮಧ್ಯದಲ್ಲಿ ಅಪ್ಪು. ಇಂತು ಕರ್ತೃ ಸಾದಾಖ್ಯದ ಸೃಷ್ಟಿ!

೬. "ಆ ನಿಃಕಲ ಶಿವನ ಮಧ್ಯದಲ್ಲಿ ಕ್ರಿಯಾಶಕ್ತಿ. ಆ ಕ್ರಿಯಾಶಕ್ತಿಯ ಮಧ ದಲ್ಲಿ ನಿವೃತ್ತಿ ಎಂಬ ಕಲೆ. ಆ ನಿವೃತ್ತಿಯೆಂಬ ಕಲೆಯ ಮಧ್ಯದಲ್ಲಿ ಆಚಾರ್ಯ ಲಿಂಗ. ಆಚಾರ ಲಿಂಗದ ಮಧ್ಯದಲ್ಲಿ ಕರ್ಮಸಾದಾಖ್ಯ. ಆ ಕರ್ಮ ಸಾದಾಖ್ಯದ ಮಧ್ಯದಲ್ಲಿ ಭವನೆಂಬ ಕಳಾಮೂರ್ತಿ. ಆ ಭವನೆಂಬ ಕಳಾಮೂರ್ತಿಯ ಮಧ್ಯದಲ್ಲಿ ಅಂತರ್ಯಾಮಿ ಎಂಬ ಭಕ್ತ. ಆ ಅಂತ ರ್ಯಾಮಿ ಎಂಬ ಭಕ್ತನ ಮಧ್ಯದಲ್ಲಿ ಬ್ರಹ್ಮ. ಆ ಬ್ರಹ್ಮನ ಮಧ್ಯದಲ್ಲಿ ಪೃಥ್ವಿ, ಆ ಬ್ರಹ್ಮನಿಂದ ನರರು ಸುರರು ಅಸುರರು ಅಂಡಜ ಸ್ವೇದಜ ಉದ್ಭಿಜ ಜರಾಯುಜವೆಂಬ ಸಕಲ ಚರಾಚರಂಗಳೆಲ್ಲ ಹುಟ್ಟಿದವು. ಇಂತಿ ವೆಲ್ಲವು ಶಿವನ ನೆನಹು ಮಾತ್ರದಿಂದಾದವೈ ಮಹಾಲಿಂಗ ಗುರುಶಿವ ಸಿದ್ದೇಶ್ವರ ಪ್ರಭುವೆ !"

"ಕರ್ಮ ಸಾದಾಖ್ಯವೇ ಆಚಾರ ಲಿಂಗದ ಪ್ರಕಾಶ. ಕರ್ತೃಸಾದಾಖ್ಯವೇ ಗುರುಲಿಂಗ ಪ್ರಕಾಶ. ಮೂರ್ತಿ ಸಾದಾಖ್ಯವೇ ಶಿವಲಿಂಗ ಪ್ರಕಾಶ. ಅಮೂರ್ತಿ ಸಾದಾಖ್ಯವೇ ಜಂಗಮಲಿಂಗ ಪ್ರಕಾಶ. ಶಿವ ಸಾದಾಖ್ಯವೇ ಪ್ರಸಾದ ಲಿಂಗ ಪ್ರಕಾಶ—ಸ್ವರೂಪವ ತಳೆಯಿತು. ಆ ಐದು ಲಿಂಗದ ಬೆಳಗೇ ಪಂಚ ಮುಖ ವೆಂದೆನಿಸಿತು."

ಇಂತೀ ಆತ್ಮಾನಾತ್ಮ ತತ್ತ್ವಂಗಳಿಗೆ ಮೂಲಕಾರಣವಾದ ಪರಬ್ರಹ್ಮವು ತಾನು ಹ್ಯಾಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡಡೆ, ಆ ಸಕಲ ತತ್ತ್ವಂಗಳಿಗೆ ಉಪರಿಯಾಗಿ ತೋರುವ ಪರವಸ್ತುವಪ್ಪ ಶಾಶ್ವತವಾದ ನಿರಾಳ ಅಡಿಮುಡಿ

ಒಡಲ ಘಾತವ ಕಾಣಿಸಿಕೊಳ್ಳದ ತನುಮನ ಕರಣ ಶೂನ್ಯವಾದ ಲಿಂಗವೇ ನಿಃಕಲ ಬ್ರಹ್ಮವು. ಇಲ್ಲಿಗೆ ನಿಃಕಲ ಲಿಂಗಸ್ಥಲ.

ತನ್ನ ಸಗುಣಾನಂದ ಲೀಲೆಗೊದಗಿದಂಥಾದ್ದೇ ಚಿತ್ತು. ಆ ಚಿತ್ತಿನ ವಿಲಾಸದಿಂದ ತಾನೇ ಆ ನಿಃಕಲ ಲಿಂಗವು, ಆ ಚಿತ್ತಿನ ಚಿನ್ನಾದವೇ ಸುನಾದ, ಆ ಚಿತ್ತುವಿನ ಚಿದ್ಬಿಂದುವೇ ಬಿಂದು ಪ್ರಕಾಶ. ಆ ಚಿತ್ತುವಿನ ಚಿತ್ಕಳೆಯೇ ಪ್ರಕಾಶ ತೇಜೋಮೂರ್ತಿಯಾಗಿ, ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಅಖಂಡಗೋಳಕಾಕಾರ ತೇಜೋಮೂರ್ತಿ ಯಾಗಿ ನಿಂದು, ಮಹಾಲಿಂಗವೆನಿಸಿತ್ತು. ಇಲ್ಲಿಗೆ ಮಹಾಲಿಂಗ ಸ್ಥಲ.

ಆ ಪರಿಪೂರ್ಣ ಪರಂಜ್ಯೋತಿಸ್ತಂಭಾಕಾರವಾದ ಮಹಾಲಿಂಗವು ತಾನಂದೇ ಕರ್ಮಸಾದಾಖ್ಯ ಕರ್ತೃಸಾದಾಖ್ಯ ಮೂರ್ತಿಸಾದಾಖ್ಯ ಅಮೂರ್ತಿ ಸಾದಾಖ್ಯ ಶಿವಸಾದಾಖ್ಯವೆಂಬಯ್ದು ಸಾದಾಖ್ಯ ಲಿಂಗ ಸ್ವರೂಪವ ತಳೆಯಿತು.

ಕರ್ಮ ಸಾದಾಖ್ಯವೇ ಆಚಾರ ಲಿಂಗದ ಪ್ರಕಾಶ, ಕರ್ತೃಸಾದಾಖ್ಯವೇ ಗುರುಲಿಂಗ ಪ್ರಕಾಶ, ಮೂರ್ತಿಸಾದಾಖ್ಯವೇ ಶಿವಲಿಂಗ ಪ್ರಕಾಶ. ಅಮೂರ್ತಿ ಸಾದಾಖ್ಯವೇ ಜಂಗಮಲಿಂಗ ಪ್ರಕಾಶ. ಶಿವಸಾದಾಖ್ಯವೇ ಪ್ರಸಾದ ಲಿಂಗ ಪ್ರಕಾಶ ಸ್ವರೂಪವ ತಳೆಯಿತು.

ಈ ಅಯ್ದು ಲಿಂಗದ ಬೆಳಗೇ ಪಂಚಮುಖವೆಂದೆನಿಸಿತು.—ಎಂಬಲ್ಲಿ ಆಚಾರ ಲಿಂಗ ಪ್ರಕಾಶವೇ ಸದ್ಯೋಜಾತಮುಖ. ಗುರುಲಿಂಗ ಪ್ರಕಾಶವೇ ವಾಮದೇವ ಮುಖ. ಶಿವಲಿಂಗ ಪ್ರಕಾಶವೇ ಅಘೋರ ಮುಖ. ಜಂಗಮ ಲಿಂಗ ಪ್ರಕಾಶವೇ ತತ್ಪುರುಷಮುಖ. ಪ್ರಸಾದಲಿಂಗ ಪ್ರಕಾಶವೇ ಈಶಾನ ಮುಖ: ಇವುಗಳ ಸ್ವರೂಪವನ್ನು ತಳೆಯಿತು.

ಆ ಪಂಚಮುಖದಿಂದಲೇ ಪಂಚಾಕ್ಷರಂಗಳ ಉತ್ಪತ್ತಿ,-ಎಂಬಲ್ಲಿ ಸದ್ಯೋ ಜಾತ ಮುಖದಿಂದ ನಕಾರ ಪ್ರಣಮವು, ವಾಮದೇವಮುಖದಿಂದ ಮಕಾರಪ್ರಣ ಮವು, ಅಘೋರ ಮುಖದಿಂದ ಶಿಕಾರಪ್ರಣಮವು. ತತ್ಪುರುಷಮುಖದಿಂದ ವಕಾರ ಪ್ರಣಮವು, ಈಶಾನ್ಯಮುಖದಿಂದ ಯಕಾರಪ್ರಣಮವು ಪುಟ್ಟಿದವು.

ಆ ಪಂಚಾಕ್ಷರಂಗಳಿಂದಲೇ ಪಂಚಕಲೆಗಳುತ್ಪತ್ತಿಯ ಎಂಬುಲ್ಲಿ ನಕಾರಪ್ರಣಮದಿಂದ ನಿವೃತ್ತಿಕಲೆ, ಮಕಾರಪ್ರಣಮದಿಂದ ಪ್ರತಿಷ್ಠಾ ಕಲೆ. ಶಿಕಾರ ಪ್ರಣಮದಿಂದ ವಿದ್ಯಾಕಲೆ. ವಕಾರ ಪ್ರಣಮದಿಂದ ಶಾಂತಿಕಲೆ, ಯಕಾರ ಪ್ರಣಮದಿಂದ ಶಾಂತ್ಯತೀತಕಲೆ ಹುಟ್ಟಿದವು.

ಆ ಪಂಚಕಲೆಗಳಿಂದಲೇ ಪಂಚಶಕ್ತಿಗಳುತ್ಪತ್ತಿ. ಅದು ಹೇಗೆ? ನಿವೃತ್ತಿಕಲೆಯಿಂದ ಕ್ರಿಯಶಕ್ತಿ, ಪ್ರತಿಷ್ಠಾಕಲೆಯಿಂದ ಜ್ಞಾನಶಕ್ತಿ, ವಿದ್ಯಾಕಲೆಯಿಂದ ಇಚ್ಛಾಶಕ್ತಿ, ಶಾಂತಿಕಲೆಯಿಂದ ಆದಿಶಕ್ತಿ, ಶಾಂತ್ಯತೀತಕಲೆಯಿಂದ ಪರಾಶಕ್ತಿ ಹುಟ್ಟಿದವು.

ಆ ಪಂಚಶಕ್ತಿಗಳಿಂದಲೇ ಪಂಚಕರಣಂಗಳುತ್ಪತ್ತಿಯು ಎಂಬಲ್ಲಿ, ಕ್ರಿಯಾಶಕ್ತಿಯಿಂದ ಚಿತ್ತು. ಜ್ಞಾನಶಕ್ತಿಯಿಂದ ಬುದ್ಧಿ. ಇಚ್ಛಾಶಕ್ತಿಯಿಂದ ಅಹಂಕಾರ. ಆದಿಶಕ್ತಿಯಿಂದ ಮನ, ಪರಾಶಕ್ತಿಯಿಂದ ಜ್ಞಾನವೆಂಬ ಕರಣಂಗಳು ಹುಟ್ಟಿದವು.

ಪಂಚಕರಣಂಗಳಿಂದಲೇ ಪಂಚತನ್ಮಾತ್ರೆಗಳ ಉತ್ಪತ್ತಿಯಾಯಿತ್ತು ಎಂಬಲ್ಲಿ, ಚಿತ್ತೆಂಬ ಕರಣದಿಂದ ಗಂಧ ವಿಷಯವು ಬುದ್ಧಿ ಎಂಬ ಕರಣದಿಂದ ರಸವಿಷಯವು, ಅಹಂಕಾರವೆಂಬ ಕರಣದಿಂದ ರೂಪವಿಷಯುವು, ಮನವೆಂಬ ಕರಣದಿಂದ ಸ್ಪರ್ಶನ ವಿಷಯವು, ಜ್ಞಾನವೆಂಬ ಕರಣದೀಂದ ಶಬ್ದ ವಿಷಯವು ಪುಟ್ಟಿದವು.

ಆ ಪಂಚತನ್ಮಾತ್ರೆಗಳಿಂದಲೇ ಪಂಚಭೂತಂಗಳುತ್ಪತ್ತಿಯು : ಗಂಧವಿಷಯದಿಂದ ಪೃಥ್ವಿಯು. ರಸವಿಷಯದಿಂದ ಅಪ್ಪು. ರೂಪವಿಷಯ:ದಿಂದ ಅಗ್ನಿ, ಸ್ಪರ್ಶವಿಷಯದೀದ ವಾಯು, ಶಬ್ದವಿಷಯದಿಂದ ಆಕಾಶವೆಂಬೈದು ತತ್ತ್ವಂಗಳು ಹುಟ್ಟಿದವು. ಇಲ್ಲಿಗೆ ಪಂಚಸಾದಾಖ್ಯಮೂರ್ತಿಲಿಂಗಸ್ಥಲ.

**ಷಟ್‌ಸ್ಥಲ ಬ್ರಹ್ಮಮೂರ್ತಿಗಳು :**

"ಅಖಂಡಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪವೇ ಮೂರ್ತಿಬ್ರಹ್ಮವು. ಆಪ್ರಣವದ ದಂಡಸ್ವರೂಪವೇ ಪಿಂಡಬ್ರಹ್ಮವು, ಆ ಪ್ರವಣದ ಕುಂಡಲಾಕಾರವೇ ಕಲಾಬ್ರಹ್ಮವು. ಆಪ್ರಣವದ ಅರ್ಧಚಂದ್ರಕವೇ ಬ್ರಹ್ಮಾನಂದಬ್ರಹ್ಮವು, ಆ ಪ್ರಣ್ವದ ದರ್ಪಣಾಕಾರವೇ ವಿಜ್ಞಾನಬ್ರಹ್ಮವು.

ಆ ಪ್ರವಣದ ಜ್ಯೋತಿಸ್ವರೂಪವೇ ಪರಬ್ರಹ್ಮವು. ಈ ಆರು 'ಷಟ್‌ಸ್ಥಲ ಬ್ರಹ್ಮ'ಎಂದು ಹೇಳಲ್ಪಟ್ಟಿತ್ತು ನೋವಾ ಅಪ್ರಮಾಣ ಕೂಡಲಸಂಗಮದೇವಾ.!"

ಅಖಂಡಮಹಾಜ್ಯೋತಿ ಪ್ರಣವಜ್ಯೋತಿಸ್ವರೂಪವಾಗಿಹ ಪರಬ್ರಹ್ಮದಲ್ಲಿ ಶಿವನುತ್ಪತ್ಯವಾದನು, ಕ್ಷೇತ್ರಜ್ಞನುತ್ಪತ್ಯವಾದನು, ಕರ್ತನುತ್ಪತ್ಯವಾದನು, ಭಾವ ನುತ್ಪತ್ಯವಾದನು, ಚೈತನ್ಯನುತ್ಪತ್ಯವಾದನು, ಆಕಾಶ ಉತ್ಪತ್ಯವಾಯಿತ್ತು : ಈ ಆರು ತತ್ತ್ವಂಗಳು ಪರಬ್ರಹ್ಮದಲ್ಲಿ ಹುಟ್ಟಿತು ನೋಡಾ:

ಅಖಂಡಮಹಾಜ್ಯೋತಿ ಪ್ರಣವದ ದರ್ಪಣಾಕಾರವಾಗಿಹ ವಿಜ್ಞಾನಬ್ರಹ್ಮ ದಲ್ಲಿ ಸದಾಶಿವನುತ್ಪತ್ಯವಾದನು, ಮಹದಾಕಾಶ ಉತ್ಪತ್ಯವಾಯಿತ್ತು. ಶಬ್ದ ಉತ್ಪತ್ಯವಾಯಿತ್ತು. ಜ್ಞಾನಉತ್ಪತ್ಯವಾಯಿತ್ತು, ಶ್ರೋತ್ರಉತ್ಪತ್ಯವಾಯಿತ್ತು. ವಾಕ್ಕು ಉತ್ಪತ್ಯವಾಯಿತ್ತು. ಈ ಆರುತತ್ತ್ವಂಗಳು ವಿಜ್ಞಾನಬ್ರಹ್ಮದಲ್ಲಿ ಹುಟ್ಟಿತ್ತು ನೋಡಾ;

ಅಖಂಡಮಹಾಜ್ಯೋತಿ ಪ್ರಣವದ ಅರ್ಧಚಂದ್ರರೂಪವಾಗಿಹ ಬ್ರಹ್ಮಾ ನಂದಬ್ರಹ್ಮದಲ್ಲಿ ಈಶ್ವರನುತ್ಪತ್ಯವಾದನು, ವಾಯು ಉತ್ಪತ್ಯವಾಯಿತ್ತು; ಸ್ಪರ್ಶನ ಉತ್ಪತ್ಯವಾಯಿತ್ತು, ಮನ ಉತ್ಪತ್ಯವಾಯಿತ್ತು, ತ್ವಕ್ಕು ಉತ್ಪತ್ಯವಾ ಯಿತ್ತು. ಪ್ರಾಣೇಂದ್ರಿಯ ಉತ್ಪತ್ಯವಾಯಿತ್ತು, ಈ ಆರುತತ್ತ್ವಂಗಳು ಬ್ರಹ್ಮಾ ನಂದಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ.

ಅಖಂಡಮಹಾಜ್ಯೋತಿ ಪ್ರಣವದ ಕುಂಡಲಾಕಾರವಾಗಿಹ ಕಲಾಬ್ರಹ್ಮದಲ್ಲಿ ರುದ್ರನುತ್ಪತ್ಯವಾದನು, ಅಗ್ನಿ ಉತ್ಪತ್ಯವಾಯಿತ್ತು. ರೂಪು ಉತ್ಪತ್ಯವಾಯಿತ್ತು, ಅಹಂಕಾರ ಉತ್ಪತ್ಯವಾಯಿತ್ತು, ನೇತ್ರಉತ್ಪತ್ಯವಾಯಿತ್ತು. ಪಾದೇಂದ್ರಿಯ ಉತ್ಪತ್ಯವಾಯಿತ್ತು, ಈಆರು ತತ್ತ್ವಂಗಳು ಪಿಂಡಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ;

ಅಖಂಡ ಮಹಾಜ್ಯೋತಿ ಪ್ರಣವದ ದಂಡಸ್ವರೂಪವಾಗಿಹ ಪಿಂಡ ಬ್ರಹ್ಮ ದಲ್ಲಿ ವಿಷ್ಣು ಉತ್ಪತ್ಯವಾದನು, ಅಪ್ಪು ಉತ್ಪತ್ಯವಾಯಿತ್ತು. ರಸ ಉತ್ಪತ್ಯ ವಾಯಿತ್ತು, ಬುದ್ಧಿ ಉತ್ಪತ್ಯವಾಯಿತ್ತು, ಜಿಹ್ವೆ ಉತ್ಪತ್ಯವಾಯಿತ್ತು ಗುಹ್ಯ

ಉತ್ಪತ್ಯವಾಯಿತ್ತು. ಈ ಆರು ತತ್ವಂಗಳು ಪಿಂಡ ಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ;

ಅಖಂಡ ಮಹಾಜ್ಯೋತಿ ಪ್ರಣವದ ತಾರಕ ಸ್ವರೂಪವಾಗಿಹ ಮೂರ್ತಿ ಬ್ರಹ್ಮದಲ್ಲಿ ಬ್ರಹ್ಮ ಉತ್ಪತ್ಯವಾವನು, ಪೃಥ್ವಿ ಉತ್ಪತ್ಯವಾಯಿತ್ತು, ಗಂಧ ಉತ್ಪತ್ಯವಾಯಿತ್ತು. ಚಿತ್ತ ಉತ್ಪತ್ಯವಾಯಿತ್ತು, ಘ್ರಾಣ ಉತ್ಪತ್ಯವಾಯಿತ್ತು, ಗುದ ಉತ್ಪತ್ಯವಾಯಿತ್ತು, ಈ ಆರು ತತ್ವಂಗಳು ಮೂರ್ತಿಬ್ರಹ್ಮದಲ್ಲಿ ಉತ್ಪತ್ಯವಾಯಿತ್ತುನೋಡಾ ಅಪ್ರಮಾಣಕೂಡಲ ಸಂಗಮದೇವಾ !"

ಸಹಜದಿಂದ ನಿರಾಲಂಬ ವಾಯಿತ್ತು ನಿರಾಬಂಬದೀಂದ ನಿರಾಳವಾಯಿತ್ತು. ನಿರಾಳದಿಂದ ನಿರವಯುವಾಯಿತ್ತು. ನಿರವಯದಿಂದ ಅನಾದಿಯಾಗಿತ್ತು, ಅನಾದಿ ಯಲ್ಲಿ ಮೂರ್ತಿಯಾದನೊಬ್ಬ ಶರಣ. ಆ ಶರಣನ ಮೂರ್ತಿಯಿಂದ ಸದಾಶಿವ ನಾದ. ಆ ಸದಾಶಿವನ ಮೂರ್ತಿಯಿಂದ ಶಿವನಾದ. ಆ ಶಿವನ ಮೂರ್ತಿ ಯಿಂದ ರುದ್ರನಾದ. ಆ ರುದ್ರನ ಮೂರ್ತಿಯಿಂದ ವಿಷ್ಣುವಾದ. ಆ ವಿಷ್ಣು ವಿನ ಮೂರ್ತಿಯಿಂದ ಬ್ರಹ್ಮನಾದ. ಆ ಬ್ರಹ್ಮನ ಮೂರ್ತಿಯೀದಾದವು ಸಕಲ ಜಗತ್ತುಗಳೆಲ್ಲ. ಇವರೆಲ್ಲ ನಮ್ಮ ಗುಹೇಶ್ವರನ ಕರಸ್ಥಲದ ಹಂಗಿನಲ್ಲಿ ಹುಟ್ಟಿ ಬೆಳೆದರು,

**ಷಡಧ್ವಗಳು :**

ಮಂತ್ರಾಧ್ವ–ಪದಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೇ ಆಚಾರ್ಯ ನೆಂಬೆ: ವರ್ಣಾಧ್ವ–ಭುವನಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೇ ಆಚಾರ್ಯ ನೆಂಬೆ. ತತ್ವಾಧ್ವ–ಕಲಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೇ ಆಚಾರ್ಯ ನೆಂಬೆ: ಈ ಷಡಧ್ವವ ತನ್ನಲ್ಲಿ ತಿಳಿದು ಅನುಭವಿಸಲರಿಯದೆ ಆಚಾರ್ಯರೆಂಬ ಅನಾಚಾರ್ಯರ ಮೆಚ್ಚುವವನೇ ನಮ್ಮ ಅಪ್ರಮಾಣ ಕೂಡಲಸಂಗಮದೇವಾ ?

ಈ ಷಡಧ್ವದಿಂದಲೇ ಅನೇಕಾನೇಕ ವೇದಂಗಳೆಸಗಿತ್ತು. ಈ ಷಡಧ್ವ ದಿಂದಲೇ ಅನೇಕ ಶಾಸ್ತ್ರಂಗಳೆಸಗಿತ್ತು. ಈ ಷಡಧ್ವದಿಂದಲೇ ಅನೇಕ ಪುರಾಣಂ

ಗಳೆಸಗಿತ್ತು. ಈ ಷಡಧ್ವಂಡಿಂದಲೇ ಅನೇಕಾಗಮಂಗಳೆಸಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

**ಪಂಚ ಭೂತಗಳು :**

ಅನಾದಿಯ ಮಗನು ಆದಿ, ಆದಿಯ ಮಗನತೀತ, ಅತೀತನ ಮಗನು ಆಕಾಶನು. ಆಕಾಶನ ಮಗನು ವಾಯು, ವಾಯುವಿನ ಮಗನು ಅಗ್ನಿ. ಅಗ್ನಿಯ ಮಗನಪ್ಪು, ಅಪ್ಪುವಿನ ಮಗ ಪೃಥ್ವಿ, ಪೃಥ್ವಿಯಿಂದ ಸಕಲ ಜೀವರೆಲ್ಲರ ಉದ್ಭವ ಗುಹೇಶ್ವರಾ !

ಪರಾಪರವಾಗಿಹ ಪರಬ್ರಹ್ಮ ಲೋಕಾದಿಲೋಕಂಗಳನು ಸೃಜಿಸಬೇಕೆಂಬ ನೆನಹು ಮಾತ್ರದಲ್ಲಿಯೇ ಆ ಪರಾಪರವಾಗಿಹ ಪರಬ್ರಹ್ಮದಲ್ಲಿ ಪರ ಉತ್ಪತ್ಯವಾಯಿತ್ತು. ಆ ಪರದಲ್ಲಿ ಶಿವನುತ್ಪತ್ಯವಾದನು. ಆ ಶಿವನಲ್ಲಿ ಶಕ್ತಿಯುತ್ಪತ್ಯವಾದಳು. ಆ ಶಕ್ತಿಯಲ್ಲಿ ಬಿಂದು ಉತ್ಪತ್ಯವಾಯಿತ್ತು. ಆ ಬಿಂದುವಿನಲ್ಲಿ ನಾದ ಉತ್ಪತ್ಯವಾಯಿತು. ಆ ನಾದಲ್ಲಿ ಸದಾಶಿವನು ಉತ್ಪತ್ಯವಾದನು. ಆ ಸದಾಶಿವನ ಗೋಪ್ಯ ವಕ್ತ್ರದಲ್ಲಿ ಆತ್ಮನು ಉತ್ಪತ್ಯವಾದನು. ಆ ಸದಾಶಿವನ ಈಶಾನ್ಯ ವಕ್ತ್ರದಲ್ಲಿ ಆಕಾಶ ಉತ್ಪತ್ಯವಾಯಿತು. ಆ ಸದಾಶಿವನ ತತ್ಪುರುಷ ವಕ್ತ್ರದಲ್ಲಿ ವಾಯು ಉತ್ಪತ್ಯವಾಯಿತ್ತು. ಆ ಸದಾಶಿವನ ಅಘೋರ ವಕ್ತ್ರವಲ್ಲಿ ಅಗ್ನಿ ಉತ್ಪತ್ಯವಾಯಿತ್ತು. ಆ ಸದಾಶಿವನ ಸದ್ಯೋಜಾತ ವಕ್ತ್ರದಲ್ಲಿ ಪೃಥ್ವೀ ಉತ್ಪತ್ಯವಾಯಿತ್ತು. ಆ ಪರಶಿವನ ಹೃದಯದಲ್ಲಿ ಚಂದ್ರನುತ್ಪತ್ಯವಾದನು. ಆ ಸದಾಶಿವನ ಚಕ್ಷುವಿನಲ್ಲಿ ಸೂರ್ಯನುತ್ಪತ್ಯವಾದನು. ಆ ಸದಾಶಿವನು ಆಕಾಶಕ್ಕೆ ಅಧಿದೇವತೆಯಾಗಿಹನು. ಆ ಸದಾಶಿವನಲ್ಲಿ ಮಹೇಶ್ವರನುತ್ಪತ್ಯವಾಗಿ ವಾಯುವಿಗೆ ಅಧಿದೇವತೆಯಾಗಿಹನು. ಆ ಮಹೇಶ್ವರನಲ್ಲಿ ರುದ್ರನುತ್ಪತ್ಯವಾಗಿ ಅಗ್ನಿಗೆ ಅಧಿದೇವತೆಯಾದಹನು. ಆ ರುದ್ರನಲ್ಲಿ ವಿಷ್ಣು ಉತ್ಪತ್ಯವಾಗಿ ಅಪ್ಪುವಿಗೆ ಅಧಿದೇವತೆಯಾಗಿಹನು. ಆ ವಿಷ್ಣುವಿನಲ್ಲಿ ಬ್ರಹ್ಮನುತ್ಪತ್ಯವಾಗಿ ಪೃಥ್ವಿಗೆ ಅಧಿದೇವತೆಯಾಗಿಹನು. ಆ ಬ್ರಹ್ಮನಲ್ಲಿ ಸರ್ವಜೀವಿಗಳು ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

**ಪಂಚ ವಿಂಶತಿ ತತ್ವಗಳು :**

ಪರಶಿವನ ಚಿತ್ಕರಣಂಗಳು ಈ ಜಗತ್ತಿನ ಶಿರೋ ಮಧ್ಯಕ್ಕೆ ಬಿಂಬಿಸಿ ಅದಕ್ಕೆ ಚೈತನ್ಯಂಗೊಳಿಸಿದಲ್ಲಿ ಅದೇ ಪರಮಾತ್ಮನಾಯಿತ್ತು. ಆ ಪರಮಾತ್ಮನು ಜಗತ್ತಿನ ಭ್ರೂಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಅಂತರಾತ್ಮನಾಯಿತ್ತು. ಆ ಅಂತರಾತ್ಮನು ಜಗತ್ತಿನ ಹೃನ್ಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಜೀವಾತ್ಮವಾಯಿತ್ತು. ಆ ಜೀವಾತ್ಮನೇ ಘಟ, ಅಂತರಾತ್ಮನೇ ಪ್ರಾಣ, ಪರಮಾತ್ಮನೇ ಸರ್ವಸಾಕ್ಷಿಕ, ಆ ಸಾಕ್ಷಿಕನೇ ವಸ್ತು, ಆ ಪರವಸ್ತು ಜೀವಾಂತರಾದಿಗಳೆಂಬ ಅಂಗ ಪ್ರಾಣಕ್ಕೆ ಪಂಚ ವಿಂಶತಿ ತತ್ವಂಗಳೆಂಬ ತುಷಾಪಾಶಮಂ ತೊಡಿಸಿ ಆತದನೆ ಪಶುವೆನಿಸಿ ತಾನದಕೆ ಪತಿಯಾಗಿ ಅಲ್ಲಿ ನಾನಾ ವಿನೋದಂಗಳಂ ನೋಡಿ ವಿನೋದಿಸುತ್ತ, ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಿಂತೀ ಪರಿಯಲ್ಲಿ ಆಡಿಸುತ್ತಿದ್ದ ಜಗತ್ತು.

ಇನ್ನು ಭೂತಪಂಚಕ ವಾಯುಪಂಚಕ, ಕರ್ಮೇಂದ್ರಿಯ ಪಂಚಕ, ಜ್ಞಾನೇಂದ್ರಿಯ ಪಂಚಕ, ಕರಣ ಚತುಷ್ಟಯಂಗಳೆನಿಪ ಚತುರ್ವಿಂಶತಿ ತತ್ವವಾಹಂ ಶದೀಗ ದೇಹ, ಪಂಚವಿಂಶತಿ ತತ್ವವಾಹಂತಹ ಆತ್ಮನೇ ದೇಹಿ, ಆ ಆತ್ಮಂಗೆ ಜ್ಞಾನೇಂದ್ರಿವವೇ ಚಿತ್ಸ್ವರೂಪು, ಪರಶಿವನಧಿದೇವತೆ, ಸರ್ವಾತ್ಮಹಗಳಲ್ಲಿ ಚೈತನ್ಯ ಸ್ವರೂಪನಾಗಿ ತೊಳಗಿ ಬೆಳಗುತ್ತಿಹನು. ಇನ್ನು ಮಾನಸಾದಿ ಕರಣಂಗಳು ಪರಾಶಕ್ತಿಯ ಸ್ವರೂಪು, ಪ್ರಾಣಾದಿ ವಾಯುಗಳು ಆದಿಶಕ್ತಿಯ ಸ್ವರೂಪು. ಭೂತಾದಿ ಪಂಚಕಂಗಳು ಇಚ್ಛಾಶಕ್ತಿಯ ಸ್ವರೂಪು, ಶ್ರೋತ್ರಾದಿ ಜ್ಞಾನೇಂದ್ರಿಯಂಗಳು ಜ್ಞಾನ ಶಕ್ತಿಯ ಸ್ವರೂಪು, ವಾಗಾದಿ ಕರ್ಮೇಂದ್ರಿಯಗಳು ಕ್ರಿಯಾಶಕ್ತಿಯ ಸ್ವರೂಪು, ಇಂತಿವು ಪಂಚಶಕ್ತಿಯ ಸ್ವರೂವು ಪಂಚವಿಂಶತಿ ತತ್ವಂಗಳು.

**ಮುಃಊವತ್ತಾರು ತತ್ವಗಳು :**

೧. ಆತ್ಮತತ್ತ್ವ ಇಪ್ಪತ್ತೈದು, ವಿದ್ಯಾತತ್ತ್ವ ಹತ್ತು ; ಶಿವತತ್ತ್ವ ಒಂದು. ಅದೆಂತೆಂದೊಡೆ ಭೂತಾದಿ ಪಂಚಕಂಗಳೈದು, ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು, ಶಬ್ದಾದಿ ವಿಷಯುಗಳೈದು—ವಾಗಾದಿ ಕರ್ಮೇಂದ್ರಿಯುಗಳೈದು, ಮನವಾದಿ ಪಂಚಕಂಗಳೈದು ಇಂತು ಆತ್ಮತತ್ತ್ವ

ಇಪ್ಪತ್ತೈದಂ. ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ ; ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಕಲೆ—ಇಂತುವಿದ್ಯಾತತ್ತ್ವ ಹತ್ತು. ಶಿವತತ್ತ್ವ ಒಂದು. ಇಂತು ಮೂವತ್ತಾರು ತತ್ತ್ವಂಗಳೊಡನೆ ಶಿವತತ್ತ್ವವೇ ತತ್‌ಪದ, ಆತ್ಮ ತತ್ತ್ವವೇ ತ್ವಂಪದ; ವಿದ್ಯಾ ತತ್ತ್ವವೇ ಅಸಿ ಪದ. ಅಕಾರದಲ್ಲಿ ತತ್ಪದ ಐಕ್ಯ ವಾಯಿತ್ತು, ಉಕಾರದಲ್ಲಿ ತ್ವಂ—ಪದ ಐಕ್ಯವಾಯಿತ್ತು. ಮಕಾರದಲ್ಲಿ ಅಸಿ ಪದ ಐಕ್ಯವಾಯಿತ್ತು. ಮಕಾರ ಅಕಾರ ಉಕಾರ ಏಕಾರ್ಥನಾಗಿ ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗವಾಯಿತ್ತು. ಆ ಷಟ್‌ಸ್ಥಲ ಬ್ರಹ್ಮ ವೆಂಬ ಮಹಾಜ್ಯೋರ್ಮಯ ಲಿಂಗದಲ್ಲಿ ತ್ವಂ ಪದ, ಅಸಿಪದವೇ ನಿಕ್ಷೇಪವಾಗಿ-ಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಮತ್ತೊಂದು ಬಗೆಯಲ್ಲಿ ಮೂವತ್ತಾರು ತತ್ತ್ವಗಳ ನಿರೂಪಣೆ :

೨. ಆತ್ಮತತ್ತ್ವ ಇಪ್ಪತ್ತೈದು ತೂರ್ಯತತ್ತ್ವ, ವಿದ್ಯಾತತ್ತ್ವ ಹತ್ತು; ಭಾವತತ್ತ್ವ, ಶಿವತತ್ತ್ವ ಒಂದು ; ಈ ಪ್ರಕಾರದಿಂದವೆ ಮೂವತ್ತಾರಾದವು. ತತ್ ಶಿವತತ್ತ್ವ ಒಂದು, ತ್ವಂ ಆತ್ಮ ತತ್ತ್ವ ಇಪ್ಪತ್ತೈದು, ಅಸಿಯ ಭಾವವು ವಿದ್ಯಾತತ್ತ್ವ ಹತ್ತು, ಭಕ್ತಿ ಸ್ವರೂಪು, ಓಂಕಾರ ಪ್ರಣವದಿಂದೆ ಬಿಟ್ಟಂಥ ಅಕ್ಷರ ತ್ರಯಂಗಳು ಆ ಮಾಕ್ಷರತ್ರಯಂಗಳು ಇಷ್ಟಲಿಂಗದ ತ್ರಿವಿಧ ಸ್ಥಾನದಲ್ಲಿವಿಧಾಯಕ ವಾಗಿರ್ಪವು. ಅದು ಹೇಗೆಂದಡೆ, ಅನಂತ ತತ್ತ್ವ. ಭವನ ಬ್ರಹ್ಮಾಂಡಾದಿ ಗಳೆಲ್ಲವನು ತೂರ್ಯ ತತ್ತ್ವ ಒಳಕೊಂಡಿರ್ಪುದು. ಆ ತತ್ತ್ವಂಗಳನೇ ಮೂವತ್ತಾರು ತತ್ತ್ವಂಗಳೊಳಕೊಂಡಿರ್ಪವು. ಆ ಮೂವತ್ತಾರು ತತ್ತ್ವಂ ಗಳನೇ ಪದತ್ರಯಂಗಳೊಳಕೊಂಡಿರ್ಪವು. ಆ ಪದತ್ರಯಂಗಳನೇ ಆ ಉಮಾಕ್ಷರ ತ್ರಯಂಗಳೊಳಕೊಂಡಿರ್ಪವು. ಆ ಅ–ಉ-ಮಾಕ್ಷರ ತ್ರಂತುಗಳೇ ಆ ಇಷ್ಟಲಿಂಗ ದಲ್ಲಿ ತ್ರಿವಿಧಸ್ಥಾನದಲ್ಲಿ ನೆಲಸಿ, ನಿಧಾಯವಾದ ಅಕ್ಷರವು ದೃಕ್ಕಿನಲ್ಲಿ ತೋರು ತಿರ್ಪುದ. ಅಕಾರವೇ ಶಿವತತ್ತ್ವ ಸ್ವರೂಪವಾಗಿ, ಉಕಾರವೇ ಆತ್ಮತತ್ತ್ವ ಇಪ್ಪತ್ತೈದರ ಸ್ವರೂಪವಾಗಿ, ಮಕಾರವೇ ವಿದ್ಯಾತತ್ತ್ವ ನೂರೆಂಟರ ಸ್ವರೂಪ ವಾಗಿ, ತೂರ್ಯ ತತ್ತ್ವ ಸ್ವರೂಪವಾಗಿ, ಭಾವತತ್ತ್ವ ಸ್ವರೂಪವಾಗಿ, ತತ್ ಪದ ಸ್ವರೂಪವಾಗಿ, ತ್ವಂ ಪದ ಸ್ವರೂಪವಾಗಿ, ಅಸಿಪದ ಸ್ವರೂಪವಾಗಿ, ಅ–

ಉ–ಮಾಕ್ಷರತ್ರಯ ಸ್ವರೂಪವಾಗಿ. ಅಂಗತ್ರಯ ಸ್ವರೂಪವಾಗಿ, ಲಿಂಗತ್ರಯ ಸ್ವರೂಪವಾಗಿ, ಭಕ್ತಿತ್ರಯ ಸ್ವರೂಪವಾಗಿ, ಗುರುತ್ರಯ ಸ್ವರೂಪವಾಗಿ, ಜಂಗಮತ್ರಯ ಸ್ವರೂಪವಾಗಿ, ಪ್ರಸಾದ ತ್ರಯ ಸ್ವರೂಪವಾಗಿ, ಪಾದೋದಕ ತ್ರಯ ಸ್ವರೂಪವಾಗಿ, ವಿಭೂತಿ ತ್ರಯ ಸ್ವರೂಪವಾಗಿ, ರುದ್ರ "ತ್ರಯ ಸ್ವರೂಪ ವಾಗಿ, ಕ್ರಿಯಾಜ್ಞಾನ ಭಾವಾಚರಣೆ ಸ್ವರೂಪವಾಗಿ. ಮಾರ್ಗಕ್ರಿಯಾ ತ್ರಿವಿಧ ಸ್ವರೂಪವಾಗಿ. ಮೀರಿದ ಕ್ರಿಯಾ ತ್ರಿವಿಧ ಸ್ವರೂಪವಾಗಿ, ಸರ್ವಾಚಾರ ಸಂಪತ್ತಿ ನಾಚರಣ ಸ್ವರೂಪವಾಗಿ, ದೃಕ್ಕಿನಲ್ಲಿ ತೋರುತಿರ್ಪುದು. ಈ ಪ್ರಕಾರದಲ್ಲಿ ಎಲ್ಲ ತಾನಾಶ್ರಯಮಾಗಿ ನಿರುಪಮಲಿಂಗವೇದ್ಯಶರಣನಲ್ಲಿ ಉಪಮಿಸಬಾರದ. ಮಹಾಘನ ಲಿಂಗದಲ್ಲಿ ಕೂಡಿದಂಥ ಶಿವಶರಣರಲ್ಲಿ ಪರಿಪೂರ್ಣತ್ವವನೈದಿದ ಮಹಾ ಘನಲಿಂಗವು ತನಗಾಶ್ರಯರಹಿತವಾಗಿ, ಎಲ್ಲ ತತ್ತ್ವಂಗಳಿಗೆ ತಾನೇ ಆಶ್ರಯವಾಗಿ ತನ್ನಲ್ಲಿ ಗರ್ಭೀಕೃತವಾಗಿರ್ಪ ತತ್ತ್ವ ನಿರ್ಣಯವೆಂತೆಂದೊಡೆ : ತತ್ತ್ವ ಮೂರು ತೆರನಾಗಿಹುದು. ಅದಕ್ಕೆ ವಿವರ ; ಆತ್ಮ ತತ್ತ್ವ ಇಪ್ಪತ್ತೈದು ತೆರನು ; ಅವಕ್ಕೆ ವಿವರ : ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಎಂಬ ಸ್ಥೂಲ ಭೌತಿಕ ಐದು, ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು, ವಾಗಾದಿ ಕರ್ಮೇಂದ್ರಿ ಯಂಗಳೈದು, ಪ್ರಾಣಾದಿ ವಾಯುಗಳೈದು. ಅಂತಃಕರಣ ಚತುಷ್ಟಯಂಗಳು ನಾಲ್ಕು, ಜೀವನೊಂದು: ಅಂತು ಆತ್ಮ ತತ್ತ್ವ ಇಪ್ಪತ್ತೈದು ತೆರನು ; ಯಜ ಮಾನ ತತ್ತ್ವವು ಪಂಚ ವಿಂಶತಿ ಪ್ರಕಾರವು.

ಇನ್ನು ಇಪ್ಪರ ಮೇಲೆ ವಿದ್ಯಾತತ್ತ್ವ ಹತ್ತು ತೆರನು. ತೂರ್ಯ ತತ್ವವು ದಶವಿಧ ಪ್ರಕಾರವು. ಅವಕ್ಕೆ ವಿವರ : ಶಾಂತ್ಯತೀತೆ, ಶಾಂತ್ಯತೀತಕಲಾ ಪರ್ಯಾಯವುನ್ನುಳ್ಳ ಪರಾಶಕ್ತಿ ; ಶಾಂತಿ, ಶಾಂತಿಕಲಾಪರ್ಯಾಯವನ್ನುಳ್ಳ ಆದಿಶಕ್ತಿ ; ವಿದ್ಯಾ ವಿದ್ಯಾಕಲಾ ಪರ್ಯಾಯವನುಳ್ಳ ಇಚ್ಛಾಶಕ್ತಿ ; ಪ್ರತಿಷ್ಠೆ, ಪ್ರತಿಷ್ಠಕಲಾ ಪರ್ಯಾಯವನ್ನುಳ್ಳ ಜ್ಞಾನಶಕ್ತಿ : ನಿವೃತ್ತಿಕಲಾ ಪರ್ಯಾಯವ ನುಳ್ಳ ಕ್ರಿಯಾಶಕ್ತಿ—ಈ ಅಯ್ದು ಈ ಪಂಚವಿದವುವು.

ಶಿವಸಾದಾಖ್ಯ, ಶಿವಸಾದಾಖ್ಯ ಸ್ವರೂಪಮಾದ ಪ್ರಸಾದಲಿಂಗ. ಅಮೂರ್ತಿ ಸಾದಾಖ್ಯ ಅಮೂರ್ತಿಸಾದಾಖ್ಯ ಸ್ವರೂಪವಾದ ಜಂಗಮಲಿಂಗ, ಮೂರ್ತಿ

ಸಾದಾಖ್ಯ, ಮೂರ್ತಿ ಸಾದಾಖ್ಯ ಸ್ವರೂಪಮಾದ ಶಿವಲಿಂಗ, ಕರ್ತುಸಾದಾಖ್ಯ, ಕರ್ತುಸಾದಾಖ್ಯಸ್ವರೂಪಮಾದ ಗುರುಲಿಂಗ, ಕರ್ಮಸಾದಾಖ್ಯ, ಕರ್ಮಸಾದಾಖ್ಯ ಸ್ವರೂಪಮಾದ ಆಚಾರಲಿಂಗ–ಎಂದು ಹೇಳಿಸುವಸಾಧಾಖ್ಯಲಿಂಗಗಳು ಪಂಚಕವು. ಅಂತು ಅದಾಗಿ ವಿದ್ಯಾತತ್ತ್ವ ಹತ್ತು ತೆರನು; ತೂರ್ಯತತ್ತ್ವವು ದಶವಿಧ ಪ್ರಕಾರವು. ಅಂತು ದ್ವಿತೀಯ ತತ್ತ್ವ ಮೂವತ್ತೈದು; ಇಂತಿವೆಲ್ಲವಕ್ಕೆಯು ಉತ್ತರ ತತ್ತ್ವ ವಾಗಿ ಇಪ್ಪತ್ತೈದು ತತ್ತ್ವಗಳಿಗೆ ಆಶ್ರಯವಾಗಿರುತ್ತಿಹ ಶಿವತತ್ತ್ವ ಒಂದು–ನಿಃಕಲ ಪರಶಿವತತ್ತ್ವವು ಏಕವು. ಅಂತು ತತ್ತ್ವ ಮೂವತ್ತಾರು ತೆರನು. ಆತ್ಮತತ್ತ್ವ ಇಪ್ಪತ್ತೈದು, ವಿದ್ಯಾತತ್ತ್ವ ಹತ್ತು, ಶಿವತತ್ತ್ವ ಒಂದು–ಈ ಪ್ರಕಾರವೇ ತತ್ತ್ವ ಮಸ್ಯಾದಿ ವಾಕ್ಯಾರ್ಥವು ಕಾಣಲಾಯಿತ್ತು. ಅದು ಹೇಗೆಂದಡೆ, ತತ್ಪದವೆಂದು–ತ್ವಂ ಪದವೆಂದು–ಅಸಿ ಪದವೆಂದು–ಅಂಗ ಲಿಂಗ ಸಂಗವೆಂದು, ಜ್ಞಾತೃ-ಜ್ಞಾನ-ಜ್ಞೇಯವೆಂದು, ಜೀವ ಜಗತ್ಪರಮೈಕ್ಯವೆಂದು, ಮನ-ಮನನ-ಮನನೀಯ ವೆಂದು, ದ್ವೈತಾದ್ವೈತಯೋಗಮಾರ್ಗವೆಂದು, ಮೂರು ತೆರನು. ಆ ಪದತ್ರಯದ ದಲ್ಲಿ ತತ್ಪದವೆಂಬುದರರ್ಥವೇನಯ್ಯಾ ಎಂದೊಡೆ ಭಾವನಾಮ ಒಂದಾಗಿರ್ದ ಶಿವ ತತ್ತ್ವವು. ತ್ವಂ ಪದದರ್ಥವೇನಯ್ಯ ಎಂದರೆ, ಶಿವತತ್ತ್ವವೆಂಭಿಧಾನದೊಡನೆ ಏಕವಾಗಿರ್ದ ಇಪ್ಪತ್ತೈದು ತೆರನಾಗುತ್ತಲಿರ್ದ ಆತ್ಮತತ್ತ್ವವು. ಅಸಿಪದವೆಂಬುದ ರರ್ಥವೇನಯ್ಯ ಎಂದರೆ, ತೂರ್ಯ ನಾಮ ಒಂದಾಗಿರ್ದ ಶಿವತತ್ತ್ವ ಜ್ಞಾನವೆಂಬ ಅಭಿಧಾನದೊಡನೆ ಏಕಮಾಗಿರ್ದ ಹತ್ತು ತೆರನಾಗುತ್ತಿರ್ದ ವಿದ್ಯಾತತ್ತ್ವವು. ಈಪದ ತ್ರಯದ ಏಕಾರ್ಥವು.

ಆ ಶಿವತತ್ತ್ವದಲ್ಲಿ ತೋರಿದಾತ್ಮತತ್ತ್ವವು ೨೫. ಆ ಶಿವತತ್ತ್ವದ ಪ್ರಕಾರವು ವಿದ್ಯಾತತ್ವದ ಬಲದಿಂದ ಆಶಿವಪದ ತಾನೆಯಾಯಿತ್ತಾಗಿ ಆ ನಿಃಕಲ ಪರಶಿವ ಪದವು ಸ್ವಯವೆ ಆಯಿತ್ತಾಗಿ ಅದಕ್ಕೆ ಸಾಕ್ಷಿಯಹ ವಿದ್ಯೆಯೆಂಬ ಶಿವಪದದ ಘನ ದೃಕ್ಕು ಅನುಮಿಷ ನಿರೀಕ್ಷಣೆಯಾದಲ್ಲಿ ತೋರುತ್ತಿಹುದೆಂದು ಶಿವತತ್ತ್ವದಿಂದಾದ ಆತ್ಮತತ್ತ್ವ ಇಪ್ಪತ್ತೈದು. ಆ ಶಿವತತ್ತ್ವದ ಪ್ರಕಾಶದಿಂದಾದ ವಿದ್ಯಾತತ್ತ್ವ ಹತ್ತು. ಅದರ ಬಲದಿಂದೆ ಚಿತ್ತೇ ಅಂಗ, ಚಿದ್ಘನಲಿಂಗವೇ ಪ್ರಾಣವಾಗಿ ಕಾಣಿಸುತ್ತಿಹುದೆಂದು ಚನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಲಿದ್ದರು."

ಹೀಗೆ ಹೇಳಿದ ಮೂವತ್ತಾರು ತತ್ತ್ವಗಳಲ್ಲಿ ಮೊದಲಿನ ಹನ್ನೊಂದು ಲಿಂಗ ತತ್ತ್ವಗಳು. ಉಳಿದ ಇಪ್ಪತ್ತೈದು ಅಂಗ ತತ್ತ್ವಗಳು. ಷಟ್‌ಸ್ಥಲಾಂಗರಿಂದ ಉಪಾಸ್ಯವಾದ ಷಡ್ಲಿಂಗಗಳಲ್ಲಿ ಕರ್ಮಸಾದಾಖ್ಯ ದಿಂದ ಕ್ರಿಯಾಲಿಂಗಾಂತರ್ಗತ ಆಚಾರಲಿಂಗವೂ ಕರ್ತೃಸಾದಾಖ್ಯದಿಂದ ಕ್ರಿಯಾ ಲಿಂಗಾಂತರ್ಗತ ದ್ವಿತೀಯ ಗುರುಲಿಂಗವೂ ಉಂಟಾಗುವವು. ಆಧಾರಚಕ್ರದ ಚತುರ್ದಳಯುಕ್ತವಾದ ಸುಚಿತ್ತಪದ್ಮದಲ್ಲಿ ಮೂರ್ತಿಗೊಂಡು ಭಕ್ತಾಂಗನಿಂದ ಉಪಾಸ್ಯವಾದುದೇ ಆಚಾರಲಿಂಗ ಅಂತೆಯೇ ಸ್ವಾಧಿಷ್ಠಾನಚಕ್ರದ ಷಡ್‌ದಳ ಸಂಯುಕ್ತವಾದ ಸುಬುದ್ಧಿ ಪದ್ಮದಲ್ಲಿ ಮೂರ್ತಿಗೊಂಡು ಮಾಹೇಶ್ವರಾಂಗನಿಂದ ಉಪಾಸ್ಯವಾಗುವುದೇ ಗುರುಲಿಂಗ. ಜ್ಞಾನಶಕ್ತಿ, ನಿಷ್ಠಾಭಕ್ತಿ, ಸುಬುದ್ಧಿಹಸ್ತ, ಜಿಹ್ವಾಮುಖ, ರಸಪದಾರ್ಥ, ಸುರಸಪ್ರಸಾದ ಸಕೀಲ ಸಾಹಿತ್ಯದಿಂದ ಮಾಹೇಶ್ವ ರಾಂಗನು ಗುರುಲಿಂಗವನ್ನು ಆರಾಧಿಸುತ್ತಾನೆ. ಮಾಹೇಶ್ವರಾಂಗನು ನಿಷ್ಠಾಭಕ್ತಿ ಯಿಂದ ಕೂಡಿದ್ದರೆ ಗುರುಲಿಂಗವು ಪ್ರತಿಷ್ಠಾಕಳೆಯಿಂದ ಜ್ಞಾನಶಕ್ತಿಯಿಂದ ಕೂಡಿ ರುತ್ತದೆ.

ತ್ಯಾಗಾಂಗವು ಭಕ್ತಾಂಗ ಮಾಹೇಶ್ವರಾಂಗ ಎಂದು ಎರಡು ತೆರನಾದಂತೆ ಇಷ್ಟಲಿಂಗವು ಆಚಾರಲಿಂಗ, ಗುರುಲಿಂಗವೆಂದು ಎರಡು ತೆರನಾಗುತ್ತದೆ. ಬೀಜ ದಿಂದ ಎರಡೆಲೆಯುಳ್ಳ ಅಂಕುರ ಹೊರಹೊಮ್ಮುವಂತೆ–ಇಷ್ಟಲಿಂಗವೆಂಬ ಬೀಜ ದಿಂದ ಆಚಾರಲಿಂಗ–ಗುರುಲಿಂಗವೆಂಬೆರಡು ಎಲೆಯುಳ್ಳ ಅಂಕುರವುಂಟಾಯಿತು. ನೆಲ ಬಿಟ್ಟು ಜಲವಿರದಂತೆ ಭಕ್ತನ ಬಿಟ್ಟು ಮಾಹೇಶ್ವರನಿಲ್ಲ; ಆಚಾರಲಿಂಗವ ಬಿಟ್ಟು ಗುರುಲಿಂಗವಿರದು. ಕ್ರಿಯೆಯ ಬಿಟ್ಟು ಕರ್ತೃವಿರನು.

ಮಾಹೇಶ್ವರಾಂಗನು ಇಹಲೋಕವೀರ, ಪರಲೋಕವೀರ, ಸಹಜ(ಲಿಂಗ) ವೀರ ಎಂದು ಮೂದೆರನಾದಂತೆ ಆತನ ಆರಾಧ್ಯಮೂರ್ತಿಯಾದ ಗುರುಲಿಂಗವೂ ಸಹ ದೀಕ್ಷಾಲಿಂಗ, ಶಿಕ್ಷಾಲಿಂಗ ಸ್ವಾನುಭಾವಲಿಂಗವೆಂದು ಮೂದೆರನಾಗುತ್ತದೆ.

ಮಾಹೇಶ್ವರಾಂಗನು ಮಾಹೇಶ್ವರನ ಭಕ್ತ, ಮಾಹೇಶ್ವರ ಮಾಹೇಶ್ವರ ಮುಂತಾಗಿ ಆರು ಬಗೆಯಾಗುವಂತೆ ಗುರುಲಿಂಗವೂ ಗುರುಲಿಂಗದೊಳಗಿನ ಆಚಾರ ಲಿಂಗ, ಗುರುಲಿಂಗದೊಳಗಿನ ಗುರುಲಿಂಗ, ಗುರುಲಿಂಗದೊಳಗಿನ ಶಿವಲಿಂಗ, ಗುರುಲಿಂಗದೊಳಗಿನ ಜಂಗಮಲಿಂಗ, ಗುರುಲಿಂಗದೊಳಗಿನ ಪ್ರಸಾದಲಿಂಗ, ಗುರುಲಿಂಗದೊಳಗಿನ ಮಹಾಲಿಂಗವೆಂದು ಆರು ಬಗೆಯಾಗುತ್ತದೆ. ಮುಂದೆ ಒಂಬತ್ತು ಬಗೆಯಾಗುವುದನ್ನು ವಿವರಿಸಲಾಗುತ್ತದೆ.

"ಮಾಹೇಶ್ವರಸ್ಥಲೇ ಸಂತಿ ಸ್ಥಲಾನಿ ನವ ತಾಪಸ ।
ಕ್ರಿಯಾಗಮಸ್ಥಲಂ ಪೂರ್ವಂ ತತೋ ಭಾವಾಗಮಸ್ಥಲಂ ॥
ಜ್ಞಾನಾಗಮಸ್ಥಲಂ ಚಾಥ ಸಕಾಯಸ್ಥಲಮೀರಿತಂ ।
ತತೋ ಽ ಕಾಯಸ್ಥಲಂ ಪ್ರೋಕ್ತಂ ಪರಕಾಯಸ್ಥಲಂ ತತಃ ॥
ಧರ್ಮಾಚಾರಸ್ಥಲಂ ಚಾಥ ಭಾವಾಚಾರಸ್ಥಲಂ ತತಃ।
ಜ್ಞಾನಾಚಾರಸ್ಥಲಂ ಚೇತಿ ಕ್ರಮಾದೇಷಾಂ ಭಿದೋಚ್ಯತೇ ॥"

ವಿಶ್ವಾತ್ಮನೇ ಇಷ್ಟಲಿಂಗ. ಬ್ರಹ್ಮಚಕ್ರವೆಂಬ ಹೆಸರುಳ್ಳ ಸಹಸ್ರಾರವೇ ತ್ಯಾಗಾಂಗ. ಅಲ್ಲಿರುವ ಚೈತನ್ಯವೇ ಇಷ್ಟಲಿಂಗದ ಮೂಲಕಳೆ. ಅದನ್ನು ನಿಷ್ಕಲ ಶಿವ ಎಂಬರು. ಅದುವೇ ಗುರು ಕರುಣೆಯಿಂದ ಬಹಿಷ್ಕರಿಸಿ ಕರದಿಷ್ಟ ವಾಗಿ ಬರುತ್ತದೆ. ಕರದಿಷ್ಟಲಿಂಗವೇ ಆಚಾರಲಿಂಗ ಗುರುಲಿಂಗವೆಂದು ಎರಡಾ ಗುತ್ತದೆ. ಆಚಾರಲಿಂಗದ ಒಂಬತ್ತು ಪ್ರಕಾರಗಳನ್ನು ಭಕ್ತ ಸಂಪುಟದಲ್ಲಿ ಬಿತ್ತರಿಸಲಾಗಿದೆ. ಈಗ ಗುರುಲಿಂಗ ಪ್ರಕಾರಗಳನ್ನು ಬಿತ್ತರಿಸಲಾಗುತ್ತದೆ:

ತವಂದ ಮೇಲೆ ತೋರುವ ತಿಳಿಬೆಳಗೇ ಗುರುಲಿಂಗ. ಸಾಸಿರ ನೇಸರ ಬೆಳಗನ್ನು ಕಿಳ್ಮಾಡಿ ಬೆಳಗುವ ಆ ಪರಮ ಚಿತ್ಕಳೆಯನ್ನೇ ಶ್ರೀಗುರು ಪರಮ ಕರುಣೆಯಿಂದ ಭಾವ ಮನ ನಯನಗಳಿಂದ ಬರಸೆಳೆದು ಬಗೆದಳೆದು ಸತ್ಕಳೆ ಯಾಗಿಸಿ ಶಿಷ್ಯನ ವಾಮಕರಕಮಲದಲ್ಲಿ ನೆಲೆಗೊಳಿಸುವನು. ಇದುವೇ ಸತ್ಕಳಾ ಮಯ ಇಷ್ಟಲಿಂಗಮೂರ್ತಿ ! ಇದರ ಈ ಸದ್ಗರ್ಭದಲ್ಲಿ ಆಚಾರಲಿಂಗ–ಗುರು ಲಿಂಗ, ತ್ಯಾಗಾಂಗ, ಭಕ್ತಸ್ಥಲ–ಮಾಹೇಶ್ವರಸ್ಥಲ ನಕಾರ–ಮಕಾರಮಂತ್ರ, ಕ್ರಿಯಾ ಶಕ್ತಿ-ಜ್ಞಾನಶಕ್ತಿ, ಗಂಧಪ್ರಸಾದ–ರಸಪ್ರಸಾದ, ಘ್ರಾಣಮುಖ–ಜಿಹ್ವೆಮುಖ, ಜಾಗ್ರತ್–ಸ್ವಪ್ನ ಈ ಹದಿನಯ್ದು ತತ್ತ್ವಗಳು ಹುದುಗಿರುವುವು. ಇದು ಕಾಯಾ ಧಾರ, ಕಳಾಕಾರ.

ಇಷ್ಟಲಿಂಗದ ಕಳೆಯಲ್ಲಿ ಆದಿತ್ಯನಂತೆ ಆಚಾರಲಿಂಗ, ಚಂದಿರನಂತೆ ಗುರು ಲಿಂಗ ಉದಿಸುವವು. ಈ ಗುರುಲಿಂಗವೆಂಬ ಚಂದ್ರಮನ ನವಕಿರಣಗಳೇ ಕ್ರಿಯಾ ಗಮ, ಭಾವಾಗಮ, ಜ್ಞಾನಾಗಮ; ಸಕಾಯ, ಅಕಾಯ, ಪರಕಾಯ; ಧರ್ಮಾ ಚಾರ, ಭಾವಾಚಾರ, ಜ್ಞಾನಾಚಾರ–ಎಂಬ ನವಲಿಂಗ ಸ್ಥಳಗಳು. ಈ ಒಂಬತ್ತು ಲಿಂಗಗಳು ಆಗಮಲಿಂಗ, ಕಾಯಲಿಂಗ, ಆಚಾರಲಿಂಗತ್ರಯದಲ್ಲಿ ಕ್ರಮವಾಗಿ

ಒಂದೊಂದರಲ್ಲಿ ಮೂರು ಮೂರು ಪ್ರಭೇದೋರುಪವು. ಅಂದರೆ ಆಗಮಲಿಂಗ ದಲ್ಲಿ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಲಿಂಗಗಳು, ಕಾಯಲಿಂಗದಲ್ಲಿ ಸಕಾಯ, ಅಕಾಯ, ಪರಕಾಯ ಲಿಂಗಗಳು, ಆಚಾರ ಲಿಂಗದಲ್ಲಿ ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಲಿಂಗಗಳು ಉತ್ಪನ್ನವಾಗುವವು. ಇವು ಅಂಗಾಂಗ ಗಳಲ್ಲಿ ಅವ್ಯಕ್ತವಾಗಿದ್ದು ಗುರು ಸಂಸ್ಕಾರದಿಂದ ಸುವ್ಯಕ್ತವಾಗುತ್ತವೆ. ಅನು ಸಂಧಾನಕ್ಕೆ ಅನುವಾಗುತ್ತವೆ. ತ್ಯಾಗಾಂಗಗತ ಸತ್ಕಳೆಯು ಮೊದಲು ಕ್ರಿಯಾ ಸಂಪತ್ತಾಗಿ ಆಚರಣೆಯಲ್ಲಿ ಬರುತ್ತದೆ. ತ್ಯಾಗಾಂಗಕ್ಕೆ ಕ್ರಿಯಾಚರಣೆಯೇ ಇಷ್ಟ ವಾದುದು. ಗುರುದೇವನಿಂದ ಕ್ರಿಯಾಚರಣೆಯ ಕಳೆಯನ್ನರಿಯಬೇಕು.

ಕರ್ಮಮೀಮಾಂಸೆ ಜಟಿಲವಾದುದು; ಕುಟಿಲವಾದುದು. ಜಡ ಕರ್ಮ ಗಳನ್ನು ತ್ಯಜಿಸಿ ಕುಶಲಕ್ರಿಯೆಗಳನ್ನು ಕೈಕೊಳ್ಳಬೇಕಾದರೆ ಗುರುದೇವನ ಕೃಪಾ ಬೋಧೆ ಅಗತ್ಯ. ಷಡ್ಗುಣೈಶ್ವರ್ಯ ಸಂಪನ್ನ ಶ್ರೀ ಗುರು. ಶಿವಾತ್ಮ ವಿದ್ಯಾ ಸಂಪನ್ನ ಶ್ರೀ ಗುರು. ಆತನು ಶಿಷ್ಯನಿಗೆ "ಕ್ರಿಯಾಗಮ" ಬೋಧೆಯನ್ನು ಮುಂದಿನಂತೆ ಮಾಡುತ್ತಾನೆ; ಕಾಯವಿಡಿದಾತ್ಮರಾಶಿಗೆ "ಕ್ರಿಯಾಗಮ"ವೇ ಪ್ರಗತಿಯ ಪ್ರಥಮ ಸೋಪಾನ; ಪರಮ ಪಾವನ—ಎಂಬುದನ್ನು ಅನುವಿಡಿದು ಅರುಹುತ್ತಾನೆ:

## ೧. ಕ್ರಿಯಾಗಮಸ್ಥಳ

ಭವಕರ್ಮಗಳಿಗೆ ನಿಲಯವಾದ ಈ ಕಾಯವು ಶಿವಕ್ರಿಯೆಗಳಿಗೆ ನಿಲಯವಾಗಬೇಕು. ಸತ್ಯ ಶುದ್ಧ ಕಾಯಕಗಳು, ನಿತ್ಯ ನಡೆಸುವ ಅರ್ಚನೆಯು ಶಿವಕ್ರಿಯೆಗಳಾಗಿವೆ. ಕ್ರಿಯಾ ಶಕ್ತಿಯೂ ಅಹುದು ; ಲಿಂಗವೂ ಅಹುದು, ಕಳೆಯಿಲ್ಲದೆ ಲಿಂಗವಿಲ್ಲ, ಲಿಂಗವಿಲ್ಲದೆ ಕಳೆಯಿಲ್ಲ. ಪರಶಿವನಲ್ಲಿರುವ ಕ್ರಿಯಾಶಕ್ತಿ ಪರಶಿವರೂಪವಾಗಿಯೇ ಇರುವುದು. ಪರಶಿವನಿಂದಲೇ ಬರುವುದು. ಒಮ್ಮೆ ಸೃಷ್ಟಿಯ ಚಿಂತನವನ್ನು ಮಾಡುವ ಆ ಪರಶಿವನ ಸಹಸ್ರಾಂಶದಿಂದ ಪರಾಶಕ್ತಿ, ಆ ಪರಾಶಕ್ತಿಯ ಸಹಸ್ರಾಂಶದಿಂದ ಆದಿಶಕ್ತಿ, ಆ ಆದಿಶಕ್ತಿಯ ಸಹಸ್ರಾಂಶದಿಂದ ಇಚ್ಛಾಶಕ್ತಿ, ಆ ಇಚ್ಛಾಶಕ್ತಿಯ ಸಹಸ್ರಾಂಶದಿಂದ ಜ್ಞಾನಶಕ್ತಿ, ಆ ಜ್ಞಾನಶಕ್ತಿಯ ಸಹಸ್ರಾಂಶದಿಂದ ಕ್ರಿಯಾಶಕ್ತಿ ಉದಯವಾಗುವವೆಂದು ವಾತುಲತಂತ್ರ ವಚಿಸಿದೆ:

"ಜ್ಞಾನಶಕ್ತಿ ಸಹಸ್ರಾಂಶಾತ್ಕ್ರಿಯಾಶಕ್ತಿ ಸಮುದ್ಭವಃ!"

ಧಾರಣ, ಧ್ಯಾನ, ಅರ್ಚನ, ಚಲನಾದಿಗಳಿಗಾಗಿ ಕ್ರಿಯಾಶಕ್ತಿ ಕಾಯವಿಡಿದಿರುತ್ತದೆ. ತ್ರಿವಿಧ ಕಾಯಗಳಲ್ಲಿ ತ್ರಿವಿಧರೂಪಾಗಿ ಕ್ರಿಯಾಶಕ್ತಿ ನೆಲೆಗೊಂಡಿರುತ್ತದೆ. ಈ ತ್ರಿವಿಧ ಕ್ರಿಯೆಗಳು ಶಿವಕ್ರಿಯೆಗಳಾಗಬೇಕೆಂದು ಶಿವಾಗಮಗಳ ಶಾಸನ.

ಕ್ರಿಯಾ, ಚರ್ಯ, ಯೋಗ, ಜ್ಞಾನ ಎಂಬಿವು ಆಗಮದ ನಾಲ್ಕು ಪಾದ, ಇವುಗಳಲ್ಲಿ ಕ್ರಿಯೆಯು ಮೊದಲಿನ ಪಾದವಾಗಿವೆ, ಇದರಿಂದ ಕ್ರಿಯೆಗೆ ಆಗಮವಿತ್ತ ಪ್ರಾಧಾನ್ಯತೆ ವ್ಯಕ್ತವಾಗುತ್ತದೆ.

'ಆಗಮ' ಎಂಬುದು ಒಂದು ಲಿಂಗವೂ ಆಗಿದೆ. ಆಗಮಲಿಂಗವು ಗುರುಲಿಂಗದಿಂದ ಉದಯವಾಗುತ್ತದೆ. ಆಗಮಲಿಂಗದಲ್ಲಿ ಕ್ರಿಯಾಗಮ, ಭಾವಾಗಮ ಜ್ಞಾನಾಗಮಗಳು ಜನಿಸುವವು. ಲಿಂಗನು ಅಕ್ರಿಯನಲ್ಲ.

"ಶಿವೋ ಹಿ ಪರಮಃ ಸಾಕ್ಷಾತ್ ಪೂಜಾ ತಸ್ಯ ಕ್ರಿಯೋಚ್ಯತೇ ।
ತತ್ಪರಾ ಆಗಮಾ ಯಸ್ಮಾತ್ತದುಕ್ತೋಽಯಂ ಕ್ರಿಯಾಗಮಃ ॥"

ಆ ಪರಶಿವನೇ ಪ್ರತ್ಯಕ್ಷವಾಗಿ ಗುರುಲಿಂಗವಾಗಿ ಶೋಭಿಸುತ್ತಾನೆ. ಪರ ಶಿವ ರೂಪಾದ ಗುರುಲಿಂಗದೇವನ ಪೂಜೆಯೇ ಕ್ರಿಯೆಯೆಂದೆನಿಸುತ್ತದೆ. ಇಂತಹ ಕ್ರಿಯೆಯನ್ನು ಬೋಧಿಸುವ ಶಬ್ದಗಳೇ ಆಗಮವೆನಿಸುತ್ತವೆ. ಇವು ಇನ್ನುಳಿದ ಜಗತ್ತಿನ ಜನಾದರಣೆಗೆ ಮತ್ತು ಅನುಕರಣೆಗೆ ಕಾರಣಗಳಾಗುತ್ತವೆ. ಇದರಿಂದಾಗಿ ಇದು 'ಕ್ರಿಯಾಗಮ' ವೆನಿಸಿದೆ. ಕ್ರಿಯೆಗಳು ತನ್ನಲ್ಲಿ ಅಳವಟ್ಟರೆ ಆಗ ಅದು 'ಕ್ರಿಯಾಗಮ' ವೆನಿಸುತ್ತದೆ. 'ಆಗಮ' ಅಂದರೆ ಅಳವಡು ಎಂದರ್ಥ.

ಶಿವಕ್ರಿಯೆಗಳನ್ನು ಗುರುತಿಸಬೇಕಾದರೆ ಅಲ್ಪಕ್ರಿಯೆಯಿಂದ ಬಹುಫಲವನ್ನು ಪಡೆಯಬೇಕಾದರೆ ಆಗಮದರ್ಶಿತ್ವ ಅತ್ಯಗತ್ಯ. ಏಕೆಂದರೆ "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ" ನಿರ್ಮಲ ಕರ್ಮಗಳೇ ಆಚರಣೀಯ ಗಳೆಂದು ಶ್ರುತಿ ಸಮ್ಮತಿ.

"ಅಲ್ಪಕ್ರಿಯಂ ಬಹುಫಲಂ ವೀರಶೈವಂ ಮಹೇಶ್ವರಿ" ಎಂದು ವಾತುಲ ತಂತ್ರಾಭಿಪ್ರಾಯ. ಅಂತೆಯೇ ಕ್ರಿಯೆಯೊಂದು ಲಿಂಗವಾಗಬೇಕಾದರೆ ಲಿಂಗ ವಾಗಿ ಅಂಗಲಿಂಗಗಳೆರಡಕ್ಕೂ ಕಳೆಯಾಗಬೇಕಾದರೆ ಆಗಮನಿರ್ದಿಷ್ಟವಾಗಲೇ ಬೇಕು ; ಆಚಾರದಿಂದ ನಿರ್ದಿಷ್ಟವಾಗಲೇಬೇಕು. ಆಗ ಕ್ರಿಯೆಯು ಉತ್ಕ್ರಾಂ ತಿಗೆ ಉಜ್ವಲ ಪ್ರಗತಿಗೆ ಸಾಧನವಾಗುತ್ತದೆ.

ಕಾರ್ಯಕಾರಣಭಾವ ಇದ್ದಾಗಬೇಕು. ಕಾಯ ಕಾರ್ಯಕ್ಕೆ ಪಂಚಭೂತಗಳು ಕಾರಣಗಳಾಗಿವೆ. ಕ್ರಿಯಾಂಗಕ್ಕೂ ಭೂತಾಂಗಕ್ಕೂ ಜನ್ಯ ಜನಕ ಭಾವವಿದೆ. ಹೀಗಿರುವಾಗ ಜನಕನಲ್ಲಿರುವ ಗುಣಧರ್ಮಗಳು ಜನ್ಯದಲ್ಲಿ ಬರುವುದು-ಇರು ವುದು ಸಹಜವಾಗಿದೆ. ಪಂಚಭೂತಗಳ ಕ್ರಿಯಾಭೇದಗಳಿವು.

"ಸಕಲ ಚರಪ್ರಾಣಿಗಳ ಭಾರವೆಲ್ಲವ ತಳೆದುಕೊಂಡಿರುವಂಥಾದ್ದೇ ಪೃಥ್ವೀ ತತ್ತ್ವ ಮಾಡುವಂಥ ಉದ್ಯೋಗವು. ಪಿಂಡೀಕರಣ, ಹಂಡಿಹಿಟ್ಟು, ಹುಡಿ ಮಣ್ಣು, ಧೂಳು ಪಾಂಸಾದಿಗಳಿಗೆ ತನ್ನ ದ್ರವವನ್ನು ಕೊಟ್ಟು ಮುದ್ದೆಯನ್ನು ಕಟ್ಟುವ ಕಾರ್ಯಮಾಡುವುದೇ ಅಪ್ಪು ತತ್ತ್ವದ ಉದ್ಯೋಗವು. ತರಗೆಲೆ ತೃಣ ಕಾಷ್ಠಗಳನ್ನು ಸುಟ್ಟು ಬೂದಿಯ ಮಾಡುವ ಮತ್ತು ಹದಿನೆಂಟು ಧಾನ್ಯಗಳನ್ನು ಪಾಕಮಾಡಿಕೊಡುವುದೇ ಅಗ್ನಿ ತತ್ತ್ವದ ಉದ್ಯೋಗವು. ಸ್ವಸ್ಥಾನದಲ್ಲಿರ್ಪ ವಸ್ತುಗಳನ್ನು ಹೊತು ಕೊಂಡು ಹೋಗಿ ಪರ ಎಲ್ಲೆ, ಪರಮಂಡಲ, ಪರಸ್ಥಾನ

ಕ್ಕೊಯ್ದು ಹಾಕಿಬಿಡುವುದೇ ವಾಯು ಮಾಡುವ ಉದ್ಯೋಗವು. ಸಮಸ್ತ ಚರಾಚರ ಪ್ರಾಣಿಗಳಂ ಮುಂದೆ ಮುಂದೆ ಚಲಿಸುವುದಕ್ಕೆ-ತೆರವುಕೊಡುವುದೇ ಆಕಾಶ ತತ್ತ್ವ ಮಾಡುವ ಉದ್ಯೋಗವು. ಇವು ತಾವೇ ಪಂಚಭೂತಗಳ ಕ್ರಿಯಾ ಭೇದಂಗಳ ನಿಲುಕಡೆಗಳು."

ಹೀಗಿರುವಾಗ ಕರ್ಮೇಂದ್ರಿಯಂಗಳಿಂದ ಕೂಡಿದ ಕಾಯಕ್ಕೆ ಕ್ರಿಯೆ ಬೇಡೆಂದು ಹೇಳಲು ಸಾಧ್ಯವಿಲ್ಲ. ವಾಕ್, ಪಾಣಿ, ಪಾದ, ಗುದ, ಗುಹ್ಯ ಇವು ಅಯಿದು ಕ್ರಿಯೇಂದ್ರಿಯಗಳು.

"ಈ ಕರ್ಮೇಂದ್ರಿಯಗಳು ಕ್ರಿಯಾರೂಪವಾದ ಪಂಚ ಹೃಷೀಕಂಗಳಿಂದುಂಟಾಗಿರುತಿಹವು. ಕಡಿವ, ಕೊಯ್ಯುವ, ಕಟ್ಟುವ, ಬೀಸುವ ಮುಂತಾದ ವಸ್ತುಗಳು ಒಬ್ಬ ಆತ್ಮಾಧೀನದಿಂದಲ್ಲದೆ ಸ್ವಯಾಧೀನದಿಂದ ಚೇಷ್ಟಿಸಲರಿಯವು. ಇವು ತಮ್ಮ ತಮ್ಮ ಸಂಬಂಧವಾದ ವಿಷಯಂಗಳನ್ನು ಮನಸಾಧೀನದೊಡನೆ ಕೂಡಿಕೊಂಡು ವಾಯುವಿನ ಚೈತನ್ಯ ಬಲದಿಂದಲೇ ಗ್ರಹಿಸುತಿಹುದಾದ ಕಾರಣ ಕ್ರಿಯಾರೂಪವಾದ ಪಂಚಹೃಷೀಕಂಗಳೆಂಬ ನಾಮವು ಪ್ರಸಿದ್ಧವಾಯಿತು."

ವಾಗಿಂದ್ರಿಯಕ್ಕೆ ನಾಗವಾಯುವೇ ಮೂಲ ಚೈತನ್ಯವಾಗಿಪ್ಪುದು. ಈ ವಾಯು ವಾಸವಾಗಿದ್ದ ಕಾಲದಲ್ಲಿ ಮಾತು ಕತೆ ಪ್ರಸಂಗವನಾಡುವುದಕ್ಕೆ ಸುಸ್ಥಿರವಾಗಿ ಬರುತಿಹುದು. ಅದು ನಷ್ಟವಾಗಿ ಹೋಗಲು ನಾಲಿಗೆ ತೊದಲು ಬಿದ್ದು ಮಾತುಕತೆ ಪ್ರಸಂನಾವಡುವುದಕ್ಕೆ ಬರಲರಿಯದು. ಅಲ್ಲಿ ಆತ್ಮನು ತಾನೆ ಸರಸ್ವತಿ ಎಂಬ ಅಧಿದೇವತಾ ನಾಮದಿಂದ ಸದಾ ವಾಸವಾಗಿರುತಿಹನು.

ಹಸ್ತೇಂದ್ರಿಯಕ್ಕೆ ಕೂರ್ಮವಾಯುವೇ ಮೂಲ ಚೈತನ್ಯವಾಗಿಪ್ಪುದು. ಈ ಮೂಲಭೂತವು ವಾಸವಾಗಿದ್ದ ಕಾಲದಲ್ಲಿ ಆವುದಾ ನೊಂದಂಕದಾನ ವಿದಾನಧಾನ ಕ್ರಿಯೆಗಳಿಗೆ ಸುಸ್ಥಿರವಾಗಿರುವುದು. ಅದು ನಷ್ಟವಾಗಲು ತೋಳೆಂಬುದು ಬೀಳು ಬಿದ್ದುಕೊಂಡು ದಾನಾದಾನ ವಿದಾನ ಕ್ರಿಯೆಗಳಿಗೆ ಸುಸ್ಥಿರವಾಗಿ ಬರಲರಿಯದು. ಆತ್ಮನು ತಾನೇ ಇಂದ್ರನೆಂಬ ಅಧಿದೇವತಾ ನಾಮದಿಂದ ಸಧಾ ವಾಸವಾಗಿರುತಿಹನು.

ಪಾದೇಂದ್ರಿಯಕ್ಕೆ ಕೃಕರ ವಾಯುವೇ ಮೂಲ ಚೈತನ್ಯವಾಗಿಪ್ಪದು. ಆ ಮೂಲಭೂತವು ಪಾದೇಂದ್ರಿಯದೊಳಗೆ ವಾಸವಾಗಿದ್ದ ಕಾಲದಲ್ಲಿ ಹೋಹ ಬಾಹ ಎಡೆಯಾಟಕ್ಕೆ ಸುಸ್ಥಿರವಾಗಿರುವುದು. ಮೂಲಭೂತವು ನಷ್ಟವಾಗಿ ಹೋಗಲು ಕಾಲುಗಳು ಸರವೆಗಾಲು ಬಿದ್ದುಕೊಂಡು ಎಡೆಯಾಟಂಗಳಿಗೆ ಬರಲರಿಯವು. ಅಲ್ಲಿ ಆತ್ಮನು ನಾರಾಯಣನೆಂಬ ಅಧಿದೇವತಾ ನಾಮದಿಂದ ಸದಾ ವಾಸವಾಗಿರುತಿಹನು.

ಗುದವೆಂಬುದೊಂದು ಕ್ರಿಯಾರೂಪಮಾದ ಹೃಷೀಕಕ್ಕೆ ದೇವದತ್ತ ವಾಯುವೇ ಮೂಲ ಚೈತನ್ಯವಾಗಿಪ್ಪದು. ಆ ಮೂಲಭೂತವು ಅದರಲ್ಲಿ ವಾಸವಾಗಿದ್ದ ಕಾಲದಲ್ಲಿ ಸರ್ಜನ ವಿಸರ್ಜನ ಕ್ರಿಯೆಗಳಿಗೆ ಸುಸ್ಥಿರವಾಗಿ ಬರುವುದು ಆ ಮೂಲಭೂತವು ನಷ್ಟವಾಗಿ ಹೋಗಲು ಸರ್ಜನಾದಿಕ್ರಿಯೆಗಳಿಗೆ ಬರಲರಿಯದು. ಅಲ್ಲಿ ಆತ್ಮನು ತಾನೇ ಮೃತ್ಯುವೆಂಬ ಅಧಿದೇವತಾ ನಾಮದಿಂದ ಸದಾ ವಾಸವಾಗಿರುತಿಹನು.

ಗುಹ್ಯೇಂದ್ರಿಯಕ್ಕೆ ಧನಂಜಯ ವಾಯುವೇ ಮೂಲ ಚೈತನ್ಯ. ಈ ಮೂಲಭೂತವು ವಾಸವಾಗಿದ್ದ ಕಾಲದಲ್ಲಿ ಸಂಸಾರ ಮಥನಕ್ಕೆ ಸುಸ್ಥಿರವಾಗಿ ಬರುವುದು. ಅದು ನಷ್ಟವಾಗಲು ಬರಲರಿಯದು. ಆತ್ಮನು ಅಲ್ಲಿ ಅಜನೆಂಬ ಅಧಿದೇವತಾ ನಾಮದಿಂದ ವಾಸವಾಗಿರುತಿಹನು.

ಈ ಪ್ರಕಾರದಿಂದೆ ಕ್ರಿಯಾರೂಪಮಾದ ಪಂಚಹೃಷೀಕಂಗಳ ಹಸಿಗೆಯ ವಿಚಾರವನು ತಿಳಿದುಕೊಂಬುದು ತತ್ತ್ವ ಜ್ಞಾನಿಗಳು."

ಇವುಗಳಂತೆ ಶ್ರೋತ್ರ, ತ್ವಕ್, ನೇತ್ರ, ಜಿಹ್ವೆ, ಘ್ರಾಣ-ಎಂಬ ಪಂಚ ಜ್ಞಾನೇಂದ್ರಿಯಗಳೂ ಸಹ ಪರಿವಿಡಿದು ಕೇಳುವ, ಮುಟ್ಟುವ, ನೋಡುವ, ತಿನ್ನುವ, ಮೂಸುವ ಕ್ರಿಯೆಗಳಲ್ಲಿ ನಿರತವಾಗಿರುತ್ತವೆ.

ಶ್ರೋತ್ರೇಂದಿಯಕ್ಕೆ ಆಕಾಶ ಭೂತ, ದಶ ದಿಕ್ಕು ಅಧಿದೇವತೆ, ಶಬ್ದ ವಿಷಯ, ಅಕ್ಷರಾತ್ಮಕ—ಅನಕ್ಷರಾತ್ಮಕ ಈ ಎರಡು ಶಬ್ದಭೇದ.

ತ್ವಗಿಂದ್ರಿಯಕ್ಕೆ [ವಾಯುಮಹಾಭೂತ, ಚಂದ್ರನಧಿದೇವತೆ, ಸ್ಪರ್ಶ ವಿಷಯ, ಶೀತ—ಉಷ್ಣ-ಮೃದು-ಕಠಿಣ ಈ ನಾಲ್ಕು ಸ್ಪರ್ಶಭೇದ.

ನೇತ್ರೇಂದಿಯಕ್ಕೆ ಅಗ್ನಿ ಮಹಾಭೂತ, ಸೂರ್ಯ ಅಧಿದೇವತೆ, ರೂಪು ವಿಷಯ, ಶ್ವೇತ—ಪೀತ-ಹರಿತ-ಕಪೋತ—ಕೃಷ್ಣ-ಮಾಂಜಿಷ್ಟ ಈ ಆರು ರೂಪಭೇದ

ಜಿಹ್ವೇಂದ್ರಿಯಕ್ಕೆ ಅಪ್ಪು ಮಹಾಭೂತ, ಅರುಣನಧಿದೇವತೆ, ರಸ ವಿಷಯ ಮಧುರ-ಆಮ್ಲ-ತಿಕ್ತ-ಕಟು-ಕಷಾಯ-ಲವಣ ಈ ಆರು ರಸಭೇದ.

ಘ್ರಾಣೇಂದ್ರಿಯಕ್ಕೆ ಪೃಥ್ವಿ ಮಹಾಭೂತ, ಅಶ್ವಿನ್ಯಧಿದೇವತೆ, ಗಂಧ ವಿಷಯ, ಸುಗಂಧ-ದುರ್ಗಂಧ ಈ ಎರಡು ಗಂಧಭೇದ,

ಇವುಗಳಂತೆ ಅಂತಃಕರಣಗಳೂ ಸೂಕ್ಷ್ಮವಾಗಿ ಕ್ರಿಯೆಯಲ್ಲಿ ನಿರತವಾಗಿರುತ್ತವೆ, ಸಂಕಲ್ಪ, ವಿಕಲ್ಪ, ವಿಚಾರ-ನಿಶ್ಚಯ, ಅಹಮಿಕೆ, ಧ್ಯಾನ ಧಾರಣಾದಿಗಳು ಅವುಗಳ ಕ್ರಿಯೆಗಳು.

"ಮನಸಿಂಗೆ ವಾಯು ಮೂಲ ಚೈತನ್ಯ, ಚಂದ್ರನಧಿದೇವತೆ ; ಸಂಕಲ್ಪ ವಿಕಲ್ಪ ಅದರ ಕ್ರಿಯೆಗಳು. ಅಲ್ಲದೆ ಜ್ಞಾನಾಜ್ಞಾನ ಅಂದರೆ ಅರಿವು ಮರೆವು ಎಂಬೆರಡನ್ನು ಅವಗ್ರಹಿಸುತ್ತಿಹುದು. ಅಹಂಕಾರಕ್ಕೆ ಅಗ್ನಿ ಮಹಾಭೂತ, ರುದ್ರನಧಿದೇವತೆ; ಅಹಂಭಾವ ಅದರ ಕ್ರಿಯೆ. ಬುದ್ಧಿಗೆ ಅಪ್ಪು ಮಹಾಭೂತ, ವಿಷ್ಣು ಅಧಿದೇವತೆ ; ನಿಶ್ಚಯಿಸುವುದು ಅದರ ಕ್ರಿಯೆ. ಚಿತ್ತಕ್ಕೆ ಪೃಥ್ವಿ ಮಹಾಭೂತ, ಬ್ರಹ್ಮನಧಿದೇವತೆ ; ಅವಧರಿಸುವುದು ಅದರ ಕ್ರಿಯೆ. ಇವೆಲ್ಲವುಗಳಲ್ಲಿಯೂ ಆತ್ಮಾಂಗನಿದ್ದು ಇವೆಲ್ಲ ಕ್ರಿಯೆಗಳಿಗೆ ಸಾಕ್ಷಿಯಾಗಿರುತ್ತಾನೆ. ಇದೆಲ್ಲವೂ 'ಕ್ರಿಯಾಗಮ' ವೆನಿಸುತ್ತದೆ ; ಅಥವಾ ಕ್ರಿಯಾಶಾಸ್ತ್ರವೆನಿಸುತ್ತದೆ. ವಿಸ್ತರಿಸಿ ಹೇಳುವುದು ಆಗಮ ಪದನಿರುಕ್ತಿ ಕ್ರಿಯಾಶಕ್ತಿಯನ್ನು ಆದ್ಯಂತವಾಗಿ ಗಮನಿಸುವುದೇ ಆಗಮ ಪದಕ್ಕೆ ಇಲ್ಲಿ ಮುಖ್ಯಾರ್ಥ. ಈ ಕ್ರಿಯೆಯ ವಿವರಣೆಯಿಂದ ಈ ಪದ ಪ್ರಯೋಗ ಇಲ್ಲಿ ಸಾರ್ಥಕ"

ಕ್ರಿಯೆಗೆ ವೃತ್ತಿ ಎಂದು ಮತ್ತೊಂದು ಹೆಸರು. ವೃತ್ತಿಯನ್ನು ನಿರೋಧಿಸಬೇಕೆಂದು ಯೋಗಾಚಾರ್ಯರು, ನಿರ್ನಾಮವಾಗಿಸಬೇಕೆಂದು ಅದ್ವೈತಾಚಾರ್ಯರು ಹೇಳುತ್ತಾರೆ ಶಿವಾದ್ವೈತಾಚಾರ್ಯರು ವೃತ್ತಿ ನಿವೃತ್ತಿಯಾಗಿ ನಿಷ್ಪತ್ತಿಗೊಳ್ಳಬೇಕೆಂದು ಹೇಳುತ್ತಾರೆ. ಪರಶಿವನ ಪೂಜೆಯೇ ಕ್ರಿಯೆ. ಈ ಕ್ರಿಯೆಯನ್ನು ವಿಸ್ತರಿಸಿ ಹೇಳುವುದೇ ಆಗಮ.

ಕ್ರಿಯೆ ಒಂದು ಸಂಸ್ಕಾರವಾಗಿ 'ಕ್ರಿಯಾದೀಕ್ಷೆ' ಯೆನಿಸಿದೆ ಸಂಸ್ಕಾರದಿಂದ ಒಂದು ಸಾಮರ್ಥ್ಯವುಂಟಾಗಿ ಶಕ್ತಿಯೆನಿಸುತ್ತದೆ. ತ್ರಿವಿಧ ಅಥವಾ ಷಡ್ವಿಧ ಶಕ್ತಿಗಳಲ್ಲಿ 'ಕ್ರಿಯಾಶಕ್ತಿ' ಯೆನಿಸುತ್ತದೆ ; ಶಕ್ತಿಗಳಲ್ಲಿ ನಿವೃತ್ತಿ ಮುಖದಲ್ಲಿ ಮೊದಲ

ಶಕ್ತಿಯೆನಿಸಿದೆ. ಸತ್ಕ್ರಿಯೆಯ ಸಾಮರ್ಥ್ಯದಿಂದ ಕಾಯಾವವಚ್ಛಿನ್ನ ಚೈತನ್ಯದಲ್ಲಿ ಒಂದು ಅಪೂರ್ವ ಕಳೆಯುಂಟಾಗುತ್ತದೆ. ಆಗ ಪ್ರವೃತ್ತಿನಿವೃತ್ತಿಯಾಗಿ ಪ್ರತಿಷ್ಠಿತವಾಗುತ್ತದೆ. ಆ ಕಳಾಯುಕ್ತ ಚೈತನ್ಯವೇ 'ಕ್ರಿಯಾಲಿಂಗ' ವೆನಿಸುತ್ತದೆ. ಲಿಂಗಗಳಲ್ಲಿ ನಿವೃತ್ತಿಮುಖದಲ್ಲಿ ಪ್ರಥಮ ಲಿಂಗವೆನಿಸುತ್ತದೆ.

ಕ್ರಿಯಾದೀಕ್ಷೆಯು ಏಳು ಬಗೆಯಾಗಿ ಬೆಳೆಯುತ್ತದೆ. ಕ್ರಿಯಾಶಕ್ತಿಯು ಅಂಗೋಪಾಂಗಗಳ ಮುಖಾಂತರ ಅನೇಕ ಭೇದಗಳಾಗುತ್ತದೆ. ಕ್ರಿಯಾಲಿಂಗವು ಎರಡಾಗಿ ಆರಾಗಿ ಹದಿನೆಂಟಾಗಿ ಮೂವತ್ತಾರಾಗಿ ವಿಸ್ತಾರವಾಗುತ್ತದೆ. ಮಾರ್ಗ ಕ್ರಿಯೆ ಸಕೀಲಸ್ವರೂಪದಲ್ಲಿ ಹನ್ನೆರಡು ಬಗೆ. ಈ ಹನ್ನೆರಡರಲ್ಲಿ ಒಂದೊಂದು ಒಂಬತ್ತು ಬಗೆಯಾಗಿ ನೂರೆಂಟು ಮಾರ್ಗ ಕ್ರಿಯೆಗಳಾಗುತ್ತವೆ. ಇವುಗಳ ವಿವರವನ್ನು ನಮ್ಮದೇ ಆದ 'ನವಲಿಂಗ ಸಾಹಿತ್ಯ' ಗ್ರಂಥದಲ್ಲಿ ಓದಿ ತಿಳಿಯಬಹುದು. ಮತ್ತು ಕ್ರಿಯಾಗುರು, ಕ್ರಿಯಾಲಿಂಗ, ಕ್ರಿಯಾ ಜಂಗಮ. ಕ್ರಿಯಾಭಸ್ಮ , ಕ್ರಿಯಾ ರುದ್ರಾಕ್ಷಿ, ಕ್ರಿಯಾಮಂತ್ರ, ಕ್ರಿಯಾಪಾದೋದಕ, ಕ್ರಿಯಾಪ್ರಸಾದ—ಎಂಬುದಾಗಿ ಕ್ರಿಯಾಷ್ಟಾವರಣಗಳುಂಟು. ಇದಿಷ್ಟು ಕ್ರಿಯಾಗಮದ ನಸುನೋಟ.

ಇದಲ್ಲದೆ ಈ ಕ್ರಿಯಾಶಕ್ತಿಯು ಸಂಕುಚಿತ ಅಂದರೆ ನ್ಯೂನಭಾವವನ್ನು ತಳೆದು ಕಾರ್ಮಿಕಮಲವಾಗಿ ಜೀವನ ಬೆಂಬಳಿವಿಡಿದಿರುತ್ತದೆ. ಜೀವನವನ್ನು ಬಹಿರ್ಮುಖನನ್ನಾಗಿಸುತ್ತದೆ. ಜಡಕರ್ಮಗಳಲ್ಲಿ ತೊಡಗಿಸುತ್ತದೆ. ವಿಶುದ್ಧ ಕ್ರಿಯೆಗಳಿಂದ ವಿಮುಖನನ್ನಾಗಿಸುತ್ತದೆ. ಮೂಢ ವಿಶೇಷ ವೃತ್ತಿಗಳಿಗೆಳಸುವಂತೆ ಮಾಡುತ್ತದೆ. ಈ ಕಾರ್ಮಿಕಮಲ ಸಂಚಿತ ಆಗಾಮಿ ಪ್ರಾರಬ್ಧವೆಂದು ಮೂಬಗೆಯಾಗಿ ಬೆಳೆದು ನಿಲ್ಲುತ್ತದೆ. ಕಾರ್ಮಿಕಮಲ ಕ್ಷೇತ್ರ ವಿಶಾಲವಾಗಿದೆ; ವಿಪುಲವಾಗಿದೆ. ಇದನ್ನು ಹಸನಾಗಿಸಲು ಕ್ರಿಯಾದೀಕ್ಷೆ-ಕ್ರಿಯಾಶಕ್ತಿ-ಕ್ರಿಯಾ ಲಿಂಗಗಳೆಂಬ ಕ್ರಿಯಾಗಮವು ಉದ್ಗಮಿಸಿತು.

ಕ್ರಿಯಾಶಕ್ತಿಯ ಉದಯವನ್ನು ಕುರಿತು ಇನ್ನೂ ಹೀಗೆಯೆ ಎಂದು ಹೇಳಲು ಸಾಧ್ಯವಿಲ್ಲವಾದರೂ ಸನಿಹಕ್ಕೆ ಸಂಶೋಧನೆ ಸಾಗಿದೆಯೆಂದು ಹೇಳಲು ಮಾತ್ರ ಯಾವ ಅಭ್ಯಂತರವಿಲ್ಲ, "ಋಣಾಣು ಮತ್ತು ಧನಾಣು ಈ ಎರಡರೊಳಗಿಂದ ಕ್ರಿಯಾಶಕ್ತಿಯ ಲಹರಿಗಳು ಎದ್ದೇಳುತ್ತವೆ. ಋಣಾಣುಗಳ ಸ್ವಲ್ಪ

ಮಟ್ಟಿನ ಪ್ರಭಾವದಿಂದ ಕಾರ್ಯವನ್ನು ತಿಳಿಯಬಹುದಾಗಿದೆ" ಎಂದು ಎಡಿಸನ್‌ರ ಅಭಿಪ್ರಾಯವಾಗಿದೆ.

"ಋಣಾನು ಶಕ್ತಿಯು ತರಂಗಗಳ ಕೇಂದ್ರವಾಗಿದೆ. ಅದರ ಸಂಬಂಧದಲ್ಲಿ ನಾವು ಎಷ್ಟು ಸ್ವಲ್ಪವನ್ನು ತಿಳಿದಿದ್ದೇವೆಯೋ ಅದು ಆ ಶಕ್ತಿ ತರಂಗಗಳಿಂದಲೇ ಪಾಶ್ಚಾತ್ಯ ಪದಾರ್ಥ ವಿಜ್ಞಾನವು ಋಣಾಣು ಮತ್ತು ಧನಾಣುವಿನವರೆಗೇನೆ ಮುಟ್ಟಿದೆ. ಆದರೆ ಈ ಋಣ—ಧನಾಣುಗಳಿಂದ ಶಕ್ತಿಯ ಆವಿರ್ಭಾವವು ಹೇಗೆ ಆಗುತ್ತದೆ ಎಂಬುದನ್ನು ಯಾರೂ ಕಂಡು ಹಿಡಿದಿಲ್ಲ." ಎಂದು ಗುರು ಪಾದ ಶಿವಾಚಾರ್ಯ ಹಿರೇಮಠ ಅವರ ಅಭಿಪ್ರಾಯವಾಗಿದೆ.

ಜ್ಞಾನಶಕ್ತಿಯಿಂದ ಕ್ರಿಯಾಶಕ್ತಿಯ ಉದಯವೆಂದು ಆಗಮ ನಿರೂಪಣೆ. ಕ್ರಿಯೆ ಸಕ್ರಮವಾಗಬೇಕಾದರೆ ಆಗಮ ಜ್ಞಾನ ಅಗತ್ಯ. "ಆಗಮವನರಿಯದೆ, ಹೇಗಯ್ಯ ಶಿವಪೂಜೆ ?! ನಾಗಸಂಪಿಗೆಯ ಬನದಡಿಯ ಮುದಿಗೂಬೆ ! ಕೂಗಿ ಹೋದಂತೆ ಸರ್ವಜ್ಞ ||" ಎಂಬ ಸರ್ವಜ್ಞನ ಸೊಲ್ಲು ಸಮಾಲೋಚನೀಯ. "ಮಹಾನಾದ ಕಳೆಯೇ ಲಿಂಗಕ್ಕಾಶ್ರಯಮಾಗಿ, ಲಿಂಗದ ಕಳೆಯೇ ಹೃದಯ ಕ್ಕಾಶ್ರಯಮಾಗಿ, ಹೃದಯದ ಕಳೆಯೇ ಜ್ಞಾನಕ್ಕಾಶ್ರಯಮಾಗಿ, ಜ್ಞಾನದ ಕಳೆಯೇ ನಿತ್ಯಕ್ರಿಯಕ್ಕಾಶ್ರಯಮಾಗಿ ನಿತ್ಯ ನಿರವಯ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ." ಆಗಮ, ಶಬ್ದ, ನಾದ ಇವು ಪರ್ಯಾಯ ಪದಗಳು. ಮಂತ್ರ ದೀಕ್ಷೆಯಾಗದೆ ಕ್ರಿಯಾದೀಕ್ಷೆ ಸಫಲವಾಗದು; ಸಾಗದು. ಜ್ಞಾನಶಕ್ತಿಯುಳ್ಳ ಗುರುಲಿಂಗವು ಕ್ರಿಯಾಗಮದಿಂದ ವಿಕಾಸಕ್ಕೆ ಮೊದಲಾಗುತ್ತದೆ. ಗುರುಲಿಂಗ ದಿಂದ 'ಆಗಮಲಿಂಗ'ವುಂಟಾಗಿ ಆಗಮ ಲಿಂಗದಿಂದ ಕಾರ್ಯವರ್ತನೆಗೆ ಆವಶ್ಯಕ ಗಳಾದ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಮುಂತಾದ ಲಿಂಗಸ್ಥಲಗಳುಂ ಟಾಗುತ್ತವೆ ಆಚಾರಲಿಂಗದ ಕ್ರಿಯಾಶಕ್ತಿಯು ದೃಢಪಟ್ಟು ಅಭಿವೃದ್ಧಿಗೊಳ್ಳ ಬೇಕಾದರೆ ಗುರುಲಿಂಗದ ಜ್ಞಾನಶಕ್ತಿಯಿಂದ ! ಜ್ಞಾನ ಶಕ್ತಿಯ ಆಗಮದಿಂದ! ಆಚಾರಲಿಂಗ—ಗುರುಲಿಂಗ—ಕ್ರಿಯಾಶಕ್ತಿ—ಜ್ಞಾನಶಕ್ತಿ ಇವು ಪರಸ್ಪರ ಪೂರಕ ಗಳಾಗಿವೆ. ಪರಸ್ಪರ ವಿಕಾಸವಾಗುತ್ತವೆ. ಅಂಗದಿಚ್ಛೆಯಿಲ್ಲದೆ ಮಾಡಿದ ಸತ್ಕ್ರಿ ಯೆಯೇ 'ಕ್ರಿಯಾಗಮ'ವೆನಿಸುತ್ತದೆ. ಅಂಗಭಾವವಿಲ್ಲದೆ ಕ್ರಿಯೆಗಳನ್ನು ಆಗಳ ವಡಿಸಿಕೊಳ್ಳುವುದರಲ್ಲಿ ಮಾಹೇಶ್ವರಾಂಗನಿಗೆ ನಿಷ್ಠೆ ನೆಲೆಗೊಳ್ಳಬೇಕು. "ಮಾಡದೆ

ಮೋಕ್ಷವ ಹಡೆದು ಹೋದರೆಂಬ ವಾರ್ತೆಯ ಕೇಳಿಹಿರೇನಯ್ಯ?—ಇಲ್ಲ ಇಲ್ಲವು. ಮಾಡಿದರೆ ಅದು ತಪ್ಪದು. ಮಾಡಲೊಲ್ಲದೆ ಹೋದರೆ ಬರುವದದು ದೂರಾಗದು–ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ !" ಕ್ರಿಯೆ ಅಳವಡದೆ ಕಾರ್ಮಿಕ ಮಲದ ಮೋಚನವಿಲ್ಲ., ಸದ್ರೂಪತ್ವ ಸಮನಿಸುವುದಿಲ್ಲ. ಅರ್ಚನಾದಿ ಕ್ರಿಯೆಯ ನಿರ್ವಹಣವೇ ಆಗದು, ಆಗಮಿಕ ಕ್ರಿಯೆಗಳ ನಿರ್ವಹಣವೇ ಕ್ರಿಯಾಗಮ. ಅಳವಡುವುದೂ ಒಂದು ಲಿಂಗ. ಅಳವಡಿಕೆ ಕ್ರಿಯೆಯಲ್ಲಿ ಭಾವದಲ್ಲಿ ಜ್ಞಾನದಲ್ಲಿ ಗುರುವಿನಿಂದ ಅಥವಾ ಗುರುಲಿಂಗದಿಂದ ಅಳವಡುತ್ತದೆ. ಕ್ರಿಯೆಯಿಂದ ಕಾಯದಲ್ಲಿ ಸತ್ ಅಳವಡುತ್ತದೆ. ಸದ್ಭಾವನೆಯಿಂದ ಭಾವದಲ್ಲಿ ಆನಂದ ಅಳವಡುತ್ತದೆ. ಸುಜ್ಞಾನದಿಂದ ಮನದಲ್ಲಿ ಚಿತ್ ಅಳವಡುತ್ತದೆ. ಇದರಿಂದಾಗಿ ಆಗಮಲಿಂಗ ಸಾರ್ಥಕವಾಗುತ್ತದೆ. ವಿಕಾಸವಾದಕ್ಕೆ ಪ್ರಗತಿ ಪಥಕ್ಕೆ ಆಧಾರ ಸ್ತಂಭವಾಗಿದೆ ಪರಮ ಪೂಜಾರೂಪ ಕ್ರಿಯಾಗಮ.

"ಪ್ರಕಾಶತೇ ಯಥಾ ನಾಗ್ನಿರರಣ್ಯಾಂ ಮಥನಂ ವಿನಾ ।
ಕ್ರಿಯಾಂ ವಿನಾ ತಥಾಂತಸ್ಥೋ ನ ಪ್ರಕಾಶೋ ಭವೇಚ್ಛಿವಃ ॥"

ಅರಣಿ (ಕಟ್ಟಿಗೆ) ಯಲ್ಲಿ ತಿಕ್ಕುವಿಕೆಯಿಲ್ಲದೆ ಬೆಂಕಿ ಹೊರಹೊಮ್ಮದು ಅದರಂತೆ ಅಂತಸ್ಥನಾದ ಶಿವನು ಅಥವಾ ಅಂತಸ್ಥವಾದ ಶಿವಕಳೆಯು ಪೂಜಾ ಕ್ರಿಯೆಯಿಲ್ಲದೆ ಪ್ರಕಾಶವಾಗದು.

ಯಜ್ಞಕಾಷ್ಠವಾದ ಅರಣಿಯಲ್ಲಿ ಅಗ್ನಿಯಿದ್ದರೂ ಅದೇ ಹೊರಗೆ ಬಾರದು. ಮಥನಕ್ರಿಯೆ ನಡೆಯಬೇಕು. ಅಂತೆಯೇ ಅಂತಸ್ಥನಾದ ಶಿವನು ಕ್ರಿಯೆಯಿಲ್ಲದೆ ಕಳೆಗೊಳ್ಳನು. ದೈವೀ ಕಾರ್ಯವೇ ಕ್ರಿಯೆಯೆಂದೆನಿಸುತ್ತದೆ. ಅಂಗದೊಳಗಿರುವ ಚೈತನ್ಯವೇ ಚಿತ್ಕಳೆಯೇ ಶಿವ ಎಂದೆನಿಸುತ್ತದೆ.

ಅರಣಿಯಿದ್ದಂತೆ ಕ್ರಿಯೆ. ಉಳಿದ ಉರವಲಿದ್ದಂತೆ ಕರ್ಮ. ಕ್ರಿಯೆಗೆ ಅರಣಿಯ ಹೋಲಿಕೆ ಗಮನಾರ್ಹವಾದುದು, ಗುಣಯುಕ್ತವಾದುದು. ಕೇವಲ ಅರಣಿಯನ್ನು ಹೋಲಿಸಿಲ್ಲ; ಅರಣಿ ಮಥನವನ್ನು ಹೋಲಿಸಿದ ಜಾಣ್ಮೆ ಮೆಚ್ಚತಕ್ಕದು. ಜಡಕರ್ಮಗಳಿಂದ ಅಮೃತತ್ವ ಲಭ್ಯವಾಗದು; ಧನ ಧಾನ್ಯದಿಂದ ಲಭ್ಯವಾಗದು. 'ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ

ಮಾನಸಃ '- ಎಂದಿದೆ ಕೈವಲ್ಯೋಪನಿಷತ್ತು. ಸತ್ಕ್ರಿಯೆಯಿಂದ ಶಿವಾಮೃತವು ಸಂಪ್ರಾಪ್ತವಾಗುತ್ತದೆ. ಸಹಜ ಕ್ರಿಯೆಯೇ ತ್ಯಾಗ ಪದಕ್ಕೆ ಸರಿಯಾದ ಅರ್ಥ. ಫಲಾಕಾಂಕ್ಷೆಯನ್ನು ತ್ಯಾಗಮಾಡಿ ಮಾಡುವ ಪೂಜೆಯೇ ಕ್ರಿಯೆ. ಕ್ರಿಯೆಯಿಂದ ಉಂಟಾಗುವ ಅಂತಃಕರಣಗಳ ಅವಿಕಾರತ್ವವೇ ಶಿವ ಅದುವೇ ಅಮೃತಾನುಭವ; ಮಂಗಳಾನುಭವ. 'ಶಿವಂ ಪ್ರಶಾಂತಂ ಅಮೃತಂ ಬ್ರಹ್ಮಯೋನಿಂ'ಎಂದಿದೆ ಕೈವಲ್ಯೋಪನಿಷತ್ತು.

"ನೆನೆದರಾಗದು ಸಾಧಿಸದನ್ನಕ್ಕ ! ಸಾಧಿಸಿದರಾಗದು ತಿಳಿಯದನ್ನಕ್ಕ ! ತಿಳಿಯದೆ –ತಳೆಯದೆ ಆಗದು ಎಳೆ ಬಾಲಚಂದ್ರಧರ ಕಪಿಲಸಿದ್ಧ ಮಲ್ಲಿಕಾರ್ಜುನನ ಕೈವಲ್ಯಕಳೆಯು."

ಶಿವಕಳೆ ಸರ್ವಾಂಗದಲ್ಲಿ ಸಮನಿಸಬೇಕಾದರೆ ಶಿವಕ್ರಿಯೆಗಳಲ್ಲಿ ಯಾವಾಗಲೂ ತೊಡಗಿರಬೇಕು. ಪಾಕ ಪಾತ್ರೆಯ ಬಾಹ್ಯಾಂಗಕ್ಕೆ ದಹನಕ್ರಿಯೆ ಸಂಪರ್ಕವಾಗುವುದರಿಂದ ಹೇಗೆ ಒಳಗಿರುವ ಪದಾರ್ಥ ಪಕ್ವವಾಗುತ್ತದೆಯೋ ಹಾಗೆ ಬಾಹ್ಯ ಕ್ರಿಯೆಗಳಿಂದ ಮಾಹೇಶ್ವರಾಂಗನ ಅಂತರಂಗದ ಚಿತ್ಕಳೆ ಬಹಿರಂಗದ ಸತ್ಕಳೆ ಸಂವೃದ್ಧಿಸುತ್ತವೆ. ಕ್ರಿಯಾಚಾರ ಜ್ಞಾನಚಾರಗಳೆರಡರ ಸಮನ್ವಯಾಚರಣೆಯಿಂದ ಚಿತ್ಕಳೆ–ಚಿದ್ಬಿಂದು-ಚಿನ್ನಾದಗಳ ಸಿದ್ಧಿ ಸಮನಿಸುತ್ತದೆ.

ಮಂತ್ರದಲ್ಲಿ 'ಅಂತಸ್ಥಃ ಶಿವಃ' ಮತ್ತು 'ಪ್ರಕಾಶಃ' ಎಂಬ ಪದ ಪ್ರಯೋಗಗಳಿವೆ. ಇವುಗಳಿಂದ ತಿಳಿವುದೇನಂದರೆ : ಪರಶಿವನು ಹೃದಯದೊಳಗಿರುವನು. ಕ್ರಿಯಾಚರಣೆಯಿಂದ ತೊಳಗಿ ಬೆಳಗುವನು. 'ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ' ಎಂಬೀ ಕೈವಲ್ಯೋಪನಿಷತ್ತು ಮೇಲಿನ ಮಂತ್ರ ಪದಗಳನ್ನೇ ಪೋಷಿಸುತ್ತದೆ. ಕ್ರಿಯೆ:ಯೆಂಬ ಬತ್ತಿಗೆ ಅಂತರ್ಜ್ಯೋತಿಯನ್ನು ಅಂಟಿಸಿ ಬೆಳಗಿಸಿದರೆ ಒಳ ಹೊರಗಿನ ವೃತ್ತಿಗಳೆಲ್ಲವೂ ಸತ್ವಯುತವಾಗುತ್ತವೆ; ಶಿವವಾಗುತ್ತವೆ. ಬುದ್ಧಿ ಭಾವಗಳು ಸ್ವಾನುಭವವುಳ್ಳವಾಗುತ್ತವೆ; ಸುನಿಶ್ಚಿತಾರ್ಥವುಳ್ಳವಾಗುತ್ತವೆ. ಸತ್ಯಶಿವಸೌಂದರ್ಯವನ್ನು ಕಾಣುತ್ತವೆ

ಅಂಗಗುಣವಳಿಯದೆ ಲಿಂಗಕಳೆ ಉಂಟಾಗದು. ಲಿಂಗಕಳೆ ಉಂಟಾಗದೆ

ಮನದ ಮೈಲಿಗೆ ತೊಳೆಯದು, ಕಾರಣ ಕಾಯಗುಣ ಕಳೆಚಲು ಲಿಂಗ ಕ್ರಿಯೆ ಗಳಲ್ಲಿ ನಿರತರಾಗಿರುವುದು ಅನಿವಾರ್ಯ.

"ನ ಯಥಾ ವಿಧಿಲೋಪಃ ಸ್ಯಾದ್ಯಥಾ ದೇವಃ ಪ್ರಸೀದತಿ ।
ಯಥಾsಗಮಃ ಪ್ರಮಾಣಂ ಸ್ಯಾತ್ತಥಾ ಕರ್ಮ ಸಮಾಚರೇತ್ ॥"

ವಿಧಿ ವಿಧಾನಗಳಿಗೆ ಲೋಪಬಾರದಂತೆ ಪರಶಿವನು ಪ್ರಸನ್ನನಾಗುವಂತೆ ಆಗಮ ಪ್ರಮಾಣವನ್ನು ಮೀರದಂತೆ ಕ್ರಿಯಾಚರಣೆಯನ್ನಿಟ್ಟುಕೊಳ್ಳಬೇಕು; ಕ್ರಿಯಾನಿರತನಾಗಿರಬೇಕು. ಕ್ರಿಯಾಲಿಂಗದ ಆರಾಧನೆಯನ್ನು ಮಾಡಬೇಕು.

ಕ್ರಿಯೆಯಲ್ಲಿ ವಿಧಿಯನ್ನು ಅನುಸರಿಸುವುದು ಎಷ್ಟು ಅಗತ್ಯವೋ ಆಗಮ ಪ್ರಮಾಣವನ್ನು ಅನುಸರಿಸುವುದು ಅಷ್ಟೇ ಅಗತ್ಯ. ಆಗಮ ವಿಧಾನಗಳನ್ನು ಮೀರಿದರೆ ಆ ಪರಶಿವನ ಅನುಗ್ರಹಕ್ಕೆ ಬದಲು ಆಗ್ರಹಕ್ಕೆ ಗುರಿಯಾಗಬೇಕಾಗುತ್ತದೆ. ಅಲ್ಲದೆ ಕ್ರಿಯಾ ಭ್ರಷ್ಟತೆಯೂ ಉಂಟಾಗುತ್ತದೆ. ಆಗಮ ವಿಧಿಯನರಿಯದ-ಆಚರಿಸದ ಅರ್ಚನೆ ಅನುಪಯುಕ್ತವೆಂಬ ಸರ್ವಜ್ಞನ ಸೂಕ್ತಿಯನ್ನು ಈ ಹಿಂದೆ ಉಚ್ಚರಿಸಲಾಗಿದೆ. ಮಾರ್ಗಕ್ರಿಯೆಯಲ್ಲಿರುವವರು ಆಗಮಪ್ರಮಾಣಕ್ಕೆ ಶರಣಾಗಲೇಬೇಕು. ಮೀರಿದ ಕ್ರಿಯೆಯಲ್ಲಿ ನಿರತನಾದವನಿಗೆ ಆಗಮಪ್ರಮಾಣದ ಹಂಗಿರಲಿಕ್ಕಿಲ್ಲ–ಇರಬಾರದು. ಈ ದಿಸೆಯಲ್ಲಿ ಹಲವು ಶರಣರು ಹೇಳಿದ ವಚನಗಳನ್ನು ಮಾರ್ಗಕ್ರಿಯಾನಿರತರಾದ ಪ್ರಾರಂಭಸಾಧಕರಿಗೆ ಸಮನ್ವಯಿಸಬಾರದು. ಕಟ್ಟುಕಟ್ಟಳೆ ಮಾರ್ಗಕ್ರಿಯೆಯಲ್ಲಿರುವವರಿಗೆ ಅಗತ್ಯ. "ಗುರುವೆಂಬಾತನು ಸಕಲಾಗಮದ ಹೃದಯವನರಿದು, ಕ್ರಿಯಾಜ್ಞಾನಯುಕ್ತನಾಗಿ ತನ್ನ ತಾನರಿದು, ಸರ್ವಾಚಾರಸಂಪನ್ನತೆ ನೆಲೆಗೊಂಡು, ನಿರ್ಣಯದ ಗೊತ್ತನರಿದು ಉಪದೇಶವ ಮಾಡಬಹುದು........" ಎಂದು ಚನ್ನಬಸವಣ್ಣನವರು ಹೇಳಿ ಆಗಮ ಪ್ರಾಮಾಣ್ಯವನ್ನು ಹೃದಯಾರೆ ಅಂಗೀಕರಿಸಿದ್ದಾರೆ. "ವೇದಶಾಸ್ತ್ರಪುರಾಣಾಗಮವನರಿದ ಸಂಬಂಧಿಗಲ್ಲದೆ ಆಚಾರವಳವಡದು." "ಮಾರ್ಗಕ್ರಿಯೆಯಲ್ಲಿ ನಯ ನುಡಿ ನಮಸ್ಕಾರ ಭಯ ಭಕ್ತಿ ಕರುಣ ಕಿಂಕುರ್ವಾಣವು ಕರ್ತೃ ಭೃತ್ಯತ್ವದ ಅನುಭಾವವನರಿಯಿರೆ" ಎಂದು ಮುಂತಾಗಿ ಅದೇ ಚನ್ನಬಸವಣ್ಣನವರು ಚೆನ್ನಾಗಿ ಹೇಳಿದ್ದಾರೆ.

ವಿಧಿವತ್ತಾಗಿ ಶಿವಪೂಜಾದಿಕ್ರಿಯೆಗಳನ್ನು ಮಾಡಬೇಕು. ಮಾಡತಕ್ಕ ರೀತಿಗೆ "ವಿಧಿ"ಎಂದು ಹೆಸರು. ಶುಚಿರ್ಭೂತರಾಗಿ ಶಿವಪೂಜೆಯನ್ನು ನೆರವೇರಿಸು

ವುದು ವಿಹಿತ. ಬಾಹ್ಯಾಂತರ ಶುಚಿರ್ಭೂತರಾಗಿರುವುದೂ ವಿಹಿತ. ತನು-ಮನ ಶುಚಿಯಾಗದೆ ಕ್ರಿಯೆಯನ್ನು ಮಾಡಿದರೆ ಪ್ರಯೋಜನವಿಲ್ಲ. ಶೌಚ, ಸ್ನಾನ, ಭಸ್ಮಧಾರಣ, ರುದ್ರಾಕ್ಷಧಾರಣಾದಿಗಳು ಬಾಹ್ಯವಿಧಿಗಳು. ಈ ಬಾಹ್ಯವಿಧಿ ಯಿಂದ ತನು ಶುಚಿಯಾಗುತ್ತದೆ. ಶಮದಮಾದಿ ಸದ್ಗುಣಗಳಿಂದ ಮತ್ತು ಆಗ ಮೋಕ್ತಮಂತ್ರ ಜಪದಿಂದ ಅಂತಶ್ಶುಚಿಯುಂಟಾಗುತ್ತದೆ. ಈ ವಿಧಿ ವಿಧಾನ ಗಳಿಂದ ಅರ್ಚನಕ್ರಿಯೆಯನ್ನು ಮಾಡಿದರೆ ಆತ್ಮರೂಪ ದೇವಪ್ರಸನ್ನತೆ ಪ್ರಾಪ್ತ ವಾಗುತ್ತದೆ. ಮಾಡುವವನು ನಾನೆಂಬ ಕರ್ತೃತ್ವಭಾವ ಅಥವಾ ಅಹಂಭಾವಗಳನ್ನು ಬಿಟ್ಟು ಅರ್ಚನಾದಿ ಸತ್ಕ್ರಿಯಾನಿರತನಾಗಬೇಕು. ನಾನು ಮಾಡುತ್ತೇನೆ; ನನಗೆ ಇಂತಹ ಫಲವಾಗಲಿ ಎಂದು ಅಹಂಫಲವಾಸನೆಯಿಂದ ಮಾಡುವುದು ಆಗಮ ಪ್ರಮಾಣಕ್ಕೆ ಹೊರಗು; ಶಾಸ್ತ್ರೋಕ್ತಪದ್ಧತಿಗೆ ಬಾಹ್ಯ. "ವಿವಿಕ್ತದೇಶೇ ಚ ಸುಖಾ ಸನಸ್ಥಃ ಶುಚಿಃ ಸಮಗ್ರೀವ ಶಿರಃ ಶರೀರಃ। ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯ ಭಕ್ತ್ಯಾ ಸ್ವಗುರುಂ ಪ್ರಣಮ್ಯ॥" ಇದು ವಿಧಾನ. ಇದೂ ಶಾಸ್ತ್ರಪ್ರಮಾಣ. ಇದರಿಂದ ದೇವ ದರ್ಶನ.

"ವಿಧಿಃ ಶಿವನಿಯೋಗೋಽಯಂ ತಸ್ಮಾದ್ವಿಹಿತ ಕರ್ಮಣಿ।
ಶಿವಾರಾಧನಬುದ್ಧ್ಯೈವ ನಿರತಃ ಸ್ಯಾದ್ವಿಚಕ್ಷಣಃ॥
ಗುರೋರಾದೇಶಮಾಸಾದ್ಯ ಪೂಜಯೇತ್ಪರಮೇಶ್ವರಂ।
ಪೂಜಿತೇ ಪರಮೇಶಾನೇ ಪೂಜಿತಾಃ ಸರ್ವದೇವತಾಃ॥
ಸದಾಶಿವಾರ್ಚನೋಪಾಯ ಸಾಮಗ್ರೀ ವ್ಯಗ್ರಮಾನಸಃ।
ಶಿವಯೋಗರತೋ ಯೋಗೀ ಮುಚ್ಯತೇ ನಾತ್ರ ಸಂಶಯಃ॥"

ವಿಧಿ ಅದೊಂದು ಶಿವಾಜ್ಞೆ. ಅದನ್ನು ಮೀರಿ ನಡೆಯಬಾರದು. ವಿಚಾರಶೀಲನು ವಿಹಿತಕ್ರಿಯೆಯಲ್ಲಿ ಶಿವಾರಾಧನ ಬುದ್ಧಿಯಿಂದ ನಿರತನಾಗಬೇಕು ಇಲ್ಲವಾದರೆ ಶಿವನ ಅಪ್ಪಣೆಯನ್ನು ತಪ್ಪಿದ ದೋಷಕ್ಕೆ ಗುರಿಯಾಗಬೇಕಾಗುತ್ತದೆ.

ಶ್ರೀಗುರುವಿನ ಅಪ್ಪಣೆಯನ್ನು ಪಡೆದು ಶಿವನನ್ನು ಅರ್ಚಿಸಬೇಕು. ಆ ಪರಶಿವನ ಪೂಜೆಯನ್ನು ಮಾಡಿದರೆ ಉಳಿದೆಲ್ಲ ದೇವತೆಗಳನ್ನು ಪೂಜಿಸಿದಂತೆ! ಶಿವಾರಾಧಕನು ಬೇರೆ ದೇವತೆಗಳನ್ನು ಪ್ರತ್ಯೇಕವಾಗಿ ಪೂಜಿಸಬೇಕಿಲ್ಲ.

ಯಾವಾಗಲೂ ಶಿವಾರ್ಚನೆಗೆ ಬೇಕಾದ ಸಾಮಗ್ರಿಯನ್ನು ಸಂಪಾದಿಸುವುದ ರಲ್ಲಿ ಮನಸ್ಸು ಆಸಕ್ತವಾಗಿರಬೇಕು. ಮತ್ತು ಶಿವಯೋಗದಲ್ಲಿಯೇ ಮನಸ್ಸು ತಲ್ಲೀನವಾಗಿರಬೇಕು. ಅದೇ ತಪಸ್ಸು. ಆತನೇ ತಪಸ್ವಿಯಾದ ಶಿವಯೋಗಿ. ಆತನು ಮಲಮಾಯಾದಿ ಪಾಶಗಳಿಂದ ನಿಸ್ಸಂದೇಹವಾಗಿ ಮುಕ್ತನಾಗುತ್ತಾನೆ.

ವಿಧಿ ಅವರಿವರಿಂದ ಬಂದುದಲ್ಲ. ಅದು ಶಿವನಿಂದ ಬಂದುದು. ವಿಧಿ ಯನ್ನು ಉಲ್ಲಂಘಿಸಿದರೆ ಶಿವಶಾಸನವನ್ನು ಉಲ್ಲಂಘಿಸಿದ ದೋಷಕ್ಕೆ ಗುರಿಯಾಗ ಬೇಕಾಗುತ್ತದೆ. ವಿಧಿಯೆಂದರೆ ಆಗಮಶಾಸ್ತ್ರವೆಂದು ಮತ್ತೊಂದು ಅರ್ಥ. ಆಗಮಗಳು ಶಿವನಿಂದ ಬಂದವು. ಅಂತೆಯೇ ಅವು ಶಿವಾಗಮಗಳು. ಶಿವಾಗಮ ವಿಧಿಯನ್ನು ಮೀರಬಾರದು. ವಿಧಿ ಎಂದರೆ ಆಗಮಲಿಂಗ. ಆಗಮಲಿಂಗವು ಗುರುಲಿಂಗಕ್ಕೆ ಅಭಿನ್ನ. ಇದರಿಂದಾಗಿ ಗುರುರೂಪ ಶಿವನ ಶಾಸನವೇ ವಿಧಿ. ಇವೆಲ್ಲ ಸಂಕೇತಾರ್ಥಗಳಿಂದ ಕೂಡಿದೆ ಈ ಮಾತ್ರದಲ್ಲಿರುವ ವಿಧಿ ಪದ.

'ಶಿವನಿಯೋಗ' ಪ್ರಯೋಗವೂ ಗಮನೀಯ. ಇದರಿಂದಾಗಿ ವಿಧಿಯು ಶಿವ ಕಾರ್ಯವೂ ಅಹುದು; ಶಿವಾಜ್ಞೆಯೂ ಅಹುದು. ನಿಯೋಗ ಪದಕ್ಕೆ ಕೆಲಸ, ಅಪ್ಪಣೆ ಎಂದು ಎರಡರ್ಥಗಳಿವೆ. ನಿಯೋಗಕ್ಕೆ ಶಿವ ಪದ ವಿಶೇಷಣವಾಗಿ ಮಂಗಳಮಯ ಕಾರ್ಯವೇವಿಧಿಯೆಂದು ಅರ್ಥವಿಸಬೇಕಾಗುತ್ತದೆ. ಈನಿಯೋಗ ಪ್ರಯೋಗ ಇಂದು ರೂಢಿಯಲ್ಲಿರುವ ನಿಯೋಗಪದವನ್ನು ನೆನಪಿಗೆ ತರುವುದಾದರೂ ಇದರ ಅರ್ಥ ಅತ್ಯಂತಆಳವಾಗಿದೆ ; ನಿರ್ಮಲವಾಗಿದೆ. ಸತ್ಯಶುದ್ಧ ಕ್ರಿಯೆಯನ್ನು ಬೋಧಿಸುವು ದಾಗಿದೆ. ದಿವ್ಯಧ್ವನಿಸೂಚಕವಾಗಿದೆ. ಶಿವಸಂಯೋಗವಾದ ನಿಯೋಗ ಅದೇನು ಸುಂದರ! ಅದೆಷ್ಟು ಮಧುರ !

'ವಿಹಿತ ಕರ್ಮ' ವಿಚಾರ. ಕರ್ಮ ವಿಹಿತವಾದದ್ದು-ವಿಹಿತವಲ್ಲದ್ದು ಎಂದು ಎರಡು ಬಗೆ. ವಿಹಿತಕರ್ಮಗಳನ್ನು ಮಾಡುವುದು ವಿಚಕ್ಷಣರ ಕೆಲಸ.

"ದುಷ್ಕರ್ಮಂಗಳ ಮಾಡುವವರನಂತರುಂಟು ಸತ್ಕರ್ಮಂಗಳ ಮಾಡು ವವರೊಬ್ಬರು ಇಲ್ಲ ನೋಡಯ್ಯ. ದುಷ್ಕರ್ಮವೆಂದರೆ ವಿಷಯವಾಸನೆ. ಸತ್ಕರ್ಮ ವೆಂದರೆ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವ ವಾಸನೆ!"

"ಕೃಷಿಯ ಮಾಡಿ ಉಣ್ಣದೆ ಹಸಿವುದಿನ್ನೆಂತೊ, ಇನ್ನೆಂತೊ? ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೊ ? ಬೇಯದ ಅಶನನುಂಬ ಠಾವಾವುದು ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ ? "

"ವೇದ ವೇದಾಂತವನೋದಿದರೇನು,–ಮನಸೂತಕವಳಿಯದನ್ನಕ್ಕ? ಸಿದ್ಧ ಸಿದ್ಧಾಂತವ ಶ್ರವಂಪಟ್ಟರೇನು,–ಸಾಧಿಸಿ ಕೀರ್ತಿಯ ಹಡೆಯದನಕ್ಕ ? ಇವೆಲ್ಲ ಹೊರಗಣ ಮಾತು. ಮಾತೊಂದೇ! ನಮ್ಮ ಕಪಿವೆಸಿದ್ಧಮಲ್ಲೇಶನಲ್ಲಿ ಸದಾಚರಣ ಸನ್ಮಾರ್ಗವಯ್ಯ;"

ಈ ಮೂರು ವಚನಗಳಲ್ಲಿ ವಿಹಿತಕರ್ಮ ಯಾವುದು? ಅದರಿಂದ ಆಗುವ ಫಲವೇನು? ಅದರ ಅವಶ್ಯಕತೆ ಏನು,-ಏಷ್ಟು? ಎಂಬ ಅಂಶಗಳನ್ನು ಕ್ರಮ ವಿಡಿದು ಕಾಣಬಹುದಾಗಿದೆ. ಸತ್ಕರ್ಮ, ಸದಾಚಾರ. ಶಿವಾಚಾರ, ಸತ್ಕ್ರಿಯೆ ಕರ್ಮಯೋಗ ಇವೆಲ್ಲವು ವಿಹಿತಕರ್ಮದ ಪರ್ಯಾಯ ಪದಗಳು, ಆಚಾರವೇ ವಿಹಿತಕರ್ಮ; ಅನಾಚಾರವೇ ಅವಿಹಿತಕರ್ಮ.

"ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ. ಅನುಭಾವಲಿಂಗವಿಡಿದು ಮಾರ್ಗಕ್ರೀಲಿಂಗಸಿದ್ಧಿ. ಮಾರ್ಗಕ್ರೀಲಿಂಗವಿಡಿದು ಮೀರಿದ ಕ್ರೀಲಿಂಗಸಿದ್ಧಿ, ಮೀರಿದಕ್ರೀಲಿಂವಿಡಿದು. ಕ್ರಿಯಾನಿಷ್ಪತ್ತಿಲಿಂಗಸಿದ್ಧಿ. ಇದುಕಾರಣ ಕೂಡಲ ಸಂಗಮದೇವಾ ಲಿಂಗವಿಡಿದು ಲಿಂಗಸಿದ್ಧಿ."

ಈ ವಚನದಿಂದ ವಿಹಿತಕ್ರಿಯೆ ಮಹತ್ವ ಮನವರಿಕೆಯಾಗತ್ತದೆ. ಅನುಭಾವಾದಿ ಎಲ್ಲ ಸಿದ್ಧಿಗಳಿಗೆ ಆಚಾರ ಅಡಿಗಲ್ಲು ಎಂಬುದು ಸ್ಪಷ್ಟವಾಗುತ್ತದೆ.

ಇನ್ನಳಿಯಿತು, 'ಶಿವಾರಾಧನ ಬುದ್ಧಿ'ಯ ಮಾತು. ನಿಜವಾಗಿಯೂ ಶಿವಾರಾಧನ ಬುದ್ಧಿಯುಳ್ಳವನೇ ಶಿಷ್ಯ, ಸತ್ಯಸಾಧಕ. ಶಿವರಾಧನ ಬುದ್ಧಿಯಿಲ್ಲ ದವನು ಎಲ್ಲಿದ್ದರೇನು ? ಹೇಗಿದ್ದರೇನು ? ಅಂಥವನ ಮನಸ್ಸನ್ನು ಆರಾಧನ ಮಾಡಿದ ಆಚಾರ್ಯನ ಶ್ರಮವೂ ಶಿಕ್ಷಣವೂ ಉಪದೇಶವೂ ವ್ಯರ್ಥವಾಗುವುವು. "ಅರಿಯದ ಶಿಷ್ಯಂಗೆ ಅನುಗ್ರಹ ಮಾಡಿದಡೇನಪ್ಪುದೆಲವೋ ! ಅಂಧಕನ ಕೈಯ ಅಂಧಕ ಹಿಡಿದಂತೆ ಮುಂದೇನಪ್ಪುದು ಹೇಳೆಲೋ ಮರುಳೇ ! ಬಹು ಮಾತಿನ ರಂಜನೆಯನಾಡದಿರು. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಹುಸಿಯ ಹೆಸರ ದವನಲ್ಲ."

"ಹಲವು ಕಾಲ ಹಂಪೆಯ ಸಂಗದಲ್ಲಿರ್ದಡೇನು, ಬಕನು
ಶುಚಿಯಾಗಬಲ್ಲುದೆ ? ಗಂಗಾ ಸಧಿಯೊಳಗಿರ್ದಡೇನು,
ಪಾಷಾಣ ಮೃದುವಾಗಬಲ್ಲುದೆ ? ಕಲ್ಪತರುವಿನ ಸನ್ನಿಧಿಯ
ಲ್ಲಿರ್ದಡೇನು, ಒಣಕೊರಡು ಕೊನ ಫಲವಾಗಬಲ್ಲುದೆ ?
ಕಾಶೀಕ್ಷೇತ್ರದಲ್ಲಿ ಒಂದು ಶುನಕನಿರ್ದಡೇನು, ಪಂಚಾಮೃತಕ್ಕೆ
ಸಲುವುದೇ ಆದರ ಹಾಲು ? ತೀರ್ಥದೊಳಗೊಂದು
ಗಾರ್ದಭನಿರ್ದಡೇನು, ಅದು ಕಾರಣಿಕನಾಗಬಲ್ಲುನೆ ?
ಕಂಡುಗ ಹಾಲಿನೊಳಗೊಂದು ಇದ್ದಲಿ ಇರ್ದಡೇನು, ಒಳಿತಾಗ
ಬಲ್ಲುದೆ ? ಇದು ಕಾರಣ ನಮ್ಮ ಕೂಡಲ ಚೆನ್ನ ಸಂಗನ ಶರಣರ
ಸನ್ನಿಧಿಯಲ್ಲಿರ್ದಡೇನು ಅಸಜ್ಜನನು ಸದ್ಭಕ್ತನಾಗಬಲ್ಲನೆ ?"

ಶಿವಬುದ್ಧಿಯಿಲ್ಲದವರಿಗೆ ಶಿವದೀಕ್ಷೆಯನ್ನು ಕೊಟ್ಟರೂ ಫಲವಿಲ್ಲ.

"ಸಗಣಿಯ ಬೆನಕಂಗೆ ಸಂಪಿಗೆಯ ಅರಳಲ್ಲಿ ಪೂಜಿಸಿದರೆ
ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣ !
ಮಣ್ಣ ಪುತ್ಥಳಿಯ ಮಾಣದೆ ತೊಳೆದರೆ ನಿಚ್ಚ ಕೆಸರುಹು
ದಲ್ಲದೆ ಅದರ ಅಚ್ಚುಗ ಬಿಡದಣ್ಣ !
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟವನೇಕೆ ಸದ್ಭಕ್ತನಹನು ಕೂಡಲ ಸಂಗಮದೇವಾ ?"

ಈ ಮಾತುಗಳಿಂದ ಮನದಟ್ಟಾಗುವುದು. ದುರ್ಬುದ್ಧಿಯುಳ್ಳವರಿಗಿಂತ ಶಿವಬುದ್ಧಿಯುಳ್ಳವರು ಸಾವಿರ ಪಾಲಿಗೂ ಶ್ರೇಷ್ಠ. ಶಿವ ಬುದ್ಧಿಯಿಂದ ಮಾಡುವ ಕ್ರಿಯೆಗೆ ಕಳೆಯೇರುತ್ತದೆ ; ಕಲಿತನ ಕೂಡಿಬರುತ್ತದೆ. ಇಲ್ಲವಾದರೆ ವಿಹಿತ ಕ್ರಿಯೆಯೂ ವ್ಯರ್ಥವಾಗುತ್ತದೆ. ಶಿವಬುದ್ಧಿಯಿಲ್ಲದ ದಕ್ಷನು ಮಾಡಿದ ಯಾಗ ವಿಹಿತವಾದರೂ ಅಹಿತವನ್ನು ತಂದಿತು ; ಅವಿಹಿತವೆಂದೆನಿಸಿತು.

ಇನ್ನು ಎರಡನೆಯ ಮಂತ್ರದಲ್ಲಿ ಹರಪೂಜೆಗೆ ಗುರುವಿನಾದೇಶವೇ ಮೂಲ ವೆಂದು ಹೇಳಲಾಗಿದೆ. ಇದರಿಂದ ಗುರುವಚನಕ್ಕಿರುವ ಪ್ರಾಶಸ್ತ್ಯ ಪರಿಗಣಿತ ವಾಗಿದೆ. ಸುಜ್ಞರು ಸತ್ಯಶೀಲರು ಶ್ರೀಗುರುವಿನ ಆದೇಶವನ್ನು ಮೀರರು. ಮೀರಿ

ಮಾಡಿದ ಕ್ರಿಯೆಗಳು ಫಲಿಸವು. ಶಿಷ್ಯನಿಗೆ ಗುರು ಋಣ ತೀರಿಸದಂತಹುದು; ಇದನ್ನು ಗುರುತಿಸದ ಜಡರು ಗುರುವಿನ ವಿಷಯದಲ್ಲಿ ದುರ್ಲಕ್ಷ್ಯದಿಂದಿರುವರು ; ದುರ್ಗತಿಗಿಳಿಯುವರು.

"....ಶ್ರೀಗುರು ತನ್ನ ಹಸ್ತಾಬ್ಜ ಮಥನದಿಂದ ಆಕರ್ಷಣೆಯ ಮಾಡಿ ತೆಗೆದು, ಲಿಂಗದ ತನುವಿನೊಳಗಿರಿಸಿ, ತಲ್ಲಿಂಗವನಂಗದಲ್ಲಿ ಸ್ಥಾಪ್ಯವ ಮಾಡಿ ಸುಜ್ಞಾನ ಕ್ರಿಯೆಯನುಪದೇಶವ ಮಾಡಿರಲು ಸತ್ಕ್ರಿಯಾ ಮಥನದಿಂದ ಜೀವ ಶಿವ ಸಂಗವಹ ಬಟ್ಟೆಯನರಿಯದೆ ಹಲವು ಬಟ್ಟೆಯಲ್ಲಿ ಹರಿವುತಿಪ್ಪ ಅವಿದ್ಯಾ ಸಂಬಂಧಿಗಳು, ಕರ್ಮ ನಿರ್ಮೂಳವಾಗದ ಜಡರುಗಳು, ಗುರುವಚನ ಪರಾಙ್ಮುಖರು, ಲಿಂಗನಿಷ್ಠಾವಿರಹಿತರು ನಿಮ್ಮನೆತ್ತಬಲ್ಲರು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ?"

ಗುರುವಿನಪ್ಪಣೆಯಿಲ್ಲದೆ ಹರಪೂಜೆ ಸಫಲವಾಗದು. ಗುರುವಿನ ಉಪದೇಶ ವಿಲ್ಲದೆ ಹರಪೂಜೆ ಘಟಿಸದು. ಘಟಿಸಿದರೂ ಫಲಿಸದು. ಹೀಗಿದ್ದೂ ಗುರುವಿನ ಅಪ್ಪಣೆಯನ್ನು ಗಮನಿಸದಿದ್ದರೆ ಗತಿಯಾಗಲಾರದು. "ಉಣದೆ ತಣಿವ ಗುರುವಿನ ಹೆಸರುಗೊಳ್ಳದ ಶಿಷ್ಯನ ಪೂಜೆ ಫಲಿಸದಯ್ಯ ; ಭಕ್ತಿ ನಿಲ್ಲದಯ್ಯ, ಲಿಂಗವನಿತ್ತ ತಂದೆಯ ಅಜ್ಞಾನಿಗಳೆತ್ತ ಬಲ್ಲರಯ್ಯ ಕಲಿದೇವಯ್ಯ ?" ಆ ಪರಮೇಶ್ವರನನ್ನು ಆಚರಲಿಂಗದಲ್ಲಿ ತಂದು ತೋರಿಸಿದವನು ಕರಸ್ಥಲಕ್ಕೆ ಕರುಣಿಸಿದವನು ಗುರುದೇವನು, ಪ್ರತ್ಯಕ್ಷ ಪರಮೇಶ್ವರನು.ತತ್ವವನ್ನು ತಿಳುಹಿದ ತಂದೆ. ಗುರುವನ್ನು ಬಿಟ್ಟು ಪರವಿಲ್ಲ. "ಗುರುಕಾರುಣ್ಯವೇ ಸದಾಚಾರ. ಗುರುಕಾರುಣ್ಯವೇ ಶಿವಾಚಾರ, ಗುರುಕಾರುಣ್ಯವೇ ಪ್ರಸಾದ ರುಚಿ ಮುಂದೆ ಗುರು, ಹಿಂದೆ ಲಿಂಗ ಕೂಡಲ ಸಂಗಮದೇವಾ !"

"ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ
ಹಿಡಿದಿಹನೆಂದಡೆ ಸಿಕ್ಕದೆಂಬ ಬಳಿಲಿಕೆಯ ನೋಡಾ !
ಕಂಡುದನೇ ಕಂಡು ಗುರುಪಾದವ ಹಿಡಿದಲ್ಲಿಯೇ
ಕಾಣಬಹುದು ಗುಹೇಶ್ವರಾ !"

"ಗುರುವಿಡಿದು ಕುರುಹ ಕಾಣಬೇಕು. ಗುರುವಿಡಿದು
ಅರುಹಕಾಣಬೇಕು: ಗುರುವಿಡಿದು ಆಚಾರವ ಕಾಣಬೇಕು.
ನಿಜವಿಡಿದು ನಿಮ್ಮ ಅಖಂಡೇಶ್ವರನ ಕೂಡಬೇಕು."

"ಶಿವಪಥವನರಿವಡೆ ಗುರುಪಥವೇ ಮೊದಲು."

ಇವೆಲ್ಲ ಉಕ್ತಿಗಳು ಗುರುವಿನ ಹೆಚ್ಚಳಿಕೆಯನ್ನು ಹೇಳಿ ಗುರುವಿನ ಆದೇಶವನ್ನು ಅವಶ್ಯವಾಗಿ ಆರಾಧನೆಗೆ ಆದಿಯಲ್ಲಿ ಅಂಗೀಕರಿಸಬೇಕೆಂಬ ಭಾವಕ್ಕೆ ಪುಷ್ಟಿಯನ್ನೊದಗಿಸಿವೆ.

"ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ! ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ಪ್ರಕಾಶಂತೇ ಮಹಾತ್ಮನಃ ॥" ಮಹಾದೇವನಲ್ಲಿರುವಂತೆ ಗುರುದೇವನಲ್ಲಿಯೂ ಪರಾಭಕ್ತಿ ಇರಬೇಕು. ಇದ್ದರೆ ಎಲ್ಲ ಶ್ರೇಯಸ್ಸುಗಳು ಸಂಪತ್ತುಗಳು ಉಂಟಾಗುತ್ತವೆ ಗುರುವಿಲ್ಲದೆ ಇಹವಿಲ್ಲ ಪರವಿಲ್ಲ, ಕಣ್ಣಕತ್ತಲೆ ಕಳೆದು ಎಲ್ಲವೂ ಬುದ್ಧಿ ಭಾವಗಳಿಗೆ ಹೊಳೆದು ಅಸಾಧ್ಯವೊ ಸಾಧ್ಯವಾಗಬೇಕಾದರೆ ಗುರುವಿನ ಕರುಣೆ ಬೇಕು, ಗುರುವಿನ ಆದೇಶ ಆಗಬೇಕು ; ಎಂದು ಹೇಳಿ ಶ್ವೇತಾಶ್ವತರಶ್ರುತಿ ಮುಂದೆ ಮಾತಾಡದೆ ಮುಕ್ತಾಯಗೊಂಡಿವೆ.

ಇನ್ನು ಅದೇ ಮಂತ್ರವ ಎರಡನೆಯ ಪಂಕ್ತಿಯಲ್ಲಿ ಪರಮೇಶ್ವರನೇ ಪರತರನು, ಆತನ ಪೂಜೆಯೇ ಪೂಜೆ ಅವನಲ್ಲಿ ಉಳಿದೆಲ್ಲ ದೇವತೆಗಳು ಅಡಕವಾಗಿದ್ದಾರೆ. ಆದರಿಂದಾಗಿ ಆತನೊಬ್ಬನನ್ನು ಆರಾಧಿಸಿದರೆ ಉಳಿದವರನ್ನು ಆರಾಧಿಸಿದಹಾಗುತ್ತದೆಯೆಂದು ಉದ್ಘೋಷಿಸಲಾಗಿದೆ. ರೇಣುಕ ಜಗದ್ಗುರುವಿನ ಈ ಪ್ರತಿಪಾದನೆಯನ್ನು ಪೋಷಿಸಿದೆ ಈ ಕೈವಲ್ಯೋಪನಿಷದ್ವಾಣಿ :

"ಸ ಏವ ಸರ್ವಂ ಯದ್‌ಭೂತಂ ಯಚ್ಚ ಭವ್ಯಂ ಸನಾತನಂ !
ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ "

ಈ ಕೈವಲ್ಯೋಪನಿಷದ್ವಾಣಿಗೆ ಪ್ರಕಾಶವಾಗಿವೆ ಶ್ವೇತಾಶ್ವತರಶ್ರುತಿವಾಣಿ :

"ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನಜ್ಯಾಯೋಽಸ್ತಿ ಕಶ್ಚಿತ್ !"....'ಏತದ್ವಿದುರಮೃತಾಸ್ತೇ ಭವಂತಿ' 'ತಮೇವ ವಿದಿತ್ವಾತಿಮೃತ್ಯು ಮೇತಿ ನ್ಯಾನ್ಯಃ ಪಂಥಾ ವಿದ್ಯತೇ ಅಯನಾಯ' 'ಮಹಾನ್ ಪ್ರಭುರ್ವೈ' 'ಸರ್ವಸ್ಯ ಪ್ರಭುಮೀಶಾನಂ ಸರ್ವಸ್ಯ ಶರಣಂ ಬೃಹತ್' 'ಯೋದೇವನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ' ,ಯೋ ದೇವನಾಮಧಿಪೋ ಯಸ್ಮಿಲ್ಲೋಕಾಅಧಿಶ್ರಿತಾಃ ! ಯ ಈಶೇsಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ ಹವಿಷಾವಿಧೇಮ ! ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ವೇವತಾನಾಂ ಪರಮಂ ಚ ದೈವತಂ ! ಪತಿಂ ಪತೀನಾಂ ಪರಮಂ ಪರಃ ತದ್ವಿದಾಮ ದೇವಂ ಭುವನೇಶಮೀಡ್ಯಂ "

ದೇವತೆಗಳಿಗೆಲ್ಲ ದೊಡ್ಡವನು ಆದ್ದರಿಂದ ಆತ ಪರಮೇಶ. ಆತನ ಆರಾಧನೆಯಿಂದ ಅಮೃತತ್ವ ಅಳವಡುತ್ತದೆ. ಆತನ ಆ ಹಿರಿಯೊಡಲಲ್ಲಿ ಉಳಿದೆಲ್ಲ ದೇವತೆಗಳಿದ್ದಾರೆ ; ಎಲ್ಲ ಲೋಕಗಳಿವೆ ; ಎಲ್ಲ ಪ್ರಾಣಿಗಳಿವೆ. ಅಂತಹ ಪರಮೇಶ್ವರನಿಗೆ ಪೂಜೆಯನ್ನು ಸಲ್ಲಿಸಬೇಕು ಪರಮಗುರುವಿನ ಅಪ್ಪಣೆ ಪಡೆದು !

ಮಾಹೇಶ್ವರಾಂಗನು ಯಾವಾಗಲೂ ಆ ಪರಶಿವನ ಪೂಜೆಗೆಬೇಕಾದ ಸಾಹಿತ್ಯ ಸಂಪಾದನೆಯಲ್ಲಿ ನಿರತನಾಗಿರಬೇಕು. ಈ ಸತ್ಯ ಶುದ್ಧ ಕಾರ್ಯಕ್ಕಿಂತ ಬೇರೆ ಕ್ರಿಯಾಲಿಂಗಾರಾಧನೆಯಿಲ್ಲ, ಶಿವಯೋಗ ಸಂಪ್ರಾಪ್ತಿಯಿಲ್ಲ. ಇದರಿಂದ ತ್ರಿಕರಣಗಳು ಶುಚಿಯಾಗುತ್ತವೆ ! ಶಿವತ್ವ ಪ್ರಾಪ್ತಿಯಾಗುತ್ತದೆ,

"ನಾನು ಆರಂಭ ಮಾಡುವೆನಯ್ಯಾ ಗುರುಪೂಜೆಗೆಂದು. ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವಾವ ಕರ್ಮಂಗಳ ಮಾಡಿದಡೆಯೂ ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ, ಮತ್ತೊಂದು ಕ್ರಿಯೆ ಮಾಡೆನು. ನಿಮ್ಮ ಸೊಮ್ಮ ನಿಮಗೆ ಸಲಿಸುವೆನು ನಿಮ್ಮಾಣೆ ಕೂಡಲ ಸಂಗಮದೇವಾ !"

"ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ, ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ....

ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನ ಒಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲ ಸಂಗಮದೇವಾ !"

"ತನುವ ಬೇಡಿದಡೀವೆ, ಮನವ ಬೇಡಿದಡೀವೆ ; ಧನವ ಬೇಡಿದಡೀವೆ." "ಅರ್ಥವನರ್ಥವ ಮಾಡಿ ಕೋಳಾಹಳಂಗೈವುತ್ತಿರಲಿ.....ಇನ್ನೆನ್ನಂಗದ ಮೇಲೆ ಬರಲಿ....ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತಿರಲಿ ಮತ್ತೆಯೂ ಲಿಂಗಾರಾಧನೆಯ ಮಾಡುವೆ. ಜಂಗಮಾರಾಧನೆಯ ಮಾಡುವೆ. ಪ್ರಸಾದಕ್ಕೆ ತಪ್ಪೆ. ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ ನೀನಂದೇ ಮೂಗ ಕೊಯ್ಯಿ ಕೂಡಲ ಸಂಗಮದೇವಾ !"

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಅಪ್ಪಣೆ ಮಾಡಿದ 'ಸದಾ ಶಿವಾರ್ಚನೋಪಾಯ ಸಾಮಗ್ರೀ ವ್ಯಗ್ರ ಮಾನಸಃ' ಎಂಬ ವಾಕ್ಯಕ್ಕೆ ಉಪವ್ಯಾಖ್ಯಾನದಂತಿವೆ ಈ ಬಸವಣ್ಣನವರ ವಚನಗಳು. ಅದರಲ್ಲಿಯೂ ಮೊದಲಿನದಾದ 'ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು,...ಎಂಬ ವಚನವು ಭಾವಪೂರ್ಣ ಭಾಷ್ಯದಂತಿದೆ. 'ನಿಮ್ಮ ನಿಲವಿಂಗೆ ಕುದಿವೆನಲ್ಲದೆ'.... ಎಂಬ ಮಾತು ಅನುವಾದ ಸೂಚಕ ಸೂತ್ರದಂತಿದೆ.

ಇನ್ನು ಕ್ರಿಯಾಯೋಗದ ಪ್ರತೀಕವಾಗಿದೆ ಶಿವಯೋಗ. ಶಿವಯೋಗದ ಗರ್ಭದಲ್ಲಿರುವುದೆಲ್ಲ ಕ್ರಿಯಾಯೋಗವೆ! ಶಿವಧ್ಯಾನ ಶಿವವ್ರತ ಶಿವಪೂಜಾದಿಗಳು ಕ್ರಿಯಾಗಮದ ಪ್ರತೀಕವಲ್ಲದೆ ಮತ್ತೇನು ? ಇದನರಿತು ಕ್ರಿಯಾಮು ಸಾಕ್ಷಾತ್ಕಾರಕ್ಕೆ ಸನ್ನದ್ಧನಾದ ಮಾಹೇಶ್ವರಾಂಗನು ಶಿವಯೋಗರತನಾಗಬೇಕೆಂದು ಜಗದ್ಗುರು ರೇಣುಕರು ಉಪದೇಶಿಸಿದ್ದಾರೆ; ಜತೆಗೆ ಜ್ಞಾನಯೋಗವೂ ಶಿವಯೋಗ ಪದ ಪ್ರಯೋಗದಿಂದ ಸೂಚ್ಯವಾಗಿದೆ, ಈ ಸೂಚ್ಯಾರ್ಥವನ್ನು ಮುಂದಿನ ಮಂತ್ರಶ್ಲೋಕದಿಂದ ಸುವಾಚ್ಯವನ್ನಾಗಿಸಿದ್ದಾರೆ, ಕ್ರಿಯಾಜ್ಞಾನಗಳಿಗಿರುವ ಸಮನ್ವಯ ಭಾವವನ್ನು ಸುಂದರವಾಗಿ ನಿರೂಪಿಸಿದ್ದಾರೆ;

"ಅಂಧ ಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣೀ ।
ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ತದ್ವಯ ಮಾಚರೇತ್ ॥
ಜ್ಞಾನೇ ಸಿದ್ಧೇಽಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೇ ।
ಫಲಾಭಿ ಸಂಧಿರಹಿತಂ ತಸ್ಮಾತ್ಕರ್ಮ ನ ಸಂತ್ಯಜೇತ್

ಕುರುಡ-ಕುಂಟರಂತೆ ಜ್ಞಾನಕರ್ಮಗಳು ಪರಸ್ಪರ ಸಾಪೇಕ್ಷವುಳ್ಳವಾಗಿವೆ. ಇವೆರಡರಿಂದೊದಗುವ ಫಲದಲ್ಲಿ ಅಪೇಕ್ಷೆಯಿಲ್ಲದೆ ಇವೆರಡನ್ನು ತ್ಯಾಗಿಯಾದ ಯೋಗಿಯು ಆಚರಿಸಬೇಕು.

ಜ್ಞಾನಿಗಳಿಗೆ ಜ್ಞಾನಸಿದ್ಧಿಯಾಗಿದ್ದರೂ ಕ್ರಿಯಾಚರಣೆಯು ವಿಹಿತವಾಗಿದೆ. ಕಾರಣ ಫಲಾಪೇಕ್ಷೆಯಿಲ್ಲದೆ ಕ್ರಿಯೆಯನ್ನು ಕೈಗೊಳ್ಳಬೇಕು. ಜ್ಞಾನಸಿದ್ಧನಿಗೆ ಕ್ರಿಯೆ ನಿಷಿದ್ಧವಲ್ಲ ; ತಾಜ್ಯವಲ್ಲ,

ಜ್ಞಾನದಿಂದಲೇ ಮೋಕ್ಷ, ಕರ್ಮದಿಂದ ಮೋಕ್ಷವಿಲ್ಲ ; ಎಂದು ಅದ್ವೈತ ವಾದ, ಇವೆರಡೂ ಅಪೂರ್ಣವಾದ ; ಏಕೈಕವಾದ. ನೀರಸವಾದ. ಏಕೆಂದರೆ ಕರ್ಮ ಕುರುಡ ; ಜ್ಞಾನ ಕುಂಟ. ಕರ್ಮ ನೋಡಲಾರದು ; ಜ್ಞಾನ ನಡೆಯ ಲಾರದು. ಕುರುಡ ಕುಂಟರಿಬ್ಬರಿಗೂ ಪರಸ್ಪರ ಸಹಾಯವಿಲ್ಲದೆ ನಿರ್ದಿಷ್ಟಸ್ಥಳಕ್ಕೆ ಇಬ್ಬರೂ ಸೇರಲಾರರು. ಅಪಾಯದಿಂದ ತಪ್ಪಿಸಿಕೊಳ್ಳಲಾರರು.

"ನಕ್ರಿಯಾರಹಿತಂ ಜ್ಞಾನಂ, ನ ಜ್ಞಾನರಹಿತಾ ಕ್ರಿಯಾ ।
ಅಪಶ್ಯನ್ನಂಧಕೋ ದಗ್ಧೋsಗಚ್ಛನ್ ಪಂಗುಶ್ಚ ದಹ್ಯತೇ ॥"

ಎಂದು ಶಿವರಹಸ್ಯ ವಚನವು ಸ್ವಾರಸ್ಯವಾಗಿ ಹೇಳಿದೆ. ಬೆಂಕಿಯ ಅನಾಹುತಕ್ಕೆ ಸಿಕ್ಕ ಕುಂಟ ಕುರುಡರಿಬ್ಬರೂ ಅನ್ಯೋನ್ಯರಾಗಿ ನೆರವಾಗದಿದ್ದರೆ ಬೆಂಕಿಯಲ್ಲಿ ಬೆಂದು ಹೋಗುವುದೇ ಅವರಿಗೆ ಗತಿ ! ಅದೇ ಅವರಿಬ್ಬರೂ ಸಹಕರಿಸಿದರೆ ಸುಲಭ ವಾಗಿ ಅಗ್ನಿಯ ಅನಾಹುತದಿಂದ ಪಾರಾಗಬಲ್ಲರು. ಕುರುಡ ಹೆಳವನನ್ನು ಹೆಗಲ ಮೇಲೆ ಹೊತ್ತರೆ ಹೆಳವ ಕುರಡನಿಗೆ ದಾರಿತೋರಿ ಮುತ್ತಿಬರುವ ಉರಿಯಿಂದ ಪಾರಾಗಿ ಹೋಗಬಲ್ಲರು. ಇದರಂತೆ ಜ್ಞಾನ ಕ್ರಿಯೆಗಳಿಗೆ ಪರಸ್ಪರತೆಯಿದೆ. ಇವೆರಡರ ಅನ್ಯೋನ್ಯತೆಯಿಂದ ಚಾರಿತ್ರ ಚಲುವಾಗುತ್ತದೆ. ಚರಿತಾರ್ಥ ಚೆನ್ನಾ ಗುತ್ತದೆ. ಚಕ್ಷು-ಚರಣಗಳೆರಡರ ನೆರವಿನಿಂದ ಚಲನ ಕ್ರಿಯೆ ಉಂಟಾಗಿ ಹೋಗ ಬೇಕಾದಲ್ಲಿಗೆ ಹೋಗಲು ಹೇಗೆ ಸಾಧ್ಯವೋ ಹಾಗೆ ಜ್ಞಾನಕ್ರಿಯೆ ಗಳಿಂದ ಶಿವಸಾಕ್ಷಾತ್ಕಾರ ಸಾಧ್ಯ.

ಕುತಃಸ್ಯಾದಾಗಮೋ ವಹ್ನೇಮಂಥನ ಕ್ರಿಯಯಾ ವಿನಾ ।
ಆಗಮು ಶ್ಚಾತ್ಮಸಂಸ್ಥಸ್ಯ ಶಿವಸ್ಯಕ್ರಿಯಯಾ ವಿನಾ ॥

ಮಥನ ಕ್ರಿಯೆಯಿಲ್ಲದೆ ಬೆಂಕಿ ಬಾರದು, ಬೆಣ್ಣೆ ತೋರದು. ಅಂತೆಯೇ ಕ್ರಿಯಾಚರಣೆಯಿಲ್ಲದೆ ಒಳಗಿರುವ ಶಿವಕಳೆಯು ಹೊರಹೊಮ್ಮದು, ಹುಲುನಡೆ ತೊಲಗದು.

ಕ್ರಿಯೆಯೊಳಗೆ ಜ್ಞಾನವಿದೆ. ಜ್ಞಾನದೊಳಗೆ ಕ್ರಿಯೆಯಿದೆ. ಇವೆರಡಕ್ಕೂ ವಾಸ್ತವವಾಗಿ ಬೇದವಿಲ್ಲ. ಹಾಲು ಬೆಣ್ಣೆಗೆ ಹೇಗೆ ಭೇದವಿಲ್ಲವೋ ಹಾಗೆ !

"ಕ್ರಿಯಾ ಜ್ಞಾನವೆಂಬುದಕ್ಕೆ ಭೇದ ತಿಲಾಂಶವಿಲ್ಲ ನೋಡಾ !
'ದ್ವಂದ್ವೇ ನ ಭೇದಂ' ಎಂಬ ಅಥರ್ವಣ ಶಾಖೆಯದು ಸರಿಯೆ !
ಸೂಕ್ಷ್ಮೇಂದ್ರಿಯ ನಿಗ್ರಹದಲ್ಲಿ ಜ್ಞಾನವೆನಿಸಿತ್ತು. ಸ್ಥೂಲೇಂದ್ರಿಯ
ನಿಗ್ರಹದಲ್ಲಿ ಕ್ರಿಯೆಯೆನಿಸಿತ್ತು. 'ಜ್ಞಾನಂಕ್ರಿಯಾ ನ ಭಾತಿ
ಕ್ರಿಯಾವಿನಾ ಜ್ಞಾನಂ ನ ಭಾತಿ' ಎಲೈ ಕಪಿಲ ಸಿದ್ಧಮಲ್ಲಿಕಾರ್ಜುನಾ !"

ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯಾ. ಅದು ಹೇಗೆಂದಡೆ ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೇ ಅಯ್ಯಾ ? ಆ ಪ್ರಾಣವಿಲ್ಲದೆ ಕಾಯಕ್ಕೆ ಚೈತನ್ಯ ಉಂಟೇ ಅಯ್ಯಾ ? ಅದು ಕ್ರಿಯೆಯಿಲ್ಲದೆ ಜ್ಞಾನಕ್ಕೆ ಆಶ್ರಯವಿಲ್ಲ, ಕ್ರಿಯಾ ಜ್ಞಾನ ಪ್ರಕಾಶವಿಲ್ಲದೆ ಲಿಂಗಕ್ಕೆ ಆಶ್ರಯವಿಲ್ಲ. ಇದು ಕಾರಣ ಜ್ಞಾನ ಕ್ರಿಯೋಪಚಾರಗಳಿರಬೇಕೆಂದನಯ್ಯಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ !

ಹಕ್ಕಿಯ ಎರಡು ರೆಕ್ಕೆಗಳಂತೆ ; ಉಯ್ಯಾಲೆಯ ಎರಡು ಹಗ್ಗಗಳಂತೆ, ಕಣ್ಣು ಕಾಲುಗಳಂತೆ-ಜ್ಞಾನಕ್ರಿಯೆಗಳೆರಡೂ ಷಟ್‌ಸ್ಥಲ ಸಾಧಕನಿಗೆ ಬೇಕೇ ಬೇಕು. ಜ್ಞಾನಸಿದ್ಧಿಯಾದರೂ ಕ್ರಿಯೆಯನ್ನು ಬಿಡಬಾರದು ; ಕ್ರಿಯಾಸಿದ್ಧಿಯಾದರೂ ಜ್ಞಾನವನ್ನು ಬಿಡಬಾರದು. ಬಿಡಬೇಕಾದುದು ಇವೆರಡರಿಂದೊದಗುವ ಫಲಾಪೇಕ್ಷೆ ಮಾತ್ರ ! ಇದರಿಂದಾಗಿ ಶ್ರೀ ರೇಣುಕ ಜಗದ್ಗುರುವು ಫಲಾಭಿಸಂಧಿರಹಿತ ಕರ್ಮವನ್ನು ಬಿಡದೆ ಆಚರಿಸಬೇಕೆಂದು' ಅಪ್ಪಣೆ ಮಾಡಿರುವರು.

"ಕ್ಷೀರ ಸಾಗರದೊಳಗಿರ್ದ ಹಂಸೆ ಹಾಲ ಬಯಸಲುಂಟೆ ?
ಪುಷ್ಪದೊಳಗಿರ್ದ ತುಂಬಿ ಪರಿಮಳವನರಸಲುಂಟೆ ?

ಕಡಲೊಳಗಿರ್ದ ಕಪ್ಪೆ ಜಲವ ಬಯಸಲುಂಟೆ ? ಇದೆಂತಯ್ಯಾ ?
ತಾ ಲಿಂಗದೊಳಗಿರ್ದು, ಬೇರೆ ಕಾಮ್ಯದೊಳಗಿರ್ಪ
ಭ್ರಾಂತರನೇನೆಂಬೆನಯ್ಯಾ ಗುಹೇಶ್ವರಾ ?"

"ಲೋಕ ತನ್ನೊಳಗಾದ ಬಳಿಕ ಲೋಕದ ಸೊಮ್ಮು ತನಗೇಕಯ್ಯಾ ?
ಪರುಷ ತಾನಾದ ಬಳಿಕ ಸುವರ್ಣದ ಸೊಮ್ಮು ತನಗೇಕಯ್ಯಾ ?
ಧೇನು ತಾನಾದ ಬಳಿಕ ಗೋವಿನ ಸೊಮ್ಮು ತನಗೇಕಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನ ?"

ಕ್ರಿಯೆಯೇ ತನ್ನ ಸರ್ವಸ್ವ ಲಿಂಗವಾಗಿರುವಾಗ ತನ್ನ ಸರ್ವಜ್ಞ ಕ್ರಿಯಾ ಲಿಂಗವೇ ತಾನಾಗಿರುವಾಗ ಬೇರೆ ಫಲದಾಸೆ ತನಗೇಕೆ ? ಇದನರಿಯದೆ ಫಲ ದಾಶೆಯನ್ನು ಮಾಡಿದರೆ ಪರುಷಮಣಿ ಚಿನ್ನವನ್ನು ಅಪೇಕ್ಷಿಸಿದಂತಾಗುತ್ತದೆ.

"ಮಾಡುವ ಭಕ್ತನು ನೀನೇ, ಮಾಡಿಸಿಕೊಂಡ ದೇವನು ನೀನೇ–ಎಂದ ರಿದೆ. ಇದು ಕಾರಣ ಅಖಂಡೇಶ್ವರಾ, ನಿಮ್ಮ ಫಲಪದವ ಬೇಡಲಿಲ್ಲ; ನೀವು ಒಲಿದು ಎನಗೆ ಕೊಡಲಿಲ್ಲ.

ಭಕ್ತ ಭಗವಂತರು ಬೇರಲ್ಲದಿರುವಾಗ ಬೇಡುವವರಾರು, ಕೊಡುವವ ರಾರು ? ಬೇಡುವುದೇನನ್ನು, ಕೊಡುವುದೇನನ್ನು ? "ಮಾಡುವಂತಿರ ಬೇಕು. ಮಾಡದಂತಿರಬೇಕು, ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು. ಕೂಡಲಸಂಗಮದೇವರ ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು."

ಹೀಗಾದಾಗ ಕ್ರಿಯೆಯು ಲೇಪ ಕ್ರಿಯಾವಂತನಿಗೆ ಆಗದು. ನಿರ್ಲೇಪ ನಾಗಿಯೇ ನಿಜದತ್ತ ಆತನು ಸಾಗಿರುತ್ತಾನೆ. ಮಾಡಿಯೂ ಮಾಡಿದಂತೆ ಮಾಡುವಿಕೆಯಲ್ಲಿ ತಾನಿಲ್ಲದಂತೆ ಇರುವ ಇಮ್ಮಿನ ಬೆಡಗು ಆತನದು.

"ಅವಲೋಹವ ಪರುಷ ಮುಟ್ಟಲು ಸುವರ್ಣವಾಗುತ್ತಿದೆ. ಕಬ್ಬಿಣ ಇದ್ದಲಿಯ ಹಾಕಿ ಅಗ್ನಿಯನಿಕ್ಕೆ ಕಾವುಗೊಳಲಾಗಿ, ಕರಗಿ ನೀರಾಗುತ್ತಿದೆ. ಶರ ಹಾಲಿಗೆ ನೀರ ಹೊಯ್ದರೆ, ಅದು ಏರುವ ಭೇದವನಾರೂ ಅರಿಯರು. ಶರ ಣರು ತನುವಿಡಿದಿದ್ದರೂ ಇದ್ದವರಲ್ಲ. ಅದು ಹೇಗೆಂದರೆ, ಹಿಂದಣ ದೃಷ್ಟದ

ಪರಿಯಲ್ಲಿ ಲಿಂಗವ ಹಿಡಿದಂಗಕ್ಕೆ ಬೇರೊಂದು ಸಂಗ ಸುಖ ಉಂಟೆ ? ಅದು ಕಾರಣ, ಸರ್ವಾಂಗ ಲಿಂಗಿಯಾದ ಶರಣನು ಮುಟ್ಟಿದ, ತಟ್ಟಿದ, ನೋಡಿದ, ನುಡಿದ. ಸೋಂಕಿದನೆನ್ನಬೇಡ. ಅದು ಕಾರಣ ಕಬ್ಬಿಣ ನೀರುಂಡಂತೆ ಅರ್ಪಿತವ ಬಲ್ಲ ಐಕ್ಯಂಗೆ ಕೈಯೆಲ್ಲ ಬಾಯಿ. ಇದರ ಭೇದವ ನಿಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನೇ ಬಲ್ಲ."

"ಕಾಯಧರಿಸಿದವ ನವನೀತ ರೋಮದಂತಿರಬೇಕು. ಮುಕುರದಲ್ಲಿಯ ಪ್ರತಿಬಿಂಬದಂತಿರಬೇಕು. ಬೆಟ್ಟದಲ್ಲಿಯ ಕಾಡಗಿಚ್ಚಿನಂತಿರಬೇಕು ಅಷಾಢದಲ್ಲಿಯ ಚಂಡಮಾರುತನಂತಿರಬೇಕು. ಸರ್ವರಲ್ಲಿ ಸರ್ವರಂತಾಗಿರಬೇಕು."

"ಜಲದಲ್ಲಿಯ ಚಂದ್ರನ ಚಲನೆ ಜಲದಲ್ಲಲ್ಲದೆ ನಿಜ ಚಂದ್ರದಲ್ಲಿಲ್ಲವಯ್ಯ. ಘಟದಲ್ಲಿಯ ಬಿಂದುಗಳು ಘಟದಲ್ಲಲ್ಲದೆ ಬಿಂಬದಲ್ಲಿಲ್ಲ ನೋಡಯ್ಯ. ಜಲದಲ್ಲಿಯ ಚಲನೆ. ಘಟದಲ್ಲಿಯ ಬಿಂಬ ನಿಜವಲ್ಲ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ."

"ಲಿಂಗಕ್ಕೆಂದೇ ನೆನೆವೆ. ಲಿಂಗಕ್ಕೆಂದೇ ಮಾಡುವೆ.
ಲಿಂಗಕ್ಕೆಂದೇ ಕೂಡುವೆನು ನಾನಯ್ಯ. ಸಕಲ ಪದಾರ್ಥಂಗಳ
ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಂಗಳ ನರಿಯೆನಯ್ಯ.
ಲಿಂಗಕ್ಕೆಂದೇ ಕಾಮಿಸುವೆನು ನಿಃಕಾಮಿಯಾಗಿ
ಎನ್ನದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ
ಸತಿಯರಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ
ಕಾರಣ ಲಿಂಗಕ್ಕೆಂದೇ ಕೈಕೊಂಬೆನು
ಅನರ್ಪಿತವನರಿಯೆ ಕೂಡಲಸಂಗಮದೇವಾ !"

"ಸಕಲ ಪ್ರಾಣಿಗಳಿಗೆ ಲೇಸಾಗಲೆಂದು ಮುಜ್ಜನಕ್ಕೆರೆವ
ಲಾಂಛನದಾರಿಗಳ ವೇಷಕ್ಕೆ ಶರಣೆಂಬೆನಯ್ಯಾ
ಆ ಲಾಂಛನದ ಹೆಚ್ಚು ಕುಂದನರಸದೆ ಸಕಲ ಪದಾರ್ಥವನು
ಗುರುಲಿಂಗ ಜಂಗಮಕ್ಕೆ ಒಪ್ಪಿಸಿ ಸಕಲ ಕೃತ್ಯಂಗಳಿಂದ
ನಿಮಗೋಸುಗ ತಹೆನು ದಯದಿಂದೆ ಮನೆಗೆ ಬಂದಂತೆ

ಭಯಭಕ್ತಿಯಿಂದ ಪರಿಣಾಮಿಸಿ ಅವರಿಚ್ಛೆಯನೀವೆನು.
ಆತನಿರ್ದಲ್ಲಿಗೆ ಹೋಗಿ, ಕೂಡಲ ಚನ್ನಸಂಗಯ್ಯನಲ್ಲಿ
ನಾನು ಇಲ್ಲ, ನೀನು ಇಲ್ಲ; ನಾನಿಲ್ಲದ ಮುನ್ನ ನೀನಿರ್ದುದಿಲ್ಲ."

ಈ ನಾಲ್ಕು ವಚನಗಳಲ್ಲಿ ಜಗದ್ಗುರು ರೇಣುಕರು ಹೇಳಿದ ನಿಷ್ಕಾಮ ಕ್ರಿಯೆಯ ಮಟ್ಟ ಮೇಲೇರುವ ಬಗೆಯನ್ನು ಬಗೆಯಬೇಕು. ಪರುಷ ಮುಟ್ಟಿದ್ದ ಕಬ್ಬುಣ ತನ್ನತನವನ್ನು ಕಳೆದುಕೊಳ್ಳುವಂತೆ. ನಿಷ್ಕಾಮ ಕ್ರಿಯಾಲಿಂಗವನ್ನು ಮುಟ್ಟಿದ ಕಾಯ ತನ್ನ ಕಾಯಭಾವವನ್ನು ಕಳಚಿಕೊಳ್ಳುತ್ತದೆ. ಕಾಯಕ್ಕೆಂಬ ಕಾಂಕ್ಷೆಯನ್ನೂ ಕಳಚಿಕೊಳ್ಳುತ್ತದೆ. ಲಿಂಗಕ್ಕಾಗಿ ತಾನು ಮಾಡುವದಲ್ಲದೆ ತನಗಾಗಿ ತಾ ಮಾಡದು. ಕಾರಣ ಕ್ರಿಯಾಲೇಪ ಕಿಂಚಿತ್ತಾದರೂ ಅಂಗನಿಗೆ ಉಂಟಾಗದು. ಬೆಣ್ಣೆಯೊಳಗಿನ ಕೂದಲಿನಂತೆ ನಿರ್ಲೇಪನಾಗಿರುತ್ತಾನೆ. ಕನ್ನಡಿಯೊಳಗಿನ ಪ್ರತಿಬಿಂಬದಂತೆ ಆಗು-ಹೋಗು, ನಲಿವು ನೋವುಗಳ ಸೋಂಕಿಲ್ಲದಂತಿರುತ್ತಾನೆ. ಅಂಗಗುಣ ಸಂಗ ರಹಿತನಾಗಿ ಲಿಂಗಗುಣ ಭರಿತನಾಗಿರುತ್ತಾನೆ. ಸ್ವಾರ್ಥವನ್ನು ತ್ಯಜಿಸಿ ಸರ್ವ ಪ್ರಾಣಿಗಳ ಲೇಸಿಗಾಗಿ ಕ್ರಿಯೆಯಲ್ಲಿ ನಿರತನಾಗಿರುತ್ತಾನೆ. ಕವಲು ಬಗೆಗಿಂಬಿರುವುದಿಲ್ಲ. ಚರಾಚರದ ಲೇಸಿಗಾಗಿ ವಿಶಾಲಭಾವದಿಂದ ಆಚಾರಪರನಾಗಿರುತ್ತಾನೆ.

"ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪ್ಯತೇ ।
ಆಚಾರ ಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥
ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ ॥"

ಮಾಹೇಶ್ವರಾಂಗನಿಗೆ ಮಾತ್ರವಲ್ಲದೆ ಮಾನವರಿಗೆಲ್ಲ ಆಚಾರಬೇಕು. ಆಚಾರವೇ ಅಲಂಕಾರವಲ್ಲದೆ ಆಭರಣವಲ್ಲ. ಆಚಾರವಿಲ್ಲದವನು ಲೋಕನಿಂದೆಗೆ ಒಳಗಾಗುವನು.

ಪರಮೇಶ್ವರನು ಆಚಾರವುಳ್ಳ ಜ್ಞಾನಕ್ಕೆ ಪ್ರಸನ್ನನಾಗುತ್ತಾನೆ ಇದರಿಂದಾಗಿ ಜ್ಞಾನಿಯು ಉಸಿರು ಇರುವವರೆಗೆ ಆಚಾರವಂತನಾಗಿಯೇ ಇರಬೇಕು.

ಆಚಾರ್ಯರ ಈ ಆಚಾರ ಪರವಾಣಿಯನ್ನು ಶರಣರು ಹೀಗೆ ಕನ್ನಡಿಸಿ ನುಡಿದಿದ್ದಾರೆ.

"ಆಚಾರವೇ ಭಕ್ತಂಗೆ ಅಲಂಕಾರವು. ಆಚಾರವೇ ಭಕ್ತಂಗೆ ಸರ್ವಪೂಜ್ಯವು. ಇಂತೀ ಆಚಾರವುಳ್ಳವನೇ ಭಕ್ತನು. ಆಚಾರವುಳ್ಳವನೇ ಯುಕ್ತನು. ಆಚಾರವುಳ್ಳವನೇ ಮುಕ್ತನಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ.

ಆಚಾರವಿಲ್ಲದವರಿಗೆ ಜ್ಞಾನವಿಲ್ಲ. ಜ್ಞಾನವಿಲ್ಲದವರಿಗೆ ಭಾವಶುದ್ಧವಿಲ್ಲ. ಭಾವಶುದ್ಧವಿಲ್ಲದವರಿಗೆ ಧ್ಯಾನವಿಲ್ಲ, ಧ್ಯಾನವಿಲ್ಲದವರಿಗೆ ಪ್ರಸಾದವಿಲ್ಲ. ಪ್ರಸಾದವಿಲ್ಲದವರಿಗೆ ಮುಕ್ತಿಯಿಲ್ಲ. ಇದು ಕಾರಣ, ಆಚಾರ ಜ್ಞಾನ ಭಾವವುಳ್ಳವರಿಗೆ ಪ್ರಸಾದ ಉಂಟು. ಪ್ರಸಾದವುಳ್ಳವರಿಗೆ ಮುಕ್ತಿಯುಂಟು, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ.

ಸದಾಚಾರವನಾಚರಿಸುವ ಸತ್ಕ್ರಿಯಾ ಸಂಪನ್ನಂಗೆ ಸಮ್ಯಗ್‌ಜ್ಞಾನ ಉದಯವಹುದು. ಆ ಸಮ್ಯಗ್ ಜ್ಞಾನೋದಯದಿಂದ ತನ್ನ ತಾನರಿದು ತಾನೇ ಶಿವನಹನಲ್ಲದೆ ತನಗೇನೂ ಇದಿರಲ್ಲ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವನೆಯ್ದುವಡೆ ಆಚಾರವೇ ಮುಖ್ಯವಯ್ಯ."

ಆ ಜನ್ಮವೂ ಆಚಾರವಂತನಾಗಿಗಬೇಕೆಂಬ ಆಚಾರ್ಯವಾಣಿಯನ್ನು ಪೋಷಿಸುತ್ತದೆ ಈ ಉಪನಿಷದ್ವಾಣಿ :

ಕುರ್ವನ್ನೇವೇಹ ಕರ್ಮಾಣಿ ಜಿಜಿವಿಷೇತ್-ಶತಗ್ಂ ಸಮಾಃ ।
ಏವಂ ತ್ವ್ರಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ॥"

'ನ ಕರ್ಮ ಲಿಪ್ಯತೇ ನರೇ' ಎಂದು ಹೇಳಿರುವುದರಿಂದ ನಿಷ್ಕಾಮ ಕರ್ಮರೂಪ ಆಚಾರವೇ ಉಕ್ತವಾದಂತಾಗಿದೆ. ಅಂತಹ ಆಚಾರವನ್ನು ಅಜನ್ಮವೂ ಆಚರಿಸಬೇಕೆಂದು ಮೊದಲು ಪಂಕ್ತಿಯಲ್ಲಿ ಆದೇಶಿಸಲಾಗಿದೆ.

ಆಚಾರ ಅವರಿವರಿಗೆಂಬುದಿಲ್ಲ. ಆಚಾರ ಎಲ್ಲರಿಗೂ ಬೇಕು. ಸಾಧಕರಿಗೂಬೇಕು. ಸಿದ್ಧರಿಗೂ ಬೇಕು. ಸಾಧನಗಳಿಗೂ ಬೇಕು. "ಆಚಾರವಿಲ್ಲದ ಗುರು ಭೂತಪ್ರಾಣಿ. ಆಚಾರ ವಿಲ್ಲದ ಲಿಂಗ ಶಿಲೆ. ಆಚಾರವಿಲ್ಲದ

ಜಂಗಮ ಮಾನವ. ಆಚಾರ ವಿಲ್ಲದ ಪಾದೋದಕ ನೀರು, ಆಚಾರ ವಿಲ್ಲದ ಪ್ರಸಾದ ಎಂಜಲು. ಆಚಾರವಿಲ್ಲದ ಭಕ್ತ ದುಃಕರ್ಮಿ. ಇದು ಕಾರಣ, ಅಷ್ಟವನೇರುವುದಕ್ಕೆ ನಿಚ್ಚಣಿಗೆಯೇ ಸೋಪಾನವಯ್ಯಾ ! ಹರಪದವ ನೆಯ್ದುವರೆ ಶ್ರೀ ಗುರು ಹೇಳಿದ ಸದಾಚಾರವೇ ಸೋಪಾನವಯ್ಯಾ! ಗುರೂಪದೇಶವ ಮೀರಿ, ಮನಕ್ಕೆ ಬಂದಂತೆ ವರ್ತಿಸುವ ಪಾಪಿಗಳ ಎನಗೊಮ್ಮೆ ತೋರದಿರಯ್ಯಾ, ಮಹಾ ಲಿಂಗ ಗುರು ಶಿವ ಸಿದ್ಧೇಸ್ವರ ಪ್ರಭುವೇ !"

ಆಚಾರಾಗಮ ಅಪಾರ. ಅಷ್ಟಾವರಣಗಳಿಗೆಲ್ಲ ಆಚಾರ ಬೇಕಾದಂತೆ ಅಷ್ಟಾಂಗಗಳಿಗೂ ಬೇಕು; ಅಂಗಾಂಗಗಳಿಗೂ ಬೇಕು. ಕರ್ಮೇಂದ್ರಿಯಗಳಿಗೂ ಜ್ಞಾನೇಂದ್ರಿಯಗಳಿಗೂ ಅವ ಅವುಗಳದೇ ಆದ ಆಚಾರವಿದೆ. ಅಂತಃಕರಣ ಗಳಿಗೂ ಬಿಡಿ ಬಿಡಿಯಾದ ಆಚಾರವಿದೆ. ಗ್ರಂಥ ವಿಸ್ತಾರ ಭಯದಿಂದ ವಿಸ್ತರಿಸ ಲಾಗಿಲ್ಲ. ಹೀಗೆ ಆಚಾರಗಳು ಬೇರೆ ಬೇರೆಯಿದ್ದರೂ ಆ ಎಲ್ಲ ಆಚಾರಗಳಿಂ ದೊದಗುವ ಫಲ ಬೇರಲ್ಲ. ಪ್ರತ್ಯಂಗ ಶುದ್ಧಿಗಾಗಿ ಆಚಾರ ಪ್ರತ್ಯೇಕ ಪ್ರತ್ಯೇಕ ವಾಗಿ ಪರಿಗಣಿತವಾಗಿದೆ. ವಿವರವಾಗಿ ಅರಿಯಬೇಕೆನ್ನುವವರು ನಮ್ಮಿಂದ ರಚಿತವಾದ 'ಶೀಲ ಸಂಪಾದನೆ' ಎಂಬ ಗ್ರಂಥವನ್ನು ಓದಬೇಕು.

ಜ್ಞಾನವಿಲ್ಲದ ಕ್ರಿಯೆ ಪ್ರಧಾನವಲ್ಲ. ಕ್ರಿಯೆಯಿಲ್ಲದ ಜ್ಞಾನ ಪ್ರಧಾನವಲ್ಲ. ಇವೆರಡೂ ಸಮ ಸಮ ವಾಗಿರಬೇಕು. ಮೂಢಾಚಾರದಿಂದ ಮುಕ್ತಿಯಾಗದು. ಅರಿಯದೆ ಅರ್ಚನೆ ಘಟಿಸದು. ಅಂತೆಯೇ ಆಚಾರವಿಲ್ಲದ ಅರಿವಿನಿಂದ ಅನುಭವ ವುಂಟಾಗದು. ಅನುಭವ ವುಂಟಾಗದೆ ಆನಂದ ಅಳವಡದು. ಕ್ರಿಯಾಚಾರ ದಿಂದ 'ಸತ್‌ತ್ವ' ಅಳವಡುತ್ತದೆ; ಜ್ಞಾನಾಚಾರದಿಂದ 'ಚಿತ್‌ತ್ವ' ಅಳವಡುತ್ತದೆ. ಉಭಯ ಸಮನ್ವಯಾಚಾರದಿಂದ ಆನಂದತ್ವ ಅಳವಡುತ್ತದೆ. ಕ್ರಿಯೆಯಿಂದ ಕಾಯಶುದ್ಧಿ, ಜ್ಞಾನದಿಂದ ಕರಣಶುದ್ಧಿ. ಇವೆರಡೂ ಅಂಗಿ (ದೇಹಿ)ಗೆ ಆವ ಶ್ಯಕ. ಜೀವನ ಸಿದ್ಧಾಂತದಲ್ಲಿ ಇವೆರಡೂ ಒಂದನ್ನು ಬಿಟ್ಟು ಇನ್ನೊಂದು ಇರ ಲಾರದು; ಇರಬಾರದು.

"ಅರ್ಥಹೀನಾ ಯಥಾ ವಾಣೀ ಧರ್ಮಹೀನಾ ಯಥಾ ತನುಃ !
ಪತಿಹೀನಾ ಯಥಾ ನಾರೀ ಜ್ಞಾನಹೀನಾ ತಥಾ ಕ್ರಿಯಾ॥"

ಎಂಬ ಉಕ್ತಿಯ ಔಚಿತ್ಯವನ್ನು ವಿಚಾರಿಸುವುದು ವಿಹಿತ ; ವಿಚಾರಿಸಿದಂತೆ ಆಚರಿಸುವುದು ಅತ್ಯಂತ ವಿಹಿತ,

"ಭಕ್ತಂಗಾಗಲಿ ಜಂಗಮಕ್ಕಾಗಲಿ ಸದಾಚಾರವೇ ಬೇಕು
ಸದಾಚಾರವುಳ್ಳವರಿಗೆ ಅನಾಯತ ಹೊದ್ದಲಾಗದು
ಅನಾಯತವೆಂಬುದೇ ಅನುಸರಣೆ
ಅನುಸರಣೆ ಎಂಬುದೇ ಅಂಗದಿಚ್ಛೆ
ಅಂಗದಿಚ್ಛೆ ಎಂಬುದೇ ಅನಾಚಾರ
ಅನಾಚಾರ ಎಂಬುದೇ ಪಂಚಮಹಾ ಪಾತಕ
ಆ ಪಂಚಮಹಾ ಪಾತಕ ಎಂಬುದೇ ನರಕ
ಇದು ಕಾರಣ, ಕೂಡಲ ಚೆನ್ನಸಂಗಯ್ಯನಲ್ಲಿ ಸದಾಚಾರವುಳ್ಳವರು
ಅನುಸರಿಸಿ ನಡೆದರೆ ನಾಯಕ ನರಕ."
"ಪ್ರಾಣಲಿಂಗ ಸಂಬಂಧಿಯಾದ ಲಿಂಗವಂತನು,
ಏಕಭುಕ್ತೋಪವಾಸವ ಮಾಡಲಾಗದು;
ಅದೇನು ಕಾರಣವೆಂದಡೆ, ದೇವರಾರೋಗಣೆ ತಪ್ಪದು.
ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರೀ ತಪ್ಪದು
ಆಗಮ ಮಾರ್ಗ ತಪ್ಪದು ಶ್ರೀಗುರುವಾಜ್ಞೆ ತಪ್ಪದು
ತಪ್ಪಿದರೆ ತನಗೆ ಮುಂದೆ ಪ್ರಸಾದವಿಲ್ಲ
ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ
ಮುಕ್ತಿಯಿಲ್ಲವಾಗಿ ದೋಷಕಾರಿಯಪ್ಪನು ಕೇಳಿರಣ್ಣ !
ಇದು ಕಾರಣ ನಿತ್ಯ ನೇಮಕ್ಕೆ ಪಂಚಪರ್ವ ತಿಥಿಗಳಲ್ಲಿ
ಆವಾವ ದಿನದಲ್ಲಿಯೂ ಎಂದೆಂದು ಅಷ್ಟವಿಧಾರ್ಚನೆ ।
ಷೋಡಶೋಪಚಾರವೇ ಕರ್ತವ್ಯ ನೋಡಾ !
ದೇವರಾರೋಗಣೆಯ ಮಾಡಿಸಿ, ಪ್ರಸನ್ನತ್ವವ ಪಡೆದು
ಆ ಪ್ರಸಾದವ ಧರಿಸಿ ಮುಕ್ತರಪ್ಪುದಯ್ಯ ಉರಿಲಿಂಗಪೆದ್ದಿಪ್ರಿಯ
ವಿಶ್ವೇಶ್ವರಾ !

ಇಹವೀರನು ಸಕಾಯನಾಗಿರುವನು. ಇವನಿಗೆ ಕ್ರಿಯಾಗಮ ಕಾಯಕ ಅಥವಾ ಉಪಾಸನೆ ಅಗತ್ಯ. ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಗುರು ಇಹವೀರನಾದ ಮಾಹೇಶ್ವರಾಂಗನ ಮೇಲಿನ ಕರುಣೆಯಿಂದ ಶರೀರವಿರುವವರೆಗೆ ಶಿವಪೂಜೆಯನ್ನು ಶಿವಾಗಮ ವಿಧಾನ ಪ್ರಕಾರ ಮಾಡದೆ ಬಿಡಬೇಡೆಂದು ಬೋಧಿಸುತ್ತಾನೆ. ಬೋಧೆಯಂತೆ ಇಹವೀರನು ಆಗಮ ವಿಧಿಯಂತೆ ಅಷ್ಟವಿಧಾರ್ಚನೆ–ಷೋಡಶೋಪಚಾರಗಳನ್ನು ನೆರವೇರಿಸುತ್ತಾನೆ. ಇದರಿಂದ ಸರ್ವ ಕರ್ತೃತ್ವ ಶಕ್ತಿ ಸಂಭವಿಸುತ್ತದೆ. ಇದು ಅಂದರೆ ಈ ಕ್ರಿಯಾಗಮವು ದೀಕ್ಷಾ ಗುರುವಿನಾಜ್ಞೆ ! ಗುರುವಿನಾಜ್ಞೆಯಿಂದ ಶಿಷ್ಯನ ಅಂಗದಲ್ಲಿ ಕ್ರಿಯಾಚರಣೆ ಬರುವುದರಿಂದ ಅಥವಾ ಅಳವಡುವುದರಿಂದ ಇದಕ್ಕೆ 'ಕ್ರಿಯಾಗಮ' ಎಂಬ ಅನ್ವರ್ಥ ನಾಮ ಬಂದಿದೆ; ಇದು ಇಹವೀರನಿಗೆ ವಿಮಳ ಸಂಪತ್ತು, ಇದರಿಂದ ಇಹದಲ್ಲಿ ಅಭ್ಯುದಯ.

## ೨. ಭಾವಾಗಮ ಸ್ಥಳ

ಕಾಯದಲ್ಲಿ ಕ್ರಿಯೆಗಳು ಕರಿಗೊಂಡ ಬಳಿಕ ಭಾವದಲ್ಲಿ ಕ್ರಿಯೆಗಳು ಕರಿಗೊಳ್ಳಬೇಕು; ಕರಿಗೊಳ್ಳುತ್ತವೆ. ಆ ಭಾವಕ್ರಿಯೆಗಳನ್ನೇ 'ಭಾವಾಗಮ' ಎಂದು ಭಾಷಿಸಲಾಗಿದೆ.

ಕ್ರಿಯೆ ಸ್ಥೂಲ ಸೂಕ್ಷ್ಮ ಎಂದು ಇತ್ತೆರ. ಇತ್ತೆರನಾದರೂ ಪರಿಣಾಮ ಪರಿಸ್ಥಿತಿ ಗತಿಗಳು ಒಂದೇ ಆಗಿರುತ್ತದೆ; ಸ್ಥೂಲಕ್ರಿಯೆಯೆ ಒಳಗೆ ಹರಡಿ ಸೂಕ್ಷ್ಮವಾಗುತ್ತದೆ. ಕಾಯಕ್ರಿಯೆ ಕರಣಗಳ ಮೇಲೆ ಪರಿಣಾಮವನ್ನುಂಟು ಮಾಡದೆ ಬಿಡದು. ಸಾಲದ್ದಕ್ಕೆ ಅಂತಃಕರಣಗಳವೇ ಆದ ಸೂಕ್ಷ್ಮ ಕ್ರಿಯೆಗಳೂ ಬೇರೆ ಉಂಟು. ಧ್ಯಾನ ಧಾರಣಾದಿಗಳು ಸೂಕ್ಷ್ಮಕ್ರಿಯೆಗಳು. ಇವನ್ನು ಆಚರಿಸುವ ಇಹವೀರ ಮಾಹೇಶ್ವರನು ಪರವೀರಮಾಹೇಶ್ವರನೆನಿಸುತ್ತಾನೆ. ಬಹಿರಂಗ ಇಹ; ಅಂತರಂಗ ಪರ. ಕ್ರಿಯೆಯಂತೆ ಭಾವವಿರಬೇಕು. ಭಾವದಂತೆ ಕ್ರಿಯೆಯಿರಬೇಕು. ಭಾವವಿಲ್ಲದ ಕ್ರಿಯೆ ಬರಿದು. ಭಾವವಳವಡುವುದು ಬಲ್ಲವರಿಗೆ ಸಾಧ್ಯವಿಲ್ಲ ಅದರಲ್ಲಿಯೂ ಸದ್ಭಾವ ಸಮನಿಸುವುದು ಕ್ರಿಯಾಗಮ ಕರಿಗೊಂಡವರಿಗೆ ಮಾತ್ರ ಸಾಧ್ಯ.

"ಯಂ ಯಥೋಪಾಸತೇ ತದೇವ ಭವತಿ ।
ಯದ್ಭಾವಂ ತದ್ಭವತಿ, ಯಥಾಕಾರಿ ತಥಾಚಾರಿ ತಥಾಭವತಿ ॥"

ಎಂದು ಬಿತ್ತರಿಸಿದೆ ಬೃಹದಾರಣ್ಯಕೋಪನಿಷತ್ತು.

ಭಾವ ಇದೊಂದು ವೃತ್ತಿಗಳನ್ನೆಲ್ಲ ಇರಿಸಿಕೊಳ್ಳುವ ಅಂತಃಕರಣ, ಮತ್ತು ಹೃದಯೇಂಗಿತ; ಹಾಗೂ ಹಾರ್ದಿಕಕ್ರಿಯೆ. ಎಲ್ಲವೂ ಸಾಂಸ್ಕಾರಿಕವಾಗಿ ಒಳಗೆ ಇರುವ ಒಂದು ಬಗೆ; ಸತ್ಯ ಸ್ವಭಾವ; ಅಭಿಪ್ರಾಯ, ತಾತ್ಪರ್ಯ; ಅಂತರಂಗದ ಐಶ್ವರ್ಯ. ಚೈತನ್ಯದ ತೀರ ಸನಿಹದಲ್ಲಿರುವ ಒಂದು ಕರಣ. ಐಕ್ಯಾಂಗನ ಹಸ್ತ. ಕಾರಣ ತನು. ಮನಸಿನ ಮತ್ತೊಂದು ಬಗೆ. ಹೊರ ಒಳಗಿನ

ಸತ್ಕ್ರಿಯೆಗಳಿಂದ ಪರಿಪಕ್ವಗೊಂಡ ಹೃದಯದ ಒಂದು ಸ್ಥಿತಿ; ಷಡ್ಭಾವವಿಕಾರ ಗಳಿಗೆ ಒಳಗಾಗದ ಒಂದು ಶಿವ ಚಿಂತನ. ಸತ್ಕ್ರಿಯಾ ಸಂಪತ್ತನ್ನು ತುಂಬಿಕೊಂಡಿರುವ ಒಂದು ಒಳನೆಲೆ. ಆನಂದಭೂಮಿಕೆ. ಆತ್ಮಾಂಗ; ಯೋಗಾಂಗ. ಚಿತ್ತ, ಅಹಂಕಾರ, ಆತ್ಮ ಈ ಮೂರರ ಸಮನ್ವಯ ರೂಪವೇ ಭಾವ ಅಥವಾ ಯೋಗ ಎಂದು ಹೆಸರು. ಅನುಭೂತಿಯಿಂದ ಚಿತ್ತದಲ್ಲಿ ಉಂಟಾಗುವ ವೃತ್ತಿಗೆ 'ಭಾವ' ಎನ್ನುವರು. ಭಾವ, ವಿಭಾವ, ಅನುಭಾವಾದಿಗಳನ್ನು 'ಭಾವಾಗಮ' ಎಂದು ಕರೆವರು. ಕಲ್ಯಾಣಕರವಾದ ಕ್ರಿಯಾಚಾರ–ಜ್ಞಾನಾಚಾರ –ಭಾವಾಚಾರಗಳನ್ನು ಆಚರಣೆಯಲ್ಲಿ ತರುವುದೇ ಭಾವಾಗಮ.

"ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥"

ಗೀತೆ ಹೇಳುವಂತೆ ಭಾವಗಳು ಅನಂತ ಇವುಗಳಲ್ಲಿ ಸದಸದ್ಭಾವಗಳಿವೆ, ಆದರೆ ಸದ್ಭಾವಗಳೇ 'ಭಾವಾಗಮ'ಎಂದೆನಿಸುತ್ತವೆ.

"ಭಾವಚಿಹ್ನಾನಿ ವಿದುಷೋ ಯಾನಿ ಸಂತಿ ವಿರಾಗಿಣಃ।
ತಾನಿ ಭಾವಾಗಮತ್ವೇನ ವರ್ತಂತೇ ಸರ್ವದೇಹಿನಾಂ ॥"

ವಿದ್ವಾಂಸನೂ ವಿರಾಗಿಯೂ ಆದವನ ಭಾವಕ್ರಿಯೆಗಳೇ 'ಭಾವಾಗಮ' ಎನಿಸುತ್ತವೆ, ಅವು ಸರ್ವಪ್ರಾಣಿಗಳ ಅನುಸರಣೆಗೆ ಯೋಗ್ಯವಾಗಿರುತ್ತವೆ; ಭಾವಾಗಮವಾಗಿ ವರ್ತಿಸುತ್ತವೆ.

ಭಾವವಿಲ್ಲದ ಯಾವ ಕ್ರಿಯೆಯೂ ಫಲಿಸದು; ಯಾವ ಜ್ಞಾನವೂ ಶೋಭಿಸದು. ಭಾವವಿಲ್ಲದ ಪೂಜೆ, ಭಾವವಿಲ್ಲದ ಧ್ಯಾನ, ಭಾವವಿಲ್ಲದ ಮೌನ, ಭಾವವಿಲ್ಲದ ಜಪತಪ, ಭಾವವಿಲ್ಲದ ತ್ಯಾಗಯೋಗ, ಭಾವವಿಲ್ಲದ ನಿತ್ಯನೇಮ ಮುಂತಾದವು ಸಾರ್ಥಕವಾಗವು, ಭಾವವಿಲ್ಲದ ವಚನ ಕವನಗಳೂ ಸಾರ್ಥಕವಾಗಲಾರವು.

ಭಾವಕ್ರಿಯೆಗಳನ್ನು ಅಥವಾ ಭಾವಕುರುಹುಗಳನ್ನು ಜೀವಲೋಕಕ್ಕೆ ಕೊಡು ವವನು ಬರಿ ಜ್ಞಾನಿಯಾಗಿದ್ದರೆ ಸಾಲದು, ಜತೆಗೆ ವಿರಾಗಿಯೂ ಆಗಿರಬೇಕು. ಅಂಥವನ ಭಾವಕ್ರಿಯೆಗಳು ಆದರ್ಶವಾಗಬಲ್ಲವು: ಆಕರ್ಷಕವಾಗಬಲ್ಲವು.; ಅವನ್ನು ಆದರಿಸಿ ಆಚರಿಸುವುದರಿಂದ ಜೀವರು ಉದ್ಧಾರವಾಗಬಲ್ಲರು. ಮಾನ ವರು ಮಾತ್ರವಲ್ಲ, ಪಶುಪ್ರಾಣಿಗಳು ಪಕ್ಷಿಗಳು ತಿರ್ಯಕ್‌ಜಾತಿಗಳು ಸಹ ಉದ್ಧಾರವಾಗಬಲ್ಲವು. ಭವಕ್ಷಯವಾಗಬಲ್ಲುದು. ಭವಣೆ ತಪ್ಪಬಲ್ಲುದು. ಭವಿಷ್ಯ ಭವ್ಯವಾಗಬಲ್ಲುದು. ಕ್ಷಣಭಂಗುರ ಜೀವನ ಶಾಶ್ವತವಾಗಬಲ್ಲುದು ಭಾವಿಕವಾಗಬಲ್ಲದು. ಭುವನಜನ ಭಾಜನವಾಗಬಲ್ಲುದು.

ಸಾಮಾನ್ಯರ ಭಾವುಕತೆಯೇ ಅದೆಷ್ಟೋ ಪರಿಣಾಮಕಾರಿಯಾಗಿರುತ್ತದೆ; ಪಾವನಕಾರಿಯಾಗಿರುತ್ತದೆ, ಹೀಗಿರುವಾಗ ವಿಶೇಷಜ್ಞಾನಿ ಮತ್ತು ವಿರಾಗಿಯಾ ದವನ ಭಾವುಕತೆ ಅದಿನ್ನೆಷ್ಟು ಪರಿಣಾಮಕಾರಿಯಾಗಬಲ್ಲದೆಂಬುದನ್ನು ಹೇಳಲು ಸಾಧ್ಯವಿಲ್ಲ. ಈ ದಿಸೆಯಲ್ಲಿ ವಿದುಷ, ವಿರಾಗ ಪದಗಳು ವಿಶೇಷ ಗಮನಾರ್ಹ ವಾದವು. ವಿದುಷ ವಿರಾಗಿಯಾಗಿ ಭಾವಕ್ರಿಯೆಗಳನ್ನು ತೋರಿದರೆ ಬೀರಿದರೆ ಜನತೆ ಬಾಳದೇನು, ಬದುಕದೇನು? ಅಜ್ಞ-ಸುಜ್ಞರ ಭಾವಗಳಲ್ಲಿ ಅಂತರವಿರು ವಂತೆ ರಾಗಿ-ವಿರಾಗಿಗಳ ಭಾವಕ್ರಿಯೆಗಳಲ್ಲಿ ಮಹದಂತರವಿರುತ್ತದೆ. ರಾಗಿಯ ಭಾವದಲ್ಲಿ ಕಾಮ, ಮೋಹಾದಿಗಳಿದ್ದರೆ ವಿರಾಗಿಯ ಭಾವದಲ್ಲಿ ನಿಷ್ಕಾಮ. ನಿರ್ಮೋಹ, ನಿರ್ಮಮಾದಿಗಳು ಮನೆಮಾಡಿರುತ್ತವೆ. ರಾಗಿಯದು ಭವಭಾವ: ವಿರಾಗಿಯದು ಶಿವಭಾವ. ರಾಗಿಯದು ಸ್ವಾರ್ಥಭಾವ; ವಿರಾಗಿಯದು ನಿಸ್ವಾರ್ಥಭಾವ. ಇಂತಹ ವಿರಾಗಿಯ ಭಾವಕ್ಕೆ ವಿವೇಕದ ಪ್ರಕಾಶ ಕೂಡಿ ಬಂದರೆ ಕೇಳುವುದೇನು? ಆ ಸೊಗಸೇ ಸೊಗಸು; ಆ ಭಾವಸಿರಿಯೇ ಸಿರಿ. ಅದ ನಾರ್ಜಿಸಿದವರಿಗೆ ಬಡತನವಿಲ್ಲ, ಬವಣೆಯಿಲ್ಲ.

"ಶಿವೋಽಹಮಿತಿ ಭಾವೋಽಪಿ ಶಿವತಾಪತ್ತಿಕಾರಣಂ ।
ನ ಜ್ಞಾನಮಾತ್ರಂ ನಾಚಾರೋ ಭಾವಯುಕ್ತಶ್ಶಿವೋ ಭವೇತ್॥"

ಕೇವಲ ಜ್ಞಾನ, ಕೇವಲಕ್ರಿಯೆ ಸಾಧಕನಿಗೆ ಶಿವತ್ವವನ್ನುಂಟುಮಾಡಿ ಕೊಡವು. ನಾನು ಶಿವನೆಂಬ ಭಾವವೇ ಶಿವತ್ವಪ್ರಾಪ್ತಿಗೆ ಕಾರಣ. ಆದ್ದರಿಂದ ಕೇವಲ ಜ್ಞಾನ, ಕೇವಲ ಕ್ರಿಯಾಚಾರಗಳಿಗಿಂತ ಭಾವ ಮಿಗಿಲಾದುದು. "ಶಿವ

ಭಾವಾನುಸಂಧಾನಾತ್ ಶಿವೋ ಭಾವೇ ಪ್ರಕಾಶತೇ !" ಈ ಯೋಗಜಾಗಮ ಉಕ್ತಿಯು ಇದನ್ನೇ ವ್ಯಕ್ತಪಡಿಸಿದೆ. ಭಾವಶುದ್ಧಿ, ಶುದ್ಧಭಾವವೃದ್ಧಿ ಅಗತ್ಯ: "ಭಾವ ಬಲಿದಲ್ಲಿ ಲಿಂಗವೆನಿಸಿತ್ತು. ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು; ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ."

"ಆವಾವ ತ್ರಿಗುಣಭೇದದಲ್ಲಿ ವಿಶ್ವಾಸವ ಮಾಡಿದಡೂ ಭಾವಶುದ್ಧವಾಗಿರಬೇಕು. ಯೋಗಿಯಾದಲ್ಲಿ ದೇಹಧರ್ಮವ ಮರೆದು, ಭೋಗಿಯಾದಲ್ಲಿ ಸಂಚಿತವ ಮರೆದು, ತ್ಯಾಗಿಯಾದಲ್ಲಿ ನೆನಹು ಹಿಂಚುಗೊಡುವುದು ಮುಂತಾಗಿರಬೇಕು. ಇಂತೀ ಯೋಗಿ ಭೋಗಿ ತ್ಯಾಗಿ ಇಂತೀ ತ್ರಿವಿಧವನೊಳಗೊಂಡು ವಿರಕ್ತನಾದಲ್ಲಿ ಆತನಡಿಗೆರಗುವೆನೆಂದ ಅಂಬಿಗರ ಚೌಡಯ್ಯ."

"ಸತ್ಯವಿಲ್ಲದ ಭಕ್ತಿ ಹತ್ತುಸಾವಿರಕಾಲ ಮಾಡಿದಡೇನು? ನಿಷ್ಠೆಯಿಲ್ಲದ ಪೂಜೆಯನೇಸು ಕಾಲ ಮಾಡಿದಡೇನು, ಭಾವ ನೆಲೆಗೊಳ್ಳದನ್ನಕ್ಕರ?...ಅಭ್ಯಾಸವಾಯಿತ್ತಲ್ಲದೆ ಸಹಜವಲ್ಲ, ಸಮ್ಮತವಲ್ಲ...ಇಂತೀ ವಿವರವನರಿಯದ ಅಜ್ಞಾನಿಗಳಿಗೆ ಭಕ್ತಮಾಹೇಶ್ವರರೆನಲಾಗದಯ್ಯ ಕೂಡಲ ಚೆನ್ನಸಂಗಮದೇವಾ, ನೀ ಸಾಕ್ಷಿಯಾಗಿ ಛೀ ಎಂಬೆನು."

ಭಾವ ತ್ರಿವಿಧ. ತನುಭಾವ, ಮನೋಭಾವ, ಅಹಂಭಾವ, ಇವು ಮೂರು ಶುದ್ಧವಾಗಿರಬೇಕು; ಇದರಂತೆ ಹೊರಗಿನ ಮೂರು ಭಾವಗಳುಂಟು. ಹೊನ್ನಿನ ಭಾವ, ಹೆಣ್ಣಿನ ಭಾವ, ಮಣ್ಣಿನ ಭಾವ. ಇವುಗಳಲ್ಲಿಯೂ ಭಾವ ಶುದ್ಧವಾಗಿರಬೇಕು. ಇವಲ್ಲದೆ ತಮೋಭಾವ, ರಜೋಭಾವ, ಸತ್ವಭಾವಗಳೂ ಉಂಟು. ಈಭಾವಗಳನ್ನು ಮೀರಿ ಮುಂದುವರಿಯಬೇಕು. ತಮೋಭಾವ,ಅಸುರೀ ಭಾವ, ರಜೋಭಾವ ಪಾಶವೀ ಭಾವ ಸತ್ವಭಾವ, ಮಾನವೀಭಾವಇವನ್ನು ಮೀರಿ ಭಾವಾತೀತನಾದರೆ ದೈವೀಭಾವವುಂಟಾಗುತ್ತದೆ. ಜಗದ್ಗುರು ರೇಣುಕರು ಅಪ್ಪಣೆ ಕೊಡಿಸಿದಂತೆ ಇವೆಲ್ಲಕ್ಕೂ ಮೂಲವಾದ ತನ್ನಆತ್ಮನಲ್ಲಿಯೇ ಶಿವಭಾವವುಂಟಾದರೆ ಇವೆಲ್ಲವುಗಳಲ್ಲಿ ಶಿವಭಾವ ತಾನೇ ಸಂಭವಿಸುತ್ತದೆ. ಆದಕಾರಣ ಇವೆಲ್ಲಕ್ಕೆ ಮೂಲವಾಗಿದೆ ಶಿವೋಹಂಭಾವ ! ಈ ಭಾವವೇ ಶಿವತ್ವಪ್ರಪತ್ತಿಗೆ ಕಾರಣ ! ಕೇವಲ ಕ್ರಿಯೆ, ಕೇವಲ ಜ್ಞಾನಗಳು ಶಿವತ್ವಾಪತ್ತಿಗೆ ಕಾರಣಗಳಲ್ಲ.

"ಜ್ಞಾನಂ ವಸ್ತು ಪರಿಚ್ಛೇದೋ ಧ್ಯಾನಂ ತದ್ಭಾವಕಾರಣಂ
ತಸ್ಮಾತ್‌ಜ್ಞಾತೇ ಮಹಾದೇವೇ ಧ್ಯಾನಯುಕ್ತೋ ಭವೇತ್ಸುಧೀಃ॥"

ಜ್ಞಾನ ಆ ವಸ್ತುವನ್ನು ಬೇರಿಟ್ಟು ಅರಿಯ ಬಲ್ಲದು. ಅರಿತ ಆವಸ್ತುವನ್ನು ಕೂಡಿಸಬಲ್ಲದು ಧ್ಯಾನ್ಯರೂಪ ಭಾವ ! ತದಾಕಾರ ಧ್ಯಾನವೃತ್ತಿಯೇ ಭಾವವೆಂದು ಜಗದ್ಗುರು ರೇಣುಕರು ಭೋಧಿಸಿದ್ದಾರೆ. ಆದ ಕಾರಣ ಜ್ಞಾನಕ್ಕಿಂತ ಧ್ಯಾನ ದೊಡ್ಡದು ; ಸಾಮರಸ್ಯ ಸಾಮರ್ಥ್ಯವುಳ್ಳುದು. ಇದರಿಂದಾಗಿ ಶಿವಜ್ಞಾನವಾಗಿದ್ದರೂ ಶಿವಧ್ಯಾನ ಅಥವಾ ಶಿವಭಾವ ಬೇಕೇ ಬೇಕು.

ಶಿವಾದ್ವೈತ ಸಿದ್ಧಾಂತದಲ್ಲಿ ಜ್ಞಾನವು ಮನ ಮತ್ತು ಭಾವ–ಇವೆರಡರ ನಡುವಿರುವ ಒಂದು ಅಂತಃಕರಣ. ಧ್ಯಾನ ಮನ ಭಾವಗಳೆರಡರಲ್ಲಿ ಇರುವ ಒಂದು ಧರ್ಮಕ್ರಿಯೆ ; ಒಂದು ಯೋಗ. ಜ್ಞಾನ ಪ್ರಮಾಣ ಪ್ರಮೇಯಗಳ ಅಧೀನ. ಧ್ಯಾನ ಪ್ರಮಾಣ–ಪ್ರಮೇಯಗಳಿಗೆ ಅತೀತವಾದ ಅಪ್ರಮಾಣ–ಅಪ್ರಮೇಯ ವಸ್ತುವಿನ ಅಧೀನ ; ಅದೂ ಆರಂಭದಲ್ಲಿ ಮಾತ್ರ. ಧ್ಯಾನ ಸಮಾಧಿ ಮಟ್ಟಕ್ಕೇರಿದಾಗ ಅದರಲ್ಲಿಯೂ ಅಸಂಪ್ರಜ್ಞಾತ ಸಮಾಧಿಯ ನಿಲುವಿಗೇರಿದಾಗ ಅಧೀನವಿರುವುದಿಲ್ಲ ; ಅವಿರಳಭಾವದಲ್ಲಿರುತ್ತದೆ. ಜ್ಞಾನಕ್ಕೆ ಬೇರೊಂದು ಪ್ರಮಾಣ ಬೇಕಾಗುವಂತೆ ಧ್ಯಾನಕ್ಕೆ ಬೇಕಾಗುವುದಿಲ್ಲ. ಧ್ಯಾನಕ್ಕೆ ತನ್ನದೇ ಆದ ವಿಶ್ವಾಸ ಮತ್ತು ಇಚ್ಛೆಗಳಿದ್ದರೆ ಸಾಕು. ವೀರಶೈವದಲ್ಲಿ ಪ್ರತೀಕಧ್ಯಾನವೇ ಇಲ್ಲ. ಧ್ಯಾನಕ್ಕೆ ಧ್ಯೇಯಾಧೀನತೆಯಿದ್ದರೂ ಸ್ಥಲವಲ್ಲ, ಸ್ವಾಕಾರ ಭಿನ್ನವಲ್ಲ. ಧ್ಯಾನಿ ಧ್ಯೇಯರೂಪವನ್ನು ತನಗೆ ಅಭಿನ್ನವಾಗಿಸಿ ಚಿಂತನೆ ಮಾಡುತ್ತಾನೆ. ಅಥವಾ ಜಗದ್ಗುರು ರೇಣುಕಶಿವಾಚಾರ್ಯರು ಅಪ್ಪಣೆ ಕೊಡಿಸಿರುವಂತೆ....'ತದ್ಭಾವಕಾರಣ ಸ್ವರೂಪದಲ್ಲಿ ಧ್ಯಾನ ನಿಷ್ಪನ್ನವಾಗುತ್ತದೆ. ಧ್ಯೇಯದಲ್ಲಿ ಧ್ಯಾನ–ಧ್ಯಾತೃ ಎರಡೂ ಲೀನವಾಗುತ್ತವೆ

ಎದುರಿಟ್ಟು ಅರಿವುದು ಜ್ಞಾನವಾದರೆ ಎರಕಾಗಿ ಏಕೈಕವಾಗುವ ಶಕ್ತಿ ಧ್ಯಾನಕ್ಕಿದೆ. ಇದರಿಂದಾಗಿ ಕೇವಲ ಜ್ಞಾನ ಕೇವಲ ಕ್ರಿಯೆಗಳಿಗಿಂತ ಕ್ರಿಯಾ ಜ್ಞಾನಗಳೆರಡೂ ಉಳ್ಳಧ್ಯಾನ ದಿವ್ಯವಾದುದೆಂದು ಶ್ರೀ ರೇಣುಕ ಜಗದ್ಗುರುವರ್ಯರ ಅಭಿಪ್ರಾಯವಾಗಿದೆ.

ಇನ್ನು ಬಗೆದುಂಬಿ ನೆನವ ಬಗೆಯನ್ನು ಶರಣವಾಣಿಯಲ್ಲಿ ಕೇಳೋಣ :

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ, ಕೂಡಲ ಸಂಗಮದೇವಾ. ನಿಮ್ಮ ಚರಣ ಕಮಲದೊಳಗಾನು ತುಂಬಿ !"

"ಜಗವ ಸುತ್ತಿಪ್ಪುದು ಮಾಯೆಯಯ್ಯ. ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ ಜಗಕ್ಕೆ ಬಲ್ಲಿದ ನೀನು. ನಿನಗೆ ಬಲ್ಲಿದ ನಾನು ಕಂಡಯ್ಯ. ಜಗವು ನಿನ್ನೊಳಗೆ, ನೀನು ಎನ್ನೊಳಗೆ : ಕರಿಯು ಕನ್ನಡಿಯೊಳಗೆ ಅಡಗಿದಂತೆ ನೀನೆನ್ನೊಳಗಡಗಿದೆ ಕೂಡಲ ಸಂಗಮದೇವಾ !"

"ಹೊರಕಣ್ಣು ಮುಚ್ಚಿ, ಒಳಕಣ್ಣು ತೆರೆದು, ಮನದೊಡೆಯ ಬಂದಾನೆಂದು ಕಿವಿಯೊಡ್ಡಿ ಕೇಳುತ್ತಿದ್ದೆನಯ್ಯ. ಆವತ್ತಣಿಂದ ಬಂದು ನಿಜರೂಪ ಸುಳಿಯಿತ್ತೆಂದರಿಯೆ. ಪರಮನ ಪ್ರತಿಬಿಂಬ ಹೊಳೆದೊಡೆ ಕಣ್ಣು ತುಂಬ ಕಂಡು, ಕರತುಂಬ ಹಿಡಿದು, ಮನಮುಟ್ಟಿ ನೆರೆವೆನು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ !"

ಭಾವದ ಬಲ ಬಲವತ್ತರವಾದುದು. ಅಂತೆಯೇ ನೆನಹಿನ ಕಲಿತನ ನಿರತಿಶಯವಾದುದು. ಮನಮುಟ್ಟಿ ನೆರವ ಶಕ್ತಿ ನೆನಹಿನಿಂದ ಮೈಗೂಡಿ ಬರುತ್ತದೆ. ಅಲ್ಲದೆ ಕೈತುಂಬ ಹಿಡಿವ, ಕಣ್ತುಂಬ ಕಾಣುವ ಕಲಿತನ ಕೈಗೂಡುತ್ತದೆ. ಭಾವಪೂರ್ಣ ಧ್ಯಾನದಲ್ಲಿ ಪ್ರತ್ಯಂಗವೂ ಪಾಲ್ಗೊಳ್ಳುತ್ತದೆ. ಒಳಗಣ್ಣನ್ನು ತೆರೆದು ನಿಜರೂಪವನ್ನು ನಿರಿಕಿಸುವ ಒಳ್ಪಗೆಯನ್ನು ಬೆಸೆದು ಬೇರಾಗದಿರುವ ನಲ್ಮೆ ಬಲ್ಮೆಗಳ ಸಂಗಳಿಕೆಯಾಗತ್ತದೆ. ನೆನವ ಬಗೆ ನಿರವಯಲಿಗಿಂತ ಅಗಲಾಗುತ್ತದೆ, ಆ ಅದ್ವಯ ವಸ್ತುವನ್ನು ತನ್ನೊಳಗೆ ಅಳವಡಿಸಿಕೊಳ್ಳುತ್ತದೆ ; ತನ್ನೊಳಗೆ ತುಂಬಿ ಬಿಂಬಿಸಿಕೊಳ್ಳುತ್ತದೆ ; ಆದುದರಿಂದ ಭಾವ ಭರಿತತೆಯಿಂದ 'ಧ್ಯಾನಯುಕ್ತೋ ಭವೇತ್ಸುಧೀಃ ಎಂದು ಅನುಭವೋಪದೇಶವನ್ನಿತ್ತರು ರೇಣುಕಶಿವಾಚಾರ್ಯರು ಭಾವಿಸಿದರೆ ಒದಗುವುದೇನೆಂಬುದನ್ನು ಅವರೇ ಹೀಗೆ ಹೇಳಿದ್ದಾರೆ :

"ಅಂತರ್ಬಹಿಶ್ಚ ಸರ್ವತ್ರ ಪರಿಪೂರ್ಣಂ ಮಹೇಶ್ವರಂ ।
ಭಾವಯೇತ್ಪರಮಾನಂದಲಬ್ಧಯೇ ಪಂಡಿತೋತ್ತಮಃ ॥"

ಒಳಗೂ ಹೊರಗೂ ಎಲ್ಲೆಲ್ಲಿಯೂ ಆತನು ತುಂಬಿರುವನು. ಅಂತೆಯೇ ಆತನು ಮಹೇಶ್ವರನು, ಮಹಾದೇವನು. ಪರಮಾನಂದವನ್ನು ಪಡೆಯಬೇಕಾದರೆ ಆತನನ್ನೇ ಭಾವಿಸಬೇಕು ; ಭಾವಿಸುವವನೇ ಪಂಡಿತಶ್ರೇಷ್ಠನು

"ಪೂರ್ಣ ಮದಃ ಪೂರ್ಣಮಿದಂ" ಆತನಿಲ್ಲದ ಅಣುವಿಲ್ಲ. ಆತ ಪರಿಪೂರ್ಣ ಅಖಂಡ ಸ್ವರೂಪ. ಆತನಿಗೆ ಬೇರೊಂದು ಆಧಾರವಿಲ್ಲ ; ಆತನ ಸರ್ವಕ್ಕೆ ಆಧಾರ. ಆತನ ಮೇಲೆ ಒಡೆಯನಿಲ್ಲ ; ಆತನೇ ಎಲ್ಲಕ್ಕೂ ಎಲ್ಲರಿಗೂ ಒಡೆಯ. ಆತನೇ ಅಖಂಡ ಆನಂದಮಯ. ಆತನ ಭಾವಾರಾಧನೆಯಿಂದ ಅಚ್ಚಳಿಯದ ಆರೆಕೊರೆಯಿಲ್ಲದ ಅನಂದ ಅಳವಡುತ್ತದೆ. ಅದನ್ನು ಪಡೆವುದೆ ಪಂಡಿತೋತ್ತಮ ಲಕ್ಷಣ.

"ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ,
ಏಕವೇ ಸಮರಸ. ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ.
ಪರಿಪೂರ್ಣವೇ ಪರ ಬ್ರಹ್ಮವು ಪರಬ್ರಹ್ಮ ವು ತಾನೇ ಗುಹೇಶ್ವರಾ."

ಪಿಂಡಾಂಡದ ಪೂರ್ಣತೆಯನ್ನು ಇಲ್ಲಿ ಈಕ್ಷಿಸಬೇಕು. ನೋಟಕೂಟಗಳಿಂದ ಮೊದಲಾಗಿ ಪರಬ್ರಹ್ಮ ಪರ್ಯಂತ ಹಾಸು ಹೊಕ್ಕಾಗಿ ಹಮ್ಮಿಕೊಂಡ ಬಗೆ ಬೆಡಗಿನಲ್ಲಿ ಚಿತ್ರಿತವಾಗಿದೆ. ನೋಟ, ಕೂಟ, ಪ್ರಾಣ, ಏಕ, ಸಮರಸ, ಲಿಂಗ ಇವೆಲ್ಲವೂ ಆ ಪರಿಪೂರ್ಣ ಪರಬ್ರಹ್ಮಸ್ವರೂಪ ! ಮತ್ತೊಂದು ವಚನದಲ್ಲಿ ಭಕ್ತಿಬಲ್ಲಿದ ಬಸವಣ್ಣ '....ಅತೀತನ ಮೇಲೆ ಆನಂದ ಸಿಂಹಾಸನವನಿಕ್ಕಿ ಕುಳಿತುಕೊಂಡಿಹನು ಕೂಡಲ ಸಂಗಮದೇವನು.' ಎಂದು ಬಿತ್ತರಿಸಿದ್ದಾನೆ. ಎಂತಹ ಸುಂದರವಾದ ಮಾತಿದು ಆ ಪರಬ್ರಹ್ಮನಿಗೆ ಆನಂದವೇ ಸಿಂಹಾಸನವಂತೆ ! ಅಂತೆಯೇ ಏನೋ ಜಗದ್ಗುರು ರೇಣುಕರು ಆ ಪರಮಾನಂದವನ್ನು ಪಡೆಯೆಂದು ಅಪ್ಪಣೆ ಮಾಡಿರುವುದು ! ಅಷ್ಟೇ ಅಲ್ಲ ಅದು ಪರಮಾನಂದದೊಡನೆ ಪರಂಜ್ಯೋತಿಯೂ ಆಗಿದೆ. ಇಲ್ಲವಾದರೆ ಪರಿಪೂರ್ಣತ್ವಕ್ಕೆ ಅರ್ಥವಿಲ್ಲದಂತಾದೀತು!

"ಬೆಳಗಿನೊಳಗಣ ಮಹಾಬೆಳಗು. ಶಿವ ಶಿವ.
ಪರಮಾಶ್ರಯವೇ ತಾನಾಗಿ, ಶತಪತ್ರ ಕಮಳ ಕರ್ಣಿಕಾ ಮಧ್ಯದಲ್ಲಿ
ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲ ಸಂಗಮ ದೇವ."

ಪರಿಪೂರ್ಣ, ಪರಂಜ್ಯೋತಿ, ಪರಮಾಶ್ರಯ ಆಗಿದೆ ಆ ವಸ್ತು. ಸ್ವತಃ ಸಿದ್ಧನಾಗಿ ಸಹಸ್ರಾರದ ಮಧ್ಯದಲ್ಲಿರುವ ಶತಪದ್ಮರಂಧ್ರದಲ್ಲಿ ಪರಮ ಸತ್ತಾಗಿ ಸನ್ನಿಹಿತವಾಗಿದೆ ಆ ವಸ್ತು. ಅದನ್ನು ಪಂಡಿತೋತ್ತಮನು ಅಂದರೆ ಮಹಾನು

ಭಾವಿಯು ಭಾವಿಸಿ ಪರಮಾನಂದದಲ್ಲಿ ಪರವಶನಾಗಬೇಕೆಂದು ಪರಮಗುರು ರೇಣುಕರ ಆದೇಶ !

"ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದರಿಯೆನು. ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದರಿಯೆನು. ಕೂಡಲ ಸಂಗಮದೇವನ ಧ್ಯಾನ ದಿಂದ ಏನೆಂದರಿಯೆನು.

ದಿಟ, ಆ ಪರಮಾನಂದಲ್ಲಿ ಪರವಶನಾದ ಪರಾನುಭಾವಿ–ಪರಮಧ್ಯಾನಿ ಏನೆಂದರಿದಾನು ! ಅದುವೇ ತಾನಾದಾಗ ಅರಿವ ಅರಿಯಿಸಿಕೊಳ್ಳುವ ಅವಸ್ಥೆ ಇರುವುದೆಂದರೇನು ? ಅದು ಪರಮಾಭ್ಯುದಯ, ಸಹಜದ ಉದಯ. ಆ ಪರಮ ಭಾವಾಗಮವಾದಾಗ ಬೇರೆ ತರತಮವಿಲ್ಲ. ಭ್ರಮೆ–ಪ್ರಮೆಗಳಿಲ್ಲ ಜ್ಞಾನ–ಧ್ಯಾನಗಳಿಲ್ಲ. ಜೀವನದಲ್ಲಿ ಭಾವಪರವಶತೆಯೇ ಪರಮ ಶಾಂತಿ; ಪರಮ ಸುಖ. ಅದರಿಂದ ಜೀವನ ಸಾರ್ಥಕ ; ಸಮರ್ಪಕ. ಆ ಭಾವವಿಲ್ಲದ ಬಾಳು ವ್ಯರ್ಥ.

"ಅರ್ಥಹೀನಾ ಯಥಾವಾಣೀ ಪತಿಹೀನಾ ಯಥಾ ಸತೀ ।
ಶ್ರುತಿಹೀನಾ ಯಥಾ ಬುದ್ಧಿರ್ಭಾವಹೀನಾ ತಥಾ ಕ್ರಿಯಾ ॥
ಚಕ್ಷುರ್ಹೀನೋ ಯಥಾರೂಪಂ ನ ಕಿಂಚಿದ್ವೀಕ್ಷಿತುಂ ಕ್ಷಮಃ ।
ಭಾವಹೀನಸ್ತಥಾ ಯೋಗೀ ನ ಶಿವಂ ದ್ರಷ್ಟುಮೀಶ್ವರಃ॥"

ಅರ್ಥವಿಲ್ಲದ ಮಾತು, ಗಂಡನಿಲ್ಲದ ಹೆಂಡತಿ, ಶಾಸ್ತ್ರಸಮ್ಮತವಿಲ್ಲದ ಬುದ್ಧಿವಂತಿಕೆ ಶೋಭಿಸದಂತೆ ಭಾವವಿಲ್ಲದ ಕ್ರಿಯೆಯೂ ಬಗೆಗೆ ಬಾರದು,

ಕಣ್ಣಿಲ್ಲದವನು ಯಾವ ರೂಪವನ್ನೂ ನೋಡಲಾರ, ಹಾಗೆ ಭಾವವಿಲ್ಲದ ಯೋಗಿಯು ಶಿವನನ್ನು ಸಾಕ್ಷಾತ್ಕರಿಸಲಾರ.

ಒಣಮಾತು ಒಲವನ್ನು ತಾರದು. 'ಮಾತಿನ ಮಾತಿನಲ್ಲಿ ಇಪ್ಪುದೇಭಕ್ತಿ?' ಎಂದು ಬಸವವಾಣಿ ಕೇಳುತ್ತಿದೆ. ಅರ್ಥವಿಲ್ಲದ ಮಾತಾಗಲಿ ಗೀತವಾಗಲಿ ಕೆಲಸಕ್ಕೆ ಬಾರವು. 'ಗೀತವ ಹಾಡಿದಡೇನು, ಶಾಸ್ತ್ರಪುರಾಣಗಳ ಕೇಳಿದರೇನು, ವೇದ ವೇದಾಂತವ ನೋದಿದರೇನು? ಮನವಲಿದು ಲಿಂಗ-ಜಂಗಮವ ಪೂಜಿಸಲರಿಯದವರು, ಎಲ್ಲರಲ್ಲಿ ಅನುಭಾವಿಯಾದರೇನು ಭಕ್ತಿಭಾವ ಇಲ್ಲದವರನೊಲ್ಲ ಕೂಡಲ ಸಂಗಮದೇವ' ಅರ್ಥಭಾವಪೂರ್ಣವಾದ ಮಾತಿಗೆ ಬೆಲೆಯಿದೆ. ಅಂತೆಯೇ ಪತಿಯಲ್ಲಿ ಪ್ರೇಮವಿಲ್ಲದ ಹೆಂಡತಿಯ ಸತೀತ್ವ ಶೋಭಿಸದು,

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೇನೋ ಶಿವಶಿವಾ ? ಹೋದರೇನೋ ಶಿವ ಶಿವಾ ? ಕೂಡಲಸಂಗಮ ದೇವಯ್ಯಾ, ಊಡದ ಆವಿಂಗೆ ಉಣ್ಣದ ಕರವ ಬಿಟ್ಟಂತೆ."

ಅಂತೆಯೇ ಶಿವಾಗಮ ಶಾಸ್ತ್ರವಿಧಿಯಲ್ಲಿ ಬುದ್ಧಿಗೆ ನಂಬಿಕೆ ಬೇಕು. ಮತ್ತು ಬುದ್ಧಿ ಸ್ಥಿರವಾಗಿರಬೇಕು. ಇಲ್ಲವಾದರೆ,

"ಎನಿಸುಕಾಲ ಕಲ್ಲು ನೀರೊಳಗಿದ್ದರೇನು ? ನೆನೆದು ಮೃದುವಾಗಬಲ್ಲುದೆ? ಎನಿಸು ಕಾಲ ನಿಮ್ಮ ಪೂಜಿಸಿ ಫಲವೇನಯ್ಯಾ, ಮನದಲ್ಲಿ ದೃಢವಿಲ್ಲದನ್ನಕ್ಕ ? ನಿಧಾನವ ಕಾಯ್ದಿರ್ದ ಬೆಂತರನಂತೆ ಆದರ ವಿಧಿಯು ಎನಗಾಯಿತ್ತು ಕೂಡಲ ಸಂಗಮ ದೇವಾ."

ಇದರಂತೆ ಭಕ್ತಿ ಭಾವವಿಲ್ಲದ ಕ್ರಿಯೆಯೂ ವ್ಯರ್ಥ :

"ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ. ಆಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ ! ಚಿತ್ರದ ಕಬ್ಬು ಕಾಣಿರಣ್ಣ ! ಅಪ್ಪಿದರೆ ಸುಖವಿಲ್ಲ ; ಮೆಲಿದರೆ ಸವಿ ಇಲ್ಲ. ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ."

ಮೊದಲನೆಯ ಮಂತ್ರ ಶ್ಲೋಕದ ಅಭಿಪ್ರಾಯವನ್ನು ಈಎಲ್ಲ ವಚನಗಳು ವಿಸ್ಪಷ್ಟಗೊಳಿಸಿವೆ.

ಶಿವಯೋಗ ಸಾಧಕನಿಗೆ ಶಿವಭಾವವೇ ಕಣ್ಣು. ಅದಿಲ್ಲದೆ ಅವನ ಬಾಳಿಗೆ ಬೆಳಕಿಲ್ಲ. ಶಿವನು ಶಿವಭಾವಗ್ರಾಹ್ಯನಲ್ಲದೆ ಬೇರೆ ಬರಿಯ ಜ್ಞಾನಕ್ರಿಯೆಗಳಿಗೆ ಸಾಧ್ಯನಲ್ಲ.

"ರೂಪಾಣಿ ಚಕ್ಷುಂಗ್ರಾಹ್ಯಾಣಿ ಪಶ್ಯೇಚ್ಚೇಚ್ಚಕ್ಷುಷಾ ವಿನಾ !
ವಿನಾ ಭಾವೇನ ಗಚ್ಛಂತಿ ಭಾವಗಮ್ಯಂ ಪರಂ ಶಿವಂ ॥"

—ಶಿವಧರ್ಮೋತ್ತರ

ರೂಪುಗಳು ಚಕ್ಷುಗೋಚರಗಳು. ಹೀಗಿರುವಾಗ ಕಣ್ಣಿಲ್ಲದೆ ರೂಪಗಳನ್ನು ನೋಡಬಹುದೆಂದು ಹೇಳಬಹುದಾದರೆ ಆ ಪಕ್ಷದಲ್ಲಿ ಭಾವವಿಲ್ಲದೆ ಭಾವಗಮ್ಯ ನಾದ ಪರಶಿವವನ್ನು ಸಾಕ್ಷಾತ್ಕರಿಸಬಹುದೆಂದು ಹೇಳಬಹುದು. ಆದರೆ ಇವೆರಡೂ ಸಾಧ್ಯವಾಗದವುಗಳು.

ಭಾವಾನುಭಾವಗಳಿಲ್ಲದೆ ಭವಹರನ ಒಲಿಸುವುದು ಕರಕಷ್ಟ. ಕೇವಲ ಜ್ಞಾನದಿಂದ ಕೈವಲ್ಯವಾಗದು. "ಬಚ್ಚಲ ನೀರು ತಿಳಿದಿದ್ದರೇನು ? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು ? ಆಕಾಶದ ಮಾವಿನ ಫಲವೆಂದರೇನು ? ಕೊಯ್ಯಲಿಲ್ಲ, ಮೆಲ್ಲಲಿಲ್ಲ ; ಕೂಡಲ ಸಂಗನ ಶರಣರ ಅನುಭಾವವಿಲ್ಲದವರು ಎಲ್ಲಿದ್ದರೇನು, ಎಂತಾದರೇನು ?"

ಭಾವವಿಲ್ಲದ ಯೋಗಿ ಬೂರಗದ ಮರ ಹೂವಾದಂತೆ ! ಭಾವವಿಲ್ಲದ ಜ್ಞಾನಿ ಹಾವು ಮೆಕ್ಕೆಯ ಮರ ಹಣ್ಣಾದಂತೆ ! ಭಾವವಿಲ್ಲದ ಕ್ರಿಯಾಶಾಲಿ ಬಚ್ಚಲನೀರು ತಿಳಿಯಾದಂತೆ !

"ಭಾವ ಶುದ್ಧೇನ ಮನಸಾ ಪೂಜಯೇತ್ಪರ ಮೇಷ್ಟಿನಂ ।
ಭಾವಹೀನಾಂ ನ ಗೃಹ್ಣಾತಿ ಪೂಜಾಂ ಸುಮಹತೀಮಪಿ॥
ನೈರಂತರ್ಯೇಣ ಸಂಪನ್ನೇ ಭಾವೇ ಧ್ಯಾತುಂ ಶಿವಂ ಪ್ರತಿ ।
ತದ್ಭಾವೋ ಜಾಯತೇ ಯದ್ವತ್ಕ್ರಿಮೇಃ ಕೀಟಸ್ಯ ಚಿಂತನಾತ್।

ಧ್ಯಾನದಿಂದಾಗುವುದು ಮನಸ್ಸಿನ ಶುದ್ಧಿ. ಆ ಶುದ್ಧ ಮನದಿಂದ ಮಾಡಬೇಕು ಪರಮೇಶನ ಪೂಜೆ. ಅದೇ ಭಾವವಿಲ್ಲದ ಪೂಜೆ ಎಷ್ಟು ದೊಡ್ಡದಾಗಿದ್ದರೂ ಅದನ್ನು ಪರಶಿವನು ಪರಿಗ್ರಹಿಸುವುದಿಲ್ಲ.

'ಕೀಟ ಭ್ರಮರ ನ್ಯಾಯ' ದಂತೆ ನಿರಂತರ ಶಿವಧ್ಯಾನ, ಶಿವಭಾವಗಳಿಂದ ಶಿವತ್ವ ಪ್ರಾಪ್ತಿಯಾಗುತ್ತದೆ. ಇದೇ ಅಭಿಪ್ರಾಯವನ್ನು ವೀರಾಗಮವು ಹೀಗೆ ಹೇಳಿದೆ.

"ಭ್ರಮದ್ಭ್ರಮರ ಚಿಂತಾಯಾಂ ಕೀಟೋऽಪಿ ಭ್ರಮರಾಯತೇ
ಶಿವಚಿಂತಾ ಸಮಾಕ್ರಾಂತಶ್ಶಿವರೂಪೀ ಭವೇದ್ಧ್ರುವಂ ॥"

ಬಾಹ್ಯ ಶುದ್ಧಿಗಿಂತ ಭಾವಶುದ್ಧಿ ಮುಖ್ಯ : ಶಿವನು ಭಾವವನ್ನು ನೋಡುವನಲ್ಲದೆ ಬಾಹ್ಯವನ್ನು ನೋಡನು. ತನುಮುಟ್ಟಿ ಪೂಜಿಸಿದರೆ ಸಾಲದು, ಜತೆಗೆ ಮನಮುಟ್ಟಿ ಪೂಜಿಸಬೇಕು, ತನುಮುಟ್ಟಿ ಮನ ಮುಟ್ಟದಿದ್ದರೆ ಸುಖವಿಲ್ಲ-ಭಾವವಿಲ್ಲದೆ ಏನು ಓದಿದರೂ ಏನು ಕೇಳಿದರೂ ಏನು ಮಾಡಿದರೂ ಪ್ರಯೋಜನವಿಲ್ಲ.

'ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟ ವಿಷವು ಕೂಡಲ ಸಂಗಮದೇವಾ.' 'ಮದಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೋ ? ಹದುಳಿಗರಾದವರಲ್ಲಿಪ್ಪ ಕೂಡಲ ಸಂಗಮದೇವಾ,' 'ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯ ? ಅಘೋರ ತಪವ ಮಾಡಿದಡೇನು ? ಅಂತರಂಗ ಆತ್ಮ ಶುದ್ಧವಿಲ್ಲದವರನೆಂತು ನಂಬುವನಯ್ಯಾ ಕೂಡಲ ಸಂಗಮದೇವಾ ?' 'ಎರೆದೆಲೆಯಂತೆ ಒಳಗೊಂದು ಹೊರಗೊಂದಾದರೆ ಮೆಚ್ಚುವನೆ ? ಬಾರದ ಭವಂಗಳ ಬರಿಸುವನಲ್ಲದೆ ಮೆಚ್ಚುವನೆ ? ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ ? ಉಡುವಿನ ನಾಲಗೆಯಂತೆ ಎರಡಾದರೆ ಕೂಡಲಸಂಗಯ್ಯ ಮೆಚ್ಚುವನೆ ?' 'ಆವಳ ವಚನ ಬೆಲ್ಲದಂತೆ ; ಹೃದಯದಲಿಪ್ಪುದು ನಂಜು ಕಂಡಯ್ಯ ! ಕಂಗಳಲೊಬ್ಬನ ಕರೆವಳು ; ಮನದಲ್ಲೊಬ್ಬನ ನೆನೆವಳು. ಕೂಡಲ ಸಂಗಮದೇವ ಕೇಳಯ್ಯ ಮಾನಿಸಗಳ್ಳಿಯ ನಂಬದಿರಯ್ಯ' 'ಮನೆಯೊಳಗೆ ಮನೆಯೊಡೆಯನಿದ್ದಾನೋ—ಇಲ್ಲವೋ ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡಯನಿದ್ದಾನೋ—ಇಲ್ಲವೋ ? ತನುವನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ, ಕೂಡಲ ಸಂಗಮ ದೇವಾ.' ಇವೆಲ್ಲ ವಚನಗಳು ಭಾವ ಶುದ್ಧಿಯ ಅಗತ್ಯವನ್ನು ಪರಿಪರಿಯಾಗಿ ಪರ್ಯಾಯೋಕ್ತಿಗಳಿಂದ ಪ್ರತಿಪಾದಿಸಿವೆ. ಮನದೊಡೆಯ ಮನದಲ್ಲಿರಬೇಕಾದರೆ ಭಾವಶುದ್ಧಿ ಅನಿವಾರ್ಯವೆಂದು ತಿಳಿ ಹೇಳುತ್ತವೆ, ಶುದ್ಧ ಹೃದಯವಿಲ್ಲದವರಿಗೆ ಶಿವನೊಲಿಯನೆಂಬುದನ್ನು ಹೃದಯಂಗಮವಾಗಿ ಹೇಳಿವೆ.

ಇನ್ನು ನಿರಂತರ ಶಿವನೆನಹಿನಲ್ಲಿರುವವರು ಶಿವಸ್ವರೂಪಿಗಳಾಗಿ ಸರ್ವಮಾನ್ಯರಾಗುತ್ತಾರೆ. 'ಅವನಾದಡೇನು. ಶ್ರೀ ಮಹಾದೇವನ ನೆನೆವನ ಬಾಯ ತೆಂಬುಲವ ಮೆಲುವೆ.... ಬದುಕುವೆ ಕೂಡಲ ಸಂಗಮದೇವಾ' ಎನ್ನುತ್ತಾನೆ ಬಸವಣ್ಣ !'

ನೆನಹಿನ ಸವಿ ಒಮ್ಮೆ ಮನಸಿಗೆ ಹಿಡಿದರೆ ಸಾಕು. ಮನಸು ಮುಂದೆಂದಿಗೂ ಬಿಡದು. ಧ್ಯಾನವೇ ಅದಕ್ಕೆ ರಾಗ ರಂಜನೆಯಾಗುತ್ತದೆ. 'ಲಿಂಗಧ್ಯಾನವೆನ್ನ ಮನರಾಗ ರಂಜನೆಯು' 'ಎನಗೆ ನಿಮ್ಮ ನೆನಹಾದಾಗವೇ ಉದಯ, ಎನಗೆ ನಿಮ ಮರಹಾದಾಗವೆ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವನ. ಎನಗೆ ನಿಮ್ಮ ನೆನಹವೆ ಪ್ರಾಣ ಕಾಣಾ ತಂದೆ ಸ್ವಾಮಿ. ಎನ್ನ ಹೃದಯದಲ್ಲಿ ನಿಮ್ಮ ಚರಣದು

ಡಿಗೆಯ ನೊತ್ತಯ್ಯ ! ವಚನದಲ್ಲಿ ಷಡಕ್ಷರಿಯ ಜಿರೆಯಯ್ಯಾ ಕೂಡಲ ಸಂಗಮ ದೇವ.'

'ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ. ಅಂಬುಜಕೆ ಭಾನುವಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬುವ ಚಿಂತೆ. ಎನಗೆ ಎನ್ನ ಕೂಡಲ ಸಂಗಮ ದೇವರ ನೆನೆವ ಚಿಂತೆ.' ಕೀಟ ಭ್ರಮರವನ್ನು ನೆನೆವಂತೆ ಸತ್ಯ ಸಾಧಕನಿಗೆ ಅದೇ ಆದರ್ಶ, ಅದೇ ಆಧಾರ ; ಅದೇ ಭಾವ ಭರ.

ನಿಷ್ಕಳಂಕಂ ನಿರಾಕಾರಂ ಪರಬ್ರಹ್ಮ ಶಿವಾಭಿಧಂ
ನಿಧ್ಯಾತುಮಸಮರ್ಥೋಽಪಿ ತದ್ವಿಭೂತಿಂ ವಿಭಾವಯೇತ್ ॥"

ಒಂದು ವೇಳೆ ಆ ನಿರಾಕಾರನಾದ ಶಿವನನ್ನು ಭಾವಿಸಲು ಆಗದಿದ್ದರೆ ಸಾಕಾರವಾದ ಆತನ 'ವಿಭೂತಿ' ಯನ್ನು ವಿಭಾವಿಸಬೇಕು ; ಅಂದರೆ ವಿಶೇಷ ವಾಗಿ ಧ್ಯಾನಿಸಬೇಕು. ಇದೇ ಅಭಿಪ್ರಾಯವನ್ನು ಸ್ಕಾಂದ ಪುರಾಣವು ಹೀಗೆ ಹೇಳಿದೆ ;

"ಸಾಕ್ಷಾತ್ಕರ್ತುಮ ಶಕ್ತಶ್ಚೇಚ್ಛಿವಂ ಸತ್ಯಾದಿ ಲಕ್ಷಣಂ ।
ಮಹಾ ವಿಭೂತಿಮದ್ಧಾಮ ಭಾವಯೇದ್ಭಾವಶುದ್ಧಯೇ ॥"

ವಿಭೂತಿ ಪೂಜೆಯೂ ವಿಶ್ವೇಶ್ವರನ ಪೂಜೆಯೇ ! ಸಚ್ಚಿದಾನಂದ ಸ್ವರೂಪ ನಾದ ಶಿವನನ್ನು ಆರಾಧಿಸಿ ಸಾಕ್ಷಾತ್ಕಾರ ಮಾಡಿಕೊಳ್ಳಲು ಆಗದವರು ಆತನ ಸಾಕಾರ ಸ್ವರೂಪವಾದ ವಿಭೂತಿ ಆರಾಧನೆಯನ್ನು ಮಾಡಿ ಭಾವಶುದಿ ಯನ್ನು ಪಡೆಯಬೇಕು.

'ಯದ್ಯದ್ವಿ ಭೂತಿಮತ್ಸತ್ವಂ ಶ್ರೀಮದೂರ್ಜಿತಮೇವವಾ ।
ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಭಂವಂ ॥

ಯಾವುದು ಭೂತಿಯಿಂದ ವಿಭೂತಿತ್ವಕ್ಕೇರಿ ಸತ್ವಶಾಲಿಯಾಗಿರುವುದೋ ಶ್ರೀಮಂತವಾಗಿರುವುದೋ ಪ್ರಭಾವಶಾಲಿಯಾಗಿದೆಯೋ ಅದೆಲ್ಲವೂ ಆ ಪರಶಿವ ನಂಶ. ಅದುವೇ ವಿಭೂತಿ ಅಂತಹ ವಿಭೂತಿತ್ವವನ್ನು ವಿಭಾವಿಸುವುದರಿಂದ ಭಾವ ಶುದ್ಧಿಯಾಗುತ್ತದೆ, ವೃದ್ಧಿಯಾಗುತ್ತವೆ.

"ಏತಾಂ ವಿಭೂತಿಂ ಯೋಗಂಚ ಮಮಯೋ ವೇತ್ತಿ ತತ್ತ್ವತಃ।
ಸೋऽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥
ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವ ಸಮನ್ವಿತಾಃ ॥"

ಈ ಲೋಕದಲ್ಲಿರುವ ನನ್ನಂಶಗಳಿಂದ ಊರ್ಜಿತವಾದವುಗಳು ವಿಭೂತಿಗಳು. ಇವುಗಳ ಆರಾಧನೆಯೂ ಯೋಗವೆನಿಸುತ್ತದೆ. ಇದೆಲ್ಲವನ್ನೂ ಚೆನ್ನಾಗಿ ತಿಳಿದು ಆರಾಧಿಸುವವನು ಅಚಲವಾದ ಯೋಗಶಕ್ತಿಯನ್ನು ಪಡೆಯುವಲ್ಲಿ ಯಾವ ಸಂಶಯವಿಲ್ಲ.

ನನ್ನಿಂದಲೇ ಎಲ್ಲವೂ ಆಗಿದೆ. ಏನೆಲ್ಲದರ ಉತ್ಪತ್ತಿಗೆ ನಾನೇ ಕಾರಣನಾಗಿದ್ದೇನೆ. ಇದನರಿದು ಭಕ್ತಿಭಾವ ತಳೆದು ಯಾರು ನನ್ನನ್ನು ಭಜಿಸುತ್ತಾರೋ ಅವರು ನನ್ನನ್ನೇ ಪಡೆಯುತ್ತಾರೆಂದು ಶ್ರೀಕೃಷ್ಣ ಭಗವಂತನು ಅರ್ಜುನನಿಗೆ ಬೋಧಿಸಿದನು.

ಅಂತಹ ವಿಭೂತಿತ್ವವು ಎಲ್ಲಿದೆಯೆಂದು ಆರಾಧಕನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಮೊದಲು ತನ್ನ ಭಾವಸಂಯಮವನ್ನು ಸಾಧಿಸಿಕೊಂಡರೆ ವಿಭೂತಿ-ಯೋಗ' ತಾನಾಗಿಯೇ ಒದಗುತ್ತದೆ. "ಸುತ್ತಿ ಸುತ್ತಿ ಬಾದಡಿಲ್ಲ. ಲಕ್ಷಗಂಗೆಯ ಮಿಂದಡಿಲ್ಲ. ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ. ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ. ನಿಚ್ಚಕ್ಕೆ ನೆನೆವ ಮನವನಂದಂದಿಗೆ ಅತ್ತಲಿತ್ತ ಹರಿಯಲೀಯದೆ ಚಿತ್ತದಲ್ಲಿ ನಿಲಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರ ಲಿಂಗವು."

ಹಲವಕ್ಕೆ ಹರಿದಾಡುವುದಕ್ಕಿಂತೆ ಹೊರವಳಯದಲ್ಲಿ ವಿಭೂತಿತ್ವವನ್ನು ಹುಡುಕುವುದಕ್ಕಿಂತ ತನ್ನಲ್ಲಿಯೇ ತನ್ನ ಪ್ರತೀಂದ್ರಿಯಗತ-ಚೈತನ್ಯ (ಪ್ರತ್ಯಾಗಾತ) ದಲ್ಲಿಯೇ ಅರಿತು ಆರಾಧಿಸಿದರೆ ಭಾವಯೋಗ ಲಭಿಸಿ ಫಲಿಸುತ್ತದೆ.

"ಸಜ್ಜೆಯುಪ್ಪರಿಸಿ ಶಿವಲಿಂಗ ಕರಸ್ಥಲಕ್ಕೆ ಬರೆ,
ಪ್ರಜ್ವಲಿಸಿ ತೊಳಗಿ ಬೆಳಗುತಿಹ ಕಾಂತಿಯಲ್ಲಿ

ಜಜ್ಜರಿಸಿ ತನುಮನದೃಷ್ಟಿ ನಟ್ಟು ಲಿಂಗದಲ್ಲಿ
ಜಜ್ಜರಿಸಿ ಶಿವ ಸುಖದೊಳಗೋಲಾಡುತ್ತ
ಸಜ್ಜನ ಸದ್ಭಕ್ತಿರತಿಯಾತನ ಕೂಡಾಡಿ
ಲಜ್ಜೆಗೆಟ್ಟು ನಾ ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನ."

ಕಾಯದಲ್ಲೆಲ್ಲ ಕಾಣಲು ಪರಚಾಡಿ ಕಂಗಾಲಾಗುವುದಕ್ಕಿಂತ ಕಳಾಗುರು ಕರುಣಿಸಿದ ಕರಸ್ಥಲದ ಕ್ರಿಯಾಲಿಂಗ ಕಾಂತಿಯಲ್ಲಿ ಕಾಯವಾಕ್‌ಮನ ದೃಷ್ಟಿಗಳು ಅಲುಗದೆ ನಿಂತರೆ ಶಿವಸುಖ ಸಿಕ್ಕುವುದು. ಭಾವದ ಭ್ರಮಗಳೆಲ್ಲ ಬಯಲಾಗಿ ಭಗವಂತನನ್ನು ಬೆರೆದೇಕವಾಗುವ ಭಾಗ್ಯ ಬಂದೊದಗುತ್ತದೆ.

ಭಾವಯೋಗಕ್ಕೆ ಬಾಹ್ಯದೃಷ್ಟಿಯೋಗವೇಮೂಲ. ದೃಷ್ಟಿ ಅಚಲವಾದರೆ ಅಮಲವಾದರೆ ಅಂತಃಕರಣಗಳೆಲ್ಲ ಅರಳಿ ಪರಿಮಳಗೊಳ್ಳುತ್ತವೆ. ಆನಂದ ಮಕರಂದ ಭರಿತವಾಗುತ್ತವೆ. ಅಪೂರ್ವ ಕಳೆಯುಳ್ಳವಾಗುತ್ತವೆ.

"ಕಂಗಳ ನೋಟವು ಹೃದಯದ ಜ್ಞಾನ ಮನದಲ್ಲಿ ತಾ
ಮಾತಾಡುತಿರ್ದೆನಯ್ಯಾ ! ಜೇನ ಮಳೆಗಳು ಕರೆದವು.
ಅಮೃತದ ಕಳೆಗಳು ಸುರಿದವು. ಕೂಡಲ ಚನ್ನ ಸಂಗನೆಂಬ
ರಸಸಾಗರದೊಳಗೋಲಾಡುತಿರ್ದೆನಯ್ಯಾ !"

ಕಣ್ಣನೋಟ ಭಾವಕೂಟ ಮಾಟ ಒಂದಾದರೆ ಅದೇ ಭವ್ಯವಾದ ಭಾವಯೋಗ. ಅಲ್ಲಿ ಸಕಲ ಸದ್ಭಾವಗಳ ಆಗಮವಾಗುತ್ತದೆ.

ಭಾವದ ಮಾಟವೇ ಮಾಟ; ಭಾವ ನೋಟವೇ ನೋಟ. ಭಾವದ ಬೆಡಗಿನಲ್ಲಿ ಬಾಳಿನ ಸಡಗರವಿದೆ. ಈ ಸ್ಥೂಲವಾದ ರೂಪು-ರುಚಿಗಳಿಗಿಂತ ಸಾಸಿರ ಸಾಸಿರ ಪಾಲು ಮೇಲು ಭಾವದ ರುಪು-ರುಚಿಗಳು. ಅಂತರ್ದೃಷ್ಟಿಗೆ ಬಾಹ್ಯರೂಪು ಬೇಕಿಲ್ಲ. ಅದು ಶಿವಜ್ಞಾನದಲ್ಲಿ ಶಿವಭಾವದಲ್ಲಿ ಬೆರೆತು ಮಾತು ಮುಂದುವರಿಸುತ್ತದೆ. ಆ ಮಾತಿಗೆ ಭಾಷೆಯ ಆಸರ ಬೇಕಿಲ್ಲ. ಅದು ಕಣ್ಣಿನದೇ ಆದ ಭಾಷೆ. ಭಾವಾಸಕ್ತಿಯೇ ಅದಕ್ಕೆ ಅರ್ಥವತ್ತಾದ ಅತ್ಯಂತ ಸೂಕ್ಷ್ಮವಾದ ಭಾಷೆ. ಆ ಕಣ್ಣನೋಟ ಆ ಬಗೆಯ ಮಾಟಗಳ ಒಲವು ಚಲುವುಗಳ ಬೆಸುಗೆಯಲ್ಲಿ ಜೇನ ಮಳೆ – ಅಮೃತಕಳೆ ಕರೆದು-ಸುರಿದು ಆ ದಿವ್ಯರಸಸಾಗರದೊಳಗೆ ಓಲಾಡಿದ ಅಪರೋಕ್ಷಾನುಭವ ಚನ್ನಬಸವಣ್ಣನದು.

## ಜ್ಞಾನಾಗಮಸ್ಥಳ :

ಶಿವ ದರ್ಶನಕ್ಕೆ ಭಾವ ಕಣ್ಣು; ಜ್ಞಾನ ಸೊಡರು. ನೋಟಕ್ಕೆ ಇವೆರಡೂ ಬೇಕು. ಇವೆರಡೂ ಸಾಪೇಕ್ಷಗಳು. ಬಗೆಯಚ್ಚಿ ತೆರೆದ ಬಳಿಕ ಅರಿವಿನ ಬೆಳಕು ಬೇಕು; ನೋಡುವ ಕ್ರಿಯೆ ಬೇಕು. ಬೆಳಕಿನಿಂದ ಕತ್ತಲೆ ಕಳೆಯುವಂತೆ ಅರಿವಿನಿಂದ ಕಾಳಿಕೆ ಕಳೆಯುತ್ತದೆ. 'ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ' ಎಂದಿದೆ ಗೀತೆ. ಅರಿಯುವಿಕೆ ಅದೊಂದು ತಪಸ್ಸು. ಆ ತಪಸ್ಸಿನಿಂದ ಸಮನಿಸುತ್ತದೆ ಸ್ವೈಷು; ಸಂಪ್ರಾಪ್ತವಾಗುತ್ತದೆ ಶಿವಸ್ವರೂಪು; ಸಮಾಗತವಾಗುತ್ತದೆ ಶಿವಭಾವ. ಶಿವಭಾವಾಗಮಕ್ಕೆ ಜ್ಞಾನಾಗಮ ಸಾಪೇಕ್ಷ.

ಕರ್ಮಗತಿ ಗಹನ. ಕರ್ಮ ತೀರ್ಮಾನದಲ್ಲಿ ಕವಿಗಳೂ ಮೋಹಿತರು. ಕರ್ಮಾಕರ್ಮ ವಿಕರ್ಮ ವಿಶ್ಲೇಷನ ವಿಚಾರದಲ್ಲಿ ಎಂಥವರೂ ಕಣ್ಣನ್ನು ಕಳೆದುಕೊಳ್ಳುತ್ತಾರೆ. ಜಡಕರ್ಮಗಳ ಜಾಡನ್ನು ಬಿಡಬೇಕಾದರೆ ಬೇಕು ಜ್ಞಾನ ಪ್ರದೀಪ. ಜಡಕರ್ಮಗಳನ್ನು ಜರಿದು ಮೃಢಕರ್ಮ (ಕ್ರಿಯೆ)ಗಳಲ್ಲಿ ನಿರತನಾಗಿ ನಿರಪೇಕ್ಷತೆಯಿಂದ ನಿರ್ಲೇಪನಾಗಿ ಇರುವವನೇ ಜಾಣ. ಅವನೇ ಸಜ್ಞಾನಿ. ಕ್ರಿಯಾಭಿಮಾನವನ್ನೂ ಕಳಚಿಹಾಕಬೇಕು. ಮಾಡುವವ ನಾನೆಂಬ ಭಾವವೂ ತನಗಿರಬಾರದು. 'ಕರ್ತಾ ಭೋಕ್ತಾ ಸದಾಶಿವಃ' ಎಂಬ ಭಾವ ಎಂಬ ಜ್ಞಾನ ಬೇಕು. 'ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು.' ಎಂದು ಬಸವಗೀತೆ ಹೇಳಿದರೆ, 'ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ। ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥' ಎಂದು ಭಗವಂತ ಹೇಳಿದ್ದಾನೆ ಕ್ರಿಯೆ ಒಳಿತಾದುದಾದರೂ ಕ್ರಿಯೆಯ ಫಲ ನನಗೆಂಬ ಮನಂತೆ ಒಳಿತಾದುದಲ್ಲ; ಕ್ರಿಯಾಕರ್ತ ನಾನೆಂಬ ಅಭಿಮಾನಾಹಂಕಾರಗಳು ಒಳಿತಾದವಲ್ಲ. ಆತ್ಮಜ್ಞಾನಿಗೆ ಈ ಮಮಕಾರ ಅಹಂಕಾರಗಳ ಕಟ್ಟಿರುವುದಿಲ್ಲ ಆತ್ಮಜ್ಞಾನಿ ಯಾವ ಕ್ರಿಯಾಭಿಮಾನಕ್ಕೆ ಒಳಗಾಗನು.

"ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ।
ಆತ್ಮಸಂಯಮ ಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥"

ಎಂಬ ಗೀತೋಕ್ತಿಯಂತೆ ಪ್ರಾಣೇಂದ್ರಿಯ ಕ್ರಿಯೆಗಳನ್ನು ಸಹ ಜ್ಞಾನೋದ್ದೀಪಿತ ಆತ್ಮಸಂಯಮಾಗ್ನಿಯಲ್ಲಿ ಹವನಮಾಡಿ ಹದುಳದಿಂದಿರುತ್ತಾನೆ.

"ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಂ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ॥"

ಆತ್ಮಜ್ಞಾನಿ ತನ್ನ ಕರ್ಮವನ್ನೆಲ್ಲ ಬ್ರಹ್ಮವನ್ನಾಗಿಸುತ್ತಾನೆ. ಅರ್ಪಣ ಕ್ರಿಯೆ ಬ್ರಹ್ಮ, ಅರ್ಪಿಸುವ ವಸ್ತು ಬ್ರಹ್ಮ; ಅರ್ಪಿಸುವವನೂ ಬ್ರಹ್ಮ. ಹೀಗೆ ಕರ್ಮ ಬ್ರಹ್ಮಗಳೆರಡನ್ನೂ ಸಮನ್ವಯಗೊಳಿಸಿ ಕರ್ಮನಿರತನಾಗಿಯೂ ಬ್ರಹ್ಮ ಸ್ವರೂಪನಾಗಿರುತ್ತಾನೆ. ಇದು ಜ್ಞಾನವುಳ್ಳವನಿಗೆ ಸಾಧ್ಯ. ಆದ್ದರಿಂದ ದ್ರವ್ಯ ಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಠ. ಏಕೆಂದರೆ ಎಲ್ಲ ಕ್ರಿಯೆಗಳು ಜ್ಞಾನದಲ್ಲಿ ಪರ್ಯವಸಾನಗೊಳ್ಳುತ್ತವೆ.

ಕರ್ಮಾಕರ್ಮ ವಿಕರ್ಮಗಳ ಮೋಹವನ್ನು ಕಳೆದುಕೊಳ್ಳಬೇಕಾದರೆ ಜ್ಞಾನಾಗಮವಾಗುವುದು ಅದೆಷ್ಟಾದರೂ ಅವಶ್ಯ, ಅಂತಹ ಅಪರೋಕ್ಷಜ್ಞಾನ ಸುಮ್ಮನೇ ಬರುವುದಿಲ್ಲ. ವಿನಯ, ಜಿಜ್ಞಾಸೆ, ಸೇವೆಗಳಿಂದ ಸಂಗಳಿಸಬೇಕು. ಗೀತೆಯೂ ಇದನ್ನೇ ಹೇಳಿದೆ.

"ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥"

ಜ್ಞಾನಪ್ರಾಪ್ತಿಗೆ ಪ್ರಣಿಪಾತ, ಪರಿಪ್ರಶ್ನೆ, ಸೇವೆ ಈ ಮೂರು ಮುಖ್ಯ. ತತ್ತ್ವದರ್ಶಿಯೂ ತತ್ತ್ವಜ್ಞಾನಿಯೂ ಆದ ಗುರುವಿನ ಸೇವೆ ಮಾಡದೆ ಲಭ್ಯವಾಗುವುದಿಲ್ಲ. ಅಂತೆಯೇ ಬೆಸಗೊಳ್ಳದೆ ಬರುವುದಿಲ್ಲ. ಹಮ್ಮಿಲ್ಲದೆ ನಯದಿಂದ ನಮಸ್ಕರಿಸಿ ಬೆಸಗೊಳ್ಳಬೇಕು. ಆಗ ಅವರು ತಮ್ಮಲ್ಲಿರುವ ತತ್ತ್ವಜ್ಞಾನವನ್ನು ಬೋಧಿಸುತ್ತಾರೆ. ಆತ್ಮಜ್ಞಾನವುಂಟಾಗದ ಮೇಲೆ ಮರಳಿ ಮೋಹಕ್ಕೆ ಬೀಳ

ದಂತಾಗುತ್ತದೆ, ಭೇದಭಾವ ತೊಲಗುತ್ತದೆ. ಸರ್ವಪಾಪಗಳು ಸಂಹೃತವಾಗುತ್ತವೆ, ಸರ್ವ ಜಡ ಕರ್ಮಗಳು ದೂರವಾಗುತ್ತವೆ.

ಅಜ್ಞಾನ, ಅಶ್ರದ್ಧೆ, ಅನಿಶ್ಚಯ ಇವು ಮೂರು ಮಾನವನ ಅಧೋಗತಿಗೆ ಸಾಧನಗಳಾಗಿವೆ. ಇವು ಉಳ್ಳವನಿಗೆ ಇಹದಲ್ಲಿ ಅಭ್ಯುದಯಿವಿಲ್ಲ ; ಪರದಲ್ಲಿ ಶ್ರೇಯಸ್ಸಿಲ್ಲ. ಆದ್ದರಿಂದ ಪ್ರತಿ ಮಾನವನು ಇವನ್ನು ಕಳೆದುಕೊಳ್ಳಬೇಕು. ಇವು ತೊಲಗಬೇಕಾದರೆ ಜ್ಞಾನೋದಯವಾಗಬೇಕು. ಜ್ಞಾನೋದಯವಾಗದೆ ಅಜ್ಞಾನ ಸಂಶಯಗಳು ತೊಲಗವು. ಇವು ತೊಲಗದೆ ಶ್ರದ್ಧೆ ಉಂಟಾಗದು. ಶ್ರದ್ಧೆಯುಂಟಾಗದೆ ಶಿವಜ್ಞಾನ ಸಂಪ್ರಾಪ್ತವಾಗದು.

"ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಸ್ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥"

ಶ್ರದ್ಧಾವಂತನು ಶಿವಪರಾಯಣನು ಸರ್ವೇಂದ್ರಿಯ ಸಂಯಮಿಯು ಶಿವಜ್ಞಾನವನ್ನು ಗಳಿಸುತ್ತಾನೆ. ಗಳಿಸಿ ಪರಮ ಶಾಂತಿಯನ್ನು ತಡವಿಲ್ಲದೆ ಪಡೆಯುತ್ತಾನೆ. ಆದ್ದರಿಂದ ಜ್ಞಾನ ಹೆಚ್ಚಿನದು.

"ನಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ
ತತ್ಸ್ವಯಂ ಯೋಗ ಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥"

ಎಂದು ಉದ್ಘೋಷಿಸಿದೆ ಭಗವದ್ಗೀತೆ ! ಜ್ಞಾನಕ್ಕೆ ಸದೃಶವಾದುದಂ ಪವಿತ್ರವಾದುದು ಇಹದಲ್ಲಿ ಇನ್ನಾವುದಿಲ್ಲ. ಯೋಗ ಸಿದ್ಧಿಯುಳ್ಳವನು ಕಾಲಾನುಸಾರವಾಗಿ ತನ್ನಲ್ಲಿ ತಾನೇ ಅದನ್ನು ಪಡೆಯುತ್ತಾನೆ. ಪಡೆಯುವ ಶಕ್ತಿ ಯೋಗಸಿದ್ಧನಿಗೆ ಮಾತ್ರ ಇರುತ್ತದೆಂದು ಗೀತೆ ಹೇಳಿದರೆ ರೇಣುಕಗೀತೆಯು ಸರ್ವ ಶರೀರಿಗಳಿಗಿರುತ್ತದೆಯೆಂದು ಹೇಳುವುದನ್ನು ಕೇಳಿರಿ :

"ಪರಸ್ಯ ಜ್ಞಾನ ಚಿಹ್ನಾನಿ ಯಾನಿ ಸಂತಿ ಶರೀರಿಣಾಂ ।
ತಾನಿ ಜ್ಞಾನಾಗಮತ್ವೇನ ಪ್ರವರ್ತಂತೇ ವಿಮುಕ್ತಯೇ ॥"

ಈ ಮೊದಲು ನಿರೂಪಿಸಿದ 'ಭಾವಾಗಮ' ಸಂಪನ್ನನೇ ಪರಮಜ್ಞಾನಿ.

ಆ ಪರಜ್ಞಾನಿಯ ಜ್ಞಾನಾಚಾರಗಳೇ ಉಳಿದ ಶರೀರಗಳ ಸದ್ಗತಿಗೆ ಸಾಧನಗಳಾಗು ವುದರಿಂದ 'ಜ್ಞಾನಾಗಮ' ಸ್ವರೂಪವನ್ನು ತಿಳಿಸುವ ತಿಳಿಯುವ ಪ್ರವರ್ತನ ವುಂಟಾಗುತ್ತದೆ. ಮತ್ತು ಸದ್ಗತಿಗೆ ಸಾಧನಗಳಾದ ಶಿವಯೋಗಿಯ ಜ್ಞಾನಕ್ರಿಯೆ ಗಳು ಸಾಧಕರಿಗೆ ಶಾಸ್ತ್ರಗಳಾಗಿ ಪರಿಣಮಿಸುತ್ತವೆ.

'ಜ್ಞಾನಚಿಹ್ನಾನಿ' ಎಂಬ ಪದ ಸಾಂಕೇತಿಕವಾಗಿದೆ. ಅರುಹಿನ ಕುರುಹು ಗಳು ಕ್ರಿಯಾಚಾರಗಳಾಗಬಲ್ಲವೇ ಹೊರತು ಕೇವಲ ಜ್ಞಾನಗಳಾಗ್ರಲಾರವು. ಕ್ರಿಯಾಂಗ, ಭಾವಾಂಗ, ಜ್ಞಾನಾಂಗವೆಂದು ಅಂಗ ಮೂಬಗೆ. ಕ್ರಿಯಾಂಗಕ್ಕೆ ಕ್ರಿಯೆಗಳೇ ಕುರುಹುಗಳು. ಅಂತೆಯೆ ಉಳಿದ ಭಾವಾಂಗ– ಜ್ಞಾನಾಂಗಗಳಿಗೂ ಕ್ರಿಯೆಗಳೇ ಕುರುಹುಗಳು. ಕ್ರಿಯಾಂಗ ಕುರುಹುಗಳು ಸ್ಥೂಲವಾದರೆ ಉಳಿದೆರಡರ ಕುರುಹುಗಳು ಸೂಕ್ಷ್ಮ-ಸೂಕ್ಷ್ಮತಮಗಳಾಗಿರುತ್ತವೆ.

ಜ್ಞಾನಕ್ರಿಯೆಯೇ ಜ್ಞಾನಶಕ್ತಿಯೆನಿಸುತ್ತದೆ. ಕ್ರಿಯೆ ಭಾವಗಳನ್ನು ಆಳ ವಡಿಸಿಕೊಂಡವನೇ ಜ್ಞಾನವನ್ನು ಆಳವಡಿಸಿಕೊಳ್ಳಬಲ್ಲ ಎಂಬುದನ್ನು 'ಪರಸ್ಯ' ಎಂಬ ಪದ ಪರಿಸ್ಫುಟಗೊಳಿಸುತ್ತದೆ. ಕ್ರಿಯೆ–ಭಾವರಹಿತಜ್ಞಾನಿಯು ಜ್ಞಾನ ಶರೀರಿಗಳಿಗೆ ಆದರ್ಶವಾಗದು. ಆಗದ ಬಳಿಕ ಆಗನುತ್ತ್ವ ಅತನ ಜ್ಞಾನಕ್ಕೆ ಆಳ ವಡದು. ಜ್ಞಾನೀ ಬೋಧಿಸುವ ಕ್ರಿಯೆಯನ್ನಾದರೂ ಮಾಡಲೇ ಬೇಕಾಗುತ್ತದೆ; ಜ್ಞಾನೇಚ್ಛಾಶಕ್ತಿಗಳ ವಾಹಕ ಮತ್ತು ಪ್ರವಾಹಕ ಕ್ರಿಯಾಶಕ್ತಿ. ಕ್ರಿಯೆ ಭಾವ ವಿಶಿಷ್ಟ ಜ್ಞಾನವೇ ಸರ್ವರ ಸದ್ಗತಿಗೆ ಸಾಧನವಾಗುತ್ತದೆ. ಭಾವ–ಜ್ಞಾನಗಳು ಕ್ರಿಯೆಯ ನೆರವಿನೊಡನೆ ಶ್ರಾವಕರ ಸಾಧಕರ ಹೃದಯಗಳನ್ನು ಸೇರಬಲ್ಲವು. ಹಾಗು ಭಾವ–ಜ್ಞಾನಗಳು ಆಗಮಮಯಿಗಳಾಗಿ ಅಂದರೆ ಶಬ್ದಾಂಗಿಗಳಾಗಿ ಶಾಸ್ತ್ರ ಗಳೆನಿಸಬಲ್ಲವು. ಶಬ್ದ–ಕ್ರಿಯೆಗಳೆಂಬ ಶರೀರಧಾರಣವಿಲ್ಲದೆ ಹೊರಬರಲಾರವು. ಶಾಸ್ತ್ರಪ್ರಮಾಣವಾಗಲರಿಯವು. ಕೇವಲ ಭಾವ, ಕೇವಲಜ್ಞಾನ ಜಲಲಿಪಿಗಳಿ ದ್ದಂತೆ! ಅವನ್ನು ಮತ್ತೊಬ್ಬರು ಮನವರಿಕೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಅದರ ಲ್ಲಿಯೂ ಸರ್ವ ಮಾನವರು ಮಾಡಿಕೊಳ್ಳಲು ಸಾಧ್ಯವಿಲ್ಲ.

ಭಾವಾಂಗಕ್ಕೆ ಜ್ಞಾನಾಂಗಕ್ಕೆ ಕ್ರಿಯೆ ಎಷ್ಟು ಅಗತ್ಯವೋ ಕ್ರಿಯಾಂಗಕ್ಕೆ ಭಾವಾಂಗ ಜ್ಞಾನಾಂಗಗಳೂ ಅಷ್ಟೇ ಅಗತ್ಯ. ಅಂತೆಯೇ ಭಾವಾಂಗಕ್ಕೆ

ಜ್ಞಾನಾಂಗ, ಜ್ಞಾನಾಂಗಕ್ಕೆ ಭಾವಾಂಗ ಅಗತ್ಯವೆಂದು ಬೇರೆ ಹೇಳಬೇಕಿಲ್ಲ. ಜ್ಞಾನಪ್ರಭೆಯನ್ನು ಅಳವಡಿಸಿಕೊಳ್ಳದೆ ಜ್ಞಾನಕ್ರಿಯೆಗಳು ಮೈದೋರವು.

ಶರೀರಿಗಳ ವಿಮುಕ್ತಿಗೆ ಸಾಧನಗಳಾಗಬೇಕಾದರೆ ಜ್ಞಾನಚಿಹ್ನಗಳು ಜ್ಞಾನಾಗಮತ್ವದಿಂದ ಪ್ರವರ್ತಿಸಬೇಕೆಂಬ ಪರಮ ಜಗದ್ಗುರು ರೇಣುಕ ಶಿವಾಚಾರ್ಯರ ಉದ್ಬೋಧೆ ಊರ್ಜಿತ ಸತ್ವವುಳ್ಳದು, ಉಜ್ವಲ ಪ್ರಜ್ಞಾಪ್ರತಿಭೆಯುಳ್ಳದು: ಉನ್ನತಸ್ವಾನುಭಾವ ಸಂಪನ್ನವಾದುದು. ಈ ಉತ್ತಮೋಕ್ತಿಯ ಉಲುವು-ಸುಳುಹುಗಳ ಬೆಂಬಳಿವಿಡಿದು ಬರೆಯಲು ಬಿಚ್ಚಿಹೇಳಲು ನಮ್ಮ ಭಾಷೆಗೆ ಶಕ್ತಿ ಸಾಲದು. ಬಡನುಡಿ ಹಿಮ್ಮೆಟ್ಟುತ್ತದೆ. ಆದರೂ ಉಲ್ಲಾಸ ಉರುವಣಿಸುತ್ತದೆ. ಉಸಿರನ್ನು ಉಪ್ಪವಡಿಸುತ್ತದೆ. ಉಪೋದ್ಘಾತರೂಪದಲ್ಲಿ ಉಪಾಯನ ಅರ್ಪಿಸಲು ಉತ್ತೇಜನಗೊಳಿಸುತ್ತದೆ. ಇದರ ಉಪಶಮನಕ್ಕೆ ಈ ಎರಡು ಉಕ್ತಿಗಳು.

ಅರುಹಿನ ಕುರುಹುಗಳನ್ನು ಮಾಹೇಶಾಂಗನು ಮೊದಲು ತಾನು ಅಳವಡಿಸಿಕೊಂಡು ಬಳಿಕ ಉಳಿದವರು ಬಾಳಿಬದುಕಲು ಶಾಸ್ತ್ರಪ್ರಮಾಣಗಳೊಡನೆ ಸ್ವಾಚಾರ ವಿಚಾರಗಳನ್ನು ಬೆರಸಿ ಬೋಧಿಸುವಂತಾಗಬೇಕು. ಕ್ರಿಯೆ ಮುಖ, ಭಾವ ನೇತ್ರ, ಜ್ಞಾನ ಜ್ಯೋತಿ. ಈ ಮೂವರ ಒಬ್ಬಳಿಯೇ ಜ್ಞಾನಾಗಮ. ಆಗಮ(ಶಬ್ದ)ವೇ ಅಂಗ, ಭಾವವೇ ಪ್ರಾಣ; ಜ್ಞಾನವೇ ಚೇತನ, ಕ್ರಿಯೆಯೇ ಚಲನ. ಇದು ಜ್ಞಾನಾಗಮ ಸ್ವರೂಪ; ಸರ್ವಾಚರಣೆಯರೂಪ. "ತಾ ಮುನ್ನೊ, ತನ್ನ ಮನ ಮುನ್ನೊ, ತನ್ನ ಕಾಯ ಮುನ್ನೊ-ಅಯ್ಯ? ಮುನ್ನೆಂಬಲ್ಲಿ ತಿಳಿಯದೆ ಹೋಯಿತ್ತು. ಮನ ಮುನ್ನೆಂಬಲ್ಲಿ ಕಾಯಕ್ಕೊಳಗಾಯಿತ್ತು. ಕಾಯ ಮುನ್ನೆಂಬಲ್ಲಿ ಜಡಮಯ ಪ್ರಳಯಕೊಳಗಾಯಿತ್ತು. ತಾ ಮುನ್ನಲ್ಲ, ತನ್ನ ಮನ ಮುನ್ನಲ್ಲ. ತಿಳಿದಾಗಲೇ ಮುನ್ನನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ!"

"ಭಾವೇನ ಕಿಂ ಫಲಂ ಪುಂಸಾಂ ಕರ್ಮಣಾ ವಾ ಕಿಮಿಷ್ಯತೇ ।
ಭಾವಕರ್ಮ ಸಮಾಯುಕ್ತಂ ಜ್ಞಾನಮೇವ ವಿಮುಕ್ತಿದಂ ॥"

ಕೇವಲ ಭಾವ, ಕೇವಲ ಕರ್ಮ ನಿಷ್ಫಲ: ಅಂತೆಯೇ ಕೇವಲ ಜ್ಞಾನ ನಿಷ್ಫಲ. ಆದ್ದರಿಂದ ಭಾವ, ಕ್ರಿಯೆ, ಜ್ಞಾನ ಈ ಮೂರು ಒಂದಾದರೆ ಸಫಲ; ವಿಮುಕ್ತಿಪ್ರದ. ಒಂದೊಂದೇ ಯಾವುದೂ ಅಗಮಿಸದು. ಲೋಕವ ಉದ್ಧರಿಸದು.

"ವಿಶ್ವದಲ್ಲಿ ಜ್ಞಾನಪ್ರತಿಷ್ಠೆಯ ಮಾಡುತ್ತಲಿಪ್ಪರು. ಗೋವಿನ ದೇಹದಲ್ಲಿ ಘೃತವಿಪ್ಪುದಯ್ಯಾ: ಅದು ಆ ಗೋವಿಂಗೆ ಪುಷ್ಟಿಯಾಗಲರಿಯದು. ಆ ಗೋವ ಪೋಷಿಸಿ, ಹಾಲಕರೆದು, ಕಾಸಿ, ಹೆಪ್ಪನಿಕ್ಕಿ, ದಧಿಯ ಮಥನವ ಮಾಡಿ ಬೆಣ್ಣೆಯ ತೆಗೆದು, ಆ ನವನೀತ ತುಪ್ಪವಪ್ಪಂತೆ ಕಾಸಿ, ಆ ಗೋವಿಂಗೆ ಕುಡಿಸಲಾಗಿ ದಿನದಿನಕ್ಕೆ ಪುಷ್ಟಿಯಪ್ಪುದು ತಪ್ಪದಯ್ಯಾ. ಈ ಪ್ರಕಾರ ಸತ್ಕ್ರಿಯೋಪಚಾರವ ಮಾಡಲಾಗಿ ಜ್ಞಾನವಹುದು. ಜ್ಞಾನವಾಗಲಿಕ್ಕೆ ಸಮ್ಯಕ್‌ಜ್ಞಾನವಹುದು. ಸಮ್ಯಜ್ಞಾನವಾಗಿ ಪ್ರಾಣವೇ ಲಿಂಗವಪ್ಪುದು ತಪ್ಪದು. ಸಂದೇಹವಿಲ್ಲವಯ್ಯ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ!

ಈ ವಚನವು 'ಭಾವಕರ್ಮಸಮಾಯುಕ್ತಂ ಜ್ಞಾನಂ' ಎಂಬ ಜಗದ್ಗುರು ರೇಣುಕರ ಸತ್ಯವಾಣಿಯನ್ನು ಎತ್ತಿ ಸಾರಿದೆ.

"ಕೇವಲಂ ಕರ್ಮಮಾತ್ರೇಣ ಜನ್ಮಕೋಟಿ ಶತೈರಪಿ ।
ನಾತ್ಮಾನಾಂ ಜಾಯತೇ ಮುಕ್ತಿರ್ಜ್ಞಾನಂ ಮುಕ್ತೇರ್ಹಿ ಕಾರಣಂ ॥
ಜ್ಞಾನಹೀನಂ ಸದಾಕರ್ಮ ಪುಂಸಾಂ ಸಂಸಾರ ಕಾರಣಂ।
ತದೇವ ಜ್ಞಾನಯೋಗೇನ ಸಂಸಾರವಿನಿವರ್ತಕಂ ॥

ಕೇವಲ ಕರ್ಮನಿರತರಿಗೆ ಕೋಟಿಜನ್ಮಕ್ಕೂ ಮುಕ್ತಿಯಾಗದು. ಕರ್ಮಯುಕ್ತ ಜ್ಞಾನವೇ ಮುಕ್ತಿಗೆ ಕಾರಣ.

ಅಂತೆಯೇ ಜ್ಞಾನವಿಲ್ಲದ ಕರ್ಮವು ಜನನಮರಣ ರೂಪ ಸಂಸಾರಕ್ಕೆ ಸಾಧನ. ಅದೇ ಕರ್ಮವು ಜ್ಞಾನದಿಂದ ಕೂಡಿಕೊಂಡರೆ ಸಂಸಾರ ನಿವೃತ್ತಿಯಾಗುವುದು.

ಕೇವಲ ಕರ್ಮವನ್ನು ನಿರಸನಮಾಡುವ ಈ ಶ್ಲೋಕಗಳೆರಡರಲ್ಲಿ ಕೇವಲ ಜ್ಞಾನನಿರಸನವೂ ಸಹಜವಾಗಿ ಧ್ವನಿತವಾಗಿದೆ. 'ತದೇವ ಜ್ಞಾನಯೋಗೇನ'ಎಂಬ ವಾಕ್ಯದಿಂದ ಕರ್ಮ ಜ್ಞಾನಯುಕ್ತವಾಗಬೇಕೆಂದು ಹೇಳುವುದರೊಡನೆ ಜ್ಞಾನ ಕರ್ಮಯುಕ್ತವಾಗಬೇಕೆಂಬುದೂ ಸ್ವತಃ ಸಿದ್ಧವಾಗಿದೆ,

"ಕಣ್ಣೂ ಕಾಲೂ ಎರಡುಳ್ಳವ ದೂರ ಎಯ್ದುವನಲ್ಲದೆ,
ಆ ಎರಡರೊಳಗೆ ಒಂದಿಲ್ಲದವನು ದೂರ ಎಯ್ದಲರಿಯನೆಂಬಂತೆ,
ಜ್ಞಾನರಹಿತನಾಗಿ ಕ್ರಿಯೆಯನೆಷ್ಟು ಮಾಡಿದರೇನು ?–

ಅವನದು ಕಣ್ಣಿಲ್ಲದವನ ನಡೆಯಂತೆ !
ಕ್ರಿಯಾರಹಿತನಾಗಿ ಜ್ಞಾನಿಯಾದಡೇನು,
ಅದು ಕಾಲಿಲ್ಲದವನ ಇರವಿನಂತೆ !
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವಡೆ,
ಜ್ಞಾನವೂ ಕ್ರಿಯೆಯೂ ಎರಡೂ ಬೇಕು.

"ಅಗ್ನಿ ಸುಡಲಲ್ಲದೆ ಸುಳಿಯಲರಿಯದು.
ವಾಯು ಸುಳಿದಲ್ಲದೆ ಸುಡಲರಿಯದು.
ಆ ಅಗ್ನಿ ವಾಯುವ ಕೂಡಿದಲ್ಲದೆ ಅಡಿ ಇಡಲರಿಯದು.
ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನ ಭೇದ ರಾಮನಾಥ !"

ಹೀಗೆ ಸತ್ಕ್ರಿಯೆ ಸುಜ್ಞಾನಗಳೆರಡೂ ಸೇರಿದರೆ ಸಂಸಾರದ ಬಿಡುಗಡೆಯಾಗುತ್ತದೆ. ಬರೀ ಒಂದೊಂದರಿಂದ ಏನೂ ಆಗದು. ಯಾವ ಜನ್ಮಕ್ಕೂ ಭವಬಂಧನ ಬಿಟ್ಟೋಡದು.

"ಫಲಂ ಕ್ರಿಯಾವತಾಂ ಪುಂಸಾಂ ಸ್ವರ್ಗಾದ್ಯಂ ನಶ್ವರಂ ಯತಃ ।
ತಸ್ಮಾತ್ ಸ್ಥಾಯಿಫಲಪ್ರಾಪ್ತ್ಯೈ ಜ್ಞಾನಮೇವ ಸಮಭ್ಯಸೇತ್ ॥
ಶಾಸ್ತ್ರಾಭ್ಯಾಸಾದಿ ಯತ್ನೇನ ಸದ್ಗುರೋರುಪದೇಶತಃ ।
ಜ್ಞಾನಮೇವ ಸಮಭ್ಯಸ್ಯೇತ್ಕಿಮನ್ಯೇನ ಪ್ರಯೋಜನಂ॥"

ಕೇವಲ ಕರ್ಮಾಚರಣೆಯನ್ನು ಮಾಡುವವರಿಗೆ ಸ್ವರ್ಗಾದಿಗಳು ಉಂಟಾಗುತ್ತವೆ. ಸ್ವರ್ಗಾದಿಗಳು ಶಾಶ್ವತವಲ್ಲ, ಇಂದಿದ್ದು ನಾಳೆ ಇಲ್ಲದಂತಾಗತಕ್ಕವು. ಶಾಶ್ವತಫಲವನ್ನುಂಟುಮಾಡುವ ಕ್ರಿಯಾಯುಕ್ತ ಜ್ಞಾನವನ್ನೇ ಅಭ್ಯಾಸಮಾಡಬೇಕು.

ಶಿವಾಗಮಾಭ್ಯಾಸದಿಂದ ಮತ್ತು ಶ್ರೀಗುರುವಿನ ಉಪದೇಶದಿಂದ ಜ್ಞಾನವನ್ನೇ ಸಂಪಾದಿಸಬೇಕು. ಬೇರೆ ಜ್ಞಾನವಿಲ್ಲದ ಕರ್ಮಾದಿಗಳಿಂದ ಪ್ರಯೋಜನವಿಲ್ಲ. ಪೂರ್ವಮೀಮಾಂಸೆಯ ಜಡಕರ್ಮಗಳಿಂದಲೂ ಪ್ರಯೋಜನವಿಲ್ಲ.

"ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ।
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥"

ಎಂಬಂತೆ ಜಡಕರ್ಮವೊಂದರ ಉಪಾಸನೆಯಿಂದ ಲಭಿಸುವ ಸ್ವರ್ಗಲೋಕವು ನಶ್ವರವಾದುದು,

"ಯಥೇಹ ಕರ್ಮ ಚಿತೋ ಲೋಕಃ ಕ್ಷೀಯತೇ।
ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ।
ಜ್ಞಾತ್ವಾದೇವಂ ಮೃತ್ಯುಪಾಶಾನ್ ಛಿನತ್ತಿ॥

ಎಂದು ಶ್ರುತಿ ಸಾರಿದೆ. ಜಡಕರ್ಮಗಳ ಫಲವಾಗಿ ಬರುವ ಶಾಶ್ವತವಲ್ಲದ ಸ್ವರ್ಗಲೋಕಗಳಿಗಾಗಿ ಬುದ್ಧಿವಂತರು ಬಾಯ್ನೀರನ್ನು ಬಿಡಬಾರದು. ಅಚ್ಚಳಿಯದ ಫಲವನ್ನು ಕೊಡುವ ಕ್ರಿಯೆಜ್ಞಾನಗಳನ್ನು ಆರಾಧಿಸಬೇಕು. ಇವು ಲಭ್ಯವಾಗಬೇಕಾದರೆ ಶಾಸ್ತ್ರಾಭ್ಯಾಸ ಶ್ರೀಗುರುವಿನುಪದೇಶ ಅಗತ್ಯ. 'ಗ್ರಂಥಮಭ್ಯಸ್ಯ ಮೇದಾವೀ ಜ್ಞಾನವಿಜ್ಞಾನತತ್ಪರಃ' ಎಂದು ಅಮೃತಬಿಂದೂಪನಿಷತ್ತು ಪೋಷಕವಾಗಿ ನಿರೂಪಿಸಿದೆ.

ಶಾಸ್ತ್ರಗ್ರಂಥಗಳಿಂದ ಸತ್ಯವಿಚಾರ ಲಭ್ಯವಾಗುತ್ತದೆ. ಉಳಿದ ಗ್ರಂಥಗಳಿಂದ ಲಭ್ಯವಾಗದು. ಜೀವನ ಪ್ರಗತಿಯನ್ನು ಆಧ್ಯಾತ್ಮ ಜ್ಞಾನಸಂಪತ್ತನ್ನು ಬಯಸುವವರು ಶಾಸ್ತ್ರಾಭ್ಯಾಸವನ್ನೇ ಮಾಡಬೇಕು. ಶಾಸ್ತ್ರಗಳು ಜಟಿಲ. ಅವು ತಿಳಿಯಬೇಕಾದರೆ ಅವನ್ನು ಅರಿದು ಆಚರಿಸಿ ಅನುಭವಕ್ಕೆ ತಂದುಕೊಂಡ ಶ್ರೀಗುರುಗಳ ಉಪದೇಶವನ್ನು ಪಡೆಯಬೇಕು. "ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಭೋಧತ"ಎಂದು ಶ್ರುತಿ ಘೋಷಿಸಿದೆ.

"ವ್ಯಾಕರಣವನ್ನೋದಿದಲ್ಲಿ ಶಬ್ಧ ಶುದ್ಧಿಯಲ್ಲದೆ ಮನಶುದ್ಧವಾಗದು. ಛಂದಸ್ಸನ್ನು ಸಾಧಿಸಿದಲ್ಲಿ ಕವಿತಾಶುದ್ಧಿಯಲ್ಲದೆ ಕವಿತೆಯ ಸಾಧಿಸಿ ವ್ಯಾಸನಂತೆ ಚಿರಂಜೀವಿಯಾಗನು. ಅಷ್ಟಾದಶ ಪುರಾಣವ ಸಾಧಿಸಿದಲ್ಲಿ ವಾಕ್‌ಶುದ್ಧಿಯಲ್ಲದೆ ಕಪಿಲಸಿದ್ಧ ಮಲ್ಲಿಕಾರ್ಜುನ ಮಹಾದೇವನಲ್ಲಿ ದೇಹಸ್ವಭಾವ ಶುದ್ಧಿಯಾಗದು ನೋಡಾ !"

ಆಧ್ಯಾತ್ಮ ವಿಚಾರವಿಲ್ಲದ ಬೇರೆ ಗ್ರಂಥಾಭ್ಯಾಸದಿಂದ ಆಗಬೇಕಾದಷ್ಟು ಪ್ರಯೋಜನವಾಗುವುದಿಲ್ಲ. ಹಾಗೂ ಬರೀ ಶಾಸ್ತ್ರಾಭ್ಯಾಸದಿಂದಲೂ ಹೃದಯ ಗ್ರಂಥಿಗಳು ಹರಿಯವು. ಶ್ರೀಗುರುವಿನ ಬೋಧೆಯೂ ಜತೆಗೆ ಸೇರಿದರೆ ತ್ರಿಮಲ

ಗಳು ತೊಲಗಿ ಸಂಶಯಗಳು ನೀಗಿ ನಿರ್ಮಲ ನಿಶ್ಚಯ ಮನೋಭಾವವುಂಟಾಗುತ್ತದೆ. ಜ್ಞಾನಾನುಭವಗಳುಂಟಾಗುತ್ತವೆ. ಅನುಭಾವಿಯಾದ ಗುರುವಿನ ಬೋಧೆಯಿಂದ ಅಭ್ಯಾಸಕ್ಕೆ ತಕ್ಕ ಫಲವುಂಟಾಗುತ್ತದೆ, ಶಾಸ್ತ್ರದಿಂದಾಗುವುದು ಆಗಮ ಜ್ಞಾನ; ಅಂದರೆ ಶಬ್ದಜ್ಞಾನ, ಶ್ರೀ ಗುರುವಿನಿಂದಾಗುವುದು ಜ್ಞಾನಾಗಮ; ಅಂದರೆ ಲಿಂಗಜ್ಞಾನ-ಎಂತಹ ಅಂತರ! ಏನು ಅನುಭವಸಾರ! 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಲಿಂಗಂ ಬ್ರಹ್ಮ ಸನಾತನಂ' ಈ ಶ್ರುತಿ ಈ ಸಿದ್ಧಾಂತೋಕ್ತಿಗಳಂತೆ ಜ್ಞಾನವೇ ಬ್ರಹ್ಮ; ಬ್ರಹ್ಮವೇ ಲಿಂಗ-ಎಂಬುದು ಅರಿಕೆಯಾಗುತ್ತದೆ. ಆದ್ದರಿಂದ ಜ್ಞಾನಾಗಮವೆಂದರೆ ಲಿಂಗಾಗಮ!

"ಜ್ಞಾನಂ ಪರಶಿವಾದ್ವೈತ ಪರಿಪಾಕ ವಿನಿಶ್ಚಯಃ।
ಯೇನ ಸಂಸಾರ ಸಂಬಂಧ ವಿನಿವೃತ್ತಿರ್ಭವೇತ್ಸತಾಂ॥
ಶಿವಾತ್ಮಕಮಿದಂ ಸರ್ವಂ ಶಿವಾದನ್ಯನ್ನ ವಿದ್ಯತೇ।
ಶಿವೋಽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಂ॥"

ಶಿವ ಮತ್ತು ಶಿವೆಯರೊಂದಾದ ಆ ವಸ್ತುವೇ ಪರಶಿವಾದ್ವೈತ. ಅದಕ್ಕಿಂತ ಅಧಿಕವಾದ ತತ್ತ್ವ ಬೇರೊಂದಿಲ್ಲ. ಅದು ಚರಾಚರವನ್ನೆಲ್ಲ ಒಳಕೊಂಡಿದ್ದೂ ಅದೊಂದೆ! ವೀರಶೈವದಲ್ಲಿ ಆ ಪರಶಿವನೇ ಅದ್ವೈತವಸ್ತು ಎಂಬ ಪರಿಪಕ್ವವಾದ ನಿಶ್ಚಯವೇ (ದಿಟಬಗೆಯೇ) ಜ್ಞಾನ; ಅಥವಾ ನೆರೆ ನಂಬುಗೆಯೇ ತನ್ನ ಅರಿಕೆ. ಸಂಶಯಕ್ಕೆ ಭಿನ್ನವಾದ ಭಾವ ವೃತ್ತಿಯೇ ನಿಶ್ಚಯ. ಇದನ್ನು ಸಂಗಳಿಸಿದ ಸಜ್ಜನರಿಗೆ ಸಂಸಾರ ಸಂಬಂಧ ಸಡಿಲಾಗುತ್ತದೆ; ಭವ ಬಂಧನ ಬಿಟ್ಟೋಡುತ್ತದೆ.

ಈ ಸರ್ವಸೃಷ್ಟಿಯು ಶಿವ ಸ್ವರೂಪವಾಗಿದೆ, ಆ ಪರಶಿವನಿಗೆ ಬೇರೆಯಾದುದು ಯಾವುದೂ ಇಲ್ಲ, ಈ ಸಮಷ್ಟಿಸೃಷ್ಟಿಯಲ್ಲಿ ನಾನೂ ಒಬ್ಬ. ಆದ್ದರಿಂದ ವ್ಯಷ್ಟಿಸ್ವರೂಪನಾದ ನಾನೂ ಸಹ ಶಿವಸ್ವರೂಪನಾಗಿರುವೆನೆಂಬ ಬಗೆಯುವುದೇ ಮಿಗಿಲಾದ ತಿಳುವಳಿಕೆ.

ಪರಶಿವಾದ್ವೈತದ ಪರಾಕಾಷ್ಠ ನಿರ್ಣಯದ ಪರಿಣತಿಯೇ ಪ್ರಜ್ಞೆ. ಇದು ವೀರಶೈವ ಜ್ಞಾನಲಕ್ಷಣ. ಇಲ್ಲಿ ಬಳಸಿದ ಶಿವಾದ್ವೈತ ಪದವು ವೀರಶೈವ ನಾಮವನ್ನು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಸೂಚಿಸುತ್ತದೆ, 'ಪರ

ವಿಶೇಷಣವು ಚಾರಿತ್ರಿಕ ಶಿವನನ್ನು ಬೇರ್ಪಡಿಸುತ್ತದೆ. ಪರಿಪಾಕ ಪದ ಆರುಹಿನ ಎಳಸುತನವನ್ನು ನಿವಾರಿಸುತ್ತದೆ. ವಿನಿಶ್ಚಯ ಪದ ಸಂಶಯ ನಿವೃತ್ತಿಯನ್ನು ಹೇಳುತ್ತದೆ. ಉತ್ತರ ಶ್ಲೋಕ ಪಂಕ್ತಿಯು ಶಿವಾದ್ವೈತ ಜ್ಞಾನದ ಸಫಲತೆಯನ್ನು ಸೂಚಿಸಿದೆ.

ಇನ್ನು ಎರಡನೆಯ ಶ್ಲೋಕದಲ್ಲಿ ಎಲ್ಲವನ್ನು ಅಲ್ಲಗಳೆವ ಕೇವಲಾದ್ವೈತ ಜ್ಞಾನಕ್ಕೆ ಭಿನ್ನತೆಯನ್ನು ಸ್ಪಷ್ಟವಾಗಿ ಉಗ್ಗಡಿಸಿದೆ. ಕೇವಲಾದ್ವೈತ ಜ್ಞಾನವು ಆ ಬ್ರಹ್ಮಕ್ಕೆ ಭಿನ್ನವಾದ ಎಲ್ಲ ತತ್ತ್ವಗಳನ್ನು ದೃಶ್ಯ ಜಗತ್ತನ್ನು ಅಲ್ಲಗಳೆಯುತ್ತದೆ ಬ್ರಹ್ಮಾದ್ವೈತ ಜ್ಞಾನವನ್ನು ನಿಜಗುಣರು ಹೀಗೆ ಹೇಳಿದಾರೆ :

ಆದಿದೆನ್ನದಖಿಳ ತತ್ತ್ವವನೇತಿಗಳೆದುಳಿದು । ಸದಮಳ
ಚಿದಾನಂದ ಪೂರ್ಣ ತಾನೆಂದು । ಹೃದಯದೊಳು ನಂಬಿ
ಬಹುಮತವನೆಣಿಸಿದೆ । ಪದುಳದಿಂದರಲದೆ ಸಹಜ ಸುಜ್ಞಾನ ॥

ಇದು ಬ್ರಹ್ಮಾದ್ವೈತ ಜ್ಞಾನ. ಎಲ್ಲ ತತ್ತ್ವಗಳನ್ನು ನೇತಿಗಳೆವುದೇ ಇದರ ಮುಖ್ಯ ಲಕ್ಷಣ. ಶಿವಾದ್ವೈತ ಜ್ಞಾನ ಹೀಗಲ್ಲ. ಇದು ಎಲ್ಲ ತತ್ತ್ವಗಳನ್ನು ಶಿವಸ್ವರೂಪವಾಗಿ ಕಾಣುತ್ತದೆ, ಅಂತೆಯೇ 'ಶಿವಾತ್ಮಕಮಿದಂ ಸರ್ವಂ ಎಂದೂ 'ಶಿವಾದನ್ಯನ್ನ ವಿದ್ಯತೇ' ಎಂದೂ ಜಗದ್ಗುರು ವಾಣಿ ಜಗತ್ತಿಗೆ ಸಾರಿದೆ. ಯಾವ ಯಾವ ಮತದ ಜ್ಞಾನ ಹೇಗೆ ಹೇಗೆ ಇದೆಯೆಂಬುದನ್ನು ಶ್ರೀ ಸಿದ್ಧ ರಾಮೇಶ್ವರನು ತನ್ನ ಈ ವಚನದಲ್ಲಿ ವಿವರಿಸಿದ್ದಾನೆ.

"ಸಿದ್ಧಾಂತಿಯ ಜ್ಞಾನ, ಸಾಧನೆಯಲ್ಲಿ ಹೋಯಿತ್ತು,
ವೇದಾಂತಿಯ ಜ್ಞಾನ, ವೇದದಲ್ಲಿ ಹೋಯಿತ್ತು,
ಕ್ರಿಯಾವಂತನ ಜ್ಞಾನ, ನುಡಿಯಲ್ಲಿ ಹೋಯಿತ್ತು,
ವ್ಯಾವಹಾರಿಕ ಜ್ಞಾನ, ದ್ರವ್ಯಾರ್ಜನೆಯಲ್ಲಿ ಹೋಯಿತ್ತು,
ಇವೆಲ್ಲ ಭವಕ್ಕೆ ಕಾರಣವಲ್ಲದೆ, ಭವರಹಿತ ಜ್ಞಾನವು
ಸಾಧ್ಯವಾಗುವುದು ದುರ್ಲಭವಯ್ಯಾ ಕಪಿಲ ಸಿದ್ಧಮಲ್ಲಿಕಾರ್ಜುನ."

ಶಿವಾದ್ವೈತಜ್ಞಾನ ಸಿದ್ಧಾಂತಿ ವೇದಾಂತಿಗಳದಂತಹದಲ್ಲ. ಸಾಧನೆ-ವಾದನೆಗಳಲ್ಲಿ ಹೋಲಬುದಪ್ಪುವದಲ್ಲ. ಆಡುವುದರಲ್ಲಿ ಅರ್ಜನೆಯಲ್ಲಿ ಸವೆಯುವ

ದಲ್ಲ. ಸವೆದು ಭವಕ್ಕೆ ಕಾರಣವಾಗುವುದಲ್ಲ, ಶಿವಾದ್ವೈತ ಜ್ಞಾನ ಭವರಹಿತ ಜ್ಞಾನ, ಸಂಸಾರ ಬಂಧ ವಿನಿವೃತ್ತಿಯುಳ್ಳ ಜ್ಞಾನ, ಶಿವಾದ್ವೈತ ಪದದಲ್ಲಿ ಶಕ್ತಿ ವಿಶಿಷ್ಟತೆಯಿರುವಂತೆ ಜ್ಞಾನ ಪದದಲ್ಲಿಯೂ ಕ್ರಿಯಾ ವಿಶಿಷ್ಟತೆಯಿರುತ್ತದೆ. ದೃಕ್ಕ್ರಿಯೆಗಳಿಗೆ ಭಿನ್ನತೆಯಿಲ್ಲ. ದೇಹೇಂದ್ರಿಯ ಕರಣಾದಿಗಳನ್ನೂ ಶಿವವಾಗಿಸ ಬಲ್ಲುದು ಈ ಶಿವಾದ್ವೈತ ಪರಿಪಾಕ ವಿನಿಶ್ಚಯ ಜ್ಞಾನ.

"ಅಂಧೋ ಯಥಾ ಪುರಸ್ಥಾನಿ ವಸ್ತೂನಿ ಚ ನ ಪಶ್ಯತಿ ।
ಜ್ಞಾನಹೀನಸ್ತಥಾ ನಾತ್ಮಸ್ಥಂ ವೀಕ್ಷತೇ ಶಿವಂ ॥
ಶಿವಸ್ಯ ದರ್ಶನಾತ್ಪುಂಸಾಂ ಜನ್ಮರೋಗ ನಿವರ್ತನಂ ।
ಶಿವದರ್ಶನಮಪ್ಯಾಹುಸ್ಸುಲಭಂ ಜ್ಞಾನ ಚಕ್ಷುಷಾಂ ॥
ದೀಪಂ ವಿನಾ ಯಥಾ ಗೇಹೇ ನಾಂಧಕಾರೋ ನಿವರ್ತತೇ ।
ಜ್ಞಾನಂ ವಿನಾ ತಥಾ ಚಿತ್ತೇ ಮೋಹೋಽಪಿ ನ ನಿವರ್ತತೇ ॥"

ಕುರುಡನು ಮುಂದಿರುವ ವಸ್ತುಗಳನ್ನೂ ಕಾಣನು. ಇದರಂತೆ ಅರುವಿಲ್ಲ ದವನು ತನ್ನೊಳಗಿರುವ ಶಿವನನ್ನು ಕಾಣಲಾರನು.

ಶಿವನ ದರ್ಶನದಿಂದ ಮಾನವರ ಹುಟ್ಟು ಬೇನೆ ಹೋಗುತ್ತದೆ, ಅಂತಹ ಶಿವದರ್ಶನವು ಅರಿವಿನಚ್ಚಿಯುಳ್ಳವರಿಗೆ ಮಾತ್ರ ಸುಲಭ. ತಿಳಿಗಣ್ಣಿಲ್ಲದವರಿಗೆ ದುರ್ಲಭ.

ಸೊಡರಿಲ್ಲದ ಮನೆಯ ಇರುಳು ಹರಿಯದು. ಇದರಂತೆ ಶಿವಜ್ಞಾನವಿಲ್ಲದೆ ಮನದ ಮೋಹ ಮಾಯವಾಗದು ಅಂದರೆ ಹಗಲಿಲ್ಲದಿರುವುದೇ ಇರುಳು. ಅರುಹಿಲ್ಲದಿರುವುದೇ ಮರಹು.

ಮೊದಲಿರಬೇಕು ಮೊಗಕ್ಕೆ ಕಣ್ಣು. ಕಣ್ಣಿದ್ದರೆ ಇಳೆಯ ಬಾಳು ಚಂದ ; ನೋಟ ಸವಿ. ಚಲುವಿನ ರುಚಿ ಚಕ್ಷುವಿನಿಂದ । ಅಂತಯೇ ಆಧ್ಯಾತ್ಮ ಜೀವನಕ್ಕೆ ಅಂತರ್ದೃಷ್ಟಿ ಬೇಕು. ಅರಿವನ್ನು ಹೇಳುತ್ತಾರೆ ಒಳಗಣ್ಣೆಂದು ! ಒಳಗೂ ಹೊರಗೂ ಇರುವ ಶಿವನನ್ನು ಕಾಣಲು ಬಗೆಗಣ್ಣು ಬೇಕೇ ಬೇಕು. ತಿಳಿಗಣ್ಣಿದ್ದರೆ ಶಿವದರ್ಶನವಾಗುತ್ತದೆ. ಶಿವದರ್ಶನವಾದರೆ ಭವರೋಗ ಬಾರದಂತಾಗುತ್ತದೆ. ಶಿವವಾಗಿಲ್ಲದುದೇ ಭವ; ಅಂದರೆ ಸಂಸಾರ.

ಜ್ಞಾನ ಒಂದು ದೀಪ. ಅದರಿಂದ ಬೆಳಗುತ್ತದೆ ಶಿವರೂಪ. ಮನೆಯು ಬೆಳೆಗುವುದು ದೀಪ. ಮನವ ಬೆಳಗುವುದು ಜ್ಞಾನ ಪ್ರದೀಪ. ಪ್ರಜ್ಞಾನ ಪರಮಾತ್ಮನ ಪ್ರಭೆ, ಆತನ ಆ ಚಿತ್ಪ್ರಭೆ ಚರಾಚರವನ್ನು ಬೆಳಗುತ್ತಿದೆ ವ್ಯಕ್ತಾವ್ಯಕ್ತವಾಗಿ ! ಅವ್ಯಕ್ತವಾಗಿ ಮಾನವರ ಮನದೊಳಗಿರುವ ಆಮಹಾ ಪ್ರಭೆಯನು ವ್ಯಕ್ತವಾಗಿಸಿಕೊಳ್ಳುವುದೇ ಮಾಹೇಶ್ವರಾಂಗನ ಕರ್ತವ್ಯ. ಅದನ್ನು ಅಳವಡಿಸಿಕೊಂಡು ಅಂಗನನ್ನು ಚಿಲ್ಲಿಂಗ ಸ್ವರೂಪನಾಗಿಸಿಕೊಳ್ಳುವುದೇ ಜೀವನ ಸಾಫಲ್ಯ. ಅದಾಗುವುದು ಅತ್ಯಂತ ಕಷ್ಟ. “ದೇವ ಪ್ರಭೆಯೊಳಗಿಹರಲ್ಲದೆ ದೇವಗಹನವ ಮಾಡಬಾರದಾರಿಗೆಯು. ದೇವ ಸಕೀಲದೊಳಗೆ ಬೆಳೆಯಬಹುದಲ್ಲದೆ ದೇವನಪ್ಪುದೊಳಗೆ ಉತ್ಪತ್ಯವಾಗಬಾರದಾರಿಗೆಯು. ಉತ್ಪತ್ತಿಯ ಗತಿಯನಾರೋಗಣೆಯ ಮಾಡಬಾರದಾರಿಗೆಯು. ಚರಾಚರವೆಲ್ಲವು ಈ ಪರಿಯಲ್ಲಿ ಸಂಭ್ರಮಿಸುತಿರ್ದುದಲ್ಲಾ ! ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಇದ್ದ ಭಾವಳಿದಡೆ ಲಿಂಗೈಕ್ಯವು.”

ಜಗತ್ತಿನ ಜೀವರೆಲ್ಲರು ಆ ಅಖಂಡ ಚಿತ್ಪ್ರಭಾಮಯ ಲಿಂಗದೊಳಗಿದ್ದಾರೆ. ಆದರೆ ಆ ಲಿಂಗ ಪ್ರಭೆಯನ್ನು ತಮ್ಮೊಳಗೆ ಅಳವಡಿಸಿಕೊಂಡು ತಾವೇ ಚಿಲ್ಲಿಂಗ ಸ್ವರೂಪರಾಗುವುದು ಅಪರೂಪ. ಮತ್ತು ಆ ಚಿಜ್ಜ್ಯೋತಿರ್ಲಿಂಗದ ಸಂಬಂಧದಲ್ಲಿ ಸಮರಸದಲ್ಲಿ ಬೆಳದರೆ ಭವಬೀಜ ಹುರಿದು ಹೋಗುತ್ತದೆ ; ಪ್ರಜ್ಞೆಯು ಪ್ರವರ್ಧಿಸುತ್ತದೆ. ದೃಕ್ಕ್ರಿಯಾಂಗ ಪರಿಶುದ್ಧವಾಗಿ ಭಾವಪೂಜೆ ಬೆಳೆದು ಶಾಶ್ವತ ಶಿವಾನಂದದ ಬೆಳಸು ಹುಲುಸಾಗುತ್ತದೆ, ಅಂತಹ ಚಿಲ್ಲಿಂಗವು ತನ್ನ ಚಿತ್ತದಲ್ಲಿರುವುದನ್ನು ಚಿದ್ಗುರುವಿನಿಂದ ಅರಿದು ಅಳವಡಿಸಿಕೊಂಡು ಶಾರೀರಕ ಭಾವವನ್ನು ಸವೆಸಿ ಅಂಗವನ್ನು ಲಿಂಗವನ್ನಾಗಿಸಿಕೊಂಡ ಬಳಿಕ ಪುನರ್ಜನ್ಮವ ಪರಿಭವವಿರದು. ಕೆಂಡದೊಳಗಿನ ಕೋಲು ಕೆಂಡವೇ ಆಗುವಂತೆ ಲಿಂಗದೊಳಗಿನ ಅಂಗ ಲಿಂಗವೇ ಆಗುತ್ತದೆ. ಅದನರಿಯದ ಈ ಜಾಗತಿಕ ಜೀವರು ಈ ಭೌತಿಕ ಅಜ್ಞಾನದಲ್ಲಿ ಸ್ವಲ್ಪ ಸುಖದಲ್ಲಿ ಅಲ್ಪ ಭಾಗ್ಯದಲ್ಲಿ ಸಂಭ್ರಮಿಸುತ್ತಿರುವುದಂ ಸೋಜಿಗ ! ದಿಟಕ್ಕೂ ಇದು ಸಂಭ್ರಮವಲ್ಲ ವಿಭ್ರಮ.

“ಅರಿದೆನರಿದೆನು ಎಂದೊಡೆ ಅದೇಕೋ ಮಂದಣ ಮರವೆ ? ಅರಿದೆನೆಂಬುದು ಎನ್ನಲ್ಲಿ ಲೇಸಾಗಿ ಉಳ್ಳೊಡೆ ನಿನ್ನರಿವೆಲ್ಲವ ಹುರಿಹಂಚು ಮಾಡಿ ನೀನರಿ

ಮರುಳೇ ! ಸ್ವತಂತ್ರ ಘನದೊಳಗಿರ್ದು ನಿಜವನರಿದಿಹೆನೆಂಬಡೆ ಮೂರ್ತಿ ಕಿರಿದಲ್ಲ ನಿಲ್ಲು, ಮಾಣು ; ಗುಹೇಶ್ವರನೆಂಬ ಲಿಂಗದ ಘನಗಟ್ಟಿಯನರಿವಡೆ ನಿನ್ನರಿವೆಲ್ಲ ಹುರಿಹಂಚು ಮಾಡಿ ನೀನರಿ ಮರುಳೇ !"

ಜ್ಞಾನಾಗಮ ವಿಚಾರದಲ್ಲಿ ಈ ವಚನ ಒಂದು ಹೊಸ ವಿಚಾರಕ್ರಾಂತಿ ಯನ್ನೆಸಗಿದೆ. ಜ್ಞಾನವೇ ಬ್ರಹ್ಮ, ಬ್ರಹ್ಮಕ್ಕೆ ಭಿನ್ನವಾಗಿ ಇನ್ನೇನಿಲ್ಲ ಎಂಬ ವಾದ ದಲ್ಲಿ ಮರವೆ ಮತ್ತೆಲ್ಲಿಂದ ಬರುತ್ತದೆ ? ಒಮ್ಮೆ ಅರಿತು ಮತ್ತೊಮ್ಮೆ ಮರೆವು ದುಂಟೆ ? ಮರೆವುದಾದರೆ ಪರಿಚ್ಛಿನ್ನತೆ ಪ್ರಾಪ್ತಿಯಾಗುವುದಿಲ್ಲವೆ ? ಅದನ್ನು ಮರೆತಾಗ ಬೇರಾವುದನ್ನು ಅರಿತಿರಲು ಸಾಧ್ಯ ? ಅದನರಿತ ಬಳಿಕ ಬೇರೆ ಅರಿವ ತತ್ತ್ವ ಉಂಟೆ ? ಹಾಗಾದರೆ 'ತಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ' ಇದರ ಗತಿಯೇನು ? ಅಲ್ಲದೆ ಘನವಾದ ಆ ಬ್ರಹ್ಮವನ್ನು ಅರಿಯಲು ಸಾಧ್ಯವೆ ? ಅರಿವಿಗೆ ಅಳವಡುವ ವಸ್ತು ಕಿರಿದಾಗಿರಬೇಕಲ್ಲವೆ ? ಕಿರಿದಾಗಿದೆಯೆಂದರೆ 'ಬ್ರಹ್ಮ' ನಾಮದ ಸಾರ್ಥಕತೆಯೇನು ? ಅರಿಸಿಕೊಂಡರೆ ಸಾಧಕನ ಅರಿವ ಕರಣದೊಳಗಿ ದ್ದರೆ ಸ್ವತಂತ್ರತೆಗೆ ಭಂಗವಲ್ಲವೆ ? ಘನ ಘನವನ್ನು ನಿಜ ನಿಜವನ್ನು ಅರಿಯಲು ಅವಕಾಶವಿದೆಯೆ ? ಹೀಗಿರುವಾಗ ಅರಿದೆನೆಂಬುದು ಮರುಳುತನವಲ್ಲವೆ ? ಇದ ರಲ್ಲಿ ಹುರುಳಿದೆಯೆ ?

"ಮತಿಯೊಳಗೊಂದು ದುರ್ಮತಿ ಹುಟ್ಟಿ ಗಸಣೆಗೊಳಗಾದ ಪರಿಯ ನೋಡಾ ! ಜ್ಞಾನವನು ಅಜ್ಞಾನ ಬಂದು ನುಂಗಿದಡೆ ಭಾನು ಗ್ರಹಣಕೊಳಗಾ ದಂತಾದುದಲ್ಲಾ ! ಕ್ಷೀರವುಳ್ಳ ಪಶು ಕರುವನಗಲಿ ಅರಿಯದ ಸ್ನೇಹದಂತಿರ್ದು ದಲ್ಲಾ ! ಹೇಳುವಲ್ಲಿ ಯುಕ್ತ, ಕೇಳುವಲ್ಲಿ ಮುಕ್ತನೆಂಬುದೆಲ್ಲವು ಅಜ್ಞಾನ ಭಾವಕ್ಕೆ ಬಂದುದಲ್ಲಾ ! ನೀರ ಮೇಲಣ ಲಿಪಿಯನಾರು ಓದಬಲ್ಲರು ? ಸಾರಾಯ ವೇದ್ಯರಪ್ಪರು. (?) ಕನ್ನಡಿಯೊಳಗೆ ನೋಡಿ ಭಿನ್ನವಿದ್ದುದೇ ಅಯ್ಯ, ತನ್ನ ಕಣ್ಣಿಗೆ ಕಾಣದಂತಿರ್ದುದಲ್ಲವೆ ? ದರ್ಪಣದೊಳಗಣ ಬೆಳಗು ಬೆಳಗಿನೊಳಗಣ ಬೆಳಗಂ ಗುಹೇಶ್ವರನಿಪ್ಪೆಡೆಯ ತಿಳಿದು ನೋಡಿರೇ !"

ವಾಗದ್ವೈತ ವೇದಾಂತದಲ್ಲಿ ಇದಕ್ಕೆಲ್ಲ ಸೂಕ್ತವಾದ ಉತ್ತರ ಸಿಕ್ಕದೇನೊ? ದ್ವೈತವನ್ನೇ ಒಪ್ಪದಲ್ಲಿ ಮತಿ-ದುರ್ಮತಿ, ಜ್ಞಾನ-ಅಜ್ಞಾನ, ಹಸು-ಕರು, ಹೇಳಿಕೆ-ಕೇಳಿಕೆ, ಬಂಧ-ಮುಕ್ತಿ, ಲೇಖನ-ವಾಚನ, ಜ್ಞಾತೃ-ಜ್ಞೇಯ, ಮುಖ-

ಮುಕುರ, ದೃಷ್ಟಿ-ದರ್ಶನ, ಬೈಗು-ಬೆಳಗು ಇವೆಲ್ಲ ಇಬ್ಬಗೆಗಳಿಗೆ ನೆಲೆಯಿದೆಯೆ? ನಿಲವಿದೆಯೆ? ದ್ವೈತಾದ್ವೈತ ಇವೆರಡನ್ನೂ ಒಪ್ಪುವ ಶಿವಾದ್ವೈತ ಸಿದ್ಧಾಂತದಲ್ಲಿ ಜ್ಞಾನ ಕ್ರಿಯೆಗಳೆರಡನ್ನು ಅಂಗೀಕರಿಸುವ ಅನುಭಾವ ವೀರಶೈವದಲ್ಲಿ ಇವೆಲ್ಲಕ್ಕ ನೆಲೆಯಿದೆ, ಬೆಲೆಯಿದೆ, ಸಂಗತವಾಗುವ ಸಂಕೇತವಾಗಿದೆ.

ತಿಳಿದು ನೋಡುವರೆ ದ್ವೈತಾದ್ವೈತದಲ್ಲಿ ಸಂಗತವಾಗುತ್ತದೆ. ಕೇವಲಾ ದ್ವೈತದಲ್ಲಿ ಅಸಂಗತವಾಗುತ್ತದೆ. ಕೇವಲಾದ್ವೈತದಲ್ಲಿ ಸಂಕೋಚ ವಿಕಾಸಗಳಿಗೆ ಅವಕಾಶವೇ ಇಲ್ಲ ; ವಿಕಾಸವಾದಕ್ಕೆ ಇಂಬಿಲ್ಲ. ಜ್ಞಾತೃ ಅಥವಾ ದ್ರಷ್ಟಾ ಇಲ್ಲ, ಹೀಗಿರುವಾಗ ಜ್ಞಾನ ಯಾರಿಗೆಂದು ಅರ್ಥವಾಗುವುದಿಲ್ಲ. ಇಂತಿರುವಾಗ ಮತಿಯ ಮಾತೆಂದರೇನು ? ಅದರಲ್ಲಿಯೂ ದುರ್ಮತಿ ಹುಟ್ಟಿ ಗಸಣೆಗೊಳಗಾಗುವು ದೇದರೇನು ? ಅಜ್ಞಾನವನ್ನು ಅಂಗೀಕರಿಸಿದರೆ ಜ್ಞಾನವು ಭಾನುವಿನಂತೆ ಪರಿ ಚ್ಛಿನ್ನ ವಾಗುವುದಿಲ್ಲವೆ ? ಆಗಲಿ ಅಂದರೆ 'ಜ್ಞಾನಮನಂತಂ' ಎಂಬ ಶ್ರುತಿಗೆ ಅರ್ಥವೇನು ? ಕರುವನಗಲಿದ ಹಸು ಕರುವನರಿಯದದ್ದರೆ ಅದು ಅಜ್ಞಾನವೆ ? ಹಾಗಾದರೆ ಅದರೊಳಗಿನ ಕ್ಷೀರೋತ್ಪತ್ತಿ ಯಾರಿಗಾಗಿ ? ಅರಿಯದಾಗ ಅದಕ್ಕೆ ಶಿಶು ಸ್ನೇಹ ವಿಲ್ಲವೆ ? ಇಲ್ಲೆಂದರೆ ಮರಳಿ ಬರುವುದೆಂತು ? ಹೇಳುವಾತ ಜ್ಞಾನ ಯುಕ್ತ, ಕೇಳುವಾತ ಮುಕ್ತ ಎಂಬ ಮಾತು ಸಂಗತವೆ ? ಹೇಳುವವರು-ಕೇಳು ವವರೆಂಬ ದ್ವೈತಾಪತ್ತಿಯೇ ಇಲ್ಲದ ಬಳಿಕ ಇದೆಲ್ಲ ನೀರ ಮೇಲಿನ ಬರೆಹ ಆಗ ಲಾರದೆ ? ಅದ್ವೈತಕ್ಕೆ ಅಜ್ಞಾನಭಾವ, ಅಭ್ಯಾಸ ಭಾವಗಳುಂಟೆ ? ಕಣ್ಣು-ಕನ್ನಡಿ ಗಳಿರುವಿಕೆಗೆ ಅರ್ಥವೇನು ? ಪ್ರತಿಬಿಂಬ ವೆಂದರೇನು ? ಪ್ರತಿಬಿಂಬ ಇರಬಲ್ಲುದೆ? ಇವೆಲ್ಲ ಕೇಳಿಕೆಗಳಿಗೆ ಕೇವಲಾದ್ವೈತದ ಉತ್ತರವೇನು ?

ದ್ವೈತದಿಂದ ಅದ್ವೈತಕ್ಕೆ ಏರುವಾಗ ಇವಕ್ಕೆಲ್ಲ ಅರ್ಥವತ್ತತೆಯಿದೆ. ಬೆಳ ಗನ್ನು ತಿಳಿದು ನೋಡಲು ಅವಕಾಶವಿದೆ. ಜ್ಞಾನಾಗಮ ಸಂಕೇತ ಸಂಗತವಾಗು ತ್ತದೆ. ಜ್ಞಾನಕ್ರಿಯಾ ಸಹಿತವಾಗಿ 'ಜ್ಞಾನಮನಂತಂ' ಎಂಬ ಮಾತು ಸತ್ಯಾರ್ಥ ವುಳ್ಳದಾಗುತ್ತದೆ.

"ಜ್ಞಾನ ಸದ್ಭಕ್ತಿ ಸನ್ನಿಹಿತವಾಗಿ ಲಿಂಗ ಮುಂತಾಗಿ ಮಾಡುವ ಕ್ರಿಲಿಂಗಕ್ರಿ, ದ್ರವ್ಯ ಪೂಜೆ, ಭಕ್ತಿಯರ್ಪಿತ, ಪ್ರಸಾದ ಮುಕ್ತಿ. ಮರವೆ ಮುಂತಾಗಿ ಮಾಡುವ ಕ್ರಿ-ಲಿಂಗಕ್ರಿ; ಅದು ಹೊರಗು. ಇದು ಕಾರಣ ಜ್ಞಾನ ಸದ್ಭಕ್ತಿ ಸನ್ನಿಹಿತವಾದುದೇ ಮುಕ್ತಿ

ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ !

"ಸುಖದ ಸುಖಿಗಳ ಸಂಭಾಷಣೆಯಿಂದ ದುಃಖ ವಿಶ್ರಾಮವಾಯಿತ್ತು.
ಭಾವಕ್ಕೆ ಭಾವ ತಾರ್ಕಾಣೆಯಾದಲ್ಲಿ ನೆನಹಕ್ಕೆ ವಿಶ್ರಾಮವಾಯಿತ್ತು.
ಬೆಚ್ಚು ಬೆಳಸಲೊಡನೆ ಮಚ್ಚು ಒಳಕೊಂಡಿತ್ತು.
ಚೆನ್ನ ಬಂಕನಾಥನ ಮಾಹೇಶ್ವರಂಗೆ."

"ನಚ್ಚು ಮಚ್ಚಿನ ಲಿಂಗವನು ಗ್ರಹಿಸುವಲ್ಲಿ ಮಚ್ಚು ಒಳಕೊಂಡಿತ್ತು. ಕರ್ಪುರದ ಕರಡಿಗೆಯ ಗಾಸಿ ಮಾಡಿದಂತಾಯಿತ್ತು. ಲಿಂಗಾನುಭಾವಿಗಳ ಸಂಗ ದಿಂದಾನು ಕಣ್ದೆರೆದೆನು ಕಾಣಾ ಗುಹೇಶ್ವರಾ ! "

ಮಹಾನಾದ ಕಳೆಯೇ ಲಿಂಗಕ್ಕಾಶ್ರಯಮಾಗಿ, ಲಿಂಗದ ಕಳೆಯೇ ಹೃದಯಕ್ಕಾಶ್ರಯಮಾಗಿ, ಹೃದಯದ ಕಳೆಯೇ ಜ್ಞಾನಕ್ಕಾಶ್ರಯಮಾಗಿ, ಜ್ಞಾನದ ಕಳೆಯೇ ನಿತ್ಯಕ್ಕಾಶ್ರಯಮಾಗಿ, ನಿತ್ಯ ನಿರವಯ ಚಿಕ್ಕಯ್ಯಪ್ರಿಯ ಸಿದ್ಧ ಲಿಂಗ ಇಲ್ಲ ಇಲ್ಲ. "

ಪಂಚ ಆಚಾರಗಳ ಸ್ವರೂಪ ಆಚಾರಲಿಂಗ. ಆ ಆಚಾರಲಿಂಗದ ಕ್ರಿಯೆ ಗಳನ್ನು ಹೆಚ್ಚಾಗಿ ದೃಢಪಡಿಸುತ್ತದೆ ಗುರುಲಿಂಗ. ಗುರುಲಿಂಗಕ್ಕೆ ಮೀಸಲಾದ ಮಣಿಹವಿದು. ಗುರುಲಿಂಗದ ಕ್ರಿಯೆಗಳನ್ನು ಹೊರ ಹೊಮ್ಮಿಸುವುದೇ ಆಗಮ ಲಿಂಗ. ಆಗಮಲಿಂಗ ಗುರುಲಿಂಗದಂಶ. ಆಗಮ ಇದೊಂದು ಸಾಂಕೇತಿಕ ಶಬ್ದ. ಗುರುಲಿಂಗದ ಸ್ವರೂಪವನ್ನು ಸ್ಪಷ್ಟಪಡಿಸುವ ಶಬ್ದ. ಆಗಮ ರೂಪಾ ಗಿದೆ ಗುರುಲಿಂಗ. ಆಗಮವೆಂದರೆ ಶಬ್ದ, ಶಬ್ದ ಪ್ರಮಾಣ, ಶಾಸ್ತ್ರ, ಮಂತ್ರ, ಬರುವಿಕೆ, ಅಳವಡುವಿಕೆ ಎಂದು ಅರ್ಥಗಳಾಗುತ್ತವೆ. ಗುರುಲಿಂಗವು ಇವೆಲ್ಲ ಅರ್ಥಗಳ ಸ್ವರೂಪವಾಗಿರುತ್ತದೆ. ಗುರುಲಿಂಗದ ಸ್ವರೂಪವಾದ ಆಗಮ ಲಿಂಗವು ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಎಂದು ಮೂದೆರನಾಗಿ ವಿವರಗೊಂಡಿದೆ. ಕ್ರಿಯೆ, ಭಾವ, ಜ್ಞಾನಗಳನ್ನು ಅರುಹಿ ಅಂಗನಲ್ಲಿ ಅಳ ವಡಿಸಿ ಕೃತಾರ್ಥವಾಗುತ್ತದೆ. ಗುರುಲಿಂಗದ ಉಳಿದೆರಡು ಭೇದಗಳಾದ ಕಾಯಲಿಂಗ, ಆಚಾರಲಿಂಗಗಳ ಮೂರು ಮೂರು ಭೇದಗಳನ್ನು ಮುಂದೆ ಹೇಳ ಲಾಗುತ್ತದೆ.

ಒಟ್ಟಿನಲ್ಲಿ ಸತ್ಕ್ರಿಯೆಗಳೆಲ್ಲವೂ ಸೇರಿ ಕ್ರಿಯಾಗಮ; ಆ ಸತ್ಕ್ರಿಯೆಗಳಲ್ಲಿ ನಿಷ್ಠೆ ಕುದುರಿಗೊಂಡರೆ ಭಾವ ನಿಬ್ಬೆರಿಸಿದರೆ ಭಾವಾಗಮ; ಭಾವದ ಜತೆಗೆ ಮಹಾ ಜ್ಞಾನ ಚಾರಿತ್ರ್ಯ ಒಡಗೂಡಿದರೆ ಜ್ಞಾನಾಗಮ.

'ಪೂರ್ಣ ಶಿವಾಚಾರವೇ ಕ್ರಿಯಾಗಮವು. ಇದರಲ್ಲಿ ಅಂಗದಿಚ್ಛೆ ಏನೂ ಇರಕೂಡದು. ಸತ್ಕ್ರಿಯೆಯಲ್ಲಿ ಪೂರ್ಣವಾಗಿ ಮಗ್ನನಾಗಿರುವುದೇ ಭಾವಾಗಮವು. ಇದು ಭಾವದಲ್ಲಿ ದೃಢಪಟ್ಟಿರುತ್ತದೆ. ಅದಕ್ಕೂ ಮುಂದೆ ಉಚ್ಚ ಸ್ಥಿತಿಗೆ ಹೋಗಲು ಕ್ರಿಯೆ–ಜ್ಞಾನವೆಂಬ ಭೇದವಡಗಿ ಸಾಮರಸ್ಯ ಸ್ವರೂಪ ಉಂಟಾಗುತ್ತದೆ; ಅದು ಜ್ಞಾನಾಗಮವೆನಿಸುತ್ತದೆ. ಈ ಮೂರು ಲಿಂಗಗಳು ಉನ್ನತ ಸ್ಥಿತಿಗೆ ಬಂದು ಏಕರೂಪವಾದಲ್ಲಿ ಅದು 'ಆಗಮ ಲಿಂಗ' ವೆನಿಸುತ್ತದೆ.'

—ವಚನ ಶಾಸ್ತ್ರಸಾರ. ಭಾಗ–೨.

ಆಗಮ ಬೋಧೆಯಿಂದ ಒಂದು ಅಪೂರ್ವ ಸ್ಫೂರ್ತಿಯುಂಟಾಗುತ್ತದೆ. ಅಗೋಚರ ಚೇತನವುಂಟಾಗುತ್ತದೆ. ಆ ಚೇತನವೇ ಆಗಮಲಿಂಗವೆನಿಸುತ್ತದೆ. ಅದರಿಂದ ಮಾನವನು ಮಾಹೇಶ್ವರತ್ವಕ್ಕೇರಲು ಸಾಧ್ಯವಾಗುತ್ತದೆ. ಅತಿಮಾನವೀಯ ಶಕ್ತಿಯನ್ನು ಸಂಪಾದಿಸಲು ಸಹಾಯವಾಗುತ್ತದೆ.

ಭಕ್ತನ ಲಿಂಗಸ್ಥಲದಲ್ಲಿ ಹೇಳಿದ ದೀಕ್ಷಾಗುರುವಿಗೆ ಕ್ರಿಯಾಗಮ, ಭಾವಾಗಮ. ಜ್ಞಾನಾಗಮಗಳು ಸನ್ನಿಹಿತಸಂಬಂಧವುಳ್ಳವಾಗಿವೆ. ಆಗಮಲಿಂಗವಿಲ್ಲದೆ ಆಗಮ ಪ್ರಕ್ರಿಯೆಗಳಿಲ್ಲದೆ ದೀಕ್ಷಾಗುರುತ್ವ ಪ್ರಾಪ್ತವಾಗದು; ಗುರುವಿನ ದೀಕ್ಷೆ ಸಾಂಗವಾಗದು.

ಶ್ರೀಗುರು ದೀಕ್ಷೆಯಿಂದ ಶುದ್ಧವಾದ ತ್ಯಾಗಾಂಗವು ತನ್ನ ಶುದ್ಧಿಯನ್ನು ಉಳಿಸಿಕೊಳ್ಳಬೇಕಾದರೆ 'ಕ್ರಿಯಾಗಮ' ವನ್ನು ಮೈಗೂಡಿಸಿಕೊಳ್ಳದೆ ವಿಧಿಯಿಲ್ಲ. ಅಂತೆಯೇ ಭೋಗಾಂಗವು ಶಿಕ್ಷಾಗುರುವಿನ ಮಂತ್ರದೀಕ್ಷೆಯಿಂದಾದ ತನ್ನ ಮಂಗಳತೆಯನ್ನು ಕಳೆಯದಂತೆ ಇರಿಸಿಕೊಳ್ಳಬೇಕಾದರೆ 'ಭಾವಾಗಮ' ವನ್ನು ಆಶಯಿಸಲೇ ಬೇಕು. ಹಾಗೆಯೇ ಯೋಗಾಂಗವು ಮೋಕ್ಷ ಗುರುವಿನ ವೇಧಾದೀಕ್ಷೆ

ಯಿಂದೊದಗಿದ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕಾದರೆ 'ಜ್ಞಾನಾಗಮ' ಸ್ಥಳದ ಸಾಧನೆಯನ್ನು ಮಾಡಲೇಬೇಕು.

ತಿಳುವಳಿಕೆಯನ್ನು ತಂದು ಕೊಳ್ಳಲು ಮೂರು ಪ್ರಮಾಣಗಳಿವೆ. ಅವುಗಳಲ್ಲಿ ಪ್ರತ್ಯಕ್ಷಪ್ರಮಾಣ – ಅನುಮಾನ ಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲದಾಗ ಆಗಮ ಪ್ರಮಾಣವೇ ಆಧಾರವಾಗಿ ನಿಲ್ಲುತ್ತದೆ. ಕಾಣದ್ದನ್ನು ಕಾಣಿಸಿ ಊಹೆಗೆ ನಿಲುಕದ್ದನ್ನು ಉಪಸ್ಥಿತಗೊಳಿಸಿ ಕೊಡುವುದರಿಂದ ಆಗಮಕ್ಕೆ ಆಗಮತ್ವ ಸಿದ್ಧಿಸುತ್ತದೆ:

# ಸಕಾಯಸ್ಥಳ

ಗುರುಲಿಂಗದೊಳಗಿನ ಎರಡನೆಯಲಿಂಗ ಕಾಯಲಿಂಗ. ಈ ಕಾಯಲಿಂಗವು ಸಕಾಯ, ಅಕಾಯ, ಪರಕಾಯ-ಎಂದು ಮೂರುಬಗೆಯಾಗುತ್ತದೆ.

ದೇಹಭಾವವನ್ನು ಹೇಯಕರ್ಮಗಳನ್ನು ಬಿಟ್ಟು ದಿವ್ಯಭಾವವನ್ನು ದೈವೀ ಕ್ರಿಯೆಗಳನ್ನು ತೊಟ್ಟು ತನುಶುಚಿತ್ವವನ್ನು ಅಳವಡಿಸಿಕೊಂಡರೆ ಅಂಗವೇ 'ಕಾಯ ಲಿಂಗ'ವೆನಿಸುತ್ತದೆ. ಮಿಗಿಲಾಗಿ ಗುರುಲಿಂಗೋಪಾಸನೆಗೆ ಒಳಪಟ್ಟ ಕಾಯವು ಮಾಂಸಪಿಂಡವಳಿದು ಮಂತ್ರಮಯವಾಗಿರುತ್ತದೆ. ಮಂತ್ರಮಯವಾದುದು ಗುರುಲಿಂಗ. ಅಂತಹ ಗುರುಲಿಂಗಾರಾಧಕನ ಅಂಗವೂ ಮಂತ್ರಮಯವಾಗಿರು ತ್ತದೆ ಗುರುದೀಕ್ಷೆಯಿಂದ ! ಆದರಿಂದಾಗಿ ಮಾಹೇಶ್ವರಾಂಗನ ತನು'ಕಾಯಲಿಂಗ' ವೆನಿಸುತ್ತವೆ. ಇದಲ್ಲದೆ ಈ ಹಿಂದೆ ಹೇಳಿದ ಕ್ರಿಯಾಗಮವನ್ನು ಕೈಕೊಂಡು ಭಾವಾಗಮವನ್ನು ಬಳಸಿ ಬೆಳಸಿಕೊಂಡು ಜ್ಞಾನಾಗಮವನ್ನು ಅಳವಡಿಸಿಕೊಂಡು ತನು ಮೋಹವನ್ನು ತೊಡೆದು ಕರಣೇಂದ್ರಿಯಂಗಳ ಕಳವಳವನ್ನು ಕತ್ತಲೆಯನ್ನು ಕಳೆದುಕೊಂಡು ಶುಭ್ರವಾಗಿರುವುದರಿಂದ ಸಹಜವಾಗಿ 'ಕಾಯಲಿಂಗ'ತ್ವವು ಕೈ ಗೂಡಿರುತ್ತದೆ. ಕಾಯಾಭಿಮಾನ ಕಳಚಿರುತ್ತದೆ. ಕಾಯಭಯವೂ ಇರುವು ದಿಲ್ಲ. 'ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಷೆ ತೀರಿದಲ್ಲದೆ ದಾರಿದ್ರ್ಯ ವಿಲ್ಲ. ಅಂಜಲೇಕೋ ಲೋಕವಿಗರ್ಭಣೆಗೆ? ಅಂಜಲೇಕೋ ಕೂಡಲಸಂಗಮ ದೇವಾ, ನಿಮ್ಮಾಳಾಗಿ?' ಎಂಬ ಕೆಚ್ಚು ಮೈಮೂಡಿರುತ್ತದೆ.

ಕಾಯ ಹೇಯ ಎನ್ನುವ ಭಾವವೆತ್ತ? ಕಾಯ ಲಿಂಗವೆನ್ನುವ ಸದ್ಭಾವ ವೆತ್ತ ? ಕಳಾಗುರುವಿನ ಕಾರುಣ್ಯವನ್ನು ಪಡೆದು ಕ್ರಿಯಾಗಮಮಾರ್ಗದಲ್ಲಿ ನಡೆದು ನಿರ್ಮಳವಾದ ದೇಹ ಕಾಯಲಿಂಗವಾಗದೆ ಇನ್ನೇನಾದೀತು? ಕಾಯಾಭಿ ಮಾನ ಕಾಯಕಳವಳ ಕಾಯಮೋಹಗಳನ್ನು ತ್ಯಜಿಸಿ ಕ್ರಿಯಾಶಕ್ತಿಯನ್ನು ಮೈ ಗೂಡಿಸಿಕೊಂಡ ಮೈ ಆರಾಧನೀಯ ಲಿಂಗವಲ್ಲದೆ ಇನ್ನೇನು? ಲಿಂಗವ ಪೂಜಿಸಿ ಲಿಂಗವೇ ಆಗುವುದರಲ್ಲಿ ಸಂದೇಹವಿಲ್ಲ. ಅಂತೆಯೇ ಮಾಹೇಶ್ವರನಾದ ಗುರು ತನ್ನ ಕ್ರಿಯಾಲಿಂಗವನ್ನು ಪೂಜಿಸಿದ ಬಳಿಕ ಆತನ ಆ ಕಾಯವನ್ನೇ ಲಿಂಗವೆಂದು

ಭಾವಿಸಿ ಶಿಷ್ಯರು ಪಾದಪೂಜೆಯ ಕಾಲದಲ್ಲಿ ಆರಾಧಿಸುವ ರೂಢಿ ಸಾಮಾಜಿಕರಲ್ಲಿ ಇಂದಿಗೂ ಇದೆ.

"ಲಿಂಗವ ಪೂಜಿಸಿದವರು ಹಲಬರುಂಟು; ಅಂಗವಪೂಜಿಸಿದವರು ಒಬ್ಬರೂ ಇಲ್ಲ. ಕಾಮವ ತೊರೆದವರು ಹಲಬರುಂಟು; ನಿಃಕಾಮುವನಳಿದವರು ಒಬ್ಬರೂ ಇಲ್ಲ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ" "ಅಂಗವೇ ಲಿಂಗ, ಲಿಂಗವೇ ಅಂಗ ವೆಂದರಿದ ಬಳಿಕ ನಮ್ಮ ಕೂಡಲಚನ್ನಸಂಗಮದೇವರು ಅಲ್ಲಿ ಹೆರೆಹಿಂಗದಿರ್ಪ ಕಾಣರೋ !"

ಕ್ರಿಯೆಯುಳ್ಳುದು ಕ್ರಿಯಾಲಿಂಗ ಎಂಬುದನ್ನು ಒಪ್ಪುವುದಾದರೆ-ಒಪ್ಪಲೇ ಬೇಕು, ಒಪ್ಪಿಯೂ ಆಗಿದೆ-ಕ್ರಿಯಾಶ್ರಯವಾದ ಕಾಯವೇಕೆ ಲಿಂಗವಾಗದು? ಶಕ್ತಿ, ಚೈತನ್ಯ, ಸುಮುಖತೆ, ಸುಪ್ರಸನ್ನತೆ ಈ ನಾಲ್ಕು ಎಲ್ಲಿದ್ದರೆ ಅವೆಲ್ಲವೂ ಲಿಂಗವೆಂದೇ ಲಿಂಗವಂತ ಮತಸಿದ್ಧಾಂತ. ಕ್ರಿಯೆಯ ಸಂಬಂಧವಾದ ಶಕ್ತಿ-ಚೈತನ್ಯಗಳು, ಸತ್ಕ್ರಿಯೆಯಲ್ಲಿ ಸುಮುಖತೆ, ಸತ್ಕ್ರಿಯೆಯಿಂದ ಸುಪ್ರಸನ್ನತೆ ಯಾವ ತ್ಯಾಗಾಂಗದಲ್ಲಿ ತುಂಬಿಕೊಂಡಿರುತ್ತವೆಯೋ ಅದು ನಿಸ್ಸಂದೇಹವಾಗಿ ಲಿಂಗವೆನಿಸುತ್ತದೆ.

ದೇವನಿರುವ ಸ್ಥಲ ದೇವಾಲಯವಾಗುವುದುಂಟು. ಆದರೆ ಮಾಹೇಶ್ವರ ಸ್ಥಲದಲ್ಲಿ ಕ್ರಿಯಾಲಿಂಗವಿರುವ ತ್ಯಾಗಾಂಗವನ್ನು 'ಕಾಯಲಿಂಗ'ವನ್ನಾಗಿಯೇ ಮಾಡುವ ಉತ್ಕ್ರಾಂತಿ ಉಜ್ವಲವಾಗಿದೆ.

ಇಂತಹ ಈ ಕಾಯಲಿಂಗವು ಸಕಾಯಸ್ಥಳದಿಂದ ಪ್ರಾರಂಭವಾಗಿ ಅಕಾಯ ಸ್ಥಳವಾಗಿ ಮುಂದುವರಿದು ಪರಕಾಯಸ್ಥಳವಾಗಿ ಪರವಸ್ತುವಿನಲ್ಲಿ ನೆಲೆಸಿಲ್ಲುತ್ತದೆ. ಇದು ಕಾಯ ವಿಕಾಸವಾದದ ಒಂದು ಅಂದವಾದ ಅಧ್ಯಾಯ. ಪರಮ ಪ್ರಗತಿ ಶೀಲವಾದ ಒಂದು ಪ್ರಘಟ್ಟ.

ಕಾಯಲಿಂಗ ತನ್ನ ಹಿಂದಿರುವ ಆಗಮಲಿಂಗಕ್ಕೂ ತನ್ನ ಮುಂದಿರುವ ಆಚಾರಲಿಂಗಕ್ಕೂ ಆಶ್ರಯವಾಗಿದೆ. ಅಂದರೆ ಸಕಾಯಸ್ಥಳವು ಕ್ರಿಯಾಗಮ-ಧರ್ಮಾಚಾರಗಳಿಗೂ, ಅಕಾಯಸ್ಥಳವು ಭಾವಾಗಮ-ಭಾವಾಚಾರಗಳಿಗೂ, ಪರಕಾಯಸ್ಥಳವು ಜ್ಞಾನಾಗಮ-ಜ್ಞಾನಾಚಾರಗಳಿಗೂ ಆಧಾರವಾಗಿರುತ್ತವೆ. ಇದರಿಂದ ಸಕಾಯ-ಅಕಾಯ-ಪರಕಾಯಂಗಳ ಗುಣಧರ್ಮಗಳನ್ನು ತೊಡಕಿಲ್ಲದೆ ತಿಳಿಯಬಹುದಾಗಿದೆ. ಅಲ್ಲದೆ ಕಾಯಲಿಂಗದ ಕಳಾರೂಪವನ್ನು ಕಣ್ಣಾರೆ ಕಾಣ

ಬಹುದಾಗಿದೆ. ಜತೆಗೆ ಕಾಯವು ಲಿಂಗವಾಗುವ ಹೊಣೆಗಾರಿಕೆಯ ಹೊರೆಯು ಹೃದಯಕ್ಕೆ ವೇದ್ಯವಾಗುತ್ತದೆ.

'ಕಾಯ–ಲಿಂಗ'ವೆಂದು ಹೇಳುವುದು ಹಗುರ. ಆದರೆ ಕಾಯ–ಲಿಂಗ ವಾಗುವ ಕೆಲಸ ತುಂಬಾ ತೂಕ; ತುಂಬಾ ಶ್ರಮದಾಯಕ.

ಧರ್ಮಗಳಿಗೂ ದೇವರಾಧನೆಗೂ ದೇಶಸೇವೆಗೂ ದೇಹವೇ ಆಧಾರ. 'ಶರೀರಮಾದ್ಯಂ ಖಲುಧರ್ಮಸಾಧನಂ' ಎಂದಿದೆ ಕವಿವಾಣಿ. "ಕಾಯದಿಂದ ಲಿಂಗದರುಶನ. ಕಾಯದಿಂದ ಜಂಗಮ ದರುಶನ. ಕಾಯದಿಂದ ಪ್ರಸಾದ ಸಂಪತ್ತು. ಕೂಡಲ ಚನ್ನಸಂಗಯ್ಯ ಈ ಕಾಯದಿಂದ ನಿಮ್ಮವ ಕಂಡೆನಯ್ಯ." ಎಂದಿದೆ ಚನ್ನಬಸವಣ್ಣನೆಂಬ ಶರಣವಾಣಿ!

ಹೀಗಿರುವಾಗ ಕಾಯವನ್ನು ಕಡೆಗಣ್ಣಿನಿಂದ ಕಾಣಬಾರದು. ಕೀಳಾಗಿ ಭಾವಿಸಬಾರದು. ಹ್ಯೇಯಕರ್ಮಗಳಿಂದ ಕೆಡಿಸಬಾರದು. ಈ ನಿರೀಕ್ಷಣೆಯ ಈ ಸಾಧನೆಯ ವಿವರಣೆಯನ್ನು ಮುಂದಿನ ಮೂರು ಸ್ಥಳನಿರೂಪಣೆಯಿಂದ ಅರಿಯಬಹುದಾಗಿದೆ.

"ಪರಸ್ಯ ಯಾ ತನುರ್ಜ್ಞೇಯಾ ದೇಹಕರ್ಮಾಭಿಮಾನಿನಃ ।
ತಯಾ ಸಕಾಯೋ ಲೋಕೋಽಯಂ ತವಾತ್ಮತ್ವನಿರೂಪಣಾತ್ ॥

ದೇಹಾಭಿಮಾನ–ಕರ್ಮಾಭಿಮಾನಗಳನ್ನು ತೊರೆದ ಪರಮನ ತನುವೇ 'ಸಕಾಯಸ್ಥಳ'ವೆನಿಸುತ್ತದೆ. ಆತನ ತನು ಲೋಕದವರ ಕಣ್ಣಿಗೆ ಸ್ಥೂಲವಾಗಿ ಕಂಡರೂ ಅದು ಸ್ಥೂಲವಲ್ಲ. ಅದು ಸಾಮಾನ್ಯರ ದೇಹದಂತಿರುವುದಲ್ಲ. ಅದು ಆತ್ಮವೇ ಆಗಿರುತ್ತದೆ.

ಈ ಮಂತ್ರದಲ್ಲಿನ ತನು. ದೇಹ. ಕಾಯ, ಪದಪ್ರಯೋಗಗಳು ವೈಚಿತ್ರ್ಯ ಪೂರ್ಣವಾಗಿವೆ. ಪ್ರಾಕೃತಿಕವಾದುದು ದೇಹ, ಸ್ಥೂಲವಾಗಿರುತ್ತದೆ ದೇಹ. ಉಪಚಯ ಎಂಬ ಅರ್ಥವುಳ್ಳ ಸಂಸ್ಕೃತದ 'ದಿಹ' ದಾತುವಿನಿಂದ ದೇಹ ಎಂದಾಗಿದೆ. ಉಪಚಯವೆಂದರೆ ರಾಶಿ-ಸಮೂಹವೆಂದರ್ಥ. ಆಯ್ದು ಭೂತಗಳ ಕೂಡುವಿಕೆಯಿಂದಾದ ದೇಹ ಪಂಚಭೂತಗಳ ಗುಣಕ್ರಿಯೆಗಳನ್ನೆಲ್ಲ ತನ್ನಲ್ಲಿ ಕೂಡ

ಹಾಕಿಕೊಂಡಿರುತ್ತದೆ. ಪ್ರಾಕೃತಿಕ ಧರ್ಮಗಳನ್ನೇ ಮಿಗಿಲಾಗಿ ಸಂಗ್ರಹಿಸಿಕೊಂಡಿರುವುದೇ ದೇಹ. ಇದರಿಂದ ಇದು ಸ್ಥೂಲವಾಗಿರುತ್ತದೆ. ಇದರಿಂದಾಗಿ ದೇಹಾಭಿಮಾನವನ್ನು ದೂರಮಾಡಬೇಕು. ಅಂದರೆ ಕೇವಲ ಭೌತಿಕ ಅಥವಾ ಪ್ರಾಕೃತಿಕ ಗುಣಕರ್ಮಗಳ ಪ್ರೇಮವನ್ನು ಗಳಿಕೆಯನ್ನು ಇಟ್ಟುಕೊಳ್ಳಬಾರದು. ಇಟ್ಟುಕೊಂಡರೆ ಬರೀ ಬಾಹ್ಯಮುಖವಾಗಿಯೇ ದೇಹ ಹರಿಯುತ್ತದೆ. ಸ್ವಭಾವ ಸೂಸುತ್ತದೆ. ಆದುದರಿಂದ ದೇಹಾಭಿಮಾನ ಒಳಿತಲ್ಲ, ಇದನ್ನು ಬಿಡುವುದರಿಂದ ದೇಹವು ತನುಭಾವವನ್ನು ತಳೆಯುತ್ತದೆ, ಅಂದರೆ ಸೂಕ್ಷ್ಮವಾಗುತ್ತದೆ; ಒಳಕ್ಕೂ ಹಬ್ಬುತ್ತವೆ. ದೈಹಿಕ ಲೌಕಿಕ ಭಾವ ಮತ್ತು ಕ್ರಿಯೆಗಳನ್ನು ಕಡಿಮೆ ಮಾಡಿ ಆತ್ಮಿಕ ಭಾವಕ್ರಿಯೆಗಳಲ್ಲಿ ನಿರತವಾಗುವಂತೆ ಮಾಡಿರುವುದೇ ತನು. ಹಬ್ಬು ಎಂಬ ಅರ್ಥವುಳ್ಳ ಸಂಸ್ಕೃತದ 'ತನ್' ಧಾತುವಿನಿಂದ ತನು ನಾಮಪದವಾಗುತ್ತದೆ. ಕೃಶವಾಗಿ ಸೂಕ್ಷ್ಮವಾಗಿ ಇರುವುದೇ ಇದರ ಸ್ವಭಾವ. 'ತನು'ವಿಗಿಂತಲೂ ಸೂಕ್ಷ್ಮವಾದುದು ಕಾಯ. ಗುರುವಿನ ಸಂಸ್ಕಾರಕ್ಕೆ ಒಳಗಾದುದು ಕಾಯ. ಪಾರಮಾರ್ಥಿಕ ಗುಣಕ್ರಿಯೆಗಳ ಸಂಚಯನದಲ್ಲಿ ನಿರತವಾಗಿರುವ ತನುವಿಗೆ ಕಾಯ ಎಂಬ ಸಾಂಕೇತಿಕನಾಮ ಷಟ್‌ಸ್ಥಲ ಶಾಸ್ತ್ರದ್ದು. ಚಯನ ಸಂಚಯನ ಅರ್ಥವುಳ್ಳ ಸಂಸ್ಕೃತದ 'ಚಿಞ್'ಧಾತುವಿನಿಂದ ಕಾಯ ನಾಮಪದ ಉತ್ಪನ್ನವಾಗುತ್ತದೆ. ಗುರುಕರುಣೆಗೆ ಕ್ರಿಯಾಸಂಸ್ಕಾರಕ್ಕೆ ಒಳಗಾಗಿ ದೇಹದಾತುಗಳನ್ನು ದೇಹಗುಣಕರ್ಮಗಳನ್ನು ತ್ಯಜಿಸಿ ಲಿಂಗೋಪಾಸನೆಗೆ ಗುರುಸೇವೆಗೆ ಸನ್ನದ್ಧವಾದುದೇ 'ಕಾಯ' ವೆನಿಸುತ್ತದೆ. ಮಾಹೇಶ್ವರತ್ವಕ್ಕೆ ಬೇಕಾದ ಆಗಮ ಮತ್ತು ಆಚಾರಗಳನ್ನು ಸಂಚಯಮಾಡುವುದೇ ಕಾಯ. ಸತ್ ಸಂಚಯದಿಂದ ಕೂಡಿದುದು ಸಕಾಯ. ಇದಕ್ಕೆ ಇದಿರಾಗಿರುವ ದೇಹಾಭಿಮಾನ-ಕರ್ಮಾಭಿಮಾನಗಳನ್ನು ಮಾಹೇಶ್ವರಾಂಗನು ತೊರೆಯಬೇಕು.

ಅಭಿಮಾನ ಶಬ್ದಕ್ಕೆ ಗರ್ವ, ಗೌರವ, ಪ್ರೇಮ ಎಂದು ಅರ್ಥಗಳಾಗುತ್ತವೆ. ಮಾಹೇಶ್ವರನು ತನ್ನ ದೈಹಿಕ ರೂಪು ಶಕ್ತಿ ಸಂಪತ್ತುಗಳಿಗಾಗಿ ಗರ್ವಿಸಬಾರದು. ತನಗೆ ಯಾವಾಗಲೂ ಎಲ್ಲದರಲ್ಲಿಯೂ ಗೌರವ ಪ್ರತಿಷ್ಠೆಗಳು ದೊರೆಯಬೇಕೆಂದು ಆಶಿಸಬಾರದು. ನಾನೇ ಎಲ್ಲರಿಗಿಂತ ಮೇಲೆಂದು ಭಾವಿಸಿ ವ್ಯವಹರಿಸಬಾರದು. ದೇಹೇಂದ್ರಿಯ ಕರ್ಮಗಳಲ್ಲಿ ಸುಖಗಳಲ್ಲಿ ಆಸಕ್ತಿಯನ್ನಿಟ್ಟುಕೊಳ್ಳಬಾರದು. ಬಾಹ್ಯ ಸಂಪತ್ತು ಗೌರವಗಳಿಂದ ತನ್ನನ್ನು ತಾನು ಅಳೆಯಬಾರದು; ದೈಹಿಕ

ಸಾಂಪತ್ತಿಕ ಹೆಮ್ಮೆಗೆ ಒಳಗಾಗಿ ಬಿಮ್ಮಿನಲಿ ಒಳ್ಳೆಯದನ್ನೇ ಮಾಡಿದರೂ ಅದು ಒಳ್ಳೆಯದಾಗದು. ಆದರಿಂದ ಒಳಿತು ಉಂಟಾಗದು. ಸೂಕ್ಷ್ಮವನರಿಯದೆ ಮರ್ಮವ ತಿಳಿಯದೆ ಮಾಡಿದರೆ ಅದು ಕೇಡಿಗೆ ಮೊಸಲು; ಅದೇ ಕರ್ಮದ ಬೆಳಸು ತನ್ನ ಅಭಿಮಾನಕ್ಕಿಂತ ಇನ್ನೊಬ್ಬರ ಅನುವನರಿತು ಆಡುವುದನ್ನು ಮಾಡುವುದನ್ನು ಅಭ್ಯಾಸಮಾಡಿದಷ್ಟು ಲೇಸು. ಇದು ಸಕಾಯತ್ವಕ್ಕೆ ಸೇರುವ ಉಪಾಯ. ಇದರಿಂದ ಒದಗುತ್ತದೆ ಗುರುದೇವನ ಅಭಯ, ಲಿಂಗದೇವನ ಅಭಯ.

ಅಭಿಮಾನ ಯಾವಾಗಲೂ ತನ್ನನ್ನು ಇನ್ನೊಬ್ಬರೊಡನೆ ತೂಗಿ ನೋಡಲು ಅಳತೆಮಾಡಲು ಹಚ್ಚುತ್ತದೆ. ಸ್ಪರ್ಧೆಗೆ ಈಡು ಮಾಡುತ್ತದೆ. ಹೆಚ್ಚಿನವನೆನಿಸಿ ಕೊಳ್ಳುವಂತೆ ಮಾಡಹಚ್ಚುತ್ತದೆ. ಆದರಿಂದಾಗಿ ಸತ್‌ಸಾಧನೆಯಲ್ಲಿ ಅಭಿಮಾನ ಅಡ್ಡಗಾಲ ಹಾಕುತ್ತದೆ. ಸತ್ಕ್ರಿಯೆ, ಸದ್ಭಾವ, ಸಮ್ಯಕ್ ಜ್ಞಾನಗಳನ್ನು ಸಂಪಾದಿಸುವಾಗ ತನ್ನ ಅರ್ಥ-ಪ್ರಾಣ–ಅಭಿಮಾನಗಳನ್ನು ತ್ಯಾಗ ಮಾಡುವ ಮಟ್ಟಕ್ಕೆ ಬರಬೇಕು. ಕಾಯದಲ್ಲಿ ಆತ್ಮತ್ವಭಾವ ಬಲಿಯಬೇಕು. ದೇಹ ಭಾವದಲ್ಲಿ ಮೋಹಕ್ಕೆ ಎಡೆಯಿದೆ. ಅದೇ ಆತ್ಮ ಭಾವದಲ್ಲಿ ದೈವೀಭಾವಕ್ಕೆ ಎಡೆಯಿರುತ್ತವೆ. ಕಾಯಕ್ಕೆ ಆತ್ಮತ್ವ ನಿರೂಪಣೆ ಆಗವಂಗಳಲ್ಲಿ ಸಾಕಷ್ಟಿದೆ. ಕಲ್ಲು ದೇವರಾಗುವಾಗ ಕಾಯ ದೇವತಾಗದೆ ?

"ಅಂಗ ಲಿಂಗ ಒಂದೆಂದ ಬಳಿಕ ಅಂಗ ಕೆಟ್ಟು ಲಿಂಗ ಉಳಿಯಿತ್ತು ನೋಡಾ! ಅಂಗ ನಿರ್ವಯಲಾದಲ್ಲಿ ಲಿಂಗ ಭರಿತವಾದುದು. ನೋಡಾ ! ಅಂಗ ಲಿಂಗ ನಿರ್ವಯಲಲ್ಲಡಗಿಸಬಲ್ಲಡೆ ಭಕ್ತನೆಂಬೆ, ಮಾಹೇಶನೆಂಬೆ, ಕಪಿಲ ಸಿದ್ಧಮಲ್ಲಿಕಾರ್ಜುನನವನೇ ಎಂಬೆ !"

"ಅಂಗ ಸಂಗಿಯಾದವಂಗೆ ಲಿಂಗ ಸಂಗವಿಲ್ಲ. ಲಿಂಗಸಂಗಿಯಾದವಂಗೆ ಅಂಗ ಸಂಗವಿಲ್ಲ. ಅಂಗಸಂಗವೆಂಬುದೇ ಅನಾಚಾರ; ಲಿಂಗಸಂಗವೆಂಬುದೇ ಸದಾಚಾರ. ಇದು ಕಾರಣವಾಗಿ ಅಂಗ ಸಂಗಮಂ ಬಿಟ್ಟು, ಲಿಂಗಸಂಗವಾಗಿರಬೇಕು. ನಮ್ಮ ಕೂಡಲಚನ್ನಸಂಗಯ್ಯನಲ್ಲಿ !"

ಇದ್ದರಿಂದ ಮಾಹೇಶ್ವರನು ತನ್ನ ಕಾಯವನ್ನು ಲಿಂಗಕ್ಕೆ ಆಶ್ರಯವನ್ನಾಗಿಸಬೇಕಲ್ಲದೆ ವಿಷಯಕ್ಕೆ ಆಶ್ರಯವನ್ನಾಗಿಸಬಾರದು; ಅಭಿಮಾನಕ್ಕೆ ಆಶ್ರಯವನ್ನಾಗಿಸಬಾರದು, ಜಡಕರ್ಮಗಳಿಗೆ ಆಶ್ರಯವಾಗಿಸಬಾರದು.

ದೇಹ ಭಾವನೆ ಅಥವಾ ವಾಸನೆ ಇದು ಮಲಿನವಾದುದು. ಲೋಕ ವಾಸನೆ, ಶಾಸ್ತ್ರವಾಸನೆ ಇವು ಮೂರು ಮಲಿನ ವಾಸನೆಗಳೆಂದು ನಿರೂಪಿತ ವಾಗಿವೆ. ಇವುಗಳಿಂದ ಯಥಾರ್ಥಜ್ಞಾನವಾಗುವುದಿಲ್ಲ. ಯಥೋಚಿತ ಕ್ರಿಯಾ ಚಾರಗಳು ಸಾಗುವುದಿಲ್ಲ.

"ಲೋಕವಾಸನಯಾ ಜಂತೋರ್ದೇಹವಾಸನಯಾಪಿ ಚ ।
ಶಾಸ್ತ್ರ ವಾಸನಯಾ ಜ್ಞಾನಂ ಯಥಾವನ್ನೈವ ಜಾಯತೇ ॥"
"ನ ಲೋಕಚಿತ್ತಗ್ರಹಣೇ ರತಸ್ಯ, ನ ಭೋಜನಾಚ್ಛಾದನ ತತ್ಪರಸ್ಯ ।
ನ ಶಬ್ದಶಾಸ್ತ್ರಾಭಿರತಸ್ಯ ಮೋಕ್ಷೋ ನ ಜಾತಿರಮ್ಯಾ ವಸತಿ ಪ್ರಿಯಸ್ಯ॥"

ಇವುಗಳಲ್ಲಿ ದೇಹವಾಸನೆ ಒಂದಾಗಿದೆ. ಹೇಯವಾಗಿದೆ. ಈ ದೇಹ ವಾಸನೆ ಮತ್ತೆ ಮೂರು ಬಗೆಯಾಗುತ್ತದೆ; ದೇಹವಾಸನೆ, ದೇಹ ಕರ್ಮ ವಾಸನೆ, ದೇಹ ಗುಣವಾಸನೆ—ಎಂಬುದಾಗಿ! ಇವು ದೇಹಾಭಿಮಾನಕ್ಕೆ ಮೂಲಕಾರಣಗಳು. ಇವನ್ನು ಮಾಹೇಶ್ವರನು—ಮೂಲ ಸಹಿತವಾಗಿ ತೆಗೆದು ಹಾಕಬೇಕು. ಆಗ ಆತನ ಕಾಯದಲ್ಲಿ ಸಕಾಯತ್ವ ಆತ್ಮತ್ವಗಳು ನಿರೂಪಿತ ವಾಗುತ್ತವೆ.

"ಅ ದೇಹ ಕರ್ಮಾಭಿಮಾನಾತ್ಪರಸ್ತ್ವೈವ ಸಕಾಯತಾ ।
ಜಗದಸ್ಯ ನಿಜಃಕಾಯಃ ಸ್ವಯಂ ಬ್ರಹ್ಮೇತಿ ವೇದನಾತ್ ॥
ಚಿದ್ಧರ್ಮಃ ಸರ್ವದೇಹೇಷು ವಿಶೇಷೋ ನಾಸ್ತಿ ಕುತ್ರಚಿತ್ ।
ಅತಸ್ತತ್ತನ್ಮಯಂ ಸರ್ವಂ ಭಾವಯನ್ ಭವಜಿಜ್ಜನಃ ॥"

ಈ ಅಚಿಂತ್ಯ ವಿಶ್ವಸಾದಾಖ್ಯ ವಚನವು 'ಸಕಾಯ ಸ್ಥಳ'ದ ಲಕ್ಷಣ ವ್ಯಾಖ್ಯಾನವಾಗಿ ಪೋಷಕವಾಗಿದೆ. ಸಕಾಯನೇ ಪರಬ್ರಹ್ಮ. ಸರ್ವಜಗತ್ತೇ ಅವನ ಕಾಯ. ಆತನದು ಚಿತ್ಕಾಯ. ಆತನಿಗೆ ಎಲ್ಲ ದೇಹಗಳಲ್ಲಿ ಸಮಭಾವ ಬ್ರಹ್ಮಭಾವ. ಅಂತಾಗಿ ಆತ ಜಿತಭವ.

"ಕಾಯಂ ವಿನಾ ಸಮಸ್ತಾನಾಂ ನ ಕ್ರಿಯಾ ನ ಚ ಭಾವನಾ
ನ ಜ್ಞಾನಂ ಯತ್ನತೋ ಯೋಗೀ ಕಾಯವಾನೇವ ಸಂಚರೇತ್ ॥

ಶಿವೈಕಜ್ಞಾನಯುಕ್ತಸ್ಯ ಯೋಗಿನೋಪಿ ಮಹಾತ್ಮನಃ ।
ಕಾಯಯೋಗೇನ ಸಿದ್ಧ್ಯಂತಿ ಭೋಗಮೋಕ್ಷಾದಯಸ್ಸದಾ ॥"

ಕಾಯವಿಲ್ಲದೆ ಯಾವ ಕ್ರಿಯೆ ನಡೆಯದು. ಅಂತರಂಗದ ಭಾವನಾ ರೂಪ ಧ್ಯಾನ ಮತ್ತು ಜ್ಞಾನಗಳೂ ಸಂಭವಿಸವು. ಕಾರಣ ಯೋಗಿಯಾದರೂ ಕಾಯವುಳ್ಳವನಾಗಿಯೇ ಇರಬೇಕು.

ಅಭಿಮಾನವಿಲ್ಲದ ಬಳಿಕ ಕಾಯವೇಕೆಂದು ಉದಾಶೀನ ಮಾಡಬಾರದು; ಕಡೆಗಣ್ಣಿನಿಂದ ನೋಡಿ ಕೆಡಿಸಬಾರದು.

ಶಿವಾದ್ವೈತಜ್ಞಾನಿಗೂ ಸಹ ಕಾಯಯೋಗದಿಂದಲೇ ಭೋಗ-ಮೋಕ್ಷ ಗಳು ಸಿದ್ಧಿಸುತ್ತವೆ. ಯೋಗಿಯಾಗಲಿ ಮಹಿತಾತ್ಮನಾಗಲಿ ಶಿವಜ್ಞಾನಿಯಾಗಲಿ ಕಾಯ ಬಿಟ್ಟಿರಲು ಸಾಧ್ಯವಿಲ್ಲ. ಕಾಯವಿಲ್ಲದೆ ಯೋಗ, ಜ್ಞಾನ, ಆತ್ಮಗಳು ತನ್ನ ಸಿದ್ಧಿಗೆ (ವಶಕ್ಕೆ) ಬರವು.

"ಲಿಂಗ ಗಂಭೀರ ನಿಸ್ಸಂಗಿಯು ಸಂಗವನೇನೆಂಬೆನಯ್ಯಾ ? ಕೂಡಲ ಸಂಗನ ಶರಣರು ಕಾಯದ ನೆವದಿಂದ ಅರ್ಪಿಸುವ ಬೆಡಗ ನಾನೇನೆಂಬೆ ?"

ಲಿಂಗ ಗಂಭೀರನಿಗೂ ನಿಸ್ಸಂಗಿಗೂ ಕಾಯದ ಸಂಗಬೇಕು. ಆದರೆ ಅವರ ಸಂಗ ಬೇರೆ ! ಅವರಿಗೆ ಅರ್ಚನೆಗಾಗಿ ಕಾಯ ಬೇಕು ; ಅರ್ಪಣಕ್ಕಾಗಿ ಬೇಕು; ಅನುಭವಾನಂದ ಪಡೆಯಲು ಬೇಕು. ಅರ್ಚನಾದಿಗಳಿಗೆ ಬಳಸಿಕೊಳ್ಳುವ ಅವರ ಆಕಾಯದ ಬೆಡಗೇ ಬೆಡಗು. ಅದು ಭಾಷೆಗೆ ಬಂಧಿಯಾಗುವದಲ್ಲ.

"ಅಂಗದಿಂದೆ ಲಿಂಗಸುಖ, ಲಿಂಗದಿಂದೆ ಅಂಗಸುಖ. ಆ ಅಂಗ-ಲಿಂಗ ಸಂಗಸುಖದಿಂದೆ ಪರಮಸುಖ ದೊರಕೊಂಬುವುದು ನೋಡಾ ! ಆ ಅಂಗ ಲಿಂಗ ಸಂಗ ಸಮರಸೈಕ್ಯವನು ಕೂಡಲಚೆನ್ನಸಂಗ ನಿಮ್ಮ ಶರಣನಾದ ಮಹಾಲಿಂಗೈಕ್ಯ ಬಲ್ಲನಲ್ಲದೆ ಉಳಿದವರೆತ್ತ ಬಲ್ಲರಯ್ಯಾ ?"

ಅಂಗದ ಸಂಗ ಅಗತ್ಯ. ಅಂಗವಿಲ್ಲದೆ ಲಿಂಗಸುಖವಿಲ್ಲ. ಲಿಂಗವಿಲ್ಲದೆ ಅಂಗಸುಖವಿಲ್ಲ. ಇವೆರಡೂ ಪರಮಸುಖಕ್ಕೆ ಕಾರಣ. ಅಂಗ-ಲಿಂಗಗಳೆರಡರ ಸಮಸ್ಥಿತಿಯನ್ನು ಶರಣನು ಬಲ್ಲನಲ್ಲದೆ ಉಳಿದವರು ತಿಳಿಯರು. ಜಗದ್ಗುರು

ರೇಣುಕರು ಅಪ್ಪಣೆಕೊಡಿಸುವಂತೆ ಕ್ರಿಯೆ ಜ್ಞಾನ ಭಾವಗಳು ಕಾಯಪಾತ್ರೆಯಲ್ಲಿರ ಬಲ್ಲವು. ಇವನ್ನು ಇಚ್ಛಿಸುವವರು ಕಾಯವಂತರಾಗಿಯೇ ತೀರಬೇಕು.

"ದೇಹಯುಕ್ತಸ್ಯ ತತ್ಸಿದ್ಧಿರ್ದೇಹಾಂತೇऽಪಿ ನ ತಸ್ಯ ವೈ ।
ದೇಹಯುಕ್ತೋ ಲಭೇತ್ ಜ್ಞಾನಂ ನ ಸಿದ್ಧಿರ್ಜ್ಞಾನವರ್ಜಿತಾ ॥"

—ಯೋಗವಾಸಿಷ್ಠ

"ಆಕಾಶ ಗಮನಾದೀನಿ ಸರ್ವಜ್ಞಾನ ಸಮೃದ್ಧಯಃ ।
ಭವಂತ್ಯೇವ ಸಕಾಯಸ್ಯ ಶಿವಸಂಸಕ್ತ ಚೇತಸಃ ॥"

—ಸ್ಕಾಂದಪುರಾಣ

"ಯೋಗಿನೋ ಯತಯಶ್ಚೈವ ಜ್ಞಾನಿನೋ ಮಂತ್ರಿಣಸ್ತಥಾ ।
ದೇವಪೂಜಾನಿಮಿತ್ತಾಯ ಸ್ವೇಚ್ಛಯಾ ಗೃಹ್ಣತೇ ತನುಂ ॥"

—ಸ್ಪಂದಶಾಸ್ತ್ರ

"ನೋ ಚೇತ್ ಸ್ಥೂಲಾದಿಭಿಃ ಕಾಯೈಸ್ತದ್ಧರ್ಮೈರಪಿಯಂತ್ರಿತಃ ।
ಭಕ್ತಿಂ ವ್ಯವಹರಂಸ್ತಜ್ಞಸ್ಸಕಾಯ ಇತೀರ್ಯತೇ ॥"

—ತ್ರಿಕಾಂಡಸಾರ

ಇವೇ ಮುಂತಾದ ಪ್ರಮಾಣಗಳು ಎಂಥವರಿಗೂ ಕಾಯ ಬೇಕೆಂದು ಪ್ರತಿಪಾದಿಸಿವೆ. ಶುದ್ಧಕಾಯ ಸರ್ವರಿಗೂ ಬೇಕು. ಇನ್ನು ಎರಡನೆಯ ಮಂತ್ರದಲ್ಲಿ ಇನ್ನೂ ಮನನೀಯವಾಗಿ ಹೀಗೆ ಹೇಳಿದೆ:

ಶಿವಸಾಮರಸ್ಯಕ್ಕೆ ದೃಕ್ಕ್ರಿಯೆಗಳೇ ಮೂಲ. ದೃಕ್ಕ್ರಿಯೆಗಳಿಗೆ ಕಾಯವೇ ಮೂಲ. ಕಾಯಯೋಗವಿಲ್ಲದೆ ಯಾವ ಭೋಗ ಮೋಕ್ಷಗಳೂ ಸಿದ್ಧಿಸವು; ಯಾರಿಗೂ ಸಿದ್ಧಿಸವು.

ಯೋಗ-ಮೋಕ್ಷಗಳ ಸಿದ್ಧಿಯಂತೆ ಭೋಗವೂ ಒಂದು ಸಿದ್ಧಿ—ವೀರಶೈವ ಸಿದ್ಧಾಂತದಲ್ಲಿ! ಇವರ ಭೋಗ ಐಂದ್ರಿಕವಲ್ಲ; ಅತೀಂದ್ರಿಯಾತ್ಮಕ; ಮತ್ತು ಲಿಂಗಭೋಗ,

"…. ಅಂಗಭೋಗವನೆ ಕೂದಿಸಿ ಪ್ರಸಾದವನೆ ರುಚಿಸಿಹೆನೆಂಬ ಲಿಂಗವಂತರುಗಳೆಲ್ಲ ಅರಿವೆಣಗಳಾಗಿ ಹೋದರು. ಅಂಗಭೋಗವೇ ಲಿಂಗಭೋಗ, ಅಂಗಭೋಗವೇ ಅರ್ಪಿತವಾಗಿ ಲಿಂಗಕ್ಕೆ ! …" ಎಂದೆನ್ನುತ್ತಾನೆ. ಸಮ್ಯಗ್‌ಜ್ಞಾನಿ ಚನ್ನಬಸವಣ್ಣ !

"ಕ್ಷಯಿಸದೆ ಸರ್ವಕಾಮಿತ ಸಮೃದ್ಧಿ ಸಮನ್ವಿತ ತತ್ತದೈಹಿಕಾ – ।
ಶ್ರಯ ಘನಸೌಖ್ಯಮಂ ಬಿಡದೆ ಭೋಗಿಸಿ–ತತ್ತ್ವನಿಜಸ್ವರೂಪನಿ–॥
ಶ್ಚಯಪದಮಂ ಶರೀರದವಸಾನದೊಳೊಂದಿ ಮಹಾ ಮಹೇಶ್ವರರ್ ।
ಬಯಸದೆ ಭೋಗಮೋಕ್ಷ ಪರರಪ್ಪುದು ಚಿತ್ರವಲಾ ಶಿವಾಧವಾ ॥"

ಎಂದು ವಂಗ್ಗೆಯ ಮಾಯಿದೇವನ ನಿರೂಪಣೆ! 'ಐಹಿಕಾಶ್ರಯ ಘನ ಸೌಖ್ಯಮಂ ಬಿಡದೆ ಭೋಗಿಸಿ, ಮಹಾ ಮಹೇಶ್ವರರು ತತ್ತ್ವನಿಜಸ್ವರೂಪ ನಿಶ್ಚಯಪದಂ ಶರೀರದವಸಾನದೊಳೊಂದಿ, ಬಯಸದೆ ಭೋಗಮೋಕ್ಷ ಪರರಪ್ಪರಂತೆ' ಇದು ವಿಚಿತ್ರವಾದರೂ ವೀರಶೈವ ಸೈದ್ಧಾಂತಿಕ ಸತ್ಯ. ಇಲ್ಲಿ ಶರೀರದವಸಾನವೆಂದರೆ ಶರೀರಭಾವಾವಸಾನ ವೆಂದರ್ಥ. ಇವರ ಅಂಗಭೋಗ ಲಿಂಗಯೋಗಕ್ಕೆ ಸಹಕಾರಿ ; ಸಮತ್ವಸಿದ್ಧಿಕಾರಿ.

ಕಾಯಯೋಗ ಇದೊಂದು ಶಿವಯೋಗಿಶಿವಾಚಾರ್ಯರ ಪ್ರಬುದ್ಧ ಪ್ರಯೋಗ, ಪರಮೋತ್ತಮ ಪ್ರಯೋಗ; ಪರಮೋಚಿತ ಪ್ರಯೋಗ. ಏಕೆಂದರೆ ಎಲ್ಲ ಯೋಗಗಳಿಗೆ ಮೂಲ ಕಾಯಯೋಗ. ಇದೊಂದಿಲ್ಲದಿದ್ದರೆ ಹಠ, ಮಂತ್ರ, ಲಯ, ರಾಜ, ಧ್ಯಾನ, ಜ್ಞಾನ, ಶಿವ ಮುಂತಾದ ಯೋಗಗಳು ಅಳವಡುವಂತಿಲ್ಲ. ಅಲ್ಲದೆ ಇವುಗಳ ಅಸ್ತಿತ್ವವೇ ಇರುವುದಿಲ್ಲ. ಇವಕ್ಕೆಲ್ಲ ಕಾಯಯೋಗವೇ ಆಧಾರ ; ಆಶ್ರಯ.

ಕಾಯದ ಹೆಚ್ಚಳಿಕೆ–ನಿಚ್ಚಳಿಕೆಗಳನ್ನು ತೋರಿಬೀರುವ ಈ 'ಕಾಯಯೋಗ' ಕೂಡುನುಡಿಯ ಚೆಲುವು ಅನಿತಿನಿತೆಂದು ಆಡಲಾಸಲ್ಲ. ಕಾಯಯೋಗ ಎಂಬ ನವ್ಯಪ್ರಯೋಗವನ್ನು ನಾವು ಕಾಣುವುದು ಇಲ್ಲಿಯೆ–ಈ ಕೃತಿಯಲ್ಲಿಯೆ !

ಮೂಗುತಿಗೆ ಮೂಗಿದ್ದಂತೆ ಉಳಿದೆಲ್ಲ ಯೋಗಗಳಿಗೆ ಕಾಯಯೋಗವೇ ಮುಖ್ಯಾಂಗ. ಇದರ ನೆರವಿಯಲ್ಲಿ ಅವುಗಳ ಅಸ್ತಿತ್ವ, ಅವುಗಳ ಸಿದ್ಧಿ.

ಕಾಯ ಒದಗಿರುವುದು ಒಂದು ಯೋಗ. ಒದಗಿದ ದೇಹವನ್ನು ಕಾಯ ವನ್ನಾಗಿಸಿಕೊಳ್ಳುವುದೂ ಒಂದು ಯೋಗ. ದೇಹ ಭಾನ, ದೇಹಾಭಿಮಾನ ಗಳನ್ನು ದೂರಾಗಿಸುವುದೇ ಕಾಯಯೋಗ. ಉಳಿದೆಲ್ಲ ಸತ್ಸಾಧನೆಗಳಿಗೆ ಸಿದ್ಧಿ ಗಳಿಗೆ ಐಹಿಕಾಶ್ರಯ ಘನಸೌಖ್ಯಕ್ಕೆ ಕಾಯಯೋಗವೇ ಕಾರಣವಾಗಿದೆ. ಪ್ರಥಮ ಸಂಗ್ರಾಹ್ಯ ಸಾಹಿತ್ಯವಾಗಿದೆ. ಕಾಯಯೋಗ ಆರಂಭಸಾಧಕನಿಗೂ ಬೇಕು. ಚರಮ ಶಿವೈಕಜ್ಞಾನವುಳ್ಳ ಸಿದ್ಧನಿಗೂ ಬೇಕು. ಅಂದರೆ ಜೀವನ್ಮುಕ್ತ ನಿಗೂ ಬೇಕು. ವಿಪುಳವಾದ ಕ್ರಿಯಾಗಮಾದಿಗಳು ಕಾಯಯೋಗ ಭೂಮಿಕೆಯ ಮೇಲೆ ಹುಟ್ಟಿ ಬೆಳೆದು ಹೂವಾಗಬೇಕು, ಹಣ್ಣಾಗಬೇಕು. ಮಾನವನು ಮಾಹೇಶ್ವರನಾಗುವುದು ಕಾಯಯೋಗದಲ್ಲಿ !

ತ್ರಿಕರಣಗಳಲ್ಲಿ ಸತ್ಯಶುದ್ಧತೆ ಅಳವಟ್ಟರೆ ಕಾಯವೆನಿಸುತ್ತದೆ. ಅಂತಹ ಕಾಯ ಒದಗಿದರೆ 'ಕಾಯಯೋಗ' ಎಂಬ ನಿರ್ಮಳನಾಮವುಂಟಾಗುತ್ತದೆ. ಕಾಯ ಬರೀ ಭೋಗವಸ್ತುವಲ್ಲ, ಯೋಗವಸ್ತುವೂ ಆಗಿದೆ. ತ್ಯಾಗ ಅದರ ಒಂದು ಗುಣಕ್ರಿಯೆಯಾಗಿರುವಂತೆ ಯೋಗವೂ ಅದರ ಗುಣಕ್ರಿಯೆಯಾಗಿದೆ ಯೆಂಬುದನ್ನು ಬೋಧಿಸುತ್ತದೆ ಈ 'ಕಾಯಯೋಗ' ಪ್ರಯೋಗ. ಇದು ಸುಂದರ ಸ್ವಾನುಭವ ಪ್ರಯೋಗ. ಕಾಯವನ್ನು ಕಂಡ ಸ್ಥೈಪಿನ ತುಂಬುನೋಟ ಎಲ್ಲ ಮತ ಪ್ರವಾದಿಗಳು ಕಡೆಗಣ್ಣಿನಿಂದ ಕಂಡ ಅಥವಾ ನಸುನೋಟದಿಂದ ನೋಡಿದ ಕಾಯಕ್ಕೆ ಈ ಪ್ರತಿಭಾ ಪೂರ್ಣ ಔಚಿತ್ಯ ಪ್ರಯೋಗ ಒಂದು ಹೊಸ ಮೆರುಗನ್ನು ಒಂದು ಹೊಸ ಅರಿವನ್ನು ತಂದಿದೆ. ಇದರಿಂದ ಶಿವಕವಿಯ ಸ್ವಾನು ಭಾವ ಸಾರ್ಥಕವಾಗಿದೆ ; ಸರ್ವ ಸಮರ್ಪಕವಾಗಿದೆ,

ಕಾಯಯೋಗ ಕಾಯಾತ್ಮಸಂಬಂಧ ಪ್ರತೀಕ. ಈ ಸಂಬಂಧ ಕೇವಲ ಸಂಯೋಗ ಸಂಬಂಧವಲ್ಲ, ಸಮವಾಯ ಸಂಬಂಧವಲ್ಲ, ಇವುಗಳ ಜತೆಗೆ ಅವಿರಳ ಸಂಬಂಧವೂ ಇದೆ. ಅಂತೆಯೇ ಶಿವಯೋಗದಂತೆ ಕಾಯಯೋಗವೂ ನಿತ್ಯ ಸತ್ಯವಾಗಿದೆ, ಪರಿಪೂರ್ಣ ಪರಿಣಾಮಕಾರಿಯಾಗಿದೆ, ಕಾಯ ಕಾಣದಂತಾದರೂ ಕಾಯತನ ಕೊನೆಗಾಣದು. ಕಾಯ ಕೇವಲ ಪಾರ್ಥಿವ ದ್ರವ್ಯವಲ್ಲ. ಪಂಚ ಭೂತಗಳ ಸಮೀಕರಣ ದ್ರವ್ಯವಾದಂತೆ ಆತ್ಮ ದ್ರವ್ಯವೂ ಆಗಿದೆ. ಆದುದರಿಂದಲೇ

ಶಿವಯೋಗಿ ಶಿವಾಚಾರ್ಯನು ನಿರೂಪಿಸುವಂತೆ ಶಿವಾದ್ವೈತಜ್ಞಾನಿಗೂ ಕಾಯ ಯೋಗ ಅನಿವಾರ್ಯ ; ಶಿವಾದ್ವೈತಕ್ಕೂ ಅನಿವಾರ್ಯ.

"ಕಾಷ್ಠಂ ವಿನಾ ಯಥಾ ವಹ್ನಿರ್ಜಾಯತೇ ನ ಪ್ರಕಾಶವಾನ್ ।
ಮೂರ್ತಿಂ ವಿನಾ ತಥಾ ಯೋಗೀ ನಾತ್ಮತತ್ತ್ವ ಪ್ರಕಾಶವಾನ್ ॥
ಮೂರ್ತ್ಯಾತ್ಮನೈವ ದೇವಸ್ಯ ಯಥಾ ಪೂಜ್ಯತ್ವ ಕಲ್ಪನಾ।
ತಥಾ ದೇಹಾತ್ಮನೈವಾಸ್ಯ ಪೂಜ್ಯತ್ವಂ ಪರಯೋಗಿನಃ ॥
ನಿಷ್ಕಲೋ ಹಿ ಮಹಾದೇವಃ ಪರಿಪೂರ್ಣಃ ಸದಾಶಿವಃ
ಜಗತ್ಸೃಷ್ಟ್ಯಾದಿ ಸಂಸಿದ್ಧ್ಯೈ ಮೂರ್ತಿಮಾನೇವ ಭಾಸತೇ॥"

ಕಟ್ಟಿಗೆಯಿಲ್ಲದೆ ಬೆಂಕಿ ಹೊಮ್ಮಿ ಬೆಳಗದು. ಅಂತೆಯೇ ಕಾಯವಿಲ್ಲದೆ ಶಿವಯೋಗಿಯು ಅತ್ಮ ತತ್ತ್ವವನ್ನು ಪ್ರಕಾಶ ಪಡಿಸನು.

ದೇವನಿಗೂ ಸಹ ಪೂಜ್ಯತ್ವವು ದೇಹ ಧಾರಣದಿಂದಲೇ ಲಭ್ಯವಾಗುತ್ತದೆ. ಹಾಗೆಯೇ ಪರಶಿವಯೋಗಿಗೂ ಕಾಯಸಂಬಂಧದಿಂದಲೇ ಪೂಜ್ಯತ್ವ ಪ್ರಾಪ್ತಿಯಾಗುತ್ತದೆ.

ನಿರಾಕಾರನೂ ಪರಿಪೂರ್ಣನೂ ನಿತ್ಯ ಮಂಗಳ ಮಯನೂ ಆದ ಆದೇವ ದೇವನೂ ಸಹ ಕಾಯವಂತನಾಗದೆ ಈ ಜಗತ್ತನ್ನು ಸೃಷ್ಟಿಸಲಾರನು

ಕಟ್ಟಿಗೆಯಂತೆ ಕಾಯವಿದೆ. ಅಗ್ನಿಯಂತೆ ಆತ್ಮವಿದೆ ತಿಕ್ಕುವಿಕೆಯಿಂದ ಹೊರ ಹೊಮ್ಮಿದ ಉರಿಯು ಕಟ್ಟಿಗೆಯನ್ನು ತನ್ನಂತೆ ಮಾಡಿಕೊಳ್ಳುತ್ತದೆ. ಇದರಂತೆ ಸತ್ಕ್ರಿಯಾ ಮಂಥನದಿಂದ ಪ್ರಕಾಶವಾದ ಆತ್ಮ ತತ್ತ್ವವು ಕಾಯವನು ತನ್ನಂತೆ ಮಾಡಿಕೊಳ್ಳುತ್ತದೆ. ಸುಟ್ಟ ಬಳಿಕ ಕಟ್ಟಿಗೆ ಯಾವುದು, ಕಿಚ್ಚು ಯಾವುದು? ಅಂತೆಯೇ ಅಂಗಲಿಂಗ ಸಂಗಿಗೆ ಅಂಗಯಾವುದು, ಲಿಂಗ ಯಾವುದು ? "ಚಿತ್ತವೆಂಬ ಬಿತ್ತು ಬಲಿದು ಎರಡಾದಲ್ಲಿ ಲಿಂಗವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು. ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು. ನೋಡಿದಡೆ ಮೂರ್ತಿ, ಹಿಡಿದಡೆ ಬಯಲು. ಈ ಮೂರ್ತಿಯೊಳಗದೆ ಈರೇಳು ಲೋಕದ ಪ್ರಾಣಕಳೆ. ಆ ಕಳೆಯ ಬೆಳಗು ತಾನೇ ನಮ್ಮ ಗುಹೇಶ್ವರ ಲಿಂಗದ ಲೀಲಾ ಮೂಲದ ಪ್ರಥಮ ಬಿತ್ತು."

"ಅಂಗ ಲಿಂಗ ಸಂಬಂಧದ ಇರವು ಬೀಜ ಒಡೆದು ಮೊಳೆ ದೋರುವಂತೆ, ಕುಸುಮ ಬಲಿದು ದೆಸೆದೆಸೆಗೆ ಪಸರಿಸುವಂತೆ, ಭೂಜಲ ಉಣ್ಮಿ ಪರಿವ ತೆರನಂತೆ ಘಟಮಧ್ಯದಲ್ಲಿ ಘನಲಿಂಗ ನಿಂದು ಕುರುಹು ದೋರುತ್ತಿದೆ. ಐಘಟದೂರ ರಾಮೇಶ್ವರ ಲಿಂಗವು ಮೂರ್ತಿ ಅಮೂರ್ತಿಯಾಗುತ್ತಿದೆ."

ಅಂಗ ಗುಣವರತು ಲಿಂಗವನರಿಯಬೇಕೆಂಬರು. ಅಂಗವರತ ಮೇಲೆ ಲಿಂಗಕ್ಕೆ ಕುರುಹುಂಟೆ ? ಅಂಗವೇ ಲಿಂಗ, ನಿರಂಗವೇ ಸಂಗ ; ಈ ಭಾವದಂಗವ ನರಿಯಬೇಕೆಂದನಂಬಿಗ ಚೌಡಯ್ಯ.

ಷಡಧ್ವಾಶ್ರಯವಾದ ಪರಬಿಂದು ಸ್ಥಾನದ ಮೇಲಿಂದ ಷಟ್‌ಸ್ಥಲ ಮೂಲ ವಾದ ಪರಶಿವ ತತ್ತ್ವದೊಳು ಷಟ್‌ಸ್ಥಲ ಲಿಂಗಾಂಗ ಜನಿಸಿ ತೋರಿತ್ತೆಂದಡೆ, ಅಂಗಲಿಂಗಕ್ಕೆ ಭೇದಮುಂಟೆ ? ಇಲ್ಲವಾಗಿ, ಬೀಜಾಂಕುರದಂತೆ ಒಂದ ಬಿಟ್ಟು ಒಂದು ತೋರದು. ಇಂತಪ್ಪ ಲಿಂಗಾಂಗ ಸಂಬಂಧ ಸಕೀಲವನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಶರಣ ಬಲ್ಲನು.

ಈ ವಚನಗಳು ಅಂಗ ಲಿಂಗ ಸಂಬಂಧ ಸಕೀಲವನ್ನು ಹೃದಯಂಗಮ ವಾಗಿ ಬಣ್ಣಿಸಿವೆ. 'ನೋಟಕ್ಕೆ ಮೂರ್ತಿ. ಕೂಟಕ್ಕೆ ಬಯಲು ; ಈ ಮೂರ್ತಿ ಯೊಳಗಿದೆ ಈರೇಳು ಲೋಕದ ಪ್ರಾಣಕಳೆ. ಆ ಕಳೆಯು ಬೆಳಗೇ ಲಿಂಗ, ಆ ಲಿಂಗದ ಲೀಲೆಯೇ ಕಾಯದ ಮೊದಲ ಬಿತ್ತು.' ಎಂದು ಹೇಳಿದ ಪ್ರಭುವಾಣಿ ಯಲ್ಲಿ ಆಳ ಅನುಭವದ ಅಮೃತವಿದೆ. ಕಾಯಾತ್ಮ ಸಂಬಂಧದ ಸೂಕ್ಷ್ಮ ಸಕೀಲ ಸನ್ನಿಹಿತ ಸಕೀಲ ಬೀಜಾಂಕುರ ನ್ಯಾಯವನ್ನು ನೆನವಿಗೆ ತರುವಂತೆ ವಚನ ರಚಿತ ವಾಗಿದೆ. ಈ ಭಾವವನ್ನೇ ಮುಂದಿನ ವಚನ ಹೃದಯಾಕರ್ಷಕವಾಗಿ ವಿವರಿಸಿದೆ ಲಿಂಗ ಮೂರ್ತಿ ಅಮೂರ್ತಿ ಎರಡೂ ಆಗಬಲ್ಲುದೆಂಬುದನ್ನು ಅರಿವಿಗೆ ತರಲು ಉತ್ತಮ ಉಪಮೆಗಳನ್ನು ಬಗೆದುಂಬಿ ಬರುವಂತೆ ಬಿತ್ತರಿಸಿದೆ. ಅಂಗವೇ ಲಿಂಗವೆಂಬುದನ್ನು ಮುಂದಿನ ಮೂರು ನಾಲ್ಕನೆಯ ವಚನಗಳೆರಡು ನಿಚ್ಚಳ ಗೊಳಿಸಿವೆ. ಇದರಿಂದಾಗಿ ಜಗದ್ಗುರು ರೇಣುಕ ಶಿವಾಚಾರ್ಯರು ಮೂರ್ತ್ಯಾತ್ಮ ನಾಗಿಯೇ ದೇವನು ಶಿವಯೋಗಿಯೂ ಆರಾಧ್ಯರಾಗುತ್ತಾರೆಂದು ಅಪ್ಪಣೆ ಮಾಡಿ ರುವುದು ಉಚಿತಕ್ಕೆ ಉಚಿತವಾಗಿದೆ. ಮೂರನೆಯ ಮಂತ್ರದಲ್ಲಿ ಜಗದ್ಗುರು ರೇಣುಕರು, ನಿಷ್ಕಲ ಶಿವನು, ಜಗತ್ತಿನ ಸೃಷ್ಟಿಗಾಗಿ ಸಕಲನಾಗುವನು ಸಕಾಯ

ನಾಗುವನು ಎಂದು ಅಪ್ಪಣೆ ಕೊಡಿಸಿದ್ದಾರೆ. ಇದೇ ಅಭಿಪ್ರಾಯವನ್ನು ಪ್ರಭು ದೇವರು ಹೀಗೆ ಹೇಳಿದ್ದಾರೆ :

"ಪೃಥ್ವಿಯನತಿಗಳೆದು ಅಪ್ಪುವಿಲ್ಲ. ಅಪ್ಪುವನತಿಗಳೆದು ಅಗ್ನಿಯಿಲ್ಲ. ಅಗ್ನಿಯನತಿಗಳೆದು ವಾಯುವಿಲ್ಲ. ವಾಯುವನತಿಗಳೆದು ಆಕಾಶವಿಲ್ಲ. ಆಕಾಶ ವನತಿಗಳೆದು ನಾದವಿಲ್ಲ. ನಾದವನತಿಗಳೆದು ಬಿಂದುವಿಲ್ಲ. ಬಿಂದುವನತಿ ಗಳೆದು ಕಳೆಯಿಲ್ಲ. ಕಳೆಯನತಿಗಳೆದು ಆತ್ಮನಿಲ್ಲ ಆತ್ಮನತಿಗಳೆದು ಗುಹೇಶ್ವರ ನೆಂಬ ಲಿಂಗವಿಲ್ಲ." ಹೀಗಿರುವಾಗ ಕಾಯ ಬಿಟ್ಟು ಆತ್ಮವಿಲ್ಲ. ಆತ್ಮ ಬಿಟ್ಟು ಕಾಯವಿಲ್ಲ. ಕಾಯಾತ್ಮ ಸಂಬಂಧ ಅನಾದಿ, ಅನಿವಾರ್ಯ.

"ಬ್ರಹ್ಮಾದ್ಯಾ ದೇವತಾಃಸರ್ವಾ ಮುನಯೋಽಪಿ ಮುಮುಕ್ಷವಃ ।
ಕಾಯವಂತೋ ಹಿ ಕುರ್ವಂತಿ ತಪಃ ಸರ್ವಾರ್ಥಸಾಧಕಂ॥
ತಪೋ ಹಿ ಮೂಲಂ ಸರ್ವಾಸಾಂ ಸಿದ್ಧೀನಾಂ ಯಜ್ಞಗತ್ರಯೇ ।
ತಪಸ್ತತ್ಕಾಯಮೂಲಂ ತಸ್ಮಾತ್ಕಾಯಂ ನ ಸಂತ್ಯಜೇತ್ ॥"

ಸೃಷ್ಟಿಕರ್ತನೇ ಮೊದಲಾದ ದೇವತೆಗಳು ಮುನಿಗಳು ಮುಮುಕ್ಷುಗಳು ಎಲ್ಲರೂ ಮೈವೆತ್ತು ತಪಸ್ಸನ್ನು ಮಾಡುತ್ತಾರೆ; ಸರ್ವಾರ್ಥಗಳನ್ನು ಸಾಧಿಸುತ್ತಾರೆ. ಸಕಾಯರಾಗದೆ ಸತ್ಕ್ರಿಯಾದಿಗಳನ್ನು ಮಾಡಲು ಯಾರಿಂದಲೂ ಯಾವಕಾಲಕ್ಕು ಸಾಧ್ಯವಿಲ್ಲ.

ಮೂಲೋಕದಲ್ಲಿ ಸರ್ವಸಿದ್ಧಿಗಳಿಗೆ ಮೂಲ ತಪಸ್ಸು. ಆ ತಪಸ್ಸಿಗೆ ಮೂಲ ಕಾಯ. ತನುವಿಲ್ಲದೆ ತಪಸ್ಸಿಲ್ಲ. ಕಾರಣ ತಾತ್ತ್ವಿಕರೂ ಸಹ ತನುವನ್ನು ತ್ಯಜಿಸಕೂಡದು. ಇಲ್ಲಿ ತಪಸ್ಸೆಂದರೆ ಲಿಂಗಾರ್ಚನೆ. ಲಿಂಗಾರ್ಚನೆಯಲ್ಲಿ ಏನಿಲ್ಲ? ಎಲ್ಲವೂ ಇದೆ. ಅರ್ಚನೆಗಾಗಿ ಅಂಗವಿಡಿದಿರಬೇಕು. ಅರ್ಚನಭಾಗ್ಯ ಅಲ್ಪ ವಲ್ಲ. ಆಕಾರವಿಲ್ಲದ ಆ ವಸ್ತುವೂ ಸಹ ಅರ್ಚನೆಗಾಗಿ ಆಕಾರವಿಡಿದು ಮರ್ತ್ಯಕ್ಕೆ ಅವತರಿಸುತ್ತದೆಯೆಂದು ಹೇಳಿದ ಬಳಿಕ ಉಳಿದವರ ಮಾತೇನು ? ಎಂತಹ ವಿರಾಗಿಯೂ ಸಹ ತನುವನ್ನು ತ್ಯಜಿಸಬಾರದು. ವೈರಾಗ್ಯಪ್ರದರ್ಶನ ಕ್ಕಾಗಿ ಒಂದುವೇಳೆ ತ್ಯಜಿಸಿದರೆ ಆತನು ಆತ್ಮಘಾತಕಿ, ಅಘೋರ ನರಕಿ.

"ವೈರಾಗ್ಯೇಣ ವಪುಸ್ತ್ಯಾಗೋ ನೈವ ಕಾರ್ಯಂ ಮನೀಷಿಭಿಃ ।
ಆರಂಭತಃ ಕ್ರಿಯಯನಾಶೇ ಸ್ವಯಮೇವ ವಿಪತ್ಸ್ಯತೇ ॥"

ಎಂದು ದೇವೀಕಾಲೋತ್ತರ ಕೃತಿಯಲ್ಲಿ ಉಕ್ತವಾಗಿದೆ. ತನುತ್ಯಾಗ ವಿವೇಕದ್ದಲ್ಲ. ಮಾನವತನು ಸುಲಭವಾಗಿ ಸಿಕ್ಕುವುದಲ್ಲ. ಪೂರ್ವಪುಣ್ಯದಿಂದ ಪ್ರಾಪ್ತವಾಗಿರುವಾಗ ಅದನ್ನು ಇರಿಸಿಕೊಳ್ಳಲು ಯತ್ನಿಸಬೇಕು. ಪರಮಾತ್ಮನ ಪೂಜೆಗಾಗಿ ಉಪಯೋಗಿಸಿಕೊಳ್ಳಬೇಕು. ತನು ಇರುವವರೆವಿಗೂ ಕ್ರಿಯಾಗಮ ದಲ್ಲಿ ನಿರತನಾಗಿರಬೇಕು. ಕ್ರಿಯಾ ನಿಷ್ಪತ್ತಿಗೊಂಡರೆ ಕಾಯ ತಾನೇ ಲಿಂಗದೊಳ ಗಾಗುತ್ತದೆ.

"ಅವನಿಯಂಬರ ಉದಯಿಸದಂದು ಒಂದು ತುಂಬಿದ ಕೊಡನ ಕಂಡೆ. ಆ ಕೊಡನನೆತ್ತಿದವರಿಲ್ಲ; ಇಳುಹಿದವರಿಲ್ಲ. ಆ ಕೊಡ ತುಳುಕಿದಲ್ಲಿ ಒಂದು ಬಿಂದು ಕಡೆಗೆ ಸಿಡಿಯಿತ್ತ ಕಂಡೆ. ಆ ಬಿಂದುವಿನಲ್ಲಿ ಅನಂತ ದೇವತಾ ಮೂರ್ತಿಗಳು ಹುಟ್ಟಿತ್ತ ಕಂಡೆ. ಇದು ಕಾರಣ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಲೀಲಾ ಮೂಲವ ಕಂಡು ಇಲ್ಲ ಇಲ್ಲ ಎನುತಿರ್ದೆನು."

ನೆಲ–ಮುಗಿಲು ಮುಂತಾದ ಎಲ್ಲ ತತ್ತ್ವಗಳು ಇಲ್ಲದಾಗ ಚಿತ್ಪ್ರಕಾಶಾಂಗ ವೆಂಬ ಭಾಜನದಲ್ಲಿ ಅಖಂಡ ಚಿದಾನಂದ ರಸ ಪರಿಪೂರ್ಣವಾದ ಪರಬ್ರಹ್ಮ ಒಂದೇ ಒಂದಿತ್ತು. ಅಂದು ಅದನ್ನು ಅಂಗದಲ್ಲಿ ಧಾರಣಮಾಡಿ ಹಿಂಗದೇ ಅರ್ಚಿಸುವವರಿರಲಿಲ್ಲ. ಆ ಪೂರ್ಣಕುಂಭವನ್ನು ಎತ್ತುವವರಾರು ? ಇಳುಹುವ ವರಾರು ? ಹೀಗಿರುವಾಗ ಅದೇ ತುಳುಕುವುದು. ಪೂಜ್ಯ ಪೂಜಕಲೀಲೆಗಾಗಿ ಬಹುವಾಗಬೇಕೆಂದು ಭಾವಿಸಿ ಅಂದರೆ ಚಿದ್ವಿವೇಕದಿಂದ ಚಿಂತಿಸಿ, ಆ ಚಿತ್ ಚೈತನ್ಯವೇ ಪ್ರಭಾವಿಸಿ ಚಿತ್ಪ್ರಭಾಂಗಮೂರ್ತಿಯಾದ ಚಿಲ್ಲಿಂಗವಾಗುವುದು. ಅದೇ ತುಳುಕಿದ ಒಂದು ಬಿಂದು. ಆ ಲಿಂಗವು ತನ್ನ ಲೀಲಾವಿಲಾಸದಿಂದ ತನ್ನ ಚಿತ್ಪ್ರಭಾಂಗದ ಚಿತ್ಕಲಾಂಶಗಳನ್ನು ಬೇರ್ಪಡಿಸಿ ಆತ್ಮಲಿಂಗಾರಾಧಕರೆಂಬ ಅನಂತ ದೇವತಾ ಮೂರ್ತಿಗಳನ್ನು ಹುಟ್ಟಿಸುವುದು. ಈ ವಿವರಣೆಯಿಂದ ತಿಳಿಯ ಬೇಕಾದುದಿಷ್ಟು: ಮೂರ್ತಿತ್ವ ಇಂದಿನದಲ್ಲ, ನಿನ್ನೆಯದಲ್ಲ. ಅನಾದಿಕಾಲದ್ದು. ಅಲ್ಲದೆ ಆ ಮೂಲ ವಸ್ತುವಿನಲ್ಲಿಯೇ ಇರುವಂತಹದ್ದು. ಇದು ಕೇವಲ ಜಡ

ವಸ್ತುಗಳಿಂದ ಮಾತ್ರ ಆಗುವಂತಹದಲ್ಲ. ಹೀಗಿರುವಾಗ ಇದನ್ನು ಬಿಡುವುದೆಂದರೇನು ? ಬಿಡುವುದೆಲ್ಲಿ ?

"ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡು.
ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು.
ಎನ್ನ ಕಂಗಳು ಶುದ್ಧವಾಯಿತ್ತು ಸಕಲಗಣಂಗಳ ನೋಡಿ.
ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ.
ಲಿಂಗತಂದೆ, ನೆಟ್ಟನೆ ನಿಮ್ಮ ಮನಮುಟ್ಟಿ ಪೂಜಿಸಿ
ಭವಗೆಟ್ಟ ನಾನು ಚನ್ನಮಲ್ಲಿಕಾರ್ಜುನ"

ಪೂಜಾರೂಪ ತಪಸ್ಸಿನಿಂದ ತನುವನ್ನು ಶುಚಿಮಾಡಿಕೊಳ್ಳುವುದೆ ಮೂಲ ; ಇದುವೇ ಸಕಾಯಸ್ಥಲ. ಪೂಜೆಮಾಡಿ ಪುನೀತರಾಗಲು ಪರಮರೆ ಆಗಲು ಶ್ರೇಷ್ಠ ಸಾಧನವಾದ ಕಾಯವನ್ನು ಕೆಡಿಸಬಾರದು.

"ತನುವಿಡಿದು ಕಾಬುದು ಗುರುವಿನ ಭೇದ. ಮನವಿಡಿದು ಕಾಬುದು ಲಿಂಗದ ಭೇದ. ಜ್ಞಾನವಿಡಿದು ಕಾಬುದು ಜಂಗಮಭೇದ. ಈ ತ್ರಿವಿಧವಿಡಿದು ಕಾಬುದು ಮಹಾಪ್ರಕಾಶ; ಆ ಮಹಾಪ್ರಕಶದೊಳಗೆ ಮಹವ ಕಂಡು ಮಹಕ್ಕೆ ಮಹವಾಗಿರ್ದೆನಯ್ಯಾ, ಮಹಾ ಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !"

## ಅಕಾಯಸ್ಥಳ:

ಸಕಾಯನೆ ಅಕಾಯನಾಗುವನೆಂದರೆ ಅಚ್ಚರಿಪಡಬೇಕಾಗಿಲ್ಲ. ವಿರೋಧಾಭಾಸವಾಗುತ್ತದೆಂದು ಗೊಣಗಾಡಬೇಕಾಗಿಲ್ಲ, ಕಾಯವಿದ್ದು ಕಾಯವಿಲ್ಲದಂತಹ ಸ್ಥಿತಿಗೇರಿದಾಗ ಅಕಾಯತ್ವ ಅನಾಯಾಸವಾಗಿ ಅಳವಡುತ್ತದೆ. ಇದ್ದೂ ಇಲ್ಲದಂತಿರುವುದೆಂದರೆ ಕಾಯಗುಣಕ್ರಿಯೆಗಳಿಗೆ ಇಂಬಿಲ್ಲದಿರುವಿಕೆ; ಕಾಯಭಾವವಿಲ್ಲದಿರುವಿಕೆ. ಅಂಗಗುಣಗಳಳಿದು ಲಿಂಗಗುಣಗಳು ಅಳವಟ್ಟಬಳಿಕ ಅಂಗವು ಲಿಂಗವೇ ಆಗುತ್ತದೆ. ಲಿಂಗವನ್ನು ಪೂಜಿಸಿ ಲಿಂಗವೇ ಆಗಿರುತ್ತದೆ. ಕೀಡಿ ಕುಂಡಲಿಗನಾದಂತೆ ಆಗುತ್ತದೆ. ಪ್ರಕೃತಿರೂಪವಳಿದು ಪರಮಾರ್ಥರೂಪವುಂಟಾಗುತ್ತದೆ. ಪರುಷಮಣಿ ಮುಟ್ಟಿದ ಕಬ್ಬುನ ಚಿನ್ನವಾಗುವಂತೆ ಲಿಂಗ ಮುಟ್ಟಿದ ಕಾಯ ಅಕಾಯವಾಗುತ್ತದೆ. ಶ್ರೀಗುರುವು ಶಿವದೀಕ್ಷಾಸಂಸ್ಕಾರಕಾಲದಲ್ಲಿ ಸರ್ವಾಂಗದಲ್ಲಿ ಶಿವಲಿಂಗವನ್ನು ಬೋಧಿಸಿ ಇರಿಸಿ ಮಂತ್ರಮಯವಾಗಿ ಲಿಂಗಮಯವಾಗಿ ಮಾಡಿರುತ್ತಾನೆ. ಅವನ್ನೇ ಮುಂದುವರಿಸಿಕೊಂಡು ಲಿಂಗಧಾರಿಯು ನಿತ್ಯಲಿಂಗಾರ್ಚನೆ ಮಂತ್ರಾನುಷ್ಠಾನಗಳಿಂದ ಕಾಯಕಲ್ಪನೆಯನ್ನು ಕಳಚಿ ಹಾಕುತ್ತಾನೆ.

"ಪ್ರಸಾದಕಾಯವಾದ ಬಳಿಕ, ಸರ್ವಾಂಗ ಉತ್ತಮಾಂಗ ಪ್ರಾಣಲಿಂಗವಾದ ಬಳಿಕ, ಸದಾಸನ್ನಿಹಿತಲಿಂಗ ಶರಣನಲ್ಲಿ ಭಾವಭೇದವಿಲ್ಲ. ನಿರಂತರ ಲಿಂಗಸಂಗಿ ಆಕಾಯ ಭಕ್ತಕಾಯವೆಂದುದು ಕೂಡಲ ಚನ್ನಸಂಗಯ್ಯನ ವಚನ"

ಎಂದು ಚನ್ನಬಸವಣ್ಣನು ಅಕಾಯತ್ವವನ್ನು ಸಿದ್ಧಮಾಡಿದ್ದಾನೆ. ಪ್ರಸಾದಕಾಯ ಕಾಯವಲ್ಲ, ಅಕಾಯ. ಪ್ರಾಣಲಿಂಗವಾದ ಬಳಿಕ ಪ್ರಾಣವಲ್ಲ. ಅದೇ ಲಿಂಗ ಸನ್ನಿಹಿತವಾದಾಗ ಭಾವಗತ ಭೇದಗಳಿರುವುದಿಲ್ಲ. ನಿಮಿಷಾರ್ಧವೂ ಅಗಲದೆ ಅನ್ಯವ ನೆನೆಯದೆ ನಿರಂತರ ಲಿಂಗ ಸಂಗಿಯಾದ ಕಾರಣ ಭಕ್ತನ ಕಾಯ ಅಕಾಯವೆಂದೆನಿಸುತ್ತದೆ.

"ತನುವಿನೊಳಗಿದ್ದು ತನುವ ಗೆದ್ದಳು. ಮನದೊಳಗಿದ್ದು ಮನವ ಗೆದ್ದಳು. ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂಗಸಂಗವ ತೊರೆದು ಭವವ

ಗೆದ್ದಳು. ಕೂಡಲಚನ್ನ ಸಂಗಯ್ಯನ ಹೃದಯಕಮಲವ ಬಗಿದು ಹೊಕ್ಕು ನಿಜ ಪದವನೈದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು."

ಅಕ್ಕನ ಅಕಾಯಸ್ಥಿತಿಯಿದು. ಕಾಯದೊಳಗಿದ್ದು ಕಾಯವನ್ನು ಗೆಲುವ ಕಲಿತನ ಕೌಶಲ್ಯಗಳನ್ನು ಮಾಹೇಶ್ವರಾಂಗನು ಮೈಗೂಡಿಸಿಕೊಳ್ಳಬೇಕು. ಕಾಯಕ್ಕೆಂದು ಯಾವುದನ್ನೂ ಕಾಂಕ್ಷಿಸಬಾರದು. ಕಾಂಕ್ಷೆ ಕಾಯತನಕ್ಕೆ ಕುರುಹು.

"ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗ; ಅಂಗಭೋಗವನರ್ಪಿತ ಲಿಂಗಭೋಗ ಪ್ರಸಾದವಯ್ಯ. ಬೇಕೆಂಬುದು ಕಾಯದ ಗುಣ. ಬೇಡೆಂಬುದು ವೈರಾಗ್ಯ. ಬೇಕೆಂಬುವವನಲ್ಲ, ಬೇಡೆಂಬುವವನಲ್ಲ; ಈ ಉಭಯವನತಿಗಳೆದು ಭೋಗಿಸಬಲ್ಲಡೆ, ಕೂಡಲಚನ್ನಸಂಗ ನಿಮ್ಮ ಶರಣನೆಂಬೆನು "

ಬಯಕೆ ಅಕಾಯತ್ವಕ್ಕೆ ಬಹುದೂರ. ಅಕಾಯನಾಗಬೇಕಾದರೆ ಬೇಕ ಬೇಡೆಂಬೆರಡನ್ನು ಬಿಡಬೇಕು. ಬಿಟ್ಟಾಗ ಅಕಾಯತ್ವವುಂಟಾಗುತ್ತದೆ,

"ದೇಹ ನಿರ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಯಿತ್ತು. ಮನ ಲಿಂಗಕ್ಕರ್ಪಿಸಿದ್ದಲ್ಲಿ ಮನಲಿಂಗವಾಗಿ ಮನ ಲಯವಾಯಿತ್ತು. ಭಾವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತಯ್ಯ. ದೇಹ ಮನ ಭಾವವಳಿದಲ್ಲಿ ಕಾರಣಕಾಯ ಅಕಾಯವಾಯಿತ್ತು. ಎನ್ನ ದೇಹದ ಸುಖವ ಲಿಂಗಭೋಗಿಸುವುದಾಗಿ ಶರಣಸತಿ ಲಿಂಗಪತಿ ಎಂಬ ಭಾವ ಅಳವಟ್ಟಿತ್ತಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನ."

ಈ ವಚನ ಅಕಾಯವಾಗುವ ಲಕ್ಷಣವನ್ನು ಚೆನ್ನಾಗಿ ಚಿತ್ರಿಸಿದೆ. ತ್ರಿವಿಧ ತನುಗಳಲ್ಲಿಯೂ ಅಕಾಯತ್ವವು ಅಳವಡಿಸುವುದನ್ನು ತಿಳಿಸಿದೆ.

ಲಿಂಗವನ್ನು ಮುಟ್ಟಿದ ದೇಹ ದೇಹವಲ್ಲ, ಲಿಂಗದೇವನನ್ನು ಸ್ಥಾಪಿಸಿದ ಮನೆ ಮನೆಯಲ್ಲ ಮಂದಿರ. ಆ ದೇವಮಂದಿರ ಇರುವ ಭೂಮಿ ಭೂಮಿಯಲ್ಲ ಕ್ಷೇತ್ರ. ಉರಿಯ ಸೋಂಕಿದ ಹುಲ್ಲು ಉರಿಯಾಗಿ ಬಳಿಕ ಬೂದಿಯಾಗುವುದಲ್ಲದೆ ಮರಳಿ ಹುಲ್ಲೆನಿಸದು. ಅಂತೆಯೇ ಲಿಂಗಜ್ಯೋತಿಯಲ್ಲಿ ಪಾಕಗೊಂಡ ಕಾಯ ಅಕಾಯವಾಗುವುದು. ಬೆಂದ ಬಳಿಕ ಅಕ್ಕಿ ಅನ್ನ ಎನಿಸುವುದು. ನೆಲ್ಲಿನ ಮೇಲಿರುವ ಹೊಟ್ಟು ತೆಗದ ಬಳಿಕ ನೆಲ್ಲು ಅಕ್ಕಿಯೆನಿಸುವುದಲ್ಲದೆ ಮತ್ತೆ ನೆಲ್ಲೆಂದೆನಿ

ಸದು. ಮೂರು ಮಲಗಳನ್ನು ಗುರುಕಾರುಣ್ಯದಿಂದ ಕಳೆದುಕೊಂಡ ಕಾಯಿ ಅಕಾಯುವೆಂದೆನಿಸುವಲ್ಲಿ ಆಚ್ಚರಿಯಿಲ್ಲ, ವಿರೋಧಾಭಾಸವೂ ಇಲ್ಲ.

"ಅಗ್ನಿ ಮುಟ್ಟಲು ತೃಣವು ಅಗ್ನಿಯಪ್ಪುದು ತಪ್ಪದಯ್ಯ: ಶ್ರೀಗುರುವಿನ ಪ್ರಸಾದವು ಅಂಗವ ಸೋಂಕಿದಲ್ಲಿ ಸರ್ವಾಂಗವು ಗುರುವಪ್ಪುದು ತಪ್ಪದಯ್ಯ. ಜಂಗಮಪ್ರಸಾದವು ಅರಿವ ಸೋಂಕಿದಲ್ಲಿ ಅಖಂಡಿತಪ್ರಸನ್ನ ಪ್ರಸಾದಿಯಪ್ಪುದು ತಪ್ಪದಯ್ಯ. ಶಿವಾಶಿವಾ, ಮಹಾಪ್ರಸಾದದ ಮಹಿಮೆಯನೇನೆಂದುಪಮಿಸ ಬಹುದಯ್ಯಾ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ."

"ಔಪಚಾರಿಕ ದೇಹಿತ್ವಾಜ್ಜಗದಾತ್ಮತ್ವ ಭಾವನಾತ್ ।
ಮಾಯಾಸಂಬಂಧರಾಹಿತ್ಯಾದಕಾಯೋ ಹಿ ಪರಃಸ್ಮೃತಃ ॥"

"ಪರಮನಾದ ಮಾಹೇಶ್ವರನಿಗೆ ಶರೀರವಿದ್ದರೂ ಸ್ವಾರ್ಥಕ್ಕಾಗಿ ಇರುವು ದಿಲ್ಲ; ಸತ್ಸೇವೆಗಾಗಿ ಇರುತ್ತದೆ. ಅಲ್ಲದೆ ಎಲ್ಲ ಜಗತ್ತನ್ನು ತನ್ನಂತೆ ಕಾಣುತ್ತಾನೆ. ಮಾಯಾತೀತನಾಗಿರುತ್ತಾನೆ. ಆದ್ದರಿಂದ ಈತನು 'ಅಕಾಯ'ನೆನಿಸುತ್ತಾನೆ.

'ಔಪಚಾರಿಕ ದೇಹತ್ವಾತ್' ಎಂಬ ಪಾಠಾಂತರವಿದೆ. ಇದರ ದೃಷ್ಟಿ ಯಲ್ಲಿ ಪರಯೋಗಿಗಿರುವ ದೇಹ ಬರೀ ತೋರಿಕೆಗಾಗಿ ಇರುತ್ತದೆಯಲ್ಲದೆ ಇದರ ಗುಣಕ್ರಿಯೆಗಳಿಗೆ ಆತನು ಒಳಗಾಗಿರುವುದಿಲ್ಲ. ಸ್ವಾರ್ಥಸಂಕುಚಿತಭಾವಕ್ಕೆ ಬಲಿ ಯಾಗದೆ ವಿಶಾಲ ಜಾಗತಿಕ ಮನೋಭಾವವುಳ್ಳವನಾಗಿ ಭೇದಭಾವರಹಿತನಾಗಿ 'ಅಕಾಯ'ನೆಂದು ಹೇಳಿಸಿಕೊಳ್ಳುತ್ತಾನೆ

ಪರಶಿವೋಪಾಸನಪರನಾದ ಮಾಹೇಶ್ವರಾಂಗನಿಗೆ ತನ್ನ ದೇಹಮೋಹ, ದೇಹಸುಖಗಳು ಇನಿತಾದರೂ ಇರುವುದಿಲ್ಲ ದೇಹೋಪಾದಿಗಳನ್ನೆಲ್ಲ ಆತನು ದೂರಮಾಡಿರುತ್ತಾನೆ. ದೇಹನಿಮಿತ್ತಗಳಿಗೂ ಆತನೊಳಗಾಗುವುದಿಲ್ಲ. ಪ್ರತಿ ಯಾಗಿ ತನ್ನ ದೇಹವನ್ನು ತನ್ನ ದೇಹದಲ್ಲಿರುವ ದೇವನಿಗಾಗಿ ಸವೆಸಲು ಅಪೇಕ್ಷಿಸು ತ್ತಾನೆ. ದೇವದೇವನ ಉಪಚಾರದಲ್ಲಿ ಯಾವಾಗಲೂ ತೊಡಗಿರುತ್ತಾನೆ. ಅದರ ಹೊರತು ಅವನು ಇನ್ನೇನನ್ನು ಬಯಸನು.

"ತಸ್ಯ ಚಿಂತಾಮಣಿರ್ಗೇಹೇ ತಸ್ಯ ಕಲ್ಪದ್ರುಮಃ ಕರೇ ।
ಕುಬೇರಃ ಕಿಂಕರಸ್ತಸ್ಯ ಯಃಕುರ್ಯಾತ ಶಿವೇ ಸ್ಥಿತಃ ॥

ದೇವೋಪಾಸನೆಯಲ್ಲಿ ದಾಸೋಹಸೇವೆಯಲ್ಲಿ ನಿರತನಾದವನ ಮನೆಯಲ್ಲಿ ಚಿಂತಾಮಣಿ, ಕೈಯಲ್ಲಿ ಕಲ್ಪತರು ಇರುತ್ತವೆ. ಇದರಿಂದಾಗಿ ಕುಬೇರನು ಕಿಂಕರನಾಗಿರುತ್ತಾನೆ. ಆತನು ಸ್ವಯಂ ಶಿವನಾಗಿರುತ್ತಾನೆ;' ಎಂದು ವಾಯುವೀಯ ಸಂಹಿತೆಯು ಹೇಳಿದೆ.

"ನ ನಾಕಪೃಷ್ಠಂ ನ ಚ ದೇವರಾಜ್ಯಂ ನ ಬ್ರಹ್ಮಲೋಕಂ ನ ಚ ವಿಷ್ಣುಲೋಕಂ।
ನ ಧರ್ಮಕಾಮಾನಖಿಲಾನ್ವೃಣೋಮಿ ರಹಸ್ಯದಾಸತ್ವಮಹಂ
ವೃಣೋಮಿ ॥"—ಶಿವಧರ್ಮ

ದೇವೋಪಚಾರದಲ್ಲಿ ನಿರತನಾದವನು ಸ್ವರ್ಗ, ದೇವರಾಜ್ಯ, ಬ್ರಹ್ಮಲೋಕ, ವಿಷ್ಣುಲೋಕ, ಪುರುಷಾರ್ಥ ಯಾವನ್ನೂ ಬಯಸುವುದಿಲ್ಲ. ದೇವನನ್ನು ಉಪಚರಿಸುವ ದಾಸ್ಯತ್ವವೊಂದನ್ನೇ ಬಯಸುವೆನು. ಅದು ರಹಸ್ಯವಾದುದು. ಇವೆಲ್ಲಕ್ಕಿಂತಲೂ ಸ್ವಾರಸ್ಯವಾದುದು.

ಉಪಚರಿಸುವುದೇ ಉತ್ತಮ ಧರ್ಮ. ಉನ್ನತ ಸತ್ಕರ್ಮ. ಉಪಚಾರಕ್ಕಿಂತ ಉತ್ಕೃಷ್ಟವಾದ ಉಪಾಸನವಿಲ್ಲ; ಉಪಶಾಂತಿಯಿಲ್ಲ. ಉಪಚಾರದಲ್ಲಿ ಅದರಲ್ಲಿಯೂ ಉಮಾಧವನ ಉಪಚಾರದಲ್ಲಿ ಹೆಚ್ಚಿನ ತೃಪ್ತಿಯಿದೆ.

"ಅಮೃತಕ್ಕೆ ಹಸಿವುಂಟೆ ? ಜಲಕ್ಕೆ ತೃಷೆಯುಂಟೆ ?
ಮಹಾಘನ ಪುರುಷಂಗೆ ವಿಷಯವುಂಟೆ ? ಸದ್ಗುರು ಕಾರುಣ್ಯವಂ
ಪಡೆದು ಲಿಂಗಾರ್ಚನೆಯಂ ಮಾಡುವ ಮಹಾಶರಣಂಗೆ
ಮುಕ್ತಿಯ ಬಯಕೆಯುಂಟೆ ? ಅವರುಗಳಿಗೆ ಅದು
ಸ್ವಯಂಭು ಸಹಜ ಸ್ವಭಾವ. ಇನ್ನು ತೃಪ್ತಿ ಆಪ್ಯಾಯನ ಮುಕ್ತಿ
ಅರಸಲುಂಟೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?"

ಲಿಂಗಾರ್ಚನೆಯು ಅದೊಂದು ಅಂತರಾತ್ಮನಿಗೆ ಮಹೋಪಚಾರ. ಅದರಿಂದ ಆತನು ಆನಂದಿತನಾಗಿ ಅನುಗ್ರಹಿಸುತ್ತಾನೆ. ವಿಶಾಲ ವಿಶ್ವಪ್ರಗತಿಯತ್ತ ತನ್ನ ಉಪಚಾರಕನ ಕೈವಿಡಿದು ನಡೆಯಿಸುತ್ತಾನೆ. ವಿಭೂತಿತ್ವಕ್ಕೇರಿಸುತ್ತಾನೆ.

ನಿರ್ಮೋಹರನ್ನಾಗಿ ನಿಸ್ಪೃಹರನ್ನಾಗಿ ರೂಪಿಸುತ್ತಾನೆ. ಋಜುಮಾರ್ಗಿಗಳನ್ನಾಗಿಸುತ್ತಾನೆ. ಮೂಜಗಕ್ಕೆ ಬೇಕಾದವರನ್ನಾಗಿಸುತ್ತಾನೆ. ಇದನ್ನೇ ಶಿವಧರ್ಮೋತ್ತರವು ಹೀಗೆ ಹೇಳಿದೆ:

"ಕ್ಷಣಂ ಕ್ಷಣಂ ಜನ್ಮವಿನಾಶವಂತಸ್ತಥಾ ಮನುಷ್ಯಾಃ ಪ್ರವದಂತಿ ದೇವಾಃ।
ದೇವಾ ದಿವಿಸ್ಥಾ ಮನುಜಾ ಭುವಿಸ್ಥಾಃ ಸರ್ವತ್ರಸಂಸ್ಥಾಃ ಶಿವಯೋಗ
ನಿಷ್ಠಾಃ ॥"

ದೇಹೋಪಾಸಕರು ಪ್ರತಿಕ್ಷಣದಲ್ಲಿ ಜನನ ಮರಣಗಳಿಗೆ ಗುರಿಯಾಗಿರುತ್ತಾರೆ. ಮನುಷ್ಯರೆಂದೆನಿಸುತ್ತಾರೆ. ದೇವತೆಗಳು ದೇವಲೋಕದಲ್ಲಿರುತ್ತಾರೆ; ಮನುಷ್ಯರು ಮರ್ತ್ಯಲೋಕದಲ್ಲಿರುತ್ತಾರೆ. ಆದರೆ ಶಿವಯೋಗನಿಷ್ಠರು ಎಲ್ಲೆಲ್ಲಿಯೂ ಇರುತ್ತಾರೆ. ಏಕೆಂದರೆ ಜಗದ್ಗುರು ರೇಣುಕಾಚಾರ್ಯರು ಅಪ್ಪಣೆಕೊಡಿಸಿದಂತೆ ಶಿವಯೋಗನಿಷ್ಠರು 'ಜಗದಾತ್ಮತ್ವಭಾವನೆ' ಯುಳ್ಳವರಾಗಿರುತ್ತಾರೆ. ಇವರ ವಿಶಾಲ ಹೃದಯಕ್ಕೆ ಯಾವುದೂ ದೂರಲ್ಲ: ದುಸ್ಸಾಧ್ಯವಲ್ಲ

"ಸ್ವರ್ಗಃ ಪಾದತಲೇ, ತಸ್ಯಕರಸ್ಥಾಃ ಸರ್ವಸಿದ್ಧಯಃ ।
ಸುಖಿಸ್ವೇಚ್ಛಾವತಾರಶ್ಚ ಮುಕ್ತೋ ಮಾಹೇಶ್ವರೋ ಜನಃ ॥"

—ಶಿವಧರ್ಮೋತ್ತರ.

ಸ್ವರ್ಗವೆಂಬುದು ಮಾಹೇಶ್ವರನ ಮಹಾಪಾದದಡಿಯಲ್ಲಿರುತ್ತದೆ. ಸಾಲೋಕ್ಯಾದಿ ಸಮಸ್ತ ಸಿದ್ಧಿಗಳು ಆತನ ಕರಸ್ಥಲದಲ್ಲಿರುತ್ತವೆ. ಮಾಹೇಶ್ವರರು ಇಚ್ಛಾವತಾರಿಗಳು. ಸದಾ ಸುಖಿಗಳು. ಸದ್ಯೋನ್ಮುಕ್ತರು. ಜಗದೀಶನಂತೆ ಜಗತ್ಕಲ್ಯಾಣಕಾರಕರು ಜಗತ್ಕಲ್ಯಾಣಕ್ಕಾಗಿ ಅವರ ಜೀವನ; ಅವರ ಸಾಧನ. ಜಗತ್ಕಲ್ಯಾಣಕಾರ್ಯದ ಮುಂದೆ ಸ್ವರ್ಗ ಸಿದ್ಧಿಗಳು ಅವರಿಗೆ ತೃಣ ಜಗತ್ಕಲ್ಯಾಣ ನಿರತನಿಗೆ ಅವೇ ವಶವಾಗಿರುತ್ತವೆ.

ಮಾಹೇಶ್ವರಾಂಗನು ಮಾಯಾ ಮೋಹಕ್ಕೆ ಮರುಳಾಗುವವನಲ್ಲ. ಮಾಯೆಯ ಬಲೆಗೆ ಬೀಳುವವನಲ್ಲ. ಅಶುದ್ಧ ಮಾಯೆಗೆ ಅವಿದ್ಯಾರೂಪ ಮಾಯೆಗೆ ಒಳಗಾಗುವವನಲ್ಲ. ಈ ಮಾಯೆ ಮರ್ತ್ಯವನ್ನು ತುಂಬಿದ್ದರೂ ಇದರ ಸೋಂಕಿಗೆ

ಹೋಗುವವನಲ್ಲ. ಇದರ ಸೆಳತಕ್ಕೆ ಸಿಕ್ಕುವವನಲ್ಲ. ಮಾಯಾ ಸಂಬಂಧ ರಹಿತನೆಂದರೆ ಮೋಹಕ್ಕೆ ಅಶುದ್ಧತೆಗೆ ಅವಿದ್ಯೆಗೆ ಒಳಗಾಗುವನಲ್ಲ ಎಂದರ್ಥ.

ಮಾಯೆಗೆ ಮುಖ ಅನಂತ. ಅದಕ್ಕೆ ವಶವಾಗುವವರು ಅನಂತ. ಶರೀರ ಇಂದ್ರಿಯ, ಮನ, ಸಂಸಾರ, ವಿಷಯ, ಆಸೆ, ಮಾನ, ಅಪಮಾನ, ಲಾಭ, ನಷ್ಟ, ಜಯ, ಅಪಜಯ, ಸುಖ, ದುಃಖ, ಹೊನ್ನು ಹೆಣ್ಣು, ಮಣ್ಣು ಹೀಗೆ ಹಲವು ಮುಖ ಮಾಯೆಗೆ! ಇವಕ್ಕೆ ಜಗತ್ರಯ ಜೋಲು ಬಿದ್ದಿದೆ. ಸಾಮಾನ್ಯರ ಸುದ್ದಿಯಿರಲಿ, ಸರ್ವಸಾಮಾನ್ಯರೂ ಮಾಯಾ ಜಾಲಕ್ಕೆ ಪಕ್ಕಾಗಿದ್ದಾರೆ. ವಾಸಿಷ್ಠದಲ್ಲಿ ಹೀಗೆ ಹೇಳಿದೆ ;

"ಇಂದ್ರಸ್ತ್ವಹಲ್ಯಾಂ ಗುರುಪತ್ನೀಂ ಚಂದ್ರೋ ವಿದೇಹಜಾಂ ವಿಸ್ತವಸಃ ಸುತಶ್ಚ ।
ತಾರಾಂ ಚ ವಾಲ್ಯುರ್ವಶಿಕಾಂ ವಿಭಾಂಡಃ ಪರಾಶರಃ ಸತ್ಯವತೀಂ ತಥೈವ॥
ಭ್ರಷ್ಟಾ ಬುಭೂವುರ್ಬಹವೋಽಪಿ ಮಾನ್ಯಾಶ್ಚಾಂಚಲ್ಯಯುಕ್ತಾ ಹಿ ತಥಾ ಭವಂತಿ ॥

"ನೋಡಿರೇ ಪೂರ್ವದತ್ತ; ವರುಣ ಹೆಳವ,
ರವಿ ಕುಷ್ಠ, ಶುಕ್ರನಂಧಕ, ಶನಿಗೆ ಸಂಕಲೆ, ಬಲಿಗೆ ಬಂಧನ,
ಸೀತೆಗೆ ದ್ರೌಪದಿಗೆ ಸೆರೆ. ಹರಿ ಹಂದಿಯಾದ,
ಅರ್ಜುನಂಗೆ ಲಜ್ಜೆ, ಬ್ರಹ್ಮನ ಶಿರ ಹೋಯಿತ್ತು.
ಬಲ್ಲಿದನೆಂಬನ ಕೆಡೆವಿಡಿಸದೆ ವಿಧಿ ?
ಜತ್ತಕನೆಂಬುವನ ಕತ್ತೆಯ ಮಾಡಿತ್ತು.
ದಶಮುಖನ ನಾಯಡೋಣಿಯಲ್ಲಣಿಸಿತ್ತು.
ದೇವೇಂದ್ರನ ಮೈಯ ನಾಣುಗೆಡಿಸಿತ್ತು,
ಶೂದ್ರಕನ ತಲೆಯ ಕಂಚಿಯಲ್ಲಿ ಕಟ್ಟಿತ್ತು.
ಕೂಡಲ ಸಂಗಮದೇವಾ
ನೀ ಮಾಡಿದ ಮಾಯೆ ಅನಂತರನಾಳಿಗೊಂಡಿತ್ತು."

ಮಾಯಾವಶರಾದ ಮಾನ್ಯರು ಪಟ್ಟಪಾಡಿದು ; ಕೆಟ್ಟ ಕೇಡಿದು. ಮಾಯಾಧೀನರಾದರೆ ಒಮ್ಮೆ ಕೆಡುವುದಲ್ಲ, ಜನ್ಮ ಜನ್ಮಾಂತರಗಳಲ್ಲಿಯೂ ಕೆಡುವ ಸ್ಥಿತಿ ಸಂಭವಿಸುತ್ತದೆ. ಜನ್ಮದುಃಖ ಜೀವನದುಃಖ ಮರಣದುಃಖಗಳನ್ನು ಅನುಭವಿಸಬೇಕಾಗುತ್ತದೆ. ಮತ್ತೆ ಮತ್ತೆ ಹುಟ್ಟಿ ಮತ್ತೆ ಮತ್ತೆ ಸಾಯಬೇಕಾಗುತ್ತದೆ. ಅಸಹಾಯಕರಾಗಿ ಅಲೆಯಬೇಕಾಗುತ್ತದೆ.

"ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಮೃತಃ ಪುನಃ ।
ನಾನಾಯೋನಿ ಸಹಸ್ರೇಷು ಮಾಯಾ ನಷ್ಟಾಸ್ತ್ವನೇಕಶಃ ॥

ಸತ್ತು ಹುಟ್ಟಿ, ಹುಟ್ಟಿ ಸತ್ತು ಹೀಗೆ ಹಲವು ಸಾವಿರ ಯೋನಿಗಳಲ್ಲಿ ಮಾಯಾಧೀನರಾಗಿ ಬಂದು ಹೋಗುತ್ತ ಬಳಲಿ ತೊಳಲುತ್ತ ಇರಬೇಕಾಗುತ್ತದೆ. ಕಾಯ ಮಾಯೆಗೆ ಒಳಗಾದವರ ಕತೆಯಿದು. ಈ ಕಾಯ ಮಾಯೆಗೆ ಸಿಕ್ಕದವರು ಅಕಾಯರು,

ಆವರಣ ವಿಕ್ಷೇಪ ಶಕ್ತಿಯುಳ್ಳ ಅನಾದಿ ಭಾವರೂಪವೆ ಅಜ್ಞಾನ. ಇದನ್ನೆ ಮಾಯಾ, ಅವಿದ್ಯಾ, ಪ್ರಕೃತಿ, ಪ್ರಧಾನ, ಅವ್ಯಕ್ತ ಮುಂತಾದ ಹೆಸರುಗಳಿಂದ ಕರೆಯುತ್ತಾರೆ ಅದ್ವೈತದಲ್ಲಿ ಅವುಗಳಿಗೆ ಬೇರೆ ಬೇರ ಗುಣ ಕರ್ಮಗಳನ್ನು ಹೇಳುವುದುಂಟು. ದೇಶಕಾಲಾದಿ ಸಾಮಗ್ರಿಯಿಲ್ಲದೆ ಇಂದ್ರಜಾಲದಿಂದ ದುರ್ಘಟಿಕ ಪದಾರ್ಥ ಉತ್ಪತ್ತಿಯಾಗುವುದು ; ಈ ಇಂದ್ರಜಾಲವನ್ನೇ 'ಮಾಯೆ' ಎನ್ನುತ್ತಾರೆ. ಬ್ರಹ್ಮ ವಿದ್ಯೆಯಿಂದ ವಿಲಯವಾಗುವುದೆ ಅವಿದ್ಯೆ. ಸ್ವರೂಪಾಚ್ಛಾದನ ಮಾಡುವುದೇ ಅಜ್ಞಾನ. ಸರ್ವ ಕಾರ್ಯಗಳನ್ನು ತನ್ನಲ್ಲಿ ಲೀನ ಮಾಡಿಕೊಂಡು ಪ್ರಳಯದಲ್ಲಿರುವ ಉದಾಸೀನ ರೂಪಕ್ಕೆ ಪ್ರಧಾನವೆನ್ನುವರು. ಸೃಷ್ಟಿಯ ಉಪಾದಾನಯೋಗ್ಯವಾದ ತಮೋಗುಣ ಪ್ರಧಾನವೇ ಪ್ರಕೃತಿ. ಪರಶಿವನಲ್ಲಿ ಅವಿನಾಭಾವವಾಗಿ ಇರುವುದೇ ಶಕ್ತಿ. ದೇಹಿಯಲ್ಲಿ ವ್ಯಕ್ತವಾಗದಂತಿರುವುದೆ ಅವ್ಯಕ್ತ. ಇಂದ್ರಜಾಲದಂತಿರುವ ಮಾಯಾ ಸಂಬಂಧ ಅಕಾಯನಿಗಿರಬಾರದು. ಇಲ್ಲದಿರುವವನೆ ಅಕಾಯ. ಅಕಾಯನಿಗೆ ಮಾಯಾ ಸಂಬಂಧದ ಯಾವ ಮದ ಮತ್ಸರಗಳಿರುವುದಿಲ್ಲ.

"ಕುಲಮದವೆಂಬುದಿಲ್ಲ—ಅಯೋನಿ ಸಂಭವನಾಗಿ !
ಛಲ ಮದ ವೆಂಬುದಿಲ್ಲ—ಪ್ರತಿದೋರದಾಗಿ !

ಧನ ಮದ ವೆಂಬುದಿಲ್ಲ—ತ್ರಿಕರಣ ಶುದ್ಧನಾಗಿ !
ವಿದ್ಯಾಮದವೆಂಬುದಿಲ್ಲ—ಅಸಾಧ್ಯವ ಸಾಧಿಸಿದನಾಗಿ !
ಮತ್ತಾವ ಮದವೆಂಬುದಿಲ್ಲ—ನೀನವಗ್ರಹಿಸಿದ ಕಾರಣ,
ಚನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣ ಅಕಾಯ ಚರಿತನಾಗಿ !

"ದೇಹ ನಿರ್ದೇಹವೆನುತಿಪ್ಪರಯ್ಯ. ದೇಹ ನಿರ್ದೇಹವೆಂಬ
ಮರ್ಮವನರಿಯರು ಅಹಂ ಎಂಬುದೇ ದೇಹ ನೋಡಾ;
ದಾಸೋಹಂ ಎಂಬುದೇ ನಿರ್ದೇಹ ನೋಡಾ.
ಅಕಾಯೋ ಭಕ್ತಕಾಯಸ್ತು, ಎಂದುದಾಗಿ ಅಹಂಭಾವ ಅಳಿದುಳಿದು
ದಾಸೋಹಿಗಳಾದವರ ಕೂಡಲ ಚನ್ನಸಂಗಯ್ಯನಲ್ಲಿ ನಿರ್ದೇಹಿಗಳೆಂಬೆನು."

ನಿರ್ದೇಹಿತ್ವದ ವಿಚಾರ ಇಲ್ಲಿ ಸೂಕ್ಷ್ಮವಾಗಿ ವಿವೇಚಿತವಾಗಿದೆ. ಅಹಂ ಎಂಬುದೂ ಒಂದು ಮಾಯಾರಚಿತ ಇಂದ್ರಜಾಲ; ಅದೂ ಸಹ ಒಂದು ದೇಹವೆನಿಸುತ್ತದೆ. ಅದಕ್ಕೆ ಒಳಗಾಗದೆ ದಾಸೋಹಂ ಭಾವಕ್ಕೆ ಒಳಗಾಗುವುದೇ ಅಕಾಯ ಸ್ಥಳ,

"ಪರಸ್ಯ ದೇಹಯೋಗೇಽಪಿ ನ ದೇಹಾಶ್ರಯ ವಿಕ್ರಿಯಾ ।
ಶಿವಸ್ಯೇವ ಯತಸ್ತಸ್ಮಾದಕಾಯೋಽಯಂ ಪ್ರಕೀರ್ತಿತಃ ॥"

ಶಿವನಿಗೆ ದೇಹವಿದ್ದರೂ ದೇಹ ವಿಕಾರಗಳಿರುವುದಿಲ್ಲ, ಅದರಂತೆ ಶಿವ ಯೋಗಿಗೆ ದೇಹವಿದ್ದರೂ ದೇಹಾಶ್ರಯ ವಿಕಾರಗಳಿರುವುದಿಲ್ಲ: ಇದರಿಂದ ಇವನು 'ಅಕಾಯನೆಂದು ಹೊಗಳಿಸಿಕೊಳ್ಳುತ್ತಾನೆ,

ದೇಹವಿಕಾರಗಳು ಕಾಮಕ್ರೋಧಾದಿಗಳು ; ಅವಿದ್ಯಾದಿ ಪಂಚಕ್ಲೇಶಗಳು. ತಾಮಸ ರಾಜಸ ಗುಣಗಳು. ಇವನ್ನೆಲ್ಲ ಬಿಟ್ಟಿರುವವನೆ ಅಕಾಯ.

ಮಾಂಸಾಸೃಕ್ಪೂಯ ವಿಣ್ಮೂತ್ರ ಸ್ನಾಯು ಮಜ್ಜಾಸ್ಥಿತ ಸಂಹತೌ !
ದೇಹೇ ಚೇತ್ ಪ್ರೀತಿಮಾನ್ಮೂಢೋ ಭವಿತಾ ನರಕೇಽಪಿ ಸಃ ॥"

ಪ್ರಾಕೃತಿಕ ದೇಹದಲ್ಲಿ ಯಾವ ಸಾರವಿಲ್ಲ. ಮಾಂಸ, ರಕ್ತ, ಕೀವು, ಮಲ, ಮೂತ್ರ ಮುಂತಾದವುಗಳಿಂದ ತನು ತುಂಬಿದೆ. ಇದನ್ನು ಪ್ರೀತಿಸಿ ಇದರಲ್ಲಿ ರಮಿಸುವವನು ಮೂಢನು ; ನರಕ ಭಾಜನನು,

ತನು ತ್ರಿದೋಷಗಳಿಂದ ಕೂಡಿದೆ. ಬೇನೆಗಳ ಬೀಡಾಗಿದೆ. ಶೀತೋಷ್ಣಗಳ ಸುಖದುಃಖಗಳ ತವರಾಗಿದೆ. ಕಿವಿ, ಕಣ್ಣು, ಮೂಗುಗಳಲ್ಲಿ ಕೊಳೆಗಳಿರುತ್ತವೆ. ಜ್ವರದ ಕಿಚ್ಚಿನಿಂದ ಬೇಯುತ್ತಿರುತ್ತದೆ. ಮುಪ್ಪಿನ ಮನೆಯಾಗಿದೆ. ಕಾಲ ಚಕ್ರಕ್ಕೆ ಸಿಕ್ಕಿ ಸುತ್ತುವರಿಯುತ್ತದೆ. ಕಾಮಾದಿ ಮಾನಸಿಕ ವಿಕಾರಗಳಿವೆ. ಹರಿದಾಟವಿದೆ. ವಿಕಲ್ಪಗಳಿವೆ. ಮಾಹೇಶ್ವರಾಂಗನು ಇವನ್ನೆಲ್ಲ ಬಿಟ್ಟಿರುತ್ತಾನೆ. ಬಿಡದಿದ್ದರೆ ಅಕಾಯತ್ವ ಸಿದ್ಧಿಸುವುದಿಲ್ಲ. ಸಿದ್ಧಿಸದಿದ್ದರೆ ಮಾಹೇಶ್ವರತ್ವ ಮೈಗೂಡುವುದಿಲ್ಲ.

"ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ,
ಮತಿಗೆಟ್ಟೆನು ಮನದ ವಿಕಾರದಿಂದ ;
ಧೃತಿಗೆಟ್ಟೆನು ಕಾಯ ವಿಕಾರದಿಂದ ;
ಶರಣು ಹೊಕ್ಕೆನು ಕಾಯೆಯ್ಯಾ ಕೂಡಲಸಂಗಮದೇವಾ !"

ಕಾಯೇಂದ್ರಿಯ ವಿಕಾರ ಸಣ್ಣದಲ್ಲ. ವಿಕಾರದಿಂದ ಒದಗುವ ನಷ್ಟ ಚಿಕ್ಕದಲ್ಲ. ದೇಹಧೃತಿ ಹಾಳಾಗುತ್ತದೆ. ಮನ ವಿಕಾರದಿಂದ ಮತಿ ಮಸಣಿಸುತ್ತದೆ. ಇಷ್ಟೇ ಅಲ್ಲ, ಕರಿಯು ಸ್ಪರ್ಶನೇಂದ್ರಿಯದಿಂದ ಬಂಧನ ವಡೆದಳಿಯಿತ್ತು. ಪತಂಗನು ರೂಪೇಂದ್ರಿಯದಿಂದ ಬಂಧನವಡೆದಳಿಯಿತ್ತು. ಭೃಂಗನು ಗಂಧೇಂದ್ರಿಯದಿಂದ ಬಂಧನವಡೆದಳಿಯಿತ್ತು. ಕುರಂಗನು ಶಬ್ಧೇಂದ್ರಿಯದಿಂದ ಬಂಧನವಡೆದಳಿಯಿತ್ತು. ಮತ್ಸ್ಯವು ರಸನೇಂದ್ರಿಯದಿಂವ ಬಂಧನವಡೆದಳಿಯಿತ್ತು. ಇಂತಿ ಒಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣಿಯು ಪ್ರಳಯಕ್ಕೊಳಗಾಯಿತ್ತು.

ಪಂಚೇಂದ್ರಿಯಗಳ ಒಂದು ಘಟದಲ್ಲಿ ತಾಳಿಹ ಮನುಷ್ಯ ಪ್ರಾಣಿಗಳಿಗೆ ಮರವೆ ಎಡೆಗೊಂಡು ದೇಹ ಮೋಹಭ್ರಾಂತು ಮುಸುಕಿ ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇಳಾ ಗುಹೇಶ್ವರಾ ?

ಪಂಚೇಂದ್ರಿಯವೆಂಬ ಪಾಪದ ಕೂಸು ಗಾಸಿಮಾಡಿ ಕಾಡುತ್ತಿದೆ ;
ಶಿವ ಶಿವಾ, ಏನು ಪರಿಯ ಸಂತಯಿಸಿದರೂ ಸಂತವಾಗದು,

ಮುದ್ದು ತೋರಿ ಬುದ್ಧಿಗೆಡಿಸಿತ್ತು.
ಅಲ್ಲಿ ಹುಸಿಯಾನೇ ಮುಸುಕಿ ಮುಸಿಮಣ್ಣ ಮಾಡಿತ್ತು.
ನಮ್ಮ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗಸಂಗಿಗಳಿಲ್ಲದ
ಅಧಮ ಮಾನವರ ಮರಳಾಟವನಾಡಿಸಿ ಕಾಡಿತ್ತು ನೋಡಾ !"

"ರೂಪ ಚಕ್ರ ನಯನದಿಂ ನಡೆವುದು. ಶಬ್ದ ಚಕ್ರ ಶ್ರೋತ್ರದಿಂ ನಡೆವುದಂ.
ಸೌರಭ ಚಕ್ರ ಘ್ರಾಣದಿಂ ನಡೆವುದಂ. ರುಚಿಚಕ್ರ ಜಿಹ್ವೆಯಿಂ ನಡೆವುದಂ.
ಸ್ಪರ್ಶ ಚಕ್ರ ತ್ವಕ್ಕಿನಿಂ ನಡೆವುದಂ. ಈ ಅಯ್ದರಿಂದ ನಡೆವುತ್ತ
ಲೋಕಾದಿ ಲೋಕಂಗಳೆಲ್ಲವು ಹೀಗೆಯೇ ಕೆಟ್ಟು ಹೋದವು.
ಈ ಅಯ್ದರ ಕಥನದಲ್ಲಿ ಈ ಸಂಸಾರವೆಂಬ ವಿಧಿಯ ಕೈಯಲ್ಲಿ
ಹರಿಬ್ರಹ್ಮಸುರರು ಮೊದಲಾದವರೆಲ್ಲರು
ಕೆಟ್ಟು ಹೋದರು ನೋಡಾ ಕೂಡಲ ಸಂಗಮದೇವಾ."

ಇದನರಿತ ಮಾಹೇಶ್ವರಾಂಗನು ದೈಹಿಕ ಐಂದ್ರಿಕ ವಿಕಾರಗಳನ್ನೆಲ್ಲ ವಿಸರ್ಜಿಸಿರುತ್ತಾನೆ.

ತನು ವಿಕಾರಗಳು ತೆರಣಿಯ ಹುಳದಿಂದ ಹುಟ್ಟಿದ ನೂಲಿನ (ಜೇಡಿನ) ಬಲೆಯಿದ್ದಂತೆ ! ಜೇಡ ಹುಳ ತನ್ನ ಆ ನೆಯ್ದ ನೂಲಿನಲ್ಲಿ ಸುತ್ತಿ ಸುತ್ತಿ ಸಾಯುವಂತೆ ತನು ವಿಕಾರಕ್ಕೊಳಗಾದವನು ಸಂಸಾರ ಚಕ್ರದಲ್ಲಿ ಸುತ್ತಿ ಸಾಯುತ್ತಾನೆ, ವಿಷಯಗಳಿಗೆ ಪರತಂತ್ರನಾಗಿ ದೋಷ ದೂಷಿತನಾಗುತ್ತಾನೆ. ಪಾಪ ಕರ್ಮಗಳೆಸಗುತ್ತಾನೆ. ಗುಣಹೀನನಾಗುತ್ತಾನೆ. ಚಾರಿತ್ರ ಹೀನನಾಗುತ್ತಾನೆ.

"ಕುಟುಂಬ ಚಿಂತಾಕುಲಿತಸ್ಯ ಪುಂಸಃ ಶ್ರುತಂಚ ಶೀಲಂಚ ಗುಣಾಶ್ಚ ಸರ್ವೇ। ಅಪಕ್ವ ಕುಂಭೇ ನಿಹಿತಾ ಇವಾಪಃ ಸ್ರವಂತಿ ದೇಹೇನ ಸಮಂ ವಿನಾಶಂ ॥

ದೇಹವನ್ನಾಶ್ರಯಿಸಿದ ಕೌಟುಂಬಿಕ ಚಿಂತನೆಯಲ್ಲಿ ವ್ಯಾಕುಲನಾದವನ ಶಾಸ್ತ್ರ, ಸಚ್ಚಾರಿತ್ರ, ಸಮಸ್ತಗುಣಶೀಲಗಳು ದೇಹದೊಡನೆ ಹಾಳಾಗುತ್ತವೆ. ಹಸಿಕೊಡದಲ್ಲಿ ತುಂಬಿದ ನೀರು ಕೊಡದೊಡನೆ ಸೋರಿ ಹೋಗುವಂತೆ ಹೋಗುತ್ತವೆ. ಈತನ ಯುಕ್ತಿ ಶಕ್ತಿಗಳು ಏನೂ ಕೆಲಸಮಾಡವು.

"ಹಗಲು ಹಸಿವೆಗೆ ಕುದಿದು, ಇರುಳು ನಿದ್ದೆಗೆ ಮರುಗಿ
ಉಳಿದಾದ ಹೊತ್ತೆಲ್ಲ ವಿಷಯದಲ್ಲಿ ಬೆಂದು,
ನಾ ನಿಮ್ಮ ದೆಸೆಯನರಿಯದ ಪಾಪಿ ನೋಡಯ್ಯಾ.
ನಾ ನಿಮ್ಮ ದೆಸೆಯನರಿಯದ ಕರ್ಮಿ ನೋಡಯ್ಯಾ.
ಮಹಾಲಿಂಗಕಲ್ಲೇಶ್ವರಾ,
ಅಸಗ ನೀರಡಿಸಿ ಸಾವ ತೆರನಂತೆ ಎನ್ನ ಯುಕ್ತಿ."

ಒಡಲ ಕಳವಳವನ್ನಿಟ್ಟುಕೊಂಡರೆ ಎಷ್ಟು ಹಗಲಿರುಳುಗಳಿದ್ದರೂ ಸಾಲವು. ಏನು ಮಾಡಿದರೂ ಸಾಲದು, ಇದರದೇ ವ್ಯಥೆ, ಇದರದೇ ಚಿಂತೆ. ಇವೇ ಹಾಸು ಹೊಕ್ಕಾಗಿರುತ್ತವೆ. ಇವೇ ಹಾಸು ಹೊದಿಕೆಯಾಗುತ್ತವೆ.

ಜನ್ಮ ವಿಕಾರ, ಕರ್ಮ ವಿಕಾರ ಎಂದು ದೇಹವಿಕಾರಗಳು ದ್ವಿವಿಧ. ಜನ್ಮದೊಡನೆ ಬಂದವು ಸ್ವಾಭಾವಿಕವಾದವು ಇವು ಪರಂಪರೆಯಿಂದ ಬಂದಿರುತ್ತವೆ. ಕರ್ಮದಿಂದ ಬಂದವು ಕೃತಕಗಳು. ವಾತಾವರಣ ದೋಷದಿಂದ ಸಂಗದೋಷದಿಂದ ಅಜ್ಞಾನ ದೋಷದಿಂದ ಕರ್ಮವಿಕಾರಗಳುಂಟಾಗುತ್ತವೆ.

"ಸ್ಥೌಲ್ಯಂ ಕಾರ್ಶ್ಯಂ ವ್ಯಾಧಯಶ್ಚ ಕ್ಷುತ್ತೃಡ್ವೈರ ಭಯಾನಿ ಚ ।
ಪ್ರೀತಿರ್ಜರಾಚ ನಿದ್ರಾಚ ಮೋಹಶೋಕ ರತಿರ್ಮದಾಃ ।
ಶರೀರೇ ಸಂತಿ ಜಾತಸ್ಯ ಮಾನವಸ್ಯೇತಿ ನಿಶ್ಚಿತಂ ॥"

—ಸೂತಸಂಹಿತೆ

ಸ್ಥೂಲತೆ, ಕೃಶತೆ. ಬೇನೆ, ಹಸಿವು, ನೀರಡಿಕೆ, ಹಗೆತನ, ಹೆದರಿಕೆ, ಒಲುಮೆ ಮುಪ್ಪು, ನಿದ್ದೆ, ಮೋಹ, ಶೋಕ, ರತಿ, ಸೊಕ್ಕು, ಸಿಟ್ಟು ಮುಂತಾದವು ಸ್ವಾಭಾವಿಕ ವಿಕಾರಗಳು ; ಅಂದರೆ ತಾಯಿ ತಂದೆಗಳ ರಕ್ತದಿಂದ ಬಂದವುಗಳು. ಇವನ್ನು ಹೆಚ್ಚಿಸಿಕೊಳ್ಳುವಿಕೆಯೂ ಬಾಳಿನಲ್ಲಿ ನಡೆಯುತ್ತದೆ. ಬೇರೆ ಕೆಲವು ವಿಕಾರಗಳನ್ನು ಬರಮಾಡಿಕೊಳ್ಳುವುದೂ ಸಹ ಮೂರ್ಖತನವಾಗಿದೆ. ಇವಿದ್ದರೆ ಸಾಮಾನ್ಯ ಶರೀರಿಯೆನಿಸುತ್ತಾನೆ. ಇವನ್ನೆಲ್ಲ ಗೆದ್ದರೆ ಅಕಾಯನೆನಿಸುತ್ತಾನೆ: ಅಮರ ಜೀವಿಯಾಗುತ್ತಾನೆ. ಇವನ್ನು ಜಯಿಸುವ ಉಪಾಯವಿದು :

"ವ್ಯಾಪಾರಂ ಸಕಲಂ ತ್ಯಕ್ತ್ವಾ ಪೂಜಯಧ್ವಂ ಸದಾಶಿವಂ ।
ನಿಕಟಾ ಏವ ದೃಶ್ಯಂತೇ ಕೃತಾಂತನಗರ ದ್ರುಮಾಃ ॥"

ಓ ಮಾನವರೆ ! ಎಲ್ಲ ಬಗೆಯ ವ್ಯಾಪಾರ ವ್ಯವಹಾರಗಳನ್ನು ಬಿಟ್ಟು ಯಾವಾಗಲೂ ಶಿವಲಿಂಗವನ್ನು ಅರ್ಚಿಸಿರಿ ! ಅದೋ ನೋಡಿ : ಯಮ ನಗರದ ಗಿಡಮರಗಳು ಹತ್ತಿರದಲ್ಲಿಯೇ ಕಾಣಬರುತ್ತಿರುವವು. ಅಂದರೆ ಮುಪ್ಪು ಮೃತ್ಯುಗಳು ಮೈಗೂಡಿ ಬಂದಿವೆ. ಇನ್ನಾದರೂ ವಿಕಾರ ಹೇತುಗಳಾದ ವ್ಯಾಪಾರಗಳಿಂದ ದೂರಾಗಿರಿ. ಶಿವನ ಬಳಿ ಸದಾ ವಾಸವಾಗಿ ಇರುವುದನ್ನು ಕಲಿಯಿರಿ. ಇದರಿಂದ ಕಾಯವಿಕಾರಗಳೆಲ್ಲ ಕಳೆದು ಹೋಗಿ ಶಿವಕಳೆ, ಶಾಂತಿ ಗಳುಂಟಾಗುತ್ತವೆಯೆಂದು ವಾತುಲತಂತ್ರ ಉಪದೇಶಿಸಿದೆ.

ವಿಕಾರ ಕಾರಣಗಳು ವಿಷಯಗಳು. ವಿಷಯಗಳು ವಿಶ್ವದಲ್ಲಿ ಎಲ್ಲೆಲ್ಲಿ ಪ್ರಸರಿಸಿವೆ. ಇವುಗಳಿಗಾಗಿ ಎಳಸುತ್ತವೆ ಕರಣೇಂದ್ರಿಯಗಳು. ಎಳಸಿ ಎದೆಗೆಡುತ್ತವೆ. ಏಕಾಗ್ರತೆಯನ್ನು ಕಳೆದುಕೊಳ್ಳುತ್ತವೆ. ಹೀಗಾಗುವುದು ಸಾಮಾನ್ಯ ವಾಗಿ ಆತ್ಮಬಲವಿಲ್ಲದ ದೇಹಿಗಳ ದುರ್ಗುಣ ಮತ್ತು ದುರ್ಬಲತೆ. ವಿಕಾರ ಹೇತೌ ಸತಿ ವಿಕ್ರಿಯಂತೇ ಏಷಾಂನ ಚೇತಾಂಸಿ ತ ಏವ ಧೀರಾಃ "ಎಂಬ ಕಾಳಿದಾಸ ಕವಿಯ ಉಕ್ತಿಯಂತೆ ಇರುವವನೇ ಅಕಾಯ, ಅವಿಕಾರಿ, ಆತನೇ ವೀರ. ಆದರೆ ಈ ಬಗೆಯ ಧೀರರು ಅಪರೂಪ. ಒಡಲ ವಿಕಾರಕ್ಕೆ ವೈಷಯಿಕ ವಿಕಾರಕ್ಕೆ ಸಾಂಸಾರಿಕ ವಿಕಾರಕ್ಕೆ ಒಳಗಾಗುವವರೆ ಬಹಳ. ನಿತ್ಯ ಇದೇ ಬದುಕಾಗಿರುತ್ತದೆ.

"ಇಂದಿಂಗೆಂತು ನಾಳಿಂಗೆಂತೆಂದು ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ. ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ. ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ. ಏದೆಂದು ಸದಾಶಿವನ ಕುಂದದೆ ನನೆಯ ಲೀಯದೆ ಕೊಂದುದೀ ಮಾಯೆ ಕೂಡಲಸಂಗಮದೇವಾ."

"ದೇಹ ಧರ್ಮದಾಸೆ ಬೇರೆ, ಭಕ್ತಿಯಿಲ್ಲದ ಬೇಗೆ ಬೇರೆ; ಎನಗೆಂದೇ ಮಾಡಿದರೇ ಈ ಸಕಲ ಪ್ರಪಂಚವನು ? ಎನಗೆಂದೇ ಮಾಡಿದರೇ ಈ ಸಕಲ ವ್ಯಾಪಾರಂಗಳನು ? ಎನಗೆ ನಿಶ್ಚಿಂತ ಪದವಿಯನಿನ್ನೆಂದಿಗೀವೆಯಯ್ಯಾ ಸಕಳೇಶ್ವರಾ ?" "ಬಂಟತನವ ಮಾಡಬೇಕೆಂದು, ಬಟ್ಟೆಯ ಬಡಿಯಬೇಕೆಂದು, ಕೆಟ್ಟುದ ನರಸಬೇಕೆಂದು, ಕೊಟ್ಟುದ ಬೇಡಬೇಕೆಂದು, ಮುಂಜಾವದಲೇಳುವರ

ಹಲಬರು-ಕೆಲಬರು: ಆಹಾರವನುಣಬೇಕೆಂದು ವ್ಯವಹಾರವ ಮಾಡಬೇಕೆಂದು ಆ ಹೆಣ್ಣ ತರಬೇಕೆಂದು, ಈ ಹೆಣ ಕೊಡಬೇಕೆಂದು-ಮುಂದುಜಾವದಲೇಳು ವರು ಹಲಬರು-ಕೆಲಬರು. ತಂದೆ ಸೊಡ್ಡಳಂಗೆ ತೊತ್ತು ಸೇವೆಯ ಮಾಡ ಬೇಕೆಂದು ಕಣ್ಣ ತೆರವುತ್ತಲೇಳುವರು ಅಲ್ಲಿಗಲ್ಲಿಗೊಬ್ಬರು."

ಮೊದಲನೆಯ ಮಂತ್ರದಲ್ಲಿ ಉಕ್ತವಾದ 'ಔಪಚಾರಿಕ ದೇಹಿತ್ವಾತ್' ಎಂಬ ಮಾತಿಗೆ ಈ ಕೊನೆಯ ವಚನ ಭಾಷ್ಯದಂತಿದೆ. ಶಿವಾರ್ಚನೆಯ ರೂಪ ಶಿವನ ಸೇವೆಯಿಂದ ಜಗತ್ತಿನ ಜನತೆಯ ಉಪಚಾರದಿಂದ ಮಾಯಾಮೋಹ ಸಂಹಾರದಿಂದ ಮಾಹೇಶ್ವರನು ತನ್ನ ದೇಹವಿಕಾರಗಳನ್ನು ಕಳೆದುಕೊಳ್ಳಬೇಕು. ಕಳೆದುಕೊಂಡರೆ 'ಅಕಾಯ'ನೆನಿಸುತ್ತಾನೆ. ಆ ಶಿವಸ್ವರೂಪನೆನಿಸುತ್ತಾನೆ.

"ಪರಲಿಂಗೇ ವಿಲೀನಸ್ಯ ಪರಮಾನಂದ ಚಿನ್ಮಯೇ ।
ಕುತೋ ದೇಹೇನ ಸಂಬಂಧೋ ದೇಹೀವದ್ಭಾಸನಂ ಭ್ರಮಃ ॥
ದೇಹಾಭಿಮಾನ ಹೀನಸ್ಯ ಶಿವಭಾವೇ ಸ್ಥಿರಾತ್ಮನಃ ।
ಜಗದೇತಚ್ಛರೀರಂ ಸ್ಯಾದ್ದೇಹೇನೈಕೇನ ಕಾ ವ್ಯಥಾ॥"

ಆ ಪರಶಿವಲಿಂಗ ಪರಮಾನಂದ ಸ್ವರೂಪ, ಚಿನ್ಮಯ-ರೂಪ. ಅಂತಹದ ರಲ್ಲಿ ತಲ್ಲೀನನಾದವನಿಗೆ ತನು ಸ್ನೇಹ ಎಲ್ಲಿಯದು ? ನೋಡುವವರಿಗೆ ದೇಹಿ ಯಂತೆ ಕಂಡರೂ ಆತನು ದೇಹಮೋಹಿಯಲ್ಲ; ದೇಹಿಯಲ್ಲ. ದಿವ್ಯದೃಷ್ಟಿಯಿಲ್ಲ ದವರು ಆತನನ್ನು ದೇಹವುಳ್ಳವನೆಂದು ತಿಳಿದರೆ ಹೇಳಿದರೆ ಅದು ಭ್ರಮೆ.

ದೇಹಾಭಿಮಾನವನ್ನು ದೂರಮಾಡಿ, ದೇವಭಾವದಲ್ಲಿ ದೃಢವಾಗಿ ಮನ ಒಗ್ಗೂಡಿ ಇರುವ ಮಾಹೇಶ್ವರನಿಗೆ ಈ ಜಗತ್ತೇ ಶರೀರವಾಗಿರುತ್ತದೆ. ಅಂತಹ ಮಹಾತ್ಮನಿಗೆ ತನ್ನ ದೇಹದಿಂದ ದುಃಖ ಎಂದಿಗೂ ಉಂಟಾಗದು. ತನ್ನ ವ್ಯಷ್ಟಿ ದೇಹ ಭಾವವೇ ಇಲ್ಲದ ಬಳಿಕ ದೇಹದಿಂದಾಗುವ ವಿಕಾರವಾಗುವ ಮಾತೆಲ್ಲಿ ?

ಆನಂದದಲ್ಲಿ ಮೈಮರೆಯಬೇಕಲ್ಲದೆ ಮತ್ತಾವುದರಲ್ಲಿ ಮೈಮರೆಯು ಲಾಗುವುದಿಲ್ಲ. ಅದರಲ್ಲಿಯೂ ಆ ಪರಮಾನಂದದಲ್ಲಿ ಮುಳುಗಿರುವಾಗ ಅಂಗದ ಹಂಗೆಲ್ಲಿ ? ಅರಿವೆಲ್ಲಿ ? ಆಗ ಕಾಯ-ಜೀವಗಳೆರಡರ ಹೊಲಿಗೆ ಬಿಚ್ಚಿ ಹೋಗಿ ಅಚ್ಚಸೊಗದಲ್ಲಿ ತಾನೇ ತಾನಾಗಿರುತ್ತಾನೆ. ಕಾಯ-ಜೀವಗಳ ಹೊಲಬೂ

ಇರುವುದಿಲ್ಲ. ಅದು ಕುರುಹಿಲ್ಲದ ಠಾವ. ಅರುಹಿಲ್ಲದ ಠಾವ. ಅದು ಹೇಳಿಕೆ–ಕೇಳಿಕೆಗಳೊಂದೂ ಇಲ್ಲದ ಠಾವ. ಅಲ್ಲಿ ಆ ಅಚ್ಚಳಿಯದ ಆನಂದದಲ್ಲಿ ಅವಿರಳನಾದ ಮಾಹೇಶ್ವರನ ಮೈ ಇರುವುದು ಹೆಸರಿಗೆ ಮಾತ್ರ! ತೊರೆಯಲ್ಲಿ ತೆರೆ ಅಡಗಿರುವಂತೆ ಅಡಗಿರುತ್ತದೆ. ಇದ್ದೂ ಇಲ್ಲದಂತಿರುತ್ತದೆ. "ಸಾಕಾರ ನಿರಾಕಾರದೊಳಗೆ ಚಿದ್ರೂಪವತಳೆದ ಮಹಾ ಮಹಿಮನಿರವು, ಬೆಳದಿಂಗಳೊಳಗಣ ಅಚ್ಚ ಪಳುಕಿನ ಪರ್ವತದ ಬೆಳದಿಂಗಳೆಂಬಂತಿರ್ಪುದು. ಆ ಸ್ಫಟಿಕದ ಘಟದೊಳಗಣ ಜ್ಯೋತಿಯಂತೆ ಸದ್ಭಾವ ಪ್ರಕಾಶಿಸಲು ಒಳಹೊರಗೆಂಬುದಿಲ್ಲ ಸೌರಾಷ್ಟ್ರ ಸೋಮೇಶ್ವರನ ಶರಣಂಗೆ."

ಒಳಗೆ ತೊಳಗುವ ಜ್ಯೋತಿಯುಳ್ಳ ಸ್ಫಟಿಕದ ಕೊಡ ಜ್ಯೋತಿರೂಪಾಗಿಯೇ ಇರುವಂತೆ ಅಕಾಯನ ಕಾಯವಿರುತ್ತದೆ. ಹುಣ್ಣಿಮೆಯ ಹಾಲುಬೆಳದಿಂಗಳಲ್ಲಿರುವ ಬೆಳ್ಳಿಯ ಬೆಟ್ಟ ಬೆಳದಿಂಗಳಂತೆಯೇ ತೋರುವಂತೆ ಆ ಪರಮಾನಂದ ಚಿನ್ಮಯನಲ್ಲಿರುವವನ ಕಾಯ ಅದರಂತೆಯೇ ಆಗಿರುತ್ತದೆ. ಅಂದರೆ ಚಿದ್ರೂಪನಿಗೆ ಕಾಯವಾವುದು ? ಜೀವವಾವುದು ? "ಪ್ರತಿಯಿಲ್ಲದ ಲಿಂಗದಲ್ಲಿ ಪ್ರತಿರಹಿತವಾದ ಮಹಿಮನಿಗೆ ಅತಿಶಯವೊಂದಿಲ್ಲವಾಗಿ ಸಂಸ್ಕೃತಿ ವಿಸ್ಮೃತಿಗಳಿಲ್ಲ, ಸೂಕ್ಷ್ಮಾಸೂಕ್ಷ್ಮವಿಲ್ಲ; ಯೋಗ ವಿಯೋಗವಿಲ್ಲ. ಅಭೇದ್ಯ ಚಿತ್ಪ್ರಕಾಶಂಗೆ ಒಳಗಿಲ್ಲ ಹೊರಗಿಲ್ಲ, ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣಂಗೆ!"

ಚಿದಾನಂದರೂಪಾದ ಆ ಲಿಂಗಕ್ಕೆ ಪ್ರಪಂಚದಲ್ಲಿ ಪ್ರತಿಯಿಲ್ಲ. ಅದು ಏನನ್ನಾದರೂ ಒಳಗೊಳ್ಳಬಲ್ಲುದು. ಅಂತಹ ಲಿಂಗವನ್ನು ತನ್ನೊಳಗೆ ಅಳವಡಿಸಿಕೊಂಡ ಮಹಿಮನಿಗೆ ಅಕಾಯನಾಗಿರುವುದೊಂದು ಅತಿಶಯವಲ್ಲ. ಆತನು ಕೃತಿ ಸ್ಮೃತಿಗಳನ್ನು ಮೀರಿ, ಸೂಕ್ಷ್ಮಾಸೂಕ್ಷ್ಮಗಳನ್ನು ತೂರಿ, ಯೋಗ ವಿಯೋಗಗಳಿಲ್ಲದಂತಿರುತ್ತಾನೆ. ಅಭೇದ್ಯ ಚಿತ್ಪ್ರಕಾಶ ತಾನಾಗಿರುತ್ತಾನೆ. ಆತನಿಗೆ ಒಳಗೆ ಜೀವ ಭಾವವಿಲ್ಲ; ಹೊರಗೆ ಕಾಯಭಾವವಿಲ್ಲ. ಅಂಥವನಿಗೆ ದೇಹ ಸಂಬಂಧವೆಂದರೇನು ? ಆತನು ದೇಹಿಯಂತಿರುವನೆಂದು ಹೇಳುವುದೆಂದರೇನು ? ಹೇಳಿದರೆ ಅದು ಭ್ರಾಂತಿಯೆಂದು ಹೇಳದೆ ವಿಧಿಯಿಲ್ಲ.

ಮಹಾಘನ ನೆಲೆಗೊಂಡಿಪ್ಪ ಶರಣನ ನೆಲೆ ಎಂತಿಪ್ಪದೆಂದರೆ, ನೆಲದ ಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ, ಮುಗಿಲ ಮರೆಯ ಮಿಂಚಿ

ನಂತೆ, ನೀರೊಳಗಣ ಕಿಚ್ಚಿನಂತೆ, ಕಾಷ್ಠದೊಳಗಣ ಅಗ್ನಿಯಂತೆ, ತೃಣದೊಳ ಗಡಗಿದ ಚೈತನ್ಯದಂತೆ ಈ ವಿಶ್ವದೊಳು ಇದ್ದು ಇಲ್ಲದಂತಿಪ್ಪ ಮಹಾಘನವ ನಿಮ್ಮ ಶರಣರು ಬಲ್ಲರಲ್ಲದೆ, ಮರ್ತ್ಯದ ಮರಣ ಬಾಧೆಗೊಳಗಾದ ಮಂನುಜರೆತ್ತ ಬಲ್ಲರು ಬಸವ ಪ್ರಿಯ ಕೂಡಲ ಚನ್ನಬಸವಣ್ಣ ?"

ನಿಧಾನ ನೆಲದಂತೆ ಕಾಣುವುದು, ತೈಲ ತಿಲದಂತೆ ತೋರುವುದು, ಮಿಂಚು ಮುಗಿಲಂತೆ ಇರುವುದು, ಕಿಚ್ಚು ನೀರಿನಂತೆ-ಚೈತನ್ಯ ತೃಣದಂತೆ ತೋರುವುದು ಹೇಗೆ ಸಹಜವೋ ಹಾಗೆ ಆ ಪರಮಾನಂದ ಚಿನ್ಮಯದಲ್ಲಿದ್ದ ಕಾಯ ಅದರಂತೆ ತೋರುವುದು ಸಹಜವಾಗಿದೆ. ಇದಕ್ಕೆ ಮೀರಿ ದೇಹದಂತೆ ಇದೆಯೆಂದರೆ ಸಹಜಕ್ಕೆ ವಿರೋಧವಾಗಿ ಭ್ರಾಂತಿಯೆನಿಸುತ್ತದೆ. ಇದನ್ನು ಸಾಮಾನ್ಯರು ಅರಿಯರು, ಶಿವನು ವಿಶ್ವದೊಳಗಿದ್ದು ಇಲ್ಲದಂತಿರುವಂತೆ ಆಕಾಯನು ಕಾಯದಲ್ಲಿದ್ದು ಇಲ್ಲದಂತಿರುತ್ತಾನೆಂಬುದನ್ನು ಶರಣರು ಅರಿವರು.

"ಕಾಯಸಂಗ ನಿಸ್ಸಂಗವಾಗಿ, ಇನ್ನಾವ ಸಂಗವನರಿಯೆನಯ್ಯ. ಮಿಗೆ ಒಲಿದೆನಾಗಿ ಅಗಲಲಾರೆನಯ್ಯಾ. ನಗೆಮೊಗದರಸಾ ಅವಧಾರು ; ಕೂಡಲ ಸಂಗಮದೇವಾ ಬಗಿದು ಹೋಗುವೆನು ನಾ ನಿಮ್ಮ ಮನವ."

ತನು ಸಂಗವನ್ನು ತೊರೆವುದೇ ತ್ಯಾಗಾಂಗನ ತಾತ್ತ್ವಿಕತೆ. ತನುಭಾವವನ್ನು ತೊಡೆವುದೇ ತ್ಯಾಗಾಂಗನ ಸಲ್ಲಕ್ಷಣ. ಅಂತಾದಾಗ ತ್ಯಾಗಾಂಗನು ಆ ನಗೆಮೊಗದರಸನ ಅಂದರೆ ಆ ಪರಮಾನಂದನ ಸ್ವರೂಪನಾಗುವನು ; ಅಕಾಯನೆನಿಸುವನು. ಉಳಿದೆಲ್ಲ ಆನಂದಗಳಿಗಿಂತ ಆ ಪರಮಾನಂದ ಸ್ವರೂಪನಾಗುವುದು ಹೇಗೆ ಅಗತ್ಯವೋ ಅಂತೆಯೇ ಉಳಿದೆಲ್ಲ ಜ್ಞಾನಗಳಿಗಿಂತ ಆ ಚಿನ್ಮಯ ಸ್ವರೂಪನಾಗುವುದೂ ಆಕಾಯನಿಗೆ ಅಗತ್ಯ,

ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ ಕೇಳಿರಯ್ಯ ! ಜ್ಞಾನವೆಂದರೆ ಮಹತ್ತಗಳ ಮಾಡಿ ಮೆರೆದುದು ಜ್ಞಾನವೇ ?—ಅಲ್ಲಲ್ಲ. ಜ್ಞಾನವೆಂದರೆ ಸ್ವರ್ಗದ ವಾರ್ತೆಯ ಕೇಳಿ ಕೀರ್ತಿಯ ಹಬ್ಬಿದುದು ಜ್ಞಾನವೇ?-ಅಲ್ಲಲ್ಲ, ಜ್ಞಾನವೆಂದರೆ ತತ್ಕಾಲಕ್ಕಾಗುವ ಸುಖದುಃಖಗಳ ಹೇಳಿದುದು ಜ್ಞಾನವೇ ? ಅಲ್ಲಲ್ಲ, ಇವೆಲ್ಲ ಸಾಧನೆಯ ಮಾತು. ಅಘೋರ ಮುಖದಿಂದ ಹುಟ್ಟಿದ ಮಂತ್ರಗಳೆಲ್ಲ ಜಪಿಸಿದಲ್ಲಿ ಮಹತ್ವಗಳಾದವು. ಸೂಕ್ಷ್ಮತಂತ್ರ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು. ಪ್ರಸಂಗ ಚಿಂತಾಮಣಿಯ ನೋಡಿ ಸುಖ ದುಃಖಗಳ ಹೇಳಿದನು,

ಇವೆಲ್ಲ ಸಾಧನೆಯಯ್ಯ. ನಿನ್ನರಿವು ಕೈಕರಣವಾಗಿರೆ, ದೇಹವಳಿದರೇನು, ದೇಹ ಧರಿಸಿ ಬಂದರೇನು, ಎಲೆ ಅಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನ ?"

ಈ ವಚನದಲ್ಲಿ ಪರಶಿವನ ಅರಿವೇ ಅರಿವು. ಅದು ಅಳವಟ್ಟವನಿಗೆ ದೇಹ ವಿದ್ದರೂ ನಿರ್ದೇಹತ್ವವುಂಟಾಗುತ್ತದೆಯೆಂದು ನಿರೂಪಿಸಲಾಗಿದೆ.

ಜಗಚ್ಛರೀರಂ : ಅಕಾಯನಾದ ಮಾಹೇಶ್ವರನು ಜಗಚ್ಛರೀರಿಯಾಗಿರುವ ನೆಂಬ ಮಾತು ಮಾಹೇಶ್ವರನ ವೈಶಾಲ್ಯ ಜೀವನ ಸೂಚಕವಾಗಿದೆ. ಜಗದಾತ್ಮ ನಾಗಿ ಜಗತ್ತಿನ ಕಲ್ಯಾಣಕ್ಕಾಗಿ ಜೀವಿಸಿರುವ ಮಾಹೇಶ್ವರತ್ವ ಸಾರ್ಥಕವಾದುದೇ ಸರಿ. ತನ್ನ ಕಾಯ ಕಾಯವಲ್ಲ, ಜಗತ್ತೇ ತನ್ನ ಕಾಯವೆಂದು ತಿಳಿದು ಜಗತ್ತಿನ ಯೋಗ ಕ್ಷೇಮಕ್ಕಾಗಿ ಹಗಲಿರುಳು ಹಂಬಲಿಸುವ ಮಾಹೇಶ್ವರನು ಮಹಾತ್ಮ ನಲ್ಲದೆ ಮತ್ತೇನು ? ಜಗದಾತ್ಮನಲ್ಲದೆ ಇನ್ನೇನು ? ವ್ಯಷ್ಟಿಯಾಗಿ ಸೃಷ್ಟಿಯಾಗಿ ದ್ದರೂ ವ್ಯಷ್ಟಿ ದೇಹ ಮೋಹನಿವ್ವಟ್ಟುಕೊಳ್ಳದೆ ಸಮಷ್ಟಿ ಸೃಷ್ಟಿಯಲ್ಲಿ ಸ್ವಕೀಯ ಶಾರೀರ ದೃಷ್ಟಿಯನ್ನಿಟ್ಟುಕೊಂಡ ಮಾಹೇಶ್ವರನ ತ್ಯಾಗ ಮಹತ್ತರವಾದುದು ; ಮನನೀಯವಾದುದು. ತನ್ನ ದೇಹ ವ್ಯಥೆಗೆ ಮನ ಕಿಂಚಿತ್ತಾದರೂ ಅಳುಕದೆ ಇರುವ ಆತನ ಸಮತ್ವಯೋಗ–ಸಹನಯೋಗ ಆದರ್ಶವಾದವು. ಜಗತ್ತಿನ ವ್ಯಥೆಯೇ ತನ್ನ ವ್ಯಥೆ, ಜಗತ್ತಿನ ಸುಖವೇ ತನ್ನ ಸುಖವೆಂದು ತ್ರಿಕರಣ ಪೂರ್ವಕವಾಗಿ ತಿಳಿದು, ತಿಳಿದಂತೆ ಆಚರಿಸುವ ಮಾಹೇಶ್ವರನು ನಿಜಕ್ಕೂ ಈಶ್ವರ ನಿಗಿಂತ ಇಮ್ಮಿಗಿಲನು

ಭಕ್ತದೇಹಿಕ ಈಶ್ವರನಾದರೆ ಜಗದ್ದೇಹಿಕ ಮಾಹೇಶ್ವರ. ಈಶ್ವರನಿಗೆ ಭಕ್ತವಾತ್ಸಲ್ಯವಿದ್ದರೆ ಅಕಾಯನಾದ ಮಾಹೇಶ್ವರನಿಗೆ ಜಗದ್ವಾತ್ಸಲ್ಯವಿದೆ. ಈಶ್ವರ ಭಕ್ತನಿಂದ ಪೂಜ್ಯನಾದರೆ ಮಾಹೇಶ್ವರಾಂಗನು ಜಗತ್ತಿನಿಂದ ಪೂಜ್ಯನಾಗುತ್ತಾನೆ ಅಂತೆಯೇ ಈತನು ಜಗದ್ಗುರುವಾಗಬಲ್ಲನು; ಆಗುತ್ತಾನೆ.

ಅಕಾಯನು ತನ್ನ ಅಭಿಮಾನವನ್ನು ತೊರೆದು ಬಾಳುವುದರಿಂದ ಈ ವಿಶಾಲ ಸೋಪಾನವನ್ನೇರುತ್ತಾನೆ. 'ಅಭಿಮಾನವಿನಿರ್ಮುಕ್ತೋ ವರ್ತತೇ ಶ್ರುತಿಮೂ ರ್ಧನಿ' ನಿರಭಿಮಾನಿಯ ನೀಳಾದ ನಿಲವಿದು,

ಜಗತ್ತು ಬೇರಲ್ಲ; ಜಗದೀಶ ಬೇರಲ್ಲ. ಶಿವನು ಜಗನ್ಮಯನು. ಶಿವನೇ ಈ ಜಗವಾಗಿದಾನೆ. ಅಂತೆಯೇ ಜಗತ್ತು ಶಿವಮಯವಾಗಿದೆ. 'ಸರ್ವಂ ಶಿವ ಮಯಂ ಜಗತ್' ಎಂಬುದನ್ನು ಅಕಾಯನಾದ ಮಾಹೇಶ್ವರಾಂಗನು ಮನದಟ್ಟಾಗಿಸಿ

ಕೊಂಡವನು. ಆದರಿಂದಾಗಿ ಆತನು ಜಗತ್ಕಾಯನಾಗಿ ಜೀವಿಸುವನು. ಶಿವ ಜಗನ್ಮಯನಾಗಿರುವಾಗ ಅಂತಹ ಶಿವಮಯ ಜಗತ್ತನ್ನು ತನ್ನ ಕಾಯವನ್ನಾಗಿಸಿ ಕೊಳ್ಳುವಲ್ಲಿ ಔಚಿತ್ಯವಿಲ್ಲದಿಲ್ಲ. ಶಿವಭಾವವು ಸ್ಥಿರವಾಗುವುದಕ್ಕೆ ಇನ್ನೂ ಸಹಾಯಕವಾಗುತ್ತದೆ.

"ಅಂಗವು ಲಿಂಗವೇಧೆಯಾದಬಳಿಕ
ಅಂಗವೆಲ್ಲವು ನಷ್ಟವಾಗಿ ಲಿಂಗತನ್ಮಯವಿಪ್ಪದಾಗಿ
ದಿಟದಿಂದಿಪ್ಪ ಸಜ್ಜನಕ್ಕೆ ಬೇರೆ ಅಂಗವುಂಟೆ ಲಿಂಗವಲ್ಲದೆ ?
ಇದುಕಾರಣ, ಸೌರಾಷ್ಟ್ರಸೋಮೇಶ್ವರನ
ಶರಣರು ನಿರ್ದೇಹಿಗಳು."

"ಶಿವಾಜ್ಞಾನೈಕನಿಷ್ಠಸ್ಯ-ನಾಹಂಕಾರಭವೋ ಭ್ರಮಃ ।
ನ ಚೇಂದ್ರಿಯ ಭವಂ ದುಃಖಂ ತ್ಯಕ್ತದೇ ಹಾಭಿಮಾನಿನಃ ॥
ನ ಮನುಷ್ಯೋ ನ ದೇವೋಽಹಂ ನ ಯಕ್ಷೋ ನೈವರಾಕ್ಷಸಃ ।
ಶಿವೋಽಹಮಿತಿ ಯೋಬುದ್ಧ್ಯಾತ್ತಸ್ಯ ಕಿಂ ದೇಹಕರ್ಮಣಾ ॥"

ಪರಿಪೂರ್ಣವಾದ ಶಿವಜ್ಞಾನನಿಷ್ಠನಿಗೆ ಪರಿಚ್ಛಿನ್ನವಾದ ಅಹಂಕಾರವಿಲ್ಲ, ದೇಹದ ಅಭಿಮಾನವಿಲ್ಲ; ಇಂದ್ರಿಯಜನ್ಯ ವೇದನೆಯಿಲ್ಲ.

ನಾನು ಮರ್ತ್ಯದ ಮನುಷ್ಯನಲ್ಲ, ಸ್ವರ್ಗದ ಸುರನಲ್ಲ, ಯಕ್ಷನಲ್ಲ, ರಾಕ್ಷಸನೂ ಅಲ್ಲ. ನಾನು ಸಾಕ್ಷಾತ್ ಶಿವಸ್ವರೂಪನು-ಎಂಬುದು ಅಳವಟ್ಟ ಆಕಾಯನಿಗೆ ಕಾಯಕರ್ಮಗಳಿಂದ ಪ್ರಯೋಜನವಿಲ್ಲ,

"ತೋರಿ ಕೆಡುವ ದೇಹ ನಾನೆಂದು ನಂಬದಿರಾ ಮನವೆ.
ತೋರುವ ಅರಿವು ನಾನೆಂದು ನಂಬು ಕಂಡೆಯಾ ಮನವೆ.
ತೋರಿ ಕೆಡುವುದು ಮಾಯಾತ್ಮಕವು ಮನವೆ,
ತೋರಿ ತೋರುವುದದು ನಿರುಪಾಧಿಕ ನಿಜಾನಂದ
ಕಪಿಲಸಿದ್ಧ ಮಲ್ಲಿಕಾರ್ಜುನ ಕಂಡೆಯಾ ಮನವೆ."

ಶಿವಜ್ಞಾನವೇ ಪರಮಾರ್ಥಜ್ಞಾನ; ಪರಿಪೂರ್ಣಜ್ಞಾನ. ಅದೊಂದನ್ನು ಅರಿತರೆ ಉಳಿದುದನ್ನೆಲ್ಲ ಅರಿತಂತೆ! ಅದನರಿತು ಅದರಲ್ಲಿಯೇ ನಿಷ್ಠೆನೆಲೆಗೊಂಡ

ಬಳಿಕ ಆತ್ಮಾಹಂಕಾರ;ಇಂದ್ರಿಯ ದುಃಖ, ದೇಹಾಭಿಮಾನಗಳಿಗೆ ಇಂಬಿರುವುದಿಲ್ಲ. ಅದು ನಿರುಪಾಧಿಕ ಅರಿವು ದೇಹೇಂದ್ರಿಯಜ್ಞಾನ ಔಪಾಧಿಕಜ್ಞಾನ. ಅಂದರೆ ಕುರುಹಿನ ಅರಿವು. ಇದರಿಂದ ಮರಹು ಅಳಿಯದು. ಶಿವಜ್ಞಾನವಾದಲ್ಲಿ ಮರಹು ಅಳಿದು ಅರುಹು ಸಹ ನಿಷ್ಪತ್ತಿಗೊಳ್ಳುವುದು.

"ಅರಿವು ಮರಹಳಿದುದಕ್ಕೇನು ದೃಷ್ಟ? ಭಾವಭ್ರಮೆಯಳಿದುದೇ ದೃಷ್ಟ. ಭಾವಭ್ರಮೆಯಳಿದುದಕ್ಕೇನು ದೃಷ್ಟ? ಮನದ ಸಂಚಲವಳಿದುದೇ ದೃಷ್ಟ. ಮನದ ಸಂಚಲವಳಿದುದಕ್ಕೇನು ದೃಷ್ಟ? ತನುವಿಕಾರವಳಿದುದೇ ದೃಷ್ಟ. ತನು ವಿಕಾರವಳಿದುದಕ್ಕೇನು ದೃಷ್ಟ? ಪರಮಸುಖವಿಂಬುಗೊಂಡುದೇ ದೃಷ್ಟ, ಪರಮಸುಖವಿಂಬುಗೊಂಡುದಕ್ಕೇನು ದೃಷ್ಟ? ಸೌರಾಷ್ಟ್ರಸೋಮೇಶ್ವರನೆಂಬ ನಿಜ ತತ್ತ್ವವಂಗವಾದುದೇ ದೃಷ್ಟ."

ಈ ವಚನ ಅಕಾಯಸ್ಥಳದ ಸ್ವರೂಪವನ್ನು ಸ್ಫುಟವಾಗಿ ವಿವರಿಸುತ್ತ ಮುಂದಿನ ಪರಕಾಯವಾಗಿರುವಿಕೆಯನ್ನು ಚೆನ್ನಾಗಿ ನಿರೂಪಿಸಿದೆ. ನಿಜತತ್ತ್ವ ದಲ್ಲಿ ನಿಂದವನಿಗೆ ಸ್ಥೂಲದೇವವನ್ನಾಶ್ರಯಿಸಿ ಬರುವ ಮಾನವ ದೇವ ದಾನ ವತ್ವಾದಿನಾಮಗಳಿರುವುದಿಲ್ಲ. ಜತೆಗೆ ದೇಹವಿಡಿದು ಬರುವ ಕರ್ಮಗಳು ಇರುವು ದಿಲ್ಲ. ನಾಮರೂಪಕ್ರಿಯೆಗಳಿಲ್ಲದ ಮೇಲೆ ಸಂಸಾರವೂ ಇರುವುದಿಲ್ಲ.

"ಅರಿವು ಮರಹಳಿದು ನಿಜದಲ್ಲಿ ನಿಂದ ನಿರ್ಧರಂಗೆ ಬೇರೆ ಸಂಸಾರವುಂಟೆ? ಮತ್ತೊಂದರಲ್ಲಿ ತೊಡಕುಂಟೆ? ಇಲ್ಲವಾಗಿ ನಿರ್ದೇಶವೆಂಬುದು ಬೇರಿಲ್ಲ. ತಾನು ತಾನಾದಬಳಿಕ ಸೌರಾಷ್ಟ್ರಸೋಮೇಶ್ವರ ಲಿಂಗ ಬೇರಿಲ್ಲ"

"ಪಂಚತತ್ತ್ವಂಗಳ ವಿಡಿದಾಡುವ ಚತುರ್ದಶೇಂದ್ರಿಯ, ವಿಕಾರಂಗಳು ತಾನಲ್ಲ ತನ್ನವಲ್ಲ; ತನುವಿನವೆಂದಡೆ ಅಹಮಾದಿಗೆ ಸಂದು, ಬಂಧ ಮೋಕ್ಷಂಗಳಿ ಗೊಳಗಾಯಿತ್ತು ನೋಡಾ! ಕುರುಹಿಲ್ಲದ ಲಿಂಗ ಅರುವಿನೊಳು ಬಳಿಸಂದಡೆ, ಅರಿವು ಕುರುಹು ತೆರಹಿಲ್ಲದೆ ನಿಂದ ನಿಲವು ಸೌರಾಷ್ಟ್ರಸೋಮೇಶ್ವರಾ ನಿಮ್ಮ ನಿಜ ತಾನಾದ ಶರಣ."

'ಶಿವಜ್ಞಾನೈಕನಿಷ್ಠಸ್ಯ' ಎಂಬ ಮಂತ್ರಕ್ಕೆ ಈ ಎರಡು ವಚನಗಳು ಉತ್ತಮ ವ್ಯಾಖ್ಯಾನಗಳಾಗಿವೆ. ಮೊದಲಿನದು ಅಕಾಯನಿಗೆ ಶಾರೀರಕ ಸಂಸಾರವಿಲ್ಲೆಂದು ಬೇರೆ ಇನ್ನಾವ ತೊಡಕಿಲ್ಲೆಂದು, ತೋರುವ ಅರಿವ ವಸ್ತುವೆ ಇಲ್ಲೆಂದು ತಿಳಿಸಿದೆ. ಎರಡನೆಯ ವಚನವು 'ನ ಚೇಂದ್ರಿಯಭವಂ ದುಃಖಂ' ಎಂಬುದನ್ನು ವಿಸ್ತರಿಸಿದೆ.

ಅಂತೆಯೇ 'ತ್ಯಕ್ತದೇಹಾಭಿಮಾನಿನಃ' 'ನಾಹಂಕಾರಭವೋಭ್ರಮಃ' ಎಂಬೆರಡು ಪಾದಗಳ ಆಶಯವನ್ನು ಅಭಿವ್ಯಕ್ತಿಗೊಳಿಸಿ 'ಕುರುಹಿಲ್ಲದ ಲಿಂಗ,.....'ಎಂಬಲ್ಲಿಂದ 'ಶಿವಜ್ಞಾನೈಕನಿಷ್ಠಸ್ಯ' ಎಂಬ ಪ್ರಥಮ ಪಾದಾನುಭವವನ್ನು ಚೆನ್ನಾಗಿ ಹೊರ ಹೊಮ್ಮಿಸಿದೆ.

"ಮಲವ ಜಲ ತೊಳೆಯಲುಂಟಲ್ಲದೆ, ನಿರ್ಮಲವ ಜಲ ತೊಳೆಯಲುಂಟೆ? ತವರಾಜ ಹಗಿನವಾಗ (ವಿಷವಾಗ)ಬಲ್ಲುದೆ? ಮುತ್ತು ನೀರಾಗಬಲ್ಲುದೆ? ಸಹಸ್ರ ನಯನ, ಚತುರ್ಮುಖ, ಅಧೋಕ್ಷಜ, ರುದ್ರಪದವನತಿಗಳೆದು ಭಾವಬ್ರಹ್ಮವಾದ ಅಕಾಯಚರಿತಂಗೆ ಪೂರ್ವಕ್ರಿಯೆಗಳುಂಟೆ ? ತನುಗುಣ ಮನಗುಣವಳಿದ್ದ ಲಿಂಗದೇಹಿ ನಿರ್ದೇಹಿ, ಅಪ್ರತಿಮ ನಿತ್ಯಜ್ಯೋತಿಯೊಳಗೆ ನಿಃಪತಿಯಾದ ಸೌರಾಷ್ಟ್ರಸೋಮೇಶ್ವರ ಲಿಂಗದೊಳಿಪ್ಪ ಅಪ್ರತಿಮ ಶರಣ."

"ಹುರಿದು ಬಿತ್ತಿದ ಬೀಜ ಮೊಳೆದೋರದಂತೆ, ಜ್ಞಾನಕಾಯಂಗೆ ಬಹುಕಾಯವಿಲ್ಲ. ಅರುಹಿನ ಮುಂದಿನ ಕುರುಹು ಅರಿವನವಗ್ರಹಿಸಿ ಜ್ಞಾನ ನಿಷ್ಪತ್ತಿಯಾಯಿತ್ತು. ಸೌರಾಷ್ಟ್ರ ಸೋಮೇಶ್ವರ ಲಿಂಗವೆಂಬ ಕುರುಹು ಮರೆದ ಕಾರಣ ನಿಃಶೂನ್ಯನಿರ್ಗಮನವಾಯಿತ್ತು."

"ಅಸ್ತಿ ಭಾತಿ ಪ್ರಿಯವೆಂಬ ತ್ರಿವಾಕ್ಯದಿಂದಿಲ್ಲವಾದುದಿಲ್ಲ. 'ಅಪ್ರಮಾಣ ಅಗೋಚರ ಅತ್ಯತಿಷ್ಠದ್ದಶಾಂಗುಲ ಅಭೇದ್ಯ' ದಿಂದ ನಾಮರೂಪುಗಳುಂಟಾದುದಿಲ್ಲ. ಇದು ಕಾರಣ ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನಲ್ಲ, ಮೂರ್ತನಲ್ಲ, ಭಾವಿಯಲ್ಲ, ಪ್ರಾಣಿಯಲ್ಲ. ........ ಅರಿವೆ ತಾನಾಗಿ ಲಿಂಗದಲ್ಲಿ ಸಂದು, ಭೇದವಿಲ್ಲದಿಪ್ಪರಯ್ಯ! ಸೌರಾಷ್ಟ್ರ ಸೋಮೇಶ್ವರಾ, ನಿಮ್ಮ ಶರಣರು."

"ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆ ಮೊಲೆಗಳ ನೋಡಿ ಸಲಹಿದಿರಾಗಿ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಧರ್ಮದವಳಾನು."

"ಅಕಾಯ ಸನ್ನಿಹಿತವಾಯಿತ್ತಲ್ಲಾ ! ಅಕಾಯ ಆಳವಟ್ಟಿತಲ್ಲಾ: ಅಕಾಯ ನಿಂದು ನಿವಾಸವಾಯಿತಲ್ಲಾ! ಕೂಡಲ ಚನ್ನಸಂಗನ ನಿಂದೆ ನಿಂದಿತ್ತಲ್ಲಾ!"

# ಪರಕಾಯ ಸ್ಥಳ

ದೇಹ ನೆಲ್ಲು. ಸಕಾಯ ಅಕ್ಕಿ. ಅಕಾಯ ಅನ್ನ. ಪರಕಾಯ ಪ್ರಸಾದ. ಪ್ರಸಾದವೆ ಪರಬ್ರಹ್ಮ. ಆದ್ದರಿಂದ ಪರಕಾಯನು ಪರಬ್ರಹ್ಮ ಸ್ವರೂಪ.

ಪರಕಾಯನೆಂದರೆ ಭಿನ್ನ ಕಾಯವಲ್ಲ. ಬೇರೆ ಮೈಯೊಳಗೆ ಹೋಗುವುದಲ್ಲ; ಮತ್ತೊಂದಾಗುವುದಲ್ಲ. ದೂರ ಸಾರುವುದಲ್ಲ, ಪರ ಎಂದರೆ ಶ್ರೇಷ್ಠ. ಸರ್ವ ಶ್ರೇಷ್ಠವಾದುದು ಆ ಪರವಸ್ತು. ಅದುವೆ ತಾನಾಗುವುದು ಪರಕಾಯ ಸ್ಥಳದ ಗುಟ್ಟು.

ಪರಕ್ಕೆ ಪರ ಆ ವಸ್ತು. ನಿರತಿಶಯವಾಗಿರುವುದರಿಂದ ಆದು ಪರತರ ವೆನಿಸಿದೆ. ಮತ್ತು ಅದನ್ನು ಉಪಾಸಿಸುವವನ ಆರೆಕೊರೆಗಳನ್ನು ತುಂಬುತ್ತದೆ ಅದು. ಅದು ಪರಿಪೂರ್ಣವಸ್ತು. ಪರಕಾಯನಾಗುವುದೆಂದರೆ ಪೂರ್ಣರೂಪ ನಾಗುವುದು. ಪರಕಾಯನಾಗುವುದರಿಂದ ಜೀವನ ಪೂರ್ಣವಾಗುತ್ತದೆ. 'ಪೂರ್ಯತೇ ಅನೇನೇತಿ ಪರಃ' ಎಂದು ವಿಗ್ರಹಿಸಬಹುದು.

ತಾನಾದುದು ಆ ಪರವಸ್ತುವಿನಿಂದ. ಅದನ್ನು ಬಿಟ್ಟರೆ ತನಗಿಲ್ಲ ಪರಿ ಪೂರ್ಣತೆ ; ನಡುವೆ ತನಗೊದಗಿದ ಅಪರಸ್ವರೂಪ ಅಶಾಶ್ವತ ; ಅನಿಶ್ಚಿತ. ಇದ ನರಿದು ಆ ಪರವಸ್ತುವಿನ ಪರಿಣಾಮದಲ್ಲಿ ಇರಗಲಿಯಬೇಕು. ಪರಕಾಯನಾಗ ದಿದ್ದರೆ ಪರತಂತ್ರನಾಗಬೇಕಾಗುತ್ತದೆ. ಪರಕಾಯನಾದರೆ ಸರ್ವಸ್ವತಂತ್ರನಾಗು ತ್ತಾನೆ. ಆದರೊಡವೆರಸಿ ಅವಿರಳನಾಗಿ ಆ ಪರಮ ಜ್ಞಾನವಿಂಬುಗೊಂಡು ಆ ಪರಮಾಶ್ರಯದಲ್ಲಿ ಪರಿಪೂರ್ಣನಾಗುವನು ; ಪರಮಾರ್ಥ ಸ್ವರೂಪನಾಗುವನು.

"ಪರಿಪೂರ್ಣ ಪರತತ್ತ್ವದಿಂದೊಗಿದ ಆನಂದ ಭರಿತ
ಪ್ರತ್ಯಕ್ಷ ಪರಮಾರ್ಥನಯ್ಯ.
ಆಗು ಹೋಗಿಲ್ಲದಸಾಧ್ಯವನೇನೆಂದುಪಮಿಸಬಹುದಯ್ಯಾ ?
ಅಪ್ರತಿಮ, ಸ್ವತಂತ್ರ, ನಿರಾಳಭರಿತ–ಸೌರಾಷ್ಟ್ರ
ಸೋಮೇಶ್ವರನ ಶರಣ ನಿಜ ನಿಂದ ಸಹಜನಯ್ಯ !"

"ಪರದಿಂದಾದ ಅಪರ ಸ್ವರೂಪಂಗೆ ಉಪಾಧಿ ಎಂಬುದಿಲ್ಲ,
ಸಂಸಾರವಿಲ್ಲ, ಸ್ಮೃತಿ ಮತಿ ಇಲ್ಲವಾಗಿ,
ಒಳಗಿಲ್ಲ, ಹೊರಗಿಲ್ಲ, ಸ್ವಯಭರಿತನಾಗಿ, ತಾನು ತಾನಾಗಿ.
ನಿಂದ ಸಹಜಂಗೆ ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ."

ತತ್ತ್ವ ಪರಾಪರವೆಂದು ಇಬ್ಬಗೆ, ಅಪರತತ್ತ್ವವು ಪರತತ್ತ್ವದಿಂದಾಗಿದೆ. ಪರತತ್ತ್ವ ಪರಿಪೂರ್ಣ, ಆನಂದಭರಿತ, ಪ್ರತ್ಯಕ್ಷ ಪರಮಾರ್ಥ. ಅದು ಆಗು ಹೋಗಿಲ್ಲದ ಅಸಾಧ್ಯ. ಅದನ್ನು ಉಪಮಿಸಲು ಅಶಕ್ಯ. ಅದು ಅಪ್ರತಿಮ ಸ್ವತಂತ್ರ,ನಿರಾಳಭರಿತ. ಅಪತತ್ವವಾದರೋ ಅಪರಿಪೂರ್ಣ, ಸುಖ ದುಃಖಮಿಶ್ರಿತ ಪ್ರಪಂಚ ಸಹಿತ, ಆಗುಹೋಗಂಗಳಿಂದ ಕೂಡಿ ಸಾಧ್ಯ, ಉಪಮಿತ, ಪ್ರತಿಮಾನ್ವಿತ ಅಸ್ವತಂತ್ರ, ಸುರಾಳ ಸಹಿತ. ಕಾರಣ ಆ ಪರತತ್ವೋಪಾಸನೆಯನ್ನು ಮಾಡಿ ಅಪರತತ್ವವನ್ನು ಮೀರಬೇಕು. "ಅಂಗದ ಕಳೆ ಲಿಂಗಸಂಗವಾಗಿ, ಅಂಗವೆಂಬ ಶಂಕೆಯ ಭಂಗವ ತೊರೆದು, ಲಿಂಗಾಂಗಸಂಗವೆಂಬ ಸಂದ ಮೀರಿ, ಪರಮ ಪ್ರಕಾಶದಿಂದ ಬೆಳಗುವ ಸ್ವಯಂ ಜ್ಯೋತಿ ನಿಜದಲ್ಲಿ ನಿಂದು, ತನ್ಮಯರಾದ ಪರಮಲಿಂಗಕಾಯರು ಸಚ್ಚರಿತ್ರರು ನಿಶ್ಚಿಂತರು, ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು."

ಅಂಗದ ಕಳೆ ಲಿಂಗದಲ್ಲಿ ಬೆರೆದು ಅಂಗಶಂಕೆ ಭಂಗವಾಗದೆ ಲಿಂಗಾಗ ಸಮರಸ ಸಂದ ಮೀರದೆ ಪರಕಾಯರೆನಿಸಲು ಸಾಧ್ಯವಿಲ್ಲ. ಆ ನಿರಾಳ ಪರತತ್ತ್ವವನ್ನು ಆರಾಧಿಸುವುದು ಅಸಾಧ್ಯ. ಆ ಪರತತ್ತ್ವ ಸ್ವರೂಪ ಗುರುತತ್ತ್ವವನ್ನು ಪರಕಾಯನಾಗಬಯಸುವವನು ಆರಾಧಿಸಬೇಕು. "ಪರತತ್ತ್ವ ಪರಬ್ರಹ್ಮ ಪರಶಿವನಪ್ಪ ಮಂತ್ರಮೂರ್ತಿ ಸದ್ಗುರು ಕಣ್ಣ ಮುಂದಿರಲು, ಸದಾ ಗುರುಸೇವೆಯಳವಟ್ಟು, ಗುರು ಶುಶ್ರೂಷೆಯ ಮಾಡುವ ಶಿಷ್ಯಂಗೆ, ಆ ಸದ್ಗುರು ಸೇವೆಯೇ ಚತುರ್ವಿಧ ಫಲ. ಗುರುಸೇವೇಯೇ ಚತುರ್ವಿಧ ಮುಕ್ತಿ. ಗುರು ಸೇವೆಯೇ ಅಷ್ಟ ಮಹದೈಶ್ವರ್ಯ. ಗುರುಸೇವೆಯೇ ಅಷ್ಟ ಭೋಗಂಗಳ ಅನುಭೋಗ. ಇದು ಕಾರಣ ಸದ್ಗುರು ಸೇವೆಯೇ ಸದ್ಯೋನ್ಮುಕ್ತಿ ಸೌರಾಷ್ಟ್ರ ಸೋಮೇಶ್ವರಾ!"

ಕಾಣುವ ಪರತತ್ತ್ವವೆಂದರೆ ಪರಬ್ರಹ್ಮನೆಂದರೆ ಶ್ರೀಗುರು. ಮಂತ್ರಮೂರ್ತಿ. ಈತನ ಸೇವೆ ಶುಶ್ರೂಷೆಗಳೇ ಶಿಷ್ಯನಿಗೆ ಪರತರ, ಪರತಮ. ಈತನ ಈ ಅಪರಕಾಯ ಪರಕಾಯವಾಗುತ್ತದೆ.

ಪರಶಕ್ತಿಯಲ್ಲಿ ಪರಶಿವನೊಂದಾಗಿ ಪರಮಗುರು ಉದಯವಾಗುವನು. ಪರಾ–ಪರರಿಂದ ಬಂದ ಗುರು ಪರವಸ್ತುವಲ್ಲದೆ ಬೇರಲ್ಲ. ಈತನಿಗೆ ಈ ಜಗದ ಪಶುತ್ವ, ಪಾಶ, ಮಲ ಮಾಯ, ಕರ್ಮಾದಿಗಳು ಹೊದ್ದವು. ಈತ ನಿತ್ಯ ನಿರ್ಮಲ. ಪರಾತ್ಪರ. ಪರಶಿವ ಚೈತನ್ಯ ಸ್ವರೂಪ. ಇಂತಹ ಶ್ರೀಗುರು ಶುಶ್ರೂಷೆಯಿಂದ ಶಿಷ್ಯನಿಗೆ ಪರಕಾಯತ್ವಪ್ರಾಪ್ತಿ.

ಶ್ರೀಗುರು ಸಂಸ್ಕಾರಕರ್ತ, ಶಿಷ್ಯ ಭರ್ತ ; ಪ್ರಸನ್ನ ತೇಜೋಮೂರ್ತಿ. ಪರಮ ಕೃಪಾಮೂರ್ತಿ. ಈ ಶ್ರೀಗುರುವಿನ ಕಳಾಮಯ ದೀಕ್ಷೆಯಿಂದ ದೇಹ ಭಾವ ತೊಲಗುತ್ತದೆ. ಕ್ರಿಯಾಮಯ ಕಾಯವಾಗುತ್ತದೆ. ಮಂತ್ರಮಯ ವಾಗುತ್ತದೆ. ಜ್ಞಾನಮಯವಾಗುತ್ತದೆ. ಲಿಂಗಸಂಗದಲ್ಲಿದ್ದು ಪೂರ್ವಾಶ್ರಯ ವಾದ ಪ್ರಾಕೃತಿಕತೆಯನ್ನು ಕಳಕೊಂಡು ಪರವೆನಿಸುತ್ತದೆ

"ಅಂಗ ಗುಣವುಂಟೆ ಲಿಂಗವನೊಳಕೊಂಡ ನಿರಂಗ ಸಂಗಿಗೆ ?
ಆತ್ಮಗುಣವುಂಟೆ ಪರಮಾತ್ಮ ಲಿಂಗ ಸಂಬಂಧಿಗೆ ?
ಅಹಂಭಾವವುಂಟೆ ತಾನೆಂಬ ಭಾವವಳಿದು,
ದಾಸೋಹಂ ದಾಸೋಹಂ ಎಂಬ ನಿರ್ಮಲ ನಿರಾವರಣಂಗೆ ?
ಸಂದೇಹಾವರಣಂ ಎಂದೂ ಇಲ್ಲ ನೋಡಾ !
ತಾನೆಂದೆಂದೂ ಇಂದುಧರನಂಗದಲ್ಲಿ ಉದಯವಾಗಿ ಬಂದನಾಗಿ,
ಹುಟ್ಟಿದ ಬಟ್ಟೆಯ ಮೆಟ್ಟಿ ನಡೆದು, ಹುಟ್ಟಿದಲ್ಲಿಯೇ
ಹೊಂದುವಾತನೇ ಮಾಹೇಶ್ವರನು ಕಾಣಾ,
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ !"

"ತೈಲ ಬತ್ತಿ ಜ್ಯೋತಿಯು ಮುಟ್ಟಿ ಜ್ಯೋತಿಯಪ್ಪುದು ನೋಡಾ !
ಸದ್ಭಕ್ತಿ ಸ್ನೇಹಮೋಹದಿಂದ ಲಿಂಗಸ್ಪರುಶನವ ಮಾಡಿ,
ಆ ಭಕ್ತನ ದೇಹ ಮನ ಕರಣಂಗಳೆಲ್ಲವು ಲಿಂಗವಾದವು ನೋಡಾ !
ಲಿಂಗವ ಮುಟ್ಟಿ ಮತ್ತೊಂದೇನುವ ಮುಟ್ಟದ ನಿರ್ಮೋಹಿಯ
ಮಾಹೇಶ್ವರನೆಂಬೆನು ಕಾಣಾ, ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೆ !"

ಗುರುಕರುಣೆಯಿಂದ ಬಂದ ಲಿಂಗ ಜ್ಯೋತಿರ್ಮಯವಾದುದು. ಅದನ್ನು ಸೋಂಕಿದ ತನು ಅದೇ ಆಗುತ್ತದೆ, ಆತ್ಮ ಪರಮಾತ್ಮವಾಗುತ್ತದೆ. ಪ್ರಾಕೃತಿಕ ಮಾಯೆ ಪರಿಹಾರವಾಗುತ್ತದೆ. ಅಂತರಂಗದಲ್ಲಿ ಅರುಹು ತುಂಬಿ ಬಹಿರಂಗದಲ್ಲಿ ಕ್ರಿಯಾರೂಪ ಕುರುಹು ತುಂಬಿ ತುಳುಂಕುವಾತನು ಪರಕಾಯನೆನಿಸಲು ಸಮರ್ಥನಾಗುತ್ತಾನೆ-

ಅರುಹಿನ ಜ್ಯೋತಿಯಿದ್ದಿತ್ತು, ಶರೀರವನೆಲ್ಲ ತುಂಬಿತ್ತು ; ಮರವೆಯ ತಮ ಹರಿಯಿತ್ತು ; ಕರಣಂಗಳ ತುಂಡರಿಸಿತ್ತು. ವಿಷಯಗಳ ಶಿರವನರಿಯಿತ್ತು ; ದಶವಿಧೇಂದ್ರಿಯಂಗಳ ದಾಳಿಯಂ ನಿಲಿಸಿತ್ತು. ಪಂಚ ಮಹಾ ಭೂತಂಗಳ ಪ್ರಪಂಚುವ ಪರಿಹರಿಸಿತ್ತು. ಬ್ರಹ್ಮವೇ ತಾನೆಂಬ ಕುರುಹ ಮೈಗಾಣಿಸಿತ್ತು. ತಾನೆಂಬ ಕುರುಹನಳಿದ ಅವಿರಳ ಸಹಜನು ಭಕ್ತನು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !"

ಶ್ರೀಗುರು ಕೃಪಾಕಟಾಕ್ಷ ಜ್ಯೋತಿ ಹೊರಹೊಮ್ಮಿ ಶಿಷ್ಯನಲ್ಲಿ ಹೊಕ್ಕು ಏನ ಮಾಡಬಲ್ಲುದೆಂಬುದನ್ನು ಈ ವಚನ ಸಂಪೂರ್ಣವಾಗಿ ಸುಂದರವಾಗಿ ವಿಶ್ಲೇಷಿಸಿದೆ.

"ವಶೀಕೃತತ್ವಾತ್ ಪ್ರಕೃತೇರ್ಮಾಯಾ ಮಾರ್ಗಾತಿವರ್ತನಾತ್ ।
ಪರಕಾಯೋಽಯಮಖ್ಯಾತಃ ಸತ್ಯ ಜ್ಞಾನ ಸುಖಾತ್ಮಕ: ॥
ಪರಬ್ರಹ್ಮ ವಪುರ್ಯಸ್ಯ ಪ್ರಬೋಧಾನಂದ ಭಾಸುರಂ ।
ಪ್ರಾಕೃತೇನ ಕಿಮೇತೇನ ಶರೀರೇಣಾಸ್ಯ ಜಾಯತೇ ॥"

ಆಕಾಯ ಸಿದ್ಧಿಯನ್ನು ಪಡೆದ ಮಾಹೇಶ್ವರಾಂಗನು ಪ್ರಕೃತಿಯನ್ನು ವಶಪಡಿಸಿಕೊಂಡಿದ್ದಾನೆ, ಮಾಯೆಯಿಂದುಂಟಾಗುವ ಅವಿದ್ಯಾಮಾರ್ಗವನ್ನು ಮೀರಿರುತ್ತಾನೆ. ವಿದ್ಯಾನಿಷ್ಠೆಯಲ್ಲಿ ಮುಂದಡಿಯಿಟ್ಟಿರುತ್ತಾನೆ. ಸಚ್ಚಿದಾನಂದ ಸ್ವರೂಪನಾಗಿರುತ್ತಾನೆ.

ಅಂತೆಯೇ ಜ್ಞಾನಾನಂದಗಳಿಂದ ಪ್ರಕಾಶಿಸುವ ಪರಶಿವ ಬ್ರಹ್ಮವೇ ಇವನಿಗೆ ಶರೀರವಾಗಿರುತ್ತದೆ. ಇದರಿಂದಾಗಿ ಇವನಿಗೆ ಪ್ರಾಕೃತಿಕ ಶರೀರದಿಂದ ಪ್ರಯೋಜನವಿರುವುದಿಲ್ಲ.

'ಪ್ರಕುರುತೇ–ಪ್ರಕೃಷ್ಟಾ ಕೃತಿಃ– ಪ್ರಕೃಷ್ಟಂ ಕರೋತಿ' ಇತಿ ಪ್ರಕೃತಿ ಎಂಬುದಾಗಿ ವಿಗ್ರಹಿಸುವುದುಂಟು. ಪ್ರಕೃತಿಯೆಂದರೆ ಸೃಷ್ಟಿಕಾರಣ ಶಕ್ತಿ, ನಿಸರ್ಗ;

ತನು, ಸ್ವಭಾವ, ಕಾಯಕರಣಗುಣ ; ಮತ್ತು ಕರ್ತೃಗುಣ, ಪ್ರಕೃತಿ, ಪ್ರಧಾನವೆಂದು ಹೆಸರನ್ನು ತೊಟ್ಟಿದೆ. ಪ್ರವೃತ್ತಿಯಲ್ಲಿ ಎಲ್ಲ ಬಗೆಯಲ್ಲಿ ಇದಕ್ಕೆ ಪ್ರಾಧಾನ್ಯತೆಯಿದೆ. ಪ್ರಪಂಚಕ್ಕೂ ಇದು ಪ್ರಧಾನವಾದುದಾಗಿದೆ. ಪ್ರಕೃತಿ ವ್ಯಷ್ಟಿ ಸಮಷ್ಟಿ ಎಂದು ಇತ್ತೆರ. ಬಹಿರ್ಮುಖಕ್ಕೆ ಕಾರಣವಾದ ಈ ಉಭಯ ಪ್ರಕೃತಿಯನ್ನು ಆಕಾಯತ್ವ ಸಿದ್ಧಿಯನ್ನು ಪಡೆದ ಮಾಹೇಶ್ವರಾಂಗನು ತನ್ನ ವಶದಲ್ಲಿರಿಸಿಕೊಂಡಿರಬೇಕಲ್ಲದೆ ಪ್ರಕೃತಿಯ ವಶ ತಾನಾಗಬಾರದು. ಸಾಮ್ಯಾವಸ್ಥೆಯಲ್ಲಿದ್ದರೆ ಪ್ರಕೃತಿ. ಅದೇ ವಿಷಮಾವಸ್ಥೆಗೆ ಬಂದರೆ ಅದರಷ್ಟಿಲ್ಲ ಬೇರೆ ವಿಕೃತಿ. ವಿಷಮಗೊಂಡ ಪ್ರಕೃತಿಯ ಅಟ್ಟಹಾಸ ಮಾನವರನ್ನು ಮಾತ್ರವಲ್ಲ ಮಹಾನುಭಾವರನ್ನು ಸ್ವರ್ಗೀಯ ದೇವರನ್ನು ಸಹ ಬಿಟ್ಟಿಲ್ಲ;

"ಅಜ ಹರಿ ಸುರರಿಗೆ ಶರೀರವ ತೊಡಿಸಿ ಕರಣದೋಕುಳಿಯಾಡಿ
ವಿಷಯದ ಮಳೆಯ ಕರೆವುತ್ತಿದ್ದಾಳೆ ನೋಡಾ !
ಹರಣ ಮಧ್ಯದಲ್ಲಿ ನಿಂದು, ಹೊನ್ನು ಹೆಣ್ಣು ಮಣ್ಣು ತೋರಿ
ಕಣ್ಣು ಕಟ್ಟಿದಳು ನೋಡಾ ! ನಿಮ್ಮ ಕಾಣಲೀಯದೆ
ತಾನು ತಲೆಕೆಳಗಾಗಿ ಕಾಲು ಮೇಲಾಗಿ ನಡೆವಳು.
ಕರಿಯಾಗಿ ನಿಂದು, ಹರಿಯಾಗಿ ಹರಿದು,
ಉರಿಯಾಗಿ ಸುಡುತಿಪ್ಪಳು ನೋಡಾ !
ಕರಿಯ ಶಿರದಲ್ಲಿ ಉರಿ ಹುಟ್ಟಲು, ಕರಿ ಬೆಂದಿತ್ತು,
ಹರಿ ನಿಂದಿತ್ತು ; ಉರಿ ಕೆಟ್ಟಿತ್ತು.
ಶರೀರ ಗುಣವಳಿದು ಸದ್ಭಕ್ತಿ ಸಾಮ್ರಾಜ್ಯವನಾಳುತಿರ್ದನು ನೋಡಾ ;
ಶರೀರ ಗುಣವಳಿದು ಸದ್ಭಕ್ತಿ ಸಾಮ್ರಾಜ್ಯವನಾಳು
ತಿರ್ದನು ನೋಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ !"

"ಕರಿಯ ಕಾಮಿನಿ ಉದರದಲ್ಲಿ ಧರೆ ಈರೇಳಿಪ್ಪವು ನೋಡಾ !
ಹರಿ ಹತ್ತ ಹೊತ್ತು ನಡೆವುತ್ತಿಪ್ಪಳು ನೋಡಾ !
ಆಕೆಯ ಶಿರದಲ್ಲಿ ಸಿಂಹ, ಹೃದಯದಲ್ಲಿ ಕರಿ,
ಸರ್ವಾಂಗವೆಲ್ಲಾ ಬಲ್ಲುಕ ನೋಡಾ !
ಶಿರದಲ್ಲಿ ಶಿವಕಳೆ, ಹೃದಯದಲ್ಲಿ ಪರಮಕಳೆ;

ಸರ್ವಾಂಗದಲ್ಲಿ ಸರ್ವಜ್ಞಾನವರ್ಮಕಳೆ ಉದಯವಾಗಲು
ಶಿರದ ಸಿಂಹ ಸತ್ತು, ಹೃದಯದ ಕರಿಯಳಿದು;
ಸರ್ವಾಂಗದಲ್ಲಿ ತೊಡರಿದ ಬಲ್ಲುಕ ಬಿಟ್ಟು, ಸರ್ವಜ್ಞ ನಿನಗೆ
ನಾನು ಭಕ್ತನಾದೆನು ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!"

"ಆದಿಪರಶಿವನ ಬಿಂದುವಿನಿಂದ ಮೂದೇವಿ ಹುಟ್ಟಿ ತ್ರೈಜಗದ ಜನನಿ ನೋಡಾ! ಆಕೆ ಜಾತಿ ವರ್ಣಾಶ್ರಮ ಕುಲಗೋತ್ರ ನಾಮ ಸೀಮೆಯ ಕೂಡಿಕೊಂಡಿಪ್ಪ ಭ್ರಾಂತುಲಕ್ಷಿಣಿ ನೋಡಾ! ಆಕೆಯ ಬಲೆಯಲ್ಲಿ ಲೋಕಾದಿ ಲೋಕಂಗಳೆಲ್ಲವು ಸಿಕ್ಕಿ ಕಾಕಾಗಿ ಆಕೆಯ ಒಡನೆ ಹುಟ್ಟಿ, ಆಕೆಯ ಒಡನೆ ಬೆಳೆದು, ಆಕೆಯ ಒಡನೆ ಲಯವಾಗುತಿಪ್ಪವು. ಆಕೆ ಉಂಟಾಗಿ ಲೋಕದ ತೋರಿಕೆ; ಆಕೆ ಲಯವಾದಲ್ಲಿಯೆ ಲೋಕಾದಿ ಲೋಕಂಗಳೆಲ್ಲವು ಲಯ ನೋಡಾ! ಆಕೆಯ ಕೈಕಾಲ ಕಡಿದು ಮೊಲೆ ಮೂಗನುತ್ತರಿಸಿ, ಆಕೆಯ ವಿಕಾರ ಸಂಗವನಳಿದು ಆದಿ ಪರಶಿವ ಬಿಂದುವನೆಯ್ದ ಬಲ್ಲರೆ, ಆತನು ಲೋಕಾದಿ ಲೋಕಂಗಳ ಪ್ರಪಂಚುವ ಗೆಲಿದ ನಿಃಪ್ರಪಂಚ ಮಾಹೇಶ್ವರನು ನೋಡಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!"

"ಕಲ್ಲ ಶರೀರವ ಧರಿಸಿ ಶಿಲಾಭೋಗಕ್ಕೆ ಬಂದವರು ಕೆಲವರು:
ಕಾಯ ಕಂಥೆಯ ತೊಟ್ಟು ಕರ್ಮ ಭೋಗಕ್ಕೆ ಬಂದವರು ಕೆಲಬರು
ಕಲ್ಲ ಕಂಥೆಯ ತೊಟ್ಟು ಲಿಂಗವೆನಿಸಿಕೊಂಡು,
ಕಾಯಕಂಥೆಯ ತೊಟ್ಟು ಜಂಗಮವೆನಿಸಿಕೊಂಡು,
ಲೋಗರ ಉಪಚಾರಕ್ಕೆ ಬಂದ ಭೋಗ ರುದ್ರರೆಲ್ಲಾ
ಆಗು ಹೋಗಿಗೆ ಗುರಿ ನೋಡಾ! ಅದೇನು ಕಾರಣವೆಂದರೆ,
ತಮ್ಮಾದಿಯ ಶಿವತತ್ತ್ವವ ಭೇದಿಸಿ ಘನಲಿಂಗ ಪದಸ್ಥರು
ತಾವೆಂದರಿಯದೆ, ಶಿವಪದಕ್ಕೆ ಅನ್ಯವಾದ ಗಣೇಶ್ವರ ಪದವೆಂಬ
ಗರ್ವಪರ್ವತವನಡರಿ ಕೆಟ್ಟರು ನೋಡಾ,–ತಮ್ಮ ನಿಜಪದವನರಿಯದೆ!
ಇದು ಕಾರಣ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆಂಬ
ನಿಜಲಿಂಗ ಜಂಗಮವೊಂದಾದ ಪದವು ಒಂದರ ಹಾದಿಯದಲ್ಲ
ಬಿಡಾ, ಮರುಳೆ!"

"ಕಾಯ ಶೂನ್ಯನು ಕರಣಶೂನ್ಯನು ಮಾಹೇಶ್ವರನು.
ಆತ್ಮ ಶೂನ್ಯನು ಸರ್ವಶೂನ್ಯ ನಿರಾಲಂಬ ಮಾಹೇಶ್ವರನು.
ಆದಿ ಅನಾದಿಯ ಗೆದ್ದ–ಅನಾದಿ ಪರಶಿವ ಮೂರ್ತಿಯ
ಮನ ಮುಟ್ಟಿದ ಧೀರನಯ್ಯಾ, ನಿಮ್ಮ ವೀರಮಾಹೇಶ್ವರನು,
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ!"

ಈ ಅಯ್ದು ವಚನಗಳಲ್ಲಿ ಪ್ರಕೃತಿ ವಶವಾದರೆ ಆಗುವ ಬಂಡಾಟವನ್ನು, ಪ್ರಕೃತಿಯನ್ನು ತಮ್ಮ ವಶಮಾಡಿಕೊಂಡು ಮಾಯಾ ಮಾರ್ಗವನ್ನು ಮೀರಿ ನಡೆದರೆ ಆಗುವ ಸತ್ಯಜ್ಞಾನ ಸುಖಾತ್ಮಕತೆಯನ್ನು ಸೊಗಸಾಗಿ ಚಿತ್ರಿಸಲಾಗಿದೆ. ನಮ್ಮ ನೀರಸ ನುಡಿಗಳಲ್ಲಿ ಹೇಳುವ ಬದಲು ಈ ರಸ ಪೂರ್ಣವಾದ ವಚನಗಳನ್ನೇ ಎತ್ತಿ ಉದ್ಧರಿಸಿ ವಾಚಕರ ಅಭಿರುಚಿಯನ್ನು ಹೆಚ್ಚಿಸಲು ಹೆಣಗಲಾಗಿದೆ. ತುಂಬಾ ಅಚ್ಚು ಮೆಚ್ಚಿನ ವಚನಗಳಿವು. ಮಾತು ಮಾತಿನಲ್ಲಿ ಮಿಂಚಿದೆ. ಕರಿಯ ಕಾಮಿನಿಯ ರೂಪಕ ಎಂತಹ ಮನಮೋಹಕ ರೂಪಕ! ಏನು ಧ್ವನಿ ಪೂರ್ಣ ಶಬ್ದ ಪ್ರಯೋಗ! ಅವಿದ್ಯಾಪ್ರಕೃತಿಯ ವರ್ಣನೆ ಅದೆಷ್ಟು ಅರ್ಥವತ್ತಾಗಿದೆ! ಕರಿಯ ಕಾಮಿನಿ' ಸುಂದರವಾದ ಹೆಸರು, ಹೋಲುವ ಹೆಸರು. ಸಿಂಹ, ಕರಿ, ಭಲ್ಲೂಕಗಳಿಗೆ ಭ್ರಾಂತಿ, ಅಜ್ಞಾನ, ಕರ್ಮಗಳನ್ನು ರೂಪಿಸಿದ ಚಿತ್ರ ಅರ್ಥಪೂರ್ಣವೂ ಅನುಭವ ಪೂರ್ಣವೂ ಆಗಿದೆ, ಮುಂದಿನ ವಚನದಲ್ಲಿ-ಉಸಿರಿರುವವರೆವಿಗೂ ಪ್ರಕೃತಿಯ ಅನಿವಾರ್ಯವನ್ನು ತೋರಿಸಿ, ಅಂತಹ ಜನ್ಮ ಜನನಿಯನ್ನೂ ಸಾಯಿಸುವ ನೆಪದಲ್ಲಿ ತನ್ನ ಶಿವ ಸಿಂಗಾರವನ್ನು ಹೆಚ್ಚಿಸಿಕೊಳ್ಳಬಲ್ಲ ಬಲ್ಲಿದ ಅಕಾಯ ಮಾಹೇಶ್ವರ ಮಾತ್ರ ಎಂಬುದನ್ನು ಎನಿತು ಇನಿವಾತಿನಲ್ಲಿ ವಿಚಾರ ಧಾರೆಯನ್ನು ಸುರಿಯತೊಡಗಿ, ನಾಲ್ಕನೆಯ ವಚನದಲ್ಲಿ ಕಲ್ಲಕಂಥೆ–ಕಾಯಕಂಥೆಗಳ ಧರಿಸಿದ ಮೂರುಬಗೆಯ ಮೂರ್ತಿಗಳ ವಿಚಾರ ಪೂರ್ಣ ವಿಶ್ಲೇಷಣವನ್ನು ಮಾಡಿ ಪರಿವಿಡಿದು ಶಿಲಾಭೋಗ, ಕರ್ಮಭೋಗ, ಭೋಗಗಳ ಹಂತಗಳನ್ನು ಹೊಚ್ಚ ಹೊಸ ಬಗೆಯ ವಿಮರ್ಶೆಯ ಮೂಸೆಯಲ್ಲಿ ಎರಕಹೊಯ್ದು ರೂಪಿಸಿದುದನ್ನು ಓದಿಯೇ ಓಲಾಡಬೇಕು.

ಕೊನೆಯದಾದ ಅಯ್ದನೆಯ ವಚನದಲ್ಲಿ ಪ್ರಕೃತಿಯನ್ನು ಗೆದ್ದು ಪರಕಾಯನಾದ-ವೀರ ಮಾಹೇಶ್ವರನ ಚಿತ್ರವಿದೆ. ಪರಕಾಯನು ಆದಿ–ಅನಾದಿ ಪ್ರಕೃತಿ

ಗಳೆರಡನ್ನು ಗೆದ್ದು ಪರಶಿವಮೂರ್ತಿಯನ್ನು ಮುಟ್ಟಿದ ಧೀರನೆಂಬ ಹೇಳಿಕೆ ಹೆಚ್ಚು ಔಚಿತ್ಯಪೂರ್ಣವೂ ಅರ್ಥಪೂರ್ಣವೂ ಆಗಿದೆಯಲ್ಲದೆ ಶ್ರೀ ಜಗದ್ಗುರು ರೇಣುಕರ 'ಸತ್ಯಜ್ಞಾನಸುಖಾತ್ಮಕಃ ಪರಕಾಯಃ' ಎಂಬ ಸಂದೇಶಕ್ಕೆ ಸಾಕ್ಷಿಯಾಗಿದೆ.

ಇನ್ನು ಎರಡನೆಯ ಮಂತ್ರದಲ್ಲಿ ಶ್ರೀ ಜಗದ್ಗುರು ರೇಣುಕರು ಹೀಗೆ ಹೇಳಿದ್ದಾರೆ: ಪ್ರಬೋಧಾನಂದಗಳಿಂದ ಭಾಸುರವಾದುದು ಪರಬ್ರಹ್ಮನ ಕಾಯ. ಆ ಕಾಯವೇ ಅಕಾಯನಾದ ಮಾಹೇಶ್ವರನ ಪರಕಾಯ. ಆದ್ದರಿಂದ ಮಾಹೇಶ್ವರನಿಗೆ ಪ್ರಾಕೃತ ಕಾಯದಿಂದ ಪ್ರಯೋಜನವಿಲ್ಲ ; ಬೇಕಾಗಿಯೂ ಇಲ್ಲ. ಈತನಿಗೆ ಎಲ್ಲರಂತೆ ತನು ಮನ ಭಾವಗಳಿದ್ದರೂ ಇವು ಕರ್ಮ ಅಜ್ಞಾನ ಭ್ರಾಂತಿಗಳಿಗೆ ಒಳಗಾಗಿರುವುದಿಲ್ಲ; ಅಭಿಮಾನ ಮಮಕಾರ ಅಹಂಕಾರಗಳಿರುವುದಿಲ್ಲ.

"ತನುವಿನಲ್ಲಿ ಜ್ಞಾನಗುರು ಸಾಹಿತ್ಯವಾಗಿ ತನುಭಾವವಿಲ್ಲ ನೋಡಾ! ಮನದಲ್ಲಿ ಅರುಹೆಂಬ ಶಿವಲಿಂಗ ಅಚ್ಚೊತ್ತಿತ್ತಾಗಿ ಮನಭಾವವಿಲ್ಲ ನೋಡಾ! ಭಾವದಲ್ಲಿಮಹಾನುಭಾವವೆಂಬ ಜಂಗಮ ಸಂಬಂಧವಾಯಿತ್ತಾಗಿ ಭಾವಾಭಾವಂಗಳಿಲ್ಲದ ಸದ್ಭಾವಿ ನೋಡಾ! ಪ್ರಾಣದಲ್ಲಿ ಪ್ರಸಾದ ಸಾಹಿತ್ಯವಾದ ನಿಃಪ್ರಪಂಚಿಯು ನೋಡಾ! ಆಚಾರ ಅಂಗವಾಗಿ, ಅರುಹು ಹೃದಯವಾಗಿ, ಹೃದಯ ಶುದ್ಧವಾಗಿ ಹದುಳಿಗನಾದ ಸದ್ಭಕ್ತನಲ್ಲಿ ಮದನಹರನಿಪ್ಪನು ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!"

"ಸತ್ತುವೆಂಬ ಗುರುವಿನಲ್ಲಿ ಎನ್ನ ಸರ್ವಾಂಗವಡಗಿ ಚಿತ್ತದ ಪ್ರತಿಮೆಯ ಅವಯವಂಗಳ ಶೃಂಗಾರದಂತೆ ಆಕಾರವಾಗಿ ಇರ್ದೆನಯ್ಯಾ. ಚಿತ್ತೆಂಬ ಲಿಂಗದೊಳಗೆ ಮನವಡಗಿ ನವನಾಳದ ಸುಳುಹು ಕೆಟ್ಟು ಸುಷುಪ್ತಿಯನೆಯ್ದಿದೆನಯ್ಯಾ. ಇದು ಕಾರಣ, ಎನ್ನ ಜಾಗ್ರಸ್ವಪ್ನಸುಷುಪ್ತಿ ಎಂತಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ ?

ಆನಂದವೆಂಬ ಜಂಗಮದಲ್ಲಿ ಅರುಹು ಏಕತ್ವವಾಗಿ ಆತ್ಮೋಹಂ ಎಂಬುದನರಿಯೆನು ನೋಡಾ! ನಾನು ಪರಮಾತ್ಮನಾದ ಕಾರಣ, ನಿತ್ಯವೆಂಬ ಪ್ರಸಾದದಲ್ಲಿ ಪ್ರಾಣವಡಗಿ ನಿತ್ಯಾನಿತ್ಯವನರಿಯದೆ ಸಚ್ಚಿದಾನಂದ ನಿತ್ಯಪರಿಪೂರ್ಣನಾಗಿ ಅನಾದಿ ಭಕ್ತನಾದೆನಯ್ಯ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !"

ಜಗದ್ಗುರು ರೇಣುಕರ ಪರಕಾಯಸ್ಥಲದ ಎರಡನೆಯ ಮಂತ್ರಾರ್ಥವನ್ನು ಈ ಎರಡು ವಚನಗಳು ಏಕೋದ್ದೇಶದಲ್ಲಿ ಎತ್ತಿಹಿಡಿದಿವೆ. ಎದೆಮೆಚ್ಚುಗೆಯನ್ನು ಎಸಗುವಂತೆ ಮಾಡಿವೆ.

"ಸಮ್ಯಗ್ ಜ್ಞಾನಾಗ್ನಿ ಸಂದಗ್ಧ ಜನ್ಮ ಬೀಜಕಲೇವರಃ ।
ಶಿವತತ್ತ್ವಾವಲಂಬೀ ಯಃ ಪರಕಾಯಃ ಸ ಉಚ್ಯತೇ॥
ಇಂದ್ರಿಯಾಣಿ ಮನೋವೃತ್ತಿರ್ವಾಸನಾಃ ಕರ್ಮಸಂಭವಾಃ ।
ಯತ್ರ ಯಾಂತಿ ಲಯಂ ತೇನ ಸಕಾಯೋಽಯಂ ಪರಾತ್ಮನಾ ॥"

ಪ್ರಬುದ್ಧವಾದ ಪರಶಿವ ಜ್ಞಾನವೇ ಅಗ್ನಿ. ಅದರಲ್ಲಿ ಜನ್ಮ ಬೀಜಗಳನ್ನು ಹುರಿಯಬೇಕು. ಶಿವತತ್ತ್ವವನ್ನು ಅವಲಂಬಿಸಬೇಕು. ಹೀಗೆ ನೆರವೇರಿಸಿದವನೇ ಪರಕಾಯನು.

ಕರ್ಮದಿಂದ ಕಾಣಿಸಿಕೊಳ್ಳುವವು ಕೆಟ್ಟವಾಸನೆಗಳು, ಇಂದ್ರಿಯ ಕಾರ್ಯಗಳು; ಮನದ ವ್ಯಾಪಾರಗಳು. ಇವನ್ನೆಲ್ಲ ಆ ಪರಬ್ರಹ್ಮದಲ್ಲಿ ಅಣಗಿಸಬೇಕು. ಅಣಗಿಸಿ ಆ ಪರಬ್ರಹ್ಮವನ್ನೇ ತನ್ನ ಕಾಯವನ್ನಾಗಿಸಿಕೊಳ್ಳಬೇಕು. ಅವನೇ ಆ ಪರಬ್ರಹ್ಮಸ್ವರೂಪನು. ಪರಕಾಯನಾದಂತೆ ಕರಣೇಂದ್ರಿಯಗಳನ್ನೂ ಪರಶಿವ ಸ್ವರೂಪವನ್ನಾಗಿಸಿರುತ್ತಾನೆ. ಕರ್ಮವಾಸನೆಗಳಿಗೆ ಮನೇಂದ್ರಿಯ ವೃತ್ತಿಗಳಿಗೆ ಪರಕಾಯ ಮಾಹೇಶ್ವರನು ಒಳಗಾಗುವುದಿಲ್ಲ.

ಜ್ಞಾನವೇ ತೇಜಸ್ಸುಳ್ಳುದು. ಹೀಗಿರುವಾಗ ಸಮ್ಯಗ್ ಜ್ಞಾನದ ತೇಜಸ್ಸನ್ನು ವರ್ಣಿಸಬೇಕೆ ? ಅದು ತೆಳ್ಪಸಿರಿನ ತೇಜಸ್ಸಲ್ಲ. ತೀವ್ರವಾದ ತೇಜಸ್ಸುಳ್ಳುದು. ಅಂತೆಯೇ ಅದನ್ನು ಅರ್ಚಿಸಿದವರ ಜನ್ಮ ಬೀಜಗಳು ಹುರಿದುಹೋಗುತ್ತವೆ; ಶಿವತತ್ತ್ವವು ಸ್ಫುಟವಾಗಿ ತೋರುತ್ತದೆ; ತೋರುವುದೇ ಅಲ್ಲ, ತನಗೆ ಆಲಂಬನವೂ ಆಗುತ್ತದೆ.

"ಜ್ಞಾನಜ್ಯೋತಿಯ ಉದಯ, ಭಾನುಕೋಟಿಸೂರ್ಯರ ಬೆಳಗು ನೋಡಾ! ತನುತ್ರಯ, ಜೀವತ್ರಯ, ಅವಸ್ಥಾತ್ರಯಾದಿಯಾದ ಎಲ್ಲಾ ತೋರಿಕೆಯನೊಳಗೊಂಡು ಜ್ಯೋತಿ ಕರ್ಪೂರವ ನೆರೆದಂತಿದೆ ನೋಡಾ! ಷಡಾಧಾರಂಗಳಲ್ಲಿ ತೊಳಗಿ ಬೆಳಗಿ ಬ್ರಹ್ಮರಂಧ್ರದಲ್ಲಿ ವಿಶ್ರಾಂತಿಯನೆಯ್ದಿದ ಅಖಂಡಜ್ಞಾನಜ್ಯೋತಿ

ನೋಡಾ! ಆ ಮಹಾಪ್ರಕಾಶದ ಬೆಳಗಿನೊಳಗೆ ಮಹವ ಕಂಡು ಮಹಕೆ ಮಹ, ಪರಕೆ ಪರವಾಗಿ ಎನ್ನಿಂದನ್ಯವಾಗಿ ಮತ್ತೊಂದ ಪರವಿಲ್ಲದೆ ನಾನೇ ಪರವಸ್ತುವಾಗಿ ರ್ದೆನು ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ !"

ತನುತ್ರಯ, ಜೀವತ್ರಯ, ಅವಸ್ಥಾತ್ರಯಗಳು ಜನ್ಮಬೀಜಗಳು. ತನು ಭಾವ ಜೀವಭಾವ ಅವಸ್ಥಾಭಾವಗಳು ತೊಲಗಬೇಕಾದರೆ ಸಮ್ಯಗ್‌ಜ್ಞಾನ ಸಮ್ಯಕ್‌ಕ್ರಿಯೆಗಳು ಬೇಕು. ಜ್ಯೋತಿ ಕರ್ಪುರ ಬೆರದಂತಾಗಿ ಯಾವ ಭಾವವೂ ಉಳಿಯಬಾರದು. ಷಟ್‌ಚಕ್ರಗಳಲ್ಲಿ ಅಂದರೆ ಅಂತಃ ಷಟ್‌ಸ್ಥಳಗಳಲ್ಲಿ ಸಮ್ಯಗ್ ಜ್ಞಾನೋದಯವಾಗಿ ಅಲ್ಲಲ್ಲಿ ಇರುವ ತನು ಜೀವಾದಿಭಾವಗಳನ್ನು ಬೆಳಗಬೇಕು, ತನು ಜೀವಾವಲಂಬನ ತೊಲಗಿ ಶಿವತತ್ತ್ವಾವಲಂಬನ ತನಗಾಗಬೇಕು. ಆಗ ತನುತಿಮಿರ ಜೀವತಿಮಿರ ಅವಸ್ಥಾತಿಮಿರಗಳು ಹರಿದು ಎಲ್ಲೆಲ್ಲಿಯೂ ತೆರಹಿಲ್ಲದ ಅರಿವು ಉಂಟಾಗಿ ಮರೆವು ನೀಗಿ ಆ ಪರವಸ್ತು ಕಾಣುವುದು. ಆಗ ತನಗಿಂತ ಬೇರೆ ಪರವಸ್ತು ಇರುವುದಿಲ್ಲ,

ಲಿಂಗಭಾವ ಲಿಂಗಜ್ಞಾನ ಬೆಳೆದ ಬಳಿಕ ಅಂಗಭಾವ ಅಜ್ಞಾನಾದಿಗಳು ಉಳಿಯವು, ಪಂಚೇಂದ್ರಿಯವಾಸನೆ ಉಳಿಯದು. ತನುಮನಾದಿಗಳು ಲಿಂಗಾರ್ಪಣವಾಗಿ ಲಿಂಗಸ್ವರೂಪವಾದಲ್ಲಿ ಜನ್ಮಜನ್ಮಾಂತರಗಳುಂಟಾಗವು. ಬೇರೊಂದು ದೆಸೆ ಬಾರದು. ಬೇರೊಂದು ಹುಟ್ಟು ಉಂಟಾಗದು.

"ಜ್ಞಾನಕಾಯಂಗೆ ಬಹುಕಾಯವಿಲ್ಲ. ಅರುಹಿನ ಮುಂದಣ ಕುರುಹು ಅರುಹನವಗ್ರಹಿಸಿ ಜ್ಞಾನನಿಷ್ಪತ್ತಿಯಾಯಿತ್ತು, ಸೌರಾಷ್ಟ್ರಸೋಮೇಶ್ವರಲಿಂಗವೆಂಬ ಕುರುಹ ಮರೆದ ಕಾರಣ ನಿಶ್ಶೂನ್ಯ ನಿರ್ಗಮನವಾಯಿತ್ತು."

ಜ್ಞಾನದೊಳಡಗಿದ ಕ್ರಿಯೆಗೆ ಇರುವ ಕಲಿತನವನ್ನಿಲ್ಲಿ ಕಾಣಬೇಕು. ಅಂತೆಯೆ ಜ್ಞಾನಕಾಯದ ಹೆಚ್ಚಳಿಕೆಯೂ ನಿದರ್ಶನಕ್ಕೆ ಬರುತ್ತದೆ. ಕೊನೆಗೆ ಕುರುಹು ಅರುಹುಗಳೆರಡೂ ನಿಷ್ಪತ್ತಿಗೊಳ್ಳುತ್ತವೆ. ಹೀಗಿರುವಾಗ ಜನ್ಮಗಳಿರುವವೆಂದ ರೇನು ?

ಇನ್ನು ಶಿವತತ್ತ್ವಾವಲಂಬಿ ಪರಾಕಾಯ್ಯನು ಎಂಬ ರೇಣುಕಾವಾಣಿಯನ್ನು ಗಮನಿಸೋಣ;

ಬಂದಿರುವುದು ಶಿವನಿಂದ. ಬಾಳಿರುವುದು ಆತನಿಂದ! ಬಾಳುವುದೂ ಸಹ ಆತನ ಕರುಣೆಯಿಂದ. ಇದನರಿಯದೆ ಅನ್ಯಾವಲಂಬಿಗಳಾದರೆ ಪರಕಾಯ ನೆನಿಸಲು ಸಾಧ್ಯವಿಲ್ಲ.

"ಶಿವಾಶ್ರಯದಲ್ಲಿ ಹುಟ್ಟಿ, ಭವಾಶ್ರಯವ ನೆನೆವ ಭಂಡರ ಮುಖವ ನೋಡೆ, ನೋಡೆ. ಶಿವಾಶ್ರಯವೆಂದರೆ, ಶ್ರೀಗುರುವಿನ ಕರಕಮಲವೆಂಬ ಪರಿ; ಭವಾಶ್ರಯವೆಂದರೆ ತನ್ನ ಹಿಂದಣ ತಂದೆತಾಯಿಗಳೆಂಬ ಪರಿ. ಇಂತು ಗುರು ಕರಜಾತನಾಗಿ, ಗುರುಕುಮಾರನಾಗಿ, ನರರ ಹೆಸರ ಹೇಳುವ ನರಕಜೀವಿಯ ಎನ ಗೊಮ್ಮೆ ತೋರದಿರಾ! ತಾನು ಶುದ್ಧನಿರ್ಮಲನಾಗಿ ಮಲಸಂಬಂಧವ ಬೆರಸುವ ಮರುಳು ಮಾನವನ ಪರಿಯ ನೋಡಾ. ಇಂತಪ್ಪ ಅಜ್ಞಾನಿಯ ಶಿಷ್ಯನೆಂದು ಕೈವಿಡಿಯಬಹುದೆ? ಇಂತಿವರಿಬ್ಬರ ಗುರುಶಿಷ್ಯಸಂಬಂಧವ ಕಂಡು ನಾನು ಹೇಸಿ ದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ!"

ಶಿವನಲ್ಲದೆ ಬೇರೆ ದೈವವಿಲ್ಲ ನೋಡಾ ಎನಗೆ! ಶಿವಮಂತ್ರವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಎನಗೆ! ಇದು ಕಾರಣ, ಷಡಕ್ಷರ ಮಂತ್ರವನೆ ಜಪಿಸು ತಿರ್ದೆನು ಕಾಣಾ! ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಶಿವತತ್ತ್ವದ ಆದಿಮಧ್ಯಾವಸಾನವನರಿಯದೆ ಭಕ್ತರೆಂತಪ್ಪಿರಯ್ಯಾ? ಶಿವ ತತ್ತ್ವದಾದಿಯೇ ಮಾಹೇಶ್ವರ. ಶಿವತತ್ತ್ವದ ಮಧ್ಯವೇ ಸದಾಶಿವ. ಶಿವತತ್ತ್ವದವಸಾನವೇ ಪರತತ್ತ್ವ. ಮಾಹೇಶ್ವರನಲ್ಲಿ ತನ್ನ ತನುವ ನಿಲ್ಲಿಸಿ, ಸದಾ ಶಿವನಲ್ಲಿ ತನ್ನ ಮನವ ಸಾಹಿತ್ಯವ ಮಾಡಲು, ಮನೋಮಧ್ಯದಲ್ಲಿ ಪಂಚಬ್ರಹ್ಮ ಮೂರ್ತಿಯಾಗಿಪ್ಪನು ನೋಡಾ ಸೂಕ್ಷ್ಮತತ್ತ್ವವು! ಪ್ರಾಣವು ಪರವನಪ್ಪಿ ಪರಾಪರನಾಗಿ ಪ್ರಪಂಚವನೇನುವಂ ಮುಟ್ಟದೆ ಪರಮ ಮಾಹೇಶ್ವರನಾಗಿರ್ದೆನು ಕಾಣಾ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ!

"ಶಿವತತ್ತ್ವ, ಶಿವಜ್ಞಾನ, ಶಿವೈಕ್ಯವಪ್ಪ ತ್ರಿವಿಧವನರಿಯಬಲ್ಲರೆ ಅದು ವರ್ಮ, ಅದು ಸಂಬಂಧ. 'ಶಿವಾದಿ ಪ್ರಥ್ವಿಯಾಂತವಪ್ಪ ತತ್ತ್ವಾರ್ಥವನರಿದು ತತ್ತ್ವಜ್ಞಾನಿಯಾಗಬಲ್ಲರೆ ಅದು ವರ್ಮ. ಅದು ಸಂಬಂಧ. ಸಂವಿದಾತ್ಮನಾಗಿ ಚಿತ್ಸ್ವರೂಪದಿಂ ಪ್ರಾಣಲಿಂಗವನರಿದು ಶಿವಜ್ಞಾನಿಯಾಗಬಲ್ಲರೆ ಅದು ವರ್ಮ,

ಅದು ಸಂಬಂಧ. ಬ್ರಹ್ಮಾನುಸಂಧಾನದಿಂದ ವಿನಾಭಾವವನೆಯ್ದಿ ಶಿವೈಕ್ಯವಾಗ ಬಲ್ಲರೆ ಸೌರಾಷ್ಟ್ರಸೋಮೇಶ್ವರ ಲಿಂಗದಲ್ಲಿ ಅದು ವರ್ಮ, ಅದು ಸಂಬಂಧ."

ಶಿವಪಥವರಿತು ಲಿಂಗನಿಷ್ಠೆಯಿಂದೇಕೋಭಾವ ಬಲಿದು, ಕರಿಗೊಂಡು, ಘನವೇದ್ಯವಾಗಿ ನಿಂದು, ನಿಜವ ನೆಮ್ಮಿ, ಸಚ್ಚಿದಾನಂದ ಸುಖಮಯನಾಗಿ ಮಾಯೆ ಕೆಟ್ಟು, ಮರವೆ ಬಿಟ್ಟು ಮರಣವಳಿಯಬೇಕು; ಇಲ್ಲದೆ ಬಿಂದುವಿಂದಾದ ತ್ರಿಬದ್ಧ ಕ್ರಿಯೆ ಎಂದರಿಯದೆ ಬಾಹ್ಯಕ್ರಿಯೊಳು ಹೊಂದದಲೆ ಸುರಪ ಹರಿ ವಿರಿಂಚಿಗಳಿಗಾದರೂ ಮಾಯೆ ಕೆಡದು ಮರವೆ ಬಿಡದು, ಮೃತ್ಯುವ ಗೆದ್ದು ಕಾಲನ ಬಾಯಿಗೆ ಕೆಡಹದೆ ಮಾಣದಯ್ಯಾ ಇದ ಬಲ್ಲೆನಾಗಿ, ನಾನೊಲ್ಲೆ. ಸೌರಾಷ್ಟ್ರ ಸೋಮೇಶ್ವರಾ!

ಪರಕಾಯನು ಪರಶಿವತತ್ತ್ವಾವಲಂಬಿಯಾಗಿರಬೇಕೆಂಬುದಕ್ಕೆ ಈ ಅಯ್ದು ವಚನವ್ಯಾಖ್ಯಾನವೇ ಸಾಕೆನಿಸುತ್ತದೆ.

ಇನ್ನು ಎರಡನೆಯ ಮಂತ್ರವಿಚಾರ: ಇದರಲ್ಲಿ ಮೊದಲಿನ ಮಾತು ಇಂದ್ರಿಯದ್ದು. ಇಂದ್ರಿಯಗಳು ಕೆಟ್ಟವಲ್ಲ. ಇಂದ್ರಿಯಗಳಿಂದ ಕೆಟ್ಟುದನ್ನು ಮಾಡಿಸಿದರೆ ಕೆಟ್ಟುದು. ಇಂದ್ರಿಯ ಕಾರ್ಯ ಸತ್ಕಾರ್ಯವಾದರೆ ಇಂದ್ರಿಯಗಳೇಕೆ ಕೆಟ್ಟವಾದಾವು ?

"ಇಂದ್ರಿಯಂಗಳಂಳ್ಯನ್ನಕ್ಕರ ಪ್ರಾಣಂಗೆ ಬಂಧನ ಮಾಬುದೇ ಭವದುಃಖಿಗಳಿರಾ ? ಇಂದ್ರಿಯಂಗಳನೆಲ್ಲವ ಲಿಂಗಸಂಧಾನವ ಮಾಡಬಲ್ಲರೆ ಪ್ರಾಣನ ಬಂಧನ ಬಿಟ್ಟು ಓಡುವುದು ನೋಡಾ ! ಪ್ರಾಣಲಿಂಗವಾಗಿಯಲ್ಲದೆ ಪ್ರಳಯವ ಗೆಲಬಾರದು. ಪ್ರಳಯ ಪ್ರಳಯದ ಹಳೆಯರಾಗಿಪ್ಪವರ ಪ್ರಾಣಲಿಂಗ ಸಂಬಂಧಿಗಳೆಂಬೆನಯ್ಯಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !"

ಇಂದ್ರಿಯದ ಬಾಗಿಲಲ್ಲಿ ಮನವಿಪ್ಪುದು. ಮನದ ಮುಂಬಾಗಿಲಲ್ಲಿ ಭೋಗಲಿಂಗವಿಪ್ಪುದು. ಅಧಿಕಾರಲಯವ ಹೊದ್ದದೆ ಸಕಲ ಭೋಗಂಗಳ ಭೋಗಿಸಿ, ಪ್ರಸಾದವ ಕರಣಂಗಳಿಗೆ ಕೊಟ್ಟರುಹಿ ಎನ್ನ ಮನವ ತನ್ನತ್ತ ಸೆಳೆದು ಮರಹ ಮಾಣಿಸಿ ಕುರುಹಳಿದ ತೆರಹುಗೊಡ ಸೌರಾಷ್ಟ್ರಸೋಮೇಶ್ವರ ಲಿಂಗವ ಕಂಡೆ."

ಇಂದ್ರಿಯಗಳಿಲ್ಲದೆ ಏನೂ ನಡೆಯದು . ಇಂದ್ರಿಯಗಳೇ ಜ್ಞಾನಕ್ರಿಯೆಗಳಿಗೆ ಆಧಾರ . ಇಂದ್ರಿಯಗಳಿಂದಲೇ ಇವು ನಡೆಯಬೇಕು; ಅಳವಡಬೇಕು.

ಇಂದ್ರಿಯಂಗಳನ್ನು ಸತ್ಕ್ರಿಯೆ ಸಮ್ಯಗ್ ಜ್ಞಾನಗಳಿಗೆ ಉಪಯೋಗಿಸಿಕೊಳ್ಳುವಲ್ಲಿದೆ ಜಾಣ್ಮೆ ! ಇಂತಾದರೆ ಇಂದ್ರಿಯಂಗಳಿರುವುದೇ ಇಮ್ಮಿಗಿಲು ; ಇಮ್ಮು. ಇವಿಲ್ಲದೆ ಅರ್ಚನ ನಡೆಯದು ; ಅರ್ಪಣ ನಡೆಯದು, ಯಾವ ಕಾಯಕ ನಡೆಯದು.

ಇನ್ನು ಜಗದ್ಗುರು ರೇಣುಕರು ಹೇಳುವಂತೆ ಮನೋವೃತ್ತಿಗಳು ನಿಷ್ಪತ್ತಿಗೊಳ್ಳುವಿಕೆ. ಇದು ತೀರ ಅಗತ್ಯ. ಅನಿವಾರ್ಯ. ಸಾಧಕನು ಸತ್ಯತೆಗೆ ಸದ್ರೂಪತೆಗೆ ನಿಲುಕಬೇಕಾದರೆ ಮನೋವೃತ್ತಿ ನಿಷ್ಪತ್ತಿಗೊಳ್ಳಲೇ ಬೇಕು. "ಮನಸಿನ ಸಂಶಯುವನಳಿದರೆ ಕನಸಿನ ಕಾಟ ಬಿಟ್ಟೋಡಿತ್ತು ಕಾಣಾ ! ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !

ಅಸ್ತಿ ಎಂಬ ಪ್ರತೀತಿಗೆ ಹೇತುವಾದ ಅಜ್ಞಾನಕ್ಕೆ ಅಥವಾ ಅಂತಃಕರಣ ಪರಿಣಾಮಕ್ಕೆ 'ವೃತ್ತಿ' ಎನ್ನುವರು. ದ್ವಿಕೋಟಿ ಜ್ಞಾನಕ್ಕೆ 'ಸಂಶಯ' ಎನ್ನುವರು ಮನೋವೃತ್ತಿ ಅಜ್ಞಾನವೂ ಆಗಿದೆ ; ಅಜ್ಞಾನ ಕಾರ್ಯವೂ ಆಗಿದೆ, ಸಂಶಯ ನಿಶ್ಚಯವಿಲ್ಲದ ಮನಸ್ಸಿನ ಒಂದು ವ್ಯಾಪಾರ ಇದರಿಂದ ಅನರ್ಥ. ಅಜ್ಞಾನ ಜನ್ಯಕಾರ್ಯವೇ ಬಂಧವೆನಿಸುವುದು.

ಇಂದ್ರಿಯಗಳಿಗೆ ಮೂಲ ಮನ. ಮನದ ಸೂತ್ರದಲ್ಲಿ ಇಂದ್ರಿಯಗಳಾಗುತ್ತವೆ. ಮನದ ವ್ಯಾಪಾರವೇ ಮಾನವನ ವ್ಯಾಪಾರವಾಗಿದೆ. ಆದರೆ ಮನದ ವೃತ್ತಿ ಪ್ರವೃತ್ತಿಯಾದರೆ ಪರಿಕಾಯತ್ವಕ್ಕೆ ಪ್ರತಿಬಂಧ. ಆದೇ ಮನದ ವೃತ್ತಿ ನಿವೃತ್ತಿಯಾದರೆ ನಿಷ್ಪತ್ತಿಗೊಂಡರೆ ಪರಕಾಯತ್ವ ಸಂಸಿದ್ಧಿ. ಇದರಿಂದಾಗಿ ಮನ ಮೊದಲಾದ ಅಂತಃಕರಣಗಳನ್ನು ಉತ್ತಮ ವೃತ್ತಿಗೆ ಹಚ್ಚಬೇಕು; "ಮನವಿದ್ದಲ್ಲಿಯೇ ನಿಮ್ಮ ನೆನೆಯಬೇಕು ; ಬುದ್ಧಿಯಿದ್ದಲ್ಲಿಯೇ ನಿಮ್ಮ ವಿಚಾರಿಸಬೇಕಯ್ಯ. ಚಿತ್ತವಿದ್ದಲ್ಲಿಯೇ ನಿಮ್ಮ ನಿಶ್ಚಯಿಸಬೇಕು ; ಅಹಂಕಾರವಿದ್ದಲ್ಲಿಯೇ ನಿಮ್ಮ ಮಹಂಕರಿಸ ಬೇಕಯ್ಯ. ಕಾಯವಿದ್ದಲ್ಲಿಯೆ ಸಾಯದ ಸಂಚವನರಿದು ಎಚ್ಚತ್ತಿರಬೇಕಯ್ಯ. ಜೀವ ಹಾರಿ ಕಾಯ ಕೆಡೆದು ಭೂಗತವಾಗಿ ವಾಯು ಪ್ರಾಣಿಯಾಗಿ ಹೋಹಾಗ ಆಗ ಮುಕ್ತಿಯ ಬಯಸಿದರುಂಟೆ ? ಚಿತ್ತ ಬುದ್ಧಿ ಅಹಂಕಾರ ಮನ ಜ್ಞಾನ ಭಾವಂಗಳ ಮೀರಿದ ನಿರ್ಭಾವ ಲಿಂಗೈಕ್ಯನಾದ ನಿರಾಶ್ರಯನಯ್ಯ ಮಾಹೇಶ್ವರನು ; ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !

ಮನ ವಿಷಯ ವಾಸನೆಗೆ ಹರಿಯಬಾರದು. ಅಶುದ್ಧ ವ್ಯವಹಾರಗಳಿಗೆ ಇಳಿಯಬಾರದು. ಇಳಿದರೆ ವಿಕಾರಕ್ಕೊಳಗಾಗುತ್ತದೆ. ಪ್ರಕೃತಿ ಭಾವಕ್ಕಿಂಬಾಗುತ್ತದೆ. ಪರಕಾಯವಾಗಲು ಅನುವಾಗುವುದಿಲ್ಲ.

"ಮರ್ಕಟ ದರ್ಪಣವ ಹಿಡಿದು ನೋಡಿ ತನ್ನ ಪ್ರತಿ ಬಿಂಬವ ಕಂಡು ದರ್ಪಣವ ಮರ್ಕಟವೆಂದು ಬಗೆಗೆಡಿಸಲನುಗೆಯ್ಯುವಂತೆ ಮನೋವಿಕಾರದಿಂದೆ ಪ್ರಕೃತಿ ವಿಡಿದಾಚರಿಸುತ್ತಿರ್ಪ ಮರ್ತ್ಯದ ಮನುಜರು, ಪ್ರಕೃತಿ ನಿಃಕಲವಾದ ಪರ ಮಾನುಭಾವಿಗಳಪ್ಪ ಪರಮ ಲಿಂಗೈಕ್ಯರ ಅನುವನರಿಯದೆ ಬಾಯಿಗೆ ಬಂದಂತೆ ಓದೊಂದ ನುಡಿವ ಮಂದಮತಿಗಳಪ್ಪ ಸಂದೇಹಿಗಳು, ನಿಮ್ಮನೂ ತಮ್ಮನ್ನೂ ತಾವೆತ್ತ ಬಲ್ಲರಯ್ಯಾ ಸೌರಾಷ್ಟ್ರ ಸೋಮೇಶ್ವರಾ !"

ಮನೋವಾಕ್ಕಾಯದಲ್ಲಿ ಲಿಂಗವ ನಂಬಿ ನಚ್ಚಿ ಬಚ್ಚತವೋಗಿ, ಸಚ್ಚಿದಾನಂದದಿಂ ಪರವಶನಾಗಿ, ಲಿಂಗದೊಳು ತನ್ನಂಗ, ಲಿಂಗಭಾವದೊಳಗೆ ತನ್ನ ಮನ, ಪರಬಿಂದು ಪರನಾದದಲ್ಲಿ ವಾಕ್ಕು, ಇಂತು ತ್ರಿಕರಣ ಶುದ್ಧನಾಗಿ ಲಿಂಗವನಪ್ಪಿ ಒಪ್ಪವಳಿದು ಭಾವ ಭೇದ ವಿಲ್ಲದಿಪ್ಪಂತಿರಿಸಯ್ಯಾ ಸೌರಾಷ್ಟ್ರ ಸೋಮೇಶ್ವರಾ !"

"ಮನ ಘನವಸ್ತುವಾದ ಬಳಿಕ ಮನ ವಚನಕಾಯವೆಂಬ ತ್ರಿಕರಣ ಶುದ್ಧಾತ್ಮನೆಂಬೆ ; ನಿತ್ಯ ಮುಕ್ತನೆಂಬೆ ; ನಿರಾಲಂಬಿಯೆಂಬೆ. ಆತನ ತನು ಶುದ್ಧವಾಗಿ ತನುವೇ ಗುರು, ಆತನ ಮನ ಶುದ್ಧವಾಗಿ ಮನವೇ ಲಿಂಗ ; ಆತನ ಭಾವ ಶುದ್ಧವಾಗಿ ಭಾವವೇ ಮಹಾನುಭಾವ ಚರಲಿಂಗನೋಡಾ ! ಇಂತೀ ಜ್ಞಾನಗುರು, ಅರುಹೆಂಬ ಶಿವಲಿಂಗ, ಮಹಾನುಭಾವವೆಂಬ ಜಂಗಮ ಇಂತೀ ತ್ರಿವಿಧವು ತನ್ನ ತ್ರಿವಿಧಾತ್ಮ ನೋಡಾ ! ಜ್ಞಾನಗುರುವೆಂದರೆ ತನ್ನ ಜೀವಾತ್ಮ. ಅರುಹು ಶಿವ ಲಿಂಗವೆಂದರೆ ತನ್ನ ಅಂತರಾತ್ಮ: ಮಹಾನುಭಾವ ಜಂಗಮವೆಂದರೆ ತನ್ನ ಪರಮಾತ್ಮ. ಇಂತೀ ತ್ರಯಾತ್ಮ ಏಕಾತ್ಮವಾದರೆ ಸಚ್ಚಿದಾನಂದ ನಿರಂಜನ ಪರಾಪರ ವಸ್ತು ನೀನೆ. ಅಲ್ಲಿ ನಾ ನೀನೆನ್ನಲಿಲ್ಲ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !"

ಮನೋವೃತ್ತಿ ಮನೋವಾಸನೆಗಳು ಲಯವಾದರೆ ಆಗುವ ಪರಾತ್ಮರೂಪವನ್ನು ನಿರೂಪಿಸುವ ವಚನಗಳನ್ನು ಎತ್ತಿ ಉದ್ಧರಿಸಲಾಯಿತು. ಈ ವೃತ್ತಿ

ಈ ವಾಸನೆಗಳಿಗೆ ಕರ್ಮವೇ ಮೂಲವೆಂಬ ರೇಣುಕ ಜಗದ್ಗುರುವಿನ ನಿರೂಪ ವನ್ನು ನಿರುಕಿಸೋಣ :

"ಕರ್ಮವಶದಿಂದುದಯಿಸಿದ ಶರೀರವ ಕರ್ಮತ್ರಯಂಗಳಲ್ಲಿ ಲೇಪವಾಗದೆ ನೀರತಾವರೆಯಂತೆ ನಿರ್ಲೇಪವಾದುದು. ಇದಕ್ಕೆ ಶ್ರುತಿಃ "ಯಥಾಪುಷ್ಕರ ಪರ್ಣಂತು ಆಪೋ ನ ಶ್ಲೇಷ್ಯಂತ। ಯೇವಮೇವಂ ವಿಪಾಪ ಕರ್ಮ ಸಃ ಶಿಷ್ಯಂತಿ ॥—ಇಂತೆಂದುದಾಗಿ ಜ್ಯೋತಿಷ್ಟೋಮ ಬ್ರಹ್ಮಹತ್ಯ ಮೊದಲಾದ ಸಂಚಿತ ಪ್ರಾರಬ್ಧ ಆಗಾಮಿ ರಹಿತರು, ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು."

ಕರ್ಮತ್ರಯಕ್ಕೆ ಬಲಿಬೀಳಬಾರದು ಮಾಹೇಶ್ವರಾಂಗನು. ಬಿದ್ದರೆ ವಿಷಯವಾಸನೆಗಳು ಅಳಿಯವು. ಅಳಿಯದ ಬಳಿಕ ಕಾಯಗುಣಗಳು ಬಿಡವು ಪರಕಾಯತ್ವವು ಕೈಗೂಡದು.

ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ 'ಜನ್ಮಬೀಜ' ವನ್ನು ಶಿವ ಜ್ಞಾನಾಗ್ನಿಯಲ್ಲಿ ಹುರಿದು ಶಿವತತ್ತ್ವವೊಂದನ್ನೇ ಆಶ್ರಯಿಸಿ ಇರುವುದೇ ಶಿವ ಕಾಯ ಅಥವಾ ಪರಕಾಯ ಎಂಬುದನ್ನು ಚೆನ್ನಾಗಿ ಚಿಂತನ ಮಾಡಬೇಕು.

ಎಲ್ಲಕ್ಕೂ ಮೂಲವಾದುದು ಜನ್ಮಬೀಜ. ಆ ಜನ್ಮಬೀಜವೇ ಅತ್ಯಂತ ಸೂಕ್ಷ್ಮವಾದ ಕಳೇವರ. ಅದನ್ನು ಶಿವ ಅಥವಾ ಪರ ವಾಗಿಸಬೇಕಾದರೆ ಅದು ಜ್ಞಾನಜ್ಯೋತಿಯ ಸಂಗದಲ್ಲಿದ್ದು ಮೊಳಕೆಯಾಗುವಿಕೆಯನ್ನು ಮಾಣಿಸಿಕೊಳ್ಳ ಬೇಕು.

"ಪರಾಹಂತಾಮನುಪ್ರಾಪ್ಯ ಪಶ್ಯೇದ್ವಿಶ್ವಂ-ಚಿದಾತ್ಮಕಂ।
ನದೇಹೀತಿ ಭ್ರಮಸ್ತಸ್ಯ ನಿಶ್ಚಿತಾ ಹಿ ಶಿವಾತ್ಮತಾ ॥
ಸ್ವಸ್ವರೂಪಂ ಶಿವಾಕಾರಂ ಜ್ಯೋತಿ ಸ್ಸಾಕ್ಷಾದ್ವಿಚಿಂತಯನ್।
ದೇಹವಾನಪಿ ನಿರ್ದೇಹೋ ಜೀವನ್ಮುಕ್ತೋಹಿ ಸಾಧಕಃ॥"

ಪರವಸ್ತುವೇ ನಾನು, ಬೇರಲ್ಲ; ಎಂಬ ಅನುಭವವುಂಟಾಗಿ ವಿಶ್ವವನ್ನು ಆ ಚಿದ್ರೂಪ ಪರವಸ್ತು ಸ್ವರೂಪವನ್ನಾಗಿಯೇ ನೋಡುವ ಪರಕಾಯನಿಗೆ ನಾನು

ದೇಹವುಳ್ಳವನೆಂಬ ಭ್ರಾಂತಿಯೇ ಹುಟ್ಟದು. ಪ್ರತಿಯಾಗಿ ನಾನು ಪರಶಿವ ಸ್ವರೂಪನೇ ಆಗಿರುವೆನೆಂಬ ಸ್ಥಿರ ಭಾವವುಂಟಾಗುತ್ತದೆ.

ತನ್ನ ಸ್ವರೂಪವನ್ನು ಸಾಕ್ಷಾತ್ ಶಿವಸ್ವರೂಪರೂಪ ಜ್ಯೋತಿಯನ್ನಾಗಿ ತಿಳಿದವನು ದೇಹಿಯಾಗಿದ್ದರೂ ನಿರ್ದೇಹಿ ; ಸಾಧಕನಾಗಿದ್ದರೂ ಜೀವನ್ಮುಕ್ತ.

ಅಪರಾಹಂತತೆಯು ದೇಹಭಾನಕ್ಕೆ ಮೂಲ. ಕಾಯ ಕರಣೇಂದ್ರಿಯ ಗಳಲ್ಲಿರುವ ಅಹಂತತೆಯೇ ಅಪರಾಹಂತತೆ ! ಚೈತನ್ಯಾಹಂತತೆಯೇ ಪರಾ ಹಂತತೆ ! ಇದರಿಂದ ದೇಹಭ್ರಾಂತಿ ದೂರಾಗುತ್ತದೆ. ಇದರಿಂದಾಗಿ ಈ ಪರಾಹಂತತೆಯು ಇಲ್ಲಿ ವಿಶೇಷಾಂಶವಾಗಿದೆ ; ಅಧಿಷ್ಠಾನವೂ ಆಗಿದೆ. ವಿಶ್ವವು ಚಿದಾತ್ಮಕವಾಗಿ ಇರುವುದಕ್ಕೂ ತೋರುವದಕ್ಕೂ ಪರಾಹಂತತೆ ಅಧಿಷ್ಠಾನ ವಾಗಿದೆ. ಸಮಷ್ಟಿಯೇ ಚಿದಾತ್ಮಕವಾಗಿ ತೋರುವಾಗ ವ್ಯಷ್ಟಿಯೂ ಚಿದಾತ್ಮಕ ವಾಗಿ ತೋರುವಲ್ಲಿ ಯಾವ ಅಭ್ಯಂತರವಿಲ್ಲ.

ಜೀವನೂ ಜಗವೂ ಆಗಿರುವವನು ಆ ಪರಶಿವನೇ ! ಅಂತಹ ಆ ಪರ ವಸ್ತುವೇ ತಾನೆಂದು ತಿಳಿದ ಬಳಿಕ ತಾನೂ ಪರವಸ್ತುವೇ ಆಗುತ್ತಾನೆ. ಜಗತ್ತೂ ಸಹ ಆ ಪರವಸ್ತು ಸ್ವರೂಪವಾಗಿಯೇ ಕಾಣುತ್ತದೆ. ಹೀಗಿರುವಾಗ ದೇಹ-ಜಗತ್ತು ಎಂಬ ಭ್ರಮೆಗೆ ಅವಕಾಶವಿರುವುದಿಲ್ಲ. "ಪರಬ್ರಹ್ಮ ಸ್ವರೂಪನಾದ ಪರಮಾತ್ಮನೇ ಸರ್ವಾತ್ಮನು. ಪರಮಾತ್ಮನೇ ಅಂತರಂಗ ಬಹಿರಂಗ ಭರಿತ. ನಿಶ್ಚಿಂತ, ನಿರ್ಮಾಯ, ನಿರಾವರಣ, ಸರ್ವಗತ, ಸರ್ವಜ್ಞ, ಅಪ್ರಮಾಣ, ಅಗೋ ಚರ, ಸೌರಾಷ್ಟ್ರ ಸೋಮೇಶ್ವರ ಲಿಂಗವು ತಾನೆ." ಈ ವಚನದಲ್ಲಿ ಪರಾಹಂತ ತೆಯ ವ್ಯಾಪಕತೆಯನ್ನು ಪರಿಪೂರ್ಣತೆಯನ್ನು ನಿಶ್ಚಿಂತಾದಿ ಗುಣ ಪರತೆಯನ್ನು ನಿದರ್ಶಿಸಬಹುದು.

'ಚಿದಾತ್ಮಕಂ ವಿಶ್ವಂ' ಅಂದರೆ ಚಿದ್ ಬ್ರಹ್ಮಾಂಡವೆಂದರ್ಥ. ಬ್ರಹ್ಮಾಂಡ, ಪಿಂಡಾಂಡ, ಚಿದ್ ಬ್ರಹ್ಮಾಂಡ ಎಂದು ಮೂರನ್ನಾಗಿ ಹೇಳುವುದುಂಟು. ಮೊದ ಲಿನವೆರಡು ಚಿದ್ಬ್ರಹ್ಮಾಂಡದಲ್ಲಿ ಲೀನವಾಗಿರುತ್ತವೆ. ಅಂತಹ ಚಿದ್ಬ್ರಹ್ಮಾಂಡ ವನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಪರಕಾಯನ ಪರಮೋದ್ದೇಶ, ಅದಾದರೆ ಬ್ರಹ್ಮಾಂಡ ಪಿಂಡಾಂಡಗಳ ಭೇದ ಅತನಿಗೆ ಇರುವುದಿಲ್ಲ, "ಚಿದ್ಬ್ರಹ್ಮಾಂಡವೆಂಬ ಭಾಂಡದಲ್ಲಿ ಅನಂತ ವಿಚಿತ್ರ ಭುವನಂಗಳಡಗಿಪ್ಪವಯ್ಯ. 'ಆಲಯಂ ಸರ್ವ

ಭೂತಾನಾಂ ಲಯಾನಾಂ ಲಿಂಗಮುಚ್ಯತೇ' ಎಂಬುದಾಗಿ, ಅನಂತ ಕೋಟಿ ಬ್ರಹ್ಮಾಂಡಗಳು ನಿಮ್ಮ ರೋಮಕೂಪದಲ್ಲಿ ಅಡಗಿಪ್ಪವೆಂದಡೆ ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಿನ ಬಾಲಕರು. ಇವರೆತ್ತ ಬಲ್ಲರೋ ಲಿಂಗದ ನಿಜವ ? ಅಪ್ರಮಾಣ, ಅಗೋಚರ, ಮಹಂತ ನಿಮ್ಮ ನಿಜವನಾರು ಬಲ್ಲರಯ್ಯಾ ಸೌರಾಷ್ಟ್ರ ಸೋಮೇಶ್ವರಾ ?

ಅಜಾಂಡ, ಪಿಂಡಾಂಡ, ಚಿದ್ಬ್ರಹ್ಮಾಂಡವೆಂಬ ತ್ರಿಭಾಂಡದೊಳಗೆ ಸುರರು ನರರು ಮುಕ್ತರೆಂಬವರೆಲ್ಲಾ ಅಡಗಿದರಾಗಿ, ಅಖಂಡಿತ ಪರಿಪೂರ್ಣ ಭಾಂಡವೆ ತಾನೆಂದರಿದರಿವೆ ತಾನಾಗಿ ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗ ಬೇರಿಲ್ಲ."

"ಚಿದ್ವಿಲಾಸದ ಮುಂದೆ ಇದಿರಿಟ್ಟು ತೋರುವ ಮಾಯಾವಿಲಾಸದ ಹೊದ್ದಿಗೆಯಿದೇನೋ? ಶುದ್ಧ ನಿರ್ಮಲ ನಿರಾವರಣನೆಂಬ ನಿಜಭಾವವೆ ನಿಶ್ಚಯ ವಾದರೆ ಎನ್ನ ತನು ಮನ ಭಾವದ ಒಳ ಹೊರಗೆ ಹಿಡಿದಿಪ್ಪ ಮಾಯಾ ಪ್ರಪಂಚು ಮಾಬುದು ಕಾಣಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.

ಚಿದಾನಂದ ಸುಖಮಯವಪ್ಪ ವಸ್ತುವಿಗೆ, ಇಂದ್ರಿಯಾನಂದ ಹೊದ್ದಿದಡೆ ನಾ ನೊಂದೆನಯ್ಯಾ ; ನಾನು ಬೆಂದೆನಯ್ಯಾ. ನಾನು ಚಿದಾನಂದ ಸ್ವರೂಪನು. ಈ ಅನಾನಂದವಿದೇನೋ ? ಇದು ಕಾರಣ, ಅನಾಯತವಪ್ಪ ಇಂದ್ರಿಯ ವಿಕಾರವ ಮಾಣಿಸಯ್ಯ ಎನ್ನ ತಂದೆ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ !"

ಈ ನಾಲ್ಕು ವಚನಗಳು ಜಗದ್ಗುರು ರೇಣುಕರ 'ಚಿದಾತ್ಮಕಂ ವಿಶ್ವಂ' ಶಿವಾತ್ಮತಾ ನಿಶ್ಚಿತಾ' ಎಂಬೆರಡು ಪದಗಳ ಆಶಯವನ್ನು ವಿಶದವಾಗಿ ವಿವರಿಸಿವೆ. ಆ ನಿರಾವರಣ ನಿಜ ಚಿದ್ರೂಪವೇ ತಾನೆಂದು ನಿಶ್ಚಯವಾದಾಗ ತಾನು ದೇಹ ಎಂಬ ಭ್ರಾಂತಿ ಜನಿಸದು.

ಭ್ರಮೆ ಸೋಪಾಧಿಕ ನಿರುಪಾಧಿಕವೆಂದು ಎರಡು ಬಗೆ. ಶುಕ್ತಿಯಲ್ಲಿ ರಜತ ಭ್ರಮೆ ನಿರುಪಾಧಿಕ ಭ್ರಮೆ. ಶುಭ್ರ ಸ್ಫಟಿಕದಲ್ಲಿ ಜಪಾಕುಸುಮಜನ್ಯರಕ್ತತ್ವ ಭ್ರಮೆ ಪೋಪಾಧಿಕ ಭ್ರಮೆ. ಅಧಿಷ್ಠಾನವಾದ ಶುಕ್ತಿಯ ಜ್ಞಾನದಿಂದ ಆರೋಪಿತವಾದ ರಜತದಸ್ವರೂಪ ನಿವೃತ್ತಿಯಾಗುವುದೇ ನಿರುಪಾಧಿಕ ಭ್ರಮೆಯ ಲಕ್ಷಣ. ಅಧಿಷ್ಠಾನ ರೂಪವಾದ ಸ್ಫಟಿಕದ ಜ್ಞಾನದಿಂದ ಆರೋಪಿತವಾದ ಜಪಾಕುಸುಮದ ನಿವೃತ್ತಿ ಆಗದಿರುವುದೇ ಸೋಪಾಧಿಕ ಭ್ರಮೆಯ ಲಕ್ಷಣ. ಮತ್ತು ಕೇವಲ ಅಜ್ಞಾನ

ದಿಂದಾದ ಭ್ರಾಂತಿಯನ್ನು ನಿರುಪಾಧಿಕ ಭ್ರಾಂತಿಯೆಂದು, ಉಪಾಧಿ ಸಹಿತ ಅಜ್ಞಾನದಿಂದಾದ ಭ್ರಾಂತಿಯನ್ನು ಸೋಪಾಧಿಕ ಭ್ರಾಂತಿಯೆಂದು ಸಹ ಹೇಳುವುದುಂಟು.

ಇಲ್ಲಿ ನಾವು ಆ ಪರವಸ್ತುವಿನಲ್ಲಿ ತನ್ನ ಅಪರಾ ಅಹಂಕಾರ ಸಂಬಂಧದಿಂದ ಆಗುವ ದೇಹ ವಿಶ್ವಗಳ ಭ್ರಮೆಯನ್ನು ಸೋಪಾಧಿಕ ಭ್ರಮೆಯೆಂದು ಹೇಳುತ್ತೇವೆ. ಅದ್ವೈತಿಗಳೂ ಹೀಗೆಯೇ ಹೇಳುತ್ತಾರೆ, ಆದರೆ ದೇಹ ವಿಶ್ವಗಳು ಸತ್ಯವೆಂದು ಹೇಳುವ ಶಿವಾದ್ವೈತ ಶಿದ್ಧಾಂತಕ್ಕೆ ಸೋಪಾಧಿಕ ಭ್ರಮೆ ಒಪ್ಪಿಗೆಯಾಗುತ್ತದೆ : ಅರ್ಥವತ್ತಾಗಿರುತ್ತದೆ. ಅದೇ ದೇಹ-ವಿಶ್ವ ಸುಳ್ಳೆನ್ನುವ ಬ್ರಹ್ಮಾದ್ವೈತಿಯು ಸೋಪಾಧಿಕ ಭ್ರಮೆಯನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾನೆಯೋ ತಿಳಿಯದಾಗಿದೆ, ಸ್ಫಟಿಕದಂತಿರುವ ಬ್ರಹ್ಮಾಧಿಷ್ಠಾನದಲ್ಲಿ ತೋರಿದೆ ಪ್ರಪಂಚ ಭ್ರಮೆ, ಶುಭ್ರ ಸ್ಫಟಿಕ ದಲ್ಲಿ ತೋರಿದ ಜಪಾಕುಸುಮದ ರಕ್ತದಂತೆ ಸೋಪಾಧಿಕವೆಂದರೆ ಜಪಾಕುಸುಮ ದಂತೆ ಪ್ರಪಂಚವೂ ಸತ್ಯವೇ ಆಗುವುದಿಲ್ಲವೆ ? ಇದಕ್ಕೆ ಬ್ರಹ್ಮಾದ್ವೈತದ ಉತ್ತರ ವೇನೋ ? ಇದಿರಲಿ; ಇನ್ನು ಶಿವಾದ್ವೈತದಲ್ಲಿ ದೇಹ ವಿಶ್ವಗಳು ಸತ್ಯವಾದ ವೆಂದರೆ ಅತ್ಯಂತ ಸೂಕ್ಷ್ಮರೂಪದಲ್ಲಿ ಅವ್ಯಕ್ತವಾಗಿ ಆ ಪರಶಿವನಲ್ಲಿ ಬೆರದೇಕವಾಗಿ ಇರುವವೆಂದರ್ಥ. ಅದು ಚಿದ್ಬ್ರಹಾಂಡ. ಅದರ ಗರ್ಭದಲ್ಲಿ ಇವೆಲ್ಲವ ಇದ್ದೇ ಇರುತ್ತವೆ. ಆದ್ದರಿಂದ ಆ ಚಿದ್ಬ್ರಹ್ಮಾಡ ಸ್ವರೂಪದಲ್ಲಿಯೇ ಬ್ರಹ್ಮಾಂಡ ಪಿಂಡಾಂಡಗಳನ್ನು ನೋಡಬೇಕಲ್ಲದೆ ಬೇರೆ ರೂಪದಲ್ಲಿ ಸ್ಥೂಲವಾಗಿ ನೋಡು ವುದೇ ಭ್ರಮೆ, ಶಿವಾದ್ವೈತದಲ್ಲಿ !

ಇನ್ನು ಎರಡನೆಯ ಮಂತ್ರದಲ್ಲಿ ಬರುವ 'ಸ್ವಸ್ವರೂಪಂಶಿವಾಕಾರಂ' ಎಂಬ ಅರ್ಥಪೂರ್ಣವಾದ ಮಾತನ್ನು ಅರಿಯಬೇಕು. ಎಂತಹ ಅನುಭವಪೂರ್ಣವಾಣಿ ಯಿದು! ಶಿವಾಕಾರವಾದುದೇ ಸ್ವಸ್ವರೂಪ; ಶಿವಾಕಾರವಲ್ಲದ್ದು ಸ್ವಸ್ವರೂಪವಲ್ಲ. ಯಾವಾಗಲೂ ಅಂದರೆ ತ್ರಿಕಾಲದಲ್ಲಿಯೂ ಇರಲುಳ್ಳ ವ್ಯಾವರ್ತಕವೇ ಸ್ವರೂಪ ಲಕ್ಷಣ. ಬೇರ್ಪಡಿಸಿ ತೋರಿಸುವುದಕ್ಕೆ 'ವ್ಯಾವರ್ತಕ' ಎನ್ನುವರು. ಸತ್ ಚಿತ್ ಆನಂದಗಳಿಂದ ಅಸಮ ಅಥವಾ ಅಪೂರ್ಣವಾದವುಗಳನ್ನು ಬೇರ್ಪಡಿಸಿ ತೋರು ವುದೇ ಸ್ವರೂಪ ಲಕ್ಷಣವುಳ್ಳ ವಸ್ತು. ಮತ್ತು ತಟಸ್ಥ, ಅತದ್ವ್ಯಾವೃತ್ತಿ ಲಕ್ಷಣ ಗಳೆರಡನನ್ನು ಬೇರ್ಪಡಿಸುವುದೇ ಸ್ವರೂಪ ಲಕ್ಷಣ. "ಕಿಂಚಿತ್ ಕಾಲವರ್ತಿ ವ್ಯಾವರ್ತಕತ್ವಂ ತಟಸ್ಥ ಲಕ್ಷಣಂ" ಕಾಗೆ ಕುಳಿತ ಮನೆಯು ದೇವದತ್ತನ ಮನೆ,

ಎಂದು ಹೇಳುವುದೇ ತಟಸ್ಥ ಲಕ್ಷಣ. ಇಲ್ಲಿ ಕಾಗೆ ಮನೆಯ ಮೇಲೆ ಯಾವಾಗಲೂ ಇರದು. ಈ ಲಕ್ಷಣವನ್ನು ಶಿವಾದ್ವೈತಿಗಳು ಒಪ್ಪರು. "ಲಕ್ಷ ಭಿನ್ನವಸ್ತು ವ್ಯಾವರ್ತಕಂ ಅತದ್ವ್ಯಾವೃತ್ತಿ ಲಕ್ಷಣಂ" ಉದಾಹರಣೆಗೆ ನೇತಿ ನೇತಿ ಎಂದು ಹೇಳುವುದು ಅದ್ವೈತಮತ. ನಿರಸನವೇ ಅತದ್ವ್ಯಾವೃತ್ತಿ ಲಕ್ಷಣವೆಂದು ಶಿವಾದ್ವೈತ ಮತ. ಸದಾ ವಿದ್ಯಮಾನತ್ವೇ ಸತಿ ವ್ಯಾವರ್ತಕತ್ವಂ ಸ್ವರೂಪಲಕ್ಷಣಂ" ಚೆನ್ನಾಗಿ ಬೆಳಗುವವನು ರವಿಯು ಎಂಬಂದೇ ಇದಕ್ಕೆ ನಿದರ್ಶನ. ಇದನ್ನು ಅನುಸರಿಸಿ ಜಗದ್ಗುರು ರೇಣುಕರು ಇಲ್ಲಿ ಸ್ವಸ್ವರೂಪ ಲಕ್ಷಣವನ್ನು ಹೀಗೆ ಹೇಳಿದಾರೆ : 'ಶಿವಾಕಾರಂ-ಸಾಕ್ಷಾಜ್ಜ್ಯೋತಿಃ' ಎಂದು! ಎಂತಹ ಸತ್ಯ ಸ್ವಸ್ವರೂಪ ಸಲ್ಲಕ್ಷಣವಿದು! ಪ್ರತ್ಯಕ್ಷ ಶಿವಾಕಾರವಾದ ಜ್ಯೋತಿಯೇ ಸ್ವಸ್ವರೂಪ, ಸ್ವಸ್ವರೂಪ ಜ್ಯೋತಿ. ಅಪ್ರತ್ಯಕ್ಷವಲ್ಲ, ಪ್ರತ್ಯಕ್ಷ. ಪ್ರತ್ಯಕ್ಷವೆಂದರೆ : "ಪ್ರಮಾತೃ ನಿಷ್ಠ ಚೈತನ್ಯ. ಶಿವಾಕಾರವೇ ಪ್ರಮೇಯ ನಿಷ್ಠ ಚೈತನ್ಯ, ಅದುವೇ ಶಿವಾಕಾರ. ಶಿವನ ಆಕಾರ, ಅಥವಾ ಶಿವದ-ಆಕಾರ. ಸತ್ ಚಿತ್ ಆನಂದವೇ ಶಿವಾಕಾರ. ಇದುವೆ ಆಗಬೇಕು ಪ್ರಮಾತೃನಿಷ್ಠ ಚೇತನದ ಸ್ವಸ್ವರೂಪ. ಇದು ಮೇಲೆ ಹೇಳಿದ ಲಕ್ಷಣದಿಂದ ಕೂಡಿದ ಪ್ರತ್ಯಕ್ಷ ಜ್ಯೋತಿ. ಈ ಜ್ಯೋತಿ ಅಗ್ನಿಯಲ್ಲ, ಆದಿತ್ಯನಲ್ಲ. ಅಕ್ಷಿಯಲ್ಲ. ಈ ಅತದ್ವ್ಯಾವೃತ್ತಿ ಲಕ್ಷಣವನ್ನು ಸೂಚಿಸಲು 'ಶಿವಾಕಾರಂ ಜ್ಯೋತಿ' ಎಂದು ಹೇಳಲಾಗಿದೆ, ಪ್ರಮಾತೃ ಪ್ರಮೇಯ ಪ್ರಮಾಣಗಳ ಭೇದ ನಿರಸನಕ್ಕಾಗಿ ಸಾಕ್ಷಾತ್ ಪದ ಪ್ರಯೋಗವಿದೆ.

ಚೇತನ ಮಾತ್ರ ಶಿವಾಕಾರವಾದರೆ ಸಾಲದು. ಚೇತನದೊಡಗೂಡಿಯಿರುವ ಕಾಯಕರಣೇಂದ್ರಿಯಂಗಳೂ ಶಿವಾಕಾರವಾಗಿರಬೇಕು, ಅಂದರೆ ನಡೆ ನುಡಿಗಳೂ ನೆನಹು ನಲಿವುಗಳೂ ಶಿವಾಕಾರವಾಗಿರಬೇಕು. ಆಹಾರ ವ್ಯವಹಾರಗಳೆಲ್ಲ ಶಿವಾಕಾರವಾಗಿರಬೇಕು.

"ಶಿವಲಾಂಛನವ ಧರಿಸಿ ಚರಲಿಂಗಮೂರ್ತಿಯಾದ ಬಳಿಕ ತ್ರಿಲೋಕಕ್ಕೆ ಕರ್ತೃಭಾವದಿಂದಿರಬೇಕಲ್ಲದೆ, ಅಶನದ ಆಪ್ಯಾಯನ, ವಿಷಯಂಗಳಿಗೆ ಕಂಡ ಕಂಡಲ್ಲಿ ಕರೆ ಕರೆದು, ಕರ ಕರಿಸಿ ಕಾಂಚನಕ್ಕೆ ಕೈನೀಡುವ ಕಷ್ಟವ ನೋಡಾ ! ಉಪಾಧಿಯಿಂದೊಡಲ ಹೊರೆವ ಪರಿಯ ನೋಡಯ್ಯ ! ಇಂತಿವೆಲ್ಲ ಭಂಗವೆಂದರಿತು ಅಭಂಗವಾಗಿರಬೇಕಯ್ಯ, ಸೌರಾಷ್ಟ್ರ ಸೋಮೇಶ್ವರಾ! ಈ ವಚನಾಭಿಪ್ರಾಯ

ದಂತೆ ಪರಕಾಯನ ತನಂ ಸತ್, ಮನ ಚಿತ್, ಭಾವ ಆನಂದವಾಗಬೇಕು. ಆಗ ಆತನ ಚೇತನ ನಿತ್ಯ ಪರಿಪೂರ್ಣ ಅಖಂಡ ವಾಗುತ್ತದೆ; ಶಿವಾಕಾರ ವಾಗುತ್ತದೆ; ಸಾಕ್ಷಾತ್ ಜ್ಯೋತಿಯಾಗುತ್ತದೆ.

ಶಿವತ್ತ್ವವು ಅಂಗಸ್ಥಲಗಳಲ್ಲೆಲ್ಲ ಅಳವಡುವುದೇ ಶಿವಾಕಾರ ಸ್ವರೂಪ. ಅಂಗಗುಣಗಳು ಹೋಗಿ ಲಿಂಗಗುಣಗಳು ಗುಂಪಿತವಾಗಬೇಕು. ಅಂಗಕ್ರಿಯೆಗಳು ಲಿಂಗಕ್ರಿಯೆಗಳಾಗಿ ಏರ್ಪಡಬೇಕು. ಅಶಿವತ್ತ್ವವು ಅದೆಲ್ಲಿಯೂ ಇರಬಾರದು. ಅರ್ಚನ ಅರ್ಪಣ ಅನುಭವಗಳು ಶಿವಾರ್ಚನ ಶಿವಾರ್ಪಣ ಶಿವಾನುಭವ ವಾಗಿ ಮಾರ್ಪಡಬೇಕು. ಜೀವ ಬತ್ತಿಗೆ ಶಿವ ಎಂಬ ಜ್ಯೋತಿಯನಂಟಿಸಬೇಕು. ಆಗ ಶಿವಾಕಾರವಾಗಿ ಭವವಿಕಾರ ಹರಿಯುತ್ತದೆ. ಮರಣದ ತೊಡಕು ಬಿಚ್ಚುತ್ತದೆ. ಭಾವಪ್ರಕಾರ ಶಿವೈಕಾಕಾರವಾಗುತ್ತದೆ. ಇಂತಾದಾಗ 'ದೇಹವಾನಪಿ ನಿರ್ಲೇಪಃ' ಎಂದು ಜಗದ್ಗುರು ರೇಣುಕರು ಅಪ್ಪಣೆ ಮಾಡಿದಂತೆ ಅಕಾಯತ್ವ ಅಳವಡುತ್ತದೆ. "ತನುತ್ರಯಂಗಳು ಸದ್ರೂಪವಪ್ಪ ಗುರುವಿನಲ್ಲಡಗಿ ತನು ನಿರ್ವಯಲಾಯಿತ್ತು. ಮನತ್ರಯಂಗಳು ಚಿದ್ರೂಪವಪ್ಪ ಲಿಂಗದಲ್ಲಿ ಅಡಗಿ ಮನ ನಿರ್ವಯಲಾಯಿತ್ತು. ಧನವೆಂದರೆ ಅರ್ಥ, ಅರ್ಥವೆಂದರೆ ಜೀವಾತ್ಮ, ಜೀವಾತ್ಮ ಅಂತರಾತ್ಮ ಪರಮಾತ್ಮರೆಂಬ ಆತ್ಮತ್ರಯಂಗಳು ಪರಮಾನಂದವೆಂಬ ಜಂಗಮದಲ್ಲಡಗಿ ಏಕಾರ್ಥವಾದವಾಗಿ ಧನ ನಿರ್ವಯಲಾಯಿತ್ತು. ಈ ಸಚ್ಚಿದಾನಂದನಿತ್ಯಪರಿಪೂರ್ಣನಿರಾಕಾರ ಪರವಸ್ತುವಿನಲ್ಲಡಗಿತ್ತಾಗಿ ಲಿಂಗೈಕ್ಯವಾಯಿತ್ತು ಕಾಣಾ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

"ತನುವ ನೀವು ಸೋಂಕಿ ತನು ನಷ್ಟವಾಯಿತ್ತು. ಮನವ ನೀವು ಸೋಂಕಿ ಮನ ನಷ್ಟವಾಯಿತ್ತು. ಭಾವವ ನೀವು ಸೋಂಕಿ ಭ್ರಮೆ ನಷ್ಟವಾಯಿತ್ತು. ಅರುವೆ ನೀವಾದಿರಾಗಿ ಮರಹು ನಷ್ಟವಾಗಿ ಹೋಯಿತ್ತಯ್ಯಾ. ಮರಹು ಅಳಿಯಿತ್ತಾಗಿ ಮಾಯೆಯಳಿದು ಹೋಯಿತ್ತಯ್ಯಾ. ಮಾಯೆಯಳಿಯಿತ್ತಾಗಿ ನಿರಾಳ ನಿರ್ಮಾಯ ಪರವಸ್ತುವಾದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !"

ತನುತ್ರಯವಿಲ್ಲವಾಗಿ ತನುಕ್ರಿಯೆ, ಕ್ರಿಯೆಗಳ ಫಲ ತನಗಿಲ್ಲವಾಗುವವು.

ಮಾಡಿಯೂ ಮಾಡಿದಂತೆ, ನುಡಿದೂ ನುಡಿಯದಂತೆ ಇರುವ ಉತ್ತಮ ಸ್ಥಿತಿಯೊದಗುತ್ತದೆ.

"ಸುಳಿದಡೆ ಒಡಲಿಲ್ಲ, ನಿಂದಡೆ ನೆಳಲಿಲ್ಲ; ನಡೆದಡೆ ಗಮನವಿಲ್ಲ, ನುಡಿದಡೆ ಶಬ್ದವಿಲ್ಲ ; ದಗ್ಧಪಟ ನ್ಯಾಯದಂತೆ ! ಉಂಡರೆ ಉಪಾಧಿಯಿಲ್ಲ, ಉಣ್ಣದಿದ್ದರೆ ಕಾಂಕ್ಷೆಯಿಲ್ಲ ; ಯಥಾ ಲಾಭ ಸಂತೃಪ್ತಿಯಾಗಿ ಸ್ತುತಿಯಿಲ್ಲ, ನಿಂದೆಯಿಲ್ಲ; ನಂಟಿಲ್ಲ, ಹಗೆಯಿಲ್ಲ ; ಅರುಹಿಲ್ಲ, ಮರಹಿಲ್ಲ ; ತಾನೆಂಬ ನೆನಹಿಲ್ಲವಾಗಿ ...ಸೌರಾಷ್ಟ್ರ ಸೋಮೇಶ್ವರನ ಶರಣರು ಲಿಂಗಪ್ರಾಣಿಗಳಾಗಿ, ಅಂಗವ ಮರೆಗೊಂಡು ಎಂತಿರ್ದಡಂ ಎಂತು ನಡೆದಡಂತಂತೆ ಸಂತಾ !"

ಹೀಗಿರುವ ಪರಕಾಯನೇ ಜೀವನ್ಮುಕ್ತನೆನಿಸುವನು. ಜೀವನ್ಮುಕ್ತನಿಗೆ ದೇಹಾದಿಗಳಿದ್ದರೂ ಇಲ್ಲದಂತಿರುತ್ತವೆ. ದೇಹಾದಿ ಪ್ರತೀತಿಯಿದ್ದು ಪರಶಿವ ಸ್ವರೂಪದಲ್ಲಿನ ಸ್ಥಿತಿಗೆ 'ಜೀವನ್ಮುಕ್ತಿ'ಯೆಂದು ಹೆಸರು. ಅದೇ ದೇಹಾದಿ ಪ್ರಪಂಚ ಪ್ರತೀತಿಯಿಲ್ಲದೆ ಶಿವಾಕಾರ ಸ್ವಸ್ವರೂಪವಾಗಿರುವಿಕೆಯೆ 'ವಿದೇಹ ಮುಕ್ತಿ' ! "ತನುವಿನೊಳಗೆ ತನುವಾಗಿಪ್ಪಿರಯ್ಯ. ಮನದೊಳಗೆ ಮನವಾಗಿಪ್ಪಿರಯ್ಯ. ಭಾವದೊಳಗೆ ಭಾವವಾಗಿಪ್ಪಿರಯ್ಯ. ಎನ್ನಂಗ ಪ್ರಾಣವು ಮಹಾಲಿಂಗವು ನೀನೆಯಾದ ಕಾರಣ ಎನಗಿನ್ನಾವ ಭಂಗವೂ ಇಲ್ಲ ನೋಡಾ! ಅದೇನು ಕಾರಣವೆಂದಡೆ : ಎನ್ನಂಗವು ಆತ್ಮನು ನಿನ್ನೊಳಡಗಿ ಶುದ್ಧ ಪರಮಾತ್ಮನಾದೆನ್ಕಾಣಾ ! ಇನ್ನಾವ ಪ್ರಪಂಚ ಎನಗಿಲ್ಲ, ನೀನು ನಿರ್ಲೇಪಕನಾದ ಕಾರಣ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !"

ಕತ್ತಲೆಯನೊಳಕೊಂಡ ಬೆಳಗಿನಂತೆ, ಪಕ್ಷಿಯನೊಳಗೊಂಡ ತತ್ತಿಯಂತೆ, ಮುತ್ತನೊಳಕೊಂಡ ಚಿಪ್ಪಿನಂತೆ, ಸಾಗರವನೊಳಕೊಂಡ ಶಶಿಯಂತೆ, ಜಗವನೊಳಕೊಂಡ ಆಕಾಶದಂತೆ-ಎನ್ನ ನೀವು ಒಳಕೊಂಡಿರಿಯಾಗಿ ನಾನೋ ನೀನೋ ಏನೆಂದರಿಯೆನಯ್ಯಾ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

"ದೇಹಸ್ತಿಷ್ಠತು ವಾ ಯಾತು ಯೋಗಿನಃ ಸ್ವಾತ್ಮಬೋಧಿನಃ ।
ಜೀವನ್ಮುಕ್ತಿರ್ಭವೇತ್ ಸದ್ಯಶ್ಚಿದಾನಂದ ಪ್ರಕಾಶಿನೀ ॥"

ಸ್ವಸ್ವರೂಪ ಜ್ಞಾನವುಳ್ಳ ಪರಕಾಯನಿಗೆ ದೇಹವಿದ್ದರೇನು ? ಹೋದ

ರೇನು ? ಸ್ವಸ್ವರೂಪ ಸಾಕ್ಷಾತ್ಕಾರವಾದೊಡನೆ ಆತನಿಗೆ ಸಚ್ಚಿದಾನಂದ ಪ್ರಕಾಶಕವಾದ ಜೀವನ್ಮುಕ್ತಿಯು ಲಭಿಸುತ್ತದೆ. "ಶರೀರಾವರಣವಿಲ್ಲದ ಚಿದಾವರಣನ ಕರಣಂಗಳೆಲ್ಲಾ ಚಿತ್ಕರಣಂಗಳು. ಆತಂಗೆ ಶರೀರ ಚಿದ್ಭೂಮಿ ಚಿಜ್ಜಲ ಚಿದಗ್ನಿ ಚಿತ್ಪ್ರಾಣವಾಯು ಚಿದಾಕಾಶಮಯ ನೋಡಾ ! ಆ ಚಿದಾಭರಣಂಗೆ ಚಿಚ್ಛಿತನ್ಯವೇ ಪ್ರಾಣಲಿಂಗ ನೋಡಾ ! ಆ ಚಿದಾಭರಣ ಶರಣ ಬಿದ್ಘನ ಲಿಂಗವನೆರೆದು ಪರಾಪರನಾದ ಪರಶಿವಯೋಗಿ ನೋಡಾ ! ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಆ ಚಿನ್ಮಯ ಸ್ವರೂಪ ಜೀವನ್ಮುಕ್ತನಿಗೆ ಶರೀರದ ಆವರಣವಿರದು, ಆತನಿಗೆ ಚಿದಾವರಣವಿದ್ದು ಚಿದ್ಘನನಾಗಿರುತ್ತಾನೆ, ಚಿತ್ಪರನಾಗಿರುತ್ತಾನೆ ; ಚಿದಂಗನಾಗಿರುತ್ತಾನೆ. ಸಚ್ಚಿದಾನಂದಗಳನ್ನು ಪ್ರಕಾಶಪಡಿಸುವ ಜೀವನ್ಮುಕ್ತಿಯೇ ಆತನ ಜೀವಾಳ, ಆ ಪರಮ ಪರಿಣಾಮದಲ್ಲಿಯೇ ಪರವಶನಾಗಿರುತ್ತಾನೆ.

"ಯಸ್ಮಿನ್ ಕಾಲೇ ಸ್ವಮಾತ್ಮಾನಂ ಯೋಗೀ ಜಾನಾತಿ ಕೇವಲಂ ।
ತಸ್ಮಾತ್ಕಾಲಾತ್ಸಮಾರಭ್ಯ ಜೀವನ್ಮುಕ್ತೋ ಭವೇದಸೌ ॥"

ಆತ್ಮಬೋಧಿಗೆ ಅರೆಚಣ ತಡವಿಲ್ಲದೆ ಆಗುತ್ತದೆ ಜೀವನ್ಮುಕ್ತಿ, ಜೀವನ್ಮುಕ್ತಿ ಚಿದಾನಂದಮಯಿ. ಆ ಚಿದಾನಂದದಲ್ಲಿರುವವನಿಗೆ ಇಂದ್ರಿಯಾನಂದದ ಹಂಬಲ ಹುಟ್ಟದು. ಇನ್ನಾವ ಹಂಬಲ ಹೊದ್ದದು, "ಚಿದ್ವಿಲಾಸದ ಮುಂದೆ ಇದಿರಿಟ್ಟು ತೋರುವ ಮಾಯಾವಿಲಾಸದ ಹೊದ್ದಿಗೆಯಿದೇನೋ ? ಶುದ್ಧ ನಿರ್ಮಲ ನಿರಾವರಣನೆಂಬ ನಿಜಭಾವವೆ ನಿಶ್ಚಯವಾದರೆ, ಎನ್ನ ತನುಮನ ಭಾವದ ಒಳ ಹೊರಗೆ ಹಿಡಿದಿಪ್ಪ ಮಾಯಾ ಪ್ರಪಂಚು ಮಾಬುದು ಕಾಣಾ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

ಚಿನ್ನದ ಗಿರಿಯಲ್ಲಿ ಚಿನ್ಮಯ ಮೂರ್ತಿಯ ಕಂಡೆನಯ್ಯಾ ! ಚಿನ್ನ ಕಾರ್ಮಿಕವಲ್ಲ ; ಚಿನ್ಮಯ ಮೂರ್ತಿಯಲ್ಲ. ಇದರನ್ವಯವೇನು ಹೇಳಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ !

ಚಿತ್ತನ ಮನೆಯಲ್ಲಿ ಸತ್ತಿಪ್ಪವನಿವನಾರೋ ? ಸತ್ತವನ ನೋಡಿ, ಎತ್ತ

ಹೋದರೆ, ಎತ್ತಹೋದವ ಸತ್ತು, ಸತ್ತವನೆದ್ದು ಕೂಗುತ್ತಿದಾನೆ. ಈ ಚಿತ್ರವನೇನೆಂಬೆನೋ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಜೀವನ್ಮುಕ್ತಿಯ ವಿಚಾರದಲ್ಲಿ ಈ ಮಾತುಗಳು ಗಮನಾರ್ಹವಾಗಿವೆ ; ಪ್ರಮಾಣಾರ್ಹವಾಗಿವೆ.

"ಆತ್ಮಜ್ಞಾನಾವಸಾನಂ ಹಿ ಸಂಸಾರಪರಿಪೀಡನಂ ।
ಸೂರ್ಯೋದಯೇಽಪಿ ಕಿಂ ಲೋಕಸ್ತಿಮಿರೇಣೋಪರುದ್ಧ್ಯತೇ ॥
ದೇಹಾಭಿಮಾನನಿರ್ಮುಕ್ತಃ ಕಲಾತೀತಪ್ರದಾಶ್ರಯಃ ।
ಕಥಂ ಯಾತಿ ಪರಿಚ್ಛೇದಂ ಶರೀರೇಷು ಮಹಾಬುಧಃ ॥

ನೇಸರನು ನಿಲಾಕಾಶದಲ್ಲಿ ಹುಟ್ಟಿದಬಳಿಕ ನರಲೋಕದಲ್ಲಿ ಕತ್ತಲೆಯಿರದು. ಇದರಂತೆ ಸ್ವರೂಪಜ್ಞಾನವಾದವನಿಗೆ ಸಂಸಾರ ಪೀಡೆಯಿರದು.

ಕಾಯದ ಅಭಿಮಾನವನ್ನು ಕೈಬಿಟ್ಟವನು ಕಲಾತೀತಪದವನ್ನು ಆಶ್ರಯಿಸುತ್ತಾನೆ. ನಿವೃತ್ಯಾದಿ ಶಾಂತ್ಯತೀತವಾದ ಕಲೆಗಳಿಗೆ ಅತೀತಪದದಲ್ಲಿರುವ ಆ ಮಹಾಜ್ಞಾನಿಯು ಶರೀರಗತ ಪರಿಚ್ಛೇದಕ್ಕೆ ಒಳಗಾಗನು; ಅಭಿಮಾನಿಯಾಗನು. ಪರಕಾಯನು ಶರೀರಭೇದಗಳನ್ನು ಮಾಡನು. ಶರೀರಾಭಿಮಾನವಿಲ್ಲದೆ ಅಂಗಾಂಗ ಭೇದವಿಲ್ಲದೆ ಪಂಚಕಲಾತೀತ ಬಿಂದುನಾದಾತೀತ ಪರವಸ್ತು ಸ್ವರೂಪವಾಗಿರುತ್ತಾರೆ.

ಆತ್ಮಜ್ಞಾನವೇ ಆತ್ಮತೇಜಸ್ಸು. ಅದನ್ನು ಸಂಪಾದಿಸುವುದೇ ನಿಜವಾದ ತಪಸ್ಸು. ಅದರಿಂದ ತಾಪತ್ರಯಗಳು ತೊಲಗುತ್ತವೆ. ಮಲ ಮಾಯೆಗಳು ಮಾಯವಾಗುತ್ತವೆ. ಸಂಸಾರರಾತ್ರಿ ಸುತ್ತುವರಿಯದು.

"ಸಂಜ್ಞಾನಾನುಭಾವದಿಂ ಭವಿಭವವಳಿದುಳಿದ ಶೇಷನು; ನಿರ್ಮಲ ನಿರ್ಮಾಯನಾಗಿ ಸದ್ಗುರುಪರಶಿವಾನುಗ್ರಹ ಪ್ರಸಾದವ ಪಡೆದು ನೆನಹಳಿದುಳಿದ ಶೇಷನು ಅರಿವಿನ ಸುಖದ ಸವಿಯಲ್ಲಿ ಮೈಮರೆದ ಘನಪರಿಣಾಮ ನಿಜ ನಿಂದ ಶೇಷನು, ಸೌರಾಷ್ಟ್ರ ಸೋಮೇಶ್ವರಲಿಂಗ, ಲಿಂಗೈಕ್ಯದನು ಪಮುಶೇಷ ಪರತತ್ತ್ವವ ಬೆರಸಿ ನಿಂದಿತ್ತು."

"ಸ್ವಾನುಭಾವವಿವೇಕ ಅಂತರ್ಗತವಾಗಿ ಜ್ಞಾನ ತಲೆದೋರಿತ್ತಯ್ಯಾ. ಆ

ತಲೆಯೊಳಗೊಂದು ಚಿತ್ಪ್ರಾಣನ ಕಂಡೆನಯ್ಯಾ. ಅದೇ ಎನ್ನಪ್ರಾಣದೊಡೆಯ ನೆಂದರಿದು ಅಲ್ಲಿ ಸಸುಮತ ಸಂಗಿಯಾಗಿ ಘನಸಮರಸವಾಗಿ ಮನಮಗ್ನನಾಗಿ ಸದಾ ಸನ್ನಿಹಿತನಾಗಿರ್ದೆನು ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ :—

ಆತ್ಮದೃಕ್ಕಿನಿಂದ ಈಶ್ವರನ ತಿಳಿದಲ್ಲದೆ, ಜಾತಿಸ್ಮರತ್ವವ ಕಾಣಬಾರದು; ಜ್ಯೋತಿರ್ಮಯಲಿಂಗದಿಂದೊಗೆದ ಶರಣನ ಏತರಿಂದ ಕಂಡುಹೇಳುವಿರಣ್ಣಾ ?...."

ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ, ಒಳಹೊರಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ, ಎನ್ನೊಳಗಿಪ್ಪಾತನೂ ಹೊರಗಿಪ್ಪಾತನೂ ಒಂದೇ ವಸ್ತುವೆಂಬ ಅದ್ವಯಂತವು ಕಾಣಬಂದಿತ್ತು—ನೋಡಾ! ಆ ಪರತತ್ತ್ವವೇ ತಾನು ನೋಡಾ! ಬೇರೊಂದು ಸ್ವರೂಪಲ್ಲ ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ!"

ಪರಕಾಯನಾಗಲು ಪರಮಜ್ಞಾನ ಅನುಭವಗಳು ಅಗತ್ಯವಾದವು. ಇವುಂಟಾಗದೆ ಶರೀರಸಂಸಾರ ತೊಲಗದು. ಅಂತೆಯೇ ದೇಹಾಭಿಮಾನವನ್ನು ಬಿಡದೆ ಕವಲುಬುದ್ಧಿ ಕಳಚದು; ಕಲಾತೀತ ಪರಶಿವತ್ವ ಪ್ರಾಪ್ತಿಯಾಗದು.

ಸಂಸಾರ ಅದೊಂದು ಇರುಳು. ಇದು ಒಳಗೆ ಹಬ್ಬಿದರೆ ತಿಳಿಗಣ್ಣು ಮುಚ್ಚುತ್ತದೆ. ಜ್ಞಾನಭಾನು ಉದಯವಾಗದೆ ಗತ್ಯಂತರವೇ ಇರುವುದಿಲ್ಲ.

ಅಜ್ಞಾನ ಕತ್ತಲೆಯಂತೆ ಆವರಣವಾಗುತ್ತದೆ. ಇರುವ ವಸ್ತು ಬೆಳಗುವ ವಸ್ತುವನ್ನು ಆವರಿಸಿ ಇಲ್ಲದಂತೆ ಬೆಳಗದಂತೆ ಮಾಡುತ್ತದೆ, ಮತ್ತು ವಿಕಲ್ಪಕ್ಕೆ ಕಾರಣವಾಗುತ್ತದೆ. ಇಲ್ಲೆಂದೆನಿಸಿ 'ಅಸತ್ವಾಪಾದಕ ಆವರಣ'ವೆನಿಸುತ್ತದೆ. ಬೆಳಗದೆಂದೆನಿಸಿ 'ಅಭಾನಾಪಾದಕ ಆವರಣ'ವೆನಿಸುತ್ತದೆ. ವಿಕಲ್ಪಕ್ಕೆ ಗುರಿಯಾಗಿಸಿ ವಿಪರೀತ ಭಾವನಕ್ಕೆ ಎಡೆಮಾಡಿಕೊಡುತ್ತದೆ. ಅಜ್ಞಾನಾಂಧಕಾರಣದಿಂದಾಗುವ ಅವಸ್ಥೆಯಿದು. ಇದನ್ನು ಕಳೆಯಬೇಕಾದರೆ ಆತ್ಮಜ್ಞಾನ ಅಗತ್ಯ.

ಅಜ್ಞಾನ, ಅಭಿಮಾನ ಇವೆರಡೂ ಮುಂದುವರಿದಬಾಳಿಗೆ ಅಡ್ಡ ಬಿದ್ದಿರುವ ಕಂಟಕ. ಆ ದ್ವೈವೀಜ್ಞಾನವಿಲ್ಲದವನು ಈ ದೇಹಾಭಿಮಾನದಲ್ಲಿ ಬಿದ್ದು ಸಾಯುತ್ತಾನೆ. ಈತನ ಮನ, ವಾಸನಗಳು ನಾಶವಾಗವು ಅಗದಹೊರತು ಸ್ಥಿರಬುದ್ಧಿ ಸಮನಿಸದು; ಮನಶ್ಶಾಂತಿ ಮೈಗೂಡದು. ಸಮಭಾವವುಂಟಾಗದೆ ಪರಿಚ್ಛೇದ

ಬುದ್ಧಿ ಬೆಳೆದುಬರುತ್ತದೆ. ಇದರಿಂದಾಗಿ ಅಜ್ಞಾನ-ಅಭಿಮಾನಗಳೆರಡನ್ನು ಮುಮುಕ್ಷುವು ಮೊದಲು ತೊಲಗಿಸಬೇಕು.

ಗುರುಲಿಂಗದ ಒಂದುಭಾಗ ಆಗಮಲಿಂಗ; ಇನ್ನೊಂದುಭಾಗ ಕಾಯಲಿಂಗ. ಆಗಮಲಿಂಗವನ್ನು ಅಳವಡಿಸಿಕೊಳ್ಳುವುದೇ ಕಾಯಲಿಂಗ. ಕಾಯ–ಲಿಂಗವಾಗ ಬೇಕಾದರೆ ಅತ್ತ ಆಗಮಲಿಂಗವನ್ನು ಅಳವಡಿಸಿಕೊಳ್ಳದೆ ವಿಧಿಯಿಲ್ಲ. ಶ್ರೀಗುರು ಕರುಣೆಯಿಂದ ಕಾಯವೆಲ್ಲ ಕ್ರಿಯಾಲಿಂಗವಾಗಿ, ಕರಣವೆಲ್ಲ ಪ್ರಾಣ(ಜ್ಞಾನ)ಲಿಂಗ ವಾಗಿ, ಭಾವವೆಲ್ಲ ಭಾವಲಿಂಗವಾಗಿ ಏರ್ಪಟ್ಟಬಳಿಕ ಕಾಯಲಿಂಗವಾಗದೆ ಇನ್ನೇ ನಾದೀತು ? ಅಂಗಗುಣಗಳೆಲ್ಲ ಅಳಿದು ಲಿಂಗಗುಣಗಳು ತನುಮೂರರಲ್ಲಿ ನೆಲಸಿದ ಬಳಿಕ ಕಾಯಲಿಂಗತ್ವ ಕೈಗೂಡದಿರದು. ಕರಸ್ಥಲದಲ್ಲಿ ಲಿಂಗವಿರಲು ಆ ಹಸ್ತವೇ ಕೈಲಾಸ. ಇಷ್ಟಲಿಂಗವೇ ಶಿವನು. ಎಂದೆನ್ನುತ್ತಾನೆ ಆದಯ್ಯ ಶಿವಶರಣ. ಕ್ರಿಯಾ ಲಿಂಗಧಾರಣದಿಂದ ಕಾಯಕ್ರಿಯೆಗಳೆಲ್ಲ ಲಿಂಗಕ್ರಿಯೆಗಳಾಗಿ ಕಾಯಲಿಂಗ ವಾಗುತ್ತದೆ. ಕಾಯ ಕಾಯವಾಗದೆ ಕರ ಕರವಾಗದೆ ಕಾಯ–ಕರಗಳೆರಡೂ ಪ್ರಸಾದರೂಪವಾಗುತ್ತವೆ. ಅಂದರೆ ಕಾಯದ ಸೋಂಕಿಲ್ಲದೆ ಕ್ರಿಯಾಲಿಂಗದ ಸೋಂಕವುಂಟಾಗುತ್ತದೆ. ಕಾಯ ಭಾವವೇ ಕಳಚಿರುತ್ತದೆ. 'ಅಂಗದೊಳಗೆ ಲಿಂಗ ತನ್ಮಯವಾಗಿ ಪ್ರಾಣಾನುಪ್ರಪಂಚ ಮರೆದಿರಲು, ಆ ಲಿಂಗವೇ ಲಿಂಗಕರ್ಪಿತ ವಾಗಿ ಪ್ರಸಾದಕಾಯವಪ್ಪುದು. ಇಂತಾದ ಬಳಿಕ ಅಂಗಸೋಂಕಿಲ್ಲದೆ ಲಿಂಗ ಸೋಂಕಾಗಿರ್ಪುದಾಗಿ....' ಕಾಯ ಭ್ರಾಂತಿಯಿಲ್ಲ, ಕಾಯಸೂತಕವಿಲ್ಲ:'ಕಾಯದ ಗತಿಯಲ್ಲಿ ನಡೆವವನಲ್ಲ. ಅಕಾಯಚರಿತ್ರನು, ಅನುಪಮಲಿಂಗೈಕ್ಯನು, ಕುಲ, ಛಲ, ವಿದ್ಯಾಮದ, ಮೋಹ, ಬಲುವಿಡಿಯ. ನಿರಹಂಕಾರವಿಡಿದು, ನಿರಂಗ ಸುಜ್ಞಾನ ಒಡಲಾದ, ಆದಯ್ಯ ಶಿವಶರಣನ ಅಭಿಪ್ರಾಯವಿದು. ಕಾಯವೇ ಲಿಂಗವಾಗಿ, ಲಿಂಗವೇ ಕಾಯವಾಗಿ ಉಭಯಭೇದವಿದ್ದೂ ಇಲ್ಲದಂತಿರುವುದೇ ಕಾಯಲಿಂಗಸ್ಥಲ, "ಸಂಯೋಗ ವಿಯೋಗವೆಂಬೆರಡಿಲ್ಲವ ನಿಜವನಾರು ಬಲ್ಲ ರಯ್ಯಾ? ಅದು ಕೂಡಿ ಬೆರಸದು; ಅದು ಅಗಲಿ ಹಿಂಗದು. ತೆಗಹಕ್ಕೆ(ಹಿಡಿತಕ್ಕೆ) ಬಾರದು, ಮೊಗಹಕ್ಕೆ(ಅಳತೆಗೆ) ನಿಲುಕದು. ಸಗುಣ-ನಿರ್ಗುಣವೆಂಬ ಬಗೆಗೆಡ ಗುಡದೆ ಸೌರಾಷ್ಟ್ರ ಸೋಮೇಶ್ವರಲಿಂಗವನರಿವುದೇನು, ಮರೆವುದೇನು?'

ಮೂರ್ತನಲ್ಲ, ಅಮೂರ್ತನಲ್ಲ, ಲಿಂಗದಲ್ಲಿ ಪ್ರಾಣಸಂಬಂಧಿ, ಪ್ರಾಣದಲ್ಲಿ

ಪ್ರಸಾದ ಸಂವರಣೆ. ಪ್ರಸಾದದಲ್ಲಿ ಕಾಯಾಶ್ರಿತ, ಲೋಕ ಲೌಕಿಕ ಪ್ರಕಾರದು ದಯವಿಲ್ಲ ಕೂಡಲ ಚೆನ್ನಸಂಗ ನಿಮ್ಮ ಶರಣನು."

"ಶೂಲದ ಮೇಲಣ ತಲೆಯು ಭೋಗವನಾರು ಬಯಸಿದಡೆ ಎಲ್ಲಿಯದು? ಉಂಬರೆ ಒಡಲಿಲ್ಲ; ಉಪಚರಿಸುವರೆ ಲಿಂಗಾರ್ಚನೆ ಇಲ್ಲ. ಅಂಗಭೋಗಕ್ಕೆ ಕರ ಚರಣಂಗಳಿಲ್ಲ. ಅಂಗವಿಲ್ಲೆಂಬ ಮಾತು ನಿಮಗೇಕೆ? ಸಂಡು ಭಂಗ, ಲಿಂಗನಿರಾಳ ಗುಹೇಶ್ವರ."

"ಹುಟ್ಟುಗೆಟ್ಟ: ಹಾಳವೇಲೆ।ಬಟ್ಟಬಯಲಲೊಬ್ಬನ ಕಂಡೆ. ಅಂಗವಿಲ್ಲದ ಅವಯವಕ್ಕೆ ಸಂಗವಿನ್ನೆಲ್ಲಿಯದಯ್ಯಾ? ಹಿಂಗುವ ಅವಯವಕ್ಕೆ ಸಂಗವಿನ್ನೆಲ್ಲಿಯ ದಯ್ಯಾ? ಹಿಂಗುವ ಅವಯವಕ್ಕೆ ಹಿಂಗದ ತೊಡಿಗೆಯ ತೊಡಿಸಿದೆನೆಂಬ ಭಂಗಿ ತರನೇನೆಂಬೆ ರೇಕಣ್ಣಪ್ರಿಯ ನಾಗಿನಾಥಾ?"

"ತಪ್ಪಿನೋಡಿದಡೆ ಮನದಲ್ಲಿ ಅಚ್ಚೊತ್ತಿದ್ದಿತ್ತು: ಇಪ್ಪೆಡೆಯಲ್ಲಿ ವಿಚಾರಿಸಿ ದಡೆ ಇಲ್ಲದಂತಾಯಿತ್ತು. ಲೆಪ್ಪದ ಜಲವ ಪಾದದ ಘಾತದಂತೆ ಕರ್ತೃತ್ವವೆಲ್ಲಿ ಯದೋ ಗುಹೇಶ್ವರ?"

"ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತನು ಬ್ರಹ್ಮ. ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡಾತನು ವಿಷ್ಣು. ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತನು ರುದ್ರನು. ಅಮಳೋಕ್ಯದಲ್ಲಿ ಲಿಂಗವ ಧರಿಸಿಕೊಂಡಾತನು ಈಶ್ವರನು. ಮುಖ ಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತನು ಸದಾಶಿವನು. ಅಂಗ ಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಟಾತನು ಉಪಮಾತೀತನು. ಇವರೆಲರು ಬಯಲನೇ ಪೂಜಿಸಿ ಬಯ ಲಾಗಿ ಹೋದರು. ನಾನು ನಿತ್ಯವ ಪೂಜಿಸಿ ಮಿಥ್ಯವನರಿಯದ ಇರವಿನಲ್ಲಿ ಸುಖಿ ಯಾದೆನು ಗುಹೇಶ್ವರಾ !"

ಬ್ರಹ್ಮತತ್ತ್ವವೇ ಸುಚಿತ್ತ: ಆ ಸುಚಿತ್ತವೇ ಕಕ್ಷೆ. ಅಲ್ಲಿ ಧರಿಸಿದುದೇ ಆಚಾರ ಲಿಂಗ. ವಿಷ್ಣುತತ್ತ್ವವೇ ಸುಬುದ್ಧಿ. ಆ ಸುಬುದ್ಧಿಯೇ ನಿಶ್ಚಯರೂಪ ಹಸ್ತ. ಅದರಲ್ಲಿ ಗ್ರಹಿಸಿರುವುದೆ ಗುರುಲಿಂಗ. ರುದ್ರತತ್ತ್ವವೇ ಅಹಂಕಾರ. ಆ ಅಹಂಕಾರವೇ ಮಸ್ತಕಸ್ಥಲ. ಆ ಶಿರಸ್ಥಲದಲ್ಲಿ ಧರಿಸಿದುದೇ ಶಿವಲಿಂಗ. ಈಶ್ವರ ತತ್ತ್ವವೇ ಅಂತರಂಗವಾದ ಸುಮನ. ಆ ಸುಮನವೇ ಅಮಳೋಕ್ಯ ರೂಪ ಹಸ್ತ. ಅದರಲ್ಲಿ ಆಳವಟ್ಟುದೇ ಜಂಗಮ ಲಿಂಗ. ಶದಾಶಿವತತ್ತ್ವವೇ ಮುಖ

ಸೆಜ್ಜೆ. ಮುಖಸೆಜ್ಜೆಯೇ ಸುಜ್ಞಾನ ಹಸ್ತ. ಆ ಸುಜ್ಞಾನ ಹಸ್ತದಲ್ಲಿ ನೆಲಸಿರುವುದೇ ಪ್ರಸಾದಲಿಂಗ. ಉಪಮಾತೀತತತ್ತ್ವವೇ ಅಂಗಸೆಜ್ಜೆ. ಅಂಗಸೆಜ್ಜೆಯೇ ಸದ್ಭಾವ ಹಸ್ತ. ಆ ಸದ್ಭಾವವೆಂಬ ಸರ್ವಾಂಗ ಹಸ್ತದಲ್ಲಿ ಪ್ರತಿಷ್ಠಿತವಾದುದೇ ಮಹಾಲಿಂಗ. ಹೀಗೆ ಹೊರಗೂ ಒಳಗೂ ಲಿಂಗತತ್ತ್ವ ನೆಲಸಲು ಸರ್ವಾಂಗ ಲಿಂಗವಾಗಿ ಪರಿಣಮಿಸುತ್ತದೆ. ಆಗ ಅಂಗ-ಲಿಂಗವೆಂಬ ಬೇದವಿರುವುದಿಲ್ಲ. "ನಾನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ : ಸಾಲೋಕ್ಯನಲ್ಲ, ಸಾಮೀಪ್ಯನಲ್ಲ, ಸಾರೂಪ್ಯನಲ್ಲ, ಸಾಯುಜ್ಯನಲ್ಲ. ಶರಣ ಸಕಾಯನಲ್ಲ, ಅಕಾಯನಲ- ಗುಹೇಶ್ವರಲಿಂಗ ತಾನೆಯಾಗಿ !"

ಸಕಾಯ ಸಾಧನಾಂಗ. ಅಕಾಯ ಸಿದ್ಧಾಂಗ ; ಪರಕಾಯ ಸಮರಸಾಂಗ. ಸ್ಥೂಲದೋಷವನ್ನು ಕಳೆದುಕೊಂಡುದು ಸಕಾಯ ; ಸೂಕ್ಷ್ಮದೋಷಗಳನ್ನು ಕಡೆಮಾಡಿದುದು ಅಕಾಯ ; ಕಾರಣದೋಷಗಳನ್ನು ಕಡಿಮೆ ಮಾಡಿದುದು ಪರಕಾಯ. ತ್ಯಾಗಾಂಗ ಶುದ್ಧವಾದುದು ಸಕಾಯ, ಭೋಗಾಂಗ ಶುದ್ಧವಾದುದು ಅಕಾಯ; ಯೋಗಾಂಗ ಶುದ್ಧವಾದುದು ಪರಕಾಯ. ಇಷ್ಟಲಿಂಗ ರೂಪಾದುದು ಸಕಾಯ, ಪ್ರಾಣಲಿಂಗರೂಪಾದುದು ಅಕಾಯ ; ಭಾವಲಿಂಗರೂಪಾದುದು ಪರಕಾಯ

"ಬೆಟ್ಟದ ಮೇಲೊಂದು ದಳ್ಳುರಿ ನಿಮಿರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪಸರಿಸಿ ಸಪ್ತಸಮುದ್ರಂಗಳ ನುಂಗಿತ್ತು, ಅಷ್ಟ ದಿಗ್ ದಂತಿಗಳ ಸುಟ್ಟುರುಹಿತ್ತು. ಪಂಚವಕ್ತ್ರಂಗಳ ಮುಖಗೆಡಿಸಿತ್ತು. ನವ ಬ್ರಹ್ಮರ ಸುಳುಹನಾರಡಿಗೊಂಡಿತ್ತು. ಸಮ್ಯಕ್ ಜ್ಞಾನವಪ್ಪ ದಳ್ಳುರಿ, ಸೌರಾಷ್ಟ್ರ ಸೋಮೇಶ್ವರನ ತೋರಿ ಭವಗೆಡಿಸಿತ್ತು.

ನಟ್ಟಡವಿಯಲ್ಲಿ ಕೆಂಡವ ಮಳೆಗರೆದು,
ಊರಡವಿಯನೊಂದಾಗಿ ಸುಟ್ಟಿತ್ತು ನೋಡಾ !
ಊರೈವರನಾರೈವರ ಮೂಗು ಹೋಯಿತ್ತು ನೋಡಾ !
ಹೊಗದ ಊರಿನ ಬಾರದ ದಾರಿಯ ಕಂಡು
ಸುಖಿಯಾದೆನಯ್ಯಾ, ಸೌರಾಷ್ಟ್ರ ಸೋಮೇಶ್ವರಾ !

ಪಂಚೇಂದ್ರಿಯಂಗಳು ಲಿಂಗಮುಖವಾಗಿ ನಿಂದು ಮನ ಸಹಿತ ಪಂಚ ವಿಷಯಂಗಳಂಶದ ಸಕಲ ಸುಖಂಗಳಂ ಲಿಂಗಾರ್ಪಿತದಿಂದ ಚರಿಸುತ್ತ ಬೇರೆ ಮತ್ತೊಂದು ದೆಸೆಯಿಲ್ಲದನಿಂದವು ಸೌರಾಷ್ಟ್ರ ಸೋಮೇಶ್ವರ ಲಿಂಗವಾಸಿಯಾದ ಶರಣಂಗೆ ।"

ಇದು ಪರಕಾಯನಾಗುವ ಪರಿಸ್ಥಿತಿ. ಆದರೆ ಇದು ಎಲ್ಲರಿಗೂ ಸುಲಭವಲ್ಲ. ಏನಾದರಾಗಬಹುದು, ಪರಕಾಯನಾಗುವುದು ಕರ ಕಷ್ಟ! ಸೊಲ್ಲುವಷ್ಟು ಸುಲಭವಲ್ಲದು. "ಕಾಯವೆಂಬ ವನಿತೆಗೆ ಆತ್ಮನೆಂಬ ಪುರುಷ ನೋಡಾ ! ಈ ದೇಹದ ಆತ್ಮನ ಸಂಪರ್ಕದಿಂದ ಹುಟ್ಟಿದ ಸಕಲ ಕರಣೇಂದ್ರಿಯಗಳೇ ಮಕ್ಕಳು ನೋಡಾ ! ಇದೇ ಸಂಸಾರವೆಂಬುದನರಿಯದೆ ಬಹಿರಂಗದಲ್ಲಿ, ನಾನು ಹೊನ್ನು ಹೆಣ್ಣು ಮಣ್ಣು ಬಿಟ್ಟು ವಿರಕ್ತನಾದೆನೆಂಬ ಅಜ್ಞಾನಿಯ ಪರಿಯ ನೋಡಾ : ಇದು ವಿರಕ್ತಿಯೇ ?—ಅಲ್ಲ. ದೇಹೇಂದ್ರಿಯ ಮನ ಪ್ರಾಣಾದಿಗಳ ಮಹದಲ್ಲಿ ಒಡಗೂಡಿದಾತನೆ ಪರಮ ವಿರಕ್ತನು. ಆತಂಗೆ ನಮೋ ನಮೋ ಎಂಬೆನು ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಕಾಯದೊಳಗಣ ಜೀವ ಹೇಂಗಿಪ್ಪುದೆಂದಡೆ ; ಒಳಗೊಂದು ಬೆಳಗುವ ಜ್ಯೋತಿಯಂತಪ್ಪುದಯ್ಯಾ. ಕಾಯವೇ ಶರಣ ಜೀವವೇ ಲಿಂಗವೆಂಬುಪಾಯವ ನಾರೂ ತಿಳಿಯರಲ್ಲಾ ! ಜೀವನ ಬೆಳಗು ಕಾಯವನಂಗಲು, ಕಾಯನಿರವಯವಾಯಿತ್ತಯ್ಯಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಕಾಯದ ರೂಪನು ಕಂಗಳು ನುಂಗಿತ್ತು,
ಪ್ರಾಣದ ರೂಪನು ನೆನಹು ನುಂಗಿತ್ತು.
ಭಾವದ ರೂಪನು ಅರಹು ನುಂಗಿತ್ತು.
ಇವೆಲ್ಲರ ರೂಪನು ನಿರೂಪು ನುಂಗಿತ್ತು,
ಆ ನಿರೂಪು ಸ್ವರೂಪಿಕರಿಸಿ ನಾ ನುಂಗಿದೆನು.
ಆ ನಿರೂಪು ಸ್ವರೂಪ ವೆರಡೂ ಬಯಲು,
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !"

ಕಾಯಲಿಂಗವಾದವನಿಗೆ ಸ್ವಕಾಯ ಭಾವವಿಲ್ಲ ; ಅನ್ಯಕಾಯ ಭಾವವೂ ಇಲ್ಲ. ಸಕಲ ಚರಾಚರವೂ ತನ್ನದೆಂದು ತಾನದಕ್ಕೆ ಬೇರಿಲ್ಲವೆಂದು ಭಾವಿಸುತ್ತಾನೆ; ಭಾವ ವೈಶಾಲ್ಯವನ್ನು ಕಾಯವೈಶಾಲ್ಯವನ್ನು ತಳೆಯುತ್ತಾನೆ. ಅಂತೆಯೇ ಕ್ರಿಯಾ ವೈಶಾಲ್ಯದಿಂದಲೂ ಕೂಡಿರುತ್ತಾನೆ. ಏನೇ ಬರಲಿ ಎಲ್ಲವನ್ನು ಸಮಾಧಾನದಿಂದ ಸಮಭಾವದಿಂದ ಅಂಗೀಕರಿಸುತ್ತಾನೆ. ಕಾಯಗುಣ ಕರಣ ಗುಣಗಳಿಗೆ ಅದೆಂದಿಗೂ ಒಳಗಾಗನು. ಪ್ರಾಣದ ಹಂಗಿನಲ್ಲಿರನು, ತನು ಮನ ಪ್ರಾಣಾದಿಗಳನ್ನು ಆ ಪರಶಿವನಲ್ಲಿ ಇರಿಸಿರುತ್ತಾನೆ. ಕಾಯವೆಂಬ ಶರಣಸತಿಯನ್ನು ಚೈತನ್ಯವೆಂಬ ಲಿಂಗಪತಿಯಲ್ಲಿ ಬೆರಸಿ ಬೇರಿಲ್ಲದಂತಿರುತ್ತಾನೆ. ಇದರಿಂದಾಗಿ ಪ್ರಾಣೇಂದ್ರಿಯಾದಿಗಳ ಉಪಟಳ ಇರುವುದಿಲ್ಲ, ಪರಮಾರ್ಥ ಜೀವನವನ್ನೇ ಆಧರಿಸಿರುತ್ತಾನೆ.

# ಪರಾಪ್ರಕೃತಿ—ಪರಕಾಯ

ಪ್ರಕೃತಿ ಪರವಾಗುವ ಈ ಬಗೆ ಕುತೂಹಲ ಕಾರಿ. ಇದೊಂದು ನೂತನ ವಿಚಾರ ಧಾರೆ. ಅಂಗದ ಅಣು ಅಣುವಿನಲ್ಲಿಯೂ ಚೈತನ್ಯವಿದೆ; ಅಂದರೆ ಜೀವ ಕೋಶವಿದೆ. ಜೀವಕೋಶದ ಕಣಕಣವೂ ವಿದ್ಯುನ್ಮಯವಾಗಿದೆ. ಅಂದರೆ ವಿಜ್ಞಾನ ಮಯವಾಗಿದೆ, ವಿಜ್ಞಾನ ವಿದ್ಯುತ್ತಿನ ಒಟ್ಟುಳಿಯೇ ಈ ದೇಹ; ಈ ದೇಹ ದಲ್ಲಿರುವ ವಿದ್ಯುದಣುಗಳು ಕಣ್ಣಿಗೆ ಕಾಣವು. ಸೂಕ್ಷ್ಮದರ್ಶನ ಯಂತ್ರದ ಅಂದರೆ ಮೈಕ್ರೋಸ್ಕೋಪ್ ನೆರವು ಅನಿವಾರ್ಯ. ಇದಕ್ಕೂ ಕಾಣದಷ್ಟು ಸೂಕ್ಷ್ಮವಾಗಿರುವ ವಿಧ್ಯುತ್ಕಣಗಳುಂಟು, ಈ ಕಣ ಕಣದಲ್ಲಿ ಈ ಅಣು ಅಣುವಿನಲ್ಲಿಯೂ ದೇಹ ರಚನೆಯಾಗುವ ಅಂಶವಿರುತ್ತದೆ. ಇವು ಪರಿಶುದ್ಧವಾಗಬೇಕು. ದೃಕ್ಕ್ರಿಯೆ ಗಳಿಂದ ಇವು ಪರಿಶುದ್ಧವಾಗುತ್ತವೆ. ಪರಿಶುದ್ಧವಾದಂತೆ ಪರಕ್ಕೆ ಪರವಾಗುತ್ತ ಹೋಗುತ್ತವೆ.

ದೇಹದಲ್ಲಿ ಎಂತಹ ಸ್ಥೂಲವಾದ ಅಂಶವಿರಲಿ ಅದೆಲ್ಲವೂ ಪರವಾಗಬಲ್ಲದು ಎಲುಬು, ಚರ್ಮ, ಗ್ರಂಥಿ, ಅವಯವ, ಸ್ನಾಯು, ಮಾಂಸ, ರಕ್ತ, ಶುಕ್ರ ಇವೆಲ್ಲವುಗಳಲ್ಲಿಯೂ ಪರಕಾಯವಾಗುವ ಶಕ್ತಿಯಿದೆ: ಇವೆಲ್ಲವೂ ವಿದ್ಯುದಣು ಗಳ ಘನರಚನೆಯಾಗಿವೆ. ಇವೆಲ್ಲವುಗಳ ಪಾರಿಶುದ್ಧತೆಯನ್ನು ಆಹಾರ ವಿಹಾರ ವಿಚಾರಾದಿಗಳಿಂದ ಬೆಳಸುತ್ತ ಹೋದರೆ ದೇಹ ಪರಮತ್ವಕ್ಕೇರುತ್ತದೆ. ದೇಹ ಕಣ್ಣಿಗೆ ಸ್ಥೂಲವಾಗಿ ಕಂಡರೂ ಇದು ಪರವಸ್ತುವಾಗಿ ತನ್ನಿಂದ ತಾನೇ ಆಗಿ ಪರಿ ಣಮಿಸಿರುತ್ತದೆ. ಸ್ಥೂಲಗುಣಗಳಿಂದ ಧರ್ಮಗಳಿಂದು ದೂರವಾಗಿರುತ್ತದೆ. ಕಣ್ಣಿಗೆ ಕಾಣದಷ್ಟು ನೆನಹಿಗೆ ನಿಲುಕದಷ್ಟು ಅರುಹಿಗೆ ಬಾರದಷ್ಟು ಸೂಕ್ಷ್ಮರೂಪಕ್ಕೆ ಶ್ರೇಷ್ಠ ಗುಣಧರ್ಮಕ್ಕೆ ಸೇರಿರುತ್ತದೆ. ಆಗ ಇದನ್ನು 'ಪರಕಾಯ' ಎಂದು ಷಟ್‌ಸ್ಥಲ ಜ್ಞಾನಿಗಳು ಕರೆದಿದ್ದಾರೆ.

ಈ ಸ್ಥೂಲ ದೇಹವೇ ದೇಹವಲ್ಲ. ಇದೊಂದು ಅದರಿಂದಾದ ಒಂದು ಪರೆ ಮಾತ್ರ. ಆ ಪರಿಶುದ್ಧ ಪರಚೇತನ ಕೋಶದ ಸ್ಥೂಲಾಂಶವಿದು. ಇದೂ

ಸಹ ಸಾಕ್ಷಾತ್ತಾಗಿ ಆ ಪರ ವಸ್ತು ರೂಪಾಗಿದ್ದರೂ ಕಾಲಕ್ರಮದಿಂದ ಭೂತ–ಪರಂಪರೆಗಳಲ್ಲಿ ಬೆರೆಯುತ್ತ ನಿರವಯತ್ವಕ್ಕೆ ನಿಲುಕ ಬಲ್ಲುದು.

ಒಂದು ಸ್ಥೂಲವಾದ ಕಟ್ಟಿಗೆಯಲ್ಲಿರುವ ತೇಜೋಂಶಗಳೆಲ್ಲ ತೇಜಸ್ಸಿನಲ್ಲಿ ಬೆರೆಯುತ್ತವೆ. ಆ ತೇಜೋಂಶವನ್ನಿರಿಸಿಕೊಳ್ಳಲು ಅದರಿಂದಲೇ ಉತ್ಪತ್ತಿಯಾದ ಸ್ಥೂಲಾಂಶವು ಕರಿಯಾಗಿ ಅಥವಾ ಬೂದಿಯಾಗಿ ನಿಂತಂತೆ ಕಂಡರೂ ಕಾಲಕ್ರಮದಲ್ಲಿಭೂತಾಂಶಗಳಲ್ಲಿ ಸೇರಿ ಹೋಗುತ್ತದೆ. ಸಾಮಾನ್ಯವಾಗಿ ಎಲ್ಲವೂ ಹೀಗಾಗುವ ಸಾಧನೆಗೆ ಸಾರ್ಥಕತೆಯೇನೆಂದರೆ ಸತ್ ಸಂಸ್ಕಾರಗಳು ಉಳಿದು ಬರುವದೇ ಸಾರ್ಥಕತೆ ! ಸಚ್ಚಿದಾನಂದತ್ವ ಹೆಚ್ಚಿನ ಮಟ್ಟದಲ್ಲಿ ಹೆಚ್ಚು ಪರಿಶುದ್ಧವಾಗಿ ಚೈತನಾತ್ಮಕವಾಗಿ ಉಳಿದು ಬಂದು ಮುಂದಿನ ಜನ್ಮಗಳನ್ನು ಸಹಕರಿಸುವುದೇ ಸಾರ್ಥಕತೆ !

ಈ ಕಾಯದಲ್ಲಿ ಒಂದು ಜೀವಧಾತುವಿರುತ್ತದೆ. ಅದು ಕಾಯದಿಂದಲೇ ಉತ್ಪತ್ತಿಯಾಗುತ್ತದೆ. ಅದರಲ್ಲಿ ಒಂದು ಮೂಲ ಬೀಜವಿರುತ್ತದೆ. ಅದನ್ನು ಜೀವ ಬೀಜವೆಂದು ಹೇಳಬಹುದು. ಅದನ್ನೆ ಷಟ್‌ಸ್ಥಲ ವಿಜ್ಞಾನಿಗಳು 'ಪರಕಾಯ ವೆಂದರು. ಅದನ್ನು ಉಳಿಸಿಕೊಂಡು ಬರಬೇಕು ಮಾಹೇಶ್ವರಾಂಗನು. ಅದು ಉಳಿಯದಿದ್ದರೆ ಜೀವನವಿಲ್ಲ. ಅದು ಪರಿಶುದ್ಧವಾಗಿ ಉಳಿದರೆ ಉತ್ತಮ ಜೀವನ.

ಆ ಜೀವಬೀಜವು ಪರಿಶುದ್ಧವಾಗಿದ್ದರೆ ಸತ್ಕ್ರಿಯೆ, ಚಿತ್ಕ್ರಿಯೆ, ಆನಂದ ಕ್ರಿಯೆಗಳು; ಸತ್‌ಸಂವಿತ್, ಚಿತ್‌ಸಂವಿತ್, ಆನಂದ ಸಂವಿತ್‌ಗಳು ಮೈಗೂಡಿ ಬರುತ್ತವೆ. ಇವು ಮೈಗೂಡಿ ಬಂದುದೇ 'ಪರಕಾಯ' ವೆನಿಸುತ್ತದೆ.

ಅಂತಹ ಪರಕಾಯನ ಎಲ್ಲ ಆಚಾರಗಳು ಎಲ್ಲ ವಿಚಾರಗಳು ಪರಿಶುದ್ಧವಾಗುತ್ತವೆ. ಜೀವನ ವಿಶುದ್ಧವಾದಂತೆ ವಿಶಾಲಭಾವವುಳ್ಳದೂ ಆಗುತ್ತದೆ. ದೇಹೇಂದ್ರಿಯಗಳ ವಿಶುದ್ಧತೆಯೇ ಅಂತಃಕರಣಗಳ ವಿಶಾಲತೆಗೆ ಕಾರಣ. ಅಂತಃಕರಣಗಳ ವಿಶಾಲತೆಯೇ ಪರಕಾಯ ರೂಪಣಕ್ಕೆ ಅಂದರೆ ವಿಶಿಷ್ಟ ಜೀವಿತ್ವಕ್ಕೆ ಕಾರಣ.

ಕ್ರಿಯಾಭೇದದಿಂದ ಅಂಗಾಂಗ ಬೇಧಗಳಾಗಿವೆ. ಜ್ಞಾನ ಭೇದದಿಂದ ಅಂತಃಕರಣ ಭೇದಗಳಾಗಿವೆ. ಈ ಭೇದಗಳನ್ನೆಲ್ಲ ಒಂದೆಡೆಗೆ ವ್ಯಾಹೀಕರಿಸು

ವುದೇ ಕೇಂದ್ರೀಕರಿಸಿ ನಿಷ್ಕಲ್ಮಷಗೊಳಿಸುವುದೇ ಪರಕಾಯಾಂಗನ ಪರಮಕಾರ್ಯ. ಅಂದರೆ ಅಪರಾಪ್ರಕೃತಿಯನ್ನು ಪರಾಪ್ರಕೃತಿಯನ್ನಾಗಿಸುವುದೇ ಪರಕಾಯನ ಪರಮೋದ್ದೇಶ.

ಈ ಸ್ಥೂಲ ದೇಹವೇ ದೇಹವಲ್ಲ; ಈ ಸ್ಥೂಲ ಅವಯವಗಳೇ ಅವಯವಗಳಲ್ಲ. ದೇಹತ್ವ-ಅವಯವತ್ವ ಅತ್ಯಂತ ಸೂಕ್ಷ್ಮವಾದುದು; ಪರನಿಷ್ಠವಾದುದು. ದೇಹ ನಾಶವಾದರೂ ದೇಹತ್ವ ನಾಶವಾಗುವುದಿಲ್ಲ. ಅದು ಚೈತನ್ಯ ಪರವಾಗಿರುತ್ತದೆ. ಅಂದರೆ ಜೀವ ಬೀಜ ಪರವಾಗಿರುತ್ತದೆ. ಅದನ್ನೇ ಪರಕಾಯವೆನ್ನುತ್ತೇವೆ ಆ ಪರವಸ್ತು ಗತವಾಗಿರುವುದರಿಂದ 'ಪರಕಾಯ'ವೆನ್ನುವುದು ಸೂಕ್ತವೆನಿಸುತ್ತದೆ.

ಈ ಪರಕಾಯ (ಜೀವ ಬೀಜ)ವನ್ನೇ ಲಿಂಗವೆನ್ನುತ್ತೇವೆ. ಶ್ರೀ ಗುರುವಿನ ಸಂಸ್ಕಾರದಿಂದ ಕಾಯಲಿಂಗವಾಗಿರುತ್ತದೆ. ತನ್ನ ಸತ್ಸಾಧನೆಯಿಂದ ಚಿತ್ಸಿದ್ಧಿಯಿಂದ ಲಿಂಗ (ಪರ)ಕಾಯನಾಗಬೇಕು.

ಕಾಯ ಆಚಾರ ನಿರತವಾಗಿ ಆಚಾರ ಸಿದ್ಧಿಯನ್ನು ಪಡೆದರೆ ಮುಂದೆ ಗುರುರೂಪನ್ನು ತಳೆಯುತ್ತದೆ. ಅಂದರೆ ಅಜ್ಞಾನಾಂಧಕಾರ ನಿರೋಧ ಶಕ್ತಿ ಸಂಪನ್ನವಾಗುತ್ತದೆ, ವಿಚಾರ ನಿಷ್ಠವಾಗುತ್ತದೆ. ಆಚಾರ ಶಿವವಾದಂತೆ ವಿಚಾರ ಶಿವವಾಗುತ್ತದೆ. ಆಗ ಶಿವರೂಪತ್ವ ಅಂದರೆ ಶಿವಲಿಂಗರೂಪತ್ವ ಸಿದ್ಧಿಸುತ್ತದೆ. ಆಗ 'ಕಾಯರೂಪನು ಕಂಗಳು ನುಂಗಿತ್ತು' ಎಂಬ ಮಾತು ಅರ್ಥಪೂರ್ಣವಾಗುತ್ತದೆ. ಆಚಾರ-ವಿಚಾರಗಳೆರಡೂ ಶಿವವಾದಾಗ ಆಕಾರವೂ ಶಿವವಾಗುವಲ್ಲಿ ಯಾವ ಸಂದೇಹವಿಲ್ಲ. ಆಗ ಕಾಯರೂಪನು ಕಣ್ಣು ನುಂಗಿದರೆ ಕಣ್ಣ ನಂಜನ್ನು ಶಿವಕಾಯ (ಪರಕಾಯ) ನುಂಗುತ್ತದೆ. ಅಂದರೆ ಶಿವಕಾಯವನ್ನು ನೋಡಿದ ನೋಟವೂ ಶಿವವಾಗುತ್ತದೆ. ಶಿವಾಕಾರದ ಸಾಕ್ಷಾತ್ಕಾರವಾಗುತ್ತದೆ. ಶಿವಸ್ವರೂಪ ಸನ್ನಿಹಿತವಾಗುತ್ತದೆ; ಸ್ವಸ್ವರೂಪವಾಗುತ್ತದೆ. ಅಂತಾದಾಗ ಅದು ಪರಕಾಯವಲ್ಲದೆ ಮತ್ತೇನು ?

ಪರಕಾಯ, ಶಿವಕಾಯ, ಲಿಂಗಕಾಯ ಈ ಮೂರು ಒಂದೇ ಅರ್ಥದ ಪರ್ಯಾಯ ಪದಗಳು. ಪರವಸ್ತು ಸ್ವರೂಪ ಸಾಕ್ಷಾತ್ಕಾರ ಸೂಚಕ ಪದಗಳು. ಪರಕ್ರಿಯೆ, ಪರನಾಮ, ಪರರೂಪ ಸಾಂಕೇತಗಳು. ಪರಗುಣ ನಿರ್ದೇಶಕಗಳು;

ಸತ್ಯ ಶಿವ ಸೌಂದರ್ಯವನ್ನು ಸಂಪಾದಿಸುವುದೇ ಕಾಯ-ಅಕಾಯ- ಪರ ಕಾಯ ಗಳಾಗುವುದರ ಮುಖ್ಯ ಉದ್ದೇಶ. ಶಿವಸೌಂದರ್ಯಕ್ಕೆ ಬೀಜವಾದುದು ಶಿವರಸ. ಆ ಶಿವರಸದ ಉಪಾಸಕನೇ ಪರಕಾಯ; ಅಥವಾ ಆ ಪರಕಾಯ ರೂಪಕ್ಕೇರಿ ನಿಂತ ಮಾಹೇಶ್ವರಾಂಗ.

ರಸವನ್ನು ಆಸ್ವಾದಿಸದವರಾರು? ಆದರೆ ಪದಾರ್ಥರಸವನ್ನು ಆಸ್ವಾದಿಸುವ ವರೇ ಬಹಳ. ಪ್ರಸಾದರಸವನ್ನು ಆರೋಗಿಸುವವರು ತೀರ ವಿರಳ. ಸ್ಥೂಲ ರಸಾಸ್ವಾದನೆ ಎಲ್ಲರಿಗೂ ಉಂಟು. ಸೂಕ್ಷ್ಮರಸಾಸ್ವಾದನೆ ಎಲ್ಲರಿಗಿಲ್ಲ. ಪ್ರಸಾದದ ರುಚಿಯಲ್ಲಿಯೂ ಸ್ಥೂಲ ಸೂಕ್ಷ್ಮಗಳುಂಟು. ಸೌಂದರ್ಯಶಿವವಾಗಬೇಕಾದರೆ ಸತ್ಯವಾಗಬೇಕಾದರೆ ಪಂಚಪದಾರ್ಥಗಳನ್ನು ಪ್ರಸಾದಗಳನ್ನಾಗಿಸಿಕೊಂಡು ಆ ಪಂಚಪ್ರಸಾದಗಳ ಸ್ಥೂಲಸೂಕ್ಷ್ಮರಸರುಚಿಗಳನ್ನು ಆರೋಗಿಸುವ ಅನುಭೂತಿ ಯನ್ನು ಅವಧಾನವನ್ನು ಪಡೆದಾಗಬೇಕು. ನಾಲಗೆಯ ಸಂಯೋಗದಿಂದೊದ ಗುವ ಪ್ರಸಾದದ ಸ್ಥೂಲ ರುಚಿಯೊಂದನ್ನು ಗುರುಲಿಂಗಕ್ಕೆ ಅರ್ಪಿಸಿದರೆ ಪರ ಕಾಯತ್ವ ಪ್ರಾಪ್ತಿಯಾಗದು. ಆ ರುಚಿಯ ಪರಿಣಾಮವನ್ನು ಮಹಾಲಿಂಗಕ್ಕೆ ಅರ್ಪಿಸಿದಾಗ ಪರಕಾಯತ್ವರೂಪ ಶಿವಸೌಂದರ್ಯ ಸಂಪ್ರಾಪ್ತವಾಗುತ್ತದೆ.

ರುಚಿಸ್ಥೂಲ. ರುಚಿಯ ಪರಿಣಾಮ ಸೂಕ್ಷ್ಮ ಅಂತೆಯೇ ಅಭಿ ರುಚಿಸ್ಥೂಲ. ಆ ಅಭಿರುಚಿಜನ್ಯ ಪರಿಣಾಮ ಸೂಕ್ಷ್ಮ. ಆ ರುಚಿ ಅಭಿರುಚಿಗಳ ಪರಿಣಾಮವು ಪ್ರಸಾದವಾಗಿ ಶಿವಸೌಂದರ್ಯತ್ವ ಪ್ರಾಪ್ತಿಗೆ ಸಹಾಯವಾಗಬೇಕಾದರೆ ಗುರುಲಿಂಗ ದೊಳಗಿನ ಮಹಾಲಿಂಗೋಪಾಸನೆ-ಅರ್ಪಣೆ-ಅನುಭವಗಳು ಅಳವಡಬೇಕು. ಆ ಮಹಾಲಿಂಗವೇ ಪರಲಿಂಗ. ಆ ಪರಲಿಂಗಸ್ವರೂಪರಾಗುವುದೇ ಪರಕಾಯ ರಾಗುವಿಕೆ.

ತ್ರಿವಿಧತನು ಶುದ್ಧವಾಗಿ ಶಿವವಾಗಿ ನಿಂತಾಗ ಪರಾಹಂತಾ ರೂಪಾಗುತ್ತದೆ ಅಂದರೆ ಪರವಸ್ತುವಿನಾಕಾರವಾಗುತ್ತದೆ. ಜನ್ಮಬೀಜವಳಿದು ಬ್ರಹ್ಮ ಬೀಜ ವುಳಿದು ಪರಾಹಂತತೆ ಪ್ರಾಪ್ತವಾಗುತ್ತದೆ. ಆದರಿಂದ ಜನ್ಮಕರ್ಮಗಳಿಗೆ ಬಲಿ ಯಾಗುವುದು ತಪ್ಪುತ್ತದೆ. ಹೀನ ಜನ್ಮಗಳಿಗೆ ಬರುವ ಸಂಕೋಲೆ ತಪ್ಪುತ್ತದೆ. ಜಡಕರ್ಮ ಓಟಲೆಯ ಚಕ್ರಕ್ಕೆ ಸಿಕ್ಕದಂತಾಗುತ್ತದೆ.

ಇಂತಾದಾಗ ಒಡಲ ಕಳವಳಕ್ಕೆ ಉಂಬ ಹಂಬಲಕ್ಕೆ ಇಂಬಿಲ್ಲದಂತಾಗುತ್ತದೆ. ಲಿಂಗಾರ್ಪಿತ ಮಾಡಿ ಭೋಗಿಸುವ ಭಾವಪೂರ್ಣ ಆಸಕ್ತಿ ಬೆಳೆದು ಬರುತ್ತದೆ. ಇದರಿಂದ ಕಾಯ ವಿಕಾರವಳಿದು ಶಿವಾಚಾರದೊಡನೆ ಶಿವಾಕಾರವುಂಟಾಗುತ್ತದೆ.

ಕಾಯವೃತ್ತಿ ಕರಣ ವೃತ್ತಿಗಳು ಅಡಗುವುದಕ್ಕಿಂತ ಬೇರಿಲ್ಲ ಪರಕಾಯತ್ವ. ರುಚಿ ರಸಗಳು ಕಾಯಕರಣಗಳಿಗೆಂಬ ಭಾವವುಂಟಾದರೆ ಕಾಯಕರಣ ವೃತ್ತಿಗಳ ಬೆಳೆಯುತ್ತವೆ. ಅದೇ ಲಿಂಗಕ್ಕೆಂದು ಪರಶಿವವಸ್ತುವಿಗೆಂದು ಬಗೆದುಂಡರೆ ಲಿಂಗವೃತ್ತಿ ಅಥವಾ ಪರವೃತ್ತಿಗಳು ಮೈಗೂಡುತ್ತವೆ.

ಕಾಯ ಕಿರುಗೋಡೆಯ ಮೇಲಿನ ದೀಪವಿದ್ದಂತೆ ! ಇದರ ಬೆಳಕು ಇತ್ತ ಅತ್ತ ಸುತ್ತ ಬೀಳಬಲ್ಲುದು. ಕಾಯವನ್ನು ಉಪಯೋಗಿಸಿಕೊಳ್ಳುವುದರಲ್ಲಿದೆ. ಕರ್ಮಕ್ಕೂ ಕಾಯಬೇಕು ; ಧರ್ಮಕ್ಕೂ ಕಾಯಬೇಕು. ಪ್ರವೃತ್ತಿ ನಿವೃತ್ತಿಗಳಿಗೂ ಸ್ವಾರ್ಥ ಪರಾರ್ಥಗಳಿಗೂ ಕಾಯ ಉಪಯುಕ್ತವಾಗುತ್ತದೆ. ಕಾಯವಿಲ್ಲದೆ ಯಾವ ಸಾಧನವಿಲ್ಲ, ಯಾವ ಸಿದ್ಧಿಯಿಲ್ಲ. ಇಹ–ಪರಗಳಿಲ್ಲ.

ಕಾಯವಿಡಿದು ಕಾಲವಿದೆ. ಕಾಲವಿಡಿದು ಕರ್ಮವಿದೆ. ಕರ್ಮ ವಿಡಿದು ಮಾಯೆಯಿದೆ. ಕಾಯಮೋಹವೊಂದನ್ನು ಬಿಟ್ಟರೆ ಕಾಲವಿಲ್ಲ, ಕರ್ಮವಿಲ್ಲ ಮಾಯೆಯಿಲ್ಲ. ಇವಿಲ್ಲದ ಮೇಲೆ ಕಾಯವಿದ್ದೂ ಕಾಯವಿಲ್ಲ ಆಗ 'ಅಕಾಯ ವೆನಿಸುತ್ತದೆ.

ಕಾಲ ಕರ್ಮ ಮಾಯೆಗಳಿಗೆ ಒಳಗಾದುದು ಸ್ವಕಾಯ ಕಾಲಕರ್ಮ ಮಾಯೆಗಳಿಂದ ಬಿಡುಗಡೆಯುಳ್ಳದು ಪರಕಾಯ. ಯಾವಾಗಲೂ ಪರರ ಹಿತ ಕ್ಕಾಗಿ, ಪರವಸ್ತುವಿನ ಸಾಧನೆ ಸಿದ್ಧಿಗಳಿಗಾಗಿ ಉಪಯುಕ್ತವಾದ ಕಾಯ ಪರ ಕಾಯವಾಗದೆ ಸ್ವಕಾಯವಾಗಲು ಸಾಧ್ಯವೆ ?

ಸ್ವಕಾಯ ಅಂಗಕಾಯ ; ಅಂಗಕಾಯವೇ ಅಪರಾಪ್ರಕೃತಿ. ಪರ ಕಾಯ ಲಿಂಗಕಾಯ ; ಲಿಂಗಕಾಯವೇ ಪರಾಪ್ರಕೃತಿ. ಪರಾಪ್ರಕೃತಿಯೇ ಪರಾಶಕ್ತಿ. ಇದು ಅಂತಿಂತಹದಲ್ಲ. ಇದೊಂದು ಶೈವೀ ಶಕ್ತಿ ; ದೈವೀ ದೀಪ್ತಿ. ಇದರ ಆವಿಷ್ಕಾರಕ್ಕೆ ಪೂರ್ಣ ಪರಿಪಕ್ವ ಕಾಯ ಅತ್ಯಗತ್ಯ.

ಅವರ ಕಾಯನಲ್ಲಿ ವೈಯಕ್ತಿಕ ಜೀವನ ಸಾಗಿರುತ್ತದೆ. ಕೇವಲ ಲೌಕಿಕ

ಜೀವನ ಸಾಗಿರುತ್ತದೆ. ಈ ವಲಯಗಳಲ್ಲಿ ಸಾಗುವವನ ಶಕ್ತಿ ಪರಿಮಿತವಾಗಿರುತ್ತದೆ. ಮತ್ತು ದಿನ ದಿನಕ್ಕೆ ಕಡಿಮೆಯಾಗುತ್ತಿರುತ್ತದೆ ; ಕಳಾಹೀನವಾಗಿರುತ್ತದೆ. ಅದೇ ಪರಕಾಯನ ಜೀವನ ಜಾಗತಿಕವಾಗಿ, ಲೌಕಿಕ ಪರಮಾರ್ಥವೆರಡು ಒಂದಾಗಿ ವಿಶುದ್ಧವಾಗಿ ಸಾಗಿರುತ್ತದೆ. ಇದರಿಂದಾಗಿ ಈತನ ಶಕ್ತಿ ಅಪರಿಮಿತವಾಗುತ್ತ ಹೋಗುತ್ತದೆ. ಅಪಾರ ಕಳಾವಂತವಾಗುತ್ತ ಹೋಗುತ್ತದೆ.

ಪರಕಾಯನು ಪಿಂಡಾಂಡ ಬ್ರಹ್ಮಾಂಡ ಎರಡರಲ್ಲಿಯೂ ಶಿವ ಸಾಂನಿಧ್ಯದ ಸುಖವನ್ನು ಅನುಭವಿಸುತ್ತಾನೆ. ಸ್ವಾಂಗ ಜುಗುಪ್ಸೆಯಾಗಲಿ, ಜಾಗತಿಕ ಜುಗುಪ್ಸೆಯಾಗಲಿ ಪರಕಾಯನಿಗೆ ಉಂಟಾಗುವುದಿಲ್ಲ. ಎಲ್ಲದರಲ್ಲಿಯೂ ದೈವೀಭಾವ ವುಂಟಾಗಿರುತ್ತದೆ. ಎಲ್ಲವೂ ಆ ದೈವೀ ಸಂಪತ್ತಾಗಿ ಆತನಿಗೆ ಏರ್ಪಡುತ್ತದೆ; ಪರಕಾಯನಿಗೆ ಪರವಸ್ತುವಿಗಿಂತ ಭಿನ್ನವಾದುದೊಂದೂ ಕಾಣುವುದಿಲ್ಲ; ಅಶುಭ ದೃಷ್ಟಿ, ಅನ್ಯಥಾಭಾವಗಳಿರುವುದಿಲ್ಲ. ಕರ್ತೃತ್ವಾಭಿಮಾನದಿಂದಲೂ ದೂರನಾಗಿರುತ್ತಾನೆ.

ಕ್ರಿಯಾಶಕ್ತಿ ಜ್ಞಾನಶಕ್ತಿಗಳೆರಡೂ ಕರಗೊಂಡವನು ಪರಕಾಯನು. ಆ ದೃಕ್ಕ್ರಿಯಾಗಶಕ್ತಿ ಈ ಪಿಂಡಾಂಡದ ಮಾತೆ. ಆ ಶಕ್ತಿಯೇ ಆ ಪರಮ ಸತ್ತೆಯ ಗರ್ಭದಿಂದ ಈ ಪಿಂಡಾಂಡವನ್ನು ರೂಹಿಸಿ ಬೆಳಸಿ ಕಾಪಿಡುವಳು. ಮಾರ್ಗ ಕ್ರಿಯೆಯ ಪ್ರಗತಿ ಪಥದಲ್ಲಿ ಮುನ್ನಡೆವಂತೆ ಮಾರ್ಗದರ್ಶನವನ್ನು ಮಾಡುವಳು. ಪರಕಾಯದ ಪರಾತ್ಪರತೆಗೆ ಆ ದೃಕ್ಕ್ರಿಯಾ ಶಕ್ತಿಯ ದಿವ್ಯಾನುಗ್ರಹವೇ ಕಳಾಪೂರ್ಣ ಕಾರಣ; ಆ ಶಕ್ತಿಯಿಲ್ಲದೆ ಏನೂ ಆಗದು, ಆ ಶಕ್ತಿಯುಳ್ಳ ಕಾಯ ಪರಾಪ್ರಕೃತಿಯಲ್ಲದೆ ಬೇರಲ್ಲ.

ತ್ಯಾಗಾಂಗದ ಸತ್ತೆಯಲ್ಲಿದೃಕ್ಕ್ರಿಯಾ ಶಕ್ತಿ ಉದ್ದೀಪಿಸುವಳು. ಗುರುವಾಚಾರ ಚೇತನ ನಿವೃತ್ತಿ ಪ್ರತಿಷ್ಠೆಗಳಿಂದ ಕಳಾ ಪೂರ್ಣವಾಗಿ ಕಂಗೊಳಿಸುವುದು. ಸ್ಥೂಲ ಸೃಷ್ಟಿಯನ್ನು ಆ ಪರವಸ್ತುವಿನೊಡನೆ ಒಂದುಗೂಡಿಸುವಳು. ತನು ಕ್ರಿಯೆಯಲ್ಲಿ ಆಚಾರವನ್ನು ತನ್ನ ಪ್ರಜ್ಞೆಯಲ್ಲಿ ಪರಮ ಗುರುತ್ವವನ್ನು ಧರಿಸಿ ದೀಪ್ತಿಗೊಳಿಸುವಳು. ಭಕ್ತತ್ವ ಮಾಹೇಶ್ವರತ್ವಗಳಿಗೆ ಆಶ್ರಯವನ್ನೀಯುವಳು ; ಅಖಂಡ ರೂಪನ್ನು ಕೊಡುವಳು. ತ್ಯಾಗಾಂಗದ ಪೂರ್ಣ ಪ್ರತಿಭೆ ಆ ದೃಕ್ಕ್ರಿಯಾ

ಶಕ್ತಿಯಿಂದಲೇ ಸಂಪನ್ನವಾಗುತ್ತದೆ—ತ್ಯಾಗಾಂಗದ ಸ್ಥಾಯಿಯಲ್ಲಿ ! ಇದೆಲ್ಲವೂ ತ್ಯಾಗಾಂಗವು ಇಷ್ಟಲಿಂಗದಲ್ಲಿ ಪಡೆದ ಪ್ರಗತಿಯಾಗಿದೆ. ಶ್ರದ್ಧೆ ನಿಷ್ಠೆಗಳ ಫಲವಾಗಿ ಪರಕಾಯದ ಪರಾಕಾಷ್ಠೆ ದೆಸೆಗೆ ಏರುವಂತಾಗುತ್ತದೆ; ಶುದ್ಧ ಪ್ರಸಾದವಾಗಿ ಪರಾತ್ಪರಕ್ಕೆ ಅರ್ಪಣವಾಗುತ್ತದೆ.

ಕ್ರಿಯಾಶಕ್ತಿ ಸ್ವರ್ಣಗೌರಿ, ಜ್ಞಾನಶಕ್ತಿ ಪೂರ್ಣ ಗಂಗೆ. ಮಾಹೇಶ್ವರಾಂಗ ದ್ವೈಮಾತುರ. ಕ್ರಿಯಾಜ್ಞಾನ ಸಮನ್ವಯ ಶಕ್ತಿಯೆ ಮಹೇಶ್ವರಿ, ತ್ಯಾಗಾಂಗ ವಚ್ಛಿನ್ನ ಚೈತನ್ಯವೇ ಮಹೇಶ್ವರ. ತ್ಯಾಗಾಂಗದೊಳಗಿನ ಷಡಂಗವೇ ಷಡಾನನ, ಈ ಶೈವೀ ಸಂಸಾರಕ್ಕೆ ಪರಕಾಯವೇ ಪರಮಾಶ್ರಯ. ಈ ಆಶ್ರಯಾಂಗವೇ ಪರಾಪ್ರಕೃತಿ.

ಈ ಪರಾಪ್ರಕೃತಿಗೆ ಅನಂತ ಮುಖಗಳುಂಟು. ಅವನ್ನೆಲ್ಲ ಅವಳು ಕೇಂದ್ರೀಕರಿಸಿ ಮುಮ್ಮುಖದಲ್ಲಿ ಹೊರ ಹೊಮ್ಮಿಸುತ್ತಾಳೆ. ಧರ್ಮ, ಭಾವ, ಜ್ಞಾನಗಳ ಮುಖಾಂತರ ಆಚರಿಸುತ್ತಾಳೆ. ಅವನ್ನೇ ಧರ್ಮಾಚಾರ, ಭಾವಾಚಾರ ಜ್ಞಾನಾಚಾರಗಳೆಂದು ಹೇಳಿದ್ದಾರೆ; ಮುಂದೆ ಹೇಳಲಿದ್ದೇವೆ. ಇವುಗಳ ಮುಖಾಂತರ ಪರಕಾಯದ ಪ್ರಗತಿ ಮುಂದುವರಿಯುತ್ತದೆ. ತ್ಯಾಗಾಂಗದ ಸತ್ತೆ ಸಮೃದ್ಧಿಯಾಗಿ ಅಭಿವ್ಯಕ್ತಗೊಳ್ಳುತ್ತದೆ. ಸಂಸಿದ್ಧಿಗೊಂಡು ಶೋಭಿಸುತ್ತದೆ. ಸ್ವಾಚರಣೆಯ ಮುಖದಲ್ಲಿ ಸರ್ವಾದರಣೀಯವೂ ಸರ್ವಾಚರಣೀಯವೂ ಆಗುತ್ತದೆ.

ದೇವನಲ್ಲಿರುವ ಶ್ರದ್ಧೆಯೇ ಸತ್ಕ್ರಿಯಾಚರಣೆಯ ಪ್ರೇರಕಶಕ್ತಿ; ನಿಷ್ಠೆಯೇ ಸಮ್ಯಗ್ಜ್ಞಾನಾಚರಣೆಯ ಪ್ರೇರಕಶಕ್ತಿ. ಸಕಲ ಸತ್ಕ್ರಿಯೆಗಳ ಸಮಷ್ಟಿ ಸ್ವರೂಪವೇ ಕ್ರಿಯಾಶಕ್ತಿ. ಅಂತೆಯೇ ಸರ್ವಸಮ್ಯಗ್ಜ್ಞಾನಗಳ ಸಮಷ್ಟಿ ಸ್ವರೂಪವೇ ಜ್ಞಾನಶಕ್ತಿ. ಈ ಉಭಯಶಕ್ತಿಗಳ ಕಾರಣಕಳಾ ಸ್ವರೂಪವೇ ಮಹೇಶ್ವರ. ಆ ಮಹೇಶ್ವರೋಪಾಸಕನೇ ಮಾಹೇಶ್ವರ. ಈ ಮಾಹೇಶ್ವರಾಂಗನ ಸಾಧನ ಲೀಲಾ ಭೂಮಿಯೇ ಆಚಾರ. ತನ್ನ ಆಚರಣೆಯೆಂಬ ಚರಣಗಳಿಂದ ಆಚಾರ ಭೂಮಿಕೆಯಲ್ಲಿ ಮುನ್ನಡೆಯುತ್ತಾನೆ. ಇದಕ್ಕೆಲ್ಲ ಅಧಿಷ್ಠಾನ ಪರಕಾಯ.

ಪರಕಾಯನ ಕ್ರಿಯಾ ವಿಧಾನವೇ ಶಕ್ತಿಯ ಆವಿಷ್ಕರಣಕ್ಕೆ ಶ್ರೇಷ್ಠ ಸಾಧನ; ಅಂತೆಯೇ ಸತ್ಕಳೆಯ ಆವಿಷ್ಕರಣಕ್ಕೂ ಸರಿಮಿಗಿಲಿಲ್ಲದ ಕಾರಣ. ಪರಕಾಯನ ಕ್ರಿಯಾ ವಿಧಾನಗಳು ದೈಹಿಕವಲ್ಲ, ಐಂದ್ರಿಕವಲ್ಲ; ಮಾನಸಿಕವೂ ಅಲ್ಲ. ಅವು ಅತಿದೈಹಿಕ, ಅತಿಮಾನಸಿಕ ವಿಧಾನಗಳು. ಅವು ಜಡಪ್ರಾಕೃತಿಕದೋಷದೂಷಿತ ಗಳಲ್ಲ.

ತನು, ದೇಹ, ಶರೀರ ಮುಂತಾದ ಹೆಸರುಗಳಿಗಿಂತ 'ಕಾಯ' ಎಂಬ ಹೆಸರು ಹೆಚ್ಚು ಉಚಿತವಾದುದು. ಚಯನಾರ್ಥವುಳ್ಳ ಚಿಞ್ ಧಾತುವಿನಿಂದ ಕಾಯ ಶಬ್ದೋತ್ಪತ್ತಿಯಾಗಿದೆ. ಅಭಿವೃದ್ಧಿಯನ್ನು ಹೊಂದುವುದು ಕಾಯ. ಕೇವಲ ಅನ್ನದಿಂದ ಅಭಿವೃದ್ಧಿಯಲ್ಲ; ಆಚಾರದಿಂದಲೂ ಅಭಿವೃದ್ಧಿಯನ್ನು ಪಡೆದಾಗ 'ಕಾಯ' ಪದ ಸಾರ್ಥಕವಾಗುತ್ತದೆ. ಈ ಧ್ವನಿಯಲ್ಲಿ ಕಾಯ ಪದವನ್ನೇ ಮುಖ್ಯವಾಗಿ ಇಲ್ಲಿ ಉಪಯೋಗಿಸಲಾಗಿದೆ.

ಕಾಯವು ಚೈತನ್ಯಕ್ಕೆ ಅಧಿಷ್ಠಾನವಾಗಿದೆ. ಚೈತನ್ಯವನ್ನು ತಾನು ಆಶ್ರಯಿಸಿ ಇರುವ ಸೂಕ್ಷ್ಮಸ್ಥಿತಿಯನ್ನು ಪಡೆಯಲು ತಕ್ಕದಾಗಿರುತ್ತದೆ. ಚೈತನ್ಯ ಸ್ವರೂಪಗಳನ್ನು ಆಚಾರ ಮೂಲಕ ಅಳವಡಿಸಿ ಕೊಳ್ಳಲು ಸಮರ್ಥವಾಗಿರುತ್ತದೆ.

ಪ್ರವೃತ್ತಿಯಲ್ಲಿ ಕಾಯವು ಚೈತನ್ಯಕ್ಕೆ ಅಧಿಷ್ಠಾನ ವಾಗಿದ್ದರೆ ನಿವೃತ್ತಿಯಲ್ಲಿ ಪರಕಾಯ ಪರಿಸ್ಥಿತಿಯಲ್ಲಿ ಆ ಪರತತ್ತ್ವಾಧಿಷ್ಠಾನವಾಗುತ್ತದೆ ಕಾಯಕ್ಕೆ! ಅಂದರೆ ಕಾಯಕ್ಕೆ ಪರತತ್ತ್ವವೇ ಆಶ್ರಯವಾಗಿ ಅದೇ ಆಗಿರುತ್ತದೆ. ಪರಿಚ್ಛೇದತ್ವವನ್ನು ಕಳೆದುಕೊಳ್ಳುತ್ತದೆ. ಅಂಶಾಂಶೀ ಭಾವವನ್ನು ಕಳೆದುಕೊಳ್ಳುತ್ತದೆ. "ಕಲಾತೀತ ಪದಾಶ್ರಯಃ" ಈ ವಿಶೇಷಣವು ವಿಶೇಷವಾಗಿ ಗಮನಾರ್ಹವಾದುದು. ಕಲಾ ಪದವು ಶ್ಲೇಷ ಪ್ರಯೋಗ. ನಿವೃತ್ತಿ, ಪ್ರತಿಷ್ಠಾದಿ ಕಲಾದ್ಯೋತಕವೂ ಅಂಶ ಪ್ರತೀಕವೂ ಆಗಿದೆ. ಇವೆಲ್ಲ ಕಲೆಗಳಿಗೆ ಅತೀತವಾದುದು ಆ ಪರಶಿವವಸ್ತು. ಪಂಚಭೂತಸಂಬಂಧವಾದ ಪಂಚಕಲೆಗಳಿಂದ ಕೂಡಿದೆ ಈ ದೇಹ. ಪರಕಾಯನು ಕಲಾತೀತನಾದಾಗ ಈ ದೇಹ ಆ ಪರಂಜ್ಯೋತಿಯಲ್ಲಿ ಉರಿಯುಂಡ ಕರ್ಪೂರ ದಂತಾಗುತ್ತದೆ. ದೀಪ್ತಿಮಯ ದೇಹನಾಗುತ್ತಾನೆ. ಕಿಚ್ಚಿನೊಳಗಿಟ್ಟ ಕೋಲು ಕಿಚ್ಚೇ ಆಗುವಂತೆ ಆಗುತ್ತಾನೆ. ಕಾಯ ಅಪರತ್ವದಿಂದ ಪರತ್ವಕ್ಕೇರುತ್ತದೆ.

ಅಂಶತ್ವವನ್ನು ಅಂಶಿಯಲ್ಲಿ ಬೆರಸುತ್ತದೆ. ಚಂದ್ರ ಕಲೆಗಳು ಚಂದ್ರನಲ್ಲಿ ಬೆರೆಯು ವಂತೆ ಕಾಯ-ಕಲೆಗಳು ಆ ಪರವಸ್ತುವಿನಲ್ಲಿ ಬೆರೆಯುತ್ತವೆ.

ಇನ್ನು "ಕಲಾತೀತ. ದಾಶ್ರಯಃ" ಎಂಬುದಕ್ಕೆ ಷಟ್‌ಕಲೆಗಳುಳ್ಳ ಷಟ್‌ಚಕ್ರ ಗಳನ್ನು ಮೀರಿ ಸಹಸ್ರಾರದಲ್ಲಿ ಪರಕಾಯನು ಇರುವನೆಂದು ಅರ್ಥವಾಗುತ್ತದೆ. ಷಟ್‌ಸ್ಥಲದಲ್ಲಿ ಷಟ್‌ಕಲೆಗಳನ್ನು ಹೇಳುವುದುಂಟು. ಹಿಂದೆ ಹೇಳಿದ ಪಂಚಕಲೆ ಗಳ ಜತೆಗೆ ಶಾಂತಿತೀತೋತ್ತರ ಕಲೆಯೊಂದನ್ನು ಕೂಡಿಸಿ ಆರು ಕಲೆಗಳನ್ನು ಹೇಳುವುದುಂಟು. ಇವು ಓಂಕಾರದ ಜ್ಯೋತಿ, ದರ್ಪಣ, ಅರ್ಧಚಂದ್ರ, ಕುಂಡಲ, ದಂಡ, ತಾರಕವೆಂಬ ಆರು ಆಕೃತಿಗಳಲ್ಲಿ ಶಾಂತಿತೀತೋತ್ತರಾದಿ ಷಟ್ ಕಲೆಗಳು ಉತ್ಪತ್ತಿಯಾಗಿ ಆಜ್ಞಾದಿ ಆಧಾರಾಂತ ಆರು ಚಕ್ರಗಳಲ್ಲಿ ನೆಲಸಿರುತ್ತವೆ. ಪರಕಾಯನು ಈ ಕಲೆಗಳುಳ್ಳ ಈ ಆರು ಚಕ್ರಸ್ಥಾನಗಳನ್ನು ಮೀರಿ ಮುಂದುವರಿ ದಿರುತ್ತಾನೆ.

# ಧರ್ಮಾಚಾರಸ್ಥಳ

ಜೀವನದ ಅಭ್ಯುದಯಕ್ಕೆ ಶ್ರೇಯಸ್ಸಿಗೆ ಪ್ರೇರಕವಾದ ಪೂರಕವಾದ ಕ್ರಿಯೆಯೇ ಧರ್ಮ ಕರ್ತವ್ಯ ಕರ್ಮವೇ ಧರ್ಮ. ಆತ್ಮೋದ್ಧಾರದ ದಾರಿಯಲ್ಲಿ ಅಖಿಲ ಜಗದುದ್ಧಾರ ದಾರಿಯಲ್ಲಿ ಧರ್ಮಕ್ಕೆ ಪ್ರಥಮಸ್ಥಾನವಿದೆ. ಧರ್ಮದಿವಾಕರು ನಿಲ್ಲದೆ ಅಧರ್ಮದ ಕತ್ತಲೆ ಕಳೆಯದು; ಕಲ್ಯಾಣ ಕೈಗೂಡದು ಸಕಲ ಜೀವಾತ್ಮ ರಿಗೆ ಲೇಸನ್ನುಂಟು ಮಾಡುವುದು ಧರ್ಮ. ಸಹಜಾಚಾರವೂ ಧರ್ಮ. ಸತ್ಕ್ರಿಯೆಯು ಬಾಹ್ಯಧರ್ಮವಾದರೆ, ಸದಯಾಂತಃಕರಣಿಯಾಗಿರುವುದು ಆಂತರಿಕಧರ್ಮ.

ಧರ್ಮ ವ್ಯಾಪಕವಾದ ವಾಸ್ತವಗುಣ.. ಧರ್ಮ ಕೇವಲ ಪ್ರಾಣಿನಿಷ್ಠವಲ್ಲ; ಪದಾರ್ಥನಿಷ್ಟವೂ ಆಗಿದೆ. ಧರ್ಮವಿಲ್ಲದ ದ್ರವ್ಯವಿಲ್ಲ, ದ್ರವ್ಯ್ಯವಿಲ್ಲ. ಧರ್ಮ ಚರಾಚರ ಜಗತ್ತಿಗೆ ಆಧಾರವಾಗಿದೆ. "ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ." ಜೀವನ ಸತ್ತೆಗೆ ಜಾಗತಿಕ ಸತ್ತೆಗೆ ಧರ್ಮ ಜೀವಾಳವಾಗಿದೆ. ಧರ್ಮವಿಲ್ಲದ ವ್ಯಕ್ತಿ ಯಾಗಲಿ, ಸಮಾಜವಾಗಲಿ, ರಾಷ್ಟ್ರವಾಗಲಿ, ವಿಶ್ವವಾಗಲಿ ಬಾಳಿ ಬದುಕದು. ಎಲ್ಲರಿಗೂ ಎಲ್ಲಕ್ಕೂ ಧರ್ಮಬೇಕು. ಎಡಹುವಾಗ ಎತ್ತಿ ಹಿಡಿದು ಕಾಪಾಡುವ ನಿಯಮರೂಪಧರ್ಮ ಯಾರಿಗೆ ಬೇಡ? ಧರ್ಮ ವ್ಯಕ್ತಿನಿಷ್ಠವಾಗಿ ವಸ್ತುನಿಷ್ಠ ವಾಗಿ ಅನಂತ ಅರ್ಥವುಳ್ಳದಾಗಿದೆ. ಜೀವಧರ್ಮವನ್ನು ಕೈಬಿಟ್ಟು ದೇವ ಧರ್ಮ ವನ್ನು ಕೈಗೊಳ್ಳಬೇಕು. ಹೀಗಿರುವಾಗ ಪಶುಧರ್ಮಕ್ಕೆ ಇಂಬಿರಬಾರದೆಂದು ಬೇರೆ ಹೇಳಬೇಕಾಗಿಲ್ಲ.

ಸಾಮಾನ್ಯ-ವಿಶೇಷವೆಂದು ಧರ್ಮ ಇಬ್ಬಗೆ. ಸಾಮಾನ್ಯ ಧರ್ಮದಲ್ಲಿ ಜಾತಿಮತ ಪಂಥಗಳಿಗೆ ಇಂಬಿಲ್ಲ ; ವರ್ಣಾಶ್ರಮ ವಿಭಾಗವಿಲ್ಲ. ಸರ್ವ ಮಾನವ ರಿಗೆ ಬೇಕಾಗುವ ಸಹಜ ನಿಯಮಗಳೆಲ್ಲವೂ ಸಾಮಾನ್ಯ ಧರ್ಮವೆಂದೆನಿಸುತ್ತವೆ. ಸಾಮಾನ್ಯಧರ್ಮವನ್ನು ಮಾನವ ಧರ್ಮ ಎಂದು ಹೇಳಬಹುದು. ಇದಿಲ್ಲದ ಮಾನವನು ಆಕಾರದಿಂದ ಮಾನವನಾಗಿದ್ದರೂ ಆಚಾರದಿಂದ ದಾನವನಾಗಿರು

ತ್ತಾನೆ ; ಅಧರ್ಮಿಯೆನಿಸುತ್ತಾನೆ. ದ್ವಿಪಾದ ಪಶುವೆಂದೆನಿಸುತ್ತಾನೆ. ಮಾನವ ಮಾನವನೆನಿಸಬೇಕಾದರೆ ಮಾನವೀಯ ಧರ್ಮ ಅತ್ಯಾವಶ್ಯಕ ; ಅತ್ಯಂತ ರಕ್ಷಕ.

ಇನ್ನು ಮತ ಪಂಥಗಳಿಗೆ ಒಳಪಟ್ಟ ನಿಯಮಗಳೇ ವಿಶೇಷ ಧರ್ಮವೆಂದು ಹೇಳಿಸಿಕೊಳ್ಳುತ್ತದೆ. ಆ ಆ ಮತ ಪ್ರಕ್ರಿಯೆಗಳನ್ನು ಅನುಸರಿಸಿ ವಿಶೇಷ ಧರ್ಮ ವಿರುತ್ತದೆ, ಇದನ್ನೇ ಸ್ವಧರ್ಮವೆಂದು ಹೇಳುವುದುಂಟು, ಅನ್ಯರ ಧರ್ಮವನ್ನು ಪರಧರ್ಮವೆಂದು ಕರೆವರು. ಆತ್ಮ ಧರ್ಮವೇ ಸ್ವಧರ್ಮ, ದೇಹೇಂದ್ರಿಯಧರ್ಮ ಗಳೇ ಪರಧರ್ಮ ಎಂದು ಹೇಳುವುದೇ ಔಚಿತ್ಯ ಪೂರ್ಣವಾದ ಮಾತು : ಅರ್ಥ ಪೂರ್ಣವಾದ ವಿಚಾರ. 'ಪರ' ಶಬ್ದಕ್ಕೆ ಶ್ರೇಷ್ಠ ಶಿವ ಎಂದು ಅರ್ಥವಿಸಿ ಹೇಳು ವುದಾದರೆ ಅದೂ ಅಂಗೀಕಾರಾರ್ಹವಾಗುತ್ತದೆ. ದೈವೀಧರ್ಮ ಯಾರಿಗೆ ಅನವಸರ ? ದೇವಧರ್ಮವನ್ನು ಆಚರಿಸುವುದು ಮಾನವರ ಮುಖ್ಯ ಕರ್ತವ್ಯ.

ಆಹಾರವೊಂದೇ ಜೀವನಕ್ಕೆ ಮುಖ್ಯವಲ್ಲ ; ಆಹಾರದಂತೆ ಆಚಾರವೂ ಅತ್ಯಂತ ಅವಶ್ಯಕ.ಪರಕಾಯನಾದ ಮಾಹೇಶ್ವರನಾಗಲು ಬೇಕಾದ ಸತ್ಯಸಾಧನವೇ ಧರ್ಮಾಚಾರ, ಹಿಂದಿನಪ್ರಕರಣದಲ್ಲಿ ವಿಸ್ತರಿತವಾದ ಪರಕಾಯ ಅಂದರೆ ಪರಾ ಶಕ್ತಿಯು ಮೈಗೂಡಬೇಕಾದರೆ ಧರ್ಮಾಚಾರಗಳನ್ನು ಪಾಲಿಸಬೇಕಾಗುತ್ತವೆ. ತಾಮಸ-ರಾಜಸ ಆಚಾರಗಳು, ಜಡಕರ್ಮಾಚಾರಗಳು ಆ ಪರಾಶಕ್ತಿಯನ್ನು ಆಪ್ಯರಿಸಲಾರವು. ಸತ್ಕ್ರಿಯೆಗೆ ಹೊರಗಾದ ಎಲ್ಲಬಗೆಯ ಚಲನಗಳು ಅನಾಚಾರ ಗಳು ; ಅಧರ್ಮಗಳು: ಇವುಗಳಿಂದ ಪರಾಪ್ರಕೃತಿ ಮೈಗೂಡದು. ಕಾರಣ ಮಾಹೇಶ್ವರಾಂಗನಿಗೆ ಅಸತ್ಕ್ರಿಯೆಗಳ ಆಚಿತ್ಕ್ರಿಯೆಗಳ ಪ್ರವೃತ್ತಿ ಉಂಟಾಗ ಬಾರದು. ಇವನ್ನು ನಿರಾಕರಿಸುವುವೇ ಧರ್ಮಾಚಾರ. ಪರಕಾಯನು ನಿಷ್ಕ್ರಿಯೆ -ಚಿತ್ಕ್ರಿಯೆಗಳನ್ನು ಅಂಗೀಕರಿಸುವುದೇ ಧರ್ಮಾಚಾರ, ಪರಕಾಯ ನಿಷ್ಕ್ರಿಯೆ. ನಿಷಿದ್ಧಕ್ರಿಯೆ. ದುಷ್ಕ್ರಿಯೆಗಳಿಗೆ ಎಂದೆಂದೂ ಮನಸ್ಸು ಮಾಡುವುದಿಲ್ಲ ; ಮನಸ್ಸು ಮಾಡಬಾರದು. ಇವು ಇವನ ಆಚಾರಕ್ಕೆ ಹೊರಗು, ಅರ್ಚನಕ್ಕೆ ಹೊರಗು; ಅರ್ಪಣಕ್ಕೆ ಹೊರಗು.

ಧರ್ಮವೃದ್ಧಿಯಿಂದ ಕರ್ಮಶುದ್ಧಿ, ಕರ್ಮಶುದ್ಧಿಯಿಂದ ಸತ್ವವೃದ್ಧಿ, ಸತ್ಯಸಿದ್ಧಿ. ಕರ್ಮ ದುಃಖಕಾರಣವಾಗಿದೆ. ಸಂಚಿತಾದಿ ಕರ್ಮಗಳನ್ನು ಕಳೆಯಲು ಧರ್ಮವೇ ದಿವ್ಯ ಸಾಧನವಾಗಿದೆ. ಧನಕನಕಾದಿಗಳು ಜತೆಗೂಡಿ ಬರುವುದಿಲ್ಲ. ಧರ್ಮವೊಂದೇ

ಬರುವುದು. ಬಂದು ವೈವೀಸತ್ತೆಯನ್ನು ಒದಗಿಸುವುವು. ಅಶುಭಕರ್ಮವನ್ನು ಬೆನ್ನಿಗೆ ಕಟ್ಟಿಕೊಂಡು ಹೋದರೆ ಆಸುರೀಲೋಕಕ್ಕೆ ತೆರಳಬೇಕಾಗುತ್ತದೆ. ದೈವೀ ಸತ್ತೆಗೆ ವಂಚಿತರಾಗಬೇಕಾಗುತ್ತದೆ.

"ಧರ್ಮಸ್ಯ ಹಿ ಸಹಾಯೇನ ತಮಸ್ತರತಿ ದುಸ್ತರಂ।
ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ॥"

ಅಧರ್ಮದ ಅಂಧಕಾರ ಹರಿಯಬೇಕಾದರೆ ಜಡಕರ್ಮ ತಮಸ್ಸನ್ನು ದಾಟ ಬೇಕಾದರೆ ಧರ್ಮ ಅಗತ್ಯ. ಧರ್ಮದ ಸಹಾಯ ಅನಿವಾರ್ಯ, ನಿತ್ಯವೂ ಧರ್ಮ ಸಂಗ್ರಹವನ್ನು ಮಾಡಬೇಕು.

ಧರ್ಮ ಜನಜೀವನ ಭವನದ ತಳಹದಿ. ಧರ್ಮವಿಲ್ಲದ ಬಾಳು ತಳವೂರಿ ನಿಲ್ಲ ಲಾರದು; ತಲೆಯೆತ್ತಿ ಬಾಳಲಾರದು, ಬಾಳು ಭದ್ರವಾಗಬೇಕಾದರೆ ಧರ್ಮಾಚಾರ ಬೇಕು.

ಧರ್ಮಾಚಾರ ಇದು ಒಂದು ಸುಂದರವಾದ ಕೂಡುನುಡಿ. ಧರ್ಮಾಚಾರ ವೆಂದರೆ ಧರ್ಮಾಭ್ಯಾಸ, ಧರ್ಮಪದ್ಧತಿ, ಪುಣ್ಯಾಚರಣೆ, ಒಳ್ಳೆಯ ನಡತೆ, ನಿಯತ ಜೀವನ ಅಥವಾ ನಿಯಮ ಜೀವನ, ಮತಾಚಾರ, ಸತ್ಕರ್ಮಾನುಷ್ಠಾನ, ನೀತಿ ರೀತಿ ಎಂದು ಅರ್ಥಗಳಾಗುತ್ತವೆ. ಉತ್ತಮವಾದ ಅಚಾರಗಳೆಲ್ಲವೂ ಧರ್ಮಾಚಾರ ವೆನಿಸುತ್ತವೆ. ಇಂತಹ ಮಹತ್ವಪೂರ್ಣವಾದ ಧರ್ಮಾಚಾರಕ್ಕೆ ಕಾಯ ಆಶ್ರಯ ವಾಗಿದೆ. ಇದರ ಆಶ್ರಯದಲ್ಲಿ ಧರ್ಮಾಚಾರವೆಂಬ ದೇವತರು ಸುಳಿದೆಗೆದು ಬೆಳೆಯ ಬೇಕು,

"ಕಾಯವೆಂಬ ಕೆರೆಗೆ ತನುವೆಂಬ ಏರಿ, ಮನವೆಂಬ ಕಟ್ಟೆಯ ಕಟ್ಟಿ, ದೃಢ ವೆಂಬ ತೂಬನಿಕ್ಕಬೇಕಯ್ಯ. ಅನಂದವೆಂಬ ಜಲವತುಂಬಿ, ಸ್ವಾನುಭಾವವೆಂಬ ಸೋಪಾನವ ಮಾಡಬೇಕಯ್ಯ. ಆ ಕೆರೆಯ ಏರಿಯಮೇಲೆ ಆಚಾರವೆಂಬ ವೃಕ್ಷವ ಬೆಳಸಿ ಅರುವೆಂಬ ಹೂವ ಅದ್ವೈತವೆಂಬ ಹಸ್ತದಿಂದ ಕುಯ್ದು ಅನುಪಮಲಿಂಗಕ್ಕೆ ಪೂಜಿಸಬಲ್ಲರೆ ಲಿಂಗಾರ್ಚಕರೆಂಬೆ ! ಈ ಭೇದವನರಿಯದೆ ಹುಸಿಯನೆ ಪೂಜಿಸಿ

ಗಸಣಿಗೊಳಗಾದ ಪಿಸುಣಿಗಳ ಲಿಂಗಪೂಜಕರೆಂತೆಂಬೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ!"

ಅರ್ಚನೆಯ ಅಗ್ಗಳಿಕೆಯನ್ನು ಸಾಟುವ ನೆಪದಲ್ಲಿ ಆಚಾರದ ಹಿರಿಮೆಯನ್ನು ಸಾಟದೆ ಈ ವಚನವಾಣಿ! ಅರಿವಿಲ್ಲದೆ ಅರ್ಚನೆ ಘಟಿಸದು. ಅರ್ಚನೆಗೆ ಅರಿವೇ ಒಂದು ಹೂವು. ಆ ಹೂವು ಬೇಕಾದರೆ ಆಚಾರವೆಂಬ ಮರಬೇಕು. ಆ ಆಚಾರಕ್ಕೆ ಅಧಿಷ್ಠಾನ ತನು. ಆಚಾರಕ್ಕೆ ಜೀವನ ಆನಂದ ನಿಯತಿಗೆ ಒಳಪಟ್ಟ ನಡತೆಯೆ ಆಚಾರ, ಅಥವಾ ಧರ್ಮ. ನಿಯತಿಗೆ ಒಳಪಡದಿರುವುದೇ ಅನಾಚಾರ, ಅಧರ್ಮ, ಆಚಾರ ಬೇಕಾದ ಬೆಳೆ. ಅನಾಚಾರ ಬೇಡಾದ ಬೆಳೆ. ಆಚಾರ ರೂಪಧರ್ಮವೃಕ್ಷವನ್ನು ಬೆಳಸಿದರೆ ಅರ್ಚನೆಗೆ ಬೇಕಾಗುವ ಅರಹೆಂಬ ಹೂವನ್ನು ಅದು ಕೊಡುತ್ತದೆ. ಪುಷ್ಪವಿಲ್ಲದ ಪೂಜೆ ವ್ಯರ್ಥ. ಅಂತೆಯೇ ಈತನುವೆಂಬ ವೃಕ್ಷ ಆನಂದ ಜಲದಲ್ಲಿ ಬೆಳೆದು ಅರುಹೆಂಬ ಹೂವನ್ನು ಬಿಟ್ಟರೆ ಅದೇಅನುಪಮ ಲಿಂಗಾರ್ಚನೆ. ಧರ್ಮಾಚರಣೆಯಿಂವ ಜ್ಞಾನದೀಪ್ತಿಯನ್ನು ಪಡೆಯುವುದೇ ಮಾಹೇಶ್ವರಾಂಗನ ಮುಖ್ಯಧ್ಯೇಯ ಅದಿಲ್ಲದ ಬಾಳು ಅಂಧಕಾರದಲ್ಲಿ ಮುಳುಗಿ ಮರೆಯಾದೀತು. ಆಗುತ್ತದೆ. ಇದಾಗಬಾರದೆಂದರೆ 'ಧರ್ಮಾಚಾರ' ಅತ್ಯಗತ್ಯ.

ಧರ್ಮಾಚಾರದಿಂದ ದೇವತ್ವಪ್ರಾಪ್ತಿ. ಧರ್ಮಾಧರ್ಮಗಳನ್ನು ಆಚರಿಸುವುದರಿಂದ ಮಾನವತ್ವ ಪ್ರಾಪ್ತಿ, ಅಧರ್ಮದಿಂದ ದಾನವತ್ವಪ್ರಾಪ್ತಿ, ಅಥವಾ ಪಶುಪಕ್ಷಿಜನ್ಮ ಪ್ರಾಪ್ತಿ, ಇದರಿಂದಾಗಿ ಮಾನವನಾಗಿಯೇ ಮಹೇಶ್ವರತ್ವಪ್ರಾಪ್ತಿಯಾಗಬೇಕಾದರೆ ಧರ್ಮಾಚಾರದಲ್ಲಿರಬೇಕಾಗುತ್ತದೆ.

ಕಾಮ್ಯ ನಿಷಿದ್ಧಾದಿಕರ್ಮಗಳು ಧರ್ಮವೆನಿಸವು. ಸಹಜಕ್ರಿಯೆ ಧರ್ಮವೆನಿಸುತ್ತದೆ. ಸಹಜಕ್ರಿಯಾನುಷ್ಠಾನವೇ ಧರ್ಮಾಚಾರವೆನಿಸುತ್ತದೆ, ಕಾಮ್ಯಕರ್ಮದಿಂದ ಅಶುಭವಾಸನೆ ಅಂದರೆ ಅಶುದ್ಧಸಂಸ್ಕಾರವುಂಟಾಗುತ್ತದೆ, ಸಹಜಕ್ರಿಯೆಯಿಂದ ಶುಭಸಂಸ್ಕಾರವುಂಟಾಗುತ್ತದೆ, ಅಶುಭಸಂಸ್ಕಾರದಿಂದ ದುಷ್ಫಲವುಂಟಾಗುತ್ತದೆ, ಶುಭ ಸಂಸ್ಕಾರದಿಂದ ಸತ್ಫಲವುಂಟಾಗುತ್ತದೆ; ಅಂತಃಕರಣ ಶುದ್ಧಿಯುಂಟಾಗುತ್ತದೆ. ಜ್ಞಾನಶಕ್ತಿ ವೃದ್ಧಿಯಾಗುತ್ತದೆ.

ಧರ್ಮಜೀವನ ಮಿತ್ರ; ಸಹಕಾರಿ. ಧರ್ಮವೇ ಜೀವನಕ್ಕೆ ಬಲ.

"ವಿದ್ಯಾಮಿತ್ರಂ ಪ್ರವಾಸೇಷು ಭಾರ್ಯಾಮಿತ್ರಂ-ಗೃಹೇಷು ಚ!
ವ್ಯಾಧಿತಸ್ಯೌಷಧಂ ಮಿತ್ರಂ ಧರ್ಮೋಮಿತ್ರಂ ಮೃತಸ್ಯ ಚ ॥

ಧರ್ಮಜೀವಂತವ್ಯಕ್ತಿಗಳಿಗೆ ಮಾತ್ರವಲ್ಲ ಮೃತರಿಗೂ ಮಿತ್ರವಾಗಿರುತ್ತದೆ.

ಇಂತಹ ಧರ್ಮ ಆಚರಣೆಗೆ ಬಂದಾಗಮಾತ್ರ ಅದು ತನಗೂ ಇತರರಿಗೂ ಪರಿಣಾಮಕಾರಿಯಾಗಿರುತ್ತದೆ. ಆಚಾರಕ್ಕೆ ಅಂದರೆ ನಡತೆಗೆ ಬಾರದ ಧರ್ಮ ಜಡ. ಆದ್ದರಿಂದ ಪರಕಾಯನು ಧರ್ಮಾಚಾರ ನಿರತನಾಗಿರಬೇಕು.

ಆಗಮಲಿಂಗದಿಂದ ಕಾಯಲಿಂಗ ರೂಪಿತವಾದರೆ, ಕಾಯಲಿಂಗದಿಂದ ಆಚಾರಲಿಂಗ ರೂಪಿತವಾಗಬೇಕು. ಆಚಾರಲಿಂಗ ರೂಪಿತವಾಗದೆ ಮಾಹೇಶ್ವರತ್ವ ಸಂಪೂರ್ಣಸಿದ್ಧಿಸದು.

ಆಚಾರ ಪದ ಸರ್ವಶುದ್ಧ ನಡತೆಗಳನ್ನು ಸೂಚಿಸುವ ಸಾಧಾರಣಪದ. ಅದು ಧರ್ಮ ವಿಶೇಷಣದಿಂದ ಕೂಡಿ ಅಸಾಧಾರಣ ಪದವಾಗಿ ವಿರ್ಪಡುತ್ತದೆ. ಇದರಿಂದಾಗಿ ಪರಧರ್ಮವನ್ನು ಬೋಧಿಸುವುದೇ ಅದರ ಮುಖ್ಯ ಗುರಿಯಾಗುತ್ತದೆ. ವಿಶಿಷ್ಟತ್ವಬೋಧಕವೇ ಧರ್ಮ ವಿಶೇಷಣದ ಲಕ್ಷ್ಯ. ಇದನ್ನು ಜಗದ್ಗುರು ರೇಣುಕ ಶಿವಾಚಾರ್ಯರು 'ಸಮಾಚಾರ' ಪದ ಪ್ರಯೋಗದಿಂದ ಮುಂದಿನ ತಮ್ಮ ಈ ಮಂತ್ರಶ್ಲೋಕದಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ.

"ತಸ್ಯೈವ ಪರಕಾಯಸ್ಯ ಸಮಾಚಾರೋ ಯ ಇಷ್ಯತೇ ।
ಸ ಧರ್ಮಃ ಸರ್ವಲೋಕಾನಾಮುಪಕಾರಾಯ ಕಲ್ಪತೇ ॥"

ಪರಶಿವಕಾಯನು ಯಾವ ಒಳ್ಳಡತೆಯ ಸಂದೇಶವನ್ನು ಬೀರುತ್ತಾನೆಯೋ ಅದುವೇ ಧರ್ಮವೆನಿಸುತ್ತದೆ. ಅದು ಎಲ್ಲ ಜೀವಿಗಳ ಕಲ್ಯಾಣಕ್ಕೆ ಕಾರಣವಾಗುತ್ತದೆ.

ಇಲ್ಲಿ ಪ್ರಯೋಗಿಸಿದ ಸಮಾಚಾರಪದವು ಶ್ಲೇಷಾಲಂಕಾರದಿಂದ ಕೂಡಿದೆ. ಅದು ಬಿಡಿನುಡಿಯೂ ಆಗಬಲ್ಲುದು; ಕೂಡುನುಡಿಯೂ ಆಗಬಲ್ಲುದು. 'ಸಮ್-ಆಚಾರ' ಎಂದಾಗ ಒಳ್ಳಡತೆ ಎಂದು ಅರ್ಥವಾಗುತ್ತದೆ. ಸಮಾಚಾರ ಎಂದು

ಕೂಡುನುಡಿಯಾಗಿ ನೋಡಿದಾಗಸುದ್ದಿ ಅಥವಾ ವಾರ್ತೆಎಂದು ಅರ್ಥವಾಗುತ್ತದೆ. ಸುದ್ದಿಯಾದರೂ ಆ ಪರಾಕಾಯನ ವಿಶಿಷ್ಟ ನಡತೆಯದೇ ಇರುತ್ತವೆ. ನಡೆನುಡಿ ಎರಡೊಂದಾದ ಪರಕಾಯನ ಸಂದೇಶ ಲೋಕಕ್ಕೆ ಆದರ್ಶವಾಗಿರುತ್ತದೆಯೆಂದರ್ಥ ವಾಗುತ್ತದೆ.

ಮಾಹೇಶ್ವರಾಂಗನು ಪರಕಾಯಸಿದ್ಧಿಯನ್ನು ಪಡೆದರೂ ವಿಶ್ವಜೀವಿ. ಪರಿಚ್ಛಿನ್ನತೆಯನ್ನು ಪರಿಹರಿಸಿದ ವಿಶಾಲ ಮನೋಭಾವಿ. ವಿಶ್ವಜೀವಿಗಳನ್ನು ಕಂಡು ಅವನ ಕರಳು ಕರಗುತ್ತದೆ. ಕರುಣೆಯಾಗಿ ಕೋಡಿವರಿಯುತ್ತದೆ. ಸರ್ವ ಜೀವಿಗಳ ಕಲ್ಯಾಣಕ್ಕಾಗಿ ವಿಶಿಷ್ಟಧರ್ಮಾಚಾರದಲ್ಲಿ ತಾನು ನಡೆದು ತನ್ನ ನಡತೆಯ ಮೂಲಕ ಧರ್ಮಸಂದೇಶವನ್ನು ಜಗತ್ತಿಗೆ ಬೀರುತ್ತಾನೆ. ತನಗಾಗಿ ಆವಶ್ಯಕ ವಿಲ್ಲದಿದ್ದರೂ ಲೋಕಕ್ಕಾಗಿ ಧರ್ಮಾಚಾರನಿರತನಾಗಿರುತ್ತಾನೆ.

ಅನುಕರಣಶೀಲರು ಜಾಗತಿಕ ಜನಗಳು. ಹಿರಿಯರು ಪೂಜ್ಯರು ಹೇಗೆ ನಡೆದರೆ ಹಾಗೆ ಕಿರಿಯರು ನಡೆಯಬಲ್ಲರು. ಇದರಿಂದಾಗಿ ಪರಕಾಯನು ಧರ್ಮಾ ಚಾರದಲ್ಲಿ ನಿರತನಾಗಿರುತ್ತಾನೆ, ಆದರೆ ಪ್ರಯತ್ನದಿಂದ ನಿರತನಾಗಿರುವುದಿಲ್ಲ. ಸಿದ್ಧನಾಗಿರುವುದರಿಂದ ಅವರ ಆಧರ್ಮಾಚಾರವು ಆತನಿಗೆ ಸಹಜವಾಗಿಯೇ ಇರು ತ್ತದೆ. ಈಸಹಜತೆಯನ್ನು ಸೂಚಿಸುವುದೂ ಸಹ'ಸಮಾಚಾರ'ಪದಪ್ರಯೋಗದ ಲಕ್ಷ್ಯವಾಗಿದೆ.

ಪರಕಾಯನ ಸಮಾಚಾರವೇ ಧರ್ಮ; ಆತನ ಧರ್ಮವೇ ಸಮಾಚಾರ. ಅದೊಂದು ಅವಿಭಾಜ್ಯಸಂಬಂಧ. ಆತನ ಧರ್ಮಾಚಾರಕ್ಕೆ ಭಿನ್ನತ್ವವಿಲ್ಲ; ಲೋಕೋಪಕಾರವೇ ಆತನ ಧರ್ಮಾನುಷ್ಠಾನಧ್ಯೇಯ. ಲೋಕಪದಕ್ಕೆ ಜಗತ್ತು ಮತ್ತು ಜನಾಂಗ ಎಂದು ಎರಡರ್ಥಗಳುಂಟು. ಸರ್ವಲೋಕವೆಂದರೆ ಸಮಸ್ತ ಜನಾಂಗಕ್ಕೂ ಸರ್ವಜಗತ್ತುಗಳ ಜೀವಿಗಳಿಗೂ ಎಂದರ್ಥವಾಗುತ್ತದೆ. ಇದರಿಂ ದಾಗಿ ಪರಕಾಯನ ಧರ್ಮಾಚಾರವು ಸರ್ವಜನಾಂಗಕ್ಕೂ ಸಮನ್ವಯವಾಗುವಂತ ಹದು. ಜಾತಿ ಮತ ಪಂಥಗಳ ಭೇದವಿಲ್ಲದೆ ಜಾಗತಿಕ ಜನಾಂಗಕ್ಕೆಲ್ಲ ಅನುಷ್ಠಾನ ಯೋಗ್ಯವಾದುದು–ಪರಕಾಯನ ಧರ್ಮಾಚಾರ. ಆತನದು ಆಡುವುದರಲ್ಲಿ ಮೂಡುವ ಧರ್ಮವಲ್ಲ; ಮಾಡುವುದರಲ್ಲಿ ಮೂಡುವ ಆದರ್ಶಧರ್ಮ. ನುಡಿ ದದ್ದು ಧರ್ಮವಲ್ಲ; ನಡೆದದ್ದು ಧರ್ಮ. 'ಧರ್ಮಂಚರ' ಎಂದಿದೆ ವೇದವಾಣಿ,

ಸಮಾಚಾರ, ಸರ್ವಲೋಕ ಈ ಎರಡು ಪದಪ್ರಯೋಗಗಳು ಈ ಪದ್ಯದ ಜೀವಾಳ ; ಈ ಮಂತ್ರದ ಮೌಲ್ಯ. ಭಾವಾನುಭಾವಗಳ ಔನ್ನತ್ಯವನ್ನು ಇವು ಬಿತ್ತರಿಸುತ್ತವೆ; ವೈಶಾಲ್ಯವನ್ನು ಉಗ್ಗಡಿಸುತ್ತವೆ. ಕವಿಯ ಪದಪ್ರಯೋಗ ಪರಿಣತೆಯನ್ನೂ ಪ್ರಬೋಧಿಸುತ್ತವೆ. ಸಮಾಚಾರ ಈ ಶಬ್ದಸಂಶ್ಲಿಷ್ಟತೆ ಮೆಚ್ಚತಕ್ಕುದು. ಇದು ಕೇವಲ ಶಬ್ದಸಂಶ್ಲಿಷ್ಟವಲ್ಲ; ಇದರಲ್ಲಿ ಅರ್ಥಸಂಶ್ಲಿಷ್ಟತೆಯೂ ಇದ್ದು ಒಂದು ಅಲಂಕಾರವಾಗಿದೆ. ನಡೆ–ನುಡಿಗಳೆರಡನ್ನೂ ಬೋಧಿಸುವ ವೈಶಿಷ್ಟ್ಯವುಳ್ಳುದಾಗಿದೆ. ಕವಿಯ ಅನುಭವವನ್ನೂ ಭಾಷಾಪರಿಣತೆಯನ್ನೂ ಮೂರ್ತೀಕರಿಸಿದೆ. ಸಮೀಕ್ಷಣೆಗೆ ಮಾರ್ಗವನ್ನು ಮಾಡಿದೆ.

ಧರ್ಮ ವ್ಯಾಪಕವಾದುದು; ಧರ್ಮವಿಲ್ಲದ ವಸ್ತುವಿಲ್ಲ; ಆದರೆ ಸಾಮಾನ್ಯವಾಗಿ ವ್ಯಕ್ತಿನಿಷ್ಠ ಮತ್ತು ವಸ್ತುನಿಷ್ಠ ಧರ್ಮ ವ್ಯಷ್ಟಿ. ಪರಕಾಯನ ಧರ್ಮ ಸಮಷ್ಟಿ. ಪರಕಾಯನಲ್ಲಿ ಧರ್ಮಸಂಗ್ರಹವಾಗಿ ಸಮಗ್ರವಾಗಿರುತ್ತದೆ. ಪರಕಾಯನು ಸಮಗ್ರಧರ್ಮಿ, ಸರ್ವಸುಖಕರ ಧರ್ಮಿ; ಸರ್ವೋಪಕಾರಕ ಧರ್ಮಿ.

ಧರ್ಮಕ್ಕೆ ರೂಪಿಲ್ಲ. ಆಚಾರವಿಲ್ಲದೆ ಧರ್ಮವನ್ನು ಗುರ್ತಿಸಲು ಆಗುವುದಿಲ್ಲ. ಧರ್ಮದ ಮೂಲ ಆಚಾರ; ಧರ್ಮದ ಲಕ್ಷಣ ಆಚಾರ, ಧರ್ಮ ಆಚಾರಮೇಯ. ಸಮಷ್ಟಿಧರ್ಮ ಸಮಾಚಾರಮೇಯ.

ಧರ್ಮ ಪ್ರವೃತ್ತಿ ನಿವೃತ್ತಿ ಸಹಜ ಎಂದು ಮೂಬಗೆಯಾಗಿದೆ. ಸಾಂಸಾರಿಕ ಧರ್ಮವೇ ಪ್ರವೃತ್ತಿಧರ್ಮ. ಸ್ವರ್ಗ–ಮೋಕ್ಷಗಳನ್ನು ಕಾಂಕ್ಷಿಸಿ ಮಾಡುವುದೇ ನಿವೃತ್ತಿಧರ್ಮ. ಭೋಗಮೋಕ್ಷಗಳನ್ನು ಬಯಸದೆ ಮಾಡುವುದೇ ಸಹಜಧರ್ಮ. ಇಹಾಮುತ್ರಫಲಭೋಗವಿರಾಗ ಸಹಜಧರ್ಮದ ಸತ್ಯಸ್ವರೂಪ.

ಧರ್ಮಾಚಾರವಿಲ್ಲದವನು ಬದುಕಿದ್ದರೂ ಸತ್ತಂತೆ ! ಧರ್ಮಾಚಾರದಲ್ಲಿ ಹೆಸರು ಪಡೆದವನು ಸತ್ತಿದ್ದರೂ ಬದುಕಿದ್ದಂತೆ ! "ಧರ್ಮಏವ ಹತೋಹಂತಿ, ಧರ್ಮೋರಕ್ಷತಿ ರಕ್ಷತಃ !" ಎಂಬ ವಾಣಿ ಗಮನೀಯ.

ಸಹಜಧರ್ಮವನ್ನೇ ವಿಶ್ವಧರ್ಮವೆಂದು ಅಂತರರಾಷ್ಟ್ರೀಯ ಧರ್ಮವೆಂದು ಹೇಳುವುದುಂಟು. ರೇಣುಕಜಗದ್ಗುರುವಾಣಿಯು 'ಸಧರ್ಮಃ ಸರ್ವಲೋಕಾನಾಮುಪಕಾರಾಯ ಕಲ್ಪತೇ 'ಎಂಬ ನಿರುಕ್ತಿಯಿಂದ ನಿರೂಪಿಸಿದ್ದಾರೆ. ಎಂತಹ

ವಿಶಾಲವಮನೋಭಾವ! ಏನು ಲೋಕೋಪಕಾರದೃಷ್ಟಿದೀಪ್ತಿ! ಇದಕ್ಕಿಂತಲೂ ವಿಶ್ವವಿಶಾಲಧರ್ಮವುಂಟೆ? ಈಸಹಜಧರ್ಮವೇ ವಿಶ್ವಪ್ರತಿಷ್ಠೆಗೆ ಮೂಲಕಾರಣ. ಸರ್ವಸಮ್ಮತಿಗೆ ಸಾಧನ. ಅಂತೆಯೇ ಸರ್ವೋಪಕಾರಮೂಲ. ಸರ್ವೋಪಕಾರಗುಣಗಳೇ ಸಹಜಧರ್ಮ. ಅಂತಹ ಗುಣಗಳನ್ನು ಮುಂದಿನ ಮಂತ್ರದಲ್ಲಿ ಜಗದ್ಗುರು ರೇಣುಕಶಿವಾಚಾರ್ಯರು ನಿರೂಪಿಸಿದ್ದಾರೆ.

"ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಕ್ಷಮಾ ।
ದಾನಂ ಪೂಜಾಜಪೋಧ್ಯಾನಮಿತಿಧರ್ಮಸ್ಯ ಸಂಗ್ರಹಃ ॥"

ಕೊಲ್ಲದಿರುವುದು, ಸುಳ್ಳುಹೇಳದಿರುವುದು, ಕಳವುಮಾಡದಿರುವುದು, ಕರಣಗಳಿಗೆ ಸೋಲದಿರುವುದು, ಕರುಣೆತೋರುವುದು, ಸೈರಣೆಯಿಂದಿರುವುದು, ಮತ್ತು ಸಹಜದಾನ, ಶಿವಾರ್ಚನ, ಶಿವಮಂತ್ರಾನುಷ್ಠಾನ. ಶಿವಧ್ಯಾನ ಇವು ಧರ್ಮಸಂತಾನವೆನಿಸಿವೆ.

ಕೊಲುವುದೊಂದೇ ಹಿಂಸೆಯಲ್ಲ ಮನವ ನೋಯಿಸುವುದೂ ಸಹ ಹಿಂಸೆ. ತನ್ನ ತ್ರಿಕರಣದಿಂದಲೂ ಯಾರಿಗೂ ನೋವನ್ನುಂಟುಮಾಡಬಾರದು. ಅದರಲ್ಲಿಯೂ ನಿಷ್ಕಾರಣವಾಗಿ ನಿಷ್ಪ್ರಯೋಜನವಾಗಿ ಮಾಡಬಾರದು. ಮಾಡಿದರೆ ಶಾಂತಿಭಂಗವಾಗುವುದು. ಶಾಂತಿಗೆ ಭಂಗತರುವುದೂ ಹಿಂಸೆಯೆನಿಸುವುದು.

ಹಿಂಸೆ ಧರ್ಮವೃಕ್ಷಕ್ಕೆ ಬಿದ್ದದುಷ್ಟಕೀಟ. ಹಿಂಸೆಯಿಂದ ಧರ್ಮ ಹಾಳಾಗುತ್ತದೆ. ಹಿಂಸೆಗಿಂತ ಬೇರೆ ಅಧರ್ಮವಿಲ್ಲ ಅಹಿಂಸೆಗಿಂತ ಅಧಿಕಧರ್ಮ ಬೇರಿಲ್ಲ. ಅಹಿಂಸೆ ಧರ್ಮದಮೂಲ; ಧರ್ಮಸಂಗ್ರಹದಲ್ಲಿ ಮುಖ್ಯ.

"ಒಬ್ಬರ ಮನನೋಯಿಸಿ, ಒಬ್ಬರ ಮನೆಯ
ಘಾತವ ಮಾಡಿ, ಗಂಗೆಯ ಮುಳುಗಿದರೆ ಆಗುವುದೇನಯ್ಯ?
ಚಂದ್ರನು ಗಂಗೆಯ ತಡೆಯಿಲ್ಲಿದ್ದರೇನು,
ಕಳಂಕಬಿಡದಾಯಿತ್ತಯ್ಯ. ಅದುಕಾರಣ.
ಮನವನೋಯಿಸಿದವನೆ, ಘಾತವ ಮಾಡದವನೆ
ಪರಮ ಪಾವನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ!"

ಹಿಂಸೆಗಿಂತ ಹೆಚ್ಚಿನ ಪಾಪವಿಲ್ಲ. ಅಹಿಂಸೆಗಿಂತ ಹೆಚ್ಚಿನ ಪುಣ್ಯವಿಲ್ಲ. ಇದರಿಂದಾಗಿ ಪುಣ್ಯವನ್ನು ಬಯಸುವವನು ಬೇರೊಬ್ಬರನ್ನು ಬಡಿದು ಬಯ್ದು ಮನದಲ್ಲಿ ಕೇಡನ್ನು ಬಗೆದು ನೋಯಿಸಬಾರದು. ತ್ರಿಕರಣಹಿಂಸೆಯನ್ನು ಬಿಡದೆ ಶಿವಪೂಜೆಯನ್ನು ಮಾಡಿದರೂ ಪ್ರಯೋಜನವಿಲ್ಲ; ಶೀಲಾಚರಣೆಯಲ್ಲಿದ್ದರೂ ಪ್ರಯೋಜನವಿಲ್ಲ. ತ್ರಿಕರಣಗಳಿಂದ ಹಿಂಸೆಯನ್ನು ತ್ಯಜಿಸಿವನೇ ಶೀಲವಂತ, ಸದ್ಧರ್ಮಿ.

"ತಪವೆತ್ತ ಹೆರರ ಕೇಡಿಂಗೆ ಬಗೆವುದೆತ್ತ?
ಜಪವೆತ್ತ ಶರಣರ ಮೇಲೆ ಅನೃತವ ನುಡಿವುದೆತ್ತ?...."

ಎಂದು ಕೇಳುತಿದೆ ಶರಣವಾಣಿ ! ಹೆರವರಿಗೆ ಕೇಡನ್ನು ಬಯಸುವುದೂ ಧರ್ಮವಿರುದ್ಧ, ತಪಸ್ಸಿಗೆ ನಿಷಿದ್ಧ.

ಕಡೆನುಡಿ, ಕೇಡುನೆನಹಿನಿಂದ ಅಂತರಂಗ ಹಿಂಸೆಯುಂಟಾಗುತ್ತದೆ. ಹೊಡೆ ಬಡಿಯುವುದರಿಂದ ಬಹಿರಂಗ ಅಂತರಂಗವೆರಡಕ್ಕೂ ಹಿಂಸೆಯುಂಟಾಗುತ್ತದೆ ಆದರೆ ಹೊಡೆದರೆ ಮೈಗೆ ತಾಗಿದಬಳಿಕ ಮನನೋಯುತ್ತದೆ. ಬೈದರೆ ಮೈಗೆ ತಾಗದೆ ಮನ ಬೇಗ ನೋಯುತ್ತದೆ; ಮರೆಯದಂತಿರುತ್ತದೆ. ಆದ್ದರಿಂದಲೇ ಬಡಿತಕ್ಕಿಂತ ಬಯ್ದುಪೆಟ್ಟು ಹೆಚ್ಚಿನದೆಂದು ಹೇಳುವ ರೂಢಿಬಂದಿದೆ.

"ನಾನೊಂದು ಸುರಗಿಯನೇನೆಂದು ಹಿಡಿವೆನು ?
ಏನ ಕಿತ್ತೇನನಿರಿವೆನು ?
ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥ."

ತಾತ್ತ್ವಿಕ ದೃಷ್ಟಿಯಿಂದಲೂ ಹಿಂಸೆ ಉಚಿತವಲ್ಲ: ಎಲ್ಲ ಜೀವಿಗಳಲ್ಲಿರುವ ಆತ್ಮ ಒಂದೆ ! ಯಾವ ಪ್ರಾಣಿಯನ್ನು ಕೊಂದರೂ ಆತ್ಮವಧೆ ತಪ್ಪಿದ್ದಲ್ಲ. ಆತ್ಮ ಹನನಕ್ಕಿಂತ ಹೆಚ್ಚಿನ ಪಾತಕವಿಲ್ಲ ವಿಶ್ವಾತ್ಮಭಾವಿಗೆ ಸರ್ವ ಸಮದರ್ಶಿಗೆ ಹಿಂಸೆ ತರವಲ್ಲ. ಆತ್ಮವಧೆಯೆಂದರೆ ಆತ್ಮನಿಗೆ ನೋವು.

ರಾಗದಂತೆ ದ್ವೇಷವೂ ಬಾಳ್ಕಿಚ್ಚು ; ಭವದ ಬೀಜ, ಯಾವ ಕಾರಣ ದಿಂದ ಯಾರನ್ನೂ ದ್ವೇಷಿಸಬಾರದು ; ಹಿಂಸಿಸಬಾರದು ಕೊಲ್ಲದಿಪ್ಪುದೆ

ಧರ್ಮ. ಕೊಲ್ಲುವವನೆ ಮಾದಿಗ. ಜೀವ ಹಿಂಸೆ ಗರ್ಹಿತ. ಜೀವ ಮೈತ್ರಿ ಸಂಸ್ತುತ. "ವೈರವಿಲ್ಲದೆ ಕೂರ್ಪುದೆ ಚಂದಮಾಮಾ" ಎಂದಿದೆ ನಿಜಗುಣವಾಣಿ.

"ಅಹಿಂಸಾ ಪ್ರತಿಷ್ಠಾಯಾಂ ತತ್‌ಸನ್ನಿಧೌ ವೈರತ್ಯಾಗಃ"

ಹಿಂಸೆಗೆ ದ್ವೇಷವು ಕಾರಣವಾದಂತೆ, ಕ್ರೋಧವೂ ಕಾರಣವಾಗಿದೆ. ಕ್ರೋಧದಿಂದ ಶಾಂತಿ ವಿವೇಕಗಳು ಹಾಳಾಗುತ್ತವೆ. ದ್ವೇಷದಿಂದ ನ್ಯಾಯ ಸತ್ಯ ಗಳು ಹಾಳಾಗುತ್ತವೆ.

"ಕ್ರೋಧೋ ಮೂಲಮನರ್ಥಾನಾಂ ಕ್ರೋಧಃ ಸಂಸಾರ ಬಂಧನಂ ।
ಧರ್ಮಃಕ್ಷಯಕರಃ ಕ್ರೋಧಃ ತಸ್ಮಾತ್ ಕ್ರೋಧಂ ವಿಸರ್ಜಯೇತ್ ॥"

"ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯ ?
ತನ್ನ ತನುವಿನ ಕೋಪ ತನ್ನ ಹಿರಿಯತನದ ಕೇಡು.
ತನ್ನ ಮನದ ಕೋಪ ತನ್ನ ಅರುಹಿಂಗೆ ಹಾನಿ.
ತನ್ನ ಮನೆಯ ಕಿಚ್ಚು ತನ್ನ ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ !"

"ಕ್ರೋಧೋಹಿ ಶತ್ರುಃ ಪ್ರಥಮೋ ನರಾಣಾಂ । ದೇಹಸ್ಥಿತೋ ದೇಹ ವಿನಾಶನಾಯ ।
ಯಥಾಸ್ಥಿತಃ ಕಾಷ್ಠಗತೋ ಹಿ ವಹ್ನಿಃ ಸ ಏವ ವಹ್ನಿರ್ದಹತೇ ಶರೀರಂ॥"

ಇದರಿಂದಾಗಿ ಹಿಂಸೆಗೆ ಹಾದಿಯನ್ನು ಹಾಕುವ ದ್ವೇಷಾಸೂಯೆಗಳನ್ನು ಕೋಪತಾಪಗಳನ್ನು ತ್ಯಜಿಸಬೇಕು. 'ನಾಸ್ತಿ ಕ್ರೋಧ ಸಮೋ ವಹ್ನಿಃ ;

ವಿನಾಶಕ ಹಿಂಸೆ, ವಿಧಾಯಕ ಹಿಂಸೆ ಎಂದು ಹಿಂಸೆ ಎರಡು ತೆರ. ವಿನಾಶಕ ಹಿಂಸೆ ಅನಗತ್ಯ. ವಿಧಾಯಕ ಹಿಂಸೆ ಅಗತ್ಯ. ತಂದೆ ಮಕ್ಕಳಿಗೆ, ಶಿಕ್ಷಕ ವಿದ್ಯಾರ್ಥಿಗಳಿಗೆ, ಗುರು ಶಿಷ್ಯರಿಗೆ. ಬುದ್ಧಿಗಲಿಸುವಾಗ ಕೊಂಚ ನೋವನ್ನುಂಟು ಮಾಡುವುದು ವಿಧಾಯಕ ಹಿಂಸೆ. ಅಂತೆಯೇ ವೈದ್ಯನು ರೋಗಿಗೆ ಶಸ್ತ್ರ ಚಿಕಿತ್ಸೆ ಯನ್ನು ಮಾಡುವುದು ವಿಧಾಯಕ ಹಿಂಸೆ. ಇವೆಲ್ಲ ಅಗತ್ಯ. ಇಲ್ಲಿ "ಅವ

ಗುಣಕ್ಕೆ ಮುನಿಸಲ್ಲದೆ ಪ್ರಾಣಕ್ಕೆ ಮುನಿಸುಂಟೆ ?" ಇಂತಹ ಪ್ರಸಂಗಗಳಲ್ಲಿ ಮುನಿಸು ಹಿಂಸೆಗಳನ್ನು ಪ್ರಯೋಗಿಸಿದರೆ ತಪ್ಪಿಲ್ಲ ; ಅಧರ್ಮವೆನಿಸದು. ಗುಣ ವರ್ಧನವಾಗುವ ಮರ್ದನ ಬೇಕೆಂದು ನೀತಿ ಶಾಸ್ತ್ರವು ಹೇಳುತ್ತದೆ;

"ಇಕ್ಷುದಂಡಾಸ್ತಿಲಾಃ ಶೂದ್ರಾಃ ಕಾಮಿನೀ ಹೇಮ ಮೇದಿನೀ ।
ದಧಿ ಚಂದನ ತಾಂಬೂಲಂ ಮರ್ದನಂ ಗುಣವರ್ಧನಂ ॥"

ಇವನ್ನೆಲ್ಲ ಮರ್ದಿಸಿದಷ್ಟು ಗುಣವರ್ಧನವಾಗುತ್ತದೆ. ಇವುಗಳ ವಿಷಯ ದಲ್ಲಿ ಹಿಂಸೆಯಾಗುತ್ತದೆಂದು ಹಿಂಜರಿಯಬಾರದು.

ನಿಷ್ಕಾರಣವಾಗಿ ಪರಪೀಡನೆಯನ್ನು ಯಾರೂ ಎಂದೂ ಮಾಡಬಾರದು. "ಶ್ರೂಯತಾಂ ಧರ್ಮ ಸರ್ವಸ್ವಂ ಶೃತ್ವಾ ಚೈವಾವಧಾರ್ಯತಾಂ । ಆತ್ಮನಃ ಪ್ರತಿ ಕೂಲಾನಿ ಪರೇಷಾಂ ನ ಸಮಾಚರೇತ್ ॥" ತನಗೆ ಹೇಗೆ ಇನ್ನೊಬ್ಬರಿಂದ ಪ್ರತಿ ಕೂಲವಾಗಲಿ ಅಹಿತವಾಗಲಿ ಆಗಬಾರದೆಂದು ಬಯಸುವನೋ ಹಾಗೆ ಪರರಿಗೆ ತಾನು ಪ್ರತಿಕೂಲವನ್ನು ಅಹಿತವನ್ನು ಮಾಡಬಾರದು.

"ಅಹಿಂಸಾ ಲಕ್ಷಣೋಧರ್ಮಃ" ಅಹಿಂಸೆಯೇ ಧರ್ಮದ ಲಕ್ಷಣ.ಅಂತೆಯೇ ಧರ್ಮಿಗೂ ಲಕ್ಷಣ. ವಿದ್ಯೆಗೆ ಅಕಾರ ಅಕ್ಷರವು ಹೇಗೋ ಹಾಗೆ ಧರ್ಮಕ್ಕೆ ಅಹಿಂಸೆಯೇ ಆದಿ ಆಧಾರವಾಗಿದೆ. ಅಹಿಂಸಾ ಧರ್ಮಿಯೇ ಎಲ್ಲರಿಗೆ ಆರಾಧ ದೈವನಾಗಿರುತ್ತಾನೆ.

ಎರಡನೆಯ ಧರ್ಮ ಸತ್ಯ. ಕಂಡಂತೆ ಕೇಳಿದಂತೆ ಹೇಳುವುದು ಸತ್ಯದ ಒಂದು ಮುಖವಾದರೆ ನುಡಿದು ತಪ್ಪದೆ, ನುಡಿದಂತೆ ನಡೆವುದು ಮತ್ತೊಂದು ಮುಖ. ಹೇಳಿ ಹುಸಿಯುವುದೂ ಅಸತ್ಯ, ಅಧರ್ಮ. ಸತ್ಯ ಎಂದಿಗೂ ಸೋಲದು, ಸಾಯದು; 'ಸತ್ಯಮೇವ ಜಯತೇ' 'ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಸುಖವಿಲ್ಲ.'

ನುಡಿ ದಿಟವಾದಂತೆ ನಡೆಯೂ ದಿಟವಾಗಿರಬೇಕು. ಆಗ ಸತ್ಯವು ಸಂಪೂರ್ಣ ಗೊಳ್ಳುತ್ತದೆ. ಸತ್ಯವು ಋಜು (ಸರಳ) ಜೀವನದ ಕುರುಹು; ದೈವೀಶಕ್ತಿಯ ಹೊಳಹು.

"ಸತ್ಯದಲ್ಲಿ ನಡೆವುದು ಶೀಲ. ಸತ್ಯದಲ್ಲಿ ನುಡಿವುದು ಶೀಲ. ಸಜ್ಜನ ಸದಾಚಾರದಲ್ಲಿ ವರ್ತಿಸಿ ಸತ್ಯವನರಿವುದೇ ಶೀಲ ಕಾಣಿರೋ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವಿನಲ್ಲಿ !"

ಈ ವಚನ ನಡೆ ನುಡಿಗಳೆರಡರ ಸತ್ಯವನ್ನು ವಿವರಿಸಿದೆ. ಸದಾಚಾರ (ಧರ್ಮಾಚಾರ)ದಲ್ಲಿ ವರ್ತಿಸದೆ ಸತ್ಯವನರಿಯಲು ಸಾಧ್ಯವಿಲ್ಲೆಂದು ಸತ್ಯವನ್ನು ಬಿಟ್ಟು ಶೀಲ ಬೇರಿಲ್ಲೆಂದು ಹೇಳಿ ಸತ್ಯ ಸಂಪಾದನೆಯ ಹೊಲಬನ್ನು ಸತ್ಯದ ಸ್ವರೂಪವನ್ನು ನಿರೂಪಿಸಿದೆ. ಅಲ್ಲದೆ ಧರ್ಮಾಚಾರದ ವರ್ತನೆಗೂ ಸತ್ಯ ಸಂಪಾದನೆಗೂ ಇರುವ ನಿಕಟ ಸಂಬಂಧವನ್ನು ಸುಸ್ಪಷ್ಟವಾಗಿ ಸೂಚಿಸಿದೆ.

ಅಹಿಂಸೆಯಲ್ಲಿರುವ ತ್ರಿಕರಣ ಸಂಯಮದಲ್ಲಿ ವಾಕ್ ಸಂಯಮನವೂ ಒಂದಾಗಿದೆ. ಆದರೆ ಅಲ್ಲಿ ಬರುವ ವಾಕ್ ಸಂಯಮನವೇ ಬೇರೆ ; ಇಲ್ಲಿ ಈ ಸತ್ಯದಲ್ಲಿ ಬರುವ ವಾಕ್ ಸಂಯಮನವೇ ಬೇರೆ. ಕ್ರೂರ, ಕುಹಕ, ಕುಭಾಷೆಗಳನ್ನು ಆಡದಿರುವುದು ಅಹಿಂಸಾ ಧರ್ಮದಲ್ಲಿನ ವಾಕ್ ಸಂಯಮ. ಹುಸಿಯಾಡದೆ, ನುಡಿದಂತೆ ನಡೆಯಲು ತಪ್ಪದೆ ಇರುವುದು ಸತ್ಯ ಧರ್ಮದಲ್ಲಿನ ವಾಕ್ ಸಂಯಮ. ಅದರ ಫಲ ವೈರತ್ಯಾಗ. ಇದರ ಫಲ ವಾಕ್‌ಸಿದ್ಧಿ. ಅಹಿಂಸೆಯಲ್ಲಿನ ವಾಕ್ ಸಂಸ್ಕಾರದಿಂದ ವಾಕ್ ವಿನಯದಿಂದ ಜನತೆಯಲ್ಲಿ ಜೀವಿಗಳಲ್ಲಿ ವಿಶ್ವಾಸ ವಿಶ್ವಮೈತ್ರಿಯುಂಟಾಗುತ್ತವೆ. ಸತ್ಯದಲ್ಲಿನ ವಾಗಾರ್ಜವತೆಯಿಂದ ಮಾತು ಮಂತ್ರವಾಗುತ್ತದೆ ; ಜ್ಯೋತಿರ್ಲಿಂಗವಾಗುತ್ತದೆ. ಸತ್ಯವಂತನಿರುವ ಪ್ರಾಂತ ಸತ್ಯಲೋಕವಾಗಿ ಪರಿಣಮಿಸುತ್ತದೆ.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ ! ಸತ್ಯವ ನುಡಿವುದೇ ದೇವಲೋಕ : ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮದೇವ,"

ದೇವಲೋಕವೆನಿಸುವುದು ಸತ್ಯದಿಂದ, ಮರ್ತ್ಯಲೋಕವೆನಿಸುವುದು ಮಿಥ್ಯದಿಂದ.

"ಹೊಲೆಯರ ಬಾವಿಯಲೊಂದು ಎಲು ನಟ್ಟಿದ್ದರೆ
ಹೊಲೆ ಹೊಲೆ ಎಂಬುದೀ ಲೋಕವೆಲ್ಲ.
ಹಲವೆಲುವಿದ್ದ ಬಾಯಲ್ಲಿ ಅಲ್ಲದುದ ನುಡಿದರೆ
ಆ ಬಾಯಿ ಹೊಲೆಯರ ಬಾವಿಯಿಂದ ಕರಕಷ್ಟಕಾಣಾ ರಾಮನಾಥ !"
"ಅನೃತ, ಅನಾಚಾರ, ಅನ್ಯಹಿಂಸೆ, ಪರಧನ, ಪರಸ್ತ್ರಿ,
ಪರನಿಂದೆ ಇವಬಿಟ್ಟು ಲಿಂಗನಿಷ್ಠೆಯಿಂದ ಶುದ್ಧಾತ್ಮನಾಗಿರಬಲ್ಲರೆ
ಮಾಹೇಶ್ವರ ಸ್ಥಲವಿದೆಂಬೆನಯ್ಯ ಮಹಾಲಿಂಗ ಗುರು ಶಿ.ಸಿ. ಪ್ರಭುವೇ!"

ಹುಸಿ ನುಡಿಯುವುದರಿಂದ ತನ್ನ ಬಾಯಿ ಹೊಲಸಾಗುತ್ತದೆ ; ತನ್ನ ಬಾಳು ಹಸಗೆಡುತ್ತದೆ. ಶುದ್ಧಾತ್ಮನಾಗಬೇಕಾದರೆ ಅನೃತ ಅನ್ಯಹಿಂಸೆಗಳನ್ನು ಮೊದಲು ಬಿಡಬೇಕು. ಸಿಹಿ ಕಹಿಗಳು ಪದಾರ್ಥಗಳಲ್ಲಿರುವುದಕ್ಕಿಂತ ಮಿಗಿಲಾಗಿ ನಾಲಗೆಯಲ್ಲಿ ಇರುತ್ತವೆ ; ನಾಲಗೆಯಿಂದಾಡುವ ನುಡಿಗಳಲ್ಲಿರುತ್ತವೆ:

"ಜಿಹ್ವಾಗ್ರೇ ವರ್ತತೇ ಲಕ್ಷ್ಮೀ ಜಿಹ್ವಾಗ್ರೇ ಮಿತ್ರಬಾಂಧವಾಃ ।
ಜಿಹ್ವಾಗ್ರೇ ಬಂಧ ಸಂಪ್ರಾಪ್ತಿಃ ಜಿಹ್ವಾಗ್ರೇ ಮರಣಂ ಧ್ರುವಂ ॥"

ಜಿಹ್ವೆಯಿಂದ ಭಾಗ್ಯ, ಜಿಹ್ವೆಯಿಂದ ಬಂಧು ಮಿತ್ರರು. ಅದೇ ಜಿಹ್ವೆಯಿಂದ ಬಂಧ ; ಮರಣ ಸಂಬಂಧ. ನಗೆಗೂ ಹೊಗೆಗೂ ನಾಲಗೆಯೇ ನೆಲೆಯಾಗಿದೆ. ಸತ್ಯ ಸದುವಿನಯಗಳಿಂದ ಕೂಡಿದ ನಾಲಗೆ ದೈವೀ ಸುಖವನ್ನುಂಟು ಮಾಡುತ್ತದೆ. ಸಟೆ–ಕಪಟ ಕುಹಕ ಕ್ರೂರಾದಿಗಳಿಂದ ಕೂಡಿದ ನಾಲಗೆ ನರಕ ದುಃಖವನ್ನು ತರುತ್ತದೆ.

"ದೈವಾಧೀನಂ ಜಗತ್ಸರ್ವಂ ಸತ್ಯಾಧೀನಂತು ದೈವತಂ ।
ತತ್ಸತ್ಯಮುತ್ತಮಾಧೀನಂ ಉತ್ತಮಾ ಮಮ ದೇವತಾಃ ॥
ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇನ ತಪತೇ ರವಿಃ ।
ಸತ್ಯೇನ ವಾಯವೋ ವಾಂತಿ ಸರ್ವಂ ಸತ್ಯೇ ಪ್ರತಿಷ್ಠಿತಂ॥"

ಈ ಎರಡು ಹೊನ್ನುಡಿಗಳು ದಿಟದ ನಿಲುವನ್ನು ಪುಟಗೊಳಿಸಿವೆ. ಈ ಮೊದಲ ಮಾತಿನಂತೆ ಸತ್ಯಧರ್ಮವುಳ್ಳ ಪರಕಾಯನಾದ ಮಾಹೇಶ್ವರಾಂಗನು

ಮಹಾದೇವನಿಗೆ ಮಹಾದೇವನು. ಆತನಿಗೆ ಜಗತ್ತೆಲ್ಲವೂ ಅಧೀನವಾಗಿರು ತ್ತದೆ.

ನೆಲ ನೇಸರ ಗಾಳಿ ಏನೆಲ್ಲವೂ ಸತ್ಯದಲ್ಲಿ ಪ್ರತಿಷ್ಠಿತವಾಗಿದೆ. ಪ್ರತಿಭಾನ್ವಿತ ವಾಗಿದೆ ; ಪ್ರತಿನಿತ್ಯ ಕರ್ತವ್ಯ ನಿಷ್ಠವಾಗಿದೆ.

ಅಹಿಂಸೆ ಸತ್ಯವನ್ನಾಶ್ರಯಿಸಿದೆ. ಸತ್ಯ ಅಹಿಂಸೆಯನ್ನಾಶ್ರಯಿದೆ. ಇವೆರಡೂ ಪರಸ್ಪರ ಸಹಾಯಕವೂ ಪೂರಕವೂ ಆಗಿವೆ. ಹಿಂಸೆಯಲ್ಲಿ ಸತ್ಯತೆಯಿಲ್ಲ. ಅಸತ್ಯ ದಲ್ಲಿ ಅಹಿಂಸೆಯಿಲ್ಲ. ಈ ಉಭಯ ಧರ್ಮಗಳನ್ನು ಸಮನ್ವಯಗೊಳಸಿದೆ ಈ ಶ್ಲೋಕ :

"ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ಸತ್ಯಮ
ಪ್ರಿಯಂ ।
ಪ್ರಿಯಂಚ ನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ ॥
ಪ್ರಿಯ ವಾಕ್ಯ ಪ್ರದಾನೇನ ಸರ್ವೇ ತುಷ್ಯಂತಿ ಜಂತವಃ ।
ತಸ್ಮಾತ್ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ ॥"

ಮಾತಿನಲ್ಲಿನ ಪ್ರಿಯತ್ವವು ಅಹಿಂಸಾ ಧರ್ಮದ ಗುಣ ; ಋತತ್ವವು ಸತ್ಯ ಧರ್ಮದ ಗುಣ ; ಪ್ರಿಯ ಸತ್ಯತ್ವವು ಉಭಯ ಧರ್ಮ ಸಮನ್ವಯ ಸಾಧನ.

ಅಪ್ರಿಯವಾದ ಸತ್ಯವನ್ನಾಡಬಾರದು ; ಪ್ರಿಯವಾದ ಅಸತ್ಯವನ್ನಾಡ ಬಾರದು. ಈ ಧರ್ಮ ಸನಾತನ ; ಇದು ಸನಾತನ ಧರ್ಮದರ್ಶನ. ಇದ ರಿಂದ ನಿಷ್ಕಂಟಕ ಸಾಮಾಜಿಕದ್ರೋಹರಹಿತ ವ್ಯವಹಾರ ರಚನ. ವಿದ್ವಾಂಸನಿಗೆ ವಿದೇಶವೆಂಬುದಿಲ್ಲ. ಪ್ರಿಯವಾದಿಗೆ ಪರರೆಂಬುದಿಲ್ಲ.

ಸರ್ವರು ಸಂತೋಷಿಸುವರು ಸವಿನುಡಿಗೆ. ಆದುದರಿಂದ ಸವಿ ನುಡಿ ಯನ್ನು ಆಡಗಲಿಯಬೇಕು. ನುಡಿಗೆ ಬಡತನವಿಲ್ಲ. ಬೇರೆ ಏನನ್ನಾದರೂ ಕೊಡದಿದ್ದರೆ ಹೋಗಲಿ, ನಯವಾದ ಪ್ರಿಯವಾದ ಮಾತನ್ನು ಕೊಡಗಲಿಯ ಬೇಕು. "ಏನು ಬಂದಿರಿ, ಹದುಳವಿದ್ದಿರಾ ? ಎಂದರೆ ನಿಮ್ಮ ಮೈಸಿರಿ ಹಾರಿ ಹೋವುದೆ ? ಕೊಡದಿದ್ದರೀ ಒಂದು ಗುಣವಿಲ್ಲದಿದ್ದರೆ ಮೂಗು ಕೊಯ್ಯದೆ ಮಾಣ್ಬನೇ ಕೂಡಲ ಸಂಗಮದೇವ ?" ಎಂದು ಕೇಳುತ್ತಾನೆ ಬಸವಣ್ಣ !

"ಜಿಹ್ವಾಯಾ ಅಗ್ರೇ ಮಧು ಮೇ, ಜಿಹ್ವಾಮೂಲೇ ಮಧೂಲಕಂ ।
ಮಮೇದಹ ಕ್ರತಾವಸೋ ಮಮ ಚಿತ್ತಮ ಪಾಯಸಿ ॥
ಮಧುಮನ್ಮೇ ನಿಕ್ರಮೇಣಂ, ಮಧುಮನ್ಮೇ ಪರಾಯಣಂ ।
ವಾಚಾ ವದಾಮಿ ಮಧುಮದ್ ಭೂಯಾಸಂ ಮಧು ಸಂದೃಶಃ ॥"

—ಅಥರ್ವಣ ಅಧ್ಯಾಯ–೧.೩೪

ನನ್ನ ನಾಲಗೆಯ ತುದಿಯು ಮೇಲೆ ಮಧುರತೆ ಇರಲಿ : ನಾಲಗೆಯ ಮೂಲವು ಸಿಹಿಯಿಂದ ಕೂಡಿರಲಿ. ನನ್ನ ನಡತೆಯಲ್ಲಿಯೂ ಸಿಹಿಯು (ಮಧುರತೆ) ಅವಶ್ಯವಾಗಿರಲಿ. ನನ್ನ ಮನಸ್ಸಿನಲ್ಲಿಯೂ ಆ ಸಿಹಿಯು ತುಂಬಿರಲಿ.

ನನ್ನ ಬರುವಿಕೆಯು ಸವಿಯಾಗಲಿ. ನನ್ನ ಹೋಗುವಿಕೆಯು ಸವಿಯಾಗಲಿ. ನನ್ನ ಮಾತು ಮಧುರವಾಗಿರಲಿ. ನನ್ನ ದೃಷ್ಟಿ ಮಾಧುರ್ಯಮಯವಾಗಲಿ. ಎಂದು ವೇದ ಋಷಿಗಳು ಬೇಡಿರುವರು. "ಮೃದು ವಚನವೇ ಸಕಲ ಜಪಂಗಳಯ್ಯ ; ಮೃದು ವಚನವೆ ಸಕಲ ತಪಂಗಳಯ್ಯ" ಎಂದು ಶರಣರು ಹಾಡಿರುವರು.

"ಕೊಡುವಲ್ಲಿ ಕೊಂಬಲ್ಲಿ ಅತಿ ಆಶೆಯಿಂದ ಹುಸಿ ನುಡಿಯ
ನುಡಿಯದೆ, ಕೊಟ್ಟ ಭಾಷೆಯ ಪ್ರಾಣಾಂತ್ಯ ಬಂದರೂ
ನುಡಿಯಂತೆ ನಡೆವುದೇ ಸತ್ಯಾಚಾರವೆಂಬೆ ನೋಡಾ...."

ಎಂಬುದಾಗಿ ಚೆನ್ನಬಸವಣ್ಣನವರು ಸತ್ಯದ ಲಕ್ಷಣವನ್ನು ಸೊಗಸಾಗಿ ಸಮಗ್ರವಾಗಿ ಹೇಳಿದ್ದಾರೆ. ಅಲ್ಲದೆ ಈ ಸತ್ಯಾಚಾರದಿಂದ ವಿಷಯಂಗಳು ಲಿಂಗಮುಖವಾಗುವವೆಂದೂ ಹೇಳಿದ್ದಾರೆ. ಆದ್ದರಿಂದ 'ಸತ್ಯಪೂತಾಂ ವದೇದ್ವಾಣೀಂ ಮನಃಪೂತಂ ಸಮಾಚರೇತ್'' ಸತ್ಯದಿಂದ ಶುದ್ಧವಾದ ಮಾತನ್ನಾಡಬೇಕು. ಮನಸ್ಸಿನಿಂದ ಪವಿತ್ರವಾದುದನ್ನು ಮಾಡಬೇಕು, ಮನಸ್ಸಿಗೆ ಪಾವನವೆನಿಸಿದುದನ್ನು ಆಚರಿಸಬೇಕು ; ಮನಸ್ಸು ಮಂಗಳವಾಗುವದನ್ನು ಮಾಡಬೇಕು.

"ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ಸತ್ಯಸಮಂ ತಪಃ ।
ವಿದ್ಯೆಗೆ ಸಮವಾದ ಕಣ್ಣಿಲ್ಲ. ಸತ್ಯಕ್ಕೆ ಸಮವಾದ ತಪವಿಲ್ಲ.

"ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯಾ ಎರಡಾಳಿನ ಭಾಷೆಯಂ: ಕೊಲುವೆನೆಂಬ ಭಾಷೆ ದೇವನದು! ಗೆಲುವೆನೆಂಬ ಭಾಷೆ ಭಕ್ತನದು! ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವಾ!"

ಮೂರನೆಯದು ಅಸ್ತೇಯ ಧರ್ಮ:

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ:
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ;
ಇದೇ ಕೂಡಲ ಸಂಗಮದೇವರ ಒಲಿಸುವ ಪರಿ."

ಈ ವಚನದಲ್ಲಿ ಬಸವಣ್ಣನವರು ಅಸ್ತೇಯ ಗುಣಕ್ಕೆ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ, ಏಕೆಂದರೆ ವೈಯಕ್ತಿಕ ಮತ್ತು ಸಾಮಾಜಿಕ ಜೀವನವೆರಡಕ್ಕೂ ವಿಘಾತಕವಾಗಿವೆ ಈ ಕಳವು ಕೊಲೆ ಹುಸಿ ಮುಂತಾದವು. ಇದರಿಂದಾಗಿ ಇವನ್ನು ಮೊದಲು ಬಿಡಲು ಬೋಧಿಸಿದ್ದಾರೆ.

ಕಳವಿನ ಬಾಳಿಗಿಂತ ಹಗುರಾದ ಬಾಳು ಬೇರೊಂದಿಲ್ಲ; ಹಸಗೆಟ್ಟ ಬಾಳು ಬೇರೊಂದಿಲ್ಲ. ಕಳವು ಅದೊಂದು ಕೊಳೆ. ಅದು ಮೈಗಿಂತ ಮಿಗಿಲಾಗಿ ಮನಸ್ಸಿಗೆ ಅಂಟಿಕೊಂಡ ಕೊಳೆ. ಅದನ್ನು ಕಳೆಯದೆ ಅಂತರಂಗ ಶುದ್ಧವಾಗದು. ಅದನ್ನು ತೊಳೆದು ಕಳೆವ ಜಲವೆಂದರೆ ಅಸ್ತೇಯವೊಂದೆ! ಅದರಲ್ಲಿ ಮಿಂದು ಮಡಿಯಾಗಬೇಕು. ಹಾಗೆ ಮಾಡದೆ ಬರೀ ಈ ಹೊರಗಿನ ಹೊಳೆಯ ನೀರಲ್ಲಿ ಮುಳುಗಿ ಎದ್ದರೆ ಉಪಯೋಗವಿಲ್ಲ. ಇದರಿಂದ ಮೈ ಕೊಳೆ ಹೋಗಬಹುದಲ್ಲದೆ ಮನದ ಕೊಳೆ ಹೋಗದು.

"ತೊರೆಯ ಮೀವಣ್ಣಗಳಿರಾ, ತೊರೆಯಿರೋ ಪರಧನವ!
ಪರದ್ರವ್ಯವ ಬಿಡದೆ ಹೋಗಿ ತೊರೆಯಲ್ಲಿ ಮಿಂದರೆ

ಆ ತೊರೆಯಲ್ಲ ಬರುದೊರೆ ಕಂಡಯ್ಯ !
ಕಳವ ತೊರೆದು ಮಿಂದಡೆ ಒಲಿದು ಕೂಡಿಕೊಂಬ
ನಮ್ಮ ಕೂಡಲ ಸಂಗಮದೇವ."

"ಗೃಹಸ್ನಾನಂ ಕನಿಷ್ಠಂ ಚ ಕೂಪಸ್ನಾನಂ ತು ಮಧ್ಯಮಂ
ಉತ್ತಮಂ ನದಿಸ್ನಾನಂ ಸತ್ಯಂ ಪರ್ವತ ನಂದನೇ"—
ಎಂಬುದಂತಿರಲಿ, ಎಮ್ಮ ಮನಸಿನ ಕಿಲ್ಬಿಷವಳಿದುದೇ
ಮಹಾಸ್ನಾನ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ !"

ಇನ್ನೊಬ್ಬರ ಸೊತ್ತನ್ನು ಕೈಯಿಂದ ಕದಿಯುವುದೇ ಕಳ್ಳತನವಲ್ಲ, ಇದಕ್ಕೆ ಮೊದಲು ಪರರ ಸೊತ್ತನ್ನು ಕದಿಯಬೇಕೆಂದು ಮನಸ್ಸಿನಲ್ಲಿ ನೆನೆಯುವುದೂ ಸಹ ಕಳ್ಳತನ. ಇದು ಮಾನಸಿಕ ಚೌರ್ಯ. ಇದು ಶಾಶ್ವತ ಪಾತಕ. ಇದು ಹೊರಗಿನ ಜಳಕದಿಂದ ತೊಲಗುವ ಕೊಳೆಯಲ್ಲ. ಮನಸ್ಸಿನಲ್ಲಿಯೂ ಇನ್ನೊಬ್ಬರ ದ್ರವ್ಯ ವನ್ನು ಅಪೇಕ್ಷಿಸದಿರುವುದೇ ಆಭ್ಯಂತರ ಸ್ನಾನ ; ಅದೇ ಅಸ್ತೇಯ ಗುಣ.

ಕಳ್ಳ ಕದ್ದ ಒಡವೆ ಕಳ್ಳನಿಗೆ ಕೇಡು ಮಾಡದೆ ಬಿಡದು, ತೊಲಗದು; ಕದಿ ಯುವುದಕ್ಕೆ ಮೊದಲೇ ಕಳ್ಳನ ಮನಸ್ಸನ್ನು ಕೆಡಿಸಿರುತ್ತದೆ; ದುರಾಲೋಚನೆಯ ದೋಷಕ್ಕೆ ಗುರಿ ಮಾಡಿರುತ್ತದೆ. ಕದ್ದು ತಂದು ಇರಿಸಿಕೊಂಡಾಗಲೂ ಮನಕ್ಕೆ ಬೇಗುದಿಯನ್ನುಂಟು ಮಾಡುತ್ತದೆ, ಹೊರಟು ಹೋಗುವಾಗಲೂ ಇಮ್ಮಡಿ ಮುಮ್ಮಡಿಯಾಗಿ ನಷ್ಟಕ್ಕೆ ಗುರಿಮಾಡುತ್ತದೆ.

ಪರರ ಸೊತ್ತನ್ನ ಕದಿಯುವುದೊಂದೇ ಕಳ್ಳತನವಲ್ಲ. ತನ್ನದನ್ನೇ ತನ್ನ ಶಕ್ತಿಗೆ ಮಿಂಚಿ ಉಪಭೋಗಿಸಿದರೂ ಕಳ್ಳತನವೆನಿಸುತ್ತದೆ. ನಿದರ್ಶನಕ್ಕಾಗಿ ತನ್ನ ಜೀರ್ಣಶಕ್ತಿಗೆ ಮೀರಿ ಉಂಡರೆ ಇದೂ ಸಹ ಕಳ್ಳತನ. ತನಗೆ ಬೇಕಾದು ದಕ್ಕಿಂತಲೂ ಹೆಚ್ಚಿಗೆ ಇರಿಸಿಕೊಂಡುದೂ ಸಹ ಕಳ್ಳತನದ ಪದಾರ್ಥವೆನಿಸುತ್ತದೆ. ಕಳ್ಳನ ಮನೆಯ ಪದಾರ್ಥವನ್ನು ಪಡೆದವನೂ ಕಳ್ಳತನಕ್ಕೆ ಗುರಿಯಾಗುತ್ತಾನೆ. ಕಳ್ಳನ ಮನೆಯಲ್ಲಿ ಉಂಡರೆ ಕಳ್ಳತನ ಮಾಡುವ ಬುದ್ಧಿಯುಂಟಾಗುತ್ತದೆ. ಕಳ್ಳ ತನ ಕೇವಲ ವಿಷಯಕ್ಕೆ ಸೀಮಿತವಾಗಿಲ್ಲ. ವೈಚಾರಿಕ ಚೌರ್ಯವೂ ಉಂಟು. ಂಪತ್ತನ್ನು ಕದಿಯುವಂತೆ—ಸಾಹಿತ್ಯವನ್ನೂ ಕದಿಯುವುದುಂಟು,

ಸತ್ಯಕ್ಕೂ ಅಸ್ತೇಯಕ್ಕೂ ಸಂಬಂಧವುಂಟು. ಸತ್ಯವಂತನು ಕಳ್ಳತನಕ್ಕೆ ಕೈಹಾಕನು; ಮನ ಮಾಡನು. ಕಳ್ಳನಲ್ಲಿ ಸತ್ಯತನವು ಇರದು. ಅಹಿಂಸೆ ಸತ್ಯಗಳೆರಡೂ ಪ್ರತಿಷ್ಠಿತವಾಗಬೇಕಾದರೆ ಅಸ್ತೇಯ ಧರ್ಮದ ಆಧಾರದ ಮೇಲೆ! ಸ್ತೇಯಕ್ರಿಯೆಯಿಂದ ಇನ್ನೊಬ್ಬರ ಮನ ನೋಯುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಕಾರಣ ಧರ್ಮಾಚಾರನಿರತನು ಅಹಿಂಸೆ ಸತ್ಯಗಳನ್ನು ಉಳಿಸಿಕೊಳ್ಳಬೇಕಾದರೆ ಅಸ್ತೇಯ ಗುಣವನ್ನು ಅರ್ಜಿಸಿ ಉಳಿಸಿಕೊಳ್ಳಲೇ ಬೇಕು.

ಅಹಿಂಸೆಯಿಂದ ಕ್ರೋಧ ದ್ವೇಷ ಮತ್ಸರ ದುರ್ಗುಣಗಳು, ಸತ್ಯದಿಂದ ಮಿಥ್ಯೆ ಮೋಹ ಕುಹಕ ಕಪಟಾದಿಗಳು, ಅಸ್ತೇಯದಿಂದ ದುರಾಶೆ ದುರ್ಬುದ್ಧಿ ದುರಾಲೋಚನೆಗಳು–ದೂರಾಗುತ್ತವೆ.

ಬ್ರಹ್ಮಚರ್ಯ ಇದು ನಾಲ್ಕನೆಯದು. ಅವಿವಾಹಿತ ನಾಗಿರುವುದೇ ಬ್ರಹ್ಮಚರ್ಯವೆಂದು ಇದರ ಅರ್ಥ ರೂಢಿಯಾಗಿದೆ. ಇದೊಂದು ಆಶ್ರಮಧರ್ಮವೆಂದೂ ಹೆಸರಾಗಿದೆ. ಬ್ರಹ್ಮನಲ್ಲಿಗೆ ಚರಿಸಲು, ಅಥವಾ ಬ್ರಹ್ಮವನ್ನು ತಿಳಿಯಲು ಉಚಿತವಾದುದು ಯಾವುದೋ ಅದು ಬ್ರಹ್ಮಚರ್ಯ. ದೊಡ್ಡದಾರಿಯಲ್ಲಿ ದಿವ್ಯಭಾವದಲ್ಲಿ ಸಾಗಿಹೋಗುವುದೂ ಸಹ ಬ್ರಹ್ಮಚರ್ಯ. ಈ ಬ್ರಹ್ಮಚರ್ಯ ನಿಯಮವುಳ್ಳವನೇ ಬ್ರಹಚಾರಿ.

ಬ್ರಹ್ಮವೆಂದರೆ ದೊಡ್ಡದು, ಪರಮಾತ್ಮ, ಸೃಷ್ಟಿಕರ್ತ, ವೇದ, ಸತ್ಯ, ತತ್ತ್ವ, ಜ್ಞಾನ ಮುಂತಾಗಿ ಅರ್ಥಗಳಿವೆ. ಇವುಗಳಲ್ಲಿ ಚರಿಸಲು ಯೋಗ್ಯವಾದ ನಿಯಮಕ್ಕೆ ಬ್ರಹ್ಮಚರ್ಯ ಎಂದು ಹೆಸರು. ಇಷ್ಟಿದ್ದರೂ ಸ್ತ್ರೀಸಂಗಪರಿತ್ಯಾಗವೊಂದೇ ಇದಕ್ಕೆ ಮುಖ್ಯಾರ್ಥವಾಗಿ ಉಳಿತಿದೆ. ಬ್ರಹ್ಮಧರ್ಮದಲ್ಲಿ ಚರಿಸುವುದೇ ಬ್ರಹ್ಮಚರ್ಯ. ಸಚ್ಚಿದಾನಂದವನ್ನು ಪಡೆವ ಮಾರ್ಗ. ಸತ್ಯತತ್ತ್ವವನ್ನು ಅನುಸರಿಸುವ ಹೆದ್ದಾರಿ. ಅವಿವಾಹಿತನಾಗಿರುವುದೇ ಇದರ ಮುಖ್ಯಾರ್ಥವಾಗಿದ್ದರೆ ಇದರ ಬಳಿಕ ಬರುವ ಗೃಹಸ್ಥಾಶ್ರಮಕ್ಕೆ ಅರ್ಥವಿಲ್ಲದಾಗುತ್ತದೆ. ಈ ದೋಷವನ್ನು ಈ ಕೊರತೆಯನ್ನು ಪರಿಹರಿಸಲೋ ಏನೊ ಬ್ರಹ್ಮಚರ್ಯವನ್ನು ಎರಡು ಬಗೆಯಾಗಿ ವಿಂಗಡಿಸುತ್ತಾರೆ: ಗೃಹಸ್ಥ ಬ್ರಹ್ಮಚರ್ಯ, ಸಂನ್ಯಾಸ (ಆಜೀವ) ಬ್ರಹ್ಮಚರ್ಯ –ಎಂದು. ಗೃಹಸ್ಥ ಬ್ರಹ್ಮಚರ್ಯಕ್ಕೆ ನಂತಬ್ರಹ್ಮಚರ್ಯವೆಂದು ಇನ್ನೊಂದು ಹೆಸರು, 'ಋತುಮತಿಯಾದ ಕಾಲವನು ಮೀರದೆ ನಿಜಸತಿಯೊಳು

ರತಿಸುಖಪಡೆವುದು ನುತ ಅಥವಾ ಗೃಹಸ್ಥ ಬ್ರಹ್ಮಚರ್ಯವೆನಿಸುವುದು.' ಇಡಿ ಬಾಳನಲ್ಲಿ ಹೆಣ್ಣಿನ ಹಂಬಲವಿಲ್ಲದಿರುವುದೇ ಆಜೀವ ಅಥವಾ ಅಖಂಡ ಬ್ರಹ್ಮ ಚರ್ಯವೆನಿಸುವುದು.

ಬರಿಯ ಗುಹ್ಯೇಂದ್ರಿಯ ಸಂಯಮವೊಂದೇ ಬ್ರಹ್ಮಚರ್ಯದ ವಾಸ್ತ ವಾರ್ಥವೆಂದು ಹೇಳಲಾಗದು. ಸರ್ವೇಂದ್ರಿಯ ಸಂಯಮವೂ ಬ್ರಹ್ಮಚರ್ಯ ವೆನಿಸುವುದು. ವನಿತಾದಿ ಎಲ್ಲ ವಿಷಯಗಳಲ್ಲಿಯೂ ವಿರತಿಭಾವವು ಮೂಡ ಬೇಕು; ಇಲ್ಲವೆ ದುರಾಶೆಯು ದೂರಾಗಬೇಕು ಎಲ್ಲ ಇಂದ್ರಿಯಗಳು ಅಂತಃ ಕರಣಗಳು ಪರಮಾತ್ಮನಿಷ್ಠವಾಗಿರಬೇಕು; ಪರಮಾತ್ಮಪ್ರಸಾದದ ಉಪಭೋಗ ದಲ್ಲಿ ನಿರತವಾಗಿರಬೇಕು. ಶಿವವ್ರತಕ್ಕೆ ಸರ್ವೇಂದ್ರಿಯಗಳು ಸದಾ ಮೀಸಲಾಗಿರ ಬೇಕು.

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ.
ಸುತ್ತಿಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ.
ಸುತ್ತ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ.
ಕೂ. ಸಂ. ದೇವ, ನಿಮ್ಮ ಪಾದವಲ್ಲದೆ ಅನ್ಯವಿಷಯಕ್ಕೆ
ಎಳಸದಂತಿರಿಸು ನಿಮ್ಮಧರ್ಮ."

"ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ
ಮೂರುತಿ ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ, ಕೂ. ಸಂ. ದೇವ,
ನಿಮ್ಮ ಚರಣ ಕಮಲದೊಳಗಾನು ತುಂಬಿ."

ಹೀಗಿರುವುದು ಬ್ರಹ್ಮಚರ್ಯ. ಇರುವವನು ಬ್ರಹ್ಮಚಾರಿ. ಇದರಿಂದ ಜೀವನೋನ್ನತಿಯಿದೆ; ದೈವೀ ಮಹತಿಯಿದೆ. ಇದರಿಂದ ಅಪಾರಶಕ್ತಿ ಯುಂಟಾ ಗುತ್ತದೆ; ಅಪೂರ್ವ ತೇಜಸ್ಸುಂಟಾಗುತ್ತದೆ.

ಪರಬ್ರಹ್ಮದಲ್ಲಿಯೇ ಇರುವುದು, ಪರಬ್ರಹ್ಮದ ವಿಚಾರವನ್ನೆ ಕೇಳುವುದು, ಪರಬ್ರಹ್ಮದ ಸ್ವರೂಪವನ್ನೆ ಕಾಣುವುದು, ಪರಬ್ರಹ್ಮವನ್ನೆ ಬಾಯ್ತುಂಬಿ ಹಾಡು ವುದು, ಪರಬ್ರಹ್ಮವನ್ನೇ ಮನದುಂಬಿ ನೆನೆವುದು; ಅನ್ಯವಿಷಯಕ್ಕೆ ಎಳಸದಂತಿರು

ವುದು—ಇದು ಕೊರತೆಯಿಲ್ಲದ ಬ್ರಹ್ಮಚರ್ಯವ್ರತ. ಈ ದೃಷ್ಟಿಯಿಂದ ನೋಡಿದಾಗ ಇದಕ್ಕೆ ಅಹಿಂಸೆ ಸತ್ಯ ಅಸ್ತೇಯ ಧರ್ಮಗಳು ಆಧಾರವಾಗಿರುತ್ತವೆ. ಇವಿಲ್ಲದೆ ಬ್ರಹ್ಮಚರ್ಯವು ಬಾರದು, ಇರದು. ಸರ್ವವೂ ಶಿವಮಯವೆಂದು ತಿಳಿಯದೆ ಒಬ್ಬರನ್ನು ಹಿಂಸಿಸಿದರೆ ಆತನ ಬಳಿ ಬ್ರಹ್ಮಚರ್ಯವಿರದು; ಆತನು ಬ್ರಹ್ಮನ ಬಳಿಗೆ ಚರಿಸಲಾರನು. ಸತ್ಯವೇ ಶಿವನಾಗಿರುವಾಗ ಸತ್ಯವನ್ನೇ ಬಿಟ್ಟವನು ಶಿವನಿಗೆ ದೂರಲ್ಲದೆ ಇನ್ನೇನು ? ಜಾಗತಿಕದ್ರವ್ಯವೆಲ್ಲ ಶಿವನದು. ಅಂತಹದನ್ನು ಕದ್ದರೆ ಶಿವನಿಗೆ ಮೆಚ್ಚುಗೆಯಾಗನು. ಅಹಿಂಸೆ ಸತ್ಯ ಅಸ್ತೇಯವಿಲ್ಲದ ಕೇವಲ ಅವಿವಾಹಿತ ಬ್ರಹ್ಮಚರ್ಯ ಅರ್ಥವಿಲ್ಲದ್ದು; ಅಪ್ರಯೋಜಕವಾದದ್ದು. ಕಾಮ ವಿಜಯವೇ ಬ್ರಹ್ಮಚರ್ಯದ ಮೂಲ; ಪರಬ್ರಹ್ಮಾನುಭವವೇ ಚರಮ ಫಲ.

"ನಾಸ್ತಿ ಕಾಮಸಮೋವ್ಯಾಧಿರ್ನಾಸ್ತಿ ಮೋಹ ಸಮೋರಿಪುಃ।
ನಾಸ್ತಿಕ್ರೋಧಸಮೋ ವಹ್ನಿಃ ನಾಸ್ತಿ ಧರ್ಮಾತ್ಪರಂ ಸುಖಂ॥"

ಐದನೆಯದು ದಯೆ : ಒಬ್ಬರಿಗಾದ ನೋವನ್ನು ಕಳೆದು ನಲಿವನುಂಟುಮಾಡುವ ಒಂದು ಗುಣ. ಕರುಣ, ಕನಿಕರ, ಮರುಕ. ನಿರ್ಹೇತುಕ ಪ್ರೇಮ ಇವು ದಯಾಧರ್ಮದ ಕುರುಹುಗಳು. ಸಕಲ ಜೀವಾತ್ಮರಿಗೆ ಲೇಸನು ಬಯಸುವ ಗುಣವೂ ದಯೆಗೆ ಹೊರಗಲ್ಲ. "ದಯೆಯಿಲ್ಲದ ಧರ್ಮವಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ! ದಯವಿಲ್ಲದವರನೊಲ್ಲ ಕೂಡಲ ಸಂಗಮದೇವ." ಎಂಬ ವಚನದಿಂದ ದಯೆಯ ಸ್ಥಾನ, ದಯೆಯ ಆವಶ್ಯಕತೆಗಳು ಅಭಿವ್ಯಕ್ತವಾಗುತ್ತವೆ.

ಆಧ್ಯಾತ್ಮಿಕ ತಾಪದಲ್ಲಿದ್ದವರ ಮೇಲೆ ಅಂತಃಕರುಣವನ್ನು ಆದಿಭೌತಿಕತಾಪದಲ್ಲಿದ್ದವರಮೇಲೆ ಅನುಕಂಪವನ್ನು ಮತಿಹೀನರಮೇಲೆ ಮರುಕವನ್ನು ಕಷ್ಟದಲ್ಲಿರುವವರಮೇಲೆ ಕನಿಕರವನ್ನು ಹೊಲಬುದಪ್ಪಿ ಹಸಗೆಟ್ಟವರಮೇಲೆ ಹೃದಯವನ್ನು ಆಧಿದೈವಿಕತಾಪದಲ್ಲಿರುವವರ ಮೇಲೆ ಪಾವನಪ್ರೇಮವನ್ನು ತೋರುವುದೇ ದಯಾಳುವಿನ ಕರ್ತವ್ಯ. ಅದುವೆ ದಯೆ. ದಯಾಳುತನವೇ ಮಾನವೀಯ ಜೀವಾಳ,

ದಯೆ ಹಾರ್ದಿಕವಾದ ಒಂದು ರಸ. ಆ ರಸವಿಲ್ಲದಿದ್ದರೆ ಉಳಿದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯಾದಿಗುಣಗಳೆಂಬ ಬೆಳೆಯು ಬೆಳೆಯಲಾರದು. ದಯಾರಸವರ್ಷಣವಾಗದಿದ್ದರೆ ಧರ್ಮಸಾಗರವೂ ಬತ್ತುವುದು.

ದಯೆ ಹೃದಯ ಔದಾರ್ಯದ ಕುರುಹು. ಹೃದಯ ಶ್ರೀಮಂತಿಕೆಯ ಲಕ್ಷಣ. ದಯಾದಾನ ಮಹಾದಾನ ; ಶಾಂತಿಸಾಧನ. ದಯೆಯಿಂದ ಉತ್ತಮ ಜೀವನ ರೂಪಿತವಾಗುತ್ತದೆ.

"ಧರ್ಮಾನ್ನಾಸ್ತಿ ಪರಂ ಪುಮರ್ಥಕರಣಂ ಧರ್ಮಸ್ಯಮೂಲಂ ದಯಾ ।
ಧರ್ಮೇ ಬುದ್ಧಿರಿಹಾಸ್ತು ಮೇ ನ ತು ಫಲೇ ಹೇ ಧರ್ಮ ಮಾಂ ತಾರಯ ॥"

ಎಂದಿದೆ ದಯಾಧರ್ಮಿಯ ದಿವ್ಯವಾಣಿ !

ಕ್ಷಮೆ ಇದು ಧರ್ಮಸಂಚಯದಲ್ಲಿ ಆರನೆಯದು. ತನಗಿಂತ ದುರ್ಬಲರಾದವರು ತನ್ನನ್ನು ವಿರೋಧಿಸಿದರೂ ಅವರನ್ನು ದಂಡಿಸದೆ ಇರುವುದು ಕ್ಷಮೆ. ಒಬ್ಬರ ಅಪರಾಧವನ್ನು ಮನ್ನಿಸುವುದು ಕ್ಷಮೆ. ಸೇವಕರ ತಪ್ಪನ್ನು ಸಹಿಸುವುದು ಇಲ್ಲವೆ ಮರೆಯುವುದು ಕ್ಷಮೆ, ತನಗೆ ಶಿಕ್ಷಿಸುವ ಶಕ್ತಿಯಿದ್ದರೂ ಶಿಕ್ಷಿಸದೆ ತಾಳ್ಮೆಯಿಂದಿರುವುದು ಕ್ಷಮೆ. ಮಾತುಮಾತಿಗೂ ಮುನಿಯದಂತೆ ಇರುವುದೂಕ್ಷಮೆ.

"ವಿದ್ಯಾರೂಪಂ ವಿರೂಪಾಣಾಂ, ಕ್ಷಮಾರೂಪಂ ತಪಸ್ವಿನಾಂ ।
ಕೋಕಿಲಾನಾಂ ಸ್ವರೋ ರೂಪಂ, ಪಾತಿವ್ರತ್ಯಸ್ತುಯೋಷಿತಾಂ ॥"

ರೂಪಿಲ್ಲದವರಿಗೆ ವಿದ್ಯೆಯೇ ರೂಪ. ತಪಸ್ವಿಗಳಿಗೆ ಕ್ಷಮೆಯೇ ರೂಪ. ಕೋಗಿಲಗಳಿಗೆ ಇಂಚರವೇ ರೂಪ, ಸತಿಯರಿಗೆ ಪತಿವ್ರತವೇ ರೂಪ,

ಕ್ಷಮೆಯು ಧರ್ಮಹೀನರಿಗೆ ದುರ್ಬಲವಾಗಿ ತೋರಬಹುದು. ಆದರೆ ಧರ್ಮಿಗೆ ಅದುವೇ ಮಹಾಬಲವಾಗಿರುತ್ತದೆ. ಅವನು ಏನೆಲ್ಲವನ್ನೂ ಸಾಧಿಸಬಲ್ಲನು, ಎಂತಹ ಎದರಾಳಿಯನ್ನೂ ಒಲಿಸಬಲ್ಲನು

"ಕ್ಷಮಾಖಡ್ಗಂ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ?
ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತೇ ॥"

ಧರ್ಮಿಗೆ ಕ್ಷಮೆಯೇ ಕಲಿತನ. ಅದಿದ್ದರೆ ಅವನಿಗೆ ಯಾರ ಭಯವಿಲ್ಲ. ಎಂತಹ ದುರ್ಜನರಾದರೂ ಏನೂ ಮಾಡಲಾರರು. ಮಾಡಿದರೂ ಅದನ್ನು ಆತ ಸಹಿಸಬಲ್ಲ. ಅವರನ್ನು ಮನ್ನಿಸಬಲ್ಲ.

ಕ್ಷಮೆಗೆ ಹಗೆ ಕ್ರೋಧ; ಮತ್ತು ದುಡುಕು. ಇವೆರಡೂ ಅನರ್ಥಗಳಿಗೆ ತವರು.

"ಕ್ರೋಧೋ ಮೂಲಮನರ್ಥಾನಾಂ ಕ್ರೋಧಃ ಸಂಸಾರಬಂಧನಂ

ಧರ್ಮಃ ಕ್ಷಯಕರಃ ಕ್ರೋಧಃ ತಸ್ಮಾತ್‌ಕ್ರೋಧಂ ವಿವರ್ಜಯೇತ್ ।"

ಕ್ರೋಧದಿಂದ ಅರ್ಥಮೂಲವಾದ ಸೌಖ್ಯಸಾಧನವಾದ ಧರ್ಮವೇ ಕ್ಷಯವಾಗುತ್ತದೆ.

'ಸಹಸಾ ವಿಧಧೀತ ನ ಕ್ರಿಯಾಮವಿವೇಕಃ ಪರಮಾಪದಾಂಪದಂ' ದುಡುಕಿಮಾಡಿದ ಕೆಲಸ ಹೆಚ್ಚಿನ ಆಪತ್ತನ್ನು ತರುತ್ತದೆ. ದುಡುಕುವವನು ಅವಿವೇಕಿ ಎಂದೆನಿಸುತ್ತಾನೆ.

ಕ್ಷಮೆಗೂ ಅಹಿಂಸೆಗೂ ಬಿಡಲಾರದ ಸಂಬಂಧ. ಇವೆರಡೂ ಒಂದನ್ನು ಬಿಟ್ಟು ಇನ್ನೊಂದು ಇರಲಾರವು. ಅಂತೆಯೇ ದಯೆಯಿಲ್ಲದವರಲ್ಲಿ ಕ್ಷಮೆ ಯಿರದು.

ಏಳನೆಯದು ದಾನ. ದಾನ ದ್ವಿವಿಧ. ಒಂದು ದ್ರವ್ಯದಾನ. ಇನ್ನೊಂದು ಜ್ಞಾನದಾನ. ಇವುಗಳಲ್ಲಿ ದ್ರವ್ಯದಾನ ಹಲವು ಬಗೆಯಾಗಿದೆ. ಹದಿನಾರು ದಾನಗಳೆಂದು ಹೇಳುತ್ತಾರೆ. ಭೂದಾನ, ಕನ್ಯಾದಾನ ಗೋದಾನ, ಅಶ್ವದಾನ, ಗಜದಾನ, ಅನ್ನದಾನ, ರಜತದಾನ, ಸುವರ್ಣದಾನ, ರತ್ನದಾನ, ವಸ್ತ್ರದಾನ, ಗೃಹದಾನ, ಧಾನ್ಯದಾನ, ನೀರದಾನ. ಕ್ಷೀರದಾನ, ಪುಷ್ಪದಾನ, ಫಲದಾನ ಇವು ಷೋಡಶ ದಾನಗಳು. ಜ್ಞಾನದಾನವೂ ದ್ವಿವಿಧವಾಗಿದೆ. ಒಂದು ಲೌಕಿಕ ವಿದ್ಯಾದಾನ; ಇನ್ನೊಂದು ಪರಮಾರ್ಥವಿದ್ಯಾದಾನ. ಇವು ಮುಖ್ಯವಾದವು. ಉಪದಾನಗಳಿಗೆ ಲೆಕ್ಕವಿಲ್ಲ. ಮತದಾನ, ರಕ್ತದಾನ, ಶ್ರಮದಾನಾದಿಗಳು ಇಂದಿನ ಪ್ರಚಲಿತ ರಾಜಕೀಯ ಕ್ಷೇತ್ರದ ದಾನಗಳು,

"ದಾತವ್ಯಂ ಭೋಕ್ತವ್ಯಂ ಸತಿ ವಿಭವೇ ನೈವ ಸಂಚಯೇದರ್ಥಂ ।
ಪಶ್ಯೇಹ ಮಧುಕರಾಣಾಂ ಸಂಚಿತಮರ್ಥಂ ಹರಂತ್ಯನ್ಯೇ ॥"

ಧನವುಳ್ಳವನು ದಾನಮಾಡಬೇಕು, ತಾನುಣ್ಣಬೇಕು: ಕೂಡಿಸಿಡಬಾರದು. ಜೇನುಹುಳಗಳು ಕೂಡಿಟ್ಟ ಜೇನನ್ನು ಜನರು ಅಪಹರಿಸುತ್ತಾರೆ.

"ಆದಾನಸ್ಯ ಪ್ರದಾನಸ್ಯ ಕರ್ತವ್ಯಸ್ಯ ಚ ಕರ್ಮಣಃ।
ಕ್ಷಿಪ್ರಮಕ್ರಿಯಮಾಣಸ್ಯ ಕಾಲಃ ಪಿಬತಿ ತತ್ಫಲಂ ॥"

ಕೊಳ್ಳುವ ಕೊಡುವ ಮತ್ತು ಮಾಡಬೇಕಾದ ಗುರುಪೂಜಾದಿ ಕರ್ತವ್ಯವ- ಈ ಮೂರನ್ನು ವಿಳಂಬಮಾಡದೆ ಮಾಡಬೇಕು. ತಡಮಾಡಿದರೆ ಇವುಗಳ ಫಲ ವನ್ನು ಕಾಲ ಕೆಡಿಸುವುದು.

ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಬಯಸುವವನು ದಾನವನ್ನು ಮಾಡ ಬೇಕು. ದಾನಕ್ಕಿಂತ ಮಿಗಿಲಾದ ಧರ್ಮವಿಲ್ಲ, ದಾನಮಾಡಿದವರಿಗೆ ದಾರಿದ್ರ್ಯ ವಿಲ್ಲ. ತ್ಯಾಗಶೀಲನಿಗೆ ಭೋಗಶಕ್ತಿ ಸಂಪನ್ನವಾಗುತ್ತದೆ. ದಾನಿ ದೇವಸುಖವನ್ನು ಮೊದಲು ಪಡೆಯುತ್ತಾನೆ. ತ್ಯಾಗಕ್ಕಿಂತ ಮಿಗಿಲಾದ ಯೋಗವಿಲ್ಲ. ಯೋಗ ಫಲದ ಬೀಜ ತ್ಯಾಗ. ಅಂತೆಯೇ ಭೋಗಮೂಲವೂ ಆಗಿದೆ. ಭೋಗಮೋಕ್ಷ ಗಳೆರಡಕ್ಕೂ ಕಾರಣ ತ್ಯಾಗಧರ್ಮ.

"ಧರ್ಮಮರ್ಥಂ ಚ ಕಾಮಂಚ ತ್ರಿತಯಂ ಯೋಽಭಿವಾಂಛತಿ ।
ರಿಕ್ತಪಾಣಿರ್ನಗಚ್ಛೇತ್ತು ಗುರುಂ ನರಪತಿಂ ಸ್ತ್ರಿಯಂ ॥"

ಧರ್ಮ ಬೇಕಾದರೆ ಗುರುದೇವನಿಗೆ ದಾನಮಾಡಬೇಕು, ದ್ರವ್ಯಬೇಕಾದರೆ ರಾಜನಿಗೆ ದಾನಮಾಡಬೇಕು. ಭೋಗ ಬೇಕಾದರೆ ಸ್ತ್ರೀಗೆ ದಾನಮಾಡಬೇಕು, ಎಂದು ಹಿತವಚನ ಹೇಳುತ್ತಿದೆ.

"ಅಧನಂ ಖಲು ಜೀವಧನಂ, ಹೇಮಾರ್ಧಧನಂ, ಮಹಾಧನಂಧಾನ್ಯಂ ।
ಅತಿಧನಮೇತತ್ ಸುಂದರವಿದ್ಯಾಶೀಲಂ ತಪಶ್ಚ ಮಿತ್ರಂಚ ॥"

ನಿಜವಾದ ನಿರತಿಶಯುವಾದ ಧನ ಯಾವುದೆಂಬುದನ್ನು ಈ ಹಿತೋಕ್ತಿ ಹೀಗೆ ಹೇಳಿದೆ: ಜೀವಧನ ಧನವೇ ಅಲ್ಲವಂತೆ, ಚಿನ್ನ ಅದೆ ಸಿರಿಯಂತೆ, ಧಾನ್ಯ ಮಹಾಧನವಂತೆ. ಇವೆಲ್ಲಕ್ಕಿಂತ ಸುವಿದ್ಯೆ, ಸುಶೀಲ, ಸುತಪಸ್ಸು, ಸುಮಿತ್ರ ಇವು ಮಿಗಿಲಾದ ಧನಗಳಂತೆ! ಇವುಗಳ ದಾನವೂ ಸಹ ಶ್ರೇಷ್ಠವೆಂಬಧ್ವನಿ ಈ ಕಾವ್ಯ ವಾಣಿಯಲ್ಲಿದೆ. ಇದರಿಂದಾಗಿ ಈ ಸುವಿದ್ಯಾದಿ ಸರ್ವಶ್ರೇಷ್ಠಸಂಪತನ್ನು ಸಂಪಾದಿಸಿ ಸಮಾಜಕ್ಕೆ ದಾನದೂಡುವವನೇ ದಿವ್ಯದಾನಿ. ಇನ್ನೊಬ್ಬರಿಗೆ ಸುಮಿತ್ರನನ್ನು ಒದಗಿಸುವುದೂ ಒಂದು ಮಹದ್ದಾನವೆ!

"ನ ಗೋಪ್ರದಾನಂ ನ ಚ ಭೂಮಿದಾನಂ ನಚಾನ್ನದಾನಂ ನ ಹಿರಣ್ಯದಾನಂ।
ಸರ್ವಪ್ರದಾನೇಷ್ವಭಯ ಪ್ರದಾನಂ ತಥಾಪ್ರಧಾನಂ ಪ್ರವದಂತಿ ಧೀರಾಃ॥"

ಗೋ ಭೂ ಅನ್ನ ಹಿರಣ್ಯ ಮುಂತಾದವು ದಾನಗಳೇ ಹೊರತು ಪ್ರದಾನಗಳಲ್ಲ. ಪ್ರಧಾನ ಪ್ರದಾನಗಳಂತೂ ಇದ್ದದ್ದೂ ಅಲ್ಲ. ಪ್ರಧಾನ ಪ್ರದಾನವೆಂದರೆ ಅಭಯವೊಂದೆ !

ಈ ಗುಣದಾನಮಾಡುವ ಶಕ್ತಿಯಿಲ್ಲಿದವರು ಧನದಾನವನ್ನಾದರೂ ಮಾಡಬೇಕು. ಆದರೆ ಅನೇಕ ಧನವಂತರಿಗೆ ದಾನಮಾಡುವ ಬುದ್ಧಿಯಿರುವುದಿಲ್ಲ. ಔದಾರ್ಯಗುಣ ಕಲಿತರೆ ಬರುವುದಲ್ಲ. ಅದಕ್ಕೆ ಪೂರ್ವದ ಪುಣ್ಯವಿರಬೇಕು. ಅಂತವರಿಗೆ ಅದು ಸಹಜಗುಣವಾಗಿರುತ್ತದೆ.

"ದಾತೃತ್ವಂ ಪ್ರಿಯವಕ್ತೃತ್ವಂ ಧೀರತ್ವಮುಚಿತಜ್ಞತಾ ।
ಅಭ್ಯಾಸೇನ ನ ಲಭ್ಯಂತೇ ಚತ್ವಾರಃ ಸಹಜಾ ಗುಣಾಃ ॥"
"ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।
ವಕ್ತಾ ದಶ ಸಹಸ್ರೇಷು ದಾತಾ ಭವತಿ ವಾ ನ ವಾ ॥"

ಅಂತೆಯೇ 'ಎಲ್ಲಕ್ಕೂ ದಾನಿಯೇ ಲೇಸು' ಎಂದು ಸರ್ವಜ್ಞ ಹೇಳಿದ. ಕಾರಣ ಧನವಿದ್ದವನು ದಾನಿಯಾಗುವುದು ಲೇಸು. ಇಲ್ಲವಾದರೆ ಅವನ ದುಡಿಮೆ ವ್ಯರ್ಥ. ದುಡ್ಡು ವ್ಯರ್ಥ.

"ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ ನಾಯಿಯ

ಹಾಲು ನಾಯಿಯ ಕುನ್ನಿಂಗಲ್ಲದೆ ಪಂಚಾಮೃತಕ್ಕೆ ಸಲ್ಲುವುದೇನಯ್ಯ?" ಎಂದು ಕೇಳುತಿದೆ ಶರಣವಾಣಿ.

"ಧನೇನ ಕಿಂ ಯೋ ನ ದದಾತಿ ಯಾಚಕೇ ?
ಬಲೇನ ಕಿಂ ಯಶ್ಚರಿಪುಂ ನ ಬಾಧತೇ ?
ಶ್ರುತೇನ ಕಿಂ ಯೋ ನ ಚ ಧರ್ಮಮಾಚರೇತ್ ?
ಕಿಮಾತ್ಮನಾ ಯೋ ನ ಜಿತೇಂದ್ರಿಯೋ ಭವೇತ್ ?॥"

ದಾನಮಾಡದ ಧನ, ವೈರಿಯ ನಿವಾರಿಸದ ಬಲ, ಧರ್ಮಾಚರಣವಿಲ್ಲದ ಶ್ರವಣ, ದಮವಿಲ್ಲದ ಜೀವ–ಇವು ಇದ್ದರೇನು, ಇಲ್ಲದಿದ್ದರೇನು?

"ಹಸ್ತಸ್ಯ ಭೂಷಣಂ ದಾನಂ, ಸತ್ಯಂ ಕಂಠಸ್ಯ ಭೂಷಣಂ।
ಶ್ರೋತ್ರಸ್ಯ ಭೂಷಣಂ ಶಾಸ್ತ್ರಂ, ಭೂಷಣೇ ಕಿಂ ಪ್ರಯೋಜನಂ ?"॥

ಕೊಡುಗೆ ಕೈಗೆ ತೊಡಿಗೆ. ದಿಟವು ಕೊರಳಿಗೆ ತೊಡಿಗೆ. ಶಾಸ್ತ್ರ ಶ್ರೋತ್ರಕ್ಕೆ ಚಲುವು. ಇವುಗಳಿಗೆ ಇವಕ್ಕಿಂತ ಬೇರೆ ಭೂಷಣ ಬೇಕಿಲ್ಲ. ತ್ಯಾಗ ಹಸ್ತಕ್ಕೆ ಮಾತ್ರವಲ್ಲ ಆತ್ಮಕ್ಕೂ ಅಲಂಕಾರ, ಆನಂದಕರ. ರಾಗಕ್ಕೆ ಸಮವಾದ ದುಃಖವಿಲ್ಲ; ತ್ಯಾಗಕ್ಕೆ ಸಮವಾದ ಸುಖವಿಲ್ಲ.

"ವೃಥಾ ವೃಷ್ಟಿಃ ಸಮುದ್ರೇಷು ವೃಥಾ ತೃಪ್ತಸ್ಯ ಭೋಜನಂ ।
ವೃಥಾ ದಾನಂ ಸಮರ್ಥಸ್ಯ ವೃಥಾ ದೀಪೋ ದಿವಾ ಪಿ ಚ ॥"

ದಾನ ಲೇಸು. ಆದರೆ ದರಿದ್ರರಿಗೆ ಮಾಡುವ ದಾನ ಲೇಸು. ಧನಿಕರಿಗೆ ದಾನ ಮಾಡಿದರೆ ಪ್ರಯೋಜನವಿಲ್ಲ. ಉಂಡವರಿಗೆ ಊಟಕ್ಕಿಟ್ಟರೆ, ಮುನ್ನೀರ ಮೇಲೆ ಮಳೆಗರೆದರೆ. ಹಗಲಲ್ಲಿ ಹಣತೆ ಹಚ್ಚಿದರೆ ಯಾವ ಲೇಸು ? ಯಾವ ಸೊಗಸು ?

"ಪಾತ್ರಾಽಪಾತ್ರ ವಿವೇಕೋಽಸ್ತಿ ಧೇನು ಪನ್ನಗಯೋರಿವ ।
ತೃಣಾತ್ಸಂಜಾಯತೇ ಕ್ಷೀರಂ, ಕ್ಷೀರಾತ್ಸಂಜಾಯತೇ ವಿಷಂ॥"

ದರಿದ್ರರಲ್ಲಿಯೂ ಪಾತ್ರಅಪಾತ್ರಗಳನ್ನು ನೋಡಿ ಮಾಡಬೇಕು. ಸಾತ್ವಿಕರಿಗೆ ಮಾಡುವ ದಾನ ಲೇಸು. ಹಸುವಿಗೆ ಹುಲ್ಲುಹಾಕಿದಂತೆ ಕಿಂಚಿದ್ದಾನವಾದರೂ ಮಹತ್ಫಲವನ್ನು ಕೊಡುತ್ತದೆ. ಸಾತ್ವಿಕರಲ್ಲದವರಿಗೆ ಮಾಡಿದ ದಾನ ಹಾವಿಗೆ ಹಾಲೆರೆದಂತೆ ಶ್ರೇಷ್ಠದಾನ ಮಾಡಿದರೂ ಕನಿಷ್ಠಫಲ. ಏಕೆ, ನಂಜಿನಂತಹ ಕೆಟ್ಟ ಫಲ ಸಿಕ್ಕುತ್ತದೆ. ಸುಪಾತ್ರ-ಕುಪಾತ್ರದಾನಗಳ ಫಲಾಫಲಗಳನ್ನು ಈ ಕೆಳಗಿನ ಶ್ಲೋಕಗಳೆರಡು ಸ್ಪಷ್ಟಗೊಳಿಸಿವೆ :

"ಸುಪಾತ್ರದಾನಾಚ್ಚ ಭವೇವ್ದನಾಢ್ಯೋ, ಧನಪ್ರಭಾವೇಣ ಕರೋತಿಪುಣ್ಯಂ।
ಪುಣ್ಯಪ್ರಭಾವಾತ್ಸುರಲೋಕವಾಸೀ ಪುನರ್ಧನಾಢ್ಯಃ ಪುನರೇವಭೋಗೀ ॥"
"ಕುಪಾತ್ರದಾನಾಚ್ಚ ಭವೇದ್ದರಿದ್ರೋ, ದಾರಿದ್ರ್ಯದೋಷೇಣ ಕರೋತೀ ಪಾಪಂ।
ಪಾಪಪ್ರಭಾವಾತ್ ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ॥"

ಕುಪಾತ್ರದಾನಕ್ಕಾಗುವ ಈ ದುಷ್ಫಲವೇ: ದಾನಮಾಡಿದವನಗೂ ಆಗುವದೆಂದು ಅಭಿಜ್ಞರು ಹೇಳುವರು. ಭಾಗ್ಯವಂತರು ಭಾಗ್ಯವಿರುವಾಗ ಸತ್ಪಾತ್ರತ್ಯಾಗ ಬುದ್ಧಿ ಬರುವುದಿಲ್ಲ. ಅದೇ ಭಾಗ್ಯ ಹೋಗಿ ಬಡವರಾದಾಗ ತ್ಯಾಗಾಸಕ್ತಿಯನ್ನು ತೋರುತ್ತಾರೆ. ಏನು ಪ್ರಯೋಜನ?

"ಶೀತೇsತೀತೇ ವಸನಮಶನಂ, ವಾಸರಾಂತೇ ನಿಶಾಂತೇ
ಕ್ರಿಡಾರಂಭಂ । ಕುವಲಯದೃಶಾ ಯೌವನಾಂತೇ ವಿವಾಹಂ
ಸೇತೋರ್ಬಂಧಂ ಪಯಸಿ ಚಲಿತೇ, ವಾರ್ಧಿಕೇ ತೀರ್ಥಯಾತ್ರಾಂ,
ವಿತ್ತೇ ನಷ್ಟೇ ವಿತರಣಮಹೋ ಕರ್ತುಮಿಚ್ಛಂತಿ ಮೂಢಾಃ।"

ಚಳಿ ಕಳೆದ ಬಳಿಕ ಬಟ್ಟೆಯುಡುವುದು, ಮುಚ್ಚಂಜೆ ಮುಂಜಾವುಗಳಲ್ಲಿ ಕ್ರೀಡಿಸುವುದು, ಮುಪ್ಪಾದಗಿದ ಬಳಿಕ ಒಪ್ಪುಳ್ಳ ಕನ್ನೆಯನ್ನು ಕೈಹಿಡಿಯುವುದು, ನೀರು ಹರಿದು ಹೋದ ಬಳಿಕ ಏರಿಯ ಕಟ್ಟುವುದು, ವಯಸ್ಸಾದ ಮೇಲೆ ತೀರ್ಥಯಾತ್ರೆಯ ಮಾಡುವುದು, ಬಡತನ ಬಂದ ಬಳಿಕ ದಾನ ಮಾಡಬಯಸುವುದು ಮೂರ್ಖರ ಕೆಲಸ,

"ಹಾವು ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಬಹುದು. ಸಿರಿಗರ ಹೊಡೆದವರ ನುಡಿಸಲಾಗದು ಬಡತನವೆಂಬ ಮಂತ್ರವಾದಿಯು ಹೋಗಲು ಒಡನೆ ನುಡಿವರಯ್ಯ ಕೂಡಲ ಸಂಗಮದೇವ."

ದುರ್ಭಿಕ್ಷೇ ಚಾನ್ನದಾತಾರಂ, ಸುಭಿಕ್ಷೇ ಧನದಾಯಿನಂ,
ಹೇಮಂತೇ ವಸ್ತ್ರದಾತಾರಂ, ಗ್ರೀಷ್ಮೇsಂಬುವ್ಯಜನಪ್ರದಂ,।
ಆತಪೇ ಛತ್ರದಾತಾರಂ–ಪಾದುಕಾಪ್ರದಮೇವ ಚ,
ಆತ್ಮತ್ರಾಣವಿಧಾತಾರಂ ದಾನಶೌಂಡಂ ಪ್ರಚಕ್ಷತೇ॥"

ಕಾಲವನ್ನು ಅನುಸರಿಸಿ ಮಾಡುವ ದಾನವೇ ಔಚಿತ್ಯಪೂರ್ಣವಾದುದು.

ದಾನದಲ್ಲಿಯೂ ಅಹಿಂಸಾದಿ ಕ್ಷಮಾಂತಗುಣಗಳಿರುತ್ತವೆ. ಹಿಂಸಿಸಿ ದಾನ ಮಾಡಿದರೆ, ಸುಳ್ಳು ಹೇಳಿ ಕಳವು ಮಾಡಿ ದಾನ ಮಾಡಿದರೆ ಸುಖವಿಲ್ಲ. ಅಂತೆಯೆ ಸಕಾಮದಾನವೂ ಸಮ್ಮತವಲ್ಲ. ದಯೆ ಕ್ಷಮೆಗಳಿಲ್ಲದೆ ದಾನ ಮಾಡಬಾರದು. ಶ್ರದ್ಧೆ ನಿಷ್ಠೆಗಳಿಲ್ಲದೆ ದಾನ ಮಾಡಬಾರದು. "ಶ್ರದ್ಧಯಾ ದೇಯಂ, ಅಶ್ರದ್ಧಯ್ಯಾದೇಯಂ, ಶ್ರಿಯಾ ದೇಯಂ, ಹ್ರಿಯಾ ದೇಯಂ, ಭಿಯಾ ದೇಯಂ, ಸಂವಿದಾ ದೇಯಂ।" ಎಂದು ತೈತ್ತಿರೀಯ ಶ್ರುತಿ ಸಾರಿದೆ. 'ಹಿತ ವಚನವೆ ತೊಡವೆನಿಪ ದಾನವನು' ಎಂದು ನಿಜಗುಣರ ನಿರೂಪಣೆಯಿದೆ.

ಪೂಜೆ: ಇದು ಎಂಟನೆಯದು. ಇದೊಂದು ಕಳಾಪೂರ್ಣಕ್ರಿಯೆ. ಇದು ಬಹಿರಂಗಪೂಜೆ, ಅಂತರಂಗಪೂಜೆ ಎಂದು ಎರಡು ಬಗೆಯಾಗಿದೆ. ಇಲ್ಲಿ ಹೇಳಿದುದು ಬಹಿರಂಗಪೂಜೆ. ಏಕೆಂದರೆ ಮುಂದೆ ಜಪ–ಧ್ಯಾನಗಳನ್ನು ಹೇಳಿರುವುದರಿಂದ ಇದು ಬಹಿರಂಗ ಪೂಜೆಯೆಂದೆ ಭಾವಿಸಲವಕಾಶವಿದೆ. ತ್ರಿಕರಣಕ್ರಿಯೆಗಳೂ ಉಕ್ತವಾಗಿವೆ. ಪೂಜಿಸಿ ತನು ಶುದ್ಧ. ಜಪಿಸಿ ವಾಣಿ ಶುದ್ಧ. ಧ್ಯಾನಿಸಿ ಮನ ಶುದ್ಧ. ಇದರಿಂದಾಗಿ ಇಲ್ಲಿನ ಈ ಪೂಜೆ ಕಾಯಿಕವೆಂದೇ ಹೇಳಬೇಕು. ಇದರಿಂದ ಕಾಯದ ಕಾರ್ಮಿಕಮಲ ನಿವೃತ್ತಿಯಾಗುತ್ತದೆ. ಈ ಕಾಯಿಕ ಪೂಜೆಯಲ್ಲಿ ವಾಙ್ಮನಗಳೂ ಇರುತ್ತವೆ. ಆದರೆ ಕಾಯವೇ ಪ್ರಧಾನವಾಗಿರುತ್ತದೆ.

ಪೂಜೆಯೆಂದರೆ ಆದರ, ಸತ್ಕಾರ. ಸಾಕಾರ (ಸಕಲ)ವಾದ ಇಷ್ಟಲಿಂಗವನ್ನು ಕಾಯದಿಂದ ಪೂಜಿಸಲು ಸಾಧ್ಯ. ಇದರಿಂದಾಗಿ ಅರ್ಚಿಸಿ ಆರಾಧಿಸಿ

ಕೃತಾರ್ಥವಾಗುವ ಪುಣ್ಯವಿಶೇಷ ಕಾಯಕೊಕ್ಕದಗಿದೆ. ಇದೊಂದು ಇಷ್ಟಲಿಂಗ ಧಾರಕನ ಭಾಗ್ಯವಿಶೇಷವೆಂದೇ ಹೇಳಬೇಕು. "ಆವ ಜನ್ಮದ ಪುಣ್ಯವೋ........ .......ಈ ಇಷ್ಟಲಿಂಗವು ಕೇವಲ ಸ್ಥೂಲವಾದುದಲ್ಲ. ಸೂಕ್ಷ್ಮವೂ ಅಹುದು; ಸೂಕ್ಷ್ಮತಮವೂ ಅಹುದು.

"ಪರತರಶಿವಲಿಂಗವೆಳಸಿ ನಿನಗಾಗಿ। ಕರಕಂಜದೊಳು ಕಾಣಿಸಿತು ಯೋಗಿ ಯಜಿಸೋ !" ಎಂದು ನಿಜಗುಣರು ನಿರೂಪಿಸಿದ್ದಾರೆ.

ಪೂಜೆ ಇದೊಂದು ಯೋಗ. ಬರೀಯೋಗವಲ್ಲ, ಶಿವಯೋಗ. ತ್ರಿಕರಣ ಶುದ್ಧಿಯಾಗಬೇಕಾದರೆ ಈ ಇಷ್ಟಲಿಂಗಪೂಜೆಯಿಂದ! ಮತ್ತು ದಶವಿಧಧರ್ಮ ಸಂಗ್ರಹವೂ ಈ ಪೂಜೆಯಲ್ಲಿ ಅಡಕವಾಗುತ್ತದೆ. ಈ ಲೋಕದಲ್ಲಿ ಜನ್ಮ ಪಾವನವಾಗುವ ಸೊಗಸವೂ ಸುಲಭವೂ ಆದ ಕ್ರಿಯೆಯೆಂದರೆ ಪೂಜೆಯೆಂದೇ ಹೇಳಬೇಕು. ಶಿವಾರ್ಚನೆ ತನ್ನನ್ನು ಶಿವತ್ವಕ್ಕೇರಿಸುತ್ತದೆ. "ಸೌಖ್ಯಾರ್ಥಿತಾನಾಮಿಹ ಜೀವಲೋಕೇ ಚತ್ವಾರಿ ಚಿಹ್ನಾನಿ ವಸಂತಿ ದೇಹೇ ! ದಾನಪ್ರಸಂಗೋ, ಮಧುರಾ ಚ ವಾಣೀ, ಶಿವಾರ್ಚನಂ, ಶ್ರೀಗುರುತರ್ಪಣಂ ಚ॥" ಸಹಜದಾನ, ಸತ್ಯವಾಣಿ, ಶಿವಾರ್ಚನ, ಶ್ರೀಗುರುತೃಪ್ತಿ ಈ ನಾಲ್ಕು ಈ ಲೋಕದವರಿಗೆ ಸತ್ಯಶಿವ ಸುಖಕ್ಕೆ ಹೋಗುವ ದಾರಿಗಳೆಂದು ಹೇಳಲಾಗಿದೆ.

ಪೂಜೆ ಉತ್ತಮವಾದ ಕ್ರಿಯೆ. ಆದರೆ ಆ ಪೂಜೆ ಪ್ರಜ್ಞೆಯಿಂದ ಕೂಡಿದ್ದರೆ ಉತ್ತಮ. 'ಅರಿಯದೆ ಅರ್ಚನೆ ಘಟಿಸದು' ಪೂಜೆ ಮಾಡುವ ಪುಣ್ಯವಿದ್ದರೂ ಪ್ರಜ್ಞೆಯೊಂದಿಲ್ಲದಿದ್ದರೆ ಪ್ರಯೋಜನವಿಲ್ಲ, ಲಿಂಗದ ನೆಲೆಕಲೆಗಳನ್ನು ಅರಿತು ಅರ್ಚಿಸಬೇಕು, ಇಲ್ಲವಾದರೆ ಆರಾಧಿಸಿ ಹುರುಳಿಲ್ಲ.

"ಅರ್ಥರೇಖೆ ಇದ್ದಲ್ಲಿ ಫಲವೇನು, ಆಯುಷ್ಯರೇಖೆ ಇಲ್ಲದನ್ನಕ್ಕ ?
ಹಂದೆಯ ಕೈಯಲ್ಲಿ ಚಂದ್ರಾಯುಧವಿರ್ದು ಫಲವೇನು ?
ಅಂಧಕನ ಕೈಯಲ್ಲಿ ದರ್ಪಣವಿರ್ದು ಫಲವೇನು ?
ಮರ್ಕಟನ ಕೈಯಲ್ಲಿ ಮಾಣಿಕವಿರ್ದು ಫಲವೇನು ?
ಕೂಡಲ ಸಂಗಮದೇವನನರಿಯದವರ ಕೈಯಲ್ಲಿ
ಲಿಂಗವಿರ್ದು ಫಲವೇನು, ಶಿವಪಥವನರಿಯದನ್ನಕ್ಕ ?"

ಅರ್ಚನೆಗೆ ಅರಿವು ಅದೆಷ್ಟು ಅಗತ್ಯವೋ ಅಷ್ಟೇ ಆದರ (ಒಲ) ವೂ ಅಗತ್ಯ. ಆದರವಿಲ್ಲದ ಅರ್ಚನೆ ತುಪ್ಪಿಲ್ಲದ ಊಟ, ಒಪ್ಪಿಲ್ಲದ ಮಾಟ.

"ಒಲವಿಲ್ಲದ ಪೂಜೆ ! ನೇಹವಿಲ್ಲದ ಮಾಟ ! ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ ! ಚಿತ್ರದ ಕಬ್ಬು ಕಾಣಿರಣ್ಣ ! ಅಪ್ಪಿದರೆ ಸುಖವಿಲ್ಲ ! ಮೆಲಿದರೆ ರುಚಿಯಿಲ್ಲ ! ಕೂ. ಸಂ. ದೇವಾ, ನಿಜವಿಲ್ಲದವನ ಭಕ್ತಿ ! "

ಮನಮುಟ್ಟಿ ಮಾಡುವ ಪೂಜೆಯೇ ಪೂಜೆ, ಆದರಲ್ಲಿ ಅರ್ಚಕನು ತನ್ನನ್ನು ತಾನೇ ಮರೆತು ಮಹಾನಂದದಲ್ಲಿ ಮುಳುಗಿರುತ್ತಾನೆ. ಲಿಂಗವನಪ್ಪಿ ಲಿಂಗವೇ ಆಗಿರುತ್ತಾನೆ. ಲಿಂಗನಾಮಾಮೃತದ ಸವಿಯಲ್ಲಿ ಸ್ವೈರಗಾಗಿರುತ್ತಾನೆ. ಈ ಗಾಢವಾದ ಪೂಜೆಯ ಪ್ರಶಾಂತ ಪ್ರಭಾವವು ವ್ಯಷ್ಟಿಗತವಾಗಿದ್ದರೂ ಸಮಷ್ಟಿಗೂ ಪ್ರಸರಿಸದಿರುವುದಿಲ್ಲ. ಸೂರ್ಯನ ಬೆಳಕು ಸೂರ್ಯನಿಗೊಬ್ಬನಿಗೆ ಇರುವುದಿಲ್ಲ ; ಸೃಷ್ಟಿಗೆಲ್ಲ ಹಬ್ಬಿರುತ್ತದೆ, ಅಂತೆಯೇ ಇಷ್ಟಲಿಂಗದ ಪೂಜೆಯ ಪ್ರಭಾವ ವ್ಯಷ್ಟಿಗೆ ಮಾತ್ರ ಸೀಮಿತವಾದುದಲ್ಲ. ಆದರಲ್ಲಿಯೂ ಪರಕಾಯನಾದ ಮಾಹೇಶ್ವರಾಂಗನ ಪೂಜೆಯ ಪ್ರಭಾವ ಪರಮನಷ್ಟೇ ವಿಸ್ತಾರವಾದುದು. ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವಾದ ಮತ್ತು ಬ್ರಹ್ಮಾಂಡವನ್ನು ತನ್ನ ಚಿತ್‌ಗರ್ಭದಲ್ಲಿ ಇರಿಸಿಕೊಂಡ ಲಿಂಗಪೂಜೆ ವೈಯಕ್ತಿಕವೆಂದು ಹೇಳುವುದು ಸಂಕುಚಿತ ಸ್ವಭಾವವಾದೀತೆಂದು ಹೇಳದೆ ವಿಧಿಯಿಲ್ಲ. ಇಷ್ಟಲಿಂಗ ತನ್ನ ಸ್ವರೂಪವಲ್ಲದೆ ಸಮಷ್ಟಿ ಸ್ವರೂಪವೂ ಆಗಿದೆ. ಈ ವಿಶಾಲ ಭಾವದಿಂದ ಮಾಡುವ ಲಿಂಗಪೂಜೆಯಲ್ಲಿ ವಿಶ್ವ ಕಲ್ಯಾಣವೂ ಇದೆ; ಮಾನವ ಸೇವೆಯೂ ಇದೆ. ನಿತ್ಯವೂ ಪರಿಪೂರ್ಣವೂ ಅಖಂಡವೂ ಆದ ಲಿಂಗಪೂಜೆಯಲ್ಲಿ ಅನಿತ್ಯತೆ ಅಪರಿಪೂರ್ಣತೆ ಖಂಡತೆಗಳನ್ನು ಅದೆಂದಿಗೂ ಭಾವಿಸಲಾಗದು. ತನಗೂ ಜಗತ್ತಿಗೂ ಶಿವಲಿಂಗಕ್ಕೂ ಇರುವ ಸಂಬಂಧ ಹಾಸುಹೊಕ್ಕಾಗಿದೆ; ಅವಿಭಾಜ್ಯವೂ ಆಗಿದೆ.

"ಜಗವ ಸುತ್ತಿಪ್ಪುದು ನಿನ್ನ ಮಾಯೆ. ನಿನ್ನ ಸುತಿಪ್ಪುದು ಎನ್ನ ಮನ. ನೀನು ಜಗಕ್ಕೆ ಬಲ್ಲಿದ; ಆನು ನಿನಗೆ ಬಲ್ಲಿದ ಕಂಡಯ್ಯಾ ! ಕರಿಯು ಕನ್ನಡಿಯೊಳಡಗಿದಂತಯ್ಯಾ, ಎನ್ನೊಳಗೆ ನೀನಡಗಿದೆ ಕೂ, ಸಂ, ದೇವ."

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ. ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ; ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ! ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ."

ಲಿಂಗ ಬೇರೆ, ಅಂಗ ಬೇರೆ, ಅಂಗಕ್ಕಾಗಿ ಲಿಂಗವಿದೆ, ಲಿಂಗಕ್ಕೆ ನಾ ಮಾಡಿದೆ ಎಂಬ ಭಾವ ಪೂಜಾಂತ್ಯದಲ್ಲಿ ಇರುವುದಿಲ್ಲ. "ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ! ಮಾಡಿದೆನೆನ್ನದಿರಾ ಲಿಂಗಕ್ಕೆ!......" ನನಗಾಗಿ ಲಿಂಗಪೂಜೆ, ಲಿಂಗಕ್ಕಾಗಿ ನಾ ಮಾಡಿದೆ ಎಂದು ಭಾವಿಸಬಾರದು. ಎಲ್ಲಿಯೂ ಆತನೇ ಆದ ಎಂದೆಂದಿಗೂ ತೃಪ್ತನಾದ ಆ ಲಿಂಗ ದೇವನಿಗೆ ತಾ ಮಾಡುವುದೇನು? ತಾ ಮಾಡಲು ತನ್ನದೇನಿದೆ? ತಾನೆಂಬುವ ನಾರು? ಇದರಿಂದಾಗಿ ಲಿಂಗಪೂಜೆ ಕೇವಲ ವ್ಯಕ್ತಿನಿಷ್ಠವಲ್ಲ. ವಿಶ್ವನಿಷ್ಠವೂ ಅಹುದು. ವಿಶ್ವಘಟಕ ತಾನು

ಮಾನವ ಸೇವೆಗೆ ಶಕ್ತಿಯನ್ನು ಸಂಗಳಿಸಿಕೊಳ್ಳುವುದೇ ಲಿಂಗಪೂಜೆಯ ಮರ್ಮ, ಕ್ರಿಯಾ ಜ್ಞಾನ ಶಕ್ತಿಗಳೆರಡೂ ಲಿಂಗಪೂಜೆಯಲ್ಲಿ ಲಭಿಸುತ್ತವೆ. ಆದ್ದರಿಂದ ಲಿಂಗಪೂಜೆಯನ್ನು ಶಾರೀರಕ ಶಕ್ತಿ ಮಾನಸಿಕ ಭಕ್ತಿ ಇರುವಾಗಲೇ ಮಾಡಬೇಕು. ಶಕ್ತಿ ಕುಂದಿದ ಬಳಿಕ ಮಾಡುವ ಪೂಜೆ ಶಿವನಿಗೆ ಸಲ್ಲದು. ಮಾಡುವ ಶಕ್ತಿಯೂ ಇರದು,

"ಯಾವನ್ನಾಯಾತಿ ಮರಣಂ ಯಾವಾನ್ನಾಕ್ರಮತೇ ಜರಾ|
ಯಾವನ್ನೇಂದ್ರಿಯ ವೈಕಲ್ಯಂ ತಾವತ್ಪೂಜಯ ಶಂಕರಂ ||"

"ನೆರೆಕೆನ್ನೆಗೆ, ತೆರೆಗಲ್ಲಕೆ, ಶರೀರಗೂಡುವೋಗದ ಮುನ್ನ;
ಹಲ್ಲು ಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ:
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ;
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ
ಪೂಜಿಸು ಕೂಡಲ ಸಂಗಮದೇವನ!"

ಲಿಂಗಪೂಜಕನಲ್ಲಿ ಹಿಂದೆ ಹೇಳಿದ ಅಹಿಂಸಾದಿದಾನಾಂತ್ಯವಾದ ಏಳು ಗುಣಗಳೂ ಇರುತ್ತವೆ. ಇವಿಲ್ಲದೆ ಪೂಜೆ ಘಟಿಸದು, ಕೊಲೆ ಕಳವುಗಳನ್ನು ಮಾಡುವವನ ಕೈಯ ಪೂಜೆ ಶಿವನಿಗೆ ಸಲ್ಲದು. ಸುಳ್ಳು ಹೇಳುವವನ ಜಪ ಸಿದ್ಧಿಸದು, ಸಕಾಮಪೂಜೆ ಸಲ್ಲದು. ಅಂತೆಯೆ ಜೀವದಯೆ-ಕ್ಷಮೆಗಳೂ ಪೂಜಕನಿಗೆ ಅತ್ಯವಶ್ಯಕ. ತನ್ನ ತ್ರಿಗುಣಗಳನ್ನೇ ಶಿವನಿಗೆ ಅರ್ಪಿಸುವ ರೂಪ ದಾನಗುಣವಿದ್ದೇ ಇರುತ್ತದೆ. ಲಿಂಗಪೂಜೆ ಇದೊಂದು ಕಾಯಿಕ ತಪಸ್ಸು. ಸಾತ್ವಿಕ ತಪಸ್ಸು. ತಾತ್ತ್ವಿಕ ತಪಸ್ಸು.

**ಜಪ:** ಧರ್ಮಸಂಗ್ರಹದಲ್ಲಿ ಇದು ಒಂಬತ್ತನೆಯದಾಗಿ ಪರಿಗಣಿತವಾಗಿದೆ. ಪೂಜೆಯನಂತರ ನಿರ್ದಿಷ್ಟವಾಗಿದೆ. ಜಪ ಪೂಜೆಯೊಳಗಿನ ಒಂದಂಶ, ಪೂಜೆಯಲ್ಲಿ ಕಾಯಕ್ರಿಯೆ ಪ್ರಧಾನವಾಗಿದ್ದರೆ ಜಪದಲ್ಲಿ ವಾಕ್ಕ್ರಿಯೆ ಪ್ರಧಾನವಾಗಿರುತ್ತದೆ. ತನು-ಮನಗಳು ಸಹಾಯಕವಾಗಿರುತ್ತವೆ,

ಜಪವೂ ಒಂದು ಪೂಜೆ; ಒಂದು ವಿಶಿಷ್ಟಯಜ್ಞ. "ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂಬುದು ಭಗವದ್ವಾಣಿ, ಇದರಿಂದ ಜಪಕ್ಕಿರುವ ಹಿರಿಮೆಯ ಅರಿಕೆಯಾಗುತ್ತದೆ.

ಜಪ ವಾಚಕ ಉಪಾಂಶು ಮಾನಸಿಕ ಎಂದು ಮೂರುಬಗೆ. ಮಂತ್ರಪಠಣಕ್ಕೆ ಜಪವೆಂದು ಹೆಸರು. ಇಲ್ಲಿ ಪಠಣವೆಂದರೆ ಒಮ್ಮೆ ಹೇಳಿ ಬಿಡುವುದಲ್ಲ; ಮತ್ತೆ ಮತ್ತೆ ಹೇಳಿಕೊಳ್ಳುವುದು ಇದರಲ್ಲಿ ವಾಕ್ಕ್ರಿಯೆ ಮುಖ್ಯವಾಗಿದ್ದು ಇದರಿಂದ ವಾಕ್‌ಶುದ್ಧಿಯೂ ಸಿದ್ಧಿಯೂ ಸಂಭವಿಸುತ್ತವ ; ಮಾತು ಮಂತ್ರವಾಗಿ ಪರಿಣಮಿಸುತ್ತದೆ ಇದು ಮಂತ್ರಜಪವಾದ್ದರಿಂದ ಮನನಕ್ಕೆ ವಿಷಯವಾಗಿರುವುದರಿಂದ ಇದು ಮಾನಸಿಕವೂ ಆಗಿದೆ. ಮಂತ್ರಜಪಸ್ಪಂದನದಿಂದ ಅಂತರಂಗವೆಲ್ಲ ಮಂತ್ರಮಯವಾಗುತ್ತದೆ ; ಮಂತ್ರದ ಊರ್ಜಿತ ಪ್ರಭಾವ ಪ್ರಸರಿಸುತ್ತದೆ, ಮನದೊಳಗಿರುವ ವಿಷಯವಾಸನೆ ಅಳಿದು ಮನ ಶುದ್ಧವಾಗುತ್ತದೆ ಮಂತ್ರಾರ್ಥಾಭ್ಯಾಸದಿಂದುಂಟಾಗುವ ಜ್ಞಾನ ಅದು ಮಹಾಜ್ಞಾನ. ಅದರಲ್ಲಿ ಸರ್ವವೂ ಇರುತ್ತದೆ. ಆ ಸರ್ವಜ್ಞರೂಪವೇ ಮಂತ್ರ. ಮಂತ್ರಜಪಸಿದ್ಧಿಯಿಂದ ಜ್ಞಾನ-ವಿಜ್ಞಾನಸ್ವರೂಪ ಸಾಕ್ಷಾತ್ಕಾರವಾಗುತ್ತದೆ. 'ತಜ್ಜಪಸ್ತದರ್ಥಭಾವನಾ' ಮಂತ್ರಜಪದಿಂದ ತದಾಕಾರ ವೃತ್ತಿಯುಂಟಾಗುತ್ತದೆ. ಆಗ ಅನ್ಯವಿಷಯ ಚಿಂತನಕ್ಕೆ

ಅವಕಾಶವಿರುವುದಿಲ್ಲ. 'ಜಪತೋ ನಾಸ್ತಿ ಪಾತಕಂ' ಎಂಬಂತೆ ಪಾಪಭಾವನೆಗೆ ಇಂಬಿರುವುದಿಲ್ಲ. ಶಿವಕ್ಕೆ ಬಾಗಿದ ಶಿವದಲ್ಲಿಯೆ ಬೆರೆದೇಕವಾದ ತ್ರಿಕರಣಗಳು ಹೊರಕ್ಕೆ ತುಳುಕವು ಅಂತಾದಾಗ ಜಾಪಕನ ಮಾತು ಮನ ಮೈಯೆಲ್ಲ ಮಂತ್ರ ಮಯವಾಗಿ ಆತನು ಮಾತಾಡಿದ್ದೆಲ್ಲ ಮಂತ್ರವಾಗುತ್ತದೆ :

"ಆಸನ್ನ ಕಾರ್ಯಸ್ಯ ಸಮುದ್ಧವಾರ್ಥಮಾಗ ವಿ-ನೋಽರ್ಥಸ್ಯ ಚ ಸಂಗ್ರ ಹಾರ್ಥಂ ।
ಅನರ್ಥಕಾರ್ಯಪ್ರತಿಘಾತನಾರ್ಥಂ ಯನ್ಮಂತ್ರ್ಯತೇಽಸೌ ಪರಮೋ ಹಿ ಮಂತ್ರಃ ॥"

ಹಿಂದಾದ ಕೆಲಸದ ಹೆಚ್ಚುಗೆಗಾಗಿ, ಮುಂದಾಗಬೇಕಾದ ಅರ್ಥಯುಕ್ತ ಸತ್ಕಾರ್ಯಸಂಗ್ರಹಕ್ಕಾಗಿ, ಮತ್ತು ಅನರ್ಥಕಾರ್ಯಗಳ ನಿವಾರಣಕ್ಕಾಗಿ ಮಾಡಿದ ಯೋಚನೆ-ಯೋಚನೆಗಳೆಲ್ಲ ಮಹಾಮಂತ್ರವಾಗಿ ಪರಿಣಮಿಸುತ್ತವೆ ಇಂತಹ ಶ್ರೇಷ್ಠಶಕ್ತಿ ಜಪಸಿದ್ಧಿಯಿಂದುಂಟಾಗುತ್ತದೆ.

ಜಪ ಇದೊಂದು ವಾಚಿಕ ತಪಸ್ಸು. ಪ್ರಣವಪಂಚಾಕ್ಷರಿಯ ಜಪದಿಂದ ತಾಪಪಾಪಗಳೆಲ್ಲ ಪರಿಹಾರವಾಗುತ್ತವೆ. ಭವದ ಬಾಧೆ ಬೆಂದುಹೋಗುತ್ತದೆ. ವಾಚಕದೋಷಗಳೆಲ್ಲವೂ ದೂರಾಗುತ್ತವೆ. ಸರ್ವವಿದ್ಯೆಗಳು ಸಮನಿಸುತ್ತವೆ.

ಜಪಕ್ಕೆ ಜಿಹ್ವೆಯೇ ಮುಖ್ಯ. ಅದರಲ್ಲಿಯೂ ವಾಚಿಕಜಪಕ್ಕೆ ಮತ್ತೂ ಮುಖ್ಯ. ಜಿಹ್ವೆ ಕೇವಲ ಭೂತಾಂಗಮಾತ್ರವಲ್ಲ; ಭೂಮಾಂಗವೂ ಆಗಿದೆ. "ಅಖಂಡ ಮಹಾಜ್ಯೋತಿ ಪ್ರಣವದ ದಂಡಸ್ವರೂಪವಾಗಿಹ ಪಿಂಡಬ್ರಹ್ಮದಲ್ಲಿ ವಿಷ್ಣು ಉತ್ಪತ್ಯವಾದನು. ಅಪ್ಪು ಉತ್ಪತ್ಯವಾಯಿತ್ತು. ರಸ ಉತ್ಪತ್ಯವಾಯಿತ್ತು, ಬುದ್ಧಿ ಉತ್ಪತ್ಯವಾಯಿತ್ತು, ಜಿಹ್ವೆ ಉತ್ಪತ್ಯವಾಯಿತ್ತು, ಗುಹ್ಯ ಉತ್ಪತ್ಯವಾಯಿತ್ತು, ಈ ಆರು ತತ್ತ್ವಂಗಳು ಪಿಂಡಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ." ಜಿಹ್ವೆಯ ಮೂಲವು ಜ್ಯೋತಿರ್ಮಯ ಪ್ರಣವದ ದಂಡಾಕೃತಿ. ಆ ದಂಡಾಕೃತಿಯ ಸ್ವರೂಪ ಪಿಂಡಬ್ರಹ್ಮ. ಆ ಪಿಂಡಬ್ರಹ್ಮಜನ್ಯ ಜಿಹ್ವೆ. ಇಂತಹ ಜಿಹ್ವೆಯಲ್ಲಿ ಇದರ ಮೂಲವಸ್ತುವಾದ ಮಂತ್ರಜಪ ಸೂಕ್ತ; ಅತನೇ ಮುಕ್ತ,

ಧ್ಯಾನ : ಇದು ಹತ್ತನೆಯದು. ಹಿಂದಿನ ಒಂಬತ್ತು ಗುಣಗಳಮೇಲೆ ಅರಳುವ ಹೂವಿದು. ಇದು ಮಾನಸಿಕ ತಪಸ್ಸು ; ವಿಷಯ ಚಿಂತನೆಯನ್ನು ಕಳೆವ ಅಂತಃಕ್ರಿಯೆ.

ಮನಸ್ಸಿನ ಸಂಕಲ್ಪಗಳನ್ನು ಕಳೆಯದೆ ಧ್ಯಾನವುಂಟಾಗುವುದಿಲ್ಲ. ಮನಸ್ಸಿನ ಏಕಾಗ್ರತೆ ಧ್ಯಾನಕ್ಕೆ ಮೂಲ ಆತ್ಮೋದ್ಧಾರಕ್ಕೆ ಅಂತರಾತ್ಮನ ನೆನಹು ಅತ್ಯುತ್ತಮ ಸಂಜೀವಿನಿ. ಧ್ಯಾನವಿಲ್ಲದವನಿಗೆ ದೈವೀಭಾವವಿರುವುದಿಲ್ಲ. ದೈವೀಭಾವವಿಲ್ಲದವನಿಗೆ ಜೀವನ ಸ್ವಾಧೀನವಿರುವುದಿಲ್ಲ; ಜೀವನಕ್ಕೆ ಮೂಲವಾದ ಮನಸ್ಸೂ ಸ್ವಾಧೀನವಿರುವುದಿಲ್ಲ.

ಆತ್ಮನನ್ನು ಪರಮಾತ್ಮನೊಂದಿಗೆ ಸೇರಿಸುವ ಸೂತ್ರವೇ ಧ್ಯಾನ. ಪರಮ ಶಾಂತಿಗೆ ಕರೆದೊಯ್ಯುವ ಸಾಧನ ಧ್ಯಾನ. ಧ್ಯಾತೃ ಧ್ಯೇಯಗಳ ಸಾಮರಸ್ಯಕ್ಕೆ ಕಾರಣವಾದ ನೆನಹಿನ ಕ್ರಿಯೆಯೇ ಧ್ಯಾನ.

"ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ. ಅಂಬುಜಕೆ ಭಾನುವಿನ ಉದಯದ ಚಿಂತೆ ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ಕೂ.ಸಂ. ದೇವರ ನೆನೆವ ಚಿಂತೆ;"

ಸಮರಸ (ಸಮಾಧಿ) ಸುಖದ ಆಸಕ್ತಿಯುಳ್ಳವರಿಗೆ ಶಿವಧ್ಯಾನವಲ್ಲದೆ ಮತ್ತೊಂದರ ಚಿಂತೆಯಿರುವುದಿಲ್ಲ; ಇರಲು ಸಾಧ್ಯವಿಲ್ಲ.

ಮನವ ಸಂತೈಸುವ ಸದುಪಾಯ ಧ್ಯಾನ. ಮನದ ಹರಿದಾಟವ ನಿಲ್ಲಿಸುವುದು ಧ್ಯಾನ. ಹರಿದಾಟ ನಿಲ್ಲದೆ ಹದುಳತೆಯಿಲ್ಲ. ಹೊರಗಿನ ಹಲವಾರು ಬಯಕೆಗಳಿಗೆ ಬಲಿಯಾದ ಮನ ತನ್ನನ್ನೇ ತಾ ಮರೆತಿರುತ್ತದೆ. ಇದಕ್ಕಿಂತ ಬೇರೆ ಅನ್ಯಾಯವಿಲ್ಲ.

"ಮಾರಿ ಮಸಣಿಯೆಂಬವು ಬೇರಿಲ್ಲ ಕಾಣಿರೋ !
ಮಾರಿಯೆಂಬುದೇನು? ಕಂಗಳು ತಪ್ಪಿನೋಡಿದರೆ ಮಾರಿ,
ನಾಲಗೆ ತಪ್ಪಿ ನುಡಿದರೆ ಮಾರಿ, ಕೂ. ಸಂ. ದೇವರ
ನೆನಹ ಮರೆದರೆ ಮಾರಿ."

ಶಿವನ ನೆನಹ ಮರೆವುದು ಒಂದು ತಪ್ಪು. ಅದಕ್ಕಿಂತ ಬೇರಿಲ್ಲ ನೋವು ಬೇರಿಲ್ಲ ಸಾವು. ಆ ಧ್ಯಾನಶೂನ್ಯತೆಯೆ ಮಾರಿಯಾಗಿ ಕಾಡುತ್ತದೆ; ಕಡೆಗೆ ಕೊಲ್ಲುತ್ತದೆ. ಮೃತ್ಯುಂಜಯನನ್ನು ಮರೆತರೆ ಮೃತ್ಯುದೇವತೆಗೆ ಅಂದರೆ ಮಾರಿಗೆ ಆಹ್ವಾನವಿತ್ತಂತೆ! ಮನಸ್ಸಿಗೆ ಶಿವಧ್ಯಾನವೇ ಸುಧೆ.

"ವಿದ್ಯಾತೀರ್ಥೇ ಜಗತಿ ವಿಬುಧಾಃ ಸಾಧವಃ ಸತ್ಯತೀರ್ಥೇ, ಗಂಗಾತೀರ್ಥೇ ಮಲಿನಮನಸೋ, ಯೋಗಿನೋ ಧ್ಯಾನತೀರ್ಥೇ, ಧಾರಾತೀರ್ಥೇ ಧರಣಿಪತಯೋ, ದಾನತೀರ್ಥೇ ಧನಾಢ್ಯಾಃ ಅಜ್ಞಾತೀರ್ಥೇ ಕುಲಯುವತಯಃ ಪಾತಕಂ ಕ್ಷಾಲಯಂತಿ"

ವಿಬುಧರಿಗೆ ವಿದ್ಯೆ, ಸಾಧುಗಳಿಗೆ ಸತ್ಯ, ತನುಮನ ಶುಭ್ರವಿಲ್ಲದವರಿಗೆ ಗಂಗೆ, ಯೋಗಿಗಳಿಗೆ ಧ್ಯಾನ. ಧನಿಕರಿಗೆ ದಾನ, ಲಲನೆಯರಿಗೆ ಲಜ್ಜೆ—ಇವು ತೀರ್ಥಗಳು. ಇವುಗಳಲ್ಲಿ ಮಿಂದು ತಂತಮ್ಮ ಕೊಳೆಯನ್ನು ಕಳೆದುಕೊಳ್ಳುತ್ತಾರೆ.

ಪೂಜೆ ಸದ್ರೂಪ, ಜಪ ಚಿದ್ರೂಪ; ಧ್ಯಾನ ಆನಂದರೂಪ.

# ಹತ್ತಕ್ಕೆ ಹತ್ತು

ಒಮ್ಮೆ ವರರುಚಿಯು ದಂಡಕಾರಣ್ಯದಲ್ಲಿ ಸಂಚರಿಸುತ್ತಿರುವನು. ಆಗ ಅವನಿಗೆ ಒಬ್ಬ ಬ್ರಹ್ಮರಕ್ಕಸನು ಎದುರಾಗಿ, "ಕಃ ಪಂಥಾಃ. ಕಾ ವಾರ್ತಾ. ಕೋ ಮೋದತೇ, ಕಸ್ಸೇವತೇ?" ಎಂದು ನಾಲ್ಕು ಪ್ರಶ್ನೆಗಳನ್ನು ಕೇಳುವನು. ಆತನ ಆಧರ್ಮದ ಪ್ರಥಮಪ್ರಶ್ನೆಗೆ ವರರುಚಿಯು ಧರ್ಮವನ್ನು ಹೀಗೆ ಹೇಳುವನು:

"ಪ್ರಾಣಾಘಾತಾನ್ನಿವೃತ್ತಿಃ, ಪರಧನಹರಣೇ ಸಂಯಮಃ, ಸತ್ಯವಾಕ್ಯಂ, ಕಾಲೇ ಶಕ್ತ್ಯಾಪ್ರದಾನಂ. ಯುವತಿ ಜನ ಕಥಾಮೂಕಭಾವಃ ಪರೇಷಾಂ। ತೃಷ್ಣಾಸ್ರೋತೋ ವಿಭಂಗೋ, ಗುರುಷು ಚ ವಿನಯಃ, ಸರ್ವಭೂತಾನು ಕಂಪಾ, ಸಾಮಾನ್ಯಂ ಸರ್ವಶಾಸ್ತ್ರೇಷ್ವನುಪಹತವಿಧಿಃ, ಶ್ರೇಯಸಾಮೇಷ ಪಂಥಾಃ ॥"

ಪ್ರಾಣಿಗಳನ್ನು ಕೊಲ್ಲದಿರುವುದು, ಪರರ ಹಣವನ್ನು ಕದಿಯದಿರುವುದು, ದಿಟವನ್ನು ನುಡಿಯುವುದು, ಕಾಲೋಚಿತವಾಗಿ ತನ್ನ ಶಕ್ತಿಗನುಸಾರವಾಗಿ ದಾನ ಮಾಡುವುದು, ಪರಸ್ತ್ರೀಕಥನದಲ್ಲಿ ಮೌನನಾಗಿರುವುದು, ತೃಷ್ಣೆಯ ತೊರೆಯನ್ನು ಕಟ್ಟುವುದು, ಗುರುಗಳಲ್ಲಿ ವಿನಯದಿಂದಿರುವುದು. ಎಲ್ಲ ಪ್ರಾಣಿಗಳಲ್ಲಿ ದಯೆಯ ತೋರುವುದು, ಎಲ್ಲ ಶಾಸ್ತ್ರಗಳನ್ನು ಸಮವಾಗಿ ಕಾಣುವುದು, ವಿಧಿವಿಧಾನಗಳನ್ನು ಕೆಡಿಸದಿರುವುದು ಇವು ಹತ್ತು ಶ್ರೇಯಸ್ಸಿಗೆ ಹಾದಿಗಳು.

ಇಲ್ಲಿ ಒಂದೆರಡು ವ್ಯತ್ಯಾಸಗಳನ್ನು ಬಿಟ್ಟರೆ ಉಳಿದವೆಲ್ಲವೂ ಸರಿಸಮ ವಾಗಿವೆ ಇನ್ನೊಬ್ಬ ಕವಿ ಹೀಗೆ ಹೇಳಿದ್ದಾನೆ.

"ಅಕ್ರೋಧ ವೈರಾಗ್ಯಜಿತೇಂದ್ರಿಯತ್ವಂ ಕ್ಷಮಾದಯಾ ಶಾಂತಿಜನ
ಪ್ರಿಯತ್ವಂ ।
ನಿರ್ಲೋಭದಾತಾ ಭಯಶೋಕಹೀನಂ ಜ್ಞಾನಸ್ಯ ಚಿಹ್ನಂ ದಶಲಕ್ಷಣಾನಿ॥"

ಇಲ್ಲಿಯೂ ಹತ್ತು ಗುಣಗಳನ್ನು ಹೇಳಲಾಗಿದೆ. ಇಲ್ಲಿಯೂ ಹಲವು ವ್ಯತ್ಯಾಸಗಳಿವೆಯಾದರೂ ಜ್ಞಾನಕ್ಕೆ ಶ್ರೇಯಸ್ಸಿಗೆ ಹತ್ತು ಗುಣಗಳಿರಬೇಕೆಂಬುದರಲ್ಲಿ ಏಕಕಂಠತೆಯಿದೆ. ಜೈನಶಾಸ್ತ್ರದಲ್ಲಿಯೂ ದಶವಿಧ ಧರ್ಮಗಳು ಹೀಗೆ ಉಕ್ತವಾಗಿವೆ: 'ಉತ್ತಮ ಕ್ಷಮಾ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ, ಇವು ಜೈನರು ಹೇಳುವ ದಶ ಧರ್ಮಗಳು.

ಧರ್ಮಧೇನುವಿಗೆ ಅಹಿಂಸೆ ಮುಖ, ಸತ್ಯ ಬಾಲ, ಅಸ್ತೇಯ-ಬ್ರಹ್ಮಚರ್ಯ-ದಯೆ-ಕ್ಷಮೆ ಈ ನಾಲ್ಕು ಕಾಲು, ದಾನ ಕೆಚ್ಚಲು, ಪೂಜೆ–ಜಪ–ಧ್ಯಾನ ಈ ಮೂರೊಂದಾದ ಹಾಲು. ಪೂಜೆ ಹಾಲಿನ ಬಿಳುಪು, ಜಪ ಹಾಲಿನ ದ್ರವತ್ವ, ಧ್ಯಾನ ಹಾಲಿನ ಮಾಧುರ್ಯ,

"ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮಸಂಗ್ರಹಃ।
ತಸ್ಮಾತ್ತಮಾಚರನ್ವಿದ್ವಾನ್ ತತ್ಪ್ರಸಾದಾಯ ಕಲ್ಪತೇ॥"

ಈ ಧರ್ಮಸಂಗ್ರಹವನ್ನು ಶಿವನು ಆಗಮಂಗಳಲ್ಲಿ ನಿರೂಪಿಸಿದ್ದಾನೆ. ಆದ್ದರಿಂದ ಅಭಿಜ್ಞರು ಈ ಧರ್ಮಸಂಗ್ರಹವನ್ನು ಆಚರಿಸಬೇಕು. ಆಚರಿಸಿದರೆ ಆ ಶಿವನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ,

ಬೋಧನ ಕರ್ತೃ ಭವಹರನಾದ ಶಿವನು; ಭದ್ರಂಕರನಾದ ಶಿವನು; ಷಡ್ಗುಣೈಶ್ವರ್ಯಸಂಪನ್ನ ಶಿವನು. ಸಚ್ಚಿದಾನಂದಸ್ವರೂಪ ಶಿವನು. ಮೇಲಾಗಿ ಆತನು ಶ್ರೀಕಂಠನು. ಇದರಿಂದ ಧರ್ಮಬೋಧನಶಕ್ತಿಯುಕ್ತನು. ಧರ್ಮಸ್ವರೂಪನೂ ಆಗಿದ್ದಾನೆ. ಅಲ್ಲದೆ ಆತನು ಪಶುಪತಿಯೂ ಈಶ್ವರನೂ ಈಶಾನನೂ ಆಗಿದ್ದಾನೆ. ಪಶುರೂಪರಾದ ಸರ್ವ ಜೀವರಿಗೆ ಪತಿಧರ್ಮಗಳನ್ನು ಬೋಧಿಸುವ ಉದ್ಧರಿಸುವ ಒಡೆಯನಾಗಿದ್ದಾನೆ ಧರ್ಮಗಳನ್ನು ಆಚರಿಸುವಂತೆ ಪ್ರಚೋದಿಸುವ ಪ್ರೇರೇಪಿಸುವ ಈಶಾನನೂ ಆಗಿದ್ದಾನೆ.

ಆತನ ಧರ್ಮೋಪದೇಶಕ್ಕೆ ಸಾಧನ ಅಥವಾ ಕರಣ ಆಗಮ. ಆಗಮ ಪ್ರಯೋಗ ಶ್ಲೇಷವೂ ಧ್ವನಿಯುಕ್ತವೂ ಅರ್ಥಪೂರ್ಣವೂ ಆಗಿದೆ. ಆಗಮವೆಂದರೆ ಆಗಮಿಸುವಿಕೆ, ಶಬ್ದವೈಖರೀ, ತಂತ್ರಶಾಸ್ತ್ರ, ಜ್ಞಾನ–ಮುಂತಾದ

ಅರ್ಥಗಳಿವೆ. ಇವೆಲ್ಲ ಅರ್ಥಗಳಿಗೂ ಇಲ್ಲಿ ಔಚಿತ್ಯವಿದೆ. ಶಿವನು ಇಳೆಗೆ ಆಗ ಮಿಸಿ ತನ್ನದೇ ಆದ ವೈಖರಿವಾಣಿಯಲ್ಲಿ ತಂತ್ರಶಾಸ್ತ್ರ ಮಂಖಾಂತರ ಧರ್ಮಜ್ಞಾನ ವನ್ನು ಬಿತ್ತರಿಸಿ ಬೋಧಿಸಿದ್ದಾನೆ. ಹೀಗೆ ಅರ್ಥವಿಸಿದಾಗ ಶಿವಯೋಗಿ ಶಿವಾ ಚಾರ್ಯಕವಿಯು ಬಳಸಿದ 'ಆಗಮ' ಪದದ ವೈಶಿಷ್ಟ್ಯ ವ್ಯಕ್ತವಾಗದಿರದು.

ಇನ್ನು ಬೋಧನ ವಿಷಯ ಧರ್ಮಸಂಗ್ರಹ, ಜಿಜ್ಞಾಸ್ಯ ವಿಷಯಗಳೆರಡು: ಒಂದು ಧರ್ಮ, ಇನ್ನೊಂದು ಬ್ರಹ್ಮ. ಧರ್ಮ ಸಾಧನ, ಬ್ರಹ್ಮ ಸಿದ್ಧಿ. ಇದ ರಿಂದಾಗಿ ಅಧಿಕಾರಿಗೆ ಅಂದರೆ ಆರಾಧಕನಿಗೆ ಮೊದಲು ಬೇಕಾದುದು ಧರ್ಮಸಾಧನ, ಈ ಸಾಧನವನ್ನೇ ಇಲ್ಲಿ ವಿಷಯವಾಗಿ ವಿಸ್ತರಿಸಿ ಬೋಧಿಸಲಾಗಿದೆ.

ಧರ್ಮಗಳು ಅನಂತ, ಅವನ್ನೆಲ್ಲವನ್ನೂ ಆಚರಿಸಲು ಅಲ್ಪಾಯುಷ್ಯವುಳ್ಳ ಅಧಿಕಾರಿಗೆ ಅಶಕ್ಯ. ಆದ್ದರಿಂದ ಅವನ್ನೆಲ್ಲ ಸಂಗ್ರಹಿಸಿ ಸಂಕ್ಷಿಪ್ತಗೊಳಿಸಿ ಅಂದರೆ ಹಲವನ್ನು ಹತ್ತರಲ್ಲಿಯೆ ಕೇಂದ್ರೀಕರಿಸಿ ಶಿವನು ಉಪಾಸಕರ ಉಪಯೋಗಕ್ಕಾಗಿ ಬೋಧಿಸಿದ್ದಾನೆ. ಈ ಶಿವಪ್ರೋಕ್ತವಾದ ದಶಧರ್ಮಗಳಲ್ಲಿಯೇ ಉಳಿದೆಲ್ಲ ಧರ್ಮಗಳು ಬೆರೆದಿವೆ. ಇವುಗಳನ್ನು ಅರಿದು ಆಚರಿಸಿದರೆ ಸಾಕು, ಆ ಪರ ಬ್ರಹ್ಮ ಸಾಕ್ಷಾತ್ಕಾರರೂಪ ಸಾಮರಸ್ಯವುಂಟಾಗುತ್ತದೆ. ಅಂದರೆ ಸಮಾಧಿರೂಪ ಶಿವಯೋಗವುಂಟಾಗುತ್ತದೆ. ಉಪಾಸಕನಿಗೆ ಅಭ್ಯುದಯ ಶ್ರೇಯಸ್ಸುಗಳೆರಡೂ ಅಳವಡುತ್ತವೆ.

ಅಧಿಕಾರಿ ವಿವೇಕಿ. 'ವಿದ್ವಾನ್' ಪದ ಪ್ರಯೋಗದಲ್ಲಿಯೇ ಅಧಿಕಾರ ವಿದೆಯೆಂಬ ಧ್ವನಿಯಿದೆ; ಧ್ವನಿ ಸ್ಫುಟವಾಗಿದೆ. ವಿವೇಕ, ವೈರಾಗ್ಯಾದಿಗಳುಳ್ಳ ವನೇ ಅಧಿಕಾರಿ. ವಿದ್ವಾನ್ ಪದ ಪ್ರಥಮ ಸಾಧನವಾದ ವಿವೇಕವುಳ್ಳವನೆಂಬು ದನ್ನೇ ವಿಶದಪಡಿಸುತ್ತದೆ. ಧರ್ಮಜಿಜ್ಞಾಸೆಗೆ ಧರ್ಮಾಚರಣೆಗೆ ಅಧಿಕಾರವಿದೆ ಯೆಂಬುದನ್ನು ಎತ್ತಿ ತೋರಿದೆ. ಅಧಿಕಾರಿಗೆ ವಿಚಾರವೊಂದೇ ಇದ್ದರೆ ಸಾಲದು, ಆಚಾರವೂ ಬೇಕು. ಆಚಾರವಿಲ್ಲದ ವಿಚಾರ ಕಂಪಿಲ್ಲದ ಹೂವು; ರಸವಿಲ್ಲದ ಹಣ್ಣು. ಕಾರಣ ವಿಚಾರಶೀಲನಿಗೆ ಆಚಾರದ ಸಂಬಂಧ ಅಗತ್ಯ. ಆದ್ದರಿಂದ ವಿವೇಕವುಳ್ಳ ಅಧಿಕಾರಿಗೂ ಧರ್ಮಕ್ಕೂ ಸಂಬಂಧವಿದೆ, ಈ ಸಂಬಂಧವು 'ತಮಾ ಚರನ್' ಪ್ರಯೋಗದಿಂದ ಪ್ರಸ್ಫುಟವಾಗಿದೆ.

ಇನ್ನು ಳಿಯಿತು ಪ್ರಯೋಜನ ವಿಚಾರ. ಇಲ್ಲಿ ನಿರೂಪಿತವಾದ ಪ್ರಯೋಜನ ತತ್ಪ್ರಸಾದ, ತತ್ಪ್ರಸಾದವೆಂದರೆ ಧರ್ಮಬೋಧಕತ್ರ್ಯವಾದ ಆ ಶಿವನ ಅನುಗ್ರಹ. ಶಿವಕಾರುಣ್ಯಕ್ಕಿಂತ ಹೆಚ್ಚಿನ ಪ್ರಯೋಜನ ಪ್ರಪಂಚದಲ್ಲಿಲ್ಲ. ಅದು ದೊರಕಬೇಕಾದರೆ ವಿಚಾರವಂತನು ಆಚಾರಶೀಲನಾಗ ಬೇಕು. ಶಿವಾಗಮವಿಹಿತ ಧರ್ಮಸಂಗ್ರಹ ನಿರತನಾಗಿರಬೇಕು. ಕೇವಲ ವಿಚಾರದಿಂದ ಶಿವಪ್ರಸಾದ ಸಂಪ್ರಾಪ್ತವಾಗುವುದಿಲ್ಲ. ವಿವೇಕ ತೋರುವ ಸಾಧನ. ಆಚಾರ ಬೆರೆವ ಸಾಧನ. ಅರುಹಿಗೆ ಆಚಾರ. ಒಂದುಗೂಡಿದಾಗ ಆತನ ಅನುಗ್ರಹವುಂಟಾಗುತ್ತದೆ. ಇದನ್ನು ಉಚ್ಚಸ್ವರದಿಂದ ಉಗ್ಗಡಿಸಿದೆ ಈ ಶ್ಲೋಕ.

ಶಿವನು ನುಡಿದುದು ಆಗಮ; ಶಿವಭಕ್ತನು ಅದನ್ನು ಅನುಸರಿಸಿ ನಡೆದುದು ಧರ್ಮ. ಆ ಧರ್ಮದಿಂದ ಪ್ರಾಪ್ತವಾಗುವುದು ಆ ಶಿವನ ಪ್ರಸಾದ.

ಶಿವಾಗಮ, ಶಿವಾಚಾರ್ಯರ ಆಚಾರ, ತನ್ನ ತೃಪ್ತಿ–ಈ ಮೂರು ಧರ್ಮದ ತಿಳಿವಳಿಕೆಗೆ ಮತ್ತು ನಡೆವಳಿಕೆಗೆ ಪರಮ ಪ್ರಮಾಣಗಳಾಗಿವೆ. ಆಗಮಂಗಳಲ್ಲಿ ಹೇಳಿದಂತೆ, ಆಚಾರ್ಯರು ಆಚರಿಸಿ ಬೋಧಿಸಿದಂತೆ ಆತ್ಮತೃಪ್ತಿಯಿಂದ ನಡೆದುಕೊಳ್ಳುವುದೇ ಧರ್ಮ. ಅದರಿಂದ ಆ ಪರಶಿವನ ಅನುಗ್ರಹ.

"ಅಧರ್ಮಂ ನ ಸ್ಪೃಶೇತ್ಕಿಂಚಿದ್ವಿಹಿತಂ ಧರ್ಮಮಾಚರೇತ್ ।
ತಂ ಚ ಕಾಮವಿನಿರ್ಮುಕ್ತಂ ತಮಪಿಜ್ಞಾನಪೂರ್ವಕಂ ॥"

ನಿಷಿದ್ಧ ಧರ್ಮದಲ್ಲಿ ನಿರತನಾಗಬಾರದು. ವಿಹಿತ ಧರ್ಮವನ್ನು ಆಚರಿಸದೆ ಬಿಡಬಾರದು. ವಿಹಿತ ಧರ್ಮಾಚರಣೆಯಲ್ಲಿಯೂ ಪ್ರತಿಫಲದ ಕಾಂಕ್ಷೆಯಿರಬಾರದು, ಮತ್ತು ಅರಿಯದೆ ಆಚರಿಸಬಾರದು.

ಧರ್ಮ ವಿಹಿತ, ನಿಷಿದ್ಧ ಎಂದು ಎರಡು ಬಗೆ. ಇವೆರಡರಲ್ಲಿ ವಿಹಿತ ಧರ್ಮವೇ ಆಚರಣೆಗೆ ವಿಹಿತ.

"ದುರ್ವ್ಯಸನಿ ದುರಾಚಾರಿ ಎಂದೆನಿಸದಿರಯ್ಯ,
ಲಿಂಗವ್ಯಸನಿ ಜಂಗಮ ಪ್ರೇಮಿಯೆಂದೆನಿಸಯ್ಯ,
ಅವಶ್ಯ ಮನುಭೋಕ್ತವ್ಯಮೆಂದೆನಿಸದಿರಯ್ಯ, ಕೂ.ಸಂ. ದೇವ."

ದುರಾಚಾರಕ್ಕೆ ಅಂದರೆ ಅಧರ್ಮಕ್ಕೆ ಕಾರಣ ದುರ್ವ್ಯಸನ. ಶಿವಕಾರುಣ್ಯ ಕಾಂಕ್ಷಿಯು ಇವೆರಡನ್ನೂ ಬಿಡಬೇಕು, ಸದ್ವ್ಯಸನ, ಸದ್ಧರ್ಮಗಳಲ್ಲಿ ನಿರತನಾಗಿರ ಬೇಕು. ಇಂತಿದ್ದರೆ ಪ್ರಾರಬ್ಧ ಕರ್ಮವನ್ನೂ ಪರಿಹರಿಸಿಕೊಳ್ಳುವ ಶಕ್ತಿ ಸಮನಿ ಸುತ್ತದೆ.

ದುರ್ವ್ಯಸನ ದುರಾಚಾರದಿಂದ ಯಾವ ಲೇಸಿಲ್ಲ ; ಯಾವ ಅಭ್ಯುದಯ ವಿಲ್ಲ, 'ಅಧರ್ಮೋ ನಷ್ಟ ಸಂತಾನೋ, ಧರ್ಮೋ ಸಂತಾನ ವರ್ಧನಃ. ಧರ್ಮಾ ಧರ್ಮಗಳ ಫಲವಿದು.

"ಕಃ ಪಥ್ಯತರೋ ?–ಧರ್ಮಃ; ಕಃಶುಚಿರಿಹ ?–ಯಸ್ಯಮಾನಸಂ ಶುದ್ಧಂ! ಕಃ ಪಂಡಿತೋ ?- ವಿವೇಕೀ ; ಕಿಂ ವಿಷಮವಧೀರಣಾ ಗುರುಷು॥"

ಧರ್ಮಕ್ಕಿಂತ ಪಥ್ಯವಿಲ್ಲ. ಮನಸಿನ ಶುದ್ಧಿಗಿಂತ ಶುಚಿಯಿಲ್ಲ. ವಿವೇಕಿ ಗಿಂತ ಪಂಡಿತನಿಲ್ಲ. ಗುರುಗಳನ್ನು ತಿರಸ್ಕರಿಸುವುದಕ್ಕಿಂತ ವಿಷವಿಲ್ಲ.

"ಧರ್ಮಂ ಪ್ರಸಂಗಾದಪಿ ನಾಚರಂತಿ. ಪಾಪಂ ಪ್ರಯತ್ನೇನ ಸಮಾಚ ರಂತಿ । ಆಶ್ಚರ್ಯಮೇತದ್ಧಿ ಮನುಷ್ಯಲೋಕೇsಮೃತಂ ಪರಿತ್ಯಜ್ಯ ವಿಷಂ ಪಿಬಂತಿ ॥"

ಪ್ರಸಂಗದಲ್ಲಿಯೂ ಧರ್ಮವನಾಚರಿಸುವುದಿಲ್ಲ. ಪ್ರಯತ್ನಿಸಿ ಅಧರ್ಮ ವನ್ನು ಅಚರಿಸುತ್ತಾರೆ. ಅಮೃತವನ್ನು ಬಿಟ್ಟು ವಿಷವನ್ನು ಕುಡಿಯುತ್ತಾರೆ. ಮನುಷ್ಯ ಲೋಕದಲ್ಲಿ ಇದಕ್ಕಿಂತ ಅಚ್ಚರಿ ಬೇರಿಲ್ಲ.

ಒಂದು ವೇಳೆ ಯಾರಾದರೂ ಧರ್ಮವನ್ನು ಮಾಡಿದರೆ ಸಕಾಮವಾಗಿ ಮಾಡುತ್ತಾರೆ. ಇದಕ್ಕಿಂತ ಕೀಳು ಬೇರಿಲ್ಲ. 'ಕೃಪಣಾಃ ಫಲಹೇತವಃ' ಎಂದಿದೆ ಗೀತೆ.

"ಧನದಲ್ಲಿ ನಿರಾಶೆ, ಪ್ರಾಣದಲ್ಲಿ ನಿರ್ಭಯ, ಇವಾವಂಗಳವಡುವುದಯ್ಯಾ? ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವರಿಲ್ಲ. ಪ್ರಮಾದವಶ ಬಂದರೆ ಹುಸಿಯೆಂ ನೆಂಬವರಿಲ್ಲ. ನಿರಾಶೆ ನಿರ್ಭಯ ಕೂಡಲ ಸಂಗಮಾದೇವಾ, ನೀನೊಲಿದ ಶರಣಂಗಲ್ಲದಿಲ್ಲ.'

ಧರ್ಮಾಚರಣೆಯಲ್ಲಿ ಪ್ರತಿಫಲಾಶೆಯಿರಕೂಡದು.

"ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು ;
ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು.
'ಯದ್‌ಭಾವಂ ತದ್‌ಭವತಿ' ಉರಿ ಬರಲಿ, ಸಿರಿ ಬರಲಿ,
ಬೇಕು ಬೇಡ ಎನ್ನೆನಯ್ಯಾ. ನಿಮ್ಮ ಹಾರೆನು,
ಮಾನವರ ಬೇಡೆನು, ಆಣೆ, ನಿಮ್ಮಾಣೆ ಕೂ. ಸಂ. ದೇವಾ "

ಧರ್ಮಾಚರಣೆಯಲ್ಲಿ ಈ ನಿರಾಶೆಯಿರಬೇಕು, ಈ ಧೃತಿಯಿರಬೇಕು.

"ನಾನು ಆರಂಭವ ಮಾಡುವೆನಯ್ಯಾ ಗುರು ಪೂಜೆಗೆಂದು.
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು.
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು.
ನಾನಾವಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ
ನೀ ಕೊಡುವೆಯೆಂಬುದ ನಾ ಬಲ್ಲೆನು. ನೀ ಕೊಟ್ಟ
ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು :
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ, ಕೂ. ಸಂ. ದೇವ."

ಯಾವ ಕರ್ಮವೇ ಆಗಲಿ ಅದು ಧರ್ಮವಾಗಿ ಪರಿಣಮಿಸಬೇಕಾದರೆ ನಿಷ್ಕಾಮವಾಗಿ ನಿಸ್ವಾರ್ಥವಾಗಿ ಮಾಡಬೇಕು, ಹೀಗೆ ಮಾಡಿದ್ದಾದರೆ ಮಾಡುವ ಆರಂಭ, ವ್ಯವಹಾರ, ಪರಸೇವೆ ಎಲ್ಲವೂ ಧರ್ಮಾಚಾರವಾಗುತ್ತವೆ. ನಿಷ್ಕಾಮದ ಫಲವಿದು.

ಮೂರನೆಯದಾಗಿ ಮಾಡುವುದನ್ನು ಮನವರಿತು ಮಾಡಬೇಕು. ಮನ ಪರಿಕೆಯಿಲ್ಲದೆ ಮಾಡಿದರೆ ಯಾವ ಪ್ರಯೋಜನವಿಲ್ಲ.

"ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ;
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ.
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ;

ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ;
ಕೂಡಲ ಸುಗನ ಶರಣರ ಅನುಭಾವದಿಂದ
ಎನ್ನ ಮನದ ಕೇಡು ನೋಡಯ್ಯಾ."

ಜ್ಞಾನಾನುಭವಗಳಿಲ್ಲದೆ ಧರ್ಮ ಫಲಿಸದು, ತ್ರಿಕರಣ ತಿಳಿಯಾಗದು. ಸಹಜತೆ ಮತ್ತು ಸಂವಿತ್ತಿಯಿಂದ ಕೂಡಿದ ಧರ್ಮ ಅದೊಂದು ಜ್ಯೋತಿ, ಅದೊಂದು ಪರುಷಮಣಿ. ಅದರಿಂದ ಬಾಳು ಬೆಳಗುತ್ತದೆ; ಕಳೆ ಬೆಲೆಗಳು ಳ್ಳದಾಗುತ್ತದೆ. ಅಭ್ಯುದಯವನ್ನು ಬಯಸುವ ಮಾನವನಿಗೆ ಧರ್ಮವೇ ದಿವ್ಯ ನಿಧಿ. ಅಂತಹ ಧರ್ಮನಿಧಿಗೆ ಜ್ಞಾನ ದೀಪ್ತಿಯೊಂದು ಬೆರೆದರೆ ಅಮೃತಕ್ಕೆ ಅಮೃತ ಬೆರತಂತೆ! ಅದರಿಂದ ಆತ್ಮೋದ್ಧಾರ ಶತಸ್ಸಿದ್ಧ, 'ಸ್ವಾತ್ಮಮುದ್ಧರತೇ ಪ್ರಾಜ್ಞಃ. ಸ್ವಾತ್ಮಭ್ರಂಶೋ ಹಿಮೂರ್ಖತಾ' ಆತ್ಮೋದ್ಧಾರಕ್ಕೆ ಅದಕ್ಕಿಂತ ಅಧಿಕವಾದುದು ಬೇರೊಂದಿಲ್ಲ. ಧರ್ಮರೂಪ ಸತ್ಕ್ರಿಯೆಗೆ ಜ್ಞಾನದ ಸಂಬಂಧ ವೊದಗಿ ಬಂದರೆ ಆ ಭಾಗ್ಯಕ್ಕೆ ಎಣೆಯಿಲ್ಲ

ಆಸೆಯುಳ್ಳವನು ಪರಶಿವನೊಲಿದರೂ ತನಗೆ ಬೇಕಾದುದರ ಮೇಲೆ ಪ್ರಾಣವನ್ನಿರಿಸಿಕೊಂಡಿರುತ್ತಾನೆ. ಪರಮಾತ್ಮನ ಮೇಲೆ ಸಕಾಮನಿಗೆ ಆಸಕ್ತಿಯಿರುವುದಿಲ್ಲ. ಅಂತೆಯೇ ಅಜ್ಞಾನಿಯು ಆತನನ್ನು ಅದೆಂದಿಗೂ ಅರಿಯಲಾರನು; ಎದುರಿಗಿದ್ದರೂ ಅರಿಯಲಾರನು. ಆದ್ದರಿಂದ ಆಸೆ ಅಜ್ಞಾನಗಳೆರಡನ್ನು ತೊರೆದು ಧರ್ಮ ನಿರತನಾಗಬೇಕು. 'ಅಜ್ಞಾತಂ ಜೀವಿತಂ ಶೂನ್ಯಂ' ಅರಿವಿಲ್ಲದ ಬಾಳು ಹಾಳು. ಅರಿವಿನಿಂದ ಕಾಮಾದಿ ಅರಿವರ್ಗವನ್ನು ಗೆಲ್ಲಲು ಸಾಧ್ಯ.

"ಶಸ್ತ್ರೈರ್ಹತಾಸ್ತು ರಿಪವೋ ನ ಹತಾ ಭವಂತಿ ।
ಪ್ರಜ್ಞಾ ಹತಾಸ್ತು ರಿಪವಃ ಪ್ರಹತಾ ಭವಂತಿ ।
ಶಸ್ತ್ರಂ ನಿಹಂತಿ ಪುರುಷಸ್ಯ ಶರೀರಮೇಕಂ ।
ಪ್ರಜ್ಞಾ ಕುಲಂ ಸಹಬಲಂ ಸಹಸಾ ನಿಹಂತಿ ॥"

ಕೈದುಗಳಿಂದ ಗಾಯವಾದವರು ಸಾಯರು; ಮರಳಿ ಚೇತರಿಸಿಕೊಳ್ಳ ಬಲ್ಲರು; ಅಂದರೆ ಒಂದೇ ಹೊಡತಕ್ಕೆ ಸಾಯರು. ಆದರೆ ಪ್ರಜ್ಞೆಯಿಂದ

ಹಠರಾದ ವೈರಿಗಳು ಒಮ್ಮೆಗೆ ಸಾಯುವರು. ಮತ್ತು ಶಸ್ತ್ರ ಶರೀರವೊಂದನ್ನೇ ಸಾಯಿಸುತ್ತದೆ. ಪ್ರಜ್ಞೆ ಅರಿಷಡ್ವರ್ಗ ಸಮೂಹವನ್ನು ಒಂದೇ ಸಲಕ್ಕೆ ಬಲ ಹೀನವಾಗಿಸಿ ಸಾಯಿಸುತ್ತದೆ. ಇದರಿಂದಾಗಿ ಸುಜ್ಞಾನದಿಂದ ಕೂಡಿದ ಸಹಜ (ಬೇಕು ಬೇಡೆಂಬ ಭಾವವಿಲ್ಲದ) ಧರ್ಮ ಸರ್ವಶ್ರೇಷ್ಠವಾದುದು.

"ಆತ್ಮವತ್ಸರ್ವಭೂತಾನಿ ಸಂಪಶ್ಯೇದ್ಯೋಗವಿತ್ತಮಃ
ಜಗದೇಕಾತ್ಮತಾಭಾವಾನ್ನಿಗ್ರಹಾದಿ ವಿರೋಧತಃ।
ಏಕ ಏವ ಶಿವಸ್ಸಾಕ್ಷಾಜ್ಜಗದೇತದಿತಿ ಸ್ಫುಟಂ
ಪಶ್ಯತಃ ಕಿಂ ನ ಜಾಯೇತ ಮಮಕಾರೋ ಹಿ ವಿಭ್ರಮಃ।"

ಜಗತ್ತೆಲ್ಲವೂ ಒಂದೆ. ಜಗದ ಜೀವಿಗಳೆಲ್ಲ ಒಂದೆ. ಜಗತ್ತು ಜೀವಕೋಟಿಯು ಆದುದು ಆ ಒಬ್ಬ ಶಿವನಿಂದ. ಎಂದು ಭಾವಿಸುವವನೇ ಶಿವಯೋಗ ಶ್ರೇಷ್ಠನು. ಆತನಿಗೆ ಯಾವ ಪ್ರಾಣಿಯಲ್ಲಿಯೂ ಯಾರಲ್ಲಿಯೂ ರಾಗ ದ್ವೇಷಗಳಿರುವುದಿಲ್ಲ. ಎಲ್ಲರನ್ನೂ ತನ್ನಂತೆ ಕಾಣುತ್ತಾನೆ. ಹಲವರನ್ನು ಶಿಕ್ಷಿಸುವುದು, ಬೇರೆ ಹಲವರನ್ನು ರಕ್ಷಿಸುವುದು ಅವನಿಗೆ ಆಗದ ವಿಷಯ. ಈ ವಿರೋಧಕ್ಕೆ ಆತನು ಬಲಿಯಾಗನು. ಎಲ್ಲೆಲ್ಲಿಯೂ ಶಿವಸ್ವರೂಪವನ್ನೇ ಕಾಣುವ ಶಿವಯೋಗಿಗೆ ಶಿವಯೋಗಾನಂದದಲ್ಲಿಯೇ ಇರುವ ಮಹಾನುಭಾವನಿಗೆ ಬೇರೆ ಏನೂ ಬೇಕಿರುವುದಿಲ್ಲ; ಯಾರಿಂದಲೂ ಏನೂ ಆಶಿಸಬೇಕಾಗಿರುವುದಿಲ್ಲ. ಆಶೆ ಆಕಾಂಕ್ಷೆಯಿಲ್ಲದ ಆತನಿಗೆ ಮಮಕಾರದ ಮಾತಿಲ್ಲ. ಮಮತೆ ಇದೊಂದು ಭ್ರಾಂತಿ. ಆದ್ದರಿಂದ ಯೋಗಾಗ್ರಗಣ್ಯನಾದ ಮಾಹೇಶ್ವರಾಂಗನು ಸಾಂಸಾರಿಕ ಸಂಕುಚಿತ ಮಮಕಾರವನ್ನು ತ್ಯಜಿಸಿಡುತ್ತಾನೆ. ಅಂತೆಯೇ ದ್ವೇಷಾಸೂಯೆಗಳನ್ನೂ ತ್ಯಜಿಸಿರುತ್ತಾನೆ. ಆತನು ಎಲ್ಲರನ್ನೂ ಒಂದಾಗಿ ಕಾಣುವ ವಿಶ್ವೈಕ್ಯಮನೋಭಾವವುಳ್ಳವನಾಗಿರುತ್ತಾನೆ. ವಿಶ್ವವೆಲ್ಲವೂ ಶಿವಸ್ವರೂಪವೆಂಬ ಮಂಗಲಮನೋಭಾವವುಳ್ಳವನಾಗಿರುತ್ತಾನೆ. ಆತನು ಸಹಜವಾಗಿ ಸರ್ವದರಲ್ಲಿ ಸರ್ವರಲ್ಲಿ ಸದ್‌ಭಾವವನ್ನು ಅಖಂಡತೆಯನ್ನು ಅಳವಡಿಸಿಕೊಂಡಿರುತ್ತಾನೆ. ತನ್ನಂತೆ ಪರರನ್ನು ಬಗೆವ ಸಮದರ್ಶಿ ಆ ಶಿವಯೋಗಿ. ಅದರಿಂದ ಅವನು ಯೋಗಾಗ್ರಣಿ.

"ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಧರ್ಮರಾಟ್"
ಆ ಸಮದರ್ಶಿಯನ್ನು ಧರ್ಮರಾಜನೆಂದು ಕರೆದಿದೆ ಈ ಸೂಕ್ತಿ.

"ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ।
ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ಪ್ರಣಶ್ಯತಿ॥"

ಆತ್ಮದರ್ಶಿಯು ನೀಚೋಚ್ಚ ಭಾವವನ್ನು ತ್ಯಜಿಸುತ್ತಾನೆ, ಹುಟ್ಟು ಸಾವುಗಳನ್ನು ಜಯಿಸಿರುತ್ತಾನೆ, ಎಂದು ಹೇಳಿದೆ ಗೀತೆ.

" ಯಸ್ಮಿನ್ ಸರ್ವಾಣಿ ಭೂತಾಣಿ ಆತ್ಮೈವಾಭೂದ್ವಿಜಾನತಃ!
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥"

—ಈಶಾವಾಸ್ಯೋಪನಿಷತ್,

ತಾನು ಶಿವಸ್ವರೂಪವಾಗಿದ್ದಂತೆ ಸರ್ವಭೂತಗಳೂ ಶಿವಸ್ವರೂಪವಾಗಿದ್ದು ಸತ್ಯಸ್ವರೂಪವಾಗಿವೆಯೆಂದು ತಿಳಿದ ಮಹಿಮನಿಗೆ ಮೋಹ ಶೋಕಗಳಿಲ್ಲವೆಂದು ಉದ್ಘೋಷಿಸಿದೆ ಉಪನಿಷದ್ವಾಣಿ,

"ವನವೆಲ್ಲ ನೀವೆ, ವನದೊಳಗಣ ದೇವತರುವೆಲ್ಲ ನೀವೆ; ತರುವಿನೊಳಗಾಡುವ ಖಗಮೃಗಂಗಳೆಲ್ಲ ನೀವೆ ಚನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ ಎನಗೆ ಮೊಗದೋರಾ!"—ಎಂದಿದೆ ಶರಣವಾಣಿ;

"ಪುರುಷ ಏವೇದಗ್ಂ ಸರ್ವಂ ಯದ್ಭೂತಂ
ಯಚ್ಚ ಭವ್ಯಂ ಉತಾಮೃತಸ್ಯೇಶಾನಃ"

—ಎಂದಿದೆ ವೇದವಾಣಿ,

"ಪ್ರಕಾಶಮಾನೇ ಪರಮಾತ್ಮಭಾನೌ ನಶ್ಯತ್ಯವಿದ್ಯಾ ತಿಮಿರಂ ಸಮಸ್ತಂ।
ಅಹೋ ಬುಧಾ ನಿರ್ಮಲದೃಷ್ಟಿಯೋಗಾತ್ಕಿಂಚಿನ್ನಪಶ್ಯತಿ
ಜಗತ್ಪ್ರಪಂಚಂ ॥"

ಪರಮಜ್ಞಾನಿಗಳಿಗೆ ನಿರ್ಮಲ ದೃಷ್ಟಿಯಿರುತ್ತದೆ, ನಿಜಭಾವವಿರುತ್ತದೆ, ಪರಮಪ್ರಕಾಶದಲ್ಲಿದ್ದು ಅವಿದ್ಯೆಯನ್ನು ಕಳೆದುಕೊಂಡಿರುತ್ತಾರೆ. ಅವರಿಗೆ

ಪ್ರಾಪಂಚಿಕ ದೃಷ್ಟಿಯಿರುವುದಿಲ್ಲ. ಪ್ರಪಂಚವೆಲ್ಲ ಪರಮಾತ್ಮ ಸ್ವರೂಪವಾಗಿಯೇ ಅವರಿಗೆ ಕಾಣುತ್ತದೆ.

"ಓಂ ಸುಹೃದಯಂ ಸಾಂಮನಸ್ಯಮವಿದ್ವೇಷಂ ಕೃಣೋಮಿ ವಃ ।
ಅನ್ಯೋ ಅನ್ಯಮಭಿಹರ್ಯತ ವತ್ಸಂ ಜಾತಮಿವಾಘ್ನಾ ॥"
ಓಂ ಯೇನ ದೇವಾ ನ ವಿಯಂತಿ, ನೋಚ ವಿದ್ವಿಷತೇ ಮಿಥಃ ।
ತತ್ ಕೃಣ್ಮೋ ಬ್ರಹ್ಮವೋ ಗೃಹೇ ಸಂಜ್ಞಾನಂ ಪುರುಷೇಭ್ಯಃ ॥"

—ಅಥರ್ವಣವೇದ.

ಹೃದಯ ಪಾವಿತ್ರ್ಯತೆಯನ್ನು ಮನದ ಸಮಾನತೆಯನ್ನು ನಿರ್ವೈರತೆಯನ್ನು ನಿಮ್ಮಲ್ಲಿ ಉಂಟುಮಾಡುತ್ತೇನೆ. ಹಸು ಹೊಸತಾಗಿ ಹುಟ್ಟಿದ ತನ್ನ ಕರುವಿನ ಮೇಲೆ ಹೇಗೆ ಕರುಳನ್ನು ತೋರುತ್ತದೆಯೋ ಹಾಗೆ ನೀವೆಲ್ಲ ಪರಸ್ಪರ ಪ್ರೇಮದಿಂದಿರಿ !

ಯಾವ ಜ್ಞಾನದಿಂದ ಜ್ಞಾನಿಗಳು ವಿರೋಧಿಸುವುದಿಲ್ಲವೋ ಮತ್ತು ಪರಸ್ಪರ ವಿದ್ವೇಷ ಮಾಡುವುದಿಲ್ಲವೋ ಆ ಉತ್ತಮ ದಿವ್ಯ ಜ್ಞಾನವನ್ನು ನಿಮ್ಮೆಲ್ಲರ ಮನೆಯಲ್ಲಿ ನಿಮ್ಮೆಲರ ಹಿತಕ್ಕಾಗಿ ಕೊಡುತ್ತೇನೆ ; ಎಂದಿದೆ ವೇದದ ಅಭಯ ವಾಣಿ.

ಈ ಎಲ್ಲ ಅಭಿಪ್ರಾಯಗಳನ್ನು ಧರ್ಮಾಚಾರದಲ್ಲಿ ನಿರತನಾದ ಮಾಹೇಶ್ವರಾಂಗನು ಮೈಗೂಡಿಸಿಕೊಂಡಿರುತ್ತಾನೆ.

"ಧರ್ಮ ಏವ ಸಮಸ್ತಾನಾಂ ಯತಃ ಸಂಸಿದ್ಧಿ ಕಾರಣಂ
ನಿಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂಚ ನ ತ್ಯಜೇತ್॥"

ಜ್ಞಾನಿ, ಅಜ್ಞಾನಿ, ಸಂಸಾರಿ, ಸಂನ್ಯಾಸಿ, ಬಡವ ಬಲ್ಲಿದ ಎಲ್ಲರಿಗೂ ಭೋಗ ಮೋಕ್ಷಗಳನ್ನು ಕೊಡಬಲ್ಲುದು ಧರ್ಮ. ಆದರಿಂದಾಗಿ ಎಲ್ಲರ ಅನುಷ್ಠಾನಕ್ಕೆ ಉಚಿತವಾಗಿದೆ ಧರ್ಮ. ವಿರಾಗಿಯಾದ ಮಹಾಯೋಗೀಶ್ವರನೂ ಸಹ ಧರ್ಮಾಚರಣೆಯನ್ನು ಬಿಡಕೂಡದು, ಬಿಟ್ಟರೆ ಆತನ ಆ ವಿರತಿಯೋಗ ಸಿದ್ಧಿಸದು.

"ಸ ಜೀವತಿ ಗುಣಾ ಯಸ್ಯ, ಧರ್ಮೋ ಯಸ್ಯ ಸ ಜೀವತಿ।
ಗುಣಧರ್ಮ ವಿಹೀನೋ ನಿಷ್ಫಲಂ ತಸ್ಯ ಜೀವನಂ ॥"

ಮಾನವ ಜೀವನವೆಂದರೆ ಗುಣಧರ್ಮಗಳು. ಇವಿಲ್ಲದ ಜೀವನ ಅದೊಂದು ಮೃತಜೀವನ, ಇವೆರಡರಲ್ಲಿಯೂ ಧರ್ಮವಿಲ್ಲದ ಗುಣ ನಿಷ್ಪ್ರಯೋಜನ. ಗುಣ ಧರ್ಮಾಚಾರದಲ್ಲಿ ಬಂದಾಗ ಪ್ರಯೋಜನವಾಗುತ್ತದೆ, ತಾನೂ ಬದುಕುತ್ತಾನೆ; ಜಗತ್ತು ಬದುಕುತ್ತದೆ. ಗುಣ ಮಲ್ಲಿಗೆ ಬಳ್ಳಿಯ ಎಲೆಯೊಳಗಿನ ಕಂಪು; ಧರ್ಮ ಹೂವಿನೊಳಗಿನ ಕಂಪು. ಗುಣ ಸಾಧನ; ಧರ್ಮ ಸಿದ್ಧಿ.

"ಶರ್ವರೀ ದೀಪಕಶ್ಚಂದ್ರಃ, ಪ್ರಭಾತೋ ದೀಪಕೋ ರವಿಃ।
ತ್ರೈಲೋಕ್ಯದೀಪಕೋ ಧರ್ಮಃ, ಸುಪುತ್ರಃ ಕುಲದೀಪಕಃ ॥"

ತಂಗದಿರನು ಇರುಳನ್ನು ಬೆಳಗುತ್ತಾನೆ. ನೇಸರನು ಹಗಲು ಬೆಳಗುತ್ತಾನೆ. ಒಳ್ಳೆಯ ಮಗನು ವಂಶವನ್ನು ಬೆಳಗುತ್ತಾನೆ. ಧರ್ಮವು ಮೂರು ಲೋಕವನ್ನು ಬೆಳಗುತ್ತದೆ. ಆದ್ದರಿಂದ ಧರ್ಮವು ಸರ್ವರ ಸಿದ್ಧಿಗೆ ಕಾರಣವಾಗಿದೆ; ಧರ್ಮದಲ್ಲಿ ಸರ್ವವೂ ಪ್ರತಿಷ್ಠಿತವಾಗಿದೆ ಎಂದು ರೇಣುಕ ಭಗವತ್ಪಾದರು ಬೋಧಿಸಿದ್ದಾರೆ. ಧರ್ಮ ಮಾರ್ಗವೇ ದಿವ್ಯ ಋತಪಥವೆಂದಿದ್ದಾರೆ.

ಯಾರೇ ಆಗಲಿ ವಿಷಯದಿಂದ ವಿರಕ್ತರಾದರೂ ವಿಶಾಲವಾದ ಧರ್ಮದಿಂದ ವಿರಕ್ತನಾಗಬಾರದು, ಧರ್ಮಶೂನ್ಯರಿಗೆ ಯಾವ ಸಿದ್ಧಿಯೂ ಉಂಟಾಗದು.

"ಕಃ ಕುಲಕಮಲದಿನೇಶಃ?–ಸತಿಗುಣವಿಭವೇಽಪಿ ಯೋ ನಮ್ರಃ।
ಕಸ್ಯವಶೇ ಜಗದೇತತ್?–ಪ್ರಿಯಹಿತವಚನಸ್ಯ, ಧರ್ಮನಿರತಸ್ಯ ॥"

ವಿನಯಾದಿ ಗುಣಸಂಪನ್ನನು ಕುಲದೀಪಕನಾದರೆ ಧರ್ಮನಿರತನು ಜಗತ್ಪಾಲಕನಾಗುತ್ತಾನೆ; ಜಗತ್ತೆಲ್ಲ ಧರ್ಮಿಯ ವಶದಲ್ಲಿರುತ್ತದೆ, ಧರ್ಮದ ಹಿರಿಮೆಯಿದು. ಧರ್ಮದಿಂದಾಗುವ ಸಿದ್ಧಿಗಳಿವು. ಜಾಗತಿಕ ಜೀವಿಯಾಗುವುದಕ್ಕಿಂತ ಬೇರೆ ಸಿದ್ಧಿಯಿಲ್ಲ; ಬೇರೆ ದಿವ್ಯತೆಯಿಲ್ಲ.

ಧರ್ಮವಿಡಿದು ಗುಣಗಳು ಬರುತ್ತವೆ. ಗುಣವಿಡಿದು ಧರ್ಮ ಬರುತ್ತದೆಂದು ಹೇಳಲು ಯೋಚಿಸಬೇಕಾಗುತ್ತದೆ. ಅನೇಕ ಜನ ಗುಣವಂತರು ಧರ್ಮಾ

ಚರಣೆಯಿಲ್ಲದೆ ಇರುವುದನ್ನು ಕಾಣಬಹುದು. ಅಂತೆಯೆ ನಿರಾಶೆಯಿಂದ ಚಿತ್ತ ನಿರೋಧದಿಂದ ಕೂಡಿರುವವರಲ್ಲದೆ ಧರ್ಮಶೀಲರಾಗಿರುವುದಿಲ್ಲ, ಇದರಿಂದ ನಿರಾಶೆಗೆ ನಿರೋಧಕ್ಕೆ ಅರ್ಥವತ್ತತೆ ಬರುವುದಿಲ್ಲ. ಇವುಗಳ ಜತೆಗೆ ಧರ್ಮಾಚರಣೆಯೂ ಇದ್ದುದಾದರೆ ಆಗ ವಿರತಿ ಯೋಗಗಳು ಅರ್ಥಪೂರ್ಣವಾಗುತ್ತವೆ; ಲೋಕದ ಜನರನ್ನು ತಿದ್ದಲು ಸಹಾಯಕವಾಗುತ್ತವೆ, ಲೋಕೋಪಕಾರವು ಘಟಿಸುತ್ತದೆ. ಕೇವಲ ವೈಯಕ್ತಿಕವಾದ ವಿರತಿಯೋಗಗಳು ಲೋಕದವರನ್ನು ಅಷ್ಟಾಗಿ ತಿದ್ದವು. ಆಚಾರದ ಅನುವು ಅಳವಡದೆ ಬರೀ ಗುಣಸಾಧನೆ ಮಾಡಿ ಸುಖವಿಲ್ಲ. ಆಶೆಯಿಲ್ಲದೆ ಮನದ ಹರಿದಾಟವಿಲ್ಲದೆ ಧರ್ಮವನ್ನು ಮಾಡಿದರೆ ಆದು ಮತ್ತೂ ಮೆರಗನ್ನುಂಟುಮಾಡುತ್ತದೆ.

> "ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್
> ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥"

ಗುಣಿಗೂ ಧರ್ಮ ಬೇಕು. ಅಂತೆಯೇ ಜ್ಞಾನಿಗೂ ಧರ್ಮ ಬೇಕು. ಇವರಾರೂ ಧರ್ಮಾಚರಣೆಗೆ ಹೊರಗಾಗಿ ಇರಬಾರದು. ಇದ್ದರೆ ಜನತಾ ಜಗದೀಶನಿಗೆ ದ್ರೋಹ ಬಗೆದಂತೆ! ಜನತೆಗೆ ದಾರಿ ತೋರದೆ ಸ್ವಾರ್ಥರಾಗಿ ಕಠಿಣಾತ್ಮರಾಗಿ ಬಾಳಿದಂತೆ!

ಯೋಗಿ ಜ್ಞಾನಾಮೃತದಿಂದ ತೃಪ್ತನಾಗಿದ್ದರೂ ಧರ್ಮಾಚರಣೆಯನ್ನು ಬಿಡಬಾರದು. ಹಿರಿಯರಂತೆ ಕಿರಿಯರು ನಡೆಯುವರು. ಹಿರಿಯರ ಆಚಾರವೇ ಕಿರಿಯರ ಬಾಳ ಬಟ್ಟೆಯ ಸೂಡರು. ಮಹಿಮರ ಆಚಾರವನ್ನು ನೋಡಿ ಮಾನವರು ನಡೆಯಬಲ್ಲರು. ಕೇವಲ ಜ್ಞಾನ ಅಂತರಂಗದ್ದು. ಅದು ನುಡಿಯಲ್ಲಿ ನಡೆಯಲ್ಲಿ ಬಾರದಿದ್ದರೆ ಅದರಿಂದ ಲೋಕಕ್ಕೆ ಏನೂ ಪ್ರಯೋಜನವಾಗದು. ಲೋಕ ಪ್ರಯೋಜನವಾಗದ ಬಳಿಕ ಅದನ್ನು ಗಳಿಸಿಯೂ ಪ್ರಯೋಜನವಿಲ್ಲ, ಅಷ್ಟೇ ಅಲ್ಲ ಅಂತಹ ಜ್ಞಾನ ತನ್ನನ್ನೂ ಸಹ ಉದ್ಧರಿಸದು.

"ಅರಿವು ಸಾಧ್ಯವಾಯಿತ್ತೆಂದು ಗುರುಲಿಂಗ ಜಂಗಮವ ಬಿಡಬಹುದೆ? ಅಖಂಡ ಜ್ಞಾನವಾಯಿತ್ತೆಂದು ಪರಧನ ಪರಸ್ತ್ರೀಗಳುಪಬಹುದೆ? 'ಯಂತ್ರಜೀವ

ಸ್ತತ್ರ ಶಿವಃ' ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ ಸೂಕರ ಕುಕ್ಕುಟ ಮಾರ್ಜಾಲಂಗಳ ಕೂಡ ಭುಂಜಿಸಬಹುದೆ ? ಭಾವದಲ್ಲಿ ತನ್ನ ನಿಜದ ನೆಲೆಯ ನರಿಯುವುತ್ತಿಹುದು. ಸುಜ್ಞಾನ ಸತ್ಕ್ರಿಯೆ ಸುನೀತಿ ಸುಮಾರ್ಗದಲ್ಲಿ ವರ್ತಿಸುವುದು. ಹಾಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದಹಾಗೆ ಮೀರಿ ನುಡಿದು ನಡೆದನಾದಡೆ ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೆ ಚೆನ್ನಮಲ್ಲಿಕಾರ್ಜುನನು ?"

ಅರಿವಿನ ಕಾರಣ ಆಚಾರ, ಕಿರಣವಿಲ್ಲದೆ ಕಾಂತಿ ಹಬ್ಬದು. ಜ್ಞಾನವೃಕ್ಷದ ಹಣ್ಣು ಧರ್ಮಾಚಾರ. ಇದಿಲ್ಲದೆ ರಸದ ಸವಿ ಸಿಕ್ಕದು. ಹಸಿವಾಗಿದೆಯೆಂದು ಅರಿವುಂಟಾದೊಡನೆ ಹಸಿವು ಹಿಂಗದು ; ಆರೋಗಣೆಯ ಕ್ರಿಯೆ ನಡೆದರೆ ಹಸಿವು ಹಿಂಗಿ ತೃಪ್ತಿಯಾಗುತ್ತದೆ, ಕತ್ತಲಲ್ಲಿ ಕುಳಿತು ಬೆಳಕನ್ನು ನೆನೆದರೆ ಕತ್ತಲು ಹೋಗದು. ಬೆಳಕಾಗುವ ಬೇಹಾರ ನಡೆಯಬೇಕು. ಅಂದರೆ ಸೊಡರನ್ನು ಅಂಟಿಸುವ ಕೆಲಸ ನಡೆಯಬೇಕು.

"ಕ್ರಿಯೆಯೆ ಜ್ಞಾನ ; ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು ; ಕ್ರಿಯೆಯೆಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ ; ಅದರಂತೆ ಆಚರಿಸುವುದೇ ಕ್ರಿಯೆ. ಅಂತು ಆಚರಿಸದಿದ್ದರೆ ಅದೇ ಅಜ್ಞಾನ ಕಾಣಾ ಕೂಡಲ ಚನ್ನಸಂಗಮದೇವಾ"

"ಗುರುವಿಗಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು,
ಲಿಂಗಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು.
ಜಂಗಮಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು.
ಅದೇನು ಕಾರಣವೆಂದರೆ ಅರುಹು ಆಚಾರ ಸತ್ಕ್ರಿಯೆ
ಸನ್ನಿಹಿತ ಶಿವನಿಪ್ಪನಾಗಿ ! ಅರುಹುಗೆಟ್ಟು ಆಚಾರದಪ್ಪಿ
ಸತ್ಕ್ರಿಯೆ ಹೀನರಾಗಿಪ್ಪರು ಸಲ್ಲರಯ್ಯ ಶಿವಪಥಕ್ಕೆ !"

ಹೀಗಿರುವಾಗ ಯಾರಿಗೆ ಧರ್ಮಾಚಾರ ಬೇಡ ? ಜ್ಞಾನಿಗೂ ಬೇಕು. ಯೋಗಿಗೂ ಬೇಕು. ನಿಷ್ಕಾಮಿಗೂ ಬೇಕು. ಹೆಚ್ಚೇನು ? ಎಲ್ಲರಿಗೂ ಬೇಕು. ಅದು ಎಲ್ಲರ ಜೀವಾಳ, ಅದು ಎಲ್ಲರ ಬಾಳನ್ನು ಹಸನಾಗಿ ರೂಪಿಸುತ್ತದೆ.

ಅದಕ್ಕಿಂತ ಹೆಚ್ಚಿನದು ಇನ್ನಿಲ್ಲ. ಸರ್ವರನ್ನು ಶಿವಪಥದಲ್ಲಿ ನಡೆಯಿಸುವ ಚೇತನ ಧರ್ಮ, ಶಿವಪಥಕ್ಕೆ ಸಲ್ಲುವಂತೆ ಮಾಡುವುದು ಧರ್ಮ, ಇಲ್ಲಿ ಶಿವಪಥವೆಂದರೆ ಋತಮಾರ್ಗವೆಂದು ಅರ್ಥ.

"ಸದಾಚಾರಪ್ರಿಯಶ್ಶಂಭುಃ ಸದಾಚಾರೇಣ ಪೂಜ್ಯತೇ ।
ಸದಾಚಾರಂ ವಿನಾ ತಸ್ಯ ಪ್ರಸಾದೋ ನೈವ ಜಾಯತೇ ॥"

ಶಿವನು ಸದಾಚಾರಪ್ರಿಯನು- ಶಿವನಿಗೆ ಸದಾಚಾರವೇ ಪೂಜೆ. ಶಿವ ಪ್ರಸಾದವು ಸದಾಚಾರವಿಲ್ಲದೆ ಸಮನಿಸದು.

ಸತ್‌ಸ್ವರೂಪನು ಶಿವನು, ಸದಾ ಯಾವಾಗಲೂ ಶಿವನು ಅಂದರೆ ಮಂಗಲ ಸ್ವರೂಪನು. ಶಿವನೆಂದರೆ ಮಂಗಲಾಚಾರ. ಮಂಗಲಾಚಾರ ಸ್ವರೂಪನು ಶಿವನು. ಸದಾಚಾರಶೀಲರಿಗೆ ಸುಖಪ್ರದನು, ಆ ಶಿವನಿಗೆ ಬೇರೆ ಜಲ ಫಲಾದಿ ಉಪಚಾರಗಳಿಗಿಂತ ಸದಾಚಾರರೂಪ ಉಪಚಾರವೇ ಪ್ರಿಯವಾದ ಪೂಜೆ. ಸದಾಚಾರವಿಲ್ಲದವರಿಗೆ ಆತನ ಕರುಣೆ ಕೈಗೂಡದು.

"ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ.
ಅವರಾರಾಧನೆ ದಂಡ, ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ.
ಕೂಡಲಸಂಗಮದೇವ ಭೂಭಾರಕರನು"

ಮೇಲಿನ ಶ್ಲೋಕಾರ್ಥವೇ ಈ ವಚನದಲ್ಲಿ ವ್ಯಕ್ತವಾಗಿದೆ."

"ದೇವಂಗಾಗಲಿ ಭಕ್ತಂಗಾಗಲಿ ಲಿಂಗಕ್ಕಾಗಲಿ ಜಂಗಮಕ್ಕಾಗಲಿ ಸದಾಚಾರ ಬೇಕಲ್ಲದೆ, ಆ ಸದಾಚಾರವುಳ್ಳವರಿಗೆ ಅನಾಚಾರ ಹೊದ್ದಲಾಗದು, ಅನಾಚಾರ ವೆಂದೊಡೆ ಅನಾಯತ. ಅನಾಯತವೆಂದೊಡೆ ಅನುಸರಣೆ. ಅನುಸರಣೆ ಎಂಬುದೆ ಅಂಗದಿಚ್ಛೆ. ಅಂಗದಿಚ್ಛೆಯೆಂಬುದೆ ಅನಾಚಾರ. ಅನಾಚಾರ ವೆಂಬುದೇ ಪಂಚಮಹಾಪಾತಕ, ಇದು ಕಾರಣವಾಗಿ ಕೂಡಲ ಚನ್ನಸಂಗಯ್ಯ ನಲ್ಲಿ ಆಚಾರವಂತನೆನಿಸಿಕೊಂಡ ಬಳಿಕ ಅನಾಚಾರಕ್ಕೆ ಅನುಸರಣೆಯ ಮಾಡಿದರೆ, ಆಚಾರಭ್ರಷ್ಟರಿಗೆ ಅನುಸರಿಸಿ ನಡೆದೊಡೆ ಅಘೋರ ನರಕ ತಪ್ಪದು ನೋಡಿರೇ!"

ಎಂದು ಚನ್ನಬಸವಣ್ಣನವರು ಸದಾಚಾರ ಸರ್ವರಿಗೆ ಬೇಕೆಂದು ಅನಾಚಾರವಿರಬಾರದೆಂದು ಹೇಳಿ ಅನಾಚಾರದ ಅರ್ಥ ವಿಶ್ಲೇಷಣವನ್ನು ವಿವರವಾಗಿ ವಿಚಾರ ಪೂರ್ಣವಾಗಿ ಮಾಡಿದ್ದಾರೆ. ಮತ್ತು ಅನಾಚಾರಕ್ಕೊಳಗಾದರೆ ಅನಾಚಾರಿಗಳೊಡನೆ ಅನುಸರಿಸಿ ನಡೆದರೆ ಆಗುವ ದುಷ್ಫಲವನ್ನೂ ಹೇಳಿದ್ದಾರೆ. ಆಚಾರ ಭ್ರಷ್ಟನಾಗುವುದು ಅತ್ಯಂತಹ್ಯೇಯು, ಆಚಾರವೇ ಆರಾಧಕನಿಗೆ ಆದಿ ಧರ್ಮ.

"ಸತ್ಯವ ನುಡಿಯದ, ಸದಾಚಾರದಲ್ಲಿ ನಡೆಯದ,
ಸದ್ಭಕ್ತಿಯ ಹಿಡಿಯದ, ನಿಜಮುಕ್ತಿ ಪಡೆಯದ.
ಸತ್ಕ್ರಿಯೆ ವಶವಾಗದ, ಸಮ್ಯಕ್‌ಜ್ಞಾನವ ಮುಟ್ಟದ
ಜನ್ಮವ ಸುಡು ಸುಡು. ಈ ವೇಷದ ಭಾಷೆಯ ನೋಡಿ
ಗುಹೇಶ್ವರ, ಲಿಂಗದಲ್ಲಿ ನಗುತ್ತಿದಾನೆ ಕಾಣಾ ಚನ್ನಬಸವಣ್ಣ"

"ಸದ್ಭಕ್ತಿ ಸದಾಚಾರವಿಲ್ಲದ ಗುರುತ್ವ ಉಂಟೇನೋ ಮರುಳೆ ?
ಸದ್ಭಕ್ತಿ ಸದಾಚಾರವಿಲ್ಲದ ನಿಜಲಿಂಗ ಉಂಟೇನೋ ಮರುಳೆ ?
ನಿಜ ಜಂಗಮ ಉಂಟೇ ? ಶರಣತ್ವ ಉಂಟೆ ?
ಗುಹೇಶ್ವರ ಲಿಂಗದ ಸದಾಚಾರ ಸದ್ಭಕ್ತಿಯಿಂದಲ್ಲದೆ
ಮುಕ್ತಿಯಿಲ್ಲ ನೋಡಾ ಚನ್ನಬಸವಣ್ಣ !"

ಸದಾಚಾರದ ಶ್ರೇಷ್ಠತೆಯನ್ನು ಸರ್ವರಿಗೆ ಅದರ ಅವಶ್ಯಕತೆಯನ್ನು ಪ್ರಭುದೇವ ಚನ್ನಬಸವಣ್ಣರಿಬ್ಬರು ಸೊಗಸಾಗಿ ಸಾರಿದ್ದಾರೆ.

ಸದಾಚಾರದಿಂದ ವರ್ತನ ವಿಕೃತಿಭಾವ ತೊಲಗುತ್ತದೆ. ವರ್ತನ ವಿಕೃತಿ ಭಾವವು ದುರ್ಭಾವತ್ರಯಗಳಲ್ಲಿ ಒಂದು. ಎರಡನೆಯದು ಮೋಹನ ವಿಕೃತಿ ಭಾವ. ಮೂರನೆಯದು ಜ್ಞಾನ ವಿಕೃತಿಭಾವ. 'ಜಡಾಜಡ ಮಿಶ್ರದಿಂ ದೇಹದಿ ನಾನಾ ಪ್ರಕಾರದಿಂದಂಡಲೆದು ದುರ್ವ್ಯವಹರಿಸುತ್ತಿಹನಾಗಿ ವರ್ತನ ವಿಕೃತಿಭಾವ,' ಅಥವಾ 'ಸದಾಚಾರ ಸನ್ಮಾರ್ಗ ಸದ್ವರ್ತನೆಗಳೆಲ್ಲ ವಿಕರಿಸಿ ಕೆಟ್ಟು ದುರಾಚಾರ ದುರ್ಮಾರ್ಗ ದುರ್ವತನೆಗೊಳಗಾದುದೇ ವರ್ತನ ವಿಕೃತಿಭಾವ,' ಎಂದು ವಚನ ಶಾಸ್ತ್ರಸಾರ ಭಾಗ ಎರಡರಲ್ಲಿ ಉಕ್ತವಾಗಿದೆ. ಈ ದುರ್ಭಾವ

ದೂರಾಗಬೇಕಾದರೆ ಧರ್ಮಾಚಾರ ತೀರ ಅಗತ್ಯ. ಈ ಧರ್ಮಾಚಾರದಿಂದ ಪ್ರವರ್ತನ ಸದ್ಭಾವವುಂಟಾಗುತ್ತದೆ. ಸದ್ಭಾವತ್ರಯದಲ್ಲಿ ಪ್ರವರ್ತನ ಸದ್ಭಾವವೂ ಒಂದು. ಮೋಹನ ಸದ್ಭಾವ ಇನ್ನೊಂದು. ಪ್ರಕಾಶನ ಸದ್ಭಾವ ಮತ್ತೊಂದು. ಹೀಗೆ ಸದ್ಭಾವತ್ರಯಗಳಿವೆ. ಇವುಗಳಲ್ಲಿ "ಸತ್ಯ ಸದಾಚಾರ ಸನ್ಮಾರ್ಗ ಸದ್ವರ್ತನವಿಡಿದು ನಡೆವುದೇ ಪ್ರವರ್ತನವೆಂಬ ಸದ್ಭಾವವು.'–'ವಚನ ಶಾಸ್ತ್ರಸಾರ' ಭಾಗ ೨ರಲ್ಲಿ ಉಕ್ತವಾಗಿದೆ. ಈ ತ್ರಿವಿಧ ಸದ್ಭಾವವಿಲ್ಲದೆ ಸದ್ಧರ್ಮಾಚರಣೆ ಸಮನಿಸದು. ಸದ್ಧರ್ಮ ಸಮನಿಸದೆ ಸುಪ್ರಸನ್ನತೆಯುಂಟಾಗದು.

# ಭಾವಾಚಾರ ಸ್ಥಳ

ಧಾರ್ಮಿಕನೆನಿಸಲು ಧರ್ಮಾಚಾರ ಆವಶ್ಯಕ. ಭಾವಿಕನೆನಿಸಲು ಭಾವಾಚಾರ ಆವಶ್ಯಕ. ಧರ್ಮಕ್ಕೆ ಮುಖ್ಯವಾಗಿ ಸ್ಥೂಲತನು ಆಶ್ರಯ. ಭಾವಕ್ಕೆ ಸೂಕ್ಷ್ಮತನು ಆಶ್ರಯ. ಭಾವ ಕರಣವೆ ? ಕಾರ್ಯವೆ? ಎರಡೂ ಆಗುತ್ತದೆ. ಭಾವವೆಂದರೆ ಚಿತ್ತವೂ ಅಹುದು ; ಚಿತ್ತವೃತ್ತಿಯೂ ಅಹುದು. ಭಾವಿಕನೆಂದರೆ ಹೃದಯವುಳ್ಳವನು ಮತ್ತು ಭಕ್ತಿಭಾವನಾವಶನು ಎಂದು ಅರ್ಥ.

ಭಾವ ಶಬ್ದಕ್ಕೆ ಅಂತಃಕರಣ, ಅಭಿಪ್ರಾಯ, ತಾತ್ಪರ್ಯ, ಇರುವಿಕೆ, ಅಂತಃಕರಣದ ಅವಸ್ಥೆಯನ್ನು ಹೊರಗೆಡುವಿಕೆ, ಉದ್ದೇಶ, ಯೋಚನೆ, ವಿಚಾರ ಮುಂತಾದ ಅರ್ಥಗಳಿವೆ.

ಭಾವನೆ ಅಂತಃಕರಣ ಧರ್ಮವಾಗುತ್ತದೆ. ಭಾವವೆಂಬ ಅಂತಃಕರಣವು ಭಾವನೆಯನ್ನು ಭಾವನೆಯಿಂದ ಕೂಡಿದ ವಸ್ತುವನ್ನು ವಿಷಯವನ್ನಾಗಿಸಿಕೊಳ್ಳುತ್ತದೆ. ನಿದರ್ಶನದಿಂದ ನೋಡೋಣ: ಶಬ್ದ ಶ್ರವಣೇಂದ್ರಿಯಕ್ಕೆ ವಿಷಯ. ಆ ಶಬ್ದದ ಅಭಿಪ್ರಾಯ, ಆ ಅಭಿಪ್ರಾಯಕ್ಕೆ ಆಶ್ರಯವಾದ ವಸ್ತು ಇವೆರಡು ಭಾವವೆಂಬ ಅಂತಃಕರಣಕ್ಕೆ ವಿಷಯ. ಇದರಿಂದಾಗಿ ಸುಶಬ್ದಶ್ರವಣ ಶ್ರೋತ್ರೇಂದ್ರಿಯ ಧರ್ಮಾಚಾರವೆನಿಸಿದರೆ, ಆ ಸುಶಬ್ದದ ಅರ್ಥವನ್ನು ಗ್ರಹಿಸುವುದು ಜ್ಞಾನಾಚಾರ, ಮತ್ತು ಅರ್ಥಕ್ಕೆ ಆಶ್ರಯವಾದ ವಸ್ತುವನ್ನು ತನ್ನಲ್ಲಿರಿಸಿಕೊಳ್ಳುವುದು ಭಾವಾಚಾರ. ಇದರಂತೆ ಉಳಿದವುಗಳನ್ನೂ ಅರಿಯಬೇಕು. ಈ ವಿವರಣೆಯಿಂದ ಧರ್ಮಾಚಾರ, ಭಾವಾಚಾರ-ಜ್ಞಾನಾಚಾರಗಳ ವಿಕೇಂದ್ರೀಕರಣ—ಕೇಂದ್ರೀಕರಣವೆರಡೂ ಅರ್ಥವಾಗುತ್ತದೆ.

ಅಂತಃಕರಣಗಳು ಅಪಂಚೀಕೃತ ಭೂತ ಕಾರ್ಯಗಳು. ಬಾಹ್ಯೇಂದ್ರಿಯಗಳು ಪಂಚೀಕೃತ ಭೂತಕಾರ್ಯಗಳು. ಪಂಚತನ್ಮಾತ್ರಗಳು ಪಂಚಜ್ಞಾನೇಂದ್ರಿಯಗಳಿಗೆ ವಿಷಯಗಳು. ಪಂಚಜ್ಞಾನೇಂದ್ರಿಯಗಳು ಅಂತಃಕರಣಗಳಿಗೆ ವಿಷಯಗಳು, ಅಂತಃಕರಣಗಳು ಚೇತನಕ್ಕೆ ವಿಷಯಗಳು. ವಿಷಯಕ್ಕೆ ಇಂದ್ರಿಯ,

ಇಂದ್ರಿಯಕ್ಕೆ ಅಂತಃಕರಣ, ಅಂತಃಕರಣಕ್ಕೆ ಆತ್ಮ ಆಶ್ರಯವಾಗಿವೆ. ಈ ದೃಷ್ಟಿಯಿಂದಲೂ ಭಾವಕ್ಕೆ ಆಶ್ರಯತ್ವ—ವಿಷಯತ್ವ ಎರಡು ಧರ್ಮಗಳೂ ಉಂಟು. ಭಾವ ಅಂತಃಕರಣ; ಭಾವಾಚಾರ ಅದೊಂದು ಅಂತಃಕರಣ ವೃತ್ತಿ. ಭಾವಾಚಾರವಿಲ್ಲದೆ ಸತ್ತಾ ಭಾವವೇ ಇಲ್ಲ.

ಧರ್ಮಾಚಾರದಿಂದ ಅಧರ್ಮ ತೊಲಗುವಂತೆ ಭಾವಾಚಾರದಿಂದ ಅಭಾವ ತೊಲಗುತ್ತದೆ. ಅಂದರೆ ಆಶ್ರಯರಹಿತವಾಗಿ ಅಗೋಚರವಾಗುತ್ತದೆ. ಅಂತಾದಾಗ ಅದರ ಪರಿಣಾಮವುಂಟಾಗದು.

ಧಾರ್ಮಿಕನ ಧರ್ಮಾಭಿಪ್ರಾಯ ಉಳಿದವರಿಗೆ ಭಾವಾಚಾರವಾಗಿ ಪರಿಣಮಿಸಬಲ್ಲುದು ; ಪರಿಣಮಿಸುತ್ತದೆ. ಇದೇ ಅಭಿಪ್ರಾಯವನ್ನು ಜಗದ್ಗುರು ರೇಣುಕರು ಮುಂದೆ ನಿರೂಪಿಸುತ್ತಿದ್ದಾರೆ :

"ಭಾವ ಏವಾಸ್ಯ ಸರ್ವೇಷಾಂ ಭಾವಾಚಾರಃ ಪ್ರಕೀರ್ತಿತಃ ।
ಭಾವೋ ಮಾನಸ ಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯಃ ॥"

ಎಲ್ಲೆಲ್ಲಿಯೂ ತೆರಹಿಲ್ಲದೆ ತುಂಬಿರುವ ಶಿವನೇ ಆಶ್ರಯವಾಗಿರುವ ಮನದ ವ್ಯಾಪಾರ (ವೃತ್ತಿ)ವೇ ಭಾವ. ಧರ್ಮಾಚಾರ ನಿರತನ ಆ ಭಾವವೇ ಉಳಿದವರಿಗೆ ಭಾವಾಚಾರ.

ಭಾವಾಚಾರದೊಳಗಿನ ಭಾವಪದ ವೃತ್ತಿಸೂಚಕ. ಆ ಅಂತಃಕರಣ ವೃತ್ತಿಯು ಶಿವಾಶ್ರಯವಾಗಿ ಆಚಾರವೆನಿಸುತ್ತದೆ. ಧರ್ಮಿಯ ಅಂತಃಕರಣ ವೃತ್ತಿ ಶಿವಾಕಾರವಾಗಿ ಅದು ಅಭಿಪ್ರಾಯರೂಪದಲ್ಲಿ ಆಚಾರ ರೂಪದಲ್ಲಿ ಹೊರಹೊಮ್ಮಲು ಜಗತ್ತಿನ ಜನತೆಗೆ ಭಾವಾಚಾರವಾಗಿ ಪರಿಣಮಿಸುವುದು.

ಭಾವಶುದ್ಧಿಯೇ ಶುದ್ಧಿ, ಪೂರ್ಣ ಶಿವಭಾವನೆಯಿಂದ ಭಾವ ಶುದ್ಧವಾಗುತ್ತದೆ. ಆ ಶುದ್ಧ ಭಾವದಲ್ಲಿ ಮಲಿನ ಗುಣಗಳಿಗೆ ಅವಕಾಶವಿರದು. ಕಾಮ ಕ್ರೋಧಾದಿಗಳಿಗೂ ರಜತಮೋ ಗುಣಗಳಿಗೂ ತಾವಿರುವುದಿಲ್ಲ, ಇವಿಲ್ಲದಾಗ ಭಾವನೆಗಳು ಶಿವವಾಗುತ್ತವೆ. ಆ ಶಿವ ಸ್ವರೂಪವನ್ನು ಗ್ರಹಿಸಲು ಭಾವಕ್ಕೆ ಬಲಬರುತ್ತದೆ.

"ನೆನೆ ನೆನೆದು ಮನ ಘನವೇಧಿಸಿತ್ತು.
ಕಂಡು ಕಂಡು ಮನ ಡಾವರಿಸಿತ್ತು. ತತ್ತಲ್ಲೀಯವಾಯಿತ್ತು.
ತದುಗತ ಶಬ್ದ ಮುಗ್ಧವಾಯಿತ್ತು. ಎತ್ತಣ ಗುಹೇಶ್ವರ
ನೆಂದರಿಯದೆ ಉಭಯಲಿಂಗ ಒಳಕೊಂಡಿತ್ತು."

ಶಿವಸ್ವರೂಪವಾಗುವ ಶಕ್ತಿ ಭಾವಕ್ಕಿದೆ. ಹಾಗಾಗಲು ಭಾವ ಸಾಧನ ಭಾವಾಚಾರ. ಧ್ಯಾನ ಧ್ಯಾತೃಧ್ಯೇಯ ಈ ತ್ರಿಪುಟಿ ಸಂಪುಟವಾಗಿ ಧ ನಿಸುವ ಮನದಲ್ಲಿ ಘನ ವೇಧಿಸುವುದು. ವೇದಿಸಿ ಸಮರಸಗೊಳ್ಳುವುದು. ಅಲ್ಲಿಗೆ ಶಬ್ದ ಮುಗ್ಧವಾಗುವುದು. ಅಂತಃಕರಣ ಪರಿಪಾಕಗೊಂಡಾಗ ಆತ್ಮ ಪರಮಾತ್ಮ ನಲ್ಲಿ ಅಂದರೆ ಕ್ರಿಯಾಲಿಂಗ ಭಾವಲಿಂಗದಲ್ಲಿ ಬೆರದೇಕವಾಗುತ್ತದೆ, ಭಾವಲಿಂಗ ವಾಗಲು ಭಾವಾಚಾರ ಬೇಕು. ಭಾವಾಚಾರದಿಂದ ಭಾವಾಭಾವಗಳ ಮಧ್ಯದಲ್ಲಿ ಸದ್ಭಾವಸಮನಿಸುತ್ತದೆ.

"ಭಾವನಾ ವಿಹಿತಂ ಕರ್ಮ ಪಾವನಾದಪಿ ಪಾವನಂ ।
ತಸ್ಮಾದ್ಭಾವನಯಾ ಯುಕ್ತಂ ಪರಧರ್ಮಂ ಸಮಾಚರೇತ್ ॥"

ಭಾವನೆಯುಳ್ಳ ಕ್ರಿಯೆ ಪಾವನಕ್ಕೆ ಪಾವನ. ಕಾರಣ ಭಾವನೆಯಿಂದ ಕೂಡಿ ಪರಶಿವ ಧರ್ಮವನ್ನು ಆಚರಿಸಬೇಕು.

ಆಲೋಚಿಸಿ ಆಸಕ್ತಿ ವಹಿಸಿ ವಿಹಿತವಾದ ಕ್ರಿಯೆಯನ್ನು ಆಚರಿಸುವುದೇ ಪರಮ ಪಾವನ. ಅಪರ ಧರ್ಮದಲ್ಲಿ ಆಸಕ್ತಿ ವಹಿಸಬಾರದು, ವಹಿಸಿದರೆ ಅಭಾವಕ್ಕೊಳಗಾಗಬೇಕಾಗುತ್ತದೆ.

ಇಲ್ಲಿ ಪ್ರಯೋಗಿಸಿದ ಪರಧರ್ಮ ಪದ ವಿಶಿಷ್ಟಾರ್ಥವುಳ್ಳದು. ಪರಧರ್ಮ ಪದ ಕೆಲವು ಕೃತಿಗಳಲ್ಲಿ ಉಪಯುಕ್ತವಾಗಿ ತನ್ನ ಹಿರಿಮೆಯನ್ನು ಕಳೆದುಕೊಂಡಿದೆ. ಪರ ಪದಕ್ಕೆ ಮುಖ್ಯವಾಗಿ ಅನ್ಯ ಅನನ್ಯ (ಶ್ರೇಷ್ಠ ಅಥವಾ ಏಕೈಕ) ಎಂದು ಎರಡರ್ಥಗಳಿವೆ. ಇಲ್ಲಿನ ಪರ ಪದಕ್ಕೆ ಅನನ್ಯ, ಶ್ರೇಷ್ಠ, ಏಕೈಕ ಎಂಬ ಅರ್ಥ ಗಳೇ ಮುಖ್ಯವಾಗಿವೆ. ಭಾವಿಕನು ಅನನ್ಯ ಧರ್ಮವನ್ನು ಉತ್ತಮೈಕ ಧರ್ಮ ವನ್ನು ಆಚರಿಸಬೇಕು. ಪರಧರ್ಮವೇ ಭಾವಿಕನ ಜೀವನ ಜೀವಾಳ;

"ಮಾಘ ಮಾಸದ ನವಿಲೆಯಂತೆ ಆದೆ ನೋಡವ್ವಾ !
ಇರುಳು ತೊಳಲುವ ಜಕ್ಕವಕ್ಕಿಯಂತೆ ಹಲಬುತಿರ್ದೆ ನೋಡವ್ವಾ !
ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ ನೋಡವ್ವಾ !
ಮಹಾಲಿಂಗ ಗಜೇಶ್ವರನ ಅನುಭಾವ ಸಂಬಂಧಿಗಳ ಬರವು
ಎನ್ನ ಪ್ರಾಣದ ಬರವು ನೋಡವ್ವಾ !"

ಆ ಪರಧರ್ಮದ ವಿಷಯದಲ್ಲಿ ಎಂತಹ ಭಾವಾಸಕ್ತಿಯಿದೆ ಈ ವಚನ ಕರ್ತನಲ್ಲಿ ! ಇಲ್ಲಿ ಮಹಾಲಿಂಗವೇ ಪರವಸ್ತು. ಅದರ ಅನುಭವವೇ ಧರ್ಮ. ಅಥವಾ ಆ ಅನುಭವವುಳ್ಳವರ ಬರುವಿಕೆಯೇ ಧರ್ಮ. ಅದನ್ನೇ ಆಶಿಸುವುದೇ ಆಚಾರ. ಅಂತಹ ಪರಧರ್ಮಾಚಾರದಲ್ಲಿ ಪ್ರಾಣವನ್ನಿರಿಸಿಕೊಂಡಿದಾನೆ ಈ ವಚನ ರಚಿಸಿದ ಶರಣ. ಈ ಭಾವನೆಯಿಲ್ಲದೆ ಭಾವಕ್ರಿಯೆ ಪರಿಶುದ್ಧವಾಗದು.

ದುರ್ಭಾವತ್ರಯದಲ್ಲಿ ಮೋಹನ ವಿಕೃತಿಭಾವವು ಎರಡನೆಯದು. ಇದು ಮಮಕಾರ ಅಹಂಕಾರಗಳಿಂದ ಉಂಟಾಗುತ್ತದೆ.

'ನಿಜವ ಮರೆದು ಜಡಭಾವದಿಂದ ಅಹಂಕಾರ ಭಾವವನೊಮ್ಮೆಯೂ ಬಿಡದಿಪ್ಪ ಕಥನದಿಂ ಮೋಹನ ವಿಕೃತಿಭಾವ.' ಅಥವಾ 'ತಮ್ಮ ಕುಲಗುರು ಇಷ್ಟದೈವದ ಮೇಲಣ ಮಮಕಾರವೆಲ್ಲ ವಿಕರಿಸಿ ಕೆಟ್ಟು ದುರ್ಮಾರ್ಗದೊಳಗಾದುದೇ ಮೋಹನ ವಿಕೃತಿಭಾವ ಎಂದು 'ವಚನ ಶಾಸ್ತ್ರಸಾರ' ಭಾಗ ಎರಡರಲ್ಲಿ ಹೇಳಿದೆ. ಈ ಮೋಹನ ವಿಕೃತಿ ಭಾವವು ತೊಲಗಬೇಕಾದರೆ ತೊಲಗಿ ಭಾವ ಪಾವಿತ್ರತೆ ಬರಬೇಕಾದರೆ ಜಗದ್ಗುರು ರೇಣುಕಾಚಾರ್ಯರು ಅಪ್ಪಣೆ ಕೊಡಿಸುವಂತೆ ಭಾವ ಭರಿತವಾದ ಪರಧರ್ಮಾಚಾರದಲ್ಲಿ ನಿರತರಾಗದೆ ಬೇರೆ ಮಾರ್ಗವಿಲ್ಲ.

"ಭಾವೇನ ಹಿ ಮನಶ್ಶುದ್ಧಿರ್ಭಾವಾತ್ಸಿದ್ಧಿಶ್ಚ ಕರ್ಮಣಾಂ ॥
ಇತಿ ಸಂಚಿಂತ್ಯ ಮನಸಾ ಯೋಗೀ ಭಾವಂ ನ ಸಂತ್ಯಜೇತ್ ॥"

ಭಾವದಿಂದ ಮನದ ಶುದ್ಧಿ; ಮತ್ತು ಕರ್ಮಗಳ ಸಿದ್ಧಿ. ಇದನರಿತು ಯೋಗಿಯು ಭಾವವನ್ನು ಬಿಡಬಾರದು

ಭಾವ ಶುದ್ಧಿಯಾದರೆ ಅದನ್ನು ಸದ್ಭಾವವೆಂದು ಹೇಳುತ್ತಾರೆ. ಸದ್ಭಾವ ತ್ರಯದಲ್ಲಿಮೋಹನ ಸದ್ಭಾವವೂ ಒಂದು. ನಿರಿಚ್ಛೆಯಿಂದ ಪರಮಾತ್ಮನಲ್ಲಿ ಮೋಹ ಇಡುವುದೇ ಮೋಹನ ಸದ್ಭಾವವು.' ಎಂದು ವಚನಶಾಸ್ತ್ರಸಾರ ಭಾಗ ಎರಡರಲ್ಲಿ (ಪುಟ–೧೧೩) ಹೇಳಿದೆ. ಭಾವ ಶುದ್ಧಿಯಿಲ್ಲದೆ ಕ್ರಿಯೆ ಸಿದ್ಧಿಸದು. ಕ್ರಿಯೆಯ ಸಿದ್ಧಿಗೆ ಭಾವಶುದ್ಧಿ ಮೂಲ. ಭಾವಶುದ್ಧಿಗೆ ಭಾವನೆಯು ಶಿವನಿಷ್ಠವಾಗುವುದು ಅತ್ಯಗತ್ಯ.

"…. …ಮದ ಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೋ?
ಹದುಳಿಗರಾದಲ್ಲಿಪ್ಪ ಕೂಡಲ ಸಂಗಮದೇವ."

"……..ತನುವಿನೊಳಗೆ ಹುಸಿ ತುಂಬಿ, ಮನದೊಳಗೆ
ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ
ಕೂಡಲಸಂಗಮದೇವ." "ಮರಹು ಘನ ; ನಿಮ್ಮ
ನೆನೆವು ಮನ ಕಿರಿದೆನ್ನಬಹುದೆ ? ಬಾರದಯ್ಯ ಕೂ. ಸಂ. ದೇವಾ।"

ಈ ಮೂರು ಮಾತಂಗಳಿಂದ ಮನದ ಶುದ್ಧಿ ಮುಖ್ಯ. ಶುದ್ಧ ಭಾವದಲ್ಲಿ ದೈವೀಭಾವವುಂಟಾಗಬಲ್ಲುದು. ಇಲ್ಲವಾದರೆ ಇಲ್ಲ. ಶಿವಭಾವ ಶಿವ ಚಿಜ್ಜ್ಯೋತಿಗಳುಳ್ಳ ಮನ ಸಣ್ಣದಲ್ಲ ಎಂಬುದು ಮನವರಿಕೆಯಾಗುತ್ತದೆ.

ಶುಭ ಸಂಸ್ಕಾರದಿಂದ ಹೃದಯ ತಿಳಿಗೊಳ್ಳುತ್ತದೆ. ಹೃದಯ ತಿಳಿಯಾದರೆ ಸತ್ಕ್ರಿಯೆಗಳಲ್ಲಿ ಪ್ರೇರಣೆಯುಂಟಾಗುತ್ತದೆ. ಭಾವಶುದ್ಧಿಯಿಂದ ಮಾಡುವ ಸತ್ಕ್ರಿಯೆಗಳು ಬೇಗ ಸಿದ್ಧಿಪ್ರದವಾಗುತ್ತವೆ.

"ಶಿವಭಾವನಯಾ ಸರ್ವಂ ನಿತ್ಯನೈಮಿತ್ತಿಕಾದಿಕಂ ।
ಕುರ್ವನ್ನಪಿ ಮಹಾಯೋಗಿ ಗುಣದೋಷೈರ್ನ ಬಾಧ್ಯತೇ ॥"

ನಿತ್ಯ ನೈಮಿತ್ತಿಕ ಮೊದಲಾದ ಎಲ್ಲ ಕರ್ಮಗಳನ್ನು ಶಿವ ಭಾವನೆಯಿಂದ ಮಾಡುವ ಮಹಾ ಯೋಗಿಗೆ ಯಾವ ಗುಣ ದೋಷಗಳಿಲ್ಲ ; ಗುಣ ದೋಷಗಳ ಬಾಧೆಯೂ ಇಲ್ಲ. ಗುಣಗಳಿಂದೊದಗುವ ಪುಣ್ಯವಿಲ್ಲ ; ದೋಷಗಳಿಂದೊದಗುವ ಪಾಪವಿಲ್ಲ.

ಕರ್ಮ ವಿಹಿತ, ನಿಷಿದ್ಧವೆಂದು ಇಬ್ಬಗೆ. ನಿಗಮಾಗಮಗಳಲ್ಲಿ ಹೇಳಿದವು

ಗಳು ವಿಹಿತ ಕರ್ಮಗಳು; ನಿಗಮಾಗಮಗಳು ಒಪ್ಪದಿರುವವುಗಳು ನಿಷಿದ್ಧ ಕರ್ಮಗಳು.

ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ ಎಂದು ವಿಹಿತ ಕರ್ಮಗಳು ನಾಲ್ಕು ಬಗೆ. ಪ್ರತಿದಿನವೂ ಮಾಡುವ ಸ್ನಾನ, ಶಿವಪೂಜಾದಿಗಳು ನಿತ್ಯ ಕ್ರಿಯೆಗಳು. ಇವನ್ನು ಮಾಡಿದರೆ ಪುಣ್ಯವಿಲ್ಲ. ಮಾಡದಿದ್ದರೆ ಪಾಪ. ಕೆಲವು ನಿಮಿತ್ತಗಳಿಂದ ಮಾಡುವ ಕರ್ಮಗಳು ನೈಮಿತ್ತಿಕ ಕರ್ಮಗಳು ನಿಮಿತ್ತವೆಂದರೆ ಕಾರಣ, ಉದ್ದೇಶ, ಶಕುನ, ಸೂಚನೆ ಮುಂತಾದ ಅರ್ಥಗಳಿವೆ. ಏನಾದರೂ ಕಾರಣ ಸಂಭವಿಸಿದರೆ, ಯಾವುದಾದರೂ ಉದ್ದೇಶವನ್ನಿಟ್ಟುಕೊಂಡರೆ, ಯಾವುದಾದರೂ ಶಕುನವಾದರೆ, ಯಾರಾದರೂ ಆಕಸ್ಮಿಕವಾಗಿ ಸೂಚನೆ ಕೊಟ್ಟ ಮಾಡುವ ಕರ್ಮಗಳೆಲ್ಲವೂ ನೈಮಿತ್ತಿಕ ಕರ್ಮಗಳು. ಇವುಗಳಿಂದ ಪುಣ್ಯಪ್ರಾಪ್ತಿ. ಫಲಾಪೇಕ್ಷೆಯಿಂದ ಮಾಡುವುದು ಕಾಮ್ಯ ಕರ್ಮ. ಪಾಪ ಪರಿಹಾರಕ್ಕೆ ಮಾಡುವುದು ಪ್ರಾಯಶ್ಚಿತ್ತ ಕರ್ಮ. ಕಾಮ್ಯ ಕರ್ಮದಿಂದ ಪಾಪವೂ ಇಲ್ಲ, ಪುಣ್ಯವೂ ಇಲ್ಲ. ಪ್ರಾಯಶ್ಚಿತ್ತ ಕರ್ಮದಿಂದ ಪಾಪ ಹೋಗುತ್ತದೆ; ಪುಣ್ಯ ಬರುವುದಿಲ್ಲ. ಮೋಕ್ಷಾಪೇಕ್ಷೆಯು ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ಮಾಡಬಾರದು; ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ನಿರತನಾಗಿರಬೇಕು. ಪದೇ ಪದೇ ಪ್ರಾಯಶ್ಚಿತ್ತ ಕರ್ಮಕ್ಕೂ ಒಳಗಾಗಬಾರದು. 'ನಿತ್ಯ ಪ್ರಾಯಶ್ಚಿತ್ತರನೊಲ್ಲ ನಮ್ಮ ಕೂಡಲ ಸಂಗಮದೇವ.' ಮೇಲಿಂದ ಮೇಲೆ ತಪ್ಪು ಮಾಡುವುದು ಮುಮುಕ್ಷುವಿಗೆ ಉಚಿತವಲ್ಲ. ತಪ್ಪುಗಳನ್ನು ಒಪ್ಪು ಮಾಡುವುದರಲ್ಲಿಯೆ ಶಕ್ತಿ ಸಮಯುಗಳು ವೆಚ್ಚವಾಗುತ್ತವೆ; ಭಕ್ತಿ ಭಾಗ್ಯಗಳೂ ಕರಗಿ ಹೋಗುತ್ತವೆ.

ಪ್ರಾಯಶ್ಚಿತ್ತ ಅಸಾಧಾರಣ-ಸಾಧಾರಣ ಎಂದು ಇತ್ತೆರನಾಗಿದೆ. ಮಾಡಿದ ಪಾಪ ಮನವರಿಕೆಯಾದೊಡನೆ ಆ ಪಾಪವನ್ನು ಪರಿಹರಿಸಲು ವೇದಾಗಮಗಳಲ್ಲಿ ವಿಧಿಸಿದುದೆ ಅಸಾಧಾರಣ ಪ್ರಾಯಶ್ಚಿತ್ತ ಕರ್ಮ. ಜನ್ಮಾಂತರಗಳಲ್ಲಿ ಮಾಡಿದ ನಿಷಿದ್ಧ ಕರ್ಮ ಯಾವುವೆಂಬುದು ತಿಳಿಯದೆ ಅದರಿಂದುಂಟಾದ ಪಾಪ ಮತ್ತು ದುಃಖಗಳ ನಿವೃತ್ತಿಗಾಗಿ ಮಾಡುವುದೆ ಸಾಧಾರಣ ಪ್ರಾಯಶ್ಚಿತ್ತ ಕರ್ಮ. ಇದರಿಂದ ಎಲ್ಲ ಪಾಪಗಳು ಪರಿಹಾರವಾಗುತ್ತವೆ. ಸ್ನಾನ-ಧ್ಯಾನಾದಿಗಳು ಸಾಧಾರಣ ಪ್ರಾಯಶ್ಚಿತ್ತ ಕರ್ಮಗಳಲ್ಲಿ ಪರಿಗಣಿತವಾಗಿವೆ.

'ಪ್ರಾಯಸ್ಯ (ಪಾಪಸ್ಯ) ಚಿತ್ತಂ (ಶೋಧನಂ)ಯಸ್ಮಾತ್ ತತ್ ಪ್ರಾಯಶ್ಚಿತ್ತಂ' 'ಪ್ರಾಯಸ್ಯ (ತಪಸಃ) ಚಿತ್ತಂ (ನಿಶ್ಚಯಃ) ಇತಿ ಪ್ರಾಯಶ್ಚಿತ್ತಂ' ಎಂದು ಮುಂತಾಗಿ ವಿಗ್ರಹಿಸುತ್ತಾರೆ.

"ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ ।
ತಪೋ ನಿಶ್ಚಯಸಂಯುಕ್ತಂ ಪ್ರಾಯಶ್ಚಿತ್ತಮಿತಿ ಶ್ರುತಿಃ ||"

ಹೀಗೆ ಕರ್ಮಗಳು, ಕರ್ಮಫಲಗಳು ನಿರ್ದಿಷ್ಟವಾಗಿವೆ. ಶಿವಭಾವವುಳ್ಳ ಶಿವಯೋಗಿಗೆ ಈ ಎಲ್ಲ ಕರ್ಮಗಳು ಯಾವ ಫಲವನ್ನೂ ಉಂಟುಮಾಡುವುದಿಲ್ಲ. ಶಿವಜ್ಯೋತಿಸ್ವರೂಪನಾಗಿರುವ ಕಾರಣ ಆತನ ಬಳಿ ಕರ್ಮಫಲರೂಪ ಕತ್ತಲೆಯು ಸುಳಿಯದು. ಆ ಮಹಾ ಯೋಗಿಗೆ ವೃತ್ತಿ ಸಹಿತ ಅಂತಃಕರಣವಿದ್ದರೂ ಫಲ ಪ್ರತೀತಿಯಿರುವುದಿಲ್ಲ. ನಿರ್ವಿಕಲ್ಪ ಭಾವವುಂಟಾಗಿರುತ್ತದೆ. ಶಿವಾದ್ವೈತಭಾವನೆ ಸಿದ್ಧಿಸಿರುತ್ತದೆ. ಆತನ ಅಂತಃಕರಣವೃತ್ತಿ ನಿಷ್ಪತ್ತಿಗೊಂಡಿರುತ್ತದೆ. ಬಾಹ್ಯವೃತ್ತಿ ಭೇದಗಳಲ್ಲಿ ಆತನ ಅಂತಃಕರಣ ಬೆರೆಯುವುದಿಲ್ಲ.

"ನ ತಸ್ಯ ಜಾತಿಭೇದೋಽಸ್ತಿ ನ ಶುಚ್ಯಶುಚಿ ಕಲ್ಪನಾ।
ನ ಸ್ಪೃಷ್ಟಿರ್ನಾಪಿ ವಾ ಶುದ್ಧಿಃ ಸರ್ವಂ ಶಿವಮಯಂ ಯತಃ||
ನ ಸ್ಪೃಷ್ಟಿರ್ನರಜೋ ದೋಷೋ ನ ಸ್ತ್ರೀಬಾಲಾದಿ ಕಲ್ಪನಾ।
ನ ಜನ್ಮಮರಣಾದ್ಯಾಶೌಚಂ ನ ಸ್ನಾನಾದೇರ್ವಿಧೇಯತಾ ||"

ಎಂದು ಪಾರಮೇಶ್ವರ ತಂತ್ರದ ಪ್ರಥಮ ಪಟಲದಲ್ಲಿ ನಿರೂಪಿತವಾಗಿದೆ.

ಜೀವ ಭಾವವನ್ನು ತೊಲಗಿಸುವುದು ಶಿವಭಾವ. ಜೀವ ಭಾವವೇ ಹೋದ ಬಳಿಕ ಜೀವನದ ಆಗು ಹೋಗುಗಳ ಮಾತೇನು ? ಕರ್ಮಾಕರ್ಮಗಳ ಮಾತೇನು ? ಶಿವಭಾವದ ಪ್ರತಿಭೆ ಸಣ್ಣದಲ್ಲ, ಆ ಮಹಾ ಜ್ಯೋತಿಯಲ್ಲಿ ಕರ್ಮಕಾಷ್ಠಗಳೆಲ್ಲ ಸುಟ್ಟು ಶಿವ ಜ್ಯೋತಿಯಾಗಿ ಪರಿಣಮಿಸುತ್ತವೆ.

ಶರೀರ ಶಿವಪೂಜೆಯಲ್ಲಿ. ಭಾವ ಶಿವಧ್ಯಾನದಲ್ಲಿ ನಿರತನಾಗಿರುವವನು ಮಹಾಯೋಗಿ. ಆತನ ತ್ರಿಕರಣಗಳೂ ಶಿವನ ಮಹಾಯೋಗವನ್ನು ಪಡೆದಿರುತ್ತವೆ. ಶಿವನ ಷಡ್ಗುಣೈಶ್ವರ್ಯವು ಅವನದಾಗಿರುತ್ತದೆ. ಅವನಿಗೆ ಬೇರೆ ಗುಣ

ಧನ ಬೇಕಿಲ್ಲ, ಆದ್ದರಿಂದ ಆತನು ಮಹಾಯೋಗಿ. ಮಂಗಳ ಜ್ಯೋತಿಮಯ ನಾದ ಆ ಮಹಾಯೋಗಿಗೆ ಯಾವ ಕರ್ಮ ಫಲವಿಲ್ಲ. ಕರ್ಮ ಫಲ ಆತನಿಗೆ ಕಿಂಚಿತ್, ಕಿಂಚಿತ್ ಫಲದ ಆಶೆ ಆತನಿಗಿರುವುದಿಲ್ಲ. ಪುಣ್ಯವನ್ನೂ ಆತನು ಬಯಸನು. ಪುಣ್ಯವನ್ನು ಬಯಸುವವನು ಭೋಗಿ. ಪರಮಾರ್ಥವೇ ತಾನಾಗಿರುವವನು ಮಹಾಯೋಗಿ. ಆ ಮಹಾಯೋಗಿಯು ಕರ್ಮನಿರತನಾಗಿದ್ದರೂ ಕರ್ಮದೋಷ ಆತನಿಗೆ ಅಂಟುವುದಿಲ್ಲ. ನಿರ್ಲಿಪ್ತನಾಗಿರುತ್ತಾನೆ ; ನಿರ್ಮಲನಾಗಿರುತ್ತಾನೆ.

"ಅಂತಃ ಪ್ರಕಾಶಮಾನಸ್ಯ ಸಂವಿತ್ಸೂರ್ಯಸ್ಯ ಸಂತತಂ ।
ಭಾವೇನ ಯದುಪಸ್ಥಾನಂ ತತ್ಸಂಧ್ಯಾವಂದನಂ ವಿದುಃ ॥"

ಒಳಗೆ ಯಾವಾಗಲೂ ಬೆಳಗುತ್ತಿರುವ ಚಿತ್ಸೂರ್ಯನನ್ನು ಭಕ್ತಿ ಭಾವದಿಂದ ಉಪಾಸನೆ ಮಾಡಿಕೊಂಡಿರುವುದೇ ಸಂಧ್ಯಾವಂದನವೆಂದು ಶಿವಾಚಾರ್ಯರು ಭಾವಿಸುತ್ತಾರೆ.

ಬುದ್ಧಿ ಭಾವಗಳ ಮಿಲನವೆ ಸಂಧಿ. ಬುದ್ಧಿಭಾವಗಳ ಸಮನ್ವಯರೂಪ ಸಂಧಿಯೊಡನೆ ಧ್ಯಾನ ಧಾರಣೋಪಾಸನೆಯನ್ನು ಮಾಡುವುದೇ ವಂದನ.

ಸಂವಿತ್ಸೂರ್ಯನಿಗೆ ಸುಪ್ತಿಯೆಂಬ ಇರುಳಿಲ್ಲ. ಸ್ವಪ್ನ ಮೇಘಾಚ್ಛಾದನವಿಲ್ಲ. ತ್ರಿವಿಧಾವಸ್ಥೆಗಳಲ್ಲಿಯೂ ತಿಳಿಬೆಳಗು ತೊಳಗುತ್ತದೆ. ಆ ಚಿತ್ಸೂರ್ಯನನ್ನು ಊರ್ಧ್ವ ಹೃದಯ ಕಮಲದಲ್ಲಿ ಉಪಾಸನೆ ಮಾಡಬೇಕು; ಭಾವ ಪೂರ್ಣವಾಗಿ ಮಾಡಬೇಕು. ಭಾವ ಕ್ರಿಯೆಯಿಂದ ಸಂವಿತ್ಸೂರ್ಯನನ್ನು ಉಪಾಸಿಸುವುದೇ ಸಂಧ್ಯಾವಂದನವೆನಿಸುವುದು ಶಿವಾದ್ವೈತ ಸಿದ್ಧಾಂತದಲ್ಲಿ ! ಕ್ರಿಯೆ ಜ್ಞಾನ ಉಪಾಸನ ರೂಪ ತ್ರಿವಿಧ ಸಮನ್ವಯ ಸಂಧ್ಯಾವಂದನವನ್ನು ಶಿವಾಚಾರ್ಯರು ನಿರೂಪಿಸಿದ್ದಾರೆ. ಮತ್ತು ತ್ರಿಕರಣ ಸಂಧಿಸಿ ವಂದಿಸುವ (ಆರಾಧಿಸುವ) ಕಾರಣ ಇದು ಸಂಧ್ಯಾವಂದನವೆನಿಸಿದೆ. ಸ್ಥೂಲಾಂಗ–ಧರ್ಮಾಚಾರ ಕೂಡಿ ಪ್ರಾತಃ ಸಂಧ್ಯಾಕಾಲವಂದನ. ಸೂಕ್ಷ್ಮಾಂಗ–ಜ್ಞಾನಾಚಾರ ಸೇರಿ ಮಧ್ಯಾಹ್ನ ಸಂಧ್ಯಾಕಾಲ ವಂದನ. ಕಾರಣಾಂಗ-ಭಾವಾಚಾರ ಒಗ್ಗೂಡಿ ಸಾಯಂ ಸಂಧ್ಯಾಕಾಲ ವಂದನ. ಈ ಮೂರು ಸೇರಿ ತ್ರಿಸಂಧ್ಯಾವಂದನ. ಧರ್ಮ–ಭಾವ–ಜ್ಞಾನಾ

ಚಾರಗಳ ಉದಯ ವರ್ಧನ–ನಿಷ್ಪತ್ತಿಗಳೇ ತ್ರಿಸಂಧ್ಯಾವಂದನ ; ಅಥವಾ ಸೃಷ್ಟಿ ಸ್ಥಿತಿ–ಲಯಗಳೇ ತ್ರಿಸಂಧ್ಯಾವಂದನ. ಇದೇ ಮಾಹೇಶ್ವರಾಂಗನ ನಿತ್ಯ ಕ್ರಿಯೆ.

ಆ ಅಂತರಂಗದ ಸಂವಿತ್ಸೂರ್ಯನ ಸನ್ನಿಧಿಯಲ್ಲಿ ಉಪಸ್ಥಿತನಾಗುವುದರಿಂದ ಅಂತಃಕರಣದ ಪಂಚಾವಸ್ಥೆಗಳಲ್ಲಿ ಒಂದಾದ ಕ್ಷೇಪಾವಸ್ಥೆಯ ಕಾಟವಿರುವುದಿಲ್ಲ. ಅಂದರೆ ರಜೋಗುಣ ಪರಿಣಾಮಗಳಾದ ಲೋಕವಾಸನೆ, ದೇಹವಾಸನೆ, ಶಾಸ್ತ್ರ ವಾಸನೆಗಳಿರುವುದಿಲ್ಲ.

"ಆತ್ಮ ಜ್ಯೋತಿಷಿ ಸರ್ವೇಷಾಂ ವಿಷಯಾಣಾಂಸಮರ್ಪಣಂ।
ಅಂತರ್ಮುಖೇನ ಭಾವೇನ ಹೋಮಕರ್ಮೇತಿ ಗೀಯತೇ ॥"

ಅಂತರ್ಮುಖವಾದ ಭಾವದಿಂದ ಸರ್ವ ವಿಷಯಗಳನ್ನು ಶಿವಾತ್ಮ ಸಂವಿದಗ್ನಿಯಲ್ಲಿ ಸಮರ್ಪಿಸುವುದೇ ಹೋಮವೆಂದು ಹೇಳಲಾಗಿದೆ.

ಭಾವ ಅಂತರ್ಮುಖವಾಗುವುದೇ ಭಾವಾಚಾರ. ಅಂತರ್ಮುಖವಾದ ಭಾವವು ಬಾಹ್ಯ ವಿಷಯವಾಂಛೆಗೆ ಒಳಗಾಗದು. ವಿಷಯಗಳನ್ನೆಲ್ಲ ಹವಿಸ್ಸನ್ನಾಗಿ ಮಾಡಿ ಆತ್ಮಜ್ಞಾನದ ಅಗ್ನಿಯಲ್ಲಿ ಹೋಮ ಮಾಡುತ್ತದೆ. ಅಂದರೆ ವೃತ್ತಿ ಲಯವಾಗುತ್ತದೆ. ಕಾಯ್ದ ಕಬ್ಬಿಣದ ಮೇಲೆ ನೀರಹನಿ ಬಿಟ್ಟಂತಾಗುತ್ತದೆ. ತಪ್ತ ಲೋಹದಲ್ಲಿಯೇ ನೀರು ಸೇರಿ ಬಿಡುತ್ತದೆ. ಅದರಂತೆ ಆತ್ಮ ಜ್ಯೋತಿಯಲ್ಲಿ ವಿಷಯ, ವಿಷಯಕ್ಕೆ ಆಶ್ರಯವಾದ ಭಾವ ಬೆರೆದು ಬೆಳಗುತ್ತವೆ ಆಗ ಭಾವ ಭೇದಗಳಿರುವುದಿಲ್ಲ ; ಭಾವದೋಷಗಳಿರುವುದಿಲ್ಲ.

ಶಿವಾತ್ಮ ಸಂವಿಜ್ಯೋತಿಯಲ್ಲಿ ಭಾವದೊಡನೆ ಎಲ್ಲ ವಿಷಯ ಸಮರ್ಪಣವನ್ನು ಹೇಳಿದುದರಿಂದ ಇದು ಸುಷುಪ್ತಿಗಿಂತ ಭಿನ್ನವೆಂದು ಸಿದ್ಧವಾಗುತ್ತದೆ. ಸುಷುಪ್ತಿಯಲ್ಲಿ ವೃತ್ತಿಲಯ ವಿಷಯವಿಲಯ ಅವಿದ್ಯೆಯಲ್ಲಾಗುತ್ತವೆ. ಇಲ್ಲಿ ಅತ್ಯಂತ ಪ್ರಕಾಶಮಾನವಾದ ಆತ್ಮಜ್ಯೋತಿಯಲ್ಲಿ ಲಯವಾಗುತ್ತವೆ. ಇದರಿಂದ ಸುಷುಪ್ತಿಗೂ ಸಾಮರಸ್ಯರೂಪ ಸಮಾಧಿಗೂ ಇರುವ ತಾರತಮ್ಯ ತಿಳಿಯುತ್ತದೆ.

ವಿಷಯ ಸಮರ್ಪಣವಾದ ಕಾರಣ ವಿಷಯ ಮೋಹವಿರುವುದಿಲ್ಲವಾಗಿ ಅಂತಃಕರಣದ ಪಂಚಾವಸ್ಥೆಗಳಲ್ಲಿ ಎರಡನೆಯದಾದ ಮೂಢಾವಸ್ಥೆಯ ವಿಜಯ

ವನ್ನು ಈ ಶ್ಲೋಕವು ಸಾಟಿದೆ. ಆತ್ಮಜ್ಯೋತಿಯಿರುವಾಗ ತಮೋ ಗುಣಕ್ಕಾಗಲಿ ನಿದ್ರಾಲಸ್ಯಗಳಿಗಾಗಲಿ ಆಶ್ರಯವೆಲ್ಲಿ ?

ಕ್ಷಿಪ್ತತೆ-ಕ್ಷಯಿಸದೆ ಮೂಢತೆ ಕ್ಷಯಿಸದು. ಆದರಿಂದಾಗಿ ಮೊದಲು ಸಂವಿತ್ಸೂರ್ಯನ ಬಳಿಯಿದ್ದು ಸಂಧ್ಯಾವಂದನರೂಪ ಆರಾಧನೆಯನ್ನು ಪ್ರತಿಪಾದಿಸಿ ತ್ರಿವಿಧ ವಾಸನೆಗಳನ್ನು ಕಳೆದುಕೊಳ್ಳಬೇಕೆಂದು ಪ್ರತಿಪಾದಿಸಲಾಗಿದೆ. ಸ್ತುತಿಗೆ ಹಿಗ್ಗುವುದು, ನಿಂದೆಗೆ ಕುಗ್ಗುವುದು–ಲೋಕವಾಸನೆ ; ದೇಹದ ಕೃಶತೆ ದಾರ್ಢ್ಯತೆ ಸೌಂದರ್ಯಾದಿಗಳನ್ನು ಗಮನಿಸುವುದು ದೇಹವಾಸನೆ: ಸರ್ವಶಾಸ್ತ್ರಗಳನ್ನು ತಿಳಿಯ ಬೇಕೆಂಬುದು ಶಾಸ್ತ್ರವಾಸನೆ, ಈ ತ್ರಿವಿಧರೂಪ ಕ್ಷೇಪಾವಸ್ಥೆಗೆ ಬೀಳದವನೇ ಮೂಢಾವಸ್ಥೆಯನ್ನು ಗೆಲ್ಲುವನು. ವಿಷಯಾರ್ಪಣರೂಪ ವಿರಾಗ ಸಂಪತ್ತನ್ನು ಸಂಪಾದಿಸುವನು.

ವಿಷಯುಗಳ ನೆನಹಿನಿಂದ ವಿಷಯ ಸಂಗವುಂಟಾಗುತ್ತದೆ. ವಿಷಯ ಸಂಗ ದಿಂದ ವಿಷಯರಾಗವುಂಟಾಗುತ್ತದೆ. ವಿಷಯರಾಗದಿಂದ ದುಃಖ ದ್ವೇಷಗಳು ಸಂಭವಿಸುತ್ತವೆ. ಆದ್ದರಿಂದ ವಿಷಯಂಗಳನ್ನು ಆತ್ಮಜ್ಯೋತಿಯಲ್ಲಿ ಹೋಮ ಮಾಡಬೇಕು.

"ಭಾವಯೇತ್ಸರ್ವ ಕರ್ಮಾಣಿ ನಿತ್ಯ ನೈಮಿತ್ತಿಕಾನಿ ಚ ।
ಶಿವಪ್ರೀತಿಕರಾಣ್ಯೇವ ಸಂಗರಾಹಿತ್ಯ ಸಿದ್ಧಯೇ ॥"

ಬಾಹ್ಯ ಸಂಗ ನಿವೃತ್ತಿಗಾಗಿ ನಿತ್ಯ ನೈಮಿತ್ತಿಕಾದಿ ಸರ್ವಕರ್ಮಗಳನ್ನು ಶಿವ ಪ್ರೀತಿಕರಗಳೇ ಎಂದು ಭಾವಿಸಬೇಕು.

ಅಂತರ್ಮುಖವಾದ ಭಾವ ಬಹಿರ್ಮುಖವಾಗದಂತೆ ನೋಡಿಕೊಳ್ಳಬೇಕಾದರೆ ಮಾಡುವ ಎಲ್ಲ ಕ್ರಿಯೆಗಳನ್ನೂ ಶಿವಪ್ರೀತಿಗಾಗಿ ಮಾಡುವೆನೆಂದು ಭಾವಾಚಾರಿಯು ಭಾವಿಸಬೇಕು. ಇದರಿಂದ ಅಂತಃಕರಣದ ಪಂಚಾವಸ್ಥೆಗಳಲ್ಲಿ ಮೂರನೆಯದಾದ ವಿಕ್ಷೇಪಾವಸ್ಥೆಯನ್ನು ನಿರೋಧಿಸಿದಂತಾಗುತ್ತದೆ. ಅಂತರ್ಲೀನವಾದ ಭಾವವು ಬಾಹ್ಯಸಂಗಕ್ಕೆ ಬಂದು ಸಂಸಾರ ಬಂಧಕ್ಕೊಳಗಾಗುವುದೇ ವಿಕ್ಷೇಪಾವಸ್ಥೆ. ಇದು ತಪ್ಪುವ ಉಪಾಯವೆಂದರೆ ಬಾಹ್ಯ ಕ್ರಿಯೆಗಳು ತನಗೆಂಬ ಮೋಹವನ್ನು ತೆಗೆದು ಹಾಕಿ ಶಿವನ ಪ್ರೀತಿಗಾಗಿ ಎಂಬ ಸದ್ಭಾವ ಬಲಿತರೆ ಕರ್ಮಸಂಗ ಸಮನಿಸದು.

ಕರ್ಮಸಂಗ ಸಮನಿಸದಿದ್ದರೆ ಸಂಸಾರ ಬಾಧವುಂಟಾಗದು. ಇಲ್ಲಿಗೆ ಕ್ಷಿಪ್ತ ಮೂಢ ವಿಕ್ಷೇಪ ಈ ಮೂರು ವಿರೋಧಾವಸ್ಥೆಗಳನ್ನು ಗೆಲಿದಂತಾಗಿ ಮುಂದಿನ ಏಕಾಗ್ರತೆಗೆ ಯಾವ ತೊಂದರೆಯಿರುವುದಿಲ್ಲ. ಕ್ಷಿಪ್ತ ಮೂಢಾವಸ್ಥೆಗಳನ್ನು ತೊಲಗಿಸಿದ ಕಾರಣ ವಿಕ್ಷೇಪಾವಸ್ಥೆಯನ್ನು ತೊಲಗಿಸುವುದು ಸುಲಭ. ಮೂಢಾವಸ್ಥೆಯಲ್ಲಿದ್ದರೆ ಸಂಗರಾಹಿತ್ಯತೆಯನ್ನು ಸಂಪಾದಿಸಲು ಸಾಧ್ಯವಾಗುವುದಿಲ್ಲ. ಆದ ಕಾರಣ ಆತ್ಮಜ್ಯೋತಿಯ ಆರಾಧನೆಯನ್ನು ಮೊದಲು ನಿರೂಪಿಸಿ ಆದರ ಸಾಕ್ಷಾತ್ಕಾರವಾದ ಬಳಿಕ ಬಾಹ್ಯ ಸಂಗರಾಹಿತ್ಯರೂಪ ವಿಕ್ಷೇಪಜಯು ನಿರೂಪಿತವಾಗಿದೆ.

ಶಿವಪ್ರೀತಿಗಾಗಿ ಎಂದು ಭಾವಿಸಿದರೆ ಭಕ್ತಿಯೋಗವೆನಿಸುತ್ತದೆ. ಅದೇ ಸ್ವಾತ್ಮ ಪ್ರೀತಿಗಾಗಿ ಎಂದು ಭಾವಿಸಿದರೆ ರಾಗವಾಗುತ್ತದೆ. ರಾಗ ಕ್ಷಿಪ್ತಾವಸ್ಥೆಯ ಪ್ರತೀಕ. ರಾಗವೇ ಭವಕ್ಕೆ ಬೀಜ. ಆದ್ದರಿಂದ ಶಿವಪ್ರೀತಿಗಾಗಿ ಭಾವಿಸೆಂದು ಬೋಧಿಸಿದ್ದಾರೆ ಜಗದ್ಗುರು ರೇಣುಕರು.

ಶಿವಪ್ರೀತಿ ಪ್ರಯೋಗದಿಂದ ಕಷಾಯ ವಿಘ್ನವನ್ನೂ ನಿವಾರಿಸುವ ಧ್ವನಿಯು ವ್ಯಕ್ತವಾಗುತ್ತದೆ. ರಾಗದ್ವೇಷಗಳ ಸಂಸ್ಕಾರವೇ ಕಷಾಯ. ಇದು ಅಂತಃಕರಣದಲ್ಲಿರುವವರೆವಿಗೆ ಶಿವಪ್ರೀತಿಕರಗಳೆಂಬ ಸದ್ಭಾವವುಂಟಾಗುವುದಿಲ್ಲ. ಶಿವಪ್ರೀತಿಗಾಗಿ ಕರ್ಮಗಳನ್ನು ಮಾಡುವುದರಿಂದ, ಶಿವನಿಗಾಗಿ ಎಂದು ಭಾವಿಸುವುದರಿಂದ ಬಾಹ್ಯಾಭ್ಯಂತರ ರಾಗಗಳೆರಡೂ ನಿವೃತ್ತಿಯಾಗುತ್ತವೆ, ವಾಸನಾರೂಪ ರಾಗವು ಶಿವಭಾವದಿಂದ ನಿವೃತ್ತಿಯಾಗುತ್ತದೆ. ರಕ್ತಿಯಿಲ್ಲದ ಬಳಿಕ ಶಿವನಲ್ಲಿ ಭಕ್ತಿ ಬೆಳೆದು ಬರುತ್ತದೆ.

"ಶಿವೇ ನಿವೇಶ್ಯ ಸಕಲಂ ಕಾಕಾರ್ಯಂ ವಿವೇಕತಃ ।
ವರ್ತತೇ ಯೋ ಮಹಾಭಾಗಃ ಸ ಸಂಗರಹಿತೋ ಭವೇತ್॥"

ಯಾವ ಮಹಾಮಹಿಮನು ವಿವೇಕದಿಂದ ಎಲ್ಲ ಕಾರ್ಯ ಅಕಾರ್ಯಗಳನ್ನು ಶಿವನಿಗರ್ಪಿಸಿ ಕ್ರಿಯಾನಿಷ್ಪತ್ತಿಯಿಂದಿರುವನೋ ಅವನು ಕರ್ಮಫಲಕ್ಕೆ ಒಳಗಾಗನು. ಸರ್ವಕರ್ಮಾಕರ್ಮಗಳ ಸಂಗದಿಂದ ಭಾವವನ್ನು ನಿರೋಧಿಸುವನು. ಶಿವನಲ್ಲಿ ತಲ್ಲೀನವಾದ ಅಂದರೆ ಏಕಾಗ್ರವಾದ ಆತನ ಮನಸ್ಸು ಭವಸಂಗಕ್ಕೆ ಬಾರದು.

ಸರ್ವಕಾರ್ಯ ಪ್ರೇರಕನು ಶಿವನು. ಆತನ ಪ್ರೇರಣೆಯಿಲ್ಲದೆ ಯಾವ ಕಾರ್ಯವನ್ನು ಮಾಡುವ ಸ್ವಾತಂತ್ರ್ಯ ಸಾಮರ್ಥ್ಯಗಳು ತನ್ನಲ್ಲಿಲ್ಲ. ಮಾಡಿಸುವವನು ಮಾಡುವವನು ಮಾಡುವ ಕಾರ್ಯವು ಎಲ್ಲಿವೂ ಅವನೇ ಆಗಿದ್ದಾನೆ. ಅವನಿಗನ್ಯ ಏನೂ ಇಲ್ಲ ಎಂಬುದೇ ಕಾರ್ಯಾಕಾರ್ಯಾರ್ಪಣ ವಿವೇಕ. "ಯೋಗಃ ಕರ್ಮಸು ಕೌಶಲಂ" ಎಂಬಂತೆ ಕಾರ್ಯಾರ್ಪಣ ಕುಶಲತೆಯು ಅಭಿವ್ಯಕ್ತವಾಗಿ ಇದೊಂದು ಕ್ರಿಯಾಯೋಗವೆನಿಸಿದೆ. ಇದರಿಂದ ಬಾಹ್ಯಪ್ರವೃತ್ತಿಯಲ್ಲಿದ್ದರೂ ಭಾವ ಮಾತ್ರ ನಿವೃತ್ತಿಗೊಂಡಿರುತ್ತದೆ, ನಿರಾಲಂಬವಾಗಿರುತ್ತದೆ.

ಕಾರ್ಯಾಕಾರ್ಯಫಲಗಳ ಸೋಂಕು, ಲಯ, ವಿಕ್ಷೇಪ, ಕಷಾಯ ರಸಾಸ್ವಾದಿಗಳ ಸಂಗ ಕಿಂಚಿತ್ತಾದರೂ ಇರುವುದಿಲ್ಲ. ಶಿವಯೋಗದಲ್ಲಿ ಐಕ್ಯಗೊಂಡ ಭಾವಕ್ಕೆ ನಿದ್ರಾಲಸ್ಯಾದಿಗಳು, ಬಾಹ್ಯವಸ್ತು ಕಾರ್ಯಗಳ ಅವಲಂಬನವು, ರಾಗ ದ್ವೇಷಾದಿ ವಾಸನೆಗಳು, ಅವಾಂತರ ರಸಾಸ್ವಾದಾಸಕ್ತಿಯು ಭಾವಾಚಾರ ಸಿದ್ಧನಿಗೆ ಇರುವುದಿಲ್ಲ ಶಿವಭಾವದಲ್ಲಿ ಇವನ್ನೆಲ್ಲಾ ನಿರೋಧಿಸಿರುತ್ತಾನೆ. ಇವೆಲ್ಲವುಗಳ ಸಂಗದಿಂದ ದೂರನಾಗಿರುತ್ತಾನೆ, ಜೀವನ್ಮುಕ್ತನಾಗಿರುತ್ತಾನೆ.

ಹಗ್ಗದ ಅರಿವಾದೊಡನೆ ಹಾವಿನ ಭ್ರಾಂತಿ ಭಯಗಳು ಹೋಗುವಂತೆ ಕಾರ್ಯಾಕಾರ್ಯಗಳಿಗೆ ಮಹಾಕಾರಣನಾದ ಶಿವನ ಯೋಗವೊದಗಲಾಗಿ ಕಾರ್ಯಾಕಾರ್ಯಗಳ ಫಲಾಶೆ ಪಲಾಯನವಾಗುತ್ತದೆ. ಸಾಂಸಾರಿಕ ಭ್ರಾಂತಿ ಬವಣೆಗಳು ಬಿಟ್ಟೋಡುತ್ತವೆ. ಕಾರ್ಯಾಕಾರ್ಯ ನಿರತನಾಗಿದ್ದರೂ ಇವುಗಳ ಲೇಪವಿರುವುದಿಲ್ಲ.

"ಕೃಷ್ಣೋ ಭೋಗೀ ಶುಕಸ್ತ್ಯಾಗೀ ರಾಜಾನೌ ಜನಕರಾಘವೌ
ವಶಿಷ್ಠ: ಕರ್ಮಕರ್ತಾಚ ಪಂಚೈತೇ ಜ್ಞಾನಿನಸ್ಸಮಾಃ॥"

ಎಂಬಂತೆ ಭಾವಾಚಾರ ಸಂಪನ್ನನು ಕಾರ್ಯಾಕಾರ್ಯಗಳನ್ನು ಮಾಡಿದರೂ ಮುಕ್ತನಾಗಿರುತ್ತಾನೆ. ಭೋಗಿಯಾಗಿದ್ದರೂ ಯೋಗಿಯಾಗಿರುತ್ತಾನೆ. ಏಕೆಂದರೆ ಈತನಿಗೆ ಇಚ್ಛೆಯಿಲ್ಲದೆ ಭೋಗಾದಿಗಳುಂಟಾಗುತ್ತವೆ.

ಬಂಧಕ್ಕೆ ಸಂಸಾರಸಂಗಕ್ಕೆ ವಿಷಯಗಳಾಗಲಿ ಕಾರ್ಯಾಕಾರ್ಯಗಳಾಗಲಿ ಮುಖ್ಯ ಕಾರಣವಲ್ಲ. ಮುಖ್ಯ ಕಾರಣ ಭಾವ. 'ಯದ್ಭಾವಸ್ತದ್ಭವತಿ' ಎಂಬಂತೆ ಭಾವ ಹೇಗಿದ್ದರೆ ಹಾಗಾಗುತ್ತದೆ, ಭಾವಾಚಾರ ಸಂಪನ್ನನ ಭಾವ ಶಿವವಾಗಿರುತ್ತದೆ,

ಆದ್ದರಿಂದ ಆತನಿಗೆ ಏನೆಲ್ಲವೂ ಶಿವವಾಗಿಯೆ ಕಾಣಿಸುತ್ತದೆ, ಶಿವವಾಗಿಯೆ ಪರಿಣಮಿಸುತ್ತದೆ. ಕಾವ್ಯ ಕಾರ್ಯಗಳಲ್ಲಿಯೂ ವಿಷಯಸಂಗದಲ್ಲಿಯೂ ಶಿವ ಭಾವವೇ ಉಂಟಾಗುತ್ತದೆ, ಶೈವಸಂಗವೇ ಸಮವೆನಿಸುತ್ತದೆ, ಆತನಿಗೆ ದೋಷ ದೃಷ್ಟಿಯಿರುವುದಿಲ್ಲ. ಸ್ವಾರ್ಥಭಾವವಾಗಲಿ ಜೀವಭಾವವಾಗಲಿ. ಇರುವುದಿಲ್ಲ ಎಲ್ಲವೂ ಶಿವಾರ್ಪಣವಾಗುತ್ತದೆ, ದೇಹೇಂದ್ರಿಯ ದೃಷ್ಟಿಯಾಗಲಿ ದೇಶಕಾಲ ಗಳ ಅಪೇಕ್ಷೆಯಾಗಲಿ ಆತನಿಗಿರುವುದಿಲ್ಲ. ದೇಹೇಂದ್ರಿಯಗಳೂ ದೇವಸ್ವರೂಪ ವಾಗಿರುತ್ತವೆ. ಯಾವ ದೇಶವಾಗಲಿ, ಯಾವ ಕಾಲವಾಗಲಿ ಎಲ್ಲವೂ ಒಂದೆ! ಕಾಶಿ ಕೇದಾರಗಳಲ್ಲಿ ತೀರ್ಥಕ್ಷೇತ್ರಗಳಲ್ಲಿ ಮಾತ್ರ ಮುಕ್ತಿಯುಂಟಾಗುತ್ತದೆಯೆಂಬ ಭಾವ ಆತನಿಗಿರುವುದಿಲ್ಲ; ಶಿವಮಯವಾದ ವಿಶಾಲ ದೇಶವೆಲ್ಲವೂ ಆತನಿಗೆ ಅವಿಮುಕ್ತ ಕ್ಷೇತ್ರವಾಗಿ ಪರಿಣಮಿಸುತ್ತದೆ, ಅಂತೆಯೇ ಅಶುಭಕಾಲ ಶುಭಕಾಲ ವೆಂಬುದಿಲ್ಲ. ಭಾವಶುದ್ಧಿಯುಳ್ಳ ಆತನಿಗೆ ಎಲ್ಲವೂ ಶುಭಕಾಲವೆ ಆಗಿರುತ್ತದೆ. ಕಾರ್ಯಗಳಲ್ಲಿ ಮಾತ್ರ ಆತನ ಶಿವದೃಷ್ಟಿ ಶಿವಾರ್ಪಣಭಾವಗಳು ಸೀಮಿತವಾಗಿಲ್ಲ. ದೇಶ ಕಾಲ ನಾಮ ರೂಪು ಎಲ್ಲದರಲ್ಲಿಯೂ ಆತನದು ಶಿವದೃಷ್ಟಿ ಶಿವಾರ್ಪಣ ಭಾವ ಎಲ್ಲೆಲ್ಲಿಯೂ ಆತನು ಕಾಯಕರಣೇಂದ್ರಿಗಳನ್ನು ನಿರೋಧಿಸಿ ಶಿವೈಕಾಗ್ರತೆ ಯನ್ನು ಸಂಪಾದಿಸುತ್ತಾನೆ.

ಶಿವಾರ್ಪಣವಾದದ್ದು ಯಾವುದೂ ಪದಾರ್ಥವಾಗದು. ಯಾವುದೂ ಅಕಾರ್ಯವಾಗದು. ಶಿವಾರ್ಪಣವಾದುದೆಲ್ಲವೂ ಶಿವವಾಗಿಯೇ ಪರಿಣಮಿಸುತ್ತದೆ. ಬೆಂಕಿಗೆ ಹಾಕಿದ್ದೆಲ್ಲವೂ ಬೆಂಕಿಯೇ ಆಗುವಂತೆ ಆಗುತ್ತದೆ. ಆಗ ಕಾರ್ಯಾಕಾರ್ಯ, ಕಾಲಾಕಾಲ, ಅನ್ಯಅನನ್ಯ, ವಿಷಯ ಅವಿಷಯಾದಿ ಭೇದ ಭ್ರಾಂತಿಯಿರುವುದಿಲ್ಲ. ಶಿವಾಲಂಬನಭಾವಿಗೆ ಅನ್ಯಾವಲಂಬನವಿಲ್ಲ,

"ಆತ್ಮಾನಮಖಿಲಂ ವಸ್ತು ಶಿವಮಾನಂದ ಚಿನ್ಮಯಂ ।
ಏಕಭಾವೇನ ಸತತಂ ಸಂಪಶ್ಯನ್ನೇವ ಪಶ್ಯತಿ ॥"

ತನ್ನನ್ನು ಜಗದಾದಿ ಎಲ್ಲ ವಸ್ತುವನ್ನು ಸಚ್ಚಿದಾನಂದರೂಪ ಶಿವನನ್ನು ಅಂದರೆ ಜೀವ ಜಗತ್ತು ಈಶ್ವರರನ್ನು ಎಂದೆಂದಿಗೂ ಒಂದೇ ಎಂದು ನೋಡುವ ವನು ನಿಜವಾಗಿಯೂ ತಿಳಿಗಣ್ಣುಳ್ಳವನು; ಶಿವೈಕಭಾವವುಳ್ಳವನು. ಅಭಿನ್ನ

ಭಾವವೇ ಅಂತರ್ದೃಷ್ಟಿ. ತನ್ನನ್ನು ಜಗತ್ತನ್ನು ಶಿವವನ್ನಾಗಿ ಅಥವಾ ಶಿವನಿಗೆ ಅಭಿನ್ನವನ್ನಾಗಿ ಭಾವಿಸುವುದೇ ಭಾವಾಚಾರ. ಆ ಭಾವಾಚಾರವೇ ಸಮ್ಯಕ್ ದರ್ಶನ. ಆ ಸಮ್ಯಕ್ ದರ್ಶನ ಶಕ್ತಿಯುಳ್ಳವನೇ ಶಿವೈಕಭಾವರೂಪ ಸತ್ಯ ದೃಷ್ಟಿಯುಳ್ಳವನು.

ಶಿವೈಕಾಗ್ರಭಾವವನ್ನು ಸಂಪಾದಿಸುವುದೇ ಭಾವಾಚಾರ ಗುರಿ, ಒಂದು ಮೂರಾಗಿದೆ. ಮೂರೊಂದಾಗಬೇಕು. ಇದಕ್ಕೆ ಸಾಧನ ಭಾವಾಚಾರ. ಮೂರೊಂದೆಂದು ಅರಿವುದು ಜ್ಞಾನಾಚಾರ. ಮೂರೊಂದಾಗುವುದು ಭಾವಾಚಾರ.

ಇಷ್ಟಲಿಂಗರೂಪವೇ ಆತ್ಮ, ಪ್ರಾಣಲಿಂಗರೂಪವೇ ಅಖಿಲವಸ್ತು; ಭಾವಲಿಂಗರೂಪವೆ ಶಿವ. ಈ ಮೂರೊಂದೆಂದು ಭಾವಿಸುವವನೇ ಭಾವಾಚರಸಂಪನ್ನ. ಇದು ಆತ್ಮ, ಇದು ಜಗತ್ತು, ಅದು ಶಿವ ಎಂದು ಬೇರ್ಪಡಿಸಿ ನೋಡುವುದು ಬಾಹ್ಯದೃಷ್ಟಿ; ಸಾಧನದೃಷ್ಟಿ.

"ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವ ಶಿಷ್ಯತೇ।"

ಎಂದು ಭಾವಿಸುವುದು ಅಂತರ್ದೃಷ್ಟಿ. ಇಲ್ಲಿ ಸಿದ್ಧದೃಷ್ಟಿಯೆಂದರೆ ಪೂರ್ಣದೃಷ್ಟಿ. ಅಂತರ್ದೃಷ್ಟಿಯೆಂದರೆ ಶುದ್ಧಭಾವ; ಅಥವಾ ಪೂರ್ಣಾನುಭವ.

ಅರ್ಚನ ಚಿಂತನಾದಿಗಳಿಗಾಗಿ ಒಂದು ಮೂರಾಗಿದೆ. ಅರ್ಚನಾಂತದಲ್ಲಿ ಮೂರೊಂದಾಗುವುದು. ಅದಾಗಬೇಕಾದರೆ ತ್ರಿವಿಧ ಭಾವಶುದ್ಧಿ ಬೇಕು. "....ಕಾಯಿ ಸೊನೆಯರತಲ್ಲದೆ ಹಣ್ಣಿನ ರಸ ಚೆನ್ನದೋರದು. ಕಾಯ ಕರ್ಮವ ಮಾಡಿ, ಜೀವ ಜ್ಞಾನವರಿದ ತ್ರಿವಿಧಭಾವ ಶುದ್ಧವಾಗಿಯಲ್ಲದೆ ಕಾಣಲಿಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವ!"

"ಭಾವ ಬಲಿದಲ್ಲಿ ಲಿಂಗವೆನಿಸಿತ್ತು.
ಭಾವ ನಿರ್ಭಾವವಾದಲ್ಲಿ ಪಾಷಾಣವಾಯಿತ್ತು.
ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು-
ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ !"

ಭಾವ ಅಂತಃಕರಣ. ಭಾವಯಿತಾ ಆತ್ಮಾ, ಭಾವ್ಯಂ ಭಾವಲಿಂಗ, ಈ ತ್ರಿವಿಧಶುದ್ಧಿಯೂ ಅಗತ್ಯ. ಭಾವ ಬಲಿದು ಸದ್ಭಾವವಾದಲ್ಲಿ ಭಾವಲಿಂಗವಾಗುವುದು. ಸಿಪ್ಪೆ ಒಪ್ಪಗೊಂಡರೆ ರಸ ರುಚಿಯಾಗುವುದು ಸಹಜ, ಭಾವವೇ ಲಿಂಗವಾದಾಗ ಭಾವಯಿತೃವೂ ಲಿಂಗವಾಗುವುದು ಸಹಜ ಸಿದ್ಧ.

"ರೂಪ ಕಂಡರು, ನಿರೂಪ ಕಾಣರು.
ತನುವನೇ ಕಂಡರು, ಅನುವನೇ ಕಾಣರು;
ಆಚಾರವನೇ ಕಂಡರು, ವಿಚಾರವನೇ ಕಾಣರು.
ಗುಹೇಶ್ವರಾ, ನಿಮ್ಮ ಕುರುಹನೇ ಕಂಡರು;
ಕೂಡಲರಿಯದೆ ಕೆಟ್ಟರು,

ಸದ್ರೂಪವಾದ ಇಷ್ಟಲಿಂಗವನ್ನು ಕಾಣಬಹುದು, ಆ ಲಿಂಗದ ಪ್ರಾಣ ಕಳೆ ಚೈತನ್ಯವೆ ತಾನೆಂದರಿವುದು ಕರಕಷ್ಟ. ಅಂತೆಯೇ ಈ ತನುವ ಕಾಣಬಹುದಲ್ಲದೆ ಇದರ ಅನುವ ಕಾಣುವುದು ದುರ್ಲಭ. ಆಚಾರವನ್ನು ಆಚರಿಸಬಹುದು, ಆದರೆ ಆ ಆಚಾರದ ಪ್ರಾಣದಂತಿರುವ ಮಹಾನುಭಾವ ವಿಚಾರವನ್ನು ಅಳವಡಿಸಿಕೊಳ್ಳುವುದು ಅಸದಳ. ತಾನೇ ಆ ವಸ್ತುಸ್ವರೂಪವೆಂದು ಅರುಹುವ ಕುರುಹನ್ನು ಅಂದರೆ ಕ್ರಿಯಾಲಿಂಗವನ್ನು ಎದುರಿಟ್ಟು ನೋಡಿ ಸುಖಿಸಬಹುದಲ್ಲದೆ ತಾನೇ ಅದೆಂಬುದನರಿದು ಬೆರೆಯದೆ ಹೋದರೆ ಪೂಜಿಸಿ ಫಲವಿಲ್ಲ. ಸಾಧನೆ ಮಾಡಿ ಸುಖವಿಲ್ಲ. ಬೆರೆದೇಕವಾಗಬೇಕಾದರೆ ಭಾವಾಚಾರ ಬೇಕು,

"ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ;
ನಿರಾಳಲಿಂಗಕ್ಕೆ ಬಯಲೇ ಸೆಜ್ಜೆ; ವಾಯುವೇ ಶಿವದಾರ.
ಬೆಳಗೇ ಸಿಂಹಾಸನ, ಅತ್ತಲಿತ್ತ ಚಿತ್ತಹರಿಯಲೀಯದೆ
ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ !"

“ಜ್ಞಾನವದು ದುರ್ಲಭವಲ್ಲ; ಅದರ ಭಾವ ದುರ್ಲಭವಯ್ಯ.
ಭಾವವದು ದುರ್ಲಭವಲ್ಲ; ಅದರ ಏಕತ್ವವದು ದುರ್ಲಭ ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ !”

ಜ್ಞಾನ ಭಾವಗಳ ತರತಮವನ್ನು ಈ ವಚನಗಳು ನಿರೂಪಿಸಿವೆ. ತರತಮವಿದ್ದರೂ ತಾದಾತ್ಮ್ಯಕ್ಕೆ ತ್ರಿವಿಧವೂ ಬೇಕು.

“ಆವ ಜ್ಞಾನಿಯಾದರೇನು ? ದೇಹಾವಸಾನದಲ್ಲಿಯು
ಭಾವದಂತೆ ತಪ್ಪಲರಿಯದು ನೋಡಾ !
ಆವ ಜ್ಞಾನಿಯಾದರೇನು ನೋಡಾ ?
ಭಾವವೆಂಬುದು ಜನ್ಮಕ್ಕೆ ಈಡು,
ನಿರ್ಭಾವವೆಂಬುದು ಜನ್ಮಕ್ಕೆ ಕಾಡುಗಿಚ್ಚು ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ !”

## ಜ್ಞಾನಾಚಾರಸ್ಥಳ

“ಜ್ಞಾನವಿಡಿದು ಆಚರಿಸಿದರಲ್ಲದೆ,
ಕ್ರಿಯೆವಿಡಿದು ಆಚರಿಸಲಿಲ್ಲವು.
ರೂಪುವಿಡಿದು ನಿರೀಕ್ಷಿಸುವರಲ್ಲದೆ,
ಅರೂಪುವಿಡಿದು ನಿರೀಕ್ಷಿಸರು.
ಜ್ಞಾನವಿಡಿದಾಚರಿಸಿದರು ನಮ್ಮ ಕಪಿಲಸಿದ್ಧ
ಮಲ್ಲಿಕಾರ್ಜುನನಲ್ಲಿ ಚನ್ನಬಸವಣ್ಣನವರು.”

‘ಜ್ಞಾನಾಚಾರ’ ಈ ಪದಪ್ರಯೋಗ ಅತ್ಯಂತ ಸೂಕ್ತವೆಂಬುದಕ್ಕೆ ಸಿದ್ಧರಾಮೇಶ್ವರರ ಈ ಸುಂದರ ಸ್ವಾನುಭವ ವಚನ ಸತ್ಯಸಾಕ್ಷಿ. ಜ್ಞಾನಾಚಾರ ಸಂಪನ್ನ ಚನ್ನಬಸವಣ್ಣ. ಜ್ಞಾನಾಚಾರಕ್ಕೆ ಆತನನ್ನು ಬಿಟ್ಟು ಬೇರಿಲ್ಲ. ಆತನ ಹಿರಿಮೆಗೆ ಆತನ ಅರಿವಿನಾಚಾರದ ಕುರುಹಿಗೆ ಈ ವಚನವೊಂದೇ ಸಾಕು.

“ಕ್ರಿಯೆ ಅದು ಚನ್ನಬಸವಣ್ಣನ ಎಡಪಾದ.
ಜ್ಞಾನವದು ಚನ್ನಬಸವಣ್ಣನ ಬಲಪಾದ.
ನಾನು ಆವನ ಚಮ್ಮಾವುಗೆ.
ನೀನು ಅವನ ಮನೆಯ ದಾಸನು ನೋಡಯ್ಯ,
ಕಪಿಲ ಸಿದ್ಧ ಮಲ್ಲಿಕಾರ್ಜುನಾ !”

ಕ್ರಿಯೆಜ್ಞಾನಗಳು ಮಾತ್ರ ಅವನಲ್ಲಿರಲಿಲ್ಲ; ಅವುಗಳ ಸ್ವರೂಪವೇ ಅವನಾಗಿದ್ದನು.

ಕೇವಲ ಜ್ಞಾನಕ್ಕೆ ಶಿವಜೀವೈಕ್ಯರೂಪ ಮೋಕ್ಷವೇ ಪ್ರಯೋಜನವೆಂದು ಹೇಳುವರು. ಇದು ವಿಹಿತವಲ್ಲ. ಕೇವಲ ಜ್ಞಾನ ಕೇವಲ ವಸ್ತು ಪ್ರಕಾಶಕ. ಜ್ಞಾನಪ್ರದೀಪ ಅಜ್ಞಾನಾವರಣರೂಪ ಕತ್ತಲೆಯನ್ನು ಮಾತ್ರ ಕಳೆಯಬಲ್ಲುದು ; ವಸ್ತುವನ್ನು ತೋರಬಲ್ಲದು. ವಸ್ತು ಸ್ವರೂಪವನ್ನೇ ಮಾಡಲಾರದು. ವಸ್ತು

ಸ್ವರೂಪಾಗಬೇಕಾದರೆ ಅರಿತಂತೆ ಆಚರಿಸಬೇಕು. ಜ್ಞಾನದ ಬೆಳಕಿನಲ್ಲಿ ತೋರಿದ ವಸ್ತುವಿನೊಡನೆ ಒಂದಾಗುವಂತೆ ಮಾಡುವುದೇ ಆಚಾರ. ಅಥವಾ ಒಂದಾಗು ವುದೇ ಆಚಾರ. ಅದನ್ನೇ ಜ್ಞಾನಾಚಾರವೆಂದು ಶಿವಾಚಾರ್ಯರು ಕರೆದರು.

"ಮನವೆಂಬುದು ಬೇರಿಲ್ಲ,
ಮಹಾದೇವನ ಮಹಾ ಅರುಹು ನೋಡಾ.
ಸಂಕಲ್ಪ ವಿಕಲ್ಪಂಗಳ ಧರಿಸಿದಲ್ಲಿ ಮನವೆನಿಸಿತ್ತು;
ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು.
ಅರಿದು ಭಾವ ತಲೆದೋರಿದಲ್ಲಿ,
ಕಪಿಲ ಸಿದ್ಧಮಲ್ಲಿಕಾರ್ಜುನನೆನಿಸಿತ್ತು."

ಇಲ್ಲಿ ಭಾವವೆಂದರೆ ಅಂತಃಕರಣವೃತ್ತಿ ಅಥವಾ ಆಚಾರ. 'ಅರಿದು ಭಾವ ತಲೆದೋರಿದಲ್ಲಿ' ಅಂದರೆ ಜ್ಞಾನಾಚಾರ ಏರ್ಪಟ್ಟಲ್ಲಿ ಪರಶಿವಸ್ವರೂಪತ್ವ ವುಂಟಾಗುತ್ತದೆಯಲ್ಲದೆ ಬರೀ ಅರಿವಿಗೆ ಆಗುವುದಿಲ್ಲ.

ಸಂಕಲ್ಪ ವಿಕಲ್ಪವಿಲ್ಲದ ಮನವೇ ಮಹಾಜ್ಞಾನವೆಂದು ವಚನಕಾರನು ಹೇಳುತ್ತಾನೆ. ಇದರಿಂದ ಜ್ಞಾನವೂ ಸಹ ಒಂದು ಅಂತಃಕರಣವೆಂದೇ ತಿಳಿದುಬರು ತ್ತದೆ. ಶಿವಾದ್ವೈತ ತತ್ವದ ಪ್ರಕಾರ ಚಿತ್ತ, ಬುದ್ಧಿ, ಅಹಂಕಾರ ಮನ, ಜ್ಞಾನ, ಭಾವ ಇವು ಆರು ಅಂತಃಕರಣಗಳು. ಹೀಗಿರುವಾಗ ಜ್ಞಾನಾಚಾರ ವೆಂದರೆ ಜ್ಞಾನಾಂತಃಕರಣದ ಆಚಾರವೆಂದು ಹೇಳಬಹುದಾಗಿದೆ.

ಅಂತಃಕರಣರೂಪಜ್ಞಾನವು ಆಕಾಶಾಂಗನಾದ ಶರಣನ ಹಸ್ತವಾಗಿದೆ. ಆ ಜ್ಞಾನ ಹಸ್ತದಿಂದ ಪ್ರಸಾದಲಿಂಗಕ್ಕೆ ಶಬ್ದ ಪದಾರ್ಥವನ್ನು ಆನಂದ ಭಕ್ತಿಯಿಂದ ಶರಣಾಂಗನು ಸಮರ್ಪಿಸುತ್ತಾನೆ.

ವೀರಶೈವಚಾರ್ಯರ ಸಿದ್ಧಾಂತದಲ್ಲಿ ಅರಿವು ಅಂತಃಕರಣ, ಅರಿವಿಕೆ ಆಚಾರ. ಅಂತಃಕರಣ ತ್ರಿಗುಣಾತ್ಮಕವಾದ್ದರಿಂದ ತಮೋಗುಣದ ಅಜ್ಞಾನ ಅಂತಃಕರಣ ವನ್ನು ಆವರಿಸುತ್ತದ. ಆವರಿಸಿದ ಅಜ್ಞಾನವನ್ನು ಕಳೆದುಕೊಳ್ಳಬೇಕಾದರೆ ಆಚಾರ ರೂಪ ಕ್ರಿಯೆ ಅಗತ್ಯ.

ಮಾನವ ಜೀವನಕ್ಕೆ ಜ್ಞಾನ ಅಗತ್ಯ. ಆದರೆ ಜ್ಞಾನ ತಾನೇ ಬರುವುದಿಲ್ಲ. ಶ್ರೀ ಗುರುವಿನಿಂದ ಶಾಸ್ತ್ರದಿಂದ ಸಂಪಾದಿಸಬೇಕು. ಜ್ಞಾನವನ್ನು ಅವೈದಿಕ–

ವೈದಿಕವೆಂದು, ಅಯಥಾರ್ಥ-ಯಥಾರ್ಥವೆಂದು, ಭೇದ-ಅಭೇದವೆಂದು ವಿಂಗಡಿಸುವುದುಂಟು. ಅವೈದಿಕ ಜ್ಞಾನವೇ ಲೌಕಿಕಜ್ಞಾನ. ವೈದಿಕ ಜ್ಞಾನವೇ ಯಥಾರ್ಥ ಅಥವಾ ಪರಮಾರ್ಥ ಜ್ಞಾನ. ಇದು ಭೇದವೆಂದು ಅಭೇದವೆಂದು ಇಬ್ಬಗೆ. ದ್ವೈತಿಗಳು ಭೇದಜ್ಞಾನವೊಂದನ್ನೇ ಒಪ್ಪುತ್ತಾರೆ. ಅಂತೆಯೇ ಅದ್ವೈತಿಗಳು ಅಭೇದಜ್ಞಾನವೊಂದನ್ನೇ ಅಂಗೀಕರಿಸುತ್ತಾರೆ. ಶಿವಾದ್ವೈತಿಗಳಾದ ವೀರಶೈವರು ಭೇದಾಭೇದೋಭಯಜ್ಞಾನವಾದಿಗಳು. ಇವರು ಕೇವಲ ಜ್ಞಾನವಿದ್ದರೆ ಸಾಲದು, ಜ್ಞಾನಾಚಾರವಿರಬೇಕೆನ್ನುತ್ತಾರೆ. ಜ್ಞಾನ ಆಚಾರದಲ್ಲಿ ಬರದಿದ್ದರೆ ಪ್ರಯೋಜನವಿಲ್ಲ.

"ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು.
ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು.
ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು.
ವ್ಯವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು.
ಇವೆಲ್ಲ ಭವಕ್ಕೆ ಕಾರಣವಲ್ಲದೆ, ಭವರಹಿತ ಜ್ಞಾನವು
ಸಾಧ್ಯವಾಗುವುದು ದುರ್ಲಭವಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನ."

"ವ್ಯಾಕರಣವನೋದಿದಲ್ಲಿ ಶಬ್ದ ಶುದ್ಧಿಯಲ್ಲದೆ
ಮನ ಶುದ್ಧವಾಗಿ ಜ್ಞಾನ ಶುದ್ಧಿಯಾಗದು.
ಛಂದಸ್ಸನು ಸಾಧಿಸಿದಲ್ಲಿ ಕವಿತಾ ಶುದ್ಧಿಯಲ್ಲದೆ
ಕವಿತೆಯ ಸಾಧಿಸಿ ವ್ಯಾಸನಂತೆ ಚಿರಂಜೀವಿಯಾಗನು.
ಅಷ್ಟಾದಶ ಪುರಾಣವ ಸಾಧಿಸಿದಲ್ಲಿ ವಾಕ್ ಶುದ್ಧಿಯಲ್ಲದೆ
ಕಪಿಲ ಸಿದ್ಧಮಲ್ಲಿಕಾರ್ಜುನ ಮಹಾದೇವನಲ್ಲಿ
ದೇಹ ಸ್ವಭಾವ ಶುದ್ಧಿಯಾಗದು ನೋಡಾ."

ಮನ ಶುದ್ಧಿಯಾಗಬೇಕಾದರೆ ಸ್ವಭಾವ ಶುದ್ಧಿಯಾಗಬೇಕಾದರೆ ಜ್ಞಾನ ಆಚಾರಕ್ಕೆ ಅಳವಡಬೇಕು. ಅಳವಡದೆ ಅನುಭವ ಬಾರದು ; ಆನಂದವಾಗದು.

"ಅಸ್ಯ ಜ್ಞಾನ ಸಮಾಚಾರೋ ಯೋಗಿನಃ ಸರ್ವದೇಹಿನಾಂ ।
ಜ್ಞಾನಾಚಾರೋ ಯದುಕ್ತೋsಯಂ ಜ್ಞಾನಾಚಾರಃ ಸ ಕಥ್ಯತೇ ॥"

ಭಾವಾಚಾರವುಳ್ಳ ಮಾಹೇಶ್ವರಾಂಗನು ಜ್ಞಾನದಿಂದ ಕೂಡಿದ ಆಚಾರವಂತನಾಗಿ ತನ್ನ ಆದರ್ಶವಾದ ಜ್ಞಾನ ಸಮಾಚಾರವನ್ನು ಲೋಕಕ್ಕೆ ಧಾರೆಯೆರೆಯಬೇಕು. ಅದು ಎಲ್ಲ ಜನತೆಗೆ ಜ್ಞಾನಾಚಾರವಾಗಿ ಪರಿಣಮಿಸುತ್ತದೆ. ಆಗ ಅದು ಜ್ಞಾನಾಚಾರ ಎಂದು ಹೇಳಿಸಿಕೊಳ್ಳಲು ಅರ್ಹತೆಯುಳ್ಳದ್ದಾಗುತ್ತದೆ.

ತಾನೊಬ್ಬ ಜ್ಞಾನವನ್ನು ಆಚರಿಸಿದರೆ ಸಾಲದು, ತನ್ನಂತೆ ಸರ್ವರೂ ಜ್ಞಾನಾಚಾರ ನಿರತರಾಗುವಂತೆ ಮಾಡುವುದೇ ಪೂರ್ಣ ಜ್ಞಾನಾಚಾರ. ಮಾಹೇಶ್ವರಾಂಗನು ವಿಶ್ವಕುಟುಂಬಿ ಎಂಬುದು ಇದರಿಂದ ಮನವರಿಕೆಯಾಗುತ್ತದೆ.

ಆಚಾರವೇ ಸಮಾಚಾರವಾಗಬೇಕು. ಹಾಗಾಗಬೇಕಾದರೆ ಜ್ಞಾನಾಚಾರ ಒಂದೇ ಬಗೆಯ ನಡೆಗೆ ಒಳಗಾಗಬೇಕು. ಅವಧಾನದಿಂದ ಒಡಗೂಡಿರಬೇಕು. ಆಗ ಅದು ಲೋಕದವರಿಗೆ ಒಸಗೆಯಾಗುತ್ತದೆ. ಸಮಾನತೆಗೂ ಸಮಾಧಾನಕ್ಕೂ ಕಾರಣವಾಗುತ್ತದೆ. ಸರ್ವರ ಸಮಾರಾಧನೆಗೆ ಎಟಕುತ್ತದೆ. ಸರ್ವರ ಉದ್ಧಾರಕ್ಕೆ ಕಾರಣವಾಗುತ್ತದೆ. ಬರೀ ಜ್ಞಾನ ತಾರಕವಲ್ಲ; ಜ್ಞಾನಾಚಾರವೇ ಸರ್ವ ತಾರಕ ತತ್ತ್ವ.

ಆ ಪರಮಾರ್ಥವನ್ನು ಬರೀ ಅರಿದು ಬಿಟ್ಟರೆ ಫಲವಿಲ್ಲ; ಅದು ಆಚರಣೆಗೆ ಅಳವಡಬೇಕು. ಪದ್ಧತಿಯಾಗಿ ಪರಿಣಮಿಸಬೇಕು. ಜ್ಞಾನಾಚಾರವೆಂದರೂ ಕೈವಲ್ಯ ಪದ್ಧತಿಯೆಂದರೂ ಒಂದೆ! ಜ್ಞಾನವಿಲ್ಲದ ಆಚಾರ ಮೂಢಾಚಾರ. ಆಚಾರವಿಲ್ಲದ ಜ್ಞಾನ ಜಡ. ಕಾನನದ ಬೆಳದಿಂಗಳಂತೆ ಕೆಲಸಕ್ಕೆ ಬಾರದು,

ನೆನೆದರಾಗದು ಸಾಧಿಸದನ್ನಕ್ಕ.
ಸಾಧಿಸಿದರಾಗದು ತಿಳಿಯದನ್ನಕ್ಕ.
ತಿಳಿದರಾಗದು ಎಳೆ ಬಾಲಚಂದ್ರಧರ
ಕಪಿಲ ಸಿದ್ಧ ಮಲ್ಲಿಕಾರ್ಜುನನ ಕೈವಲ್ಯ ಪದವು."

ಕೇವಲ ಜ್ಞಾನದಿಂದ ಮುಕ್ತಿಯಾಗದು. 'ಆಗದಾಗದು ವರವಿವೇಕಿಗೆ ಮುಕ್ತಿ' ಎಂದು ನಿಜಗುಣರು ನಿರೂಪಿಸಿದ್ದಾರೆ. ಇದನ್ನೇ ಈ ವಚನವು 'ತಿಳಿದ ರಾಗದು ಕೈವಲ್ಯ ಪದವು' ಎಂದು ತಿಳಿಸಿದೆ. ಇದನ್ನು ಇನ್ನೂ ಸ್ಪಷ್ಟವಾಗಿ ಈ ವಚನ ತಿಳಿಸುತ್ತದೆ :

"ಜ್ಞಾನದಲ್ಲಿ ಅರಿದತೇನಯ್ಯ,
ಸತ್ಕ್ರಿಯಾಚಾರ ಸಂದದನ್ನಕ್ಕರ ?
ನೆನೆದ ಮಾತ್ರದಲ್ಲಿ ಕಾಂಬುದೇ, ಕಾರ್ಯದಲ್ಲಲ್ಲದೆ ?
ಕುರುಡ ಕಾಣ ಪಥವ ; ಹೆಳವ ನಡಿಯನರಿಯ.
ಒಂದಿಲ್ಲದಿದ್ದರೆ ಒಂದಾಗದು.
ಜ್ಞಾನವಿಲ್ಲದ ಕ್ರಿ ಜಡನು. ಕ್ರಿ ಇಲ್ಲದ ಜ್ಞಾನ ಭ್ರಾಂತು.
ಇದು ಕಾರಣ ಸಿದ್ಧಸೋಮನಾಥನಲ್ಲಿ ಎರಡೂ ಬೇಕು."

ವಚನಾರ್ಥ ಸ್ಪಷ್ಟವಾಗಿದೆ.

ಇನ್ನು ಜ್ಞಾನಾಚಾರ ಅಂಗಜ್ಞಾನಾಚಾರ, ಲಿಂಗಜ್ಞಾನಾಚಾರ ಎಂದು ಎರಡು ಬಗೆ. ಮಾಹೇಶ್ವರಾಂಗನಿಗೆ ಇವೆರಡೂ ಅಗತ್ಯ. ಇವೆರಡೂ ಅವಿರೋಧ ವಾದವುಗಳು. ಅಂಗಜ್ಞಾನಾಚಾರ ಮೊದಲಿನದು. ಇದು ಲಿಂಗಜ್ಞಾನಾ ಚಾರಕ್ಕೆ ಸಹಾಯಕವಾಗಿರುತ್ತದೆ. ಅಂಗಜ್ಞಾನಾಚಾರಗಳು ಕುಳಗಳು. ಲಿಂಗ ಜ್ಞಾನಾಚಾರಗಳು ಸ್ಥಳಗಳು. ಸ್ಥಳ-ಕುಳಗಳ ಸಂಬಂಧದಲ್ಲಿ ಅರ್ಚನ ಅರ್ಪ ಣಾದಿ ಆಚಾರಗಳು ಮತ್ತು ಅವಧಾನ ಅನುಭವಾದಿ ಆಚಾರಗಳು ಅಳವಡುತ್ತವೆ. ಅಂಗವಿಲ್ಲದೆ ಲಿಂಗವಿಲ್ಲ. ಹಸ್ತವಿಲ್ಲದೆ ಮುಖವಿಲ್ಲ. ಪದಾರ್ಥವಿಲ್ಲದೆ ಪ್ರಸಾದ ವಿಲ್ಲ ಸರ್ವ ದೇಹಗಳಿಗೆ ಜ್ಞಾನಾಚಾರ ಬೇಕೆಂದು ಹೇಳಿದುದನ್ನು ಮರೆಯ ಬಾರದು.

ಮೊದಲು ಜ್ಞಾನಾಚಾರದಿಂದ ಅಂಗವು ಶುದ್ಧವಾದರೆ ಆಮೇಲೆ ಜ್ಞಾನಾ ಚಾರದಿಂದ ಲಿಂಗಸಿದ್ಧಿಯುಂಟಾಗುತ್ತದೆ ಜ್ಞಾನಾಚಾರದಿಂದ ಅಂಗದ ಪೂರ್ವಾಶ್ರಯ ಅಳಿಯುತ್ತದೆ. ಪದಾರ್ಥದ ಪೂರ್ವಾಶ್ರಯ ಪರಿಹಾರವಾಗು ತ್ತದೆ. ಹಸ್ತ ಮುಖಾಂಗಳಲ್ಲಿ ಆ ಆ ಲಿಂಗಗಳು ಪ್ರತಿಷ್ಠವಾಗುತ್ತವೆ ; ಲಿಂಗ

ಸಂಗ ಅಂಗವಿಸುತ್ತದೆ. ಆಗ ಆ ಆ ಲಿಂಗಗಳ ಅರಿವು ಅಳವಟ್ಟು ಅವುಗಳಿಗೆ ತಕ್ಕ ಅರ್ಪಣಾಚಾರಕ್ಕೆ ಅನುವಾಗುತ್ತದೆ. ಅನುವಾದ ಬಳಿಕ ಅಂಗಭೋಗ ವಳಿದು ಲಿಂಗಭೋಗೋಪಭೋಗ ಸಮನಿಸುತ್ತದೆ. ಈ ಲಿಂಗಭೋಗದಲ್ಲಿ ಲಿಂಗಕ್ಕೆ ಲಿಂಗವನರ್ಪಿಸುವ ಜ್ಞಾನಾಚಾರವುಂಟಾಗುತ್ತದೆ ಆ ಮೇಲ ಹಂತದಲ್ಲಿ ಲಿಂಗೈಕಜ್ಞಾನಾಚಾರವಿರುತ್ತದೆ. ಅದನ್ನೇ ಲಿಂಗಾಚಾರ ಎಂದು ಹೇಳುವರು. ಆಗ ಲಿಂಗಾಚಾರವೆಂದರೂ ಜ್ಞಾನಾಚಾರವೆಂದರೂ ಒಂದೆ ! ಈ ಯಥಾರ್ಥ ಜ್ಞಾನವು ಪಿಂಡಾಂಡದಲ್ಲಿರುವ ಅಂಗರಿಗೆಲ್ಲ ಆಗಬೇಕು ; ಬ್ರಹ್ಮಾಂಡದಲ್ಲಿರುವ ದೇಹಿಗಳಿಗೆಲ್ಲ ಆಗಬೇಕು. ಇದುವೇ ಸರ್ವೋದ್ಧಾರದ ಸಮಾಚಾರ. ಸರ್ವ ದರ್ಶನ ಸಮನ್ವಯ ಜ್ಞಾನಾಚಾರ. ಇದು ಭಾವಯೋಗಿಯ ಭಾಂಡಾರ.

"ಶಿವಾದ್ವೈತಪರಂ ಜ್ಞಾನಂ ಜ್ಞಾನಮಿತ್ಯುಚ್ಯತೇ ಬುಧೈಃ ।
ಸಿದ್ಧೇನ ವಾಪ್ಯಸಿದ್ಧೇನ ಫಲಂ ಜ್ಞಾನಾಂತರೇಣ ಕಿಂ ?"

ಶಿವಾದ್ವೈತಪರವಾದ ಜ್ಞಾನವೇ ಜ್ಞಾನ. ಶಿವಾದ್ವೈತ ಜ್ಞಾನವನ್ನೇ ಶಿವಾಚಾರ್ಯರು ಸಮ್ಮತಿಸಿದ್ದಾರೆ. ಬೇರೆ ಬಗೆಯ ಜ್ಞಾನವು ಶಾಸ್ತ್ರಸಮ್ಮತವಾಗಲಿ ಆಗದಿರಲಿ ಅದು ಪೂರ್ಣ ಜ್ಞಾನವಲ್ಲ ; ಅದರಿಂದ ಪ್ರಯೋಜನವಿಲ್ಲ.

ದ್ವೈತ, ಅದ್ವೈತ. ಶಿವಾದ್ವೈತ (ದ್ವೈತಾದ್ವೈತ) ಎಂದು ಜ್ಞಾನ ಮೂರುಬಗೆ. ಇವುಗಳಲ್ಲಿ ಮೊದಲಿನವೆರಡು ಶಾಸ್ತ್ರಸಿದ್ಧವೂ ಆಗಿವೆ ; ಶಾಸ್ತ್ರದ ಒಂದು ಮಂತ್ರದಲ್ಲಿ ಸಿದ್ಧವಾದರೆ ಇನ್ನೊಂದು ಮಂತ್ರದಲ್ಲಿ ಅಸಿದ್ಧವಾಗಿರುತ್ತವೆ. ಇದರಿಂದಾಗಿ ಇವೆರಡಕ್ಕೆ ಸರ್ವಶ್ರುತಿ ಸಮನ್ವಯವಿಲ್ಲ. ಇವು ಸದಾ ಸರ್ವರ ಆಚಾರಕ್ಕೆ ಒಗ್ಗುವವಲ್ಲ. ಈ ಕಾರಣಗಳಿಂದ ಕೇವಲದ್ವೈತ ಕೇವಲಾದ್ವೈತ ಜ್ಞಾನಗಳಿಂದ ಫಲವಿಲ್ಲ. ದ್ವೈತಾದ್ವೈತ ಸಮನ್ವಯವುಳ್ಳ ಶಿವಾದ್ವೈತ ಜ್ಞಾನವೆ ಸರ್ವೋನ್ನತವಾದುದು ; ಸರ್ವಸಮ್ಮತವಾದುದು. ಸರ್ವರ ಆಚರಣೆಗೂ ಉಚಿತವಾದುದು. ವೀರಶೈವ ಶಿವಾಚಾರ್ಯರು ಶಿವಾದ್ವೈತ ಜ್ಞಾನವೇ ಜ್ಞಾನವೆಂದು ಒಪ್ಪಿ ಉದ್ಘೋಷಿಸಿದ್ದಾರೆ.

ಜ್ಞಾನವೇ ಅಂಗ, ಆಚಾರವೇ ಲಿಂಗ ಒಂದೆರಡಾಗಿ ಎರಡೊಂದಾಗಿ ಶಿವಾದ್ವೈತದ ಸಮ್ಯಕ್ ಜ್ಞಾನವಾಗಿದೆ. ಜ್ಞಾನ ಶಕ್ತಿಯಾಗಿ; ಆಚಾರ ಶಿವವಾಗಿ ಶಕ್ತಿ ವಿಶಿಷ್ಟಾದ್ವೈತ ಮಹಾಜ್ಞಾನ (ಸ್ವಾನುಭವ)ವಾಗಿದೆ.

"ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾರಣ ಎಚ್ಚರಿಕೆಯಾಯಿತ್ತು. ಗುರುಕರುಣದಿಂದ ಅರಿವಾಯಿತ್ತು, ಆಚಾರವಾಯಿತ್ತು. ಜಂಗಮದಿಂದ ತಿಳಿದ ತಿಳಿವಿನಲ್ಲಿ ಶಿವಪ್ರಸಾದ ಸಾಧ್ಯವಾಯಿತ್ತು. ಕೂಡಲ ಚನ್ನಸಂಗಯ್ಯನಲ್ಲಿ ಏಕಾರ್ಥ ವಾಯಿತ್ತು,

ಗುರುಕರುಣದಿಂದ ಉಂಟಾಗುವ ಅರಿವು ಆಚಾರಗಳ ಏಕಾರ್ಥವೇ ಶಿವಾದ್ವೈತ! ಕರಿಗೊಂಡ ಅರಿವು ಆಚಾರಗಳೆ ಶಿವಪ್ರಸಾದ. ಆ ಶಿವಪ್ರಸಾದವೇ ಶಿವಾದ್ವೈತ!

'ಶಿವಶ್ಚ ಶಿವಾಚ ಶಿವೌ ; ಶಿವಯೋಃ ಅದ್ವೈತಂ ಶಿವಾದ್ವೈತಂ' ಎಂದು ಶ್ರೀಗುರು ಶಿವಾದ್ವೈತ ಜ್ಞಾನವನ್ನು ಬೋಧಿಸುತ್ತಾನೆ;

"ಅಂಗವಾರು ಲಿಂಗವಾರು ಶಕ್ತಿಯಾರು ಭಕ್ತಿಯಾರು ಇಂತಿವೆಲ್ಲವ ಗರ್ಭೀಕರಿಸಿಕೊಂಡು ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ನೀನಾದ ಕಾರಣ ನಿನ್ನ ಸಕಲ ಶಿವತತ್ವವೆಂದೆನು ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ!"

"ಚಿತ್ತ ಬುದ್ಧಿ ಅಹಂಕಾರ ಹುಟ್ಟದಂದು,
ಮನ ಜ್ಞಾನ ಭಾವಂಗಳುತ್ಪತ್ತಿ ಇಲ್ಲದಂದು,
ಜ್ಞಾತೃ ಜ್ಞಾನ ಜ್ಞೇಯಂಗಳು ಇಲ್ಲದಂದು,
ಜ್ಞಾನ ಸಂಜ್ಞಾನ ಮಹಾಜ್ಞಾನವೆಂಬ ವೃತ್ತಿಜ್ಞಾನವಿಲ್ಲದಂದು,
ಅಖಂಡ ಪರಿಪೂರ್ಣ ನಿಃಕಲ ನಿಜಜ್ಞಾನಮೂರ್ತಿ ನೀನೇ ಅಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ."

ಇದು ಶಿವಾದ್ವೈತಪರ ಜ್ಞಾನ. ಇದಕ್ಕಿಲ್ಲ ಸಮಾನ. ಇದು ಅಖಂಡ ಪರಿಪೂರ್ಣ ನಿಜಜ್ಞಾನ. ಇದು ಅಂಗ ಲಿಂಗ ಶಕ್ತಿ ಭಕ್ತಿ ಇವೆಲ್ಲವನ್ನು ಗರ್ಭೀಕರಿಸಿಕೊಂಡಿದೆ. ಆದ್ದರಿಂದ ಸಚ್ಚಿದಾನಂದ ನಿತ್ಯಪರಿಪೂರ್ಣವೆಂದು ಹೇಳಿಸಿಕೊಳ್ಳಲು ಸಮರ್ಥವಾಗಿದೆ. ಸಕಲವನ್ನೊಳಗೊಂಡು ನಿಷ್ಕಲವಾಗಿದೆ. ನಿಷ್ಕಲದೊಳಗೆ ಸಕಲ ಅವ್ಯಕ್ತವಾಗಿದೆ:

"ಲಿಂಗವನರಿಯದೆ ಏನನರಿದಡೂ ಫಲವಿಲ್ಲ.
ಲಿಂಗವನರಿದ ಬಳಿಕ ಮತ್ತೇನನರಿದಡೂ ಫಲವಿಲ್ಲ.

ಸರ್ವಕಾರಣ ಲಿಂಗವಾಗಿ, ಅಂಗವನರಿದರಿದು
ಲಿಂಗಸಂಗವ ಮಾಡುವ
ಆ ಸಂಗದೊಳಗೋಲಾಡುವ ಗುಹೇಶ್ವರ !"

ಜ್ಞಾನಾಂತರದಿಂದ ಫಲವಿಲ್ಲ ಎಂಬ ಜಗದ್ಗುರು ರೇಣುಕರ ವಾಣಿಯನ್ನು ಈ ವಚನವು ಎತ್ತಿ ಹಿಡಿದಿದೆ.

ಲಿಂಗ ವ್ಯಕ್ತಿಗತವೂ ಆಹುದು ; ವಿಶ್ವಗತವೂ ಅಹುದು. ಘಟಾಕಾಶದಂತೆ ವ್ಯಕ್ತಿನಿಷ್ಠವಾಗಿದೆ. ಮಹಾಕಾಶದಂತೆ ವಿಶ್ವವ್ಯಾಪ್ತವಾಗಿದೆ. ಇದರಿಂದಾಗಿ ಅದು ಸರ್ವಕಾರಣವಾಗಿದೆ. ಶಿವಾದ್ವೈತಸ್ವರೂಪವಾಗಿದೆ. ಆದ್ಧರಿಂದ ಶಿವಾದ್ವೈತಸ್ವರೂಪವಾದ ಲಿಂಗವನರಿದ ಜ್ಞಾನವೇ ಪರಿಪೂರ್ಣಜ್ಞಾನ. ಉಳಿದುದೆಲ್ಲ ಅಪೂರ್ಣಜ್ಞಾನ.

ಈ ಪರಿಪೂರ್ಣ ಶಿವಾದ್ವೈತ ಜ್ಞಾನಕ್ಕೆ ಭಿನ್ನವಾದ ಜ್ಞಾನವನ್ನು ಶಾಸ್ತ್ರ ಹೇಳಿದ್ದರೂ ಅದು ಗಮನಾರ್ಹವಲ್ಲ. ಶಾಸ್ತ್ರಸಿದ್ಧವಾಗಿದ್ದರೂ ಸ್ವಾನುಭವ ಸಿದ್ಧವಾಗಬೇಕು : ಶಿವಾತ್ಮವಿದ್ಯಾ ಗುರುವಿನಿಂದ ಸಿದ್ಧವಾಗಿರಬೇಕು. ಶಿವಾದ್ವೈತ ಜ್ಞಾನವೇ ಶಿವಾಚಾರದ ಗುರಿ ; ಶಿವಯೋಗದ ಪರಿ.

"ನಿರ್ಮಲಂ ಹಿ ಶಿವಜ್ಞಾನಂ ನಿಃಶ್ರೇಯಸಕರಂ ಪರಂ ।
ರಾಗದ್ವೇಷಾದಿಕಲುಷಂ ಭೂಯಃ ಸಂಸೃತಿಕಾರಣಂ ॥"

ಶಿವಜ್ಞಾನ ನಿಸ್ಸಂಶಯವಾಗಿ ನಿರ್ಮಲ ; ನಿಶ್ಶ್ರೇಯಸದಾಯಕ; ಪರಮೋತ್ಕೃಷ್ಟ. ರಾಗದ್ವೇಷಗಳಿಂದ ಕೂಡಿದ ಜ್ಞಾನ ಮಲಿನ, ಮರಳಿ ಜನನಮರಣ ರೂಪ ಸಂಸಾರಕಾರಣ.

"ಶಿವಜ್ಞಾನವು ಜೀವನನ್ನು ಮಲತ್ರಯದಿಂದ ಮುಕ್ತನಾಗಿಸುತ್ತದೆ. ಅದು ಸ್ವಯಂ ನಿರ್ಮಲವಾಗಿದೆ. ತನ್ನನ್ನು ಉಪಾಸಿಸುವವರನ್ನೂ ನಿರ್ಮಲರನ್ನಾಗಿಸುತ್ತದೆ.

ಮಲತ್ರಯಗಳು ದುಃಖತ್ರಯಗಳಿಗೆ ಕಾರಣ;ದುಃಖತ್ರಯವೇ ದುರ್ಭೇದ್ಯ ಬಂಧ. ಇಂತಹ ಬಂಧದಿಂದ ಬಿಡುಗಡೆಯಾಗಬೇಕಾದರೆ ನಿಶ್ಶ್ರೇಯಸಕಾರಣವಾದ ನಿರ್ಮಲ ಶಿವಜ್ಞಾನದ ಆಚರಣೆಯೇ ದಿವ್ಯ ಔಷಧಿ.

ಶಿವದೀಕ್ಷಾ ಸಂಸ್ಕಾರದ ಲಕ್ಷ್ಯ ನಿರ್ಮಲ ಶಿವಜ್ಞಾನ. ನಿರ್ಮಲ ಶಿವ ಜ್ಞಾನವು ಚಿತ್ಕಳಾಗುರುವಿನ ಕಾರುಣ್ಯಜನ್ಯ. ಶಾಂತಿಕಳಾಗುರುವಿನ ಕರುಣಾಮೃತ. ಶಿಷ್ಯಶಿಶು ಅದನ್ನು ಪಾನ ಮಾಡಿದರೆ ಅಂದರೆ ಆಚರಿಸಿದರೆ ಅಂಗವಿಸುವುದು ಪರಮನಿಃಶ್ರೇಯಸ್ಸು. ಆ ನಿರತಿಶಯ ನಿಃಶ್ರೇಯಸವು ನಿರ್ಮಲ ಶಿವ ಜ್ಞಾನದಿಂದ ಮಾತ್ರ ಸಾಧ್ಯ; ಆ ನಿರ್ಮಲ ಶಿವಜ್ಞಾನವು ಶಿವಾತ್ಮವಿದ್ಯಾ ಗುರುವಿನಿಂದ ಸಾಧ್ಯ.

ಆ ಶಿವಜ್ಞಾನಕ್ಕೆ ಭಿನ್ನವಾದ ಭವಜ್ಞಾನವು ರಾಗದ್ವೇಷ ಅಭಿನಿವೇಶ ಗಳಿಂದ ಕಳಂಕಿತ ; ಪುನಪ್ಪುನ ಹುಟ್ಟು ಸಾವುಗಳಿಗೆ ಬರಿಸಲು ಕಾರಣ. ತಾಪತ್ರಯ ಜನನಭೂಮಿ. ಆದ್ದರಿಂದ ನಿಶ್ಶ್ರೇಯಸಕಾಂಕ್ಷಿಯು ಅವಿದ್ಯಾದಿ ಪಂಚ ಕ್ಲೇಶ ಗಳಿಗೆ ಬಲಿಯಾಗಬಾರದು. ಗುರುಬೋಧೆಯನ್ನು ಪಡೆದು ಅದರಂತೆ ಆಚರಿಸಿದರೆ ಅವಿದ್ಯಾದಿಗಳು ತೊಲಗುವವು ; ಆಚರಿಸದೆ ಹೋದರೆ ;

"ಹೇಳಿದ ಬೋಧೆ ಶಿಲಾಲಿಪಿಯಾದಾದರೆ
ಶಿಲಾಸದೃಶ ನೋಡಾ !
ಭವಕ್ಕೆ ಹೇಳಿದ ಬೋಧೆ ಜಲಲಿಪಿಯಾದರೆ
ಜಲಸದೃಶ ನೋಡಾ !
ಭವಕ್ಕೆ ಹೇಳಿದ ಬೋಧೆ ಗಟ್ಟಿಗೊಂಡರೆ,
ಕಳೆವುದೆತ್ತ ನಿನ್ನ ಮಾಯಾಜಾಲವನೆಲೆ
ಕಪಿಲಸಿದ್ಧ ಮಲ್ಲಿಕಾರ್ಜುನಾ ?"

ಆಗುವ ಅವಸ್ಥೆಯನ್ನು ಇದು ಚೆನ್ನಾಗಿ ಚಿತ್ರಿಸಿದೆ, ಶಿವಕ್ಕೆ ಹೇಳಿದ ಬೋಧೆ ಗಟ್ಟಿಗೊಳ್ಳಬೇಕಲ್ಲದೆ ಭವಕ್ಕೆ ಹೇಳುವ ಬೋಧೆ ಗಟ್ಟಿಗೊಳ್ಳಬಾರದು; ಗಟ್ಟಿ ಗೊಂಡರೆ ಅವಿದ್ಯಾ ಜಾಲದಲ್ಲಿ ಬಿದ್ದು ಒದ್ದಾಡುವುದು ತಪ್ಪಿದ್ದಲ್ಲ. ರಾಗ ದ್ವೇಷಾದಿಗಳಲ್ಲಿ ಬೆಂದು ಬೂದಿಯಾಗುವುದು ಅನಿವಾರ್ಯ, "ತಿಳಿದು ತಿಳಿದು ವಿಷಯಕ್ಕೆ ಮೈಗೊಟ್ಟರೆ ಅನುಭಾವಿಯೇ ಅಯ್ಯಾ ? ಅಳಿದು ಅಳಿದು ಆನಂದಕ್ಕೆ ಮೈಗೊಟ್ಟರೆ ಅಜ್ಞಾನಿಯೇ ಅಯ್ಯಾ ? ತಿಳಿದ ಬಳಿಕ ವಿಷಯಂಗಳಳಿಯಬೇಕು. ಅಳಿದ ಬಳಿಕ ಎಳೆಯ ಚಂದ್ರಧರ ಕಪಿಲಸಿದ್ಧ ಮಲ್ಲಿಕಾರ್ಜುನನಾಗಲೇಬೇಕು."

ರಾಗದ್ವೇಷಾದಿಗಳನ್ನು ಅಳಿಯುವುದೇ ಶಿವತ್ವಕ್ಕೆ ಮೂಲ, ರಾಗದ್ವೇಷಾದಿಗಳಿಗೆ ಮೈಗೊಡುವುದೇ ಭವಕ್ಕೆ ಮೂಲ; ಇದನರಿತು ರಾಗಾದಿಗಳನಳಿದು ಶಿವಜ್ಞಾನ ಶಿವಭಕ್ತಿ ಶಿವಧ್ಯಾನ ಶಿವವ್ರತ ಶಿವಪೂಜೆಗಳಿಂದ ಬಾಳಬೇಕು. ಬೆಳಗಬೇಕು. ಇದುವೇ ಶಿವಯೋಗ.

"ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪದು,
ಅರಿವು ಮರೆದಲ್ಲಿ ಜ್ಞಾನ ಹೀನವಾಗಿಪ್ಪದು.
ಜ್ಞಾನವ ಮರೆದಲ್ಲಿ ಒಳಗಿನ ಕಳೆ ಹೋಯಿತ್ತು.
ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು,
ಅವರಿಗೆ ಮರೆಯಾಗಿ ತೊಲಗಿತ್ತು."

ಆಚಾರ ಅರಿವುಗಳನ್ನು ಮರೆತರೆ ಕಳೆಯಿಲ್ಲ. ಕಳಾಮೂರ್ತಿ ಶಿವನ ಸಾಕ್ಷಾತ್ಕಾರವಿಲ್ಲ. ಆದ್ದರಿಂದ ಶಿವಜ್ಞಾನದ ಆಚಾರ ಜೀವನಕ್ಕೆ ಆವಶ್ಯಕ.

"ಪರಿಪೂರ್ಣಂ ಮಹಾಜ್ಞಾನಂ ಪರತತ್ತ್ವಪ್ರಕಾಶಕಂ।
ಅವಲಂಬ್ಯ ಪ್ರವೃತ್ತೋ ಯಃ ಜ್ಞಾನಾಚಾರಃ ಸ ಉಚ್ಯತೇ॥
ನಿರ್ವಿಕಲ್ಪೇ ಪರೇ ಧಾಮ್ನಿ ನಿಷ್ಕಲೇ ಶಿವನಾಮನಿ॥
ಜ್ಞಾನೇನ ಯೋಜಯೇತ್ಸರ್ವಂ ಜ್ಞಾನಾಚಾರೀ ಪ್ರಕೀರ್ತಿತಃ ॥"

ಆ ಪರತತ್ತ್ವವನ್ನು ಪ್ರಕಾಶಿಸುವುದೇ ಮಹಾಜ್ಞಾನ; ಆ ಮಹಾಜ್ಞಾನವೇ ಪರಿಪೂರ್ಣ. ಅಂತಹ ಮಹಾಜ್ಞಾನವನ್ನು ಹೊಂದಿ ಆಚರಿಸುವುದೇ ಜ್ಞಾನಾಚಾರ,

ನಿರ್ವಿಕಲ್ಪನೂ ನಿಷ್ಕಳನೂ ಆದ ಪರಶಿವಧಾಮದಲ್ಲಿ ಏನೆಲ್ಲವನ್ನೂ ಸಂಯೋಜನಗೊಳಿಸುವವನೇ ಜ್ಞಾನಾಚಾರಿ,

"ಆ ಮಹಾದೇವನ ಸ್ವರೂಪ ಮಹಾಸತ್ ಮತ್ತು ಮಹಾಚಿತ್. ಆ ಮಹಾಚಿದ್ರೂಪವೇ ಮಹಾಜ್ಞಾನ, ಆ ಮಹಾದೇವನಂತೆ ಆ ಮಹಾಜ್ಞಾನವೂ ಪರಿಪೂರ್ಣವಾಗಿದೆ ; ಪರತತ್ತ್ವಪ್ರಕಾಶಕವಾಗಿದೆ. ರವಿಪ್ರಕಾಶದಲ್ಲಿ ಕಾರ್ಯಗಳನ್ನು

ಮಾಡುವಂತೆ ಶಿವಪ್ರಕಾಶದಲ್ಲಿ ಮಾಡುವುದೆ ಆಚಾರ; ಒಳ್ಳೆಯ ನಡತೆಯಲ್ಲಿರುವುದೆ ಆಚಾರ. ಅದು ಶಿವಜ್ಞಾನದಿಂದ ಕೂಡಿರುವುದರಿಂದ ಜ್ಞಾನಾಚಾರ,

ಚಿನ್ಮಯಾಚಾರವೇ ಚಿನ್ನಿಗಾಚಾರ. ಅದರಿಂದ ಬಾಳು ಬೆಳಗುತ್ತದೆ, ಭವದೋಷದಿಂದ ಬಿಡುಗಡೆಯನ್ನು ಪಡೆಯುತ್ತದೆ. ಆತನ ಬಾಳು ಇಲ್ಲಿ ಸಲ್ಲುವಂತಾಗುತ್ತದೆ; ಅಲ್ಲಿಯೂ ಸಲ್ಲುತ್ತದೆ. ಆಚಾರ ಬಿಟ್ಟು ಪರತತ್ತ್ವಸುಖವಿಲ್ಲ; ಅನಾಚಾರ ಬಿಟ್ಟು ನರಕ ದುಃಖ ಬೇರಿಲ್ಲ. ಅಜ್ಞಾನಾಚಾರ ಪ್ರಯೋಜನವಿಲ್ಲ. ವಚನಾಚಾರ–ಅನುಕರಣಾಚಾರಗಳು ಅನಾಚಾರಕ್ಕೆ ಸಮಾನ. ಅನುಕರಣಾಚಾರ ಎರಡು ಬಗೆ: ಅಂತಃಕರಣವಿಲ್ಲದೆ ಜನಾಕರ್ಷಣಕ್ಕೆ ಮಾತ್ರ ಮಾಡುವುದು ಒಂದು ಬಗೆ. ಅಂತಃಕರಣಪೂರ್ವಕ ಅನುಕರಣ ಮಾಡುವುದು ಇನ್ನೊಂದು ಬಗೆ. ಇವುಗಳಲ್ಲಿ ಎರಡನೇಯದು ಪುಣ್ಯಪ್ರಾಪ್ತಿಗೆ ಸಾಧನ. ಬರೀ ಮಾತಿನಲ್ಲಿ ಆಚಾರ ತೋರುವುದು ವಿಹಿತವಲ್ಲ.

"ನುಡಿಯಬಹುದು ಅದ್ವೈತವನೊಂದು ಕೋಟಿವೇಳೆ,
ಒಮ್ಮೆ ನುಡಿಯಬಹುದೆ ನಿರ್ಧರವಾಗಿ ಸದ್ಭಕ್ತಿ ಸದಾಚಾರವನು ?
ನುಡಿದಂತೆ ನಡೆವ, ನಡೆದಂತೆ ನುಡಿವ
ಸದ್ಭಕ್ತಿ ಸದಾಚಾರಯುಕ್ತ ಮಹಾತ್ಮರ ಪಾದವ
ಹಿಡಿದು ಬದುಕಿಸಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ !"

ಚಿತ್ಕ್ರಿಯೆಯೇ ಜ್ಞಾನಾಚಾರ, ಆ ಜ್ಞಾನಾಚಾರವುಳ್ಳವನೇ ಜ್ಞಾನಾಚಾರಿ. ಆತನೇ ಮಹಾತ್ಮ. ಆತನಿಂದ ಲೋಕ ಬದುಕುತ್ತದೆ:

"ನಿರ್ವಿಷಯಿಯಾಗಬೇಕೆಂದು ಹೇಳುವರಲ್ಲದೆ,
ಆದವರನು ಒಬ್ಬರನು ಕಾಣೆ ನೋಡಯ್ಯ.
ಆಗುವುದೇ ಆಗುವುದೇ ಮಾಯಾಂಶಿಕಂಗೆ ?
ಆಗುವುದು ನಿನ್ನಂಶಿಕಂಗಲ್ಲದೆ ಇನ್ನಾರಿಗುಂಟು –
ಕಪಿಲಸಿದ್ಧ ಮಲ್ಲಿನಾಥಾ ?"

ಮಾಯಾಂಶಿಕರಿಗೆ ಮಂಗಳಾಚಾರವುಂಟಾಗದು. ಮಾಯಾಂಶವೆಂದರೆ ಅವಿದ್ಯಾಂಶ. ನಿನ್ನಂಶವೆಂದರೆ ಶಿವಾಂಶ. ಶಿವಾಂಶವೆಂದರೆ ಜ್ಞಾನ. ಜ್ಞಾನವುಳ್ಳವರಿಗೆ ನಿರ್ವಿಷಯರೂಪ ನಿರ್ಮಲಾಚಾರ ಅಳವಡುತ್ತದೆ.

"ಶೀಲವಂತನಾದರೆ ತಾ ಸವೆದು ಶೀಲವ ಮಾಡಬೇಕಯ್ಯ.
ತಾನಿರ್ದೆಡೆಯಲ್ಲಿ ಸುಳಿದು ಮಾಡುವ ಶೀಲ
ಕೊಟ್ಟು ಪೂಜಿಸುವ ಕೈಕೂಲಿತನವಿಲ್ಲ.
ಪೂಜೆಯ ಫಲ ಕೊಡವಾಲ ಕರೆವ ಸುರಭಿಯಂತೆ.
ತನ್ನುದರ ನಿಮಿತ್ತ ವಿಡಿದು ಶೀಲ ಬೇಕೆಂಬ
ದುಶ್ಶೀಲರ ಮೆಚ್ಚುವನೇ ಸಕಳೇಶ್ವರಾ ?"

ತಾನೆಂಬುದು ಅಹಂಕಾರ, ಅಜ್ಞಾನ. ಅಹಂಕಾರ ಅಜ್ಞಾನಗಳು ಅಳಿಯದೆ ಮಾಡಿದ ಆಚಾರ ಆಚಾರವಲ್ಲ. ಅಜ್ಞಾನಿ ತನ್ನ ಒಡಲ ಅವಸರಕ್ಕಾಗಿ ಆಚಾರವನ್ನು ಮಾಡುತ್ತಾನೆ. ಜ್ಞಾನಿ ನಿರಹಂಕಾರಿ ಶಿವನಿಗಾಗಿ ಶೀಲವನ್ನು ಮಾಡುತ್ತಾನೆ. ಆದ್ದರಿಂದ ಜ್ಞಾನಾಚಾರವುಳ್ಳವನೇ ಜ್ಞಾನಾಚಾರಿ. ಆ ಪರಶಿವ ಧ್ಯಾನದ ಆಧಾರವಿಲ್ಲದೆ ತನ್ನುದರಕ್ಕಾಗಿ ಮಾಡುವವನು ದುರಾಚಾರಿ. ಈತನಿಗೆ ಸಕಲೇಶ್ವರನು ಮೆಚ್ಚನು.

ವಿಕಲ್ಪಕ್ಕೆ ಗುರಿ ಮಾಡುವುದು ಒಡಲಾಸೆ; ಉದರಾಚಾರ. ನಿರ್ವಿಕಲ್ಪದ ನೆಲೆಗೆ ನಿಲುಕಿಸುವುದು ಸದಭಿಲಾಷೆ; ಶಿವನ ಜ್ಞಾನಾಚಾರ. ಉದರಾಚಾರ ದೋಷಯುಕ್ತ, ಜ್ಞಾನಾಚಾರ ನಿರ್ದೋಷಯುಕ್ತ. ಪರಧ್ಯಾನದಲ್ಲಿ ಯೋಜಿಸುವುದು ಜ್ಞಾನಾಚಾರ ಪ್ರಪಂಚಧ್ಯಾನದಲ್ಲಿ ಯೋಜಿಸುವುದು ಉದರಾಚಾರ. ಆದ್ದರಿಂದ ಜ್ಞಾನಿ ಜ್ಞಾನಾಚಾರ ನಿರತನಾಗಿ ಜ್ಞಾನಾಚಾರಿಯೆನಿಸಬೇಕು. ಜ್ಞಾನಾಚಾರಿಯು ತನ್ನದೆಲ್ಲವನ್ನು ಅವಿಕಲ್ಪನೂ ಅಕಳಂಕನೂ ಶಿವನಾಮಕನೂ ಆದ ಆ ಪರವಸ್ತುವಿಗೆ ಸಮರ್ಪಿಸುವ ಸುಜ್ಞಾನ ಶೀಲವಂತನಾಗಬೇಕು. ಆಗ ಜೀವನ್ಮುಕ್ತಿ ಲಭಿಸುತ್ತದೆ. ಚಿದಾನಂದವುಂಟಾಗುತ್ತದೆ. ಪರಿಪೂರ್ಣಪ್ರಕಾಶ ಪ್ರಾಪ್ತವಾಗುತ್ತದೆ.

"ಜ್ಞಾನಂ ಮುಕ್ತಿಪ್ರದಂ ಪ್ರಾಪ್ಯ ಗುರುದೃಷ್ಟಿಪ್ರಸಾದತಃ ।
ಕಃ ಕುರ್ಯಾತ್ ಕರ್ಮಕಾರ್ಪಣ್ಯೇ ವಾಂಛಾಂ ಸಂಸಾರವರ್ಧನೇ ॥"

ಶ್ರೀ ಶಿವಾತ್ಮ ವಿದ್ಯಾಗುರುವಿನ ದಿವ್ಯದೃಷ್ಟಿಯ ಅನುಗ್ರಹದಿಂದ ಸಾಮರಸ್ಯರೂಪ ಮುಕ್ತಿದಾಯಕವಾದ ಶಿವಾದ್ವೈತಜ್ಞಾನವನ್ನು ಪಡೆದವನು ಸಂಸಾರವನ್ನು ಹೆಚ್ಚಿಸುವ ಜಡಕರ್ಮದೈನ್ಯತೆಗೆ ಮನಸ್ಸನ್ನು ಮಾಡನು.

ವೀರಶಿವಾಗಮಗಳನ್ನು ಓದಿ ವಿಶಿಷ್ಟ ಜ್ಞಾನಾನುಭವಗಳನ್ನು ಪಡೆದವನು ಶ್ರೀಗುರು. ಆತನ ದೃಷ್ಟಿಪ್ರಸಾದ ಅಂದರೆ ಕೃಪಾವಲೋಕನ ಅಪೂರ್ವ; ಚಿನ್ಮಯಕಾರುಣ್ಯ ಅಲಭ್ಯ: ಆ ನೋಟ ಅನಂತ ಸುಖಕ್ಕೆ ಕಾರಣ; ಅಂಗ ಲಿಂಗೈಕ್ಯಕ್ಕೆ ಸಾಧನ. ಅದುಳ್ಳ ಶಿವಾಚಾರ್ಯನ ಕೃಪಾಬಲದಿಂದ ಮುಕ್ತಿಗೆ ಹೋಗುವ ಮಹಾಜ್ಞಾನವನ್ನೇ ಪಡೆದ ಬಳಿಕ ದುಃಖದಾಯಕವಾದ ಜಡ ಕರ್ಮದ ಕಾಂಕ್ಷೆಯನ್ನು ಯಾರೂ ಮಾಡಲಾರರು.

ಗುರು ಪ್ರತ್ಯಕ್ಷ ಪರಮಾತ್ಮ. ಪರಮ ಗುರಿಯನ್ನು ತೋರುವ ಗುರಿಕಾರ. ಗಭೀರಕೃಪಾಕ್ಷೀರಸಾಗರ. ಅನುಭವಾಗಸದ ದಿನಮಣಿ. ಆತನ ಆ ಪ್ರಾಸಾದಿಕ ದೃಷ್ಟಿ ಪ್ರಬುದ್ಧ ಗಾಂಗೇಯ. ಅವಿದ್ಯಾದಿ ತಾಪತಪ್ತ ಶಿಷ್ಯರಿಗೆ ಅದೊಂದು ಸಿರಿಗಳಿಕೆ; ಸವಿಗಾಡಿಕೆ. ಅದರಿಂದಾಗುವುದು ಮುಕ್ತಿಯ ಅರಿಕೆ.

"ಸಂಚಿತ ಪ್ರಾರಬ್ಧ ಆಗಾಮಿ ಕರ್ಮಂಗಳು ಬೆನ್ನು ಬಿಡವು ನೋಡಾ. ಆರನಾದರೂ ಮೂಗರ ಮಾಡಿ ಕಾಡಿ ಕೊಲ್ಲುತ್ತಿಹವು ನೋಡಾ. ಹಿಂದೆ ಮಾಡಿದ ಕರ್ಮ ಬಿಡೆಂದರೆ ಬಿಡುವುದೆ ? ಮುಂದೆ ಉಂಡಲ್ಲದೆ ತೀರದು. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಕಡೆಗಣ್ಣಲಿ ನೋಡುವನ್ನಕ್ಕ ಉಂಡು ತೀರದು ಕರ್ಮ." ದೃಷ್ಟಿ ಪ್ರಸಾದದ ಮಹತ್ವವನ್ನು ಈ ವಚನ ಸೊಗಸಾಗಿ ಹೇಳಿದೆ.

ಸಂಬಾಳಿಸಬಾರದ ಸಂಸಾರ, ಸಂಭಾವ್ಯವಲ್ಲದ ಸಂಸಾರ. ಸಂಭ್ರಮಿಸುವ ಸಂಸಾರ. ಸುಖ ಸ್ವಾತಂತ್ರ್ಯವಿಲ್ಲದ ಸಂಸಾರ. ಜನನ ಮರಣ, ಹಸಿವು ನೀರಡಿಕೆ, ಶೋಕ ಮೋಹವೆಂಬ ಈ ಷಡೂರ್ಮಿ ಉಬ್ಬರ. ಇವು ಸಂಸಾರ ಸಾಗರದ ತರಂಗಗಳು. ಮೊದಲಿನವೆರಡು ದೇಹಧರ್ಮ. ನಡುವಿನವೆರಡು

ಪ್ರಾಣಧರ್ಮ, ಕಡೆಯವೆರಡು ಮನೋಧರ್ಮ. ಇವುಗಳಿಗೆ ಬೆಂಬಲವಾಗಿ ಅರಿಷಡ್ವರ್ಗ. ಇವುಗಳಿಂದ ಈ ಜೀವನ ಜರ್ಜರಿತವಾಗುತ್ತದೆ. ಇವುಗಳ ಕರ್ಮಕಾರ್ಪಣ್ಯಕ್ಕೆ ಸಮ್ಯಕ್ ಜ್ಞಾನಿಯು ಸಿಕ್ಕನು, ಗುರೂಪದೇಶದಿಂದ ಸ್ವರೂಪ ಜ್ಞಾನವನ್ನು ಪಡೆದು ಸರ್ವವನ್ನು ಶಿವಸ್ವರೂಪವನ್ನಾಗಿ ತಿಳಿದು ಬಾಳುವ ಸಮ್ಯಕ್ ಜ್ಞಾನಿಯು ಜಡಕರ್ಮಕ್ಕೆ ಜೋಲು ಬೀಳನು. ಜೀವ ನಿಧಿಯಾದ ಶಿವಜ್ಞಾನವನ್ನು ಹಾಳುಮಾಡಿಕೊಳ್ಳನು, ಜೀವಾಳವಾದ ಗುರುಕರುಣೆಗೆ ಹೊರಗಾಗನು, ಸ್ವರೂಪ ದರ್ಶನಕ್ಕೆ ಗುರುಕೃಪೆಯೇ ನಿಲುಗನ್ನಡಿ, ಗುರು ಬೋಧೆಯೇ ಕಣ್ಣು.

"ಕರ್ಮರಹಿತನಾದ ನಿರ್ಮಲ ನಿತ್ಯಂಗೆ ಮಾಯಾಭ್ರಮೆ ಇಲ್ಲ.
ಮಾಯಾಭ್ರಮೆ ಇಲ್ಲವಾಗಿ ಮನದ ಸಂಕಲ್ಪ ವಿಕಲ್ಪವಿಲ್ಲ.
ಮನದ ಸಂಕಲ್ಪ ವಿಕಲ್ಪವಿಲ್ಲವಾಗಿ ವಿಷಯಾಭಿಮಾನವಿಲ್ಲ.
ವಿಷಯಾಭಿಮಾನವಿಲ್ಲವಾಗಿ ಪಂಚೇಂದ್ರಿಯಂಗಳ ವ್ಯಾಪಾರವಿಲ್ಲ.
ಇವಿಲ್ಲವಾಗಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಶರಣ ನಿರ್ದೇಹಿ."

"ಕರ್ಮ ಜ್ಞಾನಾಗ್ನಿನಾ ದಗ್ಧಂ ನ ಪ್ರರೋಹೇತ್ಕಥಂಚನ ।
ಯದಾಹುಃ ಸಂಸೃತೇರ್ಮೂಲಂ ಪ್ರವಾಹಾನುಗತಂ ಬುಧಾಃ ॥"

ಸಂಸಾರಕ್ಕೆ ಮೂಲವಾದ ಕರ್ಮ ಜಲಪ್ರವಾಹದಂತೆ ಜೀವನ ಬೆಂಬತ್ತಿ ಬಂದಿದೆ ; ಬೆಳೆದು ನಿಂತಿದೆ. ಅನಾದಿಯಾಗಿದೆ. ಶಿವಜ್ಞಾನವೆಂಬ ಅಗ್ನಿಯಿಂದ ಸುಟ್ಟರೆ ಮುಂದೆ ಯಾವ ಬಗೆಯಲ್ಲಿಯೂ ಬೆಳೆಯದು.

"ಮುನ್ನವುಳ್ಳ ಕರ್ಮ ಬೆನ್ನ ಬಿಡದು ನೋಡಾ.
ಜಾತಿ ವಿಜಾತಿಗಳಲ್ಲಿ ತೀವಿ ಭೋಗಕ್ಕೆ
ಸಾಧನವಾದ ಪರಿಯ ನೋಡಾ. ಅಲ್ಲಿಯೇ
ಮತ್ತೆ ಮತ್ತೆ ಪಾಪವ ಮಾಡಿ ಸ್ವರ್ಗನರಕವನೆಯ್ದುವ
ಕರ್ಮಿಗಳು ಕಣ್ಣುಗೆಟ್ಟು ಮುಂದುಗಾಣದೆ
ಪುಣ್ಯಪಾಪವ ಬೆನ್ನಲ್ಲಿ ಕಟ್ಟಿ ರಾಟಾಳದಂತೆ

ತನುವ ತೋರುತ್ತ ಬಿಡುತ್ತ ತಿರುಗುತ್ತಿಹರಲಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನನರಿಯದ ಕರ್ಮಿಗಳು ನೋಡಾ.

ಕರ್ಮ ಬಲವತ್ತರವಾದುದು, ಒಂದಲ್ಲ ಎರಡಲ್ಲ ಎಂಬತ್ತು ನಾಲ್ಕು ಲಕ್ಷ ಜೀವರಾಶಿಯ ಬಸಿರಲ್ಲಿ ಬರಿಸುತ್ತದೆ. ಚಕ್ರದಂತೆ ಸುತ್ತಿಸುತ್ತದೆ, ಹುಟ್ಟು ಸಾವಿಗೆ ತುತ್ತಾಗಿಸುತ್ತದೆ, ಇದನ್ನು ತಪ್ಪಿಸಿಕೊಳ್ಳಬೇಕಾದರೆ ಪರಶಿವನ ಜ್ಞಾನಾಚಾರದಲ್ಲಿ ನಿರತನಾಗಿರಬೇಕು. ಜ್ಞಾನಾಚಾರವಿಲ್ಲದೆ ಇನ್ನೇನು ಮಾಡಿದರೂ ಕರ್ಮಹರಿಯದು.

"ಗಿರಿತರು ಮಹಾವಿಪಿನ ಸರೋವರದಲ್ಲಿ ಹಿರಿದುಗ್ರತಪವ ಮಾಡುತ್ತ
ಪವನಾಹಾರ ಪರ್ಣಾಹಾರ ಜಲಾಹಾರ ಫಲಾಹಾರ ನಿರಾಹಾರದಲ್ಲಿ ಇದ್ದರೇನು ?
ತನುಮನ ರೂಪಾದ ಮಾಯೆ ಕಾಡದೆ ಬಿಡುವಳೆ ?
ತನುವಿನಲ್ಲಿ ವ್ಯಾಪಾರ ಮನದಲ್ಲಿ ವ್ಯಾಕುಳವಾಗಿ ಕಾಡದೇ ಬಿಡುವಳೆ ?
ಈ ಮಾಯೆಯ ಗೆಲುವುದಕ್ಕೊಂದು ಉಪಾಯವಕಾಂಬುದು, ಅದೆಂತೆಂದೊಡೆ :
ಲಿಂಗದ ನೆನಹು, ಜಿಹ್ವೆಯ ಕೊನೆಯಲ್ಲಿ ಶಿವನ ಮಂತ್ರ,
ಭಾವದ ಕೊನೆಯಲ್ಲಿ ಶಿವಾನುಭವ ನೆಲೆಗೊಂಡರೆ ಲಿಂಗದ
ಅವಯವಂಗಳಾಗಿ ನಿಜ ಭ್ರಮರನಂತೆ ತಾನೆ ಶಿವನಹನು.
ಇಂತಪ್ಪ ಲಿಂಗಾನುಭಾವಿ ಲಿಂಗಸಂಗಿಗೆ ಅಂಗವಿಲ್ಲ, ಅಂಗವಿಲ್ಲದ
ನಿತ್ಯ ನಿರ್ಮಲಗೆ ಮಾಯಾಮಲಿನ ಮುನ್ನವೇ ಹೊದ್ದದಯ್ಯ,
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ."

ಈ ವಚನದಲ್ಲಿ ಪ್ರವಾಹಿಧರ್ಮವುಳ್ಳ ಬೇರೆ ಸಾಧನಗಳಿಂದ ಗೆಲ್ಲಲು ಬಾರದ ಮಾಯಾಮಲಿನವಾದ ಕರ್ಮವನ್ನು ಕಳೆವ ಉಪಾಯ ಉಕ್ತವಾಗಿದೆ. ಜ್ಞಾನಾಚಾರದ ಪೂರ್ಣರೂಪ ಚಿತ್ರಿತವಾಗಿದೆ, ಕಣ್ಣು ನಾಲಗೆ ಮನ ಭಾವಗಳು ಲಿಂಗದರ್ಶನ, ಲಿಂಗಮಂತ್ರಜಪ, ಲಿಂಗಧ್ಯಾನ, ಲಿಂಗಾನುಭವಗಳಲ್ಲಿ ಪರಿವಿಡಿದು ಪರವಶವಾಗುವುದೇ ಜ್ಞಾನಾಚಾರ. ದೃಢವಾದ ಲಿಂಗಸಂಸ್ಕಾರದಿಂದ ಅಂಗತ್ವವನ್ನು ಳೆಯುವುದೇ ಸುಗಮವಾದ ಸದುಪಾಯ, ಅಂಗವೆಲ್ಲ ಲಿಂಗವಾದವನಿಗೆ ಕರ್ಮದ

ಕೊಳೆ ಅಂಟದು. ಲಿಂಗಾಚಾರದಲ್ಲಿ ಲಿಂಗಾನುಭವದಲ್ಲಿ ಸುಟ್ಟುರುಹಿದ ಕರ್ಮ ಬೀಜ ಮರಳಿ ಮೊಳೆಯದು. ಜ್ಞಾನಸ್ವರೂಪವಾದ ಲಿಂಗಾಚಾರ ಲಿಂಗವಿಚಾರ ಗಳಿಂದಲ್ಲದೆ ಕರ್ಮದ ಕಷ್ಟನಷ್ಟಗಳು ತಪ್ಪವು ; ದುಃಖ ದುರವಸ್ಥೆಗಳು ದೂರಾಗವು.

"ಪೂರ್ವ ಜನ್ಮದಲ್ಲಿ ಮಾಡಿದುದು ಭೋಗಿಸಲ್ಕೆ ಈಡಾಯಿತ್ತು.
ಈಗ ಮಾಡಿದ ಕರ್ಮ ಮುಂದಕ್ಕೆ ಬಿತ್ತಿದ
ಬೆಳೆಯನುಂಬಂತೆ ಬಪ್ಪದು ತಪ್ಪದು.
ಈ ಕರ್ಮ ಉಳ್ಳನ್ನಕ್ಕ ಆರಿಗಾದರೂ ಬಳಲಿಕೆ ಬಿಡದು,
ಕಾಣಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ."

ಸಂಚಿತಕರ್ಮ ಈ ಜನ್ಮದಲ್ಲಿ. ಈಗ ಮಾಡಿದ ಕರ್ಮ ಮುಂದಿನ ಜನ್ಮ ದಲ್ಲಿ ಕಾಡುವುದು. ಜ್ಞಾನಾಚಾರವುಳ್ಳವನಿಗಲ್ಲದೆ ಬೇರೆ ಯಾರಿಂದಲೂ ಕರ್ಮ ವಿಜಯ ಸಾಧ್ಯವಿಲ್ಲ. ಕರ್ಮ ಪ್ರವಾಹಿಯಾದದ್ದು ಎಂಬುದನ್ನು ಈ ವಚನ ನಿರೂಪಿಸಿದೆ. ಶಿವಭಕ್ತಿ ಶಿವಜ್ಞಾನವಿಲ್ಲದೆ ಕರ್ಮದ ಕೈಚಳಕದಿಂದ ಕಳಚಿಕೊಳ್ಳು ವುದು ಕಷ್ಟ.

"ಶಿವಭಕ್ತಿ ತತ್ಪರನಾದ ಮಹಿಮನು
ವಿಷಯಭ್ರಮೆ ಪುರುಷ ಪ್ರಯತ್ನವನ್ನು
ಬಿಟ್ಟಾಗಳೇ ಆಗಾಮಿ ಕರ್ಮ ನಾಶವಾಯಿತ್ತು.
ಸಂಚಿತಕರ್ಮ ವಿಷಯಾಸಕ್ತಿಗೆ ಪ್ರಾರಬ್ಧವೆನಿಸುವುದು.
ಶಿವಧ್ಯಾನೈಕ ಚಿತ್ತಂಗೆ ಸಂಚಿತಕರ್ಮವಿಲ್ಲ.
ಅದೇನು ಕಾರಣವೆಂದಡೆ:
ಶಿವಜ್ಞಾನಾಗ್ನಿಯಿಂದ ಅದು ಬೆಂದು ಹೋಹುದಾಗಿ
ಇಚ್ಛಾಪಾರ್ರಬ್ಧವೆಂದು ಅನಿಚ್ಛಾಪ್ರಾರಬ್ಧವೆಂದು
ಪ್ರಾರಬ್ಧವೆರಡಾಗಿಹುದು. ಪ್ರಾರಬ್ಧ ಕರ್ಮವು
ಭೋಗಾದಿಗಳಿಂದ ಕ್ಷಯ ಹೊಂದುವುದಾಗಿ
ಅದು ಭೋಗಿಸಿದಲ್ಲದೆ ತೀರದು.

ಅನಿಚ್ಛಾಪ್ರಾರಬ್ಧದಿಂದ ಮುಂದೆ ಸುಖವಹುದು.
ಇಚ್ಛಾಪ್ರಾರಬ್ಧದಿಂದ ದುಃಖವಹುದಾಗಿ,
ಆ ದುಃಖದಿಂದ ಸಂಸಾರವೃಕ್ಷ ಬೇರುವರಿವುದು.
ಸಂಸಾರ ವಿರಕ್ತಂಗೆ ಹುರಿದ ಬೀಜದಂತೆ ಅಂಕುರ ನಷ್ಟವಾಗಿಹುದು.
ಆ ಶಿವನೊಡನೆ ಕೂಡಿ ಭೋಗಿಸುವನಾಗಿ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನೆಂಬ ನಿಜವನೆಯ್ದುವನು."

ಶ್ಲೋಕಾರ್ಥವನ್ನು ಈ ವಚನವು ಪೂರ್ಣ ಪಡಿಸಿದೆಯಲ್ಲದೆ ಕರ್ಮತ್ರಯದ ವಿವರಣೆಯನ್ನು ಕೊಟ್ಟಿದೆ. ಪ್ರಾರಬ್ಧಕರ್ಮವನ್ನು ಪ್ರಸ್ತಾಪಿಸಿ ಇಚ್ಛಾ-ಅನಿಚ್ಛಾ ಎಂದು ಎರಡು ಬಗೆಯನ್ನು ಮಾತ್ರ ಚಿತ್ರಿಸಿದೆ. ಪರೇಚ್ಛಾ ಪ್ರಾರಬ್ಧವೊಂದನ್ನು ಹೇಳಿ ಮೂರೆಂದು ವಿವರಿಸುವುದುಂಟು. ಆದರೆ ವಚನಕಾರನು ಪರೇಚ್ಛಾಪ್ರಾರಬ್ಧವನು ಅನಿಚ್ಛಾಪ್ರಾರಬ್ಧದಲ್ಲಿಯೇ ಸೇರಿಸಿಕೊಂಡಿಂತಿದೆ, ಶಿವಭಕ್ತಿಯಿಂದ ಆಗಾಮಿಕರ್ಮ, ಶಿವಧ್ಯಾನದಿಂದ ಸಂಚಿತಕರ್ಮ, ಶಿವಜ್ಞಾನ ಶಿವಾರ್ಪಣಗಳಿಂದ ಪ್ರಾರಬ್ಧಕರ್ಮವೆಂಬ ಬೀಜಗಳು ಹುರಿದು ಹೋಗುತ್ತವೆಯೆಂದು ಹೇಳಿದೆ. ಶಿವಜ್ಞಾನಾಚಾರ ನಿರತನು ಶಿವಲಿಂಗಭೋಗೋಪಭೋಗಿಯಾಗಿರುವುದರಿಂದ ಸಂಸಾರದಿಂದ ನಿವೃತ್ತಿಯನ್ನು ಪಡೆದುದರಿಂದ ಪ್ರಾರಬ್ಧವನ್ನು ಸುಖವಾಗಿ ಜಯಿಸಿ ಶಿವಸ್ವರೂಪನಾಗಿರುವನೆಂದು ಪ್ರತಿಪಾದಿಸಿದೆ.

"ಜ್ಞಾನೇನ ಹೀನಃ ಪುರುಷಃ ಕರ್ಮಣಾ ಬದ್ಧ್ಯತೇ ಸದಾ ।
ಜ್ಞಾನಿನಃ ಕರ್ಮಸಂಕಲ್ಪಾ ಭವಂತಿ ಕಿಲ ನಿಷ್ಫಲಾಃ "

ಜ್ಞಾನಾಚಾರವಿಲ್ಲದವನು ಕರ್ಮಬಂಧನಕ್ಕೊಳಗಾಗುತ್ತಾನೆ. ಅದೇ ಜ್ಞಾನಿಯ ಕರ್ಮಸಂಕಲ್ಪಗಳು ನಿಷ್ಫಲಗಳಾಗಿರುತ್ತವೆ. ಅಂದರೆ ಜ್ಞಾನಿಯನ್ನು ಬಂಧಿಸವು; ದುಷ್ಫಲಗಳನ್ನೀಯವು.

ಅಜ್ಞಾನಿಗೆ ದೇಹಮೋಹವಿರುತ್ತದೆ. ಕರ್ಮವನ್ನು ಕಳೆದುಕೊಳ್ಳುವ ಕಲಿತನವಿರುವುದಿಲ್ಲ. ಕರ್ಮ ಕತ್ತಲೆಯಲ್ಲಿ ಕುರುಡನಾಗಿರುತ್ತಾನೆ. ಅಲ್ಲದೆ ಕರ್ಮಫಲೇ ಕಾಯಫವಾಗಿ ಅಜ್ಞಾನಿಯನ್ನು ಕಾಡದೆ ಬಿಡದು.

"ಮನೋವಾಕ್ಕಾಯದಿಂದ ಹುಟ್ಟಿದ ಕರ್ಮ ತೊಟ್ಟನೆ
ತೊಳಲಿಸಿ ಬಳಲಿಸಿದಲ್ಲದೆ ಬಿಡದು,
ಕರ್ಮವ ಮೀರಿ ನಡೆವ ಬಲ್ಲಿದರನಾರನೂ ಕಾಣೆ,
ಬೊಮ್ಮವಾದಿಗಳೆಲ್ಲ ಕರ್ಮಕ್ಕೀಡಾದರು,
ಕರ್ಮ ಅಜಹರಿಗಳ ಬಾರದ ಭವದಲ್ಲಿ ಬರಿಸಿತ್ತು;
ಕಾಣದ ದುಃಖವ ಕಾಣಿಸಿತ್ತು.
ಇನ್ನುಳಿದವರ ಪೇಳಲೇನುಂಟು ? ನಿಜಗುರು ಸ್ವತಂತ್ರ
ಸಿದ್ಧಲಿಂಗೇಶ್ವರನ ಅಧೀನ ವಿಡಿದು ಕಾಣುವ ಕರ್ಮದ ಬಲುಹ ನೋಡಾ!"

ಶಿವಜ್ಞಾನಕ್ಕೆ ಹೊರಗಾದವರ ಹಗರಣವಿದು,

ಶಿವಜ್ಞಾನಿಗೆ ಶರೀರಮೋಹವಿರುವುದಿಲ್ಲ. ಅವನಿಗೆ ಕರ್ಮದ ಕಾಟ ವಿರುವುದಿಲ್ಲ.

"ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ.
ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ.
ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ;
ಇಂತೀ ತ್ರಿವಿಧವು ನಿಮ್ಮದೆಂದ ಬಳಿಕ,
ಎನಗೆ ಬೇರೆ ವಿಚಾರ ಉಂಟೇ ಕೂಡಲ ಸಂಗಮ ದೇವಾ ?"

ಕರ್ಮಕ್ಕೆ ಮೂಲವಾದ ಕಾಯಮೋಹವೇ ಕಳಚಿಹೋದ ಬಳಿಕ ಕರ್ಮದ ಮಾತೆಲ್ಲಿ ? ದೇಹವೇ ದೇವನದಾದಾಗ ದುಃಖದ ಪ್ರಸಂಗವೆಲ್ಲಿ ? ತನುಮನ ಭಾವಗಳು ಶಿವನಿಗರ್ಪಿತವಾದ ಮೇಲೆ ಕರ್ಮ ವಿಲ್ಲ. ಕೆಟ್ಟಯೋಚನೆಯಿಲ್ಲ.

ಜ್ಞಾನಿಯಾಗಿ ಬಾಳಬೇಕಲ್ಲದೆ ಅಜ್ಞಾನಿಯಾಗಿ ಬಾಳಬಾರದು. ಧರ್ಮಿ ಯಾಗಿ ಬದುಕಬೇಕಲ್ಲದೆ ಕರ್ಮಿಯಾಗಿ ಬದುಕಬಾರದು.

"ಕರ್ಮಿಬಲ್ಲನೆ ಭಕ್ತಿಯ ಮರ್ಮವ ?
ಚರ್ಮವ ತಿಂಬ ಸೊಣಗಬಲ್ಲದೆ ಪಾಯಸದ ಸವಿಯ ?
ಕಚ್ಚಿ ಕಡಿದಾಡುವ ಮರುಳ ಮಾನವರು

ನಿಶ್ಚಿಂತ ನಿರಾಳನಿಗೊಲಿದು ಒಚ್ಚತ ಹೋಗಿ
ಅಪ್ಪಿ ಅಗಲದಿಪ್ಪ ಅನುಪಮ ಸುಖವನಿವರೆತ್ತ ಬಲ್ಲರು ?
ಸಂಸಾರವೆಂಬ ಸೊಕ್ಕು ತಲೆಗೇರಿ ಮುಂದುಗಾಣದೆ
ಅಕಟಕಟಾ ಕೆಟ್ಟಿತ್ತು ನೋಡಾ ತ್ರೈಜಗವೆಲ್ಲಾ.
ಸ್ವರ್ಗ ಮರ್ತ್ಯ ಪಾತಾಳಕ್ಕೆ ಪಶುಪತಿ ಏಕೋದೇವನೆಂದು
ಅರಿದು ಸಂಸಾರಪ್ರಪಂಚ ಮರೆಯಾ ಮರುಳೆ !
ಪರಮ ಸುಖದೊಳಗಿರ್ದು ಅಲ್ಪಸುಖಕ್ಕೆ ಆಸೆಮಾಡುವ
ಅಜ್ಞಾನಿಗಳನೇನೆಂಬೆನಯ್ಯಾ,
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !"

"ತನುವನು ಶ್ರೀಗುರು ಕ್ರಿಯಾದೀಕ್ಷೆಯಿಂದ
ತನುಗುಣವ ಭಸ್ಮೀಕೃತವ ಮಾಡಿದ ಬಳಿಕ ಅದು
ದೃಶ್ಯ ಜಡತನುವಲ್ಲ;
ಶಿವ ಸಕ್ರಿಯಾಚಾರದ ಮೂಲಸೂತ್ರವೇ ತನ್ನ ತನುವೆಂದರಿವುದು.
ಶ್ರೀಗುರು ಮಂತ್ರದೀಕ್ಷೆಯಿಂದ ಮನದ ಪೂರ್ವಾಶ್ರಯವ ಕಳೆದು
ಮನಕ್ಕೆ ಘನನೆನಹ ಸಂಬಂಧಿಸಿದನಾಗಿ, ಮನ ನಿರ್ಮಲವಾಗಿ
ಲಿಂಗಕ್ಕಾಶ್ರಯವೆಂದು ಅರಿವುದು.
ಶ್ರೀಗುರು ಜ್ಞಾನದೀಕ್ಷೆಯಿಂದ ಪ್ರಾಣನ ಪ್ರಪಂಚಿನ
ಪಶುಭಾವವ ಕಳೆದು ಅಖಂಡಿತ ಜ್ಞಾನಲಿಂಗ ಕಳೆಯ
ತನ್ನ ಪ್ರಾಣನಾಥನೆಂದು ತಿಳಿಹಿದನಾಗಿ,
ಪ್ರಾಣನ ಮಲಿನವೆಂಬುದು ಪಶುಭಾವವಲ್ಲದೆ ಲಿಂಗಭಾವವಲ್ಲ.
ಈ ಸಂದೇಹ ಭ್ರಾಂತಿಯುಳ್ಳ ಕಾರಣ, ಶೈವಹೊಲ್ಲ ಎನ್ನುತ್ತಿರ್ದೆನಯ್ಯಾ.
ತಮ್ಮ ತಾವರಿದು ನಿಶ್ಚಯಿಸದಿರ್ದಡೆ ಮಾಣಲಿ,
ಗುರೂಪದೇಶದಿಂದ ನಿಶ್ಚಯಿಸುವುದು.
ಇದು ಸಂದೇಹವಲ್ಲ ಕಾಣಾ ಮಹಾಲಿಂಗಗುರುಶಿವ
ಸಿದ್ಧೇಶ್ವರ ಪ್ರಭುವೇ !"

ಅಜ್ಞಾನಿಯಾಗಿ ಅಲ್ಪ ಸುಖಕ್ಕೆ ಬಾಯ್ಬಿಡುವುದಕ್ಕಿಂತ ಅನುಭಾವಿಯಾದ ಗುರುವಿನ ಅನುಗ್ರಹಕ್ಕೆ ಪಾತ್ರರಾಗುವುದು ಪವಿತ್ರಕಾರ್ಯ; ಸಾರ್ಥಕ ಕಾರ್ಯ. "ಉಭಯ ತನುಗುಣವಳಿದಲ್ಲದೆ ಅರಿವಿನಾಚಾರ ಅಳವಡದು ಅರಿವಿನಾಚಾರ ಅಳ ವಟ್ಟಲ್ಲದೆ ಲಿಂಗದ ಬೆಳಕು ದೊರಕೊಳ್ಳದು. ಲಿಂಗದ ಬೆಳಕು ದೊರಕೊಂಡ ಲ್ಲದೆ ಕೂಡಲ ಚನ್ನಸಂಗಯ್ಯನಲ್ಲಿ ಪರಿಣಾಮ ನೆಲೆಗೊಳ್ಳದು." ವಿಶುದ್ಧಾತ್ಮ ರಾಗುವ ಹೊಲಬಿದು.

"ಶುದ್ಧಾಚಾರೋ ಶುದ್ಧಭಾವೋ ವಿವೇಕೀ
ಜ್ಯೋತಿಃ ಪಶ್ಯನ್ ಸರ್ವತಶ್ಶೈವಮೇಕಂ ।
ಧ್ಯಾನಧ್ವಸ್ತ ಪ್ರಾಕೃತಾತ್ಮ ಪ್ರಪಂಚೋ
ಜೀವನ್ಮುಕ್ತಶ್ಶೋಭತೇ ದಿವ್ಯಯೋಗೀ॥"

ಶುದ್ಧವಾದ ಆಚಾರ, ಶುದ್ಧವಾದ ಭಾವ, ಶುದ್ಧವಾದ ವಿವೇಕವುಳ್ಳವನು ದಿವ್ಯಯೋಗಿಯೆನಿಸುತ್ತಾನೆ. ಮತ್ತು ಎಲ್ಲೆಲ್ಲಿಯೂ ಏಕೈಕವಾದ ಶೈವಜ್ಯೋತಿ ದರ್ಶನವುಳ್ಳವನಾಗಿ, ಧ್ಯಾನದಿಂದ ದೂರದ ಪ್ರಾಕೃತ ಪ್ರಪಂಚವುಳ್ಳ ವನಾಗಿ ಜೀವನ್ಮುಕ್ತನಾಗಿರುತ್ತಾನೆ.

ಇಲ್ಲಿ ಉಪಯೋಗಿಸಿದ ಶುದ್ಧಪದ ಸಾಂಕೇತಿಕ. ಮೊದಲಿನ ಶುದ್ಧಪದ ಧರ್ಮವನ್ನು, ಎರಡನೆಯದು ಆಚಾರವನ್ನು ಸೂಚಿಸುತ್ತವೆ. ಅಂದರೆ ಹಿಂದೆ ಹೇಳಿದಂತೆ ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಈ ತ್ರಿವಿಧ ಆಚಾರವುಳ್ಳ ವನೇ ದಿವ್ಯಯೋಗಿಯೆಂದು ಧ್ಯಾನದಿಂದ ಪ್ರಪಂಚದಿಂದ ನಿವೃತ್ತಿಗೊಂಡು ಪರಂ ಜ್ಯೋತಿಯ ಸಾಕ್ಷಾತ್ಕಾರವುಳ್ಳವನೇ ಜೀವನ್ಮುಕ್ತನೆಂದು ಶಿವಕವಿಯ ಅಭಿಪ್ರಾಯ ವಾಗಿದೆ.

ಮಾಹೇಶ್ವರಾಂಗನು ಜ್ಞಾನದಿಂದ ಜ್ಞೇಯವಸ್ತುವನ್ನು ಧ್ಯಾನದಿಂದ ಧ್ಯೇಯವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಅಂತೆಯೆ ಸತ್ಕ್ರಿಯೆಯಿಂದ ಸರ್ವಕರ್ತೃವನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಸತ್ಕ್ರಿಯಾರೂಪ ಧರ್ಮಾಚಾರ ದಿಂದ ದಿವ್ಯಯೋಗಿ, ಭಾವಾಚಾರರೂಪಧ್ಯಾನದಿಂದ ಜೀವನ್ಮುಕ್ತ, ಜ್ಞಾನಾಚಾರ ದಿಂದ ಶಿವೈಕಜ್ಯೋತಿರೂಪ ಆಗುತ್ತಾನೆಂದು ಅರ್ಥವಿಸಿದಲ್ಲಿ ತಪ್ಪಿಲ್ಲ. ತ್ರಿವಿಧಾ ಚಾರಗಳಿಂದ ತ್ರಿವಿಧಶಕ್ತಿ ಮಾಹೇಶ್ವರಾಂಗನಿಗೆ ಮೈಗೂಡಿ ಬರುತ್ತವೆ.

"ನಿಜವನರಿದು ನಿರ್ಮಲಜ್ಞಾನಿಯಾದ ಕರ್ಮರಹಿತ
ಶಿವಯೋಗಿ ಕರ್ಮಕಾಯನಲ್ಲ, ಕರ್ಮಭೋಗಿಯಲ್ಲ ;

ಕರ್ಮಾಧೀನನು ತಾ ಮುನ್ನವೇ ಅಲ್ಲ, ಅದೆಂತೆದೊಡೆ :
ಪರಿಪಕ್ವವಾದ ಹಣ್ಣು ರಸತುಂಬಿ ತೊಟ್ಟು ಕಳಿದ ಬಳಿಕ
ಮರಳಿ ವೃಕ್ಷವನಡರಿ ತೊಟ್ಟು ಹತ್ತುವುದೇ ಹೇಳಾ ?
ಆಗಾಮಿ ಪರಿಪಕ್ವವಾಗಿ ಸಂಚಿತವಾಯಿತ್ತು.
ಸಂಚಿತ ಪರಿಪಕ್ವವಾಗಿ ಪ್ರಾರಬ್ಧವಾಯಿತ್ತು.
ಇನ್ನು ಕರ್ಮವುಂಟೆ ? ಇಲ್ಲವಾಗಿ, ನಿಜಗುರು ಸ್ವತಂತ್ರ
ಸಿದ್ಧಲಿಂಗೇಶ್ವರನ ಶರಣರು ಕರ್ಮರಹಿತರು."

ನಿಜವನರಿಯಬೇಕು ನಿರ್ಮಲನಾಗಿರಬೇಕು. ದುಷ್ಕ್ರಿಯೆ ದುರ್ಬುದ್ಧಿ ದುರ್ಭಾವರಹಿತನಾದಲ್ಲದೆ ನಿರ್ಮಲತ್ವವುಂಟಾಗದು ; ನಿಜವನರಿಯುವಿಕೆ ಆಳವಡದು. ಪ್ರಾಕೃತಿಕ ಪ್ರಪಂಚವಳಿಯದು. ಪರಂಜ್ಯೋತಿಸ್ವರೂಪದರ್ಶನವಾಗದು; ಆಗದೆ ಶುದ್ಧತೆ ಶಿವತ್ವಗಳು ಸಮನಿಸವು.

ಅದೇ ಶುದ್ಧಕ್ರಿಯೆ, ಶುದ್ಧಭಾವ, ಶುದ್ಧಜ್ಞಾನವುಳ್ಳ ಮಾಹೇಶ್ವರಾಂಗನು ಪರಮ ಪ್ರಕಾಶ ಸ್ವರೂಪನಾಗುತ್ತಾನೆ. ಪ್ರಾಕೃತ ಪ್ರಪಂಚ ವ್ಯವಹಾರ ತಿಮಿರವನ್ನು ಹರಿಯುತ್ತಾನೆ. ಜೀವನ್ಮುಕ್ತನಾಗಿರುತ್ತಾನೆ. ಅಂದರೆ ಇದ್ದೂ ಇಲ್ಲದಂತಿರುತ್ತಾನೆ. ಕೇಳಿಯೂ ಕೇಳದಂತಿರುತ್ತಾನೆ. ನೋಡಿಯೂ ನೋಡದಂತಿರುತ್ತಾನೆ. ಮುಟ್ಟಿಯೂ ಮುಟ್ಟದಂತಿರುತ್ತಾನೆ. ಮೂಸಿಯೂ ಮೂಸದಂತಿರುತ್ತಾನೆ. ರುಚಿಸಿಯೂ ರುಚಿಸದಂತಿರುತ್ತಾನೆ. ಯಾವ ಪ್ರಾಪಂಚಿಕ ವಿಷಯ ಲೇಪಕ್ಕೆ ಅಂಟಿಕೊಳ್ಳದಂತಿರುತ್ತಾನೆ.

"ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ॥"

ಎಂದು ಗೀತೆಯೂ ಜೀವನ್ಮುಕ್ತನ ಸ್ಥಿತಿಯನ್ನು ಮೇಲಿನ ಅಭಿಪ್ರಾಯದಂತೆ ಅಭಿವರ್ಣಿಸಿದೆ.

ಮಾಹೇಶ್ವರನು ಜ್ಞಾನಾಚಾರದಿಂದ ಪರಿಶುದ್ಧ ಹೃದಯನಾಗಿ ಬಾಹ ವಾಸನೆಗಳನ್ನೆಲ್ಲ ಬಹಿಷ್ಕರಿಸುತ್ತಾನೆ. ಅಂತರ್ಲಕ್ಷ್ಯವುಳ್ಳವನಾಗಿರುತ್ತಾನೆ. ದುಷ್ಕ್ರಿಯೆಗಳಿಂದ ಪರಿಣತನಾಗಿ ಪರಮ ತತ್ತ್ವಜ್ಞಾನಿಯಾಗಿ ಇರುತ್ತಾನೆ.

## ಆಚಾರ ಸಂಪತ್ತು

ಆಚಾರ ಅನಂತ. ಆಚಾರವಂತ ಮಹಂತ. ತ್ರಿವಿಧಾಚಾರ, ಪಂಚಾಚಾರ, ಸಪ್ತಾಚಾರ; ದ್ವಾದಶಾಚರ ಎಂದು ಮುಂತಾಗಿ ಆಚಾರ ಅನೇಕವಿವೆ.

ಆಚಾರ ಅದೊಂದು ಸಚ್ಚಾರಿತ್ರವನ್ನು ಸಂಪಾದಿಸುವ ಸಂಪತ್ತು. ಅದಕ್ಕಿಲ್ಲ ಕಳಂಕದ ವಿಪತ್ತು. ಆದರಿಂದಾಗಿ ತ್ರಿವಿಧಾಚಾರ ಸಂಪತ್ತು ಈ ಸ್ಥಳದಲ್ಲಿ ಉಕ್ತವಾಗಿದೆ.

"ಜೀವನ ಬಾಗಿಲಲ್ಲಿ ಭ್ರಮೆಯ ತಡೆದು,
ಆತ್ಮನ ಬಾಗಿಲಲ್ಲಿ ಪ್ರಕೃತಿಯ ತಡೆದು,
ಪರಮನ ಬಾಗಿಲಲ್ಲಿ ಚಿತ್ತವ ತಡೆದು
ಮಿಕ್ಕಾದ ವಾಯುಗಳ ದೆಸೆಯಿಂದ ಇಂದ್ರಿಯಂಗಳ ತಿಳಿದು,
ಇಂತೀ ಜೀವ ಆತ್ಮ ಪರಮ ತ್ರಿವಿಧಗುಣಂಗಳು ತಲೆದೋರದೆ
ಕರ್ಮೇಂದ್ರಿಯ ಭಾವೇಂದ್ರಿಯ ಜ್ಞಾನೇಂದ್ರಿಯ—
ಇಂತೀ ತ್ರಿವಿಧವು ಸ್ವಾನುಭಾವದಲ್ಲಿ ಅಡಗಿ
ಓಂಕಾರದ ಉಲುಹು ನಷ್ಟವಾಗಿ
ಷಡಕ್ಷರ ಪಂಚಾಕ್ಷರ ಮೂಲದ ಉಭಯದ ಮೊಳೆ ಮುರಿದು,
ಐವತ್ತೊಂದು ಭೇದದ ಸೂತಕದ ಸುಳುಹಡಗ್ಗಿ,
ಹಿಂದು ಮುಂದಣ ಎಚ್ಚರಿಕೆ ಆಳವಟ್ಟಿಪ್ಪದು
ಕೂಡಲಸಂಗಮ ದೇವರಲ್ಲಿ!"

"ಕ್ರಿಯಾಚಾರದಿಂದ ಕರ್ಮೇಂದ್ರಿಯಗಳು ಪವಿತ್ರವಾಗುವವಯ್ಯ, ಜ್ಞಾನಾಚಾರದಿಂದ ಜ್ಞಾನೇಂದ್ರಿಯಂಗಳು ಪಾವನವಾಗುವವಯ್ಯ, ಭಾವಾಚಾರದಿಂದ ಕರಣಂಗಳು ನಿಜಸ್ವರೂಪವಾಗುವವಯ್ಯ. ಸತ್ಯಾಚಾರದಿಂದ ವಿಷಯಂಗಳು ಲಿಂಗಮುಖವಾಗುವವಯ್ಯ. ನಿತ್ಯಾಚಾರದಿಂದ ವಾಯುಂಗಳು ಮಹಾಪ್ರಸಾದವಾಗುವವಯ್ಯ. ಧರ್ಮಾಚಾರದಿಂದ ಲಿಂಗಾಂಗಗಳು ಏಕವಾಗುವವಯ್ಯ, ಸರ್ವಾಚಾರದಿಂದ ಸರ್ವಾಂಗಜ್ಞಾನ ಜ್ಯೋತಿಯಪ್ಪುದು ತಪ್ಪದು ನೋಡಾ!

'ಲಿಂಗಾಚಾರ ಸದಾಚಾರ ಶಿವಾಚಾರಸ್ತಥೈವ ಚ ।
ಗಣಾಚಾರ ಭೃತ್ಯಾಚಾರ ಪಂಚಾಚಾರಾಃ ಪ್ರಕೀರ್ತಿತಾಃ॥
ಕ್ರಿಯಾಚಾರ ಜ್ಞಾನಾಚಾರೋ ಭಾವಾಚಾರಸ್ತಥೈವ ಚ ।
ಸತ್ಯಾಚಾರೋ ನಿತ್ಯಾಚಾರೋ ಧರ್ಮಾಚಾರೋ ವರಾನನೇ ॥
ಸರ್ವಾಚಾರ ಸಂಪನ್ನೇನ ಸದಾಸನ್ನಿಹಿತಃ ಶಿವಃ ।
ಲಿಂಗಾವಸಾನಕಾಲೇ ದ್ವಾದಶಾಚಾರಕಂ ಶೃಣು ॥'

ಇಂತೆಂದೀದಾಗಿ ಸತ್ಕಾಯಕ ಮೊದಲಾದ ಷೋಡಶ ನೆಲೆಕಲೆಗಳ ಸದ್ಗುರು ಮುಖದಿಂದ ಚಿದ್ಘನಲಿಂಗವ ಮಾಡಿಕೊಂಡು, ಷೋಡಶ ವರ್ಣವ ಸದ್ಗುರು ಮುಖದಿಂದ ಚಿದಂಗವ ಮಾಡಿಕೊಂಡು ಸದ್ಗುರು ಮುಖದಿಂ ಎರಡಳಿದಂ ಏಕ ಸ್ವರೂಪದಿಂ ಜ್ಯೋತಿಯ ಜ್ಯೋತಿ ಬೆರೆವಂತೆ ಬಸವ ಮೊದಲಾದ ಪ್ರಮಥ ಗಣಗಳೆಲ್ಲ ಬಯಲೊಳಗೆ ಮಹಾಬಯಲಾದರು ನೋಡಾ ಸಂಗನಬಸವೇಶ್ವರಾ.

ಮಾನವನಿಗಿರುವ ತ್ರಿವಿಧ ತನುಗಳಲ್ಲಿ ತ್ರಿವಿಧ ಇಂದ್ರಿಯಗಳಿವೆ. ಅವೇ ಕರ್ಮೇಂದ್ರಿಯ, ಭಾವೇಂದ್ರಿಯ, ಜ್ಞಾನೇಂದ್ರಿಯಗಳು. ಇವು ಪರಿವಿಡಿದು ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳಿಂದ ನಿರ್ಮಳವಾಗುತ್ತವೆ. ಇವು ನಿರ್ಮಳವಾದ ಬಳಿಕ ಇವುಗಳಲ್ಲಿರುವ ಜೀವ, ಆತ್ಮ, ಪರಮಾತ್ಮ ಎಂಬ ಭೇದ ಪಡಗಿ ಜೀವಭಾವ ತೊಲಗಿ ಪರಮಾನುಭಾವವೊಂದೇ ಉಳಿಯುವುದು. ವಾಚ್ಯ ವಾಚಕ ಭೇದವು ಸಹ ಅಡಗುವುದು. ಸೂತಕದ ಮಾತಿಗೆ ಸಂದಿರುವುದಿಲ್ಲ. ಆಚಾರ ಸಿದ್ಧಿಯಿಂದ ಭೂತ ಭವಿಷ್ಯತ್ತುಗಳ ಜ್ಞಾನವೂ ಉಂಟಾಗಿ ದಿವ್ಯಯೋಗಿ ತ್ವವು ಕೈಗೂಡುತ್ತದೆ. ಸರ್ವಾಂಗಗಳಲ್ಲಿ ಜ್ಞಾನಜ್ಯೋತಿಯು ಬೆಳಗುತ್ತದೆ. ಅಂಗ ಚಿದಂಗವಾಗಿ ಚಿದ್ಘನಲಿಂಗದಲ್ಲಿ ಸಮರಸಗೊಳ್ಳುತ್ತದೆ; ಸ್ವಯಂಜ್ಯೋತಿ ಯಾಗಿ ಪ್ರಜ್ವಳಿಸುತ್ತದೆ.

# ವಿಚಾರ ಮಹತ್ತ್ವ

ಆಚಾರ ಅದೆಷ್ಟೇ ಬೆಲೆ ಬಾಳುವದಾದರೂ ಅದಕ್ಕೆ ವಿಚಾರದ ಕಳೆ ಹೊಂದಾಣಿಕೆಯಾಗಿರಬೇಕು: ಇಲ್ಲವಾದರೆ ಬಣ್ಣವಿಲ್ಲದ ಚಿನ್ನದಂತಾಗುತ್ತದೆ. ಬೆಳಕಿಲ್ಲದ ತಿಂಗಳಂತಾಗುತ್ತದೆ. ಆಚಾರ ಚಂದ್ರನಿಗೆ ವಿಚಾರ ಕಿರಣ, ಆಚಾರ ಮುಖಕ್ಕೆ ವಿಚಾರ ಕಣ್ಣು,

ಆಚಾರದಿಂದ ಭಕ್ತತ್ವ ಅಳವಟ್ಟರೆ ವಿಚಾರದಿಂದ ಮಾಹೇಶ್ವರತ್ವ ಮೈಗೂಡುತ್ತದೆ, ಅಂತೆಯೇ ಮಾಹೇಶ್ವರನಿಗೆ ಜ್ಞಾನಾಚಾರ ಚರಮ ಉಪಾಸ್ಯವಾಗಿದೆ,

"ಚೌಷಷ್ಠಿ ವಿದ್ಯೆಗಳ ಕಲಿತಡೇನೋ ?
ಅಷ್ಟಾಷಷ್ಠಿ ಕ್ಷೇತ್ರಂಗಳ ಮೆಟ್ಟದಡೇನೋ ?
ಬಿಟ್ಟಡೇನೋ ಕಟ್ಟಿದಡೇನೋ ಅರಿವಿನಾಚಾರ ಕರಿಗೊಳ್ಳದನ್ನಕ್ಕ.
ಘನಲಿಂಗದ ಬೆಳಗು ಸ್ವಯವಾದ ಶರಣಂಗಲ್ಲದೆ
ಸೌರಾಷ್ಟ್ರ ಸೋಮೇಶ್ವರ ಲಿಂಗವೆಡೆಗೊಳ್ಳದು,"

ಅರಿವಿನಾಚಾರದ ಮಹತ್ತು ಈ ವಚನದಿಂದ ಮನದಟ್ಟಾಗುತ್ತದೆ. ಜ್ಞಾನಾಚಾರ ಕರಿಗೊಳ್ಳದೆ ಅಂದರೆ ವಿಚಾರಪೂರ್ಣ ಆಚಾರ ಅಳವಡದೆ ಏನು ಕಲಿತರೂ ಎಲ್ಲಿಗೆ ಹೋದರೂ ಏನು ಮಾಡಿದರೂ ಯಾವ ಸುಖವಿಲ್ಲ. ಬುದ್ಧಿ ಶುದ್ಧಿಗೆ ಬುದ್ಧಿ ವೃದ್ಧಿಗೆ ಜ್ಞಾನಶಕ್ತಿ ಸಂಜೀವಿನಿ. ಬತ್ತಿ ಜ್ಯೋತಿಯ ಮುಖಾಂತರ ಎಣ್ಣೆಯನ್ನು ಗ್ರಹಿಸುವಂತೆ ಶಿವನು ವಿಚಾರಮುಖದಲ್ಲಿ ಆಚಾರವನ್ನು ಸ್ವೀಕರಿಸುತ್ತಾನೆ. ಸ್ವೀಕರಿಸಿ ಮಾಹೇಶ್ವರನ ಅಂಗದಲ್ಲಿ ಮಹಾಕಳಾ ಸ್ವರೂಪನಾಗಿ ತೊಳಗಿ ಬೆಳಗುತ್ತಾನೆ.

"ಷಟ್‌ತ್ರಿಂಶ ತತ್ತ್ವಂಗಳೇ ದೇಹವಾಗಿ
ಪರಶಿವನದಕ್ಕೆ ದೇಹಿಯಾಗಿರ್ಪನಾಗಿ
ತತ್ತ್ವಮಯವಾದ ಭಕ್ತನಂಗದಲ್ಲಿ

ಪ್ರಾಣಮಯವಾದ ಶಿವನಿಪ್ಪನಯ್ಯಾ !
ತತ್ತ್ವಂಗಳು, ಆ ತತ್ತ್ವಂಗಳನೆಯ್ದುವಲ್ಲಿ
ಭಕ್ತನು ಜ್ಞಾನಕಾಯವಾಗಿಪ್ಪನಯ್ಯಾ !
ಆ ಕಾರ್ಯದಲ್ಲಿ ಕಳಾಸ್ವರೂಪನಾಗಿಪ್ಪನಯ್ಯ ಶಿವನು !
ಇಂತು ಆವಾಗವೂ ಅಗಲನಾಗಿ ಭಕ್ತದೇಹಿಕನಯ್ಯ,
ನಮ್ಮ ಸೌರಾಷ್ಟ್ರ ಸೋಮೇಶ್ವರನು."

ಈ ವಚನವೂ ಮೇಲಿನ ನಮ್ಮ ಮಾತನ್ನೇ ಸಮರ್ಥಿಸಿದೆ. ಜ್ಞಾನಕಾಯವಾಗದೆ ಕಳಾಸ್ವರೂಪ ಕರಿಗೊಳ್ಳದು. ಕಳಾಸ್ವರೂಪ ಕರಿಗೊಳ್ಳದೆ ಕಾಲಪಾಶ ಕರ್ಮಪಾಶ ಮಾಯಾಪಾಶಗಳು ಘಟಿಸದೆ ಬಿಡವು. ಈ ಪಾಶಗಳನ್ನು ಸುಡುವುದೊಂದೇ ಆ ಸಂವಿಜ್ಜ್ಯೋತಿ.

ಎಲ್ಲ ವಿಚಾರಗಳಿಗಿಂತ ಲಿಂಗ ವಿಚಾರವೇ ವಿಶಿಷ್ಟ. ಲಿಂಗವಿಚಾರವೆಂದರೆ ಆತ್ಮಜ್ಞಾನ. ಆತ್ಮಜ್ಞಾನವೊಂದಿಲ್ಲದೆ ಅನ್ಯಜ್ಞಾನಗಳು ಅದೆಷ್ಟಿದ್ದರೂ ಅಪ್ರಯೋಜನ.

"ಕೆಲರು ಚತುರ್ವೇದ ಭಾರಕರಾದರು.
ಕೆಲರು ಆಗಮಂಗಳಲ್ಲಿ ಸವೆದರು.
ಕೆಲರು ಷಟ್ ತರ್ಕಂಗಳಲ್ಲಿ ಮೋಹಿಸಿದರು.
ಅಂತಲ್ಲದೆ ತಾರಕಬ್ರಹ್ಮವನರಿತುದಿಲ್ಲ.
ಅದೆಂತೆಂದಡೆ :
'ಕೇಚಿದಾಗಮ ಜಾಲೇಷು ಕೇಚಿನ್ನಿಗಮ ಸಂಚಯೇ।
ಕೇಚಿತ್ತರ್ಕೇಣ ಮುಹ್ಯಂತಿ ನೈವ ಜಾನಂತಿ ತಾರಕಂ ॥'
ಎಂದುದಾಗಿ, ಜ್ಞಾನಾಜ್ಞಾನದ ಮಧ್ಯದಲ್ಲಿ
ಕರ್ಮಬಲದಲ್ಲಿ ಹುಟ್ಟಿದ ಚೌರಾಶಿ ಜೀವರಾಶಿಗಳೆಲ್ಲ
ಪಂಚೇಂದ್ರಿಯ ಪ್ರೀತಿಯಿಂದ ನಡೆವ ಪ್ರಾಣಿಗಳೆಲ್ಲರು
ಲಿಂಗವನರಿಯದೆ, ಕಾಲಚಕ್ರ, ಕರ್ಮಚಕ್ರ, ಪ್ರಳಯ
ಚಕ್ರಕ್ಕೊಳಗಾದರು ಸೌರಾಷ್ಟ್ರ ಸೋಮೇಶ್ವರ ಲಿಂಗವ
ಪೂಜಿಸ ಬಂದು ಲಿಂಗವ ಮರೆದ ಕಾರಣ."

ಆಚಾರಲಿಂಗವು ಎಷ್ಟು ಅವಶ್ಯಕವೋ ಅಷ್ಟೇ ವಿಚಾರ (ಜ್ಞಾನ) ಲಿಂಗವೂ ಅವಶ್ಯಕ. ಭಕ್ತಿತೈಲವುಳ್ಳ ಭಕ್ತನೆಂಬ ಬತ್ತಿಗೆ ಜ್ಞಾನ ಜ್ಯೋತಿಯನು ಅಂಟಿಸಿದಾಗ ಆ ಮಹಾಪ್ರಕಾಶದಲ್ಲಿ ಮಾಹೇಶ್ವರಾಂಗನು ರೂಪುಗೊಳ್ಳುತ್ತಾನೆ. ಭಕ್ತಿಗೆ ವಿಷಯುವಾದ ಲಿಂಗವನ್ನು ದರ್ಶಿಸಬೇಕಾದರೆ ಜ್ಞಾನದೀಪವಿಲ್ಲದಾಗದು.

"ಅಯ್ಯಾ, ನಿಮ್ಮನರುಹಿಸಿ ಎನ್ನ ಮರುಹಿಸಯ್ಯ !
ಕಾರುಣ್ಯಮೂರ್ತಿ ಸೌರಾಷ್ಟ್ರ ಸೋಮೇಶ್ವರಾ !"

ಎಂದು ಆದಯ್ಯ ಶರಣನ ಆದರದ ಅರುಹಿನ ಪ್ರಾರ್ಥನೆ, ಶಿವ ಜ್ಞಾನವೇ ಜ್ಞಾನ. ಶಿವಾಚಾರವೇ ಆಚಾರ, ಇವೆರಡೊಂದಾದ ಸ್ವಯಾನುಭಾವವೇ ಶಿವಾನುಭಾವ.

"ಹಿಂದಣ ಕಥೆಯ ಮುಂದೆ ಹೇಳುವ ಕಾವ್ಯವಲ್ಲ.
ಮುಂದಣ ಕಥೆಯನಿಂದು ಹೇಳುವ ನಾಟಕವಲ್ಲ.
ಬಂದ ಶಬ್ದವ ಸಂದಿಲ್ಲದುಸುರುವನೆಂಬ ಅಭ್ಯಾಸಿಯಲ್ಲ.
ಛಂದ ವಿಚ್ಛಂದವೆಂಬ ಸಂದೇಹಿಯಲ್ಲ.
ಸೌರಾಷ್ಟ್ರ ಸೋಮೇಶ್ವರಾ,
ನಿಮ್ಮ ಶರಣರ ಸ್ವಯಾನುಭಾವದ ಪರಿ ಬೇರೆ."

ಆತ್ಮಾನುಭವದ ಘನತೆಗೆ ತುದಿ ಮೊದಲಿಲ್ಲ ; ಸರಿ ಬರಿಯಿಲ್ಲ. ತನ್ನ ತಾನರಿಯದೆ ಹಿಂದಿನವರ ಮುಂದಿನವರ ಕಾವ್ಯ ನಾಟಕಗಳನ್ನು ಓದಿ ಫಲವಿಲ್ಲ ; ಅರಿತೂ ಫಲವಿಲ್ಲ. ಅಂತೆಯೇ ಬರೀ ಶಬ್ದ ಜ್ಞಾನ ಛಂದಸ್ಸಿನ ಜ್ಞಾನದಿಂದಲೂ ಸುಖವಿಲ್ಲ. ಸ್ವಯಾನುಭವವನ್ನು ತಂದುಕೊಡುವ ಜ್ಞಾನಾಚಾರದಿಂದ ಪ್ರಯೋಜನವುಂಟು, ಸತ್ಯಸುಖವುಂಟು.

"ಶಬ್ದಶಾಸ್ತ್ರ ತರ್ಕಾಗಮಂಗಳ ಹೇಳಿ ಕೇಳಿ
ಕಲಿತು ಉಲಿವರೆಲ್ಲರು.
ವಿದ್ಯೆಗೂಡಾದರಲ್ಲದೆ ಲಿಂಗಗೂಡಾದುದಿಲ್ಲ ನೋಡಯ್ಯ !
ಕಲಿಕಲಿತು ಉಲಿವ ಅಭ್ಯಾಸದ ಮಾತಿಂಗೆ

ಮರುಳರಪ್ಪರೇ ನಮ್ಮ ಶಿವಶರಣರು ?
ಆದಿ ಅನಾದಿಗಭೇದ್ಯವಾದ ನಿಜವ ಭೇದಿಸಲರಿತು
ಮನ ಘನದಲ್ಲಿ ನಿವಾಸಿಯಾಗಬೇಕು.
ಮನ ಘನದಲ್ಲಿ ನಿವಾಸಿಯಾಗದೆ
ಸೌರಾಷ್ಟ್ರ ಸೋಮೇಶ್ವರ ಲಿಂಗವ ಬಲ್ಲೆನೆಂದು
ನುಡಿವ ಬರಿ ಮಾತಿನ ಬಾಯ ಬಣ್ಣದ
ಸೊಲ್ಲು ಸಲ್ಲದೆ ಹೋಯಿತ್ತು."

ಶಾಬ್ದಿಕಜ್ಞಾನ ಶಾಸ್ತ್ರಜ್ಞಾನ ತಾರ್ಕಿಕಜ್ಞಾನಗಳು ಲಿಂಗಜ್ಞಾನಕ್ಕೆ ಸರಿ ಬಾರವು. ಇದು ಉಪಯುಕ್ತ ಬುದ್ಧಿಯ ಲಕ್ಷಣ. ಇದು ಆಚಾರಯುಕ್ತವಾದ ವಿಚಾರ (ಜ್ಞಾನ) ವಾದ್ದರಿಂದ ಇದು ಉಪಯುಕ್ತವೆನಿಸುತ್ತದೆ. ಆತ್ಮಸಾಕ್ಷಾತ್ಕಾರ ರೂಪ ಉಪಯುಕ್ತತೆಯು ಲಿಂಗಜ್ಞಾನದಿಂದ ಲಭ್ಯವಾಗುತ್ತದೆ. ವ್ಯವಹಾರಿಕ ವಸ್ತುಗಳನ್ನು ಅಳವಡಿಸುವ ವ್ಯವಹಾರವನ್ನು ಹೆಚ್ಚಿಸುವ ವಿಚಾರಕ್ಕಿಂತ ಪರಮಾರ್ಥ ವಿಚಾರ ಹೆಚ್ಚಿನದು.

"ಕಾಯದ ಅವಗುಣಂಗಳ ಕಾಣದೆ
ವಾಯಕ್ಕೆ ವಾಯುವ ನುಡಿವ ವಾಯು ಪ್ರಾಣಿಗಳಿಗೆ
ಕಾಣ ಬಹುದೇ ಪರಮಾತ್ಮನಿರವು ?
ಹುಲ್ಲು ಮೊರಡಿಯಲ್ಲಿ ಕಲ್ಪತರುವ ಕಂಡೆಹೆನೆಂದು
ಕಳವಳಿಸಿ ಅತಿ ಬಳಲುವನಂತೆ ;
ಗೋರಿ ಕಲ್ಲೊಳಗೆ ಚಿಂತಾಮಣಿಯನರಸಿ
ಬೆರಟುಗೊಂಡವನಂತೆ ; ಕಂಗಳಯ್ಬಂಗೆ
ಮಣಿ ಮುಕುರವ ತೋರೆ ಕಾಣ್ಬನೆ ತನ್ನ ಪ್ರತ್ಯಂಗವ ?
ತಮ್ಮಲ್ಲಿರ್ದಾತ್ಮನ ತಾವರಿಯದವರು ನಿಮ್ಮನೆತ್ತ
ಬಲ್ಲರಯ್ಯಾ ಸೌರಾಷ್ಟ್ರ ಸೋಮೇಶ್ವರಾ."

"ಮಹಾನಾದದ ಕಳೆಯೋ ಲಿಂಗಕ್ಕಾಶ್ರಯಮಾಗಿ,
ಲಿಂಗದ ಕಳೆಯೋ ಹೃದಯಕ್ಕಾಶ್ರಯಮಾಗಿ,

ಹೃದಯದ ಕಳೆಯೇ ಜ್ಞಾನಕ್ಕಾಶ್ರಯವಾಗಿ,
ಜ್ಞಾನದ ಕಳೆಯೇ ನಿತ್ಯಕ್ಕಾಶ್ರಯವಾಗಿ
ನಿತ್ಯ ನಿರವಯ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ."

ತನುವಿನ ಅವಗುಣಗಳನ್ನೆ ತಿಳಿಯದ ಪ್ರಾಣದ ಮೋಹವನ್ನೆ ಬಿಡದ ಪ್ರಾಣದ ಪರಿಜ್ಞಾನವೇ ಇರದ ವಿಚಾರಕ್ಕೆ ಪರಮಾತ್ಮನ ವಿಚಾರ ವಿಶುದ್ಧ ಬುದ್ಧಿ ಸಾಧ್ಯವಾಗವು. ಕೇವಲ ವ್ಯವಹಾರಿಕ ವಿಚಾರ ಪ್ರಯೋಜನಕಾರಿಯಲ್ಲ. ಇದರಿಂದ ಪರಮಾರ್ಥ ಪ್ರಜ್ಞೆಯುಂಟಾಗದು. ತನ್ನನ್ನೇ ಅರಿಯದ ಮೇಲೆ ಇನ್ನೇನರಿತರೂ ಫಲವಿಲ್ಲ.

ನಾದಕಳೆ ಲಿಂಗಕಳೆ ಹೃದಯಕಳೆ ಒಗ್ಗೂಡಿ ಜ್ಞಾನಕಳೆಯನ್ನು ಉತ್ಪಾದಿಸಬೇಕು. ಈ ನಾಲ್ಕು ಸೇರಿ ನಿತ್ಯಕಳೆಯನ್ನು ಒದಗಿಸಿಕೊಳ್ಳಬೇಕು. ನಿತ್ಯತ್ವವನ್ನು ಸಂಪಾದಿಸುವ ಕಳೆಯೇ ನಿಜವಾದ ಜ್ಞಾನ, ನಿರ್ಮಲವಾದ ವಿಚಾರ. ಅದಕ್ಕಿದೆ ಮತ್ತೊಂದಕ್ಕಿಲ್ಲದ ಮಹತ್ತು.

ಬುದ್ಧಿ ಮಾನವತ್ವದ ಕುರುಹು, ಅಥವಾ ಅಂತಃಕರಣ. ಸುಬುದ್ಧಿ ಮಾಹೇಶ್ವರತ್ವದ ಕುರುಹಾದ ಅಂತಃಕರಣ. ಅಣಿಮಾಡುವುದು ಬುದ್ಧಿಯ ಕಾರ್ಯ; ಅಳವಡಿಸಿಕೊಳ್ಳುವುದು ಸುಬುದ್ಧಿಯ ಕಾರ್ಯ, ಅರಿವುದು ಮಾತ್ರ ಬುದ್ಧಿಯ ಕೆಲಸ; ಅರಿತುದನ್ನು ಅಳವಡಿಸಿಕೊಂಡು ಅರ್ಪಿಸುವುದು ಸುಬುದ್ಧಿಯ ಕೆಲಸ. ಇದಕ್ಕಾಗಿ ಸುಬುದ್ಧಿ ಮಾಹೇಶ್ವಾಂಗನ ಪವಿತ್ರ ಹಸ್ತ, ಅಳವಡಿಸುವ ಅರ್ಪಿಸುವ ಹಸ್ತ.

ಪ್ರಸಾದವನ್ನೇ ಪರಿಗ್ರಹಿಸುವ ಪವಿತ್ರತೆ ಸುಸ್ವಭಾವ ಸುಬುದ್ಧಿಗಿರುತ್ತದೆ. ಪರಿಗ್ರಹಿಸಿದುದನ್ನು ತನ್ನ ಗುರುಲಿಂಗರೂಪ ಪ್ರಜ್ಞಾನ ಚೈತನ್ಯಕ್ಕೆ ಒಪ್ಪಿಸುವ ಒಳಿತತೆಯುಳ್ಳದು. ಇದರಿಂದಾಗಿ ಸುಬುದ್ಧಿ ಎಂದು ಸಾರ್ಥಕನಾಮವುಳ್ಳದಾಗಿದೆ. ಅಲ್ಲದೆ ಇತ್ತ ಮಾಹೇಶ್ವರಾಂಗನನ್ನು ಅತ್ತ ಗುರುಲಿಂಗವನ್ನು ರೂಪಿಸಬಲ್ಲುದು ಸುಬುದ್ಧಿ ಹಸ್ತವೊಂದೆ ! ಮಾಹೇಶ್ವರ ಸ್ಥಲವೆಂಬ ಮಹಾಮಂದಿರದ ಅಡಿಗಲ್ಲು ಸುಬುದ್ಧಿ. ಇದರಿಂದಾಗಿ ಸುಬುದ್ಧಿರೂಪ ಸುವಿಚಾರದ ಮಹತ್ತು ಅಷ್ಟಿಷ್ಟಲ್ಲ.

## ಗುರುಲಿಂಗ ಸಾಹಿತ್ಯ :

"ಪೃಥ್ವಿಯ ಪೂರ್ವಾಶ್ರಯವನಳಿದ ಭಕ್ತಂಗೆ
ಆಚಾರಲಿಂಗ ಸಾಹಿತ್ಯ.
ಅಪ್ಪುವಿನ ಪೂರ್ವಾಶ್ರಯವನಳಿದ ಮಾಹೇಶ್ವರಂಗೆ
ಗುರುಲಿಂಗ ಸಾಹಿತ್ಯ."

ಗುರುಲಿಂಗಕ್ಕೆ ಮಾಹೇಶ್ವರಾಂಗ. ಜ್ಞಾನಶಕ್ತಿ. ವಾಮದೇವರೂಪ ಜಿಹ್ವೆ ಮುಖ. ಸುರಸ ಪ್ರಸಾದ. ಸುರಸವೇ ತೃಪ್ತಿ. ಪ್ರತಿಷ್ಠಾ ಕಲೆ. ಚಿದ್ರೂಪು ನೆಲೆ. ಎಳಿಸಿ ಮೋಹಿಸುವುದು ವಿಷಯ. ಮಕಾರ ಪ್ರಣವ. ಹ್ರೀಂಕಾರ ಪ್ರಸಾದ ಮಂತ್ರ. ಪಾನ್ಯವೇ ಅರ್ಪಣ. ಕರ್ತೃ ಸಾದಾಖ್ಯ. ಗೂಢ ಸಂಜ್ಞೆ, ವೀಣಾನಾದ.

ಮಾಹೇಶ್ವರಾಂಗನಿಗೆ ಅಪ್ ಭೂತಾಂಗ. ಗುಹ್ಯಸ್ಥಾನ, ಅಪಾನವಾಯು; ಸ್ವಾಧಿಷ್ಠಾನ ಚಕ್ರ. ಸ್ವಪ್ನಾವಸ್ಥೆ. ಶ್ವೇತವರ್ಣ. ಷಟ್ಕೋಣ. ಬ. ಭ. ಮ. ಯ. ರ. ಲ. ಆರು ಅಕ್ಷರಗಳು ಉತ್ತರ ದಿಕ್ಕು. ದಂಡಕಾಕೃತಿ. ಸುಬದ್ಧಿ ಹಸ್ತ. ರಸ ಪದಾರ್ಥ. ನಿಷ್ಠಾಭಕ್ತಿ. ವಿಷ್ಣು ಪೂಜಾರಿ. ಅಂತರಾತ್ಮ. ಲಿಂಗಾಚಾರ ಸದಾಚಾರಗಳು;

ಜ್ಞಾನಶಕ್ತಿ : ಸದಾ ಸದ್ಭಕ್ತಿ ಸನ್ಮಾರ್ಗಗಣಂಗಳ ಚಿದಪ್ಪು ಸಂಬಂಧವಾದ ಜ್ಞಾನೇಂದ್ರಿಯಂಗಳ ಜ್ಞಾನಾಚಾರವಿಡಿದು ಗುರುಲಿಂಗ ಜಂಗಮದದೀಕ್ಷಾಪಾದೋದಕ ಮಿಶ್ರವಾದ ಚಿದ್ಭಸಿತದಿಂದ ಸ್ನಾನ ಧೂಳನ ಧಾರಣಂಗಳಿಗೆ ಕರ್ತಳಾಗಿರ್ಪಳೆಂಬುದೀಗ ಜ್ಞಾನಶಕ್ತಿ.

ಜಿಹ್ವೆ ಮುಖ : ನಿವೃತ್ತಿ ವೀರಶೈವಾಚಾರ ಮಾರ್ಗದ ಮಂತ್ರ ಗುರು ಲಿಂಗವೇ ಪ್ರಾಣವಾಗಿ ಮಾಹೇಶ್ವರ ಸ್ಥಲಕ್ಕೆ ಲಿಂಗ ಮಾತ್ರ ಮಿಶ್ರಂಗಳೊಡನೆ

ಸುರಸ ಮೊದಲಾದ ಪವಿತ್ರ ಅಜಡ ಪ್ರಸಾದಕ್ಕೆ ಯೋಗ್ಯವಾಗಿ ಉಭಯ ವರ್ತ ರೂಪದಿಂದಿರ್ಪುದೆಂಬುದೀಗ ಜಿಹ್ವೆಮುಖ.

ಸುರಸ ಪ್ರಸಾದ : ಚಿದಪ್ಪುವಿನ ಸುಬಂದ್ಧಿಯ ಬೆವರು ಬಿಂದುಗಳಿಂದ ಜನಿತವಾಗಿ ಗುರುಲಿಂಗ ಮಂತ್ರದಿಂದ ಪಾವನವೆನಿಸಿ ಮಾಹೇಶ್ವರನ ಸ್ವಾಧಿಷ್ಠಾನ ಚಕ್ರದಲ್ಲಿ ನೆಲಸಿರ್ಪ ಷಡ್ವಿಧ ಧಾತುಲಿಂಗಗಳಿಗೆ ಅರ್ಪಿತವಾಗಿರುವುದೇ ಸುರಸ ಪ್ರಸಾದ.

ಪ್ರತಿಷ್ಠಾ ಕಲೆ ; ಜಿಹ್ವೆ, ಘ್ರಾಣ, ನೇತ್ರ, ತ್ವಕ್ಕು, ಶ್ರೋತ್ರಂಗಳ ದೀಕ್ಷಾ ಪಾದೋಕದಿಂದ ಸೂಕ್ಷ್ಮವಾದ ಮಲಿನವ ದಂತಧಾವನ ಕ್ರಿಯೆಗಳಿಂದ ತೊಳೆದು ನಿರ್ಮಲ ರೂಪವ ಮಾಡುವುದೇ ಪ್ರತಿಷ್ಠಾ ಕಲೆ.

ಮಕಾರ ಪ್ರಣವ : ಮಾಹೇಶ್ವರ ಸ್ಥಲಕ್ಕೆ ಮಾತಾಪಿತವಾಗಿ ೨೫೨ ಲಿಂಗ ಮಂತ್ರಗಳ ಗರ್ಭೀಕರಿಸಿಕೊಂಡು ಎಪ್ಪತ್ತು ಕೋಟಿ ಸೂರ್ಯ ಚಂದ್ರಾಗ್ನಿ ಪ್ರಕಾಶಕ್ಕೆ ಮಿಗಿಲಾಗಿ ಚಿದ್ಘನ ಇಷ್ಟ ಮಹಾಜ್ಯೋತಿ ಲಿಂಗದ ಕಟಿಸ್ಥಾನದಲ್ಲಿ ನೆಲಸಿರ್ಪುದೆ ಮಕಾರ ಪ್ರಣವ.

ಶ್ವೇತವರ್ಣ : ಸ್ವಾಧಿಷ್ಠಾನವು ದುಂಡುಮಲ್ಲಿಗೆಯಂತೆ ಇರುವುದರಿಂದ ಬಿಳಿಯ ಬಣ್ಣ.

ಚಿಲ್ಲಕ್ಷಣ : ಸರ್ವಾಚಾರ ಸಂಪತ್ತಿನಾಚರಣೆಯಲ್ಲಿ ಸಂತೃಪ್ತಿಯಲ್ಲಿದ್ದು ಪರ ಹಿಂಸಾದಿಗಳನ್ನು ದೇಹ ಕುಲ ಛಲ ಅರ್ಥಾಭಿಮಾನಗಳನ್ನು ತ್ಯಜಿಸಿ ಕ್ರೋಧಿಸದೆ ಮಂತ್ರಮೂರ್ತಿ ಗರುಲಿಂಗ ದೇವನ ಸಂಗ ಸಂಯೋಗ ಸಮರತೆಯಿಂದ ನಿಶ್ಶಬ್ದ ನಿಃಕ್ರೋಧಿಯಾಗಿ ಭಾವನ್ನ ವೃಕ್ಷದೋಪಾಧಿಯಲ್ಲಿ ಸಮಸ್ತ ತತ್ತ್ವಂಗಳ ಉಲುಹಿಲ್ಲದೆ ನಿಶ್ಚಲನಾಗಿರ್ಪ ಸದ್ವೀರ ಮಾಹೇಶ್ವರನೆಂಬುದೀಗ ಚಿತ್ತು ಲಕ್ಷಣ.

**ಗುರುಲಿಂಗ :** ಜಿಹ್ವಾವಚ್ಛಿನ್ನ ಚೈತನ್ಯವೇ ಗುರುಲಿಂಗ. ಅಂದರೆ ನಾಲಗೆಯೊಳಗಿರುವ ಚೇತನಕಳೆಯೋ ಅಂದರೆ ರುಚಿಸಬಲ್ಲ ಶಕ್ತಿಯೋ ಗುರುಲಿಂಗ. ರುಚಿಯನರಿಯುವುದೇ ಜ್ಞಾನಶಕ್ತಿ, ರಸನೆಯೊಡನೆ ರುಚಿಯ ಗ್ರಹಿಸುವ ಕಾರಣ ರಸನೆ ಮುಖ. ಗುರುಲಿಂಗವು 'ಮ'ಕಾರ ಮಂತ್ರ ಮೂರ್ತಿ, ಕರ್ತೃಸಾದಾಖ್ಯ.

ಗೂಢಸಂಜ್ಞೆ. 'ವೇಣುನಾದ, ದಂಡಕಾಕೃತಿ. ಮಕಾರ ಪ್ರಣವ, ಯಜುರ್ವೇದ, ಚಿತ್ ಲಕ್ಷಣ,

'ಮಂತ್ರ ಮೂರ್ತಿಯೇ ಗುರುವಾದ ಕಾರಣ,
ಷಡಕ್ಷರವೇ ಷಡು ರುಚಿಯಾಗಿ ತೋರಿಹುದಾಗಿ,
ಅಂತಪ್ಪ ಷಡು ರುಚಿಯು ಜಿಹ್ವೆಯ ಮುಖಕ್ಕೆ
ಸಲುವ ದೆಸೆಯಿಂ ಜಿಹ್ವೆಗೆ ಗುರುಲಿಂಗವಾಗಬೇಕಾಯ್ತು.'

'ಜಿಹ್ವೆಯಲ್ಲಿ ಸುಬುದ್ಧಿಯಿಂದ ರುಚಿಯನಂಗೀಕರಿಸುವುದು ಗುರುಲಿಂಗ.' "ಮಾತೃ ಪಿತೃ ಪತಿ ದ್ರೋಹ ಮೊದಲಾದ ಪರಮ ಪಾತಕದೊಳು ಚರಿಸದೆ ಆವ ಜಾತಿಯಲ್ಲಿ ಜನಿತನಾದಡೇನು, ಹಸ್ತಮಸ್ತಕ ಸಂಯೋಗದಿಂದ ಗುರುಕರ ಜಾತರಾಗಿ ಮಂತ್ರವೇ ಮನವಾದ ವೀರ ಮಾಹೇಶ್ವರ ಗಣಾರಾಧ್ಯರ ಸ್ವಾಧಿಷ್ಠಾನ ಸಂಬಂಧ ಷಡ್‌ದಳಯುಕ್ತವಾದ ಸುಬುದ್ಧಿ ಪದ್ಮದಲ್ಲಿ ಮೂರ್ತಿಗೊಂಡಿರುವಾತನೆಂಬುದೀಗ ಗುರುಲಿಂಗವೆಂಬ ಶಬ್ದಕ್ಕರ್ಥ.

ಕರ್ತೃಸಾದಾಖ್ಯ ; ಕುಬುದ್ಧಿ ಅತಿಆಶೆ ಅಜ್ಞಾನ ಮುಂದುಗೊಂಡು ಲಿಂಗ ಪೂಜೆಯ ಮಾಡಿ ಲಿಂಗದೊಲುಮೆಯ ಪಡೆದು ಷಣ್ಮತಂಗಳಿಗೆ ಉಪರಿಯಾಗಿರಬೇಕೆಂಬುವರಿಗೆ ಅಸಾಧ್ಯವಾಗಿ 'ಕಿಂಕುರ್ವಾಣ ಸತ್ನಾಯಕ ಸದ್ಭಕ್ತಿ ಸದಾಚಾರ ಮುಂದುಗೊಂಡು ನಿಷ್ಪ್ರಪಂಚಿಯಾಗಿ ಚಿದಂಗ ಚಿದ್ಘನಲಿಂಗದ ಮರ್ಮಾಮರ್ಮವನರಿದು ಅರ್ಚಿಸಿ ಲಿಂಗಾಂಗ ಸಂಬಂಧಿಯಾದ ಲಿಂಗ ನಿಷ್ಠಾ ಪರತ್ವದಿಂದ ಇಹ ಪರಂಗಳಿಗೆ ಮೀರಿ ತೋರುವುದೆಂಬುದೀಗ ಕರ್ತೃಸಾದಾಖ್ಯವೆಂಬ ಶಬ್ದಕ್ಕರ್ಥ.

ಗೂಢಸಂಜ್ಞೆ ; ನಾನು ನೀನು ಎಂಬುಭಯವನಳಿದು ಆಣವ ಮಾಯಾ-ಕಾರ್ಮಿಕ ಮಲತ್ರಯಂಗಳಲ್ಲಿ ಮೋಹಿಸದೆ ಭಕ್ತಸ್ಥಲವ ತಿಳಿದು ಕ್ರಿಯಾಲಿಂಗ ಜ್ಞಾನಲಿಂಗ ಮಹಾಜ್ಞಾನಲಿಂಗದೊಳಗಣ ಜಂಗಮ ಲಿಂಗದಲ್ಲಿ ಅರ್ಪಿತಾವಧಾನದ ವಿಶ್ವಾಸ ಎಚ್ಚರದಳೆದು ಇರ್ಪ ಸದ್ವೀರಮಾಹೇಶ್ವರ ಎಂಬುದೀಗ ಗೂಢ ಎಂಬ ಸಂಜ್ಞೆಗರ್ಥ.

ಯಜುರ್ವೇದ ; ಸಮಸ್ತ ಪ್ರಾಣಿಗಳ ಸೃಷ್ಟಿಸುವ ಬ್ರಹ್ಮನ ಉತ್ತರ ಮುಖದಲ್ಲಿ ವಾಮದೇವಲಿಂಗವ ಸ್ಥಾಪ್ಯವ ಮಾಡಿ ಆ ಲಿಂಗ ಮುಖಕ್ಕೆ ಉಪದೇಶವ ಮಾಡಿದಂತಹದ್ದು ಪರಶಿವನು ಎಂಬುವೀಗ ಯಜುರ್ವೇದ.

ಅಂತರಾತ್ಮ ; ಒಂದು ತಾಣದಲ್ಲಿ ಸ್ಥಾಪ್ಯವಾಗಿದ್ದು ಅನಂತ ದಿಕ್ಕುಗಳಿರುವಂತಹ ಮಹಾ ಭೋಗಂಗಳ ಕಂಡು ಕೈಮುಟ್ಟಿ ಭೋಗಿಸುವಂತಹ ಮನದಲ್ಲಿ ಸಂತೋಷಗೊಂಡಿರುವಂತಹದೇ ಹಂಸವೆಂಬುದೀಗ ಅಂತರಾತ್ಮ.

# ಗುರುಲಿಂಗದ ಮೂರು ಲಿಂಗ

ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು ಎಂದು ಗುರುಲಿಂಗ ತ್ರಿವಿಧ. ಅಥವಾ ಆಗಮಲಿಂಗ, ಕಾಯಲಿಂಗ, ಆಚಾರಲಿಂಗ ಎಂಬುದಾಗಿಯೂ ನಿರೂಪಿಸ ಲಾಗಿದೆ. ಕ್ರಿಯಾ ಭೇದದಿಂದ ಮೂರಾಗುತ್ತದೆ.

'ದೀಕ್ಷೆ ಎಂದಡೆ ಗುರು. ಶಿಕ್ಷೆ ಎಂದಡೆ ಜಂಗಮ. ಜ್ಞಾನ ಅಥವಾ ಸ್ವಾನುಭಾವವೆಂದಡೆ ತನ್ನಿಂದ ತಾನರಿವುದು.'–ವಚನ ಶಾಸ್ತ್ರಸಾರ, ಭಾಗ–೨, ಪುಟ–೨೮೮. ಇದರಿಂದ ಗುರುಲಿಂಗವೇ ಜಂಗಮಲಿಂಗವೆಂದು ತಿಳಿದು ಬರುತ್ತದೆ.

ಕ್ರಿಯಾಗಮ, ಭಾವಾಗಮ, ಜ್ಞಾನಾಗಮವೆಂದು ಆಗಮಲಿಂಗ ಮೂರು ಬಗೆಯಾಗಿದೆ. ಸಕಾಯಲಿಂಗ ಅಕಾಯಲಿಂಗ ಪರಕಾಯಲಿಂಗವೆಂದು ಕಾಯ ಲಿಂಗ ಮೂರು ತೆರನಾಗಿದೆ.

"ಕಾಣದುದನರಸುವರಲ್ಲದೆ ಕಂಡುದನರಸುವರೇ ಅಯ್ಯ ? ಘನಕ್ಕೆ ಘನ ವಾದ ವಸ್ತು ತಾನೇ ಗುರುವಾದ, ತಾನೇ ಲಿಂಗವಾದ, ತಾನೇ ಜಂಗಮವಾದ, ತಾನೇ ಪ್ರಸಾದವಾದ, ತಾನೇ ಮಂತ್ರವಾದ, ತಾನೇ ತಂತ್ರವಾದ, ಸಕಲ ವಿದ್ಯಾ ಸ್ವರೂಪವಾದ' ಇಂತಿವೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದು ಇನ್ನು ನಿರ್ವಿಕಾರ ಗುಹೇಶ್ವರ.

ಇಷ್ಟಲಿಂಗಕ್ಕೆ ಆಚಾರಲಿಂಗ ಒಂದು ಮುಖವಾದರೆ ಗುರುಲಿಂಗ ಇನ್ನೊಂದು ಮುಖ. ಮೂರು ಬಗೆಯ ಗುರುವೇ ಮೂರು ಬಗೆಯ ಲಿಂಗವಾಗಿ ಕ್ರಿಯಾ ಗಮಾದಿ ನವಲಿಂಗ ಚೇತನವಾಗಿ ಪರಿಣಮಿಸುವನು.

ಸಾಧಕನ ಸತ್ಕ್ರಿಯೆಗಳಿಗೆ ಸಾಧನ ಮತ್ತು ಪ್ರೇರಣವಾಗುವುದೇ ಆಗಮ–ಕಾಯ–ಆಚಾರ ಲಿಂಗಗಳ ಮೂಲಗುರಿ. ಆಗಮಾದಿ ಲಿಂಗಗಳ ಪ್ರಕ್ರಿಯೆ ಗಳಿಂದ ಪ್ರಗತಿಯುಂಟಾಗುತ್ತದೆ. ಇಲ್ಲಿ ಕ್ರಿಯೆಯೆಂದರೆ ಬರೀ ಮಾಡುವಿಕೆ ಯಲ್ಲ, ಅರಿತು ಆಚರಿಸುವಿಕೆ. ಅರಿವಿಲ್ಲದ ಆಚರಣೆ ಮಾಹೇಶ್ವರಾಂಗನ ಲಕ್ಷ್ಯ ವಲ್ಲ. ಜ್ಞಾನಶಕ್ತಿ ಸಂಪನ್ನ ಗುರುಲಿಂಗದ ಉದ್ದೇಶವೂ ಅಲ್ಲ. ಕ್ರಿಯಾಗಮ

ಭಾವಾಗಮಂಗಳು ಜ್ಞಾನಾಗಮದಲ್ಲಿ, ಧರ್ಮಾಚಾರ ಭಾವಾಚಾರಗಳು ಜ್ಞಾನಾಚಾರದಲ್ಲಿ ಪ್ರಗತಿ ಪಡೆದು ಪರ್ಯವಸಾನವಾಗುವುದನ್ನು ಗಮನಿಸಬೇಕು.

ಸತ್ಕ್ರಿಯೆಯೇ ಕ್ರಿಯಾಗಮು. ಇದರಲ್ಲಿ ನಿಷ್ಠೆ ನಿಬ್ಬರಿಸಿದರೆ ಭಾವಾಗಮು. ಈ ಭಾವಾಗಮದಲ್ಲಿ ಮಹಾಜ್ಞಾನ ಒಡಗೂಡಿದರೆ ಜ್ಞಾನಾಗಮು. ಪರಿಪೂರ್ಣ ಶಿವಾಚಾರವೇ ಕ್ರಿಯಾಗಮು. ಇದರಲ್ಲಿ ಇರದು ಅಂಗದಿಚ್ಛೆ. ಈ ಸತ್ಕ್ರಿಯೆಯಲ್ಲಿ ಮನ ಮಗ್ನವಾಗಿರುವುದೇ ಭಾವಾಗಮು. ಇದು ಬಗೆಯಲ್ಲಿ ಗಟ್ಟಿಗೊಂಡಿರುತ್ತದೆ ಗಟ್ಟಿಗೊಂಡ ಭಾವಾಗಮದಲ್ಲಿ ಜ್ಞಾನ ಮಿಲನವಾಗಿ ಜ್ಞಾನಾಗಮುವೆನಿಸುತ್ತದೆ. ಈ ಮೂರು ಕರಿಗೊಂಡು ಸಮರಸಗೊಂಡಿರುವುದೇ ಆಗಮಲಿಂಗದ ದಿಟವಾದ ತುಂಬು ಕುರುಹು. ಗುರುಲಿಂಗದ ಇದು ಪ್ರಥಮ ಹಂತ.

ಕ್ರಿಯೆಗೆ ಆಶ್ರಯವಾದುದು ಕಾಯ. ಕಾಯ ತನ್ನ ಸ್ಥೂಲತ್ವವನ್ನು ಅಂದರೆ ಕರ್ಮಜಡತ್ವವನ್ನು ದೇಹಭಾವವನ್ನು ಕಳೆದುಕೊಂಡು ಸಕಾಯವೆನಿಸುತ್ತದೆ. ಮುಂದೆ ಈ ಕಾಯಭಾವವನ್ನು ಸಂಪೂರ್ಣ ತ್ಯಜಿಸಿ ಭಾವಾಗಮಕ್ಕೆ ಆಶ್ರಯವೆನಿಸಿ ಅಕಾಯವೆನಿಸುತ್ತದೆ. ಕಾಯ ಭಾವವಳಿದು ಕಳಾತ್ಮಕಲಿಂಗಭಾವ ಬೆಳೆದು ಜ್ಞಾನಾಗಮಕ್ಕೆ ಕಾರಣವೆನಿಸಿ ಪರಕಾಯವೆನಿಸುತ್ತದೆ. ಈ ಪರಕಾಯದಲ್ಲಿರುವ ಮಾಹೇಶ್ವರನು ಸಕಾಯನಲ್ಲ. ಅಕಾಯನಲ್ಲ ; ಸರ್ವಸ್ವತಂತ್ರ ಪರಕಾಯ ಸಕಲ ನಿಷ್ಕಲಾತೀತ ಲಿಂಗಕಾಯ. ಇದು ಗುರುಲಿಂಗದ ದ್ವಿತೀಯ ಹಂತ.

ಮೂರನೆಯದಾಗಿ ಆಚಾರಲಿಂಗವಾಗಿ ಮುಂದುವರಿಯುತ್ತದೆ. ಮಾಹೇಶ್ವರಾಂಗನು ಪರಕಾಯನಾದರೂ ಪರರ ಉದ್ಧಾರಕ್ಕಾಗಿ ಧರ್ಮಾಚಾರ–ಭಾವಾಚಾರ–ಜ್ಞಾನಾಚಾರ ನಿರತನಾಗುತ್ತಾನೆ. ಇವು ಆತನ ಲಿಂಗಕಾಯಗಳಲ್ಲಿ ಆಚರಿತವಾಗುತ್ತವೆ. ಗುರು–ಲಿಂಗ–ಜಂಗಮಕ್ಕೂ ಕ್ರಿಯಾಚಾರಗಳು ಬೇಕೆಂಬುದನ್ನು ಆಚಾರಲಿಂಗವು ಅರುಹುತ್ತದೆ.

ಧರ್ಮವೆ ಆಗಮಾಚಾರ ; ಆಗಮಾಚಾರವೇ ಗುರು, ಭಾವವೇ ಅಂಗ; ಭಾವಾಂಗವೇ ಲಿಂಗ, ಜ್ಞಾನವೇ ಜಂಗಮ; ಆಗಮಾಚಾರರೂಪ ಗುರುವಿಲ್ಲದೆ ಲಿಂಗವಿಲ್ಲ. ಲಿಂಗವಿಲ್ಲದೆ ಜಂಗಮವಿಲ್ಲ ಗುರುವೇ ದೀಕ್ಷೆಯಾಗಿ ಶಿಕ್ಷೆಯಾಗಿ ಸ್ವಾನುಭಾವ (ಜ್ಞಾನ)ವಾಗಿ ಇರುತ್ತಾನೆ.

ಗುರುಲಿಂಗವು ಜಿಹ್ವೆ, ಸ್ವಾಧಿಷ್ಠಾನ, ಗುಹ್ಯ ಈ ಮೂರು ಕರಣಗಳಲ್ಲಿ ಧಾರಣವಾಗಿರುತ್ತದೆ. ಜಿಹ್ವೆ ಜ್ಞಾನೇಂದ್ರಿಯು, ಸ್ವಾಧಿಷ್ಠಾನ ವಿಷಯೇಂದ್ರಿಯು. ಗುಹ್ಯ ಕರ್ಮೇಂದ್ರಿಯು. ಜಲಾಂಗ ಜನ್ಯ ರಸಗ್ರಾಹಕ ಚೈತನ್ಯವೆ ಜಿಹ್ವೆ. ಗೃಹೀತ ರಸಧಾರಕ ಚೈತನ್ಯವೇ ಸ್ವಾಧಿಷ್ಠಾನ, ಧಾರಿತ ರಸವಿಸರ್ಜನ ಚೈತನ್ಯವೆ ಗುಹ್ಯ. ಇದರಿಂದಾಗಿ ರಸರುಚಿಯು ರಸನೆಯಲ್ಲಿ ಉತ್ಪತ್ತಿಯಾಗಿ, ಸ್ವಾಧಿಷ್ಠಾನದಲ್ಲಿ ಸ್ಥಿತಿಗೊಂಡು ತ್ಯಾಜ್ಯಾಂಶವನ್ನು ಗುಹ್ಯವು ತ್ಯಜಿಸುವುದೆಂದು ತಿಳಿದುಬರುತ್ತದೆ. ಈ ಮೂಬಗೆಯ ಕೆಲಸ ಗುರುಲಿಂಗದ ಜ್ಞಾನಶಕ್ತಿಯಿಂದ ನಡೆಯುತ್ತದೆ. ಜಿಹ್ವೆಯಲ್ಲಿರುವುದು ಆಗಮಲಿಂಗ, ಸ್ವಾಧೀಷ್ಠಾನದಲ್ಲಿರುವುದು ಕಾಯಲಿಂಗ, ಗುಹ್ಯದಲ್ಲಿರುವುದು ಆಚಾರಲಿಂಗ. ಈ ಮೂರರಲ್ಲಿ ಜ್ಞಾನ ಜ್ಞಾತೃಜ್ಞೇಯವಾಗಿ ಶಕ್ತಿಯಿರುತ್ತದೆ; ಮತ್ತು ಪರಿವಿಡಿದು ನಿಷ್ಠೆ ಪ್ರತಿಷ್ಠೆ–ಸ್ವಾನುಭವ ಕಳೆಯಾಗಿರುತ್ತದೆ.

ರಸರುಚಿಯು ಕ್ರಿಯಾಜ್ಞಾನಾನುಭವ ರೂಪದಲ್ಲಿ ಉಪಭುಕ್ತವಾಗುತ್ತದೆ. ರಸದ ರೂಪವು ಕ್ರಿಯಾಲಿಂಗಕ್ಕೆ ರಸದ ರುಚಿಯು ಪ್ರಾಣಲಿಂಗಕ್ಕೆ ರಸದ ತೃಪ್ತಿಯು ಭಾವಲಿಂಗಕ್ಕೆ ಮೊದಲು ಅರ್ಪಣವಾಗಿ ಬಳಿಕ ಉಪಭುಕ್ತವಾಗುತ್ತವೆ. ರೂಪು ನೋಟ ಕ್ರಿಯೆಯಿಂದ ರುಚಿಯು ಆರೋಗಣೆಯ ಕ್ರಿಯೆಜ್ಞಾನಗಳೆರಡರಿಂದ ತೃಪ್ತಿಯು ಅನುಭವದಿಂದ ಲಭ್ಯವಾಗುತ್ತವೆ. ಈ ತ್ರಿವಿಧಾರ್ಜನ ಈ ತ್ರಿವಿಧಾರ್ಪಣ ತ್ರಿವಿಧಾನುಭವ ನಿರ್ವಹಣೆಗಾಗಿ ಲಿಂಗತ್ರೈವಿಧ್ಯ. ಅಂಗತ್ರಯ ಕರಣತ್ರಯ ಪಾವಿತ್ರ್ಯ ಸಾಧ್ಯ.

# ಗುರು-ಗುರುಲಿಂಗ

ಶಿಷ್ಯನ ಉದ್ಧಾರಕ್ಕಾಗಿ ಬಂದ ಚಿತ್ಕಳಾಮೂರ್ತಿ ಶ್ರೀಗುರು. ಪ್ರತ್ಯಕ್ಷ ಪರಶಿವರೂಪ ಶ್ರೀಗುರು. ಬೋಧರೂಪನು ಶ್ರೀ ಗುರು. ಅಂಗನ ನೂರೆಂಟು ಸಕೀಲಗಳನ್ನು ಶೋಧಿಸಿ ಲಿಂಗದ ನೂರೆಂಟು ಸಕೀಲಗಳನ್ನು ಬೋಧಿಸಿ ಅಂಗ-ಲಿಂಗ ಸಮನ್ವಯಗೊಳಿಸುವ ಗುರುವೇ ಗುರುಲಿಂಗವಾಗಿ ಪರಿಣಮಿಸುವನು. ಗುರು ಬೇರಲ್ಲ; ಲಿಂಗ ಬೇರಲ್ಲ. ಶಿಷ್ಯನ ಅಂಗದಲ್ಲಿ ಗುರುವೇ ಲಿಂಗವಾಗಿ ಜಂಗಮವಾಗಿ ನೆಲಸುತ್ತಾನೆ. ಗುರು ತನ್ನ ಕಾಯಪ್ರಸಾದವನ್ನೇ ಶಿಷ್ಯನ ತ್ವಕ್ಕಿನಲ್ಲಿ, ತನ್ನ ನೇತ್ರರೂಪ ರುದ್ರಾಕ್ಷಿಗಳನ್ನು ಶಿಷ್ಯನ ನೇತ್ರಗಳಲ್ಲಿ, ತನ್ನ ನಾಮವೆಂಬ ಮಂತ್ರವನ್ನು ಶಿಷ್ಯನ ಮುಖ ಶ್ರೋತ್ರಗಳಲ್ಲಿ, ತನ್ನ ಜ್ಞಾನಾಮೃತವನ್ನು ಶಿಷ್ಯನ ಬುದ್ಧಿಯಲ್ಲಿ ತನ್ನ ಕರುಣ ಪ್ರಸಾದವನ್ನು ಶಿಷ್ಯನ ಹೃದಯದಲ್ಲಿ ಅನುಗ್ರಹಿಸುತ್ತಾನೆ.

"ಭಕ್ತನ ಮನವೇ ಲಿಂಗ, ತನ್ಮನದ ಜ್ಞಾನವೇ ಜಂಗಮ ; ಆ ಜ್ಞಾನದ ಪರಿಪೂರ್ಣವೇ ಗುರು " "ಗುರುವೇ ಇಷ್ಟ. ಲಿಂಗವೇ ಪ್ರಾಣ; ಅರುಹೇ ಗುರು, ಪ್ರಾಣವೇ ಲಿಂಗ ; ಕ್ರಿಯಾಗುರು, ಜ್ಞಾನಗುರು, ಮಹಾಜ್ಞಾನ ಗುರು ; ಕ್ರಿಯಾ ಲಿಂಗ ಜ್ಞಾನಲಿಂಗ, ಮಹಾಜ್ಞಾನ ಲಿಂಗ "

ಶಿಷ್ಯನ ಅಂಗದಲ್ಲಿ ಆಚಾರ ತೋರಿ ಆಚಾರವೇ ಲಿಂಗವೆಂದು, ಲಿಂಗವೇ ತಾನೆಂದು ತಿಳಿಸಿದಾತನು ಗುರು. ಶಿಷ್ಯನ ಪ್ರಾಣದಲ್ಲಿ ಅರುಹ ತೋರಿ ಅರುಹೇ ಜಂಗಮವೆಂದು, ಜಂಗಮವೇ ತಾನೆಂದು ಬೋಧಿಸಿದಾತನು ಗುರು. ಕುರುಹು ಗುರು. ಅರುಹು ಗುರು. ಸುಳುಹು ಗುರು. ಕುರುಹು ಲಿಂಗ, ಅರುಹು ಲಿಂಗ, ಸುಳುಹು ಲಿಂಗ. ಅಮೃತಮಯ ಗುರು. ಜ್ಯೋತಿರ್ಮಯ ಗುರು, ಚಿನ್ನ ಬಣ್ಣದಂತೆ ಪುಷ್ಪ ಪರಿಮಳದಂತೆ ಕ್ಷೀರ ಮಧುರದಂತೆ ಗುರು ಲಿಂಗಗಳು.

ಸಂಶಯ ನಿವೃತ್ತಿಯೇ ಗುರು ; ನಿಶ್ಚಯ ವೃತ್ತಿಯೇ ಲಿಂಗ. ಸದ್ರೂಪ ಗುರು, ಚಿದ್ರೂಪ ಲಿಂಗ. ಚಿನ್ನಾದಸ್ವರೂಪ ಗುರು. ಚಿದ್ಬಿಂದು ಸ್ವರೂಪ ಲಿಂಗ. ಗುರುಕರಣದಿಂದೊಗೆದ ಲಿಂಗಕ್ಕೆ ಗುರುವೇ ಚೈತನ್ಯ.

"ದುರ್ವಾಸನಾಪೇಕ್ಷೆ, ಪರಪಾಕಭಕ್ಷ್ಣ ಭವಿನಿರೀಕ್ಷಣ, ಸ್ಥಾವರ ಮೂರ್ತಿ ಪೂಜಾಸ್ಪರ್ಶನ, ಅನ್ಯದೈವ ಮತ ಪುರಾಣಶ್ರವಣ. ಇಂತೀ ಅಜ್ಞಾನದ ಕುಬುದ್ಧಿ ಯಳಿದು ಇಷ್ಟಲಿಂಗ ನಿರ್ಮಾಲ್ಯ ಗಂಧ ಸುವಾಸನೆ, ಚರ ಪ್ರಸಾದ ಭಕ್ಷಣ, ಸಜ್ಜನೆ ಭಕ್ತಿ, ನಿರೀಕ್ಷಣ ಗುರುಪಾದಸ್ಪರ್ಶನ, ಶಿವಾಗಮಶ್ರವಣ ಇಂತೀ ಸುಜ್ಞಾನದಲ್ಲಿ ಸುಬುದ್ಧಿಯ ನೆಲೆಗೊಳಿಸಿ ನಿಂದುದೇ ಗುರುಲಿಂಗ."

ಕರ್ತೃ ಸಾದಾಖ್ಯವೇ ಗುರುಲಿಂಗ ಪ್ರಕಾಶ. ಗುರುಲಿಂಗ ಪ್ರಕಾಶವೇ ವಾಮದೇವ ಮುಖ. ವಾಮದೇವ ಮುಖದಿಂದಲೇ ಮಕಾರ ಪ್ರಣಮವು. ಮಕಾರ ಪ್ರಣಮದಿಂದ ಪ್ರತಿಷ್ಠಾ ಕಳೆ. ಪ್ರತಿಷ್ಠಾ ಕಲೆಯಿಂದ ಜ್ಞಾನಶಕ್ತಿ. ಜ್ಞಾನಶಕ್ತಿಯಿಂದ ಬುದ್ಧಿ. ಬುದ್ಧಿಯೆಂಬ ಕರಣದಿಂದ ರಸವಿಷಯವು. ರಸ ವಿಷಯದಿಂದ ಅಪ್ಪು. ಈ ಕ್ರಮವನರಿತಾಗ ಕರ್ತನಾದ ಗುರುಲಿಂಗದ ಸ್ವರೂಪ ಮಹಿಮೆ ಮನದಟ್ಟಾಗುವುದು.

## ಗುರುಲಿಂಗದ ಆರುಲಿಂಗ :

ಇಷ್ಟಲಿಂಗದ ಕ್ರಿಯಾಕಳೆಯೇ ಆಚಾರಲಿಂಗ. ಜ್ಞಾನಕಳೆಯೇ ಗುರುಲಿಂಗ. ಮೂಲಲಿಂಗವು ಪ್ರತಿಷ್ಠಾಕಲೆಯ ಪ್ರೀತಿಯಿಂದ ಜ್ಞಾನಶಕ್ತಿಯು ಕೂಡಿ ಗುರುಲಿಂಗವಾಗುವುದು. ಒಂದೇ ಗುರುಲಿಂಗವು ದೃಕ್ಕ್ರಿಯಾ ಭೇದದಿಂದ ಆರು ಬಗೆಯಾಗುತ್ತದೆ. ಕೇವಲ ಕ್ರಿಯೆಯಿಂದ ಮೂರಾದರೆ ಕ್ರಿಯಾಜ್ಞಾನ ಸಮನ್ವಯವುಳ್ಳ ಆಚಾರ ಭೇದದಿಂದ ಆರು ಬಗೆಯಾಗುತ್ತದೆ.

ಗುರುಲಿಂಗಷಟ್ಕ : ಗುರುಲಿಂಗದೊಳಗಿನ ಆಚಾರಲಿಂಗ, ಗುರುಲಿಂಗದೊಳಗಿನ ಗುರುಲಿಂಗ. ಗುರುಲಿಂಗದೊಳಗಿನ ಶಿವಲಿಂಗ, ಗುರುಲಿಂಗದೊಳಗಿನ ಜಂಗಮಲಿಂಗ, ಗುರುಲಿಂಗದೊಳಗಿನ ಪ್ರಸಾದಲಿಂಗ, ಗುರುಲಿಂಗದೊಳಗಿನ ಮಹಾಲಿಂಗ,

ಈ ಲಿಂಗಷಟ್ಕವನ್ನು ಚನ್ನಬಸವಣ್ಣನವರು ಇನ್ನೊಂದು ತೆರನಾಗಿ ತಿಳಿಸಿದ್ದಾರೆ. ಅವು ಹೀಗಿವೆ : ಮಾಹೇಶ್ವರನ ಆಚಾರಲಿಂಗ, ಮಾಹೇಶ್ವರನ ಗುರುಲಿಂಗ, ಮಾಹೇಶ್ವರನ ಶಿವಲಿಂಗ, ಮಾಹೇಶ್ವರನ ಜಂಗಮಲಿಂಗ, ಮಾಹೇಶ್ವರನ ಪ್ರಸಾದಲಿಂಗ, ಮಾಹೇಶ್ವರನ ಮಹಾಲಿಂಗ. ಇವನ್ನು ಪರಿವಿಡಿಯು ವಿವರಿಸಲಾಗುತ್ತದೆ.

### ೧. ಗುರುಲಿಂಗದೊಳಗಿನ ಆಚಾರಲಿಂಗ:

ಮಾಹೇಶ್ವರನ ಭಕ್ತನಿರುವಂತೆ, ಗುರುಲಿಂಗದೊಳಗೆ ಆಚಾರಲಿಂಗವಿದೆ, ಇದಕ್ಕೆ ಕಾರಣವಿದು :

ಜಲದಲ್ಲಿ ಪೃಥ್ವ್ಯಂಶವಿದೆ. ಇದರಿಂದಾಗಿ ರಸದಲ್ಲಿ ಗಂಧಾಂಶವಿದೆ. ಅಂತೆಯೇ ರಸನೆಯಲ್ಲಿ ನಾಸಿಕತ್ವವಿದೆ ; ಅಂಶಭೂತವಾಗಿದೆ. ಈ ದೃಷ್ಟಿಯಲ್ಲಿ ಜಿಹ್ವಾವಚ್ಛಿನ್ನ ಗುರುಲಿಂಗದೊಳಗೆ ಘ್ರಾಣಾಂಶಾವಚ್ಛಿನ್ನ ಆಚಾರಲಿಂಗವಿರು

ತ್ತದೆ, ರುಚಿಗತ ಸೂಕ್ಷ್ಮ ಗಂಧಾಂಶವು ಗುರುಲಿಂಗದೊಳಗಿನ ಆಚಾರ ಲಿಂಗಕ್ಕೆ ಅರ್ಪಣವಾಗುತ್ತದೆ ; ಆಗ ಸುಗಂಧ ಪ್ರಸಾದವಾಗುತ್ತದೆ.

ಗುರುಲಿಂಗವು ಸೃಷ್ಟಿಸಿದ ಸುರಸಪ್ರಸಾದದೊಳಗಿನ ಸೂಕ್ಷ್ಮಾಂಶವಾದ ಸುಗಂಧ ಪ್ರಸಾದವನ್ನು ಸ್ವೀಕರಿಸುವುದೇ ಗುರುಲಿಂಗದೊಳಗಿನ ಆಚಾರಲಿಂಗ. ಇಲ್ಲಿ ಕ್ರಿಯಾಚಾರಶಕ್ತಿಯ ಸಂಬಂಧವಿರುತ್ತದೆ. ಮಹೇಶ ಭಕ್ತನಾಗಿ ಅರ್ಪಿಸು ತ್ತಾನೆ. ಶ್ರದ್ಧಾಭಕ್ತಿಯನ್ನು ತೋರುತ್ತಾನೆ. ಇದರಿಂದಾಗಿ ಸುರಸಪ್ರಸಾದಗತ ಗಂಧ ಪದಾರ್ಥವು ಪ್ರಸಾದವಾಗುತ್ತದೆ, ಇದಾಗಲು ಆ ಮೂಲ ಆಚಾರಲಿಂಗದ ಅರ್ಧದೊಳಗಿನ ಆರರ ಒಂದಂಶವು ಗುರುಲಿಂಗದೊಳಗೆ ಸಮರಸವಾಗಿರುತ್ತದೆ. ಅದುವೇ ಗುರುಲಿಂಗದೊಳಗಿನ ಆಚಾರಲಿಂಗ.

ಅಥವಾ ರಸನೇಂದ್ರಿಯರೂಪ ಮಾಹೇಶ್ವರಾಂಗನು ತನ್ನ ಪದಾರ್ಥವಾದ ರಸಾರ್ಪಣದಲ್ಲಿ ಸುರಸಪ್ರಸಾದಾಸ್ವಾದದಲ್ಲಿ ಶ್ರದ್ಧೆಯನ್ನು ವಹಿಸಿ ಮಾಹೇಶ್ವರ ಭಕ್ತನಾಗುವನು. ಆಗ ಆ ಶ್ರದ್ಧೆಯನ್ನು ಸ್ವೀಕರಿಸುವ ಗುರುಲಿಂಗವು ಆಚಾರ ಲಿಂಗತ್ವದ ಭಾವವನ್ನು ತಳೆದಿರುವುದು ಏಕೆಂದರೆ ಶ್ರದ್ಧೆ ಮೊಳೆತೊಡನೆ ಅರ್ಪಣ ಮತ್ತು ಆಸ್ವಾದನರೂಪ ಆಚರಣೆ ಉಂಟಾಗುತ್ತದೆ ; ಕ್ರಿಯೆ ಉಂಟಾ ಗುತ್ತದೆ, ಆಗ ಚಿತ್ತಹಸ್ತವು ಘ್ರಾಣಮುಖವು ತಂತಮ್ಮ ಕಾರ್ಯಾಚರಣೆಯಲ್ಲಿ ತೊಡಗುತ್ತವೆ. ಇದರಿಂದಾಗಿಯೂ ಗುರುಲಿಂಗದೊಳಗಿನ ಆಚಾರಲಿಂಗತ್ವವು ಅಳವಡುತ್ತದೆ.

ಇನ್ನೊಂದು ಬಗೆಯಲ್ಲಿ ಗುರುಲಿಂಗಕ್ಕೂ ಆಚಾರ ಬೇಕು. ಆಚಾರವಿಲ್ಲದ ಗುರು ಭೂತಪ್ರಾಣಿ, ಆಚಾರವಿಲ್ಲದ ಲಿಂಗ ಶಿಲೆ,' ಎಂಬೀ ಶರಣವಾಣಿಯಂತೆ ಆಚರಣೆಗೆ ಒಳಗಾದ ಗುರುಲಿಂಗವು ಆಚಾರಲಿಂಗತ್ವವನ್ನು ತಳೆಯುತ್ತದೆ.

ಮಾಹೇಶ್ವರಾಂಗಕ್ಕೆ ಆಚರಣೆ ಬೇಕಾದಂತೆ ಗುರುಲಿಂಗಕ್ಕೂ ಆಚರಣೆ ಅಗತ್ಯ. ಅಂಗನದು ಅರ್ಚನ ಅರ್ಪಣಾದಿ ರೂಪ ಆಚರಣೆಯಾದರೆ ಲಿಂಗವು ಸ್ವೀಕರಿಸಿ ಪ್ರಸಾದವಾಗಿಸುವ ಆಚರಣೆ.

ಮಾಹೇಶ್ವರನ ರಕ್ತ ಪೃಥ್ವಿಯ ಅಂಶ. ಈ ರಕ್ತದ ಚಲನವೇ ಕ್ರಿಯಾ ಶಕ್ತಿ. ಪರಿಶುದ್ಧ ಸಾಂಸ್ಕಾರಿಕ ಚಲನವೇ ಗುರುಲಿಂಗದೊಳಗಿನ ಆಚಾರಲಿಂಗ. ಪರಿಶುದ್ಧ ಮಂತ್ರಮಯ ರಕ್ತದಿಂದ ನಿವೃತ್ತಿ ಕಳೆ ಉಂಟಾಗುತ್ತದೆ.

## ೨. ಗುರುಲಿಂಗದೊಳಗಿನ ಗುರುಲಿಂಗ :

ಜಲದೊಳಗೆ ಜಲತ್ವ, ರಸದೊಳಗೆ ರಸತ್ವವಿರುವಂತೆ ಗುರುಲಿಂಗದೊಳಗೆ ಗುರುಲಿಂಗವಿದೆ. ಮಾಹೇಶ್ವರನ ಮಾಹೇಶ್ವರಸ್ಥಲವು ಸಿದ್ಧವಾದಂತೆ ಗುರುಲಿಂಗ ದೊಳಗಿನ ಗುರುಲಿಂಗವು ಸಿದ್ಧವಾಗುತ್ತದೆ.

ತ್ಯಾಗಾಂಗಾವಚ್ಛಿನ್ನ ಚೈತನ್ಯ ಗುರುಲಿಂಗವಾದರೆ ತ್ಯಾಗಾಂಗದೊಳಗಿರುವ ಜಿಹ್ವಾವಚ್ಛಿನ್ನ ಚೈತನ್ಯವೇ ಗುರುಲಿಂಗದೊಳಗಿನ ಗುರುಲಿಂಗವಾಗುತ್ತದೆ. ಇವೆರಡು ಲಿಂಗಗಳಲ್ಲಿ ಸಾಧಾರಣ—ಅಸಾಧಾರಣ ಗುಣಧರ್ಮಗಳನ್ನು ಮನ ಗಾಣಬೇಕು, ತ್ಯಾಗಾಂಗಗತ ಗುರುಲಿಂಗಕ್ಕೆ ಸಾಧಾರಣ ಗುಣಧರ್ಮಗಳಿದ್ದರೆ ಗುರುಲಿಂಗದೊಳಗಿನ ಗುರುಲಿಂಗಕ್ಕೆ ಅಸಾಧಾರಣ ಗುಣಧರ್ಮಗಳಿವೆ. ಗುರು ಲಿಂಗ ಸರ್ವಾಂಗಕ್ಕೆ ಸುರಸಪ್ರಸಾದವನ್ನೊದಗಿಸಿದರೆ ಅದರೊಳಗಿನ ಗುರುಲಿಂಗ ಕೇವಲ ಜಿಹ್ವಾಂಗಕ್ಕೆ ಒದಗಿಸುತ್ತದೆ, ರಸಗ್ರಹಣವನ್ನು ಮಾತ್ರ ಮಾಡುತ್ತದೆ.

ಇನ್ನು ಜಿಹ್ವಾಂಗದೊಳಗೇ ಈ ಉಭಯತೆಯನ್ನು ಕಾಣಬೇಕು. ಜಿಹ್ವಾಂಗ —ಜಿಹ್ವಾಂಗತ್ವವೆಂದು ಎರಡುಂಟು. ಅಂತೆಯೆ ರಸ – ರಸತ್ವವೆಂದು ಇತ್ತೆರ. ಇವುಗಳಂತೆ ಗುರುಲಿಂಗ, ಆದರೊಳಗಿನ ಗುರುಲಿಂಗ ಎಂದು ಇಬ್ಬಗೆ. ಅಂದರೆ ಸ್ಥೂಲರಸಗ್ರಾಹಕ ಚೈತನ್ಯ ಗುರುಲಿಂಗ, ಸೂಕ್ಷ್ಮರಸತ್ವಗ್ರಾಹಕ ಚೈತನ್ಯ ಗುರು ಲಿಂಗದೊಳಗಿನ ಗುರುಲಿಂಗ. ಇದಿಷ್ಟು ಬಾಹ್ಯೈಕದೃಷ್ಟಿ. ಇನ್ನು ಬಾಹ್ಯಾಂತರ ದೃಷ್ಟಿಯಿಂದ ದರ್ಶಿಸೋಣ :

ಮಾಹೇಶ್ವರಾಂಗನ ಗುರುಲಿಂಗ ಜಿಹ್ವಾಂಗದಲ್ಲಿರುತ್ತದೆ. ಆ ಗುರುಲಿಂಗ ದೊಳಗಿನ ಗುರುಲಿಂಗ ಸ್ವಾಧಿಷ್ಠಾನದಲ್ಲಿ ಇರುತ್ತದೆ. ಜಿಹ್ವೆಯಲ್ಲಿರುವುದು ಬಾಹ್ಯ ಹಾಗು ಸ್ಥೂಲ. ಸಾಧಿಷ್ಠಾನದಲ್ಲಿರುವುದು ಆಂತರ ಹಾಗು ಸೂಕ್ಷ್ಮ.

ಗುರುಲಿಂಗವು ಸುರಸ ಪ್ರಸಾದವನ್ನು ಸೃಷ್ಟಿಸುತ್ತದೆ. ಈ ಪ್ರಸಾದವನ್ನು ಸ್ವಾಧಿಷ್ಠಾನ ಚಕ್ರದೊಳಗಿರುವ ಗುರುಲಿಂಗದೊಳಗಿನ ಗುರುಲಿಂಗವು ಸ್ವೀಕರಿಸಿ ಸ್ಥಿತಿಗೊಳಿಸುತ್ತದೆ.

ಜಿಹ್ವೆಯಲ್ಲಿರುವ ಗುರುಲಿಂಗವು ಬಾಹ್ಯ ಭೂತವಾದ ಜಲಜನ್ಯ ರಸ ಪದಾರ್ಥತ್ವವನ್ನು ಪರಿಹರಿಸಿದರೆ, ಸ್ವಾಧಿಷ್ಠಾನದಲ್ಲಿರುವ ಗುರುಲಿಂಗದೊಳಗಿನ

ಗುರುಲಿಂಗವು ಮಾಹೇಶ್ವರಾಂಗಗತ-ಸುರಸ ಪ್ರಸಾದದ ಪೂರ್ವಾಶ್ರಯವನ್ನು ಅಂದರೆ ಅಂಗಭಾವವನ್ನು ಪರಿಹರಿಸುತ್ತದೆ. ಗುರುಲಿಂಗವು ಪದಾರ್ಥವಾಸನೆಯನ್ನು ಶುದ್ಧವಿಸಿದರೆ ಗುರುಲಿಂಗದೊಳಗಿನ ಗುರುಲಿಂಗವು ಪ್ರಕೃತಿವಾಸನೆಯನ್ನು ಶುದ್ಧವಿಸುತ್ತದೆ. ಮತ್ತು ಇದು ಬಹಿರಂಗವನ್ನು ಅದು ಅಂತರಂಗವನ್ನು ಶೋಧಿಸುತ್ತವೆ; ಅಂದರೆ ಜಿಹ್ವಾಂಗ-ಸ್ವಾಧಿಷ್ಠಾನಾಂಗಗಳನ್ನು ಪರಿಶೋಧಿಸುತ್ತವೆ.

ಗುರುಲಿಂಗ ಸುರಸಪ್ರಸಾದದ ಉತ್ಪತ್ತಿಗೆ ಕರ್ತ; ಗುರುಲಿಂಗದೊಳಗಿನ ಗುರುಲಿಂಗ ಸರಸಪ್ರಸಾದದ ಸ್ಥಿತಿರೂಪ ಸ್ಥಿರತೆಗೆ ಕರ್ತ. ಮಾಹೇಶ್ವರನು ಗುರುಲಿಂಗವನ್ನು ಮಾಹೇಶ್ವರನ ಮಾಹೇಶ್ವರನು ಗುರುಲಿಂಗದೊಳಗಿನ ಗುರುಲಿಂಗವನ್ನು ಆರಾಧಿಸುತ್ತಾರೆ. ಮಾಹೇಶ್ವರಾಂಗ ಜಿಹ್ವೆಯಾದರೆ ಮಾಹೇಶ್ವರನ ಮಾಹೇಶ್ವರಾಂಗ ಸ್ವಾಧಿಷ್ಠಾನವಾಗಿರುತ್ತದೆ.

ಇಷ್ಟಲಿಂಗಕ್ಕೆ ಕ್ರಿಯೆ ಜ್ಞಾನಗಳೆರಡೂ ಎರಡು ಮುಖ ಕ್ರಿಯೆಯೆ ಆಚಾರಲಿಂಗ, ಜ್ಞಾನವೇ ಗುರುಲಿಂಗ. ಗುರುಲಿಂಗದ ಪ್ರಭೆಯೇ ಗುರುಲಿಂಗದೊಳಗಿನ ಗುರುಲಿಂಗ. ಒಂದು ಬಾಹ್ಯಜ್ಞಾನ; ಇನ್ನೊಂದು ಆಂತರಿಕಜ್ಞಾನ. ಉಭಯ ಜ್ಞಾನಶಕ್ತಿಯೇ ಈ ಲಿಂಗದ ಕಳೆ. ಇವೆರಡೂ ದ್ವೈತಾದ್ವೈತ. 'ಒಂದೆಂಬೆನೆ ಎರಡಾಗಿದೆ; ಎರಡೆಂಬೆನೆ ಒಂದಾಗಿದೆ.' ಈ ಜ್ಯೋತಿರ್ವಾಣಿ ಇದಕ್ಕೂ ಉಳಿದೆಲ್ಲ ಲಿಂಗಗಳ ದ್ವೈತಾದ್ವೈತ-ಭಾವಕ್ಕೂ ಸಮನ್ವಯವಾಗುತ್ತದೆ. ಖಂಡಿತವಿಲ್ಲವಾಗಿ ಸರ್ವಾಂಗವೆಲ್ಲವೂ ರಸನೆಯಾಯಿತು: ತಾನಲ್ಲದನ್ಯರಸವಿಲ್ಲವಾಗಿ ತನ್ನಲ್ಲಿಯೇ ಮಹತ್ತಪ್ಪ ಜಲರಸವಡಗಿತ್ತು. ಅಂಗವೆಲ್ಲ ಅಖಂಡಲಿಂಗವಾಯಿತ್ತು.' ಇದರಿಂದ ಅಂಗ ಲಿಂಗವ್ಯಾಪ್ತಿ ವ್ಯಕ್ತವಾಗುತ್ತದೆ.

ಮಾಹೇಶ್ವರಾಂಗನ ಶುಕ್ಲವು ಜಲಾಂಶ. ಇದುವೇ ಜೀವನಶಕ್ತಿ; ಜೀವಾಳ. ಇದು ಸಂಸ್ಕಾರದಿಂದ ಶುದ್ಧವಾಗಿ ಮಂತ್ರಮಯವಾಗಿ ಜ್ಞಾನಶಕ್ತಿಯುಕ್ತನಾಗಿ ಗುರುಲಿಂಗದೊಳಗಿನ ಗುರುಲಿಂಗವಾಗುತ್ತದೆ. ಪ್ರತಿಷ್ಠಾಕಳೆಯಿಂದ ಗರಿಷ್ಠತೆಯನ್ನು ಪಡೆಯುತ್ತದೆ.

## 3. ಗುರುಲಿಂಗದೊಳಗಿನ ಶಿವಲಿಂಗ:

ಅಪ್ಪುವಿನಲ್ಲಿ ಅಗ್ನ್ಯಂಶವಿದೆ. ರಸ ರೂಪುಗೊಳ್ಳುತ್ತದೆ. ನಾಲಗೆಯಲ್ಲಿ ನೇತ್ರಾಂಶವಿದೆ; ಇದರಿಂದಾಗಿ ಜಿಹ್ವಾವಚ್ಛಿನ್ನ ಗುರುಲಿಂಗದೊಳಗಿನ ನೇತ್ರಾಂಶ ವಚ್ಛಿನ್ನ ಶಿವಲಿಂಗವಿರುತ್ತದೆ. ರುಚಿಗತ ಸೂಕ್ಷ್ಮರೂಪಾಂಶವು ಗುರುಲಿಂಗದೊಳ ಗಿನ ಶಿವಲಿಂಗಕ್ಕೆ ಅರ್ಪಣವಾಗುತ್ತದೆ. ಆ ರಸಾಂತರ್ಗತ ರೂಪಾಂಶವು ಸುರೂಪಪ್ರಸಾದವಾಗುತ್ತದೆ.

ಗುರುಲಿಂಗದಿಂದ ಉತ್ಪನ್ನವಾದ ಸುರಸಪ್ರಸಾದದೊಳಗಿನ ಸೂಕ್ಷ್ಮಾಂಶವೂ ಗೌಣವೂ ಆದ ಸುರೂಪ ಪ್ರಸಾದವನ್ನು ನಿರೀಕ್ಷಿಸುವುದೇ ಗುರುಲಿಂಗದೊಳಗಿನ ಶಿವಲಿಂಗ. ಈ ಲಿಂಗದಲ್ಲಿ ಇಚ್ಛಾಶಕ್ತಿಯ ಕಳಾಂಶವಿರುತ್ತದೆ. ಈ ಲಿಂಗ ವನ್ನು ಮಾಹೇಶ್ವರನ ಪ್ರಸಾದಿಯು ತನ್ನ ಅವಧಾನ ಭಕ್ತಿಯಿಂದ ಆರಾಧಿ ಸುತ್ತಾನೆ. ಇಲ್ಲಿ ಅಹಂಕರಿಸದಿರುವುದೆ ಅವಧಾನ. ಇದರಿಂದಾಗಿ ಸುರಸಪ್ರಸಾ ದಗತ ರೂಪಪದಾರ್ಥವು ಸುರೂಪಪ್ರಸಾದವಾಗುತ್ತದೆ. ಇಂತಾಗಲು ಆ ಮೂಲ ಶಿವಲಿಂಗದ ಅರ್ಧದೊಳಗಿನ ಒಂದಂಶವು ಗುರುಲಿಂಗದೊಳಗೆ ಸಮನ್ವ ಯಗೊಂಡಿರುತ್ತದೆ. ಅದುವೇ ಗುರುಲಿಂಗದೊಳಗಿನ ಶಿವಲಿಂಗ.

ರಸನೇಂದ್ರಿಯ ರೂಪ ಮಾಹೇಶ್ವರಾಂಗನು ತನ್ನ ಪದಾರ್ಥವಾದ ರಸಾ ರ್ಪಣದಲ್ಲಿ ಸುರಸಪ್ರಸಾದದ ಆರೋಗಣೆಯಲ್ಲಿ ಸದಿಚ್ಛೆಯನ್ನು ಸದವಧಾನವನ್ನು ವಹಿಸಿ ಮಾಹೇಶ್ವರ ಪ್ರಸಾದಿಯಾಗುವನು. ಆಗ ಆ ಸದಿಚ್ಛೆಯನ್ನು ಸದವ ಧಾನವನ್ನು ಸ್ವೀಕರಿಸುವ ಗುರುಲಿಂಗವು ಶಿವಲಿಂಗತ್ವದ ಭಾವವನ್ನು ತಳೆಯು ವುದು. ಇಚ್ಛಾವಧಾನಗಳು ಅಂಕುರಿಸಿದೊಡನೆ ಆ ಸುರಸಪ್ರಸಾದದೊಳಗಿನ ಸುರೂಪುಪ್ರಸಾದದ ನಿರೀಕ್ಷಣೆ ನಿರಾಯಾಸವಾಗಿ ಉಂಟಾಗುತ್ತದೆ ಆಗ, ನಿರಹಂ ಕಾರಹಸ್ತವು ಸೂಕ್ಷ್ಮವಾದ ನೇತ್ರಮುಖವು ತಂತಮ್ಮ ಕಾರ್ಯಗಳಲ್ಲಿ ಅಂದರೆ ಅರ್ಪಣ– ಅಂಗೀಕಾರ ವೃತ್ತಿಗಳಲ್ಲಿ ಮುಂದುವರಿಯುತ್ತವೆ. ಇದರಿಂದಲೂ ಗುರುಲಿಂಗದೊಳಗಿನ ಶಿವಲಿಂಗತ್ವವು ಸಮನಿಸುತ್ತದೆ.

ಗುರುಲಿಂಗಕ್ಕೂ ನಿರೀಕ್ಷಣೆ ಬೇಕು. ನಿರೀಕ್ಷಣೆಯಿಲ್ಲದೆ ಗುರುಲಿಂಗತ್ವ ವುಂಟಾಗದು. ನಿರೀಕ್ಷಣೆ ಬಾಹ್ಯ ಚಕ್ಷುವಿನದು ಮಾತ್ರವಲ್ಲ; ನೇತ್ರೇಂದ್ರಿ

ಯಂದ್ದು ಮಾತ್ರವಲ್ಲ; ಗುರುಲಿಂಗವೂ ನಿರೀಕ್ಷಿಸಬಲ್ಲುದು. ಮಾಹೇಶ್ವರಾಂಗನೂ ನಿರೀಕ್ಷಿಸಬಲ್ಲನು.

ಮಾಹೇಶ್ವರನ ಮೂತ್ರ ತೇಜಾಂಶ. ಮೂತ್ರೇಂದ್ರಿಯಾವಚ್ಛಿನ್ನ ಚೈತನ್ಯವೇ ಗುರುಲಿಂಗದೊಳಗಿನ ಶಿವಲಿಂಗ.

## ೪: ಗುರುಲಿಂಗದೊಳಗಿನ ಜಂಗಮಲಿಂಗ

ಜಲದಲ್ಲಿ ವಾಯುವಿನ ಅಂಶವಿದೆ. ಜಿಹ್ವೆಯಲ್ಲಿ ತ್ವಗಂಶವಿದೆ. ಸ್ಪರ್ಶ ಇದೆ. ಇದರನುಭವಕ್ಕಾಗಿ ರಸನಾವಚ್ಛಿನ್ನ ಗುರುಲಿಂಗದೊಳಗೆ ಸ್ಪರ್ಶೇಂದ್ರಿಯಾವ ಚ್ಛಿನ್ನ ಜಂಗಮಲಿಂಗವಿರುತ್ತದೆ.

ಮೂಗು ನಾಲಗೆ ಕಣ್ಣು ಕಿವಿಗಳಂತೆ ತ್ವಕ್ ಒಂದೆಡೆಯಲ್ಲಿ ಇರುವುದಿಲ್ಲ ಇದು ಮೈಯಲ್ಲಿ ಎಲ್ಲೆಲ್ಲಿಯೂ ಇರುತ್ತದೆ. ಅಂತೆಯೆ ನಾಲಗೆಯಲ್ಲಿಯೂ ಇದೆ ಇದಿರುವಲ್ಲಿ, ಜಂಗಮಲಿಂಗವಿದ್ದೇ ಇರುತ್ತದೆ. ಇದರಿಂದ ಜಂಗಮಲಿಂಗದ ವ್ಯಾಪ್ತಿ ವಿದಿತವಾಗುತ್ತದೆ.

ಜಿಹ್ವೆಯ ಸ್ಪರ್ಶಾಂಶವು ಗುರುಲಿಂಗದೊಳಗಿನ ಜಂಗಮಲಿಂಗಕ್ಕೆ ಅರ್ಪಣ ವಾಗಿ ಸುಸ್ಪರ್ಶ ಪ್ರಸಾದವಾಗುತ್ತದೆ, ಈ ಸುಸ್ಪರ್ಶ ಪ್ರಸಾದವು ಸುರಸ ಪ್ರಸಾದ ದೊಳಗಿನದೆಂಬುದನ್ನು ಮರೆಯಲಾಗದು.

ಗುರುಲಿಂಗಜನ್ಯ ಸುರಸ ಪ್ರಸಾದದೊಳಗಿನ ಸೂಕ್ಷ್ಮಾಂಶವೂ ಗೌಣವೂ ಆದ ಸುಸ್ಪರ್ಶ ಪ್ರಸಾದವನ್ನು ಅಂಗವಿಸಿಕೊಳ್ಳುವುದೇ ಗುರುಲಿಂಗದೊಳಗಿನ ಜಂಗಮಲಿಂಗ. ಈ ಲಿಂಗದಲ್ಲಿಯೂ ಆದಿಶಕ್ತಿಯ ಕಳಾಂಶವಿರುತ್ತದೆ. ಅಂದರೆ ಶಾಂತಿಸಮನಿಸಿರುತ್ತದೆ, ಈ ಲಿಂಗವನ್ನು ಮಾಹೇಶ್ವರನ ಪ್ರಾಣಲಿಂಗಿಯು ತನ್ನ ಅನುಭವ ಭಕ್ತಿಯಿಂದ ಸುಮನ ಹಸ್ತದಿಂದ ಆರಾಧಿಸುತ್ತಾನೆ. ಇದರಿಂದಾಗಿ ಸುರಸ ಪ್ರಸಾದಗತ ಸ್ಪರ್ಶಪದಾರ್ಥವು ಸುಸ್ಪರ್ಶ ಪ್ರಸಾದವಾಗುತ್ತದೆ. ಹೀಗಾ ಗಲು ಆ ಮೂಲಜಂಗಮಲಿಂಗದ ಅರ್ಧದೊಳಗಿನ ಒಂದಶವು ಗುರುಲಿಂಗದೊಳಗೆ ಸಕೀಲವಾಗಿರುತ್ತದೆ. ಅದುವೇ ಗುರುಲಿಂಗದೊಳಗಿನ ಜಂಗಮಲಿಂಗ.

ಮಾಹೇಶ್ವರಾಂಗನು ತನ್ನ ಪದಾರ್ಥವಾದ ರಸಾರ್ಪಣದಲ್ಲಿ ಮತ್ತು ಸುರಸ ಪ್ರಸಾದವ ಉಪಭೋಗದಲ್ಲಿ ಆದಿಶಕ್ತಿಯ ಕಳಾಂಶವಾದ ಶಾಂತಿಯನ್ನು ಸ್ವಾನು

ಭವವನ್ನು ನಿರ್ವಹಿಸಿ ಮಾಹೇಶ್ವರನ ಪ್ರಾಣಲಿಂಗಿಯಾಗುವನು. ಆಗ ಆ ಶಾಂತಿಯನ್ನು ಆ ಸ್ವಾನುಭವವನ್ನು ಸ್ವೀಕರಿಸುವ ಗುರುಲಿಂಗವು ಜಂಗಮಲಿಂಗಾಂಶವನ್ನು ತೊಡುವುದು. ಶಾಂತಿ ಸ್ವಾನುಭವಗಳು ಸಮನಿಸಲು ಆ ಸುರಸ ಪ್ರಸಾದದೊಳಗಿನ ಸುಸ್ಪರ್ಶ ಪ್ರಸಾದದ ಅನುಭೋಗ ಅನಾಯಾಸವಾಗಿ ಉಂಟಾಗುತ್ತದೆ. ಆಗ ಸುಮನ ಹಸ್ತವು ಸೂಕ್ಷ್ಮವಾದ ತ್ವಙ್ಮುಖವು ತಂತಮ್ಮ ವೃತ್ತಿ ನಿರತವಾಗುತ್ತವೆ, ಇದರಿಂದಲೂ ಗುರುಲಿಂಗದೊಳಗಿನ ಜಂಗಮಲಿಂಗತ್ವವು ಸಿದ್ಧಿಸುತ್ತದೆ.

ಗುರುಲಿಂಗಕ್ಕೆ ರಸಾನುಭೂತಿ ಮುಖ್ಯವಾಗಿದ್ದರೆ ಸ್ಪರ್ಶಾನುಭೂತಿ ಗೌಣವಾಗಿರುತ್ತದೆ. ಗೌಣವಾಗಿಯಾದರೂ ಇರಬೇಕು. ಸ್ಪರ್ಶಾನುಭೂತಿಯಿಲ್ಲದ್ದು ಅರ್ಪಿತವಾಗದು. ಅರ್ಪಿತವಾಗದ್ದು ಪ್ರಸಾದವೆನಿಸದು. ಪ್ರಸಾದವಾಗಬೇಕಾದರೆ ಗುರುಲಿಂಗದೊಳಗಿನ ಜಂಗಮಲಿಂಗವಿದ್ದಾಗಬೇಕು, ಇಲ್ಲವಾದರೆ ರಸಸ್ಪರ್ಶದ ಅನನುಭೂತಿದೋಷ ಸಂಭವಿಸುತ್ತದೆ. ರಸನ-ರಸತ್ವಗಳ ಸ್ಪರ್ಶಾನುಭೂತಿಯಿಲ್ಲದೆ ಮಾಹೇಶ್ವರನು ಪ್ರಾಣಲಿಂಗಿಯಾಗನು : ಗುರುಲಿಂಗದಲ್ಲಿ ಜಂಗಮಲಿಂಗತ್ವ ಪ್ರಾಪ್ತಿಯಿಲ್ಲದೆ ಕೊರತೆಯೊದಗುವುದು. ಇದರಿಂದಾಗಿ ಗುರುಲಿಂಗದೊಳಗೆ ಜಂಗಮಲಿಂಗವಿದ್ದಾಗಬೇಕು. ಇರುವುದೇ ಪರಮಾರ್ಥ ; ಪರಿಪೂರ್ಣತ್ವ.

ಮಾಹೇಶ್ವರಾಂಗನ ಪ್ರತಿರೋಮವೂ ರೋಮಗತವಾದ ಸ್ವೇದವೂ ವಾಯುವಿನ ಅಂಶವಾಗಿರುತ್ತದೆ. ಈ ಎಲ್ಲ ರೋಮಾವಚ್ಛಿನ್ನ ಚೈತನ್ಯವೇ ಗುರುಲಿಂಗದೊಳಗಿನ ಜಂಗಮಲಿಂಗ.

## ೫ ಗುರುಲಿಂಗದೊಳಗಿನ ಪ್ರಸಾದಲಿಂಗ

ಅಪ್ಪುವಿನಲ್ಲಿ ಆಕಾಶಾಂಶವಿದೆ. ಅಂತೆಯೇ ಜಿಹ್ವೆಯಲ್ಲಿ ಶಬ್ದಾಂಶವಿದೆ. ಇದರ ಅಭಿವ್ಯಕ್ತಿಗಾಗಿ ಜಿಹ್ವಾವಚ್ಛಿನ್ನ ಗುರುಲಿಂಗದೊಳಗೆ ಶ್ರೋತ್ರಾವಚ್ಛಿನ್ನ ಪ್ರಸಾದಲಿಂಗವಿರುತ್ತದೆ.

ಜಿಹ್ವೆಯ ನಾದಾಂಶ ಮತ್ತು ಶಬ್ದಾಂಶವು ಗುರುಲಿಂಗದೊಳಗಿನ ಪ್ರಸಾದಲಿಂಗಕ್ಕೆ ಸಮರ್ಪಣವಾಗಿ ಸುಶಬ್ದ ಪ್ರಸಾದವಾಗುತ್ತದೆ. ಇದು ಸುರಸ ಪ್ರಸಾದದೊಳಗಿನದು

ಗುರುಲಿಂಗದಿಂದುಂಟಾದ ಸುರಸ ಪ್ರಸಾದದೊಳಗಿನ ಸೂಕ್ಷ್ಮವೂ ಗೌಣವೂ ಆದ ಸುಶಬ್ದ ಪ್ರಸಾದವನ್ನು ಆಲಿಸುವುದೇ ಗುರುಲಿಂಗದೊಳಗಿನ ಪ್ರಸಾದಲಿಂಗ, ಇದರಲ್ಲಿ ಪರಾಶಕ್ತಿಯ ಕಳಾಂಶವಿರುತ್ತದೆ. ಇದನ್ನು ಮಾಹೇಶ್ವರನ ಶರಣನು ತನ್ನ ಆನಂದ ಭಕ್ತಿಯಿಂದ ಸುಜ್ಞಾನ ಹಸ್ತದಿಂದ ಆರಾಧಿಸುತ್ತಾನೆ. ಇದರ ಫಲ ವಾಗಿ ಸುರಸ ಪ್ರಸಾದಗತಶಬ್ದವದಾರ್ಥವು ಸುಶಬ್ದ ಪ್ರಸಾದವಾಗುತ್ತದೆ. ಹೀಗೆ ಮಾಡಲು ಆ ಮೂಲ ಪ್ರಸಾದ ಲಿಂಗದ ಅರ್ಧದೊಳಗಿನ ಒಂದಂಶವು ಗುರುಲಿಂಗದೊಳಗೆ ಸಂಬಂಧವಾಗಿರುತ್ತದೆ. ಅದುವೇ ಗುರುಲಿಂಗದೊಳಗಿನ ಪ್ರಸಾದ ಲಿಂಗ.

ಮಾಹೇಶ್ವರಾಂಗನು ತನ್ನ ರಸಪದಾರ್ಥದ ಅರ್ಪಣದಲ್ಲಿ ಮತ್ತು ಸುರಸ ಪ್ರಸಾದದ ಉಪಭೋಗದಲ್ಲಿ ಆನಂದ ಭಕ್ತಿಯನ್ನು ಪ್ರದರ್ಶಿಸಿ ಪರಾಶಕ್ತಿಯ ಕಳಾಂಶವನ್ನು ಧರಿಸಿ ಮಾಹೇಶ್ವರನ ಶರಣನೆಂದಿಸುವನು. ಆ ಆನಂದವನ್ನು ಸ್ವೀಕರಿಸುವ ಗುರುಲಿಂಗವು ಪ್ರಸಾದಲಿಂಗಾಂಶವನ್ನು ತಳೆಯುವುದು, ಹೀಗಾಗಲು ಸುರಸ ಪ್ರಸಾದದೊಳಗಿನ ಸುಶಬ್ದ ಪ್ರಸಾದದ ಅನುಭೋಗ ಅನಾಯಾಸವಾಗಿ ಆಳ ವಡುತ್ತದೆ. ಇದರಿಂದಲೂ ಗುರುಲಿಂಗದೊಳಗಿನ ಪ್ರಸಾದಲಿಂಗತ್ವವು ಸಿದ್ಧ ವಾಗುತ್ತದೆ.

ಗುರುಲಿಂಗಕ್ಕೆ ರಸಾನುಭವ ಮುಖ್ಯ. ಶಬ್ದಾನುಭವ ಗೌಣ. ಚರ್ವಣ ದಲ್ಲಿ ಶಬ್ದವಾಗದಿರದು. ಆ ಶಬ್ದ ಒಮ್ಮೊಮ್ಮೆ ಕಿವಿಗೆ ಕೇಳದಷ್ಟು ಸೂಕ್ಷ್ಮ ವಾಗಿರುತ್ತದೆ. ಆ ಶಬ್ದವು ಲಿಂಗಾರ್ಪಣವಾಗದೆ ಹೋದರೆ ಸುರಸ ಪ್ರಸಾದ ದೊಳಗಿನ ಶಬ್ದವು ಪದಾರ್ಥವಾಗಿಯೇ ಉಳಿಯ ಬೇಕಾಗುವುದು. ಆ ಶಬ್ದವು ಪ್ರಸಾದವಾಗಬೇಕಾದರೆ ಗುರುಲಿಂಗದೊಳಗಿನ ಪ್ರಸಾದ ಲಿಂಗದ ಅಗತ್ಯವಿದ್ದೇ ಇದೆ.

ಪ್ರಬುದ್ಧ ಮಾಹೇಶ್ವರಶರಣನ ಮೈಯೆಲ್ಲ ಮೂಗು, ಮೈಯೆಲ್ಲ ನಾಲಗೆ, ಮೈಯಲ್ಲ ಕಣ್ಣು, ಮೈಯೆಲ್ಲ ಕಿವಿ ; ಇದು ಕಾರಣ ಮಾಹೇಶ್ವರನೇ ಸರ್ವಜ್ಞ ; ಸರ್ವಕರ್ತ.

ಮಾಹೇಶ್ವರನ ಜಲಾಂಶವಾದ ಲಾಲಾರಸವೇ ಆಕಾಶಾಂಸ. ಇದಿರುವುದು ಗಂಟಲು ನಾಲಗೆಗಳಲ್ಲಿ. ಇದಿದ್ದರೆ ಶಬ್ದೋತ್ಪತ್ತಿ. ಇವುಗಳಲ್ಲಿರುವುದು ಮಾಹೇ ಶ್ವರನ ಗುರುಲಿಂಗದೊಳಗಿನ ಪ್ರಸಾದಲಿಂಗ,

## ೬ ಗುರುಲಿಂಗದೊಳಗಿನ ಮಹಾಲಿಂಗ :

ಅಪ್ಪುವಿನಲ್ಲಿ ಆತ್ಮಾಂಶವಿದೆ. ಅಂತೆಯೇ ಹೃದಯದಲ್ಲಿ ಇದ್ದಂತೆ ನಾಲಗೆಯಲ್ಲಿ ತೃಪ್ತ್ಯಂಶವಿದೆ. ಇದನ್ನು ಪಡೆದು ಪ್ರಸಾದವಾಗಿಸಲು ರಸನಾವಚ್ಛಿನ್ನ ಗುರುಲಿಂಗದೊಳಗೆ ಹೃದಯಾವಚ್ಛಿನ್ನ ಮಹಾಲಿಂಗಾಂಶವಿರುತ್ತದೆ.

ಜಿಹ್ವೆಯೊಳಗಿನ ತೃಪ್ತ್ಯಂಶವು ಗುರುಲಿಂಗದೊಳಗಿನ ಮಹಾಲಿಂಗಕ್ಕೆ ಸಮರ್ಪಣವಾಗಿ ಸುತೃಪ್ತಿ ಪ್ರಸಾದವಾಗುತ್ತದೆ. ಇದು ಸುರಸ ಪ್ರಸಾದ ಸನ್ನಿಹಿತವಾದುದು.

ಗುರುಲಿಂಗದಿಂದಾದ ಸುರಸಪ್ರಸಾದದೊಳಗಿನ ಸೂಕ್ಷ್ಮವಾದಸುತೃಪ್ತಿ ಪ್ರಸಾದವನ್ನು ಪರಿಗ್ರಹಿಸುವುದೇ ಗುರುಲಿಂಗದೊಳಗಿನ ಮಹಾಲಿಂಗ. ಇದರಲ್ಲಿಯೂ ಆ ಚಿಚ್ಛಕ್ತಿಯು ಕಳಾಂಶವಿರುತ್ತದೆ. ಇದನ್ನು ಮಾಹೇಶ್ವರನ ಐಕ್ಯನು ತನ್ನ ಸಮರಸ ಭಕ್ತಿಯಿಂದ ಸದ್ಭಾವಹಸ್ತದಿಂದ ಆರಾಧಿಸುತ್ತಾನೆ. ಇದರ ಫಲವಾಗಿ ಸುರಸಪ್ರಸಾದದೊಳಗಿನ ತೃಪ್ತಿ ಪದಾರ್ಥವು ಸುತೃಪ್ತಿ ಪ್ರಸಾದವಾಗುತ್ತದೆ. ಹೀಗೆಸಗಲು ಆ ಮೂಲ ಮಹಾಲಿಂಗದ ಅರ್ಧದೊಳಗಿನ ಒಂದಂಶವು ಗುರುಲಿಂಗದೊಳಗೈತಂದಿರುತ್ತದೆ. ಅದುವೇ ಗುರುಲಿಂಗದೊಳಗಿನ ಮಹಾಲಿಂಗ.

ಮಾಹೇಶ್ವರಾಂಗನು ತನ್ನ ರಸ ಪದಾರ್ಥದ ಅರ್ಪಣದಲ್ಲ ಮತ್ತು ಸುರಸ ಪ್ರಸಾದದ ಉಪಭೋಗದಲ್ಲಿ ಸಮರಸ ಭಕ್ತಿಯನ್ನು ಪ್ರದರ್ಶಿಸಿ ಚಿಚ್ಛಕ್ತಿಯ ಕಳಾಂಶವನ್ನು ಅಳವಡಿಸಿಕೊಂಡು ಮಾಹೇಶ್ವರನ ಐಕ್ಯನೆನಿಸುವನು. ಆ ಸಮರಸವನ್ನು ಸ್ವೀಕರಿಸುವ ಗುರುಲಿಂಗವು ಮಹಾಲಿಂಗಾಂಶವನ್ನು ಧರಿಸುವುದು. ಹೀಗಾಗಲು ಸುರಸಪ್ರಸಾದದೊಳಗಿನ ಸುತೃಪ್ತಿ ಪ್ರಸಾದದ ಉಪಭೋಗ ಉಪಾಯವಾಗಿ ಉಂಟಾಗುತ್ತದೆ. ಇದರಿಂದಲೂ ಗುರುಲಿಂಗದೊಳಗಿನ ಮಹಾಲಿಂಗತ್ವವು ಸಂಸಿದ್ಧವಾಗುತ್ತದೆ.

ಸುರಸ ಪ್ರಸಾದೋಪಭೋಗದಿಂದ ಸಂತೃಪ್ತಿಯಾಗದಿರದು. ಆ ಸಂತೃಪ್ತಿಯು ಲಿಂಗಾರ್ಪಿತವಾಗಬೇಕಾದರೆ ಆ ಮಹಾಲಿಂಗವೇ ಬೇಕು. ಆದ್ದರಿಂದ ಗುರುಲಿಂಗದೊಳಗೆ ಮಹಾಲಿಂಗವು ಅಂಶವಾಗಿ ಅಳವಟ್ಟಿರುತ್ತದೆ.

ಹೃದಯದೊಳಗಿರುವ ದಯಾರಸವೇ ಮಾಹೇಶ್ವರನ ಆತ್ಮಾಂಶ. ಈ ಹೃದಯದಯಾವಚ್ಛಿನ್ನ ಚೈತನ್ಯವೇ ಗುರುಲಿಂಗದೊಳಗಿನ ಮಹಾಲಿಂಗ. ಮಾಹೇಶ್ವರಾಂಗನ ದಯಾರಸವು ಆ ಗುರುಲಿಂಗದೊಳಗಿನ ಮಹಾಲಿಂಗದ ಕರುಣಾ (ಅನುಗ್ರಹ) ರಸದೊಡನೆ ಏಕರಸ ಅಥವಾ ಸಮರಸವಾಗುವಿಕೆಯೇ ಆ ಮಾಹೇಶ್ವರನ ಮಹಾಲಿಂಗೈಕ್ಯ. ಅದುವೇ ಸ್ವಯಂಪ್ರಕಾಶ ಸ್ವರೂಪ, ಆಗ ಉಂಟಾಗುತ್ತದೆ. ಅನುಗ್ರಹ ಶಕ್ತಿ.

ಇದಿಷ್ಟು ಸ್ವಾನುಭವದ ಸಂಕ್ಷಿಪ್ತ ವಿವರಣೆ. ಇನ್ನು ಶಿವಶರಣರ ಸ್ವಾನುಭದ ದೃಷ್ಟಿಯಲ್ಲಿ ಗುರುಲಿಂಗದೊಳಗಿನ ಆರು ಲಿಂಗಗಳ ಬಿತ್ತರಣೆಯನ್ನು ನೋಡೋಣ.

ಕ್ರಿಯೆ, ಮಂತ್ರ, ನಿರೀಕ್ಷಣ, ಯಜನ, ಈಳನ, ವೇಧಾ ಎಂಬ ಆಚಾರ ಲಿಂಗಸ್ಥಳವಾರು. ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆ ಬೋಧಾದೀಕ್ಷೆ ಪ್ರಸನ್ನದೀಕ್ಷೆ ನಿರ್ವಾಣದೀಕ್ಷೆ—ಎಂಬ ಗುರುಲಿಂಗಸ್ಥಳವಾರು..." ಎಂದು ಮಾದರ ಚನ್ನಯ್ಯ ಶರಣನ ಹೇಳಿಕೆ. ಇದಕ್ಕೆ ವಿವರಣೆಯನ್ನು ಮುಂದಿನ ಆತನ ಮಾತಿನಲ್ಲಿಯೇ ಮನಗಾಣಬೇಕು.

೧. "ಗುರುಲಿಂಗವಾರು ಸ್ಥಲ: ಮಂತ್ರನಿಷ್ಠಾ ಸ್ವರೂಪವಾದ ಗುರುಲಿಂಗವು ಷಟ್‌ಪ್ರಕಾರಲಿಂಗವು : ಆ ನಿಃಕಲಲಿಂಗವೇ ಇಷ್ಟಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಲಿಂಗದ ಷಟ್‌ಸ್ಥಾನದಲ್ಲಿರ್ದ ಷಡ್ವಿಧ ಲಿಂಗ ಸ್ವರೂಪವು : ಅದಕ್ಕೆ ವಿವರ, ಕ್ರಿಯಾದೀಕ್ಷೆ : ನಾಲ್ಕು ದಿಕ್ಕಿನಲ್ಲಿ ನಾಲ್ಕಾರ್ಯರು ಸಹವಾಗಿ ಗಣಸಾಕ್ಷಿಯಾಗಿ ಪಂಚಕಲಶವ ಹೂಡಿ ಅಂಗದ ವರ್ತನೆಯ ನಷ್ಟ ಮಾಡಿ ಆಚಾರಲಿಂಗ ಸ್ವರೂಪವನೆಯ್ದಿಸಿ ಅಲ್ಲಿ ಇಷ್ಟಲಿಂಗದ ಕಳೆಯ ಪ್ರತಿಷ್ಠೆಯ ಮಾಡಿದಂತಹದ್ದೇ ಕ್ರಿಯಾದೀಕ್ಷೆ. ಆ ಸತ್ಕ್ರಿಯೋಪದೇಶ ಸ್ವರೂಪವಾದ ಇಷ್ಟಲಿಂಗವೇ ಗುರುಲಿಂಗವು, ಆ ಗುರುಲಿಂಗವೇ ಆ ಮಾಹೇಶ್ವರಂಗೆ ಇಷ್ಟಲಿಂಗವಾಗಲು, ಆ ಇಷ್ಟದ ಶಕ್ತಿಪೀಠದಲ್ಲಿಹ ಗುರುಲಿಂಗದೊಳಗಣ ಆಚಾರ ಲಿಂಗವು.

ಮಂತ್ರದೀಕ್ಷೆ : ಆ ಜ್ಞಾನ ಗುರುಸ್ವಾಮಿಯು ಅನಾಹತ ಕರ್ಣದ್ವಾರದಲ್ಲಿ ಪಂಚಾಕ್ಷರೀ ಮಂತ್ರವನುಪದೇಶಿಸಿ, ಪ್ರಾಣನ ಪ್ರಕೃತಿಯ ನಷ್ಟವ ಮಾಡಿ ಚಿತ್ ಪ್ರಾಣ ಸ್ವರೂಪವನೆಯ್ದಿಸಿ ಪ್ರಾಣಲಿಂಗದ ಕಳೆಯ ಪ್ರತಿಷ್ಠೆಯ ಮಾಡಿಕೊಡು

ವಂತಹದ್ದೇ ಮಂತ್ರಾನುಗ್ರಹ. ಆ ಮಂತ್ರಾನುಗ್ರಹಸ್ವರೂಪವಾದ ಪ್ರಾಣ ಲಿಂಗವು ; ಆ ಪ್ರಾಣಲಿಂಗವೇ ಮಾಹೇಶ್ವರಂಗೆ ಗುರುಲಿಂಗವಾಗಲು. ಆ ಗುರು ಲಿಂಗವೇ ಇಷ್ಟಲಿಂಗದ ಕಟಿಯಲ್ಲಿರ್ದ ಗ. ರುಲಿಂಗದೊಳಗಣ ಗುರುಲಿಂಗವು,

ವೇಧಾದೀಕ್ಷೆ : ಶಿಷ್ಯಮಸ್ತಕ ಹಸ್ತ ವಿನ್ಯಸ್ತ ಸದ್ಗುರುವೆ ಎಂದು ಆ ಜ್ಞಾನ ಗುರುಮೂರ್ತಿಯು ಆ ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತಕಮಲವನು ವಿನ್ಯಸ್ತವ ಮಾಡಿ ಆತ್ಮನ ವರ್ತನೆಯ ನಷ್ಟಮಾಡಿ ಚಿದಾತ್ಮಸ್ವರೂಪವನೆಯ್ದಿಸಿ ಅಲ್ಲಿ ಭಾವಲಿಂಗದ ಕಳೆಯ ಪ್ರತಿಷ್ಠೆಯ ಮಾಡಲು ಅಂತಹದೇ ವೇಧಾದೀಕ್ಷೆ. ಆ ವೇಧಾಸ್ವರೂಪವಾದ ಭಾವಲಿಂಗವು, ಆ ಭಾವಲಿಂಗವೇ ಮಾಹೇಶ್ವರಂಗೆ ಶಿವ ಲಿಂಗವಾಗಲು, ಆ ಶಿವಲಿಂಗವೇ ಇಷ್ಟಲಿಂಗದ ವರ್ತುಳದಲ್ಲಿಹ ಗುರುಲಿಂಗದೊಳ ಗಣ ಶಿವಲಿಂಗವು.

ಬೋಧಾದೀಕ್ಷೆ : ತ್ರಿವಿಧ ಲಿಂಗಾನುಭಾವವನು ಓದಿಸುವಂತಹದ್ದೇ ಬೋಧಾನುಗ್ರಹವು ; ಅಂತಹದೇ ಇಷ್ಟಲಿಂಗ. ಆ ಇಷ್ಟಲಿಂಗದ ಗೋಮುಖ ದಲ್ಲಿರ್ದ ಗುರುಲಿಂಗದೊಳಗಣ ಜಂಗಮ ಲಿಂಗವು.

ಪ್ರಸನ್ನದೀಕ್ಷೆ ; ಪ್ರತ್ಯಕ್ಷ ನಿರ್ಮಲ ಸ್ವರೂಪನಾದ ವಸ್ತುವೇ ನೀನೆಂದನು ಗ್ರಹಿಸುವಂತಹದ್ದೇ (ಪ್ರಸನ್ನದೀಕ್ಷೆ ಅಂತಹದ್ದೇ) ಇಷ್ಟಲಿಂಗ. ಆ ಇಷ್ಟಲಿಂಗದ ನಾಳದಲ್ಲಿರ್ದ ಗುರುಲಿಂಗದೊಳಗಣ ಪ್ರಸಾದ ಲಿಂಗವು.

ನಿರ್ವಾಣದೀಕ್ಷೆ : ಮೋಕ್ಷಸ್ವರೂಪವಾದ ವಸ್ತುವೇ ತಾನೆಂದು ಅನುಗ್ರಹಿ ಸುವಂತಹದ್ದೇ ನಿರ್ವಾಣದೀಕ್ಷೆ. ಅಂತಹದೇ ಇಷ್ಟಲಿಂಗದ ಆಜ್ಯ ಪ್ರದಾರಿಕೆ ಯಲ್ಲಿರ್ದ ಗುರುಲಿಂಗದೊಳಗಣ ಮಹಾಲಿಂಗವು.

೨. ಮತ್ತಂ ಕ್ರಿಯಾದೀಕ್ಷೆ : ಆ ಮಾಹೇಶ್ವರನ ಆಧಾರ ಚಕ್ರದ ನಾಲ್ಕು ಸಳ ಕಂಜಮಧ್ಯದಲ್ಲಿರ್ದ ಗುರುಲಿಂಗದೊಳಗಣ ಸತ್ಕ್ರಿಯಾನುಗ್ರಹ ಸ್ವರೂಪ ವಾದ ಆಚಾರ ಲಿಂಗವು.

ಮಂತ್ರ ದೀಕ್ಷೆ : ಮಾಹೇಶ್ವರನ ಸ್ವಾಧಿಷ್ಠಾನ ಚಕ್ರದ ಆರೆಸಳ ಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಮಂತ್ರಾನುಗ್ರಹಸ್ವರೂಪವಾದ ಪ್ರಾಣ ಲಿಂಗವು.

ವೇಧಾದೀಕ್ಷೆ : ಆ ಮಾಹೇಶ್ವರನ ಮಣಿಪೂರಕ ಚಕ್ರದ ಹತ್ತೆಸಳ ಕಂಜ ದಲ್ಲಿರ್ದ ಗುರುಲಿಂಗದೊಳಗಣ ವೇಧಾನುಗ್ರಹ ಸ್ವರೂಪಮಾದ ಶಿವಲಿಂಗವು.

ಬೋಧಾದೀಕ್ಷೆ : ಆ ಮಾಹೇಶ್ವರನ ಅನಾಹತ ಚಕ್ರದ ಹನ್ನೆರಡೆಸಳ ಕಂಜದಲ್ಲಿರ್ದ ಗುರುಲಿಂಗದೊಳಗಣ ಬೋಧಾನುಗ್ರಹ ಸ್ವರೂಪಮಾದ ಜಂಗಮ ಲಿಂಗವು.

ಪ್ರಸನ್ನ ದೀಕ್ಷೆ : ಆ ಮಾಹೇಶ್ವರನ ವಿಶುದ್ಧಿ ಚಕ್ರದ ಹದಿನಾರೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಪ್ರತ್ಯಕ್ಷಾನುಗ್ರಹ ಸ್ವರೂಪವಾದ ಪ್ರಸಾದ ಲಿಂಗವು.

ನಿರ್ವಾಣ ದೀಕ್ಷೆ : ಆ ಮಾಹೇಶ್ವರನ ಆಜ್ಞಾ ಚಕ್ರದ ಎರಡೆಸಳ ಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಮೋಕ್ಷಾನುಗ್ರಹ ಸ್ವರೂಪಮಾದ ಮಹಾ ಲಿಂಗವು.

3. ಮತ್ತಂ ಕ್ರಿಯಾದೀಕ್ಷೆ : ಅಂಗಕ್ಕೆ ಲಿಂಗೋಪದೇಶವಿತ್ತಂತಹದ್ದೇ ಗುರುಲಿಂಗದೊಳಗಣ ಆಚಾರಲಿಂಗವು.

ಮಂತ್ರ ದೀಕ್ಷೆ ; ಮನಕ್ಕೆ ಮಂತ್ರೋಪದೇಶವಿತ್ತಂತಹದ್ದೇ ಗುರುಲಿಂಗ ದೊಳಗಣ ಗುರುಲಿಂಗವು.

ವೇಧಾದೀಕ್ಷೆ : ಮಸ್ತಕದ ಮೇಲೆ ಹಸ್ತವ ಮಡಗುವಂತಹದ್ದೇ ವೇಧಾ ದೀಕ್ಷೆ ; ಅದೇ ಗುರುಲಿಂಗದೊಳಗಣ ಶಿವಲಿಂಗವು.

ಬೋಧಾದೀಕ್ಷೆ : ಶಿವಾನುಭವವನು ಬೋಧಿಸುವಂತಹದ್ದೇ ಬೋಧಾ ದೀಕ್ಷೆ ; ಅಂತಹದೇ ಗುರುಲಿಂಗದೊಳಗಣ ಜಂಗಮಲಿಂಗವು.

ಪ್ರಸನ್ನ ದೀಕ್ಷೆ : ಪ್ರತ್ಯಕ್ಷಾನುಗ್ರಹ ಸ್ವರೂಪವಾದುದೇ ಪ್ರಸನ್ನದೀಕ್ಷೆ ; ಅಂತಹದೇ ಗುರುಲಿಂಗದೊಳಗಣ ಪ್ರಸಾದಲಿಂಗವು.

ನಿರ್ವಾಣ ದೀಕ್ಷೆ : ನಿಜಮೋಕ್ಷಾನುಗ್ರಹ ಸ್ವರೂಪವೇ ನೀವೆಂದನುಗ್ರಹಿ ಸುವಂತಹದ್ದೇ ನಿರ್ವಾಣ ದೀಕ್ಷೆ ; ಅದೇ ಗುರುಲಿಂಗದೊಳಗಣ ಮಹಾಲಿಂಗವು ಇಂತು ಈ ಪ್ರಕಾರದ ದೆಸೆಯಿಂದೆ ಗುರುಲಿಂಗಸ್ಥಲವಾರು."

—ವಚನ ಶಾಸ್ತ್ರಸಾರ, ಭಾಗ-೨. ಪುಟ-೩೧೦

ಆರು ಸಂಸ್ಕಾರಗಳಿಂದ ಒಂದರಲ್ಲಿಯೇ ಆರು ತೆರನಾಗುವ ಬಗೆಯು ಬಣ್ಣಿಸ ಲಾಗಿದೆ. ಬಣ್ಣನೆ ಮೂರು ತೆರನಾಗಿದೆ. ಮೊದಲಿನದು ಬಹಿರಂಗಕ್ಕೆ ಎರಡನೆ ಯದು ಅಂತರಂಗಕ್ಕೆ. ಮೂರನೆಯದು ಉಭಯರಂಗಕ್ಕೆ. ಇದೊಂದು ಸುಂದರವಾದ ಸ್ವಾನುಭವ ಪೂರ್ಣವಾದ ನಿರೂಪಣೆ.

ಕ್ರಿಯಾ-ಮಂತ್ರ-ವೇಧಾ ದೀಕ್ಷಾತ್ರಯಗಳೊಡನೆ ಬೋಧಾ-ಪ್ರಸನ್ನ-ನಿರ್ವಾಣ ದೀಕ್ಷಾತ್ರಯಗಳನ್ನು ಸೇರಿಸಿ ಅರಾಗಿಸಲಾಗಿದೆ. ಈ ಆರುದೀಕ್ಷೆಗಳಿಂದ ಗುರುಲಿಂಗವೊಂದೇ ಆರುತೆರನಾಗುವುದು,

ಈ ಆರುದೀಕ್ಷೆಗಳಲ್ಲಿ ಕೊನೆಯದು ನಿರ್ವಾಣದೀಕ್ಷೆ, ಈ ನಿರ್ವಾಣಪದಕ್ಕೆ ಬೌದ್ಧರ ನಿರ್ವಾಣಪದಾರ್ಥವಲ್ಲ, ನಿಜಸ್ವರೂಪದ ಸಾಕ್ಷಾತ್ಕಾರ ಅಂದರೆ ಜೀವನ್ಮುಕ್ತಿಯನ್ನುಂಟುಮಾಡುವುದೇ ಇಲ್ಲಿನ ನಿರ್ವಾಣ ಪದದರ್ಥ.

"ಹುಟ್ಟು ಹೊಂದುಗೆಟ್ಟುದೇ ನಿರ್ವಾಣ.
ಮಲಮಾಯಾ ಕರ್ಮಂಗಳಳಿದುದೇ ನಿರ್ವಾಣ.
ಶೋಕ ಮೋಹ ನಷ್ಟವಾದುದೇ ನಿರ್ವಾಣ.
ಇಂತಪ್ಪ ನಿರ್ವಾಣವೇ ಸದ್ಯೋನ್ಮುಕ್ತಿ ಸೌರಾಷ್ಟ್ರಸೋಮೇಶ್ವರಾ!"

ಶಿವಾದ್ವೈತಸಿದ್ಧಾಂತದಲ್ಲಿ ತನು ನಿರ್ವಾಣವಾಗುವುದು ಮುಖ್ಯವಲ್ಲ. ಮನಭಾವಗಳು ನಿರ್ವಾಣವಾಗಬೇಕು. ಹುಟ್ಟುಸಾವು, ಹಸಿವು ನೀರಡಿಕೆ, ಶೋಕಮೋಹ, ಬಂಧಮೋಕ್ಷಗಳ ದ್ವಂದ್ವಗಳು ದೂರಾಗಬೇಕು. ಆಗ ಪರಿಪಿಡಿದು ತನು ಮನ ಪ್ರಾಣ, ಭಾವ ಆತ್ಮಗಳಿಗೆ ನಿರ್ವಾಣವಾದಂತೆ! ಬರೀ ಸಾಯುವುದು ಶೂನ್ಯವಾಗುವುದು ನಿರ್ವಾಣವಲ್ಲ, ಬದುಕಿದ್ದು ಸಾವನ್ನು ಗೆಲಿಯಬೇಕು. ಪ್ರಾಣವಿದ್ದು ಹಸಿವು ನೀರಡಿಕೆಗಳನ್ನು ತಡೆಯಬೇಕು. ಭಾವ ಅಂದರೆ ಕಾರಣಾಂಗವಿದ್ದು ಶೋಕಮೋಹಗಳಿಗೆ ಒಳಗಾಗಬಾರದು. ಆತ್ಮ ಪಿಂಡಸ್ಥವಾಗಿಯೇ ಬಂಧಮೋಕ್ಷಗಳಿಗೆ ಒಳಗಾಗಬಾರದು. ವೀರಶೈವರ ಮೋಕ್ಷವೆಂದರೆ ಸ್ವಸ್ವರೂಪಾನುಭವ. ಉಳಿದವರು ಹೇಳುವಂತೆ ಈ ಆತ್ಮನು ಈ ತನುವನ್ನು ಬಿಟ್ಟು ತೊಲಗುವುದೇ ಮೋಕ್ಷ ಅಥವಾ ನಿರ್ವಾಣವಲ್ಲ.

ಇನ್ನು 'ಗುರುಲಿಂಗಸ್ಥಲವಾರು' ಎಂಬ ಪದದ ವಿಚಾರ. ಒಂದು ಆರಾದರೂ ಆರು ಒಂದಾಗಿ ಇರುವುದೇ ಲಿಂಗಸ್ಥಲದ ಲಕ್ಷಣ.

"ಕೃತ ಮಧ್ಯ ಸ್ಥೂಲ ಹ್ರಸ್ವ ದೀರ್ಘವಪ್ಪ ಘಟದುಬುವಿ
ನಲ್ಲಿ ಇನಬಿಂಬ ಪ್ರತಿಬಿಂಬಿಸುತ್ತಿರಲು
ಅದು ಒಂದು ಬಿಂಬವೋ, ಬಹುಬಿಂಬವೋ ?

ಅಂಗ, ಪ್ರತ್ಯಂಗ, ನಿಚಯಂಗಂಗಳಲ್ಲಿ
ಚೇತನಿಸುವ ಚೈತನ್ಯಾತ್ಮನು ಏಕಾತ್ಮನೋ ಹಲವಾತ್ಮನೋ?

....ಎಂದು ಕೇಳುತ್ತಾನೆ ಆದಯ್ಯ ಶಿವಶರಣನು. ಒಂದಿದ್ದು ಹಲವಾಗಿ ತೋರಿದರೂ ಒಂದಾಗಿರುವ ಗುರುಲಿಂಗದ ಬೆಡಗನು ಬಲ್ಲವರೇ ಬಲ್ಲರು. ಲಿಂಗದ ನಿಜಾನುಭವ ಗುರುದೇವನಿಗೊಬ್ಬನಿಗೆ ಗೊತ್ತು. ಭೇದವಿದ್ದು ಭೇದವಿಲ್ಲ. ಬಣ್ಣವಿದ್ದು ಬಣ್ಣವಿಲ್ಲ. ನಿಷ್ಕಲದಲ್ಲಿ ಸಕಲ, ಸಕಲದಲ್ಲಿ ನಿಷ್ಕಲವಿರುವಂತೆ ಅಭೇದದಲ್ಲಿ ಭೇದ, ಭೇದದಲ್ಲಿ ಅಭೇದ ಇರುತ್ತದೆ. ಇದರಅನುಭವ ಅಪೂರ್ವ; ಇದನ್ನರಿತವರು ಅಪೂರ್ವ.

"ತಿಳಿದ ತಿಳಿಗೊಳದ ತಳಿತ ತಾವರೆಯರಳ
ತಂಡುಲದ ರುಚಿಯು ಕಳಹಂಸಿ ಬಲ್ಲುದಲ್ಲದೆ
ಒಡನಿರ್ದ ನೀರುಗಾಗೆ ತಾನೆತ್ತ ಬಲ್ಲುದೋ?
ಸುಧಾಕಿರಣನಿಂ ಬೆಳಗಿದ ಬೆಳುದಿಂಗಳ ರುಚಿಯ
ಚಕೋರ ಬಲ್ಲುದಲ್ಲದೆ ಒಡನಿರ್ದಕಾಕೋಳಿ ತಾನೆತ್ತಬಲ್ಲುದೋ ?
ಕಾರ್ಗಾಲದ ಮುಂಬನಿಯ ಸುಖವ ಚಾದಗೆಯು
ಬಲ್ಲುದಲ್ಲದೆ ಅಡವಿಯಲ್ಲಿರ್ದ ಕಕ್ಕೋರ (ಕೊಕ್ಕರೆ) ತಾನೆತ್ತ ಬಲ್ಲುದೋ?
ಸೌರಾಷ್ಟ್ರ ಸೋಮೇಶ್ವರನ ಇರವ ಮಹಾನುಭಾವಿಗಳು ಬಲ್ಲರಲ್ಲದೆ
ಒಡನಿರ್ದ ಜಡಮತಿಯ ಮಾನವರು ತಾವೆತ್ತ ಬಲ್ಲರೋ ?"

ಮಹಾನುಭಾವಿಗೆ ಮಾತ್ರ ಆ ಬೆಳಗಿನೊಳಗಿನ ಮಹಾಬೆಳಗಾದ ಗುರುಲಿಂಗದೊಳಗಿನ ಮಹಾಲಿಂಗವನರಿದು ಬೆರೆದು ನಿಜದರಿವಿನಲ್ಲಿ ನಿಬ್ಬೆರಗಾಗಲು ಸಾಧ್ಯ. ಆ ಮಹಾಜ್ಞಾನಿಯೇ ಚಿಚ್ಚಕೋರ. ಉಳಿದ ಕಾಕೋಳಿಗಳಿಗೆ ಕಷ್ಟಕರ.

ಈ ವಿವರಣೆಯಿಂದ ಗುರುಲಿಂಗವು ಏಕದೇಶನಿಷ್ಠಮಾತ್ರವಲ್ಲ. ಪ್ರತ್ಯಂಗ ಪ್ರಸರಣಶೀಲವುಳ್ಳದ್ದು. ಪಡಿಪ್ರಸಾದ ಪರಿಣಾಮಕಾರಿಯಾದುದು. ನಿರ್ದಿಷ್ಟ ಕರಣಕಾಲ-ಪದಾರ್ಥಾವಚ್ಛಿನ್ನತೆಯುಳ್ಳದು ಮಾತ್ರವಲ್ಲವೆಂಬುದು ಸ್ಪಷ್ಟವಾಗುತ್ತದೆ. ಗುರುಲಿಂಗಕ್ಕೆ ರಸಪ್ರಜ್ಞೆಯೊಂದಲ್ಲ ಉಳಿದ ರೂಪಾದಿಗಳ ಪ್ರಜ್ಞೆಯೂ ಇರುತ್ತದೆಂದು ಸರ್ವಘಟಕವಾಗಿರುತ್ತದೆಂದು ಸಿದ್ಧವಾಗುತ್ತದೆ.

## ೧. ಮಾಹೇಶ್ವರನ ಆಚಾರಲಿಂಗಸ್ಥಳ :

ಇನ್ನು ಚನ್ನಬಸವಣ್ಣನವರು ನಿರೂಪಿಸಿದ ಬಗೆಯಲ್ಲಿ ಮಾಹೇಶ್ವರಾಂಗ ನಿಷ್ಠ ಗುರುಲಿಂಗದ ಆರು ಲಿಂಗಸ್ಥಳಗಳನ್ನು ಅವರವೇ ಆದ ವಚನಗಳ ಆಧಾರ ದಲ್ಲಿ ವಿವರಿಸೋಣವಾಗುತ್ತದೆ.

ಚನ್ನಬಸವಣ್ಣನವರು ತಮ್ಮ ವಚನದ ಮಾಹೇಶ್ವರಸ್ಥಲದಲ್ಲಿ ಮೊದಲು ತಾಮಸನಿರಸನಸ್ಥಲ ಮತ್ತು ಸ್ಥಲನಿರ್ದೇಶಗಳನ್ನು ನಿರೂಪಿಸಿ ಬಳಿಕ ಮಾಹೇಶ್ವರನ ಆಚಾರಲಿಂಗಸ್ಥಲವನ್ನು ಆರಂಭಿಸುತ್ತಾರೆ. ಇದರಿಂದ ಮಾಹೇಶ್ವರಾಂಗನು ಮುಮ್ಮೊದಲು ತಾಮಸನಿರಸನ ಮಾಡದೆ ಮುಂದುವರಿಯುವಂತಿಲ್ಲೆಂಬುದು ತಿಳಿದುಬರುತ್ತದೆ. ಮುಂದುವರಿದರೆ ಗುರುಲಿಂಗಸ್ಥಲದ ನಿರ್ದೇಶವಾಗದು.

ತಾಮಸಗುಣವನ್ನು ತೊಲಗಿಸಬೇಕಾದರೆ ಮೊದಲು ಮಾಹೇಶ್ವರಾಂಗನು ಗೆಲವು ಸೋಲುಗಳ ಸೆಳೆತಕ್ಕೆ ಸಿಕ್ಕಬಾರದು. ಸಿಕ್ಕರೆ ಮದ ಮಾತ್ಸರ್ಯಗಳಿಗೆ ಒಳಗಾಗಬೇಕಾಗುತ್ತದೆ. ಗೆಲುವಾದರೆ ಮದಕ್ಕೆ ಒಳಗು; ಸೋಲಾದರೆ ಮತ್ಸರಕ್ಕೆ ಇಂಬು. ಸರಿಲಿಂಗವಂತರಲ್ಲಿ ಇವುಗಳಿಗೆಂಬಿರಬಾರದು. ಶಿವಭಕ್ತರನ್ನು ಶಿವನೆಂದು ಕಾಣುವ ಶಿವದೃಷ್ಟಿ ಸಮಭಾವ ಬೆಳೆದುಬರಬೇಕು. ಇಲ್ಲವಾದರೆ ಅಘೋರ ನರಕ ಅಂಗೈನೆಲ್ಲಿಯ ಕಾಯಿ.

ಮದ ದ್ವಿವಿಧ: ಬಹಿರಂಗಮದ, ಅಂತರಂಗಮದ ಎಂದು. ಕುಲ, ಛಲ, ಧನ, ರೂಪ, ಯೌವನ, ವಿದ್ಯಾ, ರಾಜ್ಯ, ತಪಸ್ಸುಗಳು ಬಹಿರಂಗದ ಎಂಟು ಮದಗಳು. ಸಂಸ್ಥಿತ, ತೃಣೀಕೃತ, ವರ್ತಿನಿ, ಕ್ರೋಧಿನಿ, ಮೋಹಿನಿ, ಅತಿಚಾರಿಣಿ, ಗಂಧಚಾರಿಣಿ, ವಾಸಿನಿ ಇವು ಅಂತರಂಗದ ಎಂಟುಮದಗಳು, ಇವಲ್ಲದೆ - ಧರಣಿ, ಸಲಿಲ, ಪಾವಕ, ಪವನ, ಅಂಬರ, ರವಿ, ಶಶಿ,ಆತ್ಮ-ಇವು ಅಷ್ಟ ಮೂರ್ತಿಮದಗಳು. ಇವೆಲ್ಲವೂ ತಮಸ್ಸಿಗ ಎಳೆಯುತಕ್ಕವು.

ಪಾರ್ಥಿವ ಮದದಲ್ಲಿ ತನುಗುಣವುಂಟಾಗಿ ವಸ್ತ್ರಾಭರಣ ಅನುಲೇಪನಾದಿಗಳ ಬಯಕೆಯುಂಟಾಗುವುದು. ಸಲಿಲಮದದಲ್ಲಿ ಸಂಸಾರಮೋಹವುಂಟಾಗಿ ಎನಗೆ ಬೇಕು, ಮನೆಗೆ ಬೇಕು, ಮಕ್ಕಳಿಗೆ ಬೇಕೆನಿಸುತ್ತದೆ. ಪಾವಕಮದವುಂಟಾದಲ್ಲಿ ಕಾಮ್ಯಕರಸವೊದಗಿ ಕರೆಯಿಸಬೇಕು, ನೋಡಬೇಕು, ನುಡಿಸಬೇಕು, ಆಲಂಗಿಸ

ಬೇಕೆನಿಸುತ್ತದೆ, ಪವನಮದದಲ್ಲಿ ಪ್ರಯಾಣಬುದ್ಧಿಯುಂಟಾಗಿ ಹೋದಿಹೊ, ಬಂದಿಹೆ, ಕೊಟ್ಟಿಹೆ, ಕೊಂಡಿಹೆನೆಂದೆನಿಸುತ್ತದೆ. ಅಂಬರ ಮದದಲ್ಲಿ ವಾಹನ ದಾಶೆಯಾಗಿ ಆನೆ, ಕುದುರೆ, ಅಂದಳ, ಸೇನೆ, ತಳತಂತ್ರ, ಛತ್ರಚಾಮರಾದಿಗಳ ಬಯಕೆಯಾಗುತ್ತದೆ. ರವಿಮದದಲ್ಲಿ ಕೋಪಾಗ್ನಿಯುಂಟಾಗಿ ಸಾಧಿಸುವೆ ಭೇದಿಸುವೆ, ಕೊಲ್ಲುವೆ ತಿನ್ನುವೆ ಎಂಬ ಬುದ್ಧಿಯುಂಟಾಗುತ್ತದೆ. ಶಶಿಮದವುಂಟಾಗಲು ಚಿಂತಾತುರನಾಗಿ ಆದೀತೋ ಆಗದೋ, ಇದ್ದಿತೋಇಲ್ಲವೊ; ಏನೋ ಎಂತೋ? ಎಂಬ ಯೋಚನೆಯುಂಟಾಗುತ್ತದೆ. ಆತ್ಮಮದವುಂಟಾಗಲು ಅಹಂಕಾರಭರಿತನಾಗಿ ಎನ್ನಿಂದಬಲ್ಲವರಿಲ್ಲ, ಎನಗಿನ್ನಾರು ಇದಿರಿಲ್ಲವೆಂಬ ಭಾವವುಂಟಾಗುತ್ತದೆ.

ಮದ ತಾಮಸದ ತಳಹದಿ. ಈ ತಳಹದಿಯನ್ನು ತಳ್ಳದೆ ತಾಮಸವೆಂಬ ಮೇಲಿನ ಮಂದಿರ ತೊಲಗದು. ಮದ ಒಂದಲ್ಲ. ಹಲವು. ಅವು ಎಷ್ಟಿದ್ದರೂ ಬಿಟ್ಟುಬಿಡಬೇಕು.

ಮದ ತ್ರಿವಿಧ, ಆದಿಭೌತಿಕ, ಆಧ್ಯಾತ್ಮಿಕ, ಆದಿದೈವಿಕ ಎಂಬಿವು. ಸಂಪತ್ತು ಸಂಸಾರಗಳ ಮದ ಆದಿಭೌತಿಕ, ತನುಗುಣಾದಿಗಳ ಮದ ಆಧ್ಯಾತ್ಮಿಕ. ದೈವಿಕ ಮದ ಆದಿದೈವಿಕ. "ಅರ್ಥಮದ, ಅಹಂಕಾರಮದ, ಕುಲಮದ ಬಿಡದನ್ನಕ್ಕರ ಸಮಯಾಚಾರ ಸಮಯಭಕ್ತಿ ಇನ್ನಾರಿಗೂ ಅಳವಡದು ನೋಡಾ! ಮಾತಿನ ಮಾಲೆಯ ಮಲಿನದ ಮಾರಿಯ ಮಿಂಚಿನಷ್ಠಾಳಕರಿಗೆ ಸಮಯಾಚಾರ ಇನ್ನೆಲ್ಲಿಯದೊ ಕೂಡಲ ಚೆನ್ನಸಂಗಮದೇವಾ!"

"ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಕ್ಕಾರಬೇಡ
ಕಾಲಜ್ಞಾನವಾಯಿತೆಂದು ಕರ್ಮವ ಹಳಿಯಬೇಡ
ಶಿವಜ್ಞಾನದೀಪ್ತಿ ತೋರಿತ್ತೆಂದು ಶಿವಶರಣರೊಡನೆ ಧಿಕ್ಕಾರಬೇಡ
ಈ ತ್ರಿವಿಧೋತ್ಪಾತ ಸಲ್ಲದು ಕೂಡಲ ಚನ್ನಸಂಗಮದೇವ ಸಾಕ್ಷಿಯಾಗಿ
ಇವರೆಲ್ಲರು ಸಜ್ಜನಶುದ್ಧ ಶಿವಾಚಾರಕ್ಕೆ ಸಲ್ಲರು."

ಈ ವಚನಗಳಲ್ಲಿ ತ್ರಿವಿಧಮದಗಳು ಸೂಕ್ಷ್ಮವಾಗಿ ವರ್ಣಿತವಾಗಿವೆ. ಆದ್ದರಿಂದ ತಮಸ್ಸನ್ನು ತೊಲಗಿಸಬೇಕಾದರೆ ತ್ರಿವಿಧಮದಗಳನ್ನು ಮೊದಲು ತೊಲಗಿಸಬೇಕು. ಮತ್ತು ಭಕ್ತಿಯಲ್ಲಿ ಸತ್ಯ, ಪೂಜೆಯಲ್ಲಿ ನಿಷ್ಠೆ, ಪ್ರಸಾದದಲ್ಲಿ ಭಾವ

ನೆಲೆಗೊಳಿಸಬೇಕು. ಆತ್ಮಶುದ್ಧಿಯನ್ನು ಬಯಸಿದಲ್ಲಿ ಲೋಕದ ಹಂಗನ್ನು ಹರಿಯ ಬೇಕು. ಪೂರ್ವಾಶ್ರಯದಲ್ಲಿ ಬೆರೆದರೆ ಆಚಾರದ್ರೋಹ, ಗುರುದ್ರೋಹ, ಗುರುಭಕ್ತಿ, ಗುರುಭಜನೆ ಪಾವನತೆಯ ಮೂಲ. ಕೀರ್ತಿಗಾಗಿ ತತ್ತ್ವಕೀರ್ತನ ಮಾಡಲಾರದು. ಅರಿವು ಆಚಾರಗಳು ನಡೆನುಡಿಗಳಲ್ಲಿ ನಿರ್ಣಯವಾಗಿರಬೇಕು. ಪೂರಾಯವಾಗಿರಬೇಕು. ಶಿವಜ್ಞಾನಿಯಾಗದೆ ಲಿಂಗ ಸಹಭೋಜನಕ್ಕೆ ಒಗ್ಗನು. ಜನನ–ಮರಣ, ಶಾಗು–ನಿರೋಧಗಳೇ ಸಂಸಾರ. ಇವನ್ನು ಕಳೆದು ಲಿಂಗ ಪ್ರಸಾದವನ್ನು ಸ್ವೀಕರಿಸಬೇಕು. ಧರ್ಮಕರ್ಮಗಳನ್ನು ಅರಿಯಬೇಕು. ಈ ಎಲ್ಲ ಅರಿವು ಆಚಾರಗಳಿಲ್ಲದೆ ಗುರುಲಿಂಗಾರಾಧನೆ ಸಲ್ಲದು. ಮಾಹೇಶ್ವರತ್ವ ಮೈಗೂಡದು. ಹಕ್ಕಿ ಬಾನೊಳಗೆ ಹಾರಾಡಿದರೇನು ಭಾನುವಿನ ನಿಲುವನ್ನು ಅರಿಯದು. ಅದರಂತೆ ತಮೋಗುಣವನ್ನು ತ್ಯಜಿಸದೆ ಮಾಹೇಶ್ವರತ್ವಕ್ಕೆ ಬಂದು ನಿಲುಕಲು ಆಗುವುದಿಲ್ಲ. ಗುರುಲಿಂಗವನ್ನು ನಿರ್ದೇಶಿಸಲಾಗುವುದಿಲ್ಲ. ಲಿಂಗ ನಿಷ್ಠೆಯಿಲ್ಲದೆ ಅರೆ ಭಕ್ತರಾದರೆ ಸುಖವಿಲ್ಲ. ಭಕ್ತಿ ಅಳವಟ್ಟು ಭಕ್ತನಾಗುವುದು ಸರ್ವರ ಸೊತ್ತಲ್ಲ. "ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಯದೊ ? ಮೇಘ ನಿರ್ಮಲ ಜಲವೆಲ್ಲ ಮುತ್ತಾದಡೆ, ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೊ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ

ಮುಂದೆ ಭವದ ಬಳ್ಳಿ ಬೆಳೆಯಲಿನ್ನೆಲ್ಲಿಯದೊ ?
ಸಾಕ್ಷಿ : 'ಗುರುಭಕ್ತಿಂ ಪರಿತ್ಯಜ್ಯ ಸದ್ಯೋಽಪಿ ನರಕಂ ವ್ರಜೇತ್',
ಇಂತೆಂದುದಾಗಿ ಕೂಡಲ ಚನ್ನಸಂಗಯ್ಯ,
ಲಕ್ಷಕೊಬ್ಬ ಭಕ್ತ, ಕೋಟಿಗೊಬ್ಬ ಶರಣ."

ಭಕ್ತನಾಗುವುದೇ ಇಷ್ಟು ಬಿಗಿಯಾಗಿರುವಾಗ ಇನ್ನು ಮಾಹೇಶ್ವರನೆನಿಸಿ ಗುರುಲಿಂಗಾರಾಧನೆ ಸನ್ನದ್ಧವಾಗುವುದು ಇನ್ನೂ ಕಷ್ಟಕರವಾಗಿರುತ್ತದೆ. "ಮಾಹೇಶ್ವರನೆನಿಸಿಕೊಂಬುದು ಸಾಮಾನ್ಯವೇ ಅಯ್ಯಾ ?' ಎಂದು ಕೇಳುತ್ತಾನೆ ಚನ್ನಬಸವಣ್ಣ. ಕಷ್ಟವೆಂದು ಕೈ ಬಿಡುವಂತಿಲ್ಲ, ಭಕ್ತಸ್ಥಲ ಅಳವಟ್ಟರೆ ಮಾಹೇಶ್ವರಸ್ಥಲ ತಾನೇ ಅಳವಡುತ್ತದೆ. ಆಚಾರಲಿಂಗ ಸಾಕ್ಷಾತ್ಕಾರವಾದರೆ ಗುರುಲಿಂಗಸ್ಥಲದ ನಿರ್ದೇಶ ನಿರಾಯಾಸವಾಗಿ ಆಗುತ್ತದೆ. "......ಗುರುಮಾರ್ಗವೆ ತನಗೆ

ಸಮ್ಮತವಾಗಿ, ತನ್ನ ಮಾರ್ಗವೇ ಗುರು ವಿನಲ್ಲಿ ಸಮ್ಮತವಾಗಿ ಇರಬಲ್ಲಡೆ ಆತ ಮಾಹೇಶ್ವರ.' ಎಂದು ಚೆನ್ನಬಸವಣ್ಣನ ತೀರ್ಮಾನ. ಅಂಥವನಿಗೆ ಗುರು ಕರುಣೆಯಿಂದ ತಾಮಸ ನಿರಸನವಾಗಿ ಗುರುಲಿಂಗ ಸ್ಥಲದ ನಿರ್ದೇಶವಾಗುತ್ತದೆ. ಆಗ ಮಾಹೇಶ್ವರನಿಗೆ ಮಾಹೇಶ್ವರಾಚಾರ ಲಿಂಗಸ್ಥಲದ ಉಪಾಸನೆ ಉಪಸ್ಥಿತ ವಾಗುತ್ತದೆ.

ಭಕ್ತನದು ಕ್ರಿಯಾಚಾರ ಲಿಂಗಸ್ಥಲಾರಾಧನೆ. ಮಾಹೇಶ್ವರನದು ಜ್ಞಾನಾ ಚಾರ ಲಿಂಗಾರಾಧನೆ. ಅಲ್ಲಿ ಕ್ರಿಯೆ ಮುಖ್ಯ ; ಇಲ್ಲಿ ಜ್ಞಾನ ಮುಖ್ಯ. ಅಲ್ಲಿ ಶ್ರದ್ಧೆ ಆಧಾರ. ಇಲ್ಲಿ ನಿಷ್ಠೆ ಆಧಾರ. ಮಾಹೇಶ್ವರನಿಗೂ ಶಿವಾಚಾರದಲ್ಲಿ ನಿಷ್ಠೆ ನೆಲೆಗೊಳ್ಳಬೇಕು. ಶಿವಪ್ರಸಾದಕ್ಕಲ್ಲದೆ ಭವಿಪಾಕಕ್ಕೆ ಬಾಯ್ಬಿಡಬಾರದು, ಶಿವ ಮಂತ್ರಸಂಸ್ಕಾರ ವಿಲ್ಲದ್ದು ಸಲ್ಲದು. ತನುಭವಿಮನುಭವಿಗಳ ಸಂಪರ್ಕ ಸಮ್ಮತವಲ್ಲ ಭಕ್ತ ಸಂತಾನವಾಗಿ ಭವಿಯನಾಚರಿಸಬಾರದು. ಭವಿಯನಾಚರಿಸಿದರೆ ಅದೇ ಪಂಚ ಮಹಾಪಾತಕ ; ಆತ ಗುರು ಕಾರುಣ್ಯಕ್ಕೆ ಹೊರಗು. ಆತನ ಲಿಂಗಸಂಗ ಭಂಗ. ಸಾಕ್ಷಾತ್ ಶಿವನೇ ಆಗಿರಲಿ, ಅವನ ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಅವನ ಸಂಗ ಸರಿಯಲ್ಲ ; ಅವನ ಮನೆಯಲ್ಲಿ ಆರೋಗಿಸುವುದು ಆಚಾರವಲ್ಲ. ಆಚಾರ ಸ್ಥಲ, ಗುರುಸ್ಥಲ, ಲಿಂಗಸ್ಥಲ ಜಂಗಮಸ್ಥಲ, ಪ್ರಸಾದಸ್ಥಲ, ಮಹಾಸ್ಥಲಗಳನು ಅರಿದು ಆರಾಧಿಸುವುದೇ ಮಾಹೇಶ್ವರನ ಆಚಾರ ಲಿಂಗಸ್ಥಲ.

ಆಚಾರವಿಲ್ಲದ ವಿಚಾರ ಕಪ್ಪು. ವಿಚಾರವಿಲ್ಲದ ಆಚಾರ ಕಪ್ಪು. ಇವೆರಡು ಕಪ್ಪನ್ನು ಕಳೆವುದೇ ಮಾಹೇಶ್ವರನ ಆಚಾರ. ಪತಿಯಂತೆ ಸತಿ ಸತಿಯಂತೆ ಪತಿ ಆಚಾರ ನಿರತರಾಗಬೇಕು. ಮನೆ ಮಕ್ಕಳೂ ಆಚಾರ ಶೀಲರಾಗಬೇಕು. ಹೊರ ಭವಿಗಳನ್ನು ಬಿಟ್ಟಂತೆ ಒಳಭವಿಗಳಾದ ಕಾಮಾದಿಗಳನ್ನೂ ಬಿಡಬೇಕು.ಪುರಾತನರು ನುಡಿದಂತೆ ನಡೆಯಬೇಕು ; ಅವರ ನುಡಿಯೇ ಆಗಮ ವಿಧಿ.

ಉದಾಶೀನ ಮಾಡುವುದು, ಸಮಯೋಚಿತವನರಿಯದಿರುವುದು, ಮಾರುತ್ತರ ಕೊಡುವುದು, ಸತ್ಪಾತ್ರಕ್ಕೆ ಸಲ್ಲದಿರುವುದು, ಮಾಡಿದೆನೆಂದು ಮನದಲ್ಲಿ ಗರ್ವಿಸು ವುದು ಅಥವಾ ಮಾಡಿ ಮರಗುವುದು ಆಚಾರಕ್ಕೆ ಬಾಹಿರ. ಆತ್ಮಲಿಂಗವಿರಲು ಅನ್ಯದೈವಕ್ಕೆ ಸ್ಥಾವರ ಲಿಂಗಕ್ಕೆ ಎರಗುವುದು ಆಚಾರವಲ್ಲ. ವಾರ ನೋಡಿ ಅರ್ಚನೆಯ ಮಾಡಬಾರದು. ಲಿಂಗ ಶ್ರೇಷ್ಠವಲ್ಲದೆ ದಿನ ಶ್ರೇಷ್ಠವಲ್ಲ, ಸದಾ ಚಾರ ಸದಾಕಾಲ ಇದ್ದಾಗಬೇಕು. ಸರ್ವರಿಗೂ ಇರಬೇಕು.

"ವೇದ ವೇದಾಂತವನೋದಿ ಜ್ಞಾನಸೂರೆಯ ಮಾಡುವ ಜಂಗಮ
ಕ್ರಿಯಾಹೀನನಾದಡೆ ಆಗಮ ಸಮರಸ ಆತನಲ್ಲ.
ಅದೇನು ಕಾರಣವೆಂದಡೆ, ನುಡಿದಂತೆ ನಡೆಯನು.
ಅಲ್ಲಿ ಕೂಡಲ ಚನ್ನಸಂಗಮದೇವ ನಿಲ್ಲಲಾರನು."

ಆಚಾರವಿಲ್ಲದಿದ್ದರೆ ಆಚಾರಲಿಂಗ ಅಳವಡದು. ಆದ್ದರಿಂದ ಮಾಹೇಶ್ವರನಿಗೂ ಆಚಾರಬೇಕು. ಆಚಾರಲಿಂಗಸ್ಥಳ ಅಂಗವಿಸಿರಬೇಕು.

ಘ್ರಾಣಗತ ಆಚಾರಲಿಂಗವು ಸಾಧಾರಣ ಗಂಧಗ್ರಾಹಿ; ಸುಗಂಧಪ್ರಸಾದಕಾರಿ. ಮಾಹೇಶ್ವರನ ಗುರುಲಿಂಗದೊಳಗಿನ ಆಚಾರಲಿಂಗವು ಅಸಾಧಾರಣ ಗಂಧಗ್ರಾಹಿ. ಅಸಾಧಾರಣ ಸುಗಂಧಪ್ರಸಾದಕಾರಿ. ಈ ಗುರುಲಿಂಗದೊಳಗಿನ ಆಚಾರಲಿಂಗವು ರಸದೊಳಗಿನ ಸೂಕ್ಷ್ಮಗಂಧವನ್ನು ಮಾತ್ರ ಗ್ರಹಿಸಬಲ್ಲುದು; ಪ್ರಸಾದವಾಗಿಸಬಲ್ಲುದು.

## ೨. ಮಾಹೇಶ್ವರನ ಗುರುಲಿಂಗಸ್ಥಳ

ಗುರು ಬೇರಲ್ಲ, ಗುರುಲಿಂಗ ಬೇರಲ್ಲ, ಗುರುಲಿಂಗಸ್ಥಳ ಅಳವಡದೆ ಪರಶಿವಸ್ಥಳ ಅಳವಡದು. ಗುರುಲಿಂಗಸ್ಥಳ ಅಳವಡಬೇಕಾದರೆ ಗುರುದೇವನಕರುಣೆ ಇರಬೇಕು. ಈ ಗುರುದೇವತ್ವ ಕಂಡವರಿಗೆಲ್ಲ ಬರುವುದಿಲ್ಲ.

"ಮಹಾಘನ ಶ್ರೀಗುರುಲಿಂಗವೆ ಗುರುವಲ್ಲದೆ,
ಪಿತನೊಂದು ಗುರುವೆ ? ಮಾತೆಯೊಂದು ಗುರುವೆ ?
ಭ್ರಾತನೊಂದು ಗುರುವೆ ? ಸತಿಯೊಂದು ಗುರುವೆ ?
ಸುತನೊಂದು ಗುರುವೆ ? ಗುರುವೆಂದೇನೋ ಒಮ್ಮರೆ ಗುರುವೆ ?
ಆ ಮಹಾಘನ ಗುರುಲಿಂಗಕ್ಕೆ ಇವೆಲ್ಲವ ಸರಿಗಂಡಡೆ
ಅಘೋರ ನಾಯಕನರಕ ತಪ್ಪದು ಕೂಡಲ ಚನ್ನಸಂಗಮದೇವಾ."

ರಕ್ತಸಂಬಂಧಿ ಗುರುವಲ್ಲ, ಶೈವಸಂಬಂಧಿ ಗುರುವಲ್ಲ, ವೀರಶೈವಾಚಾರ ವಿಚಾರವುಳ್ಳವನೇ ಶ್ರೀಗುರು. ಈ ಶಿವಾತ್ಮ ವಿದ್ಯಾಗುರುವಿಗೂ ಶಿವನಿಗೂ ಭಿನ್ನ

ವಿಲ್ಲ. ಇದರಿಂದಾಗಿ ಈ ಗುರುದೇವನಿಗೆ ಸರಿಯಾರಿಲ್ಲ. ಈತ ಮಹಾಘನ ಸ್ವರೂಪ. ಅಘಟನ ಘಟನಾಸಮರ್ಥ. ನಿಷ್ಕಲವನ್ನು ಸಕಲಗೊಳಿಸಬಲ್ಲ ಸಂಸಿದ್ಧ. ಇಂತಹ ಗುರುವಿನ ಪ್ರಸಾದ ಪಡೆದು ಗುರುಲಿಂಗವನ್ನು ಜಿಹ್ವಾಂಗದಲ್ಲಿ ಶಿಷ್ಯನು ಸಂಸ್ಥಾಪಿಸಿಕೊಳ್ಳಬೇಕಲ್ಲದೆ ಶೈವಗುರುವಿನಿಂದ ಪಡೆಯಬಾರದು.

"ಮುಂಡೆಯ ಕೈಯ ಬಾಗಿನವ ಕೊಂಡಡೇನಯ್ಯ ?
ಗಂಡನುಳ್ಳ ಗರತಿಯರು ಮೆಚ್ಚರು !
ಶೈವಗುರುವಿನ ಕೈಯಲಿಂಗ ಸಾಹಿತ್ಯವಾದಡೇನಯ್ಯ ?
ವೀರಶೈವ ಶರಣರು ಮೆಚ್ಚರು !
ಇದು ಕಾರಣ ಕೂಡಲ ಚನ್ನ ಸಂಗಮದೇವಯ್ಯ,

ಶೈವಗುರುವಿನ ಕೈಯ್ಯಲ್ಲಿ ಸಾಹಿತ್ಯವಪ್ಪುದರಿಂದ ಸಾವುದೇ ಲೇಸಯ್ಯ !"

ಅನ್ಯವನಾಚರಿರುವುದೊಂದು ಭ್ರಾಂತಿ. ಏಕೆಂದರೆ ವೀರಶೈವಕ್ಕೊಂದು ಕ್ರಮವುಂಟು. ಲಿಂಗವನ್ನಾಗಿಸುವ ವಿಶಿಷ್ಟ ಪದ್ಧತಿಯುಂಟು. ಇದು ಬರೀ ಅರಿವಿನಿಂದ ಬರುವುದಲ್ಲ. ಆಚಾರಕ್ರಮದಲ್ಲಿ ಬರುವುದು. ಅನುಭವದ ಅಳವಿನಲ್ಲಿ ಅಳವಡುವುದು. ಆಚಾರ ಅನುಭಗಳಿಲ್ಲದ ಶೈವಗುರುವಿನಲ್ಲಿ ಮಾಹೇಶ್ವರನ ಗುರುಲಿಂಗವನ್ನಾಗಿಸುವ ಶಕ್ತಿಯಿರದು. ಅಂಗದಿಚ್ಛೆಯಿರುವಲ್ಲಿ ಲಿಂಗಕಳೆಯಿರದು. ಲಿಂಗಕಳೆಯಿಲ್ಲದಲ್ಲಿ ಲಿಂಗಪ್ರಕಾಶವಾಗದು. ಆದ್ದರಿಂದ ಬರೀ ಲಿಂಗಲಾಂಛನದಿಂದ ಫಲವಿಲ್ಲ. ಲಿಂಗನಿಷ್ಠತೆ ಇರಬೇಕು. ಲಿಂಗಾನುಭಾವಿಯಾಗಿರಬೇಕು. ಲಿಂಗಭೋಗೋಪಭೋಗಿಯಾಗಿರಬೇಕು. ಇಲ್ಲವಾದರೆ ಸಾಧ್ಯವಿಲ್ಲ. ಕೇವಲ ದ್ವೈತಿಗಾಗಲಿ, ಕೇವಲಾದ್ವೈತಿಗಾಗಲಿ ಗುರುಲಿಂಗ ಸಾಹಿತ್ಯದ ಅರಿವಿರದು.

"ಅದ್ವೈತಿಗಳು ಲಿಂಗಾರಾಧನೆ ಹುಸಿಯೆಂದು ಬುದ್ಧಿಗೆಟ್ಟರು,
ಆಗಮುವನರಿಯದೆ ಬೊಮ್ಮನ ನೆರೆದಡೆ
ಬ್ರಹ್ಮನ ಶಿರವಕೊಂಡುದನ್ನರಿಯಿರೋ !
ಬೊಮ್ಮವಾದಿಗಳೆಲ್ಲ ಲಿಂಗಕ್ಕೆ ದೂರವಾದರು,
ನಮ್ಮ ಕೂಡಲಚನ್ನಸಂಗನ ಶರಣರು ಜಗದ್ವಂಧ್ಯರಾದರು."

ಕೇವಲ ಜ್ಞಾನದಿಂದ ಲಿಂಗಾನುಭವವಾಗುವುದಿಲ್ಲ. ಇದರಿಂದಾಗಿ ಕೇವಲ ಜ್ಞಾನಿ ಲಿಂಗಸಾಹಿತ್ಯಕ್ಕೆ ದೂರವಾಗುವನು.

"ಗುರು ಸತ್ತಡೆ ಸಮಾಧಿಯ ಹೋಗಲೊಲ್ಲರಯ್ಯ;
ಲಿಂಗಬಿದ್ದರೆ ಸಮಾಧಿಯ ಹೊಕ್ಕಹೆವೆಂಬವರಯ್ಯ.
ಗುರುವಿಂದ ಲಿಂಗವಾಯಿತ್ತೆ, ಲಿಂಗದಿಂದ ಗುರುವಾದನೊ ?
ಅದೆಂತೆಂದಡೆ: ಪೃಥ್ವಿಯಲ್ಲಿ ಹುಟ್ಟಿತ್ತು ಕಲ್ಲುಕುಟಿಗನಿಂದ ರೂಪಾಯಿತ್ತು;
ಗುರುವಿನ ಹಸ್ತದಿಂದ ಲಿಂಗವಾಯಿತ್ತು.
ಇಂತೀ ಮೂವರಿಗೆ ಹುಟ್ಟಿದ ಲಿಂಗವ ಕಟ್ಟಿ ಜಗವೆಲ್ಲ ಬಂಡಾಯಿತ್ತು
ನೋಡಿರೋ!...."

ಈ ವಚನದಲ್ಲಿ ಗುರುಲಿಂಗದೇವನ ವೈಶಿಷ್ಟ್ಯ ವ್ಯಕ್ತವಾಗಿದೆ. ಅಂತೆಯೆ ಸಾಮಾಜಿಕ ಮೂಢಸಂಪ್ರದಾಯದ ಮೇಲೆ ನವ ಕ್ಷ-ಕಿರಣಪ್ರಯೋಗವಿದೆ. ಲಿಂಗ ಗುರುಗಳಲ್ಲಿರುವ ತರತಮಭಾವವನ್ನರಿಯದೆ ಗುರುಮಹಿಮೆಯನ್ನು ಲಕ್ಷಿಸದೆ ಗುರುವಿನಲ್ಲಿ ಪರಮ ಭಕ್ತಿಯಿಲ್ಲದೆ ಪ್ರಾಣವಿಲ್ಲದೆ ಬರೀ ಲಿಂಗ ಪ್ರೇಮ ಲಿಂಗ ಪ್ರಾಣಗಳಿಂದ ಪ್ರಯೋಜನವಿಲ್ಲ ; ಬರೀ ಲಿಂಗಧಾರಣ ದಿಂದಲೂ ಫಲವಿಲ್ಲ, ಗುರುವಿಲ್ಲದ ಲಿಂಗಜಡ. ಆದರಲ್ಲಿಲ್ಲ ಯಾವಗೂಢ, ಲಿಂಗಕ್ಕಿಂತ ಮೊದಲು ಗುರುವಿನಲ್ಲಿರಬೇಕು ಮನದ ದೃಢ. ಲಿಂಗಹೋದರೆ ಅದನ್ನು ಮರಳಿ ಕೊಡಬಲ್ಲ ಗುರು. ಗುರುಹೋದರೆ ಆಗುರುವನ್ನು ತಂದು ಕೊಡದು ಲಿಂಗ. ಗುರುಲಿಂಗಕ್ಕೆ ಅಧಿಷ್ಠಾನ, ಆಧಾರ. ಲಿಂಗ ಅಧ್ಯಸ್ತ, ಆಧೇಯ. ಅಧಿಷ್ಠಾನ ಅಧ್ಯಸ್ತಗಳಿಗೆ ಭೇದವಿಲ್ಲದಿದ್ದರೂ ಉಪಾಸನೆಗಾಗಿ ಭೇದ ವುಂಟಾಗಿದೆ. ಇಲ್ಲವಾದರೆ ಮಾಹೇಶ್ವರಸ್ಥಲಾಂಗನ ಉಪಾಸನೆ ಘಟಿಸದು.

"ಏಕಮೂರ್ತಿ ಸ್ತ್ರಯೋಭಾಗಾ ಗುರುರ್ಲಿಂಗಂತು ಜಂಗಮಃ"

ಎಂದುದಾಗಿ, ಪರತರ ಪರಂಜ್ಯೋತಿಯಪ್ಪ ಮಹಾಲಿಂಗವೇ ಲೋಕಾನುಗ್ರಹಕ್ಕಾಗಿ, ಅಗ್ಗವಣಿಯೇ ಆಣಿಕಲ್ಲಾದಂತೆ, ಕರಗಿದ ತುಪ್ಪವೇ ಹೆತ್ತುಪ್ಪವಾದಂತೆ,

ಗುರುಲಿಂಗಜಂಮವಾಗಿ ಪರಿಣಮಿಸಿರ್ಪುದು ಕಾಣಾ!
ಆ ಗುರುತತ್ತ್ವದಿರವನರಿದು ಗುರುವಾಗಿ ಗುರುಲಿಂಗವ
ಪೂಜಿಸಬೇಕು. ಲಿಂಗತತ್ತ್ವದಂಗವನರಿದು ಲಿಂಗವಾಗಿ ಶಿವಲಿಂಗವ
ಪೂಜಿಸಬೇಕು ಜಂಗಮತತ್ತ್ವದಿಂಗಿತವನರಿದು ಜಂಗಮವಾಗಿ
ಜಂಗಮವಪೂಜಿಸಬೇಕು. ಇಂತೀ ತ್ರಿವಿಧಲಿಂಗವ ಪೂಜಿಸಿ ತ್ರಿವಿಧ
ಪಾದೋಕವ ಪಡೆಯಬೇಕು."

ತೆರಹಿಲ್ಲದ ಆ ಪರವಸ್ತು ಪ್ರಪಂಚದ ಅನುಗ್ರಹಕ್ಕಾಗಿ ಮೂರು ಬಗೆಯಾಯಿತು. ಈ ಮೂರರ ಭೇದಾಭೇದಗಳನ್ನು ಶಿಷ್ಯನು ಭಕ್ತನು ಚೆನ್ನಾಗಿ ಅರಿತು ಆರಾಧಿಸಬೇಕು. ಮೊದಲಾದುದು ಗುರು–ಎಂಬುದನ್ನು ಗಮನಿಸದೆ ಹೋದರೆ ಮೂಲವೇ ಇಲ್ಲದಂತಾಗುತ್ತದೆ, ಕಾರಣ ಮಾಹೇಶ್ವರಾಂಗನು ಮನದೆಚ್ಚರಿಕೆಯಿಂದ ಮುಂದುವರಿಯಬೇಕು: ಗುರುಲಿಂಗದೇವನ ಪರಿಯನರಿಯಬೇಕು.

ಸ್ಥೂಲರಸವನ್ನು ಪ್ರಸಾದವನ್ನಾಗಿಸುತ್ತದೆ ಗುರುಲಿಂಗ. ರಸದೊಳಗಿನ ಸೂಕ್ಷ್ಮರಸವನ್ನು ಪ್ರಸಾದವನ್ನಾಗಿಸುತ್ತದೆ ಗುರುಲಿಂಗದೊಳಗಿನ ಗುರುಲಿಂಗ, ಜಿಹ್ವೆಯೊಳಗಿನ ಜಿಹ್ವೆಗೆ ಇದು ಆರಾಧ್ಯವಸ್ತುವಾಗಿ ಅದರ ಪೂರ್ವಾಶ್ರಯವನ್ನು ಪರಿಹರಿಸುತ್ತದೆ.

## ೩. ಮಾಹೇಶ್ವರನ ಶಿವಲಿಂಗಸ್ಥಳ

ಗುರುಲಿಂಗದೊಳಗಿನ ಸತ್ ಗುರುಲಿಂಗದೊಳಗಿನ ಆಚಾರ ಲಿಂಗವಾಗಿ, ಗುರುಲಿಂಗದೊಳಗಿನ ಚಿತ್ ಗುರುಲಿಂಗದೊಳಗಿನ ಗುರುಲಿಂಗವಾಗಿ ಇರುವಂತೆ ಗುರುಲಿಂಗದೊಳಗಿನ ಆನಂದ ಗುರುಲಿಂಗದೊಳಗಿನ ಶಿವಲಿಂಗಸ್ಥಳವಾಗಿ ಪರಿಣಮಿಸುತ್ತದೆ.

ಕಣ್ಣೊಳಗಿರುವ ಅಗ್ನಿಯ ಎಂಟನೆಯ ಒಂದಂಶವು ನಾಲಗೆಯಲ್ಲಿದ್ದು ಸೂಕ್ಷ್ಮನೇತ್ರಾಂಶವೂ ಇರುವಂತೆ ಶಿವಲಿಂಗದ ಎಂಟನೆಯ ಒಂದಂಶವು. ಗುರುಲಿಂಗದಲ್ಲಿರುತ್ತದೆ, ಅದುವೇ ಗುರು ಲಿಂಗದೊಳಗಿನ ಶಿವಲಿಂಗವು. ಇದು ರಸದೊಳಗಿನ ಸೂಕ್ಷ್ಮರೂಪವನ್ನು ಅರಿಯುತ್ತದೆ. ಇದರಿಂದಾಗಿ ಇದು ಅಸಾಧಾರಣಶಕ್ತಿಯುಳ್ಳದಾಗಿದೆ. ಮಾಹೇಶ್ವರಾಂಗನ ಸೂಕ್ಷ್ಮದೃಕ್ ಆಗಿರುತ್ತದೆ.

ಆದುದರಿಂದ ರಸದೊಳಗಿನ ಸೂಕ್ಷ್ಮವಾದ ರೂಪಾಂಶವನ್ನು ದರ್ಶಿಸುತ್ತದೆ. ಈರೂಪದ ಪೂರ್ವಾಶ್ರಯವನ್ನು .ಕಳೆದು ಪ್ರಸಾವಿವನ್ನಾಗಿಸುತ್ತದೆ. ಇದರಿಂದಾಗಿ ಗುರುಲಿಂಗದೊಳಗಿನ ಶಿವಲಿಂಗಕ್ಕೆ ಸಾರ್ಥಕತೆ ಬರುತ್ತದೆ; ಅಂತೆಯೇ ಮಾಹೇಶ್ವರಾಂಗನಿಗೂ, ಸಾರ್ಥಕತೆಯುಂಟಾಗುತ್ತದೆ. ರೂಪಪ್ರಸಾದಕ್ಕೆ ಸಮಗ್ರತೆಯುಂಟಾಗುತ್ತದೆ.

ನಾಲಗೆಯಲ್ಲಿರುವ ಲಾಲಾರಸ(ಉಗುಳು)ದಲ್ಲಿಯೂ ಒಂದು ಸೂಕ್ಷ್ಮವಾದ ರೂಪಾಂಶವಿದೆ. ಅದು ಸಲ್ಲಬೇಕಾದರೆ ಅಥವಾ ಪ್ರಸಾದವಾಗಬೇಕಾದರೆ ಗುರುಲಿಂಗದೊಳಗಿನ ಶಿವಲಿಂಗವಿದ್ದಾಗಬೇಕು.

"ಲಿಂಗವಿಲ್ಲದೆ ನಡೆವನ, ಲಿಂಗವಿಲ್ಲದೆ ನುಡಿವನ,
ಲಿಂಗವಿಲ್ಲದೆ ಸಂಗವ ಮಾಡುವನ ಅಂಗಸೂತಕ;
ಮುಟ್ಟಲಾಗದು, ಲಿಂಗವಿಲ್ಲದೆ ನುಡಿವ ಶಬ್ದಸೂತಕವ
ಕೇಳಲಾಗದು. ಲಿಂಗವಿಲ್ಲದೆ ಗಮಿಸಿದಡೆ,
ಆ ನಡೆ ನುಡಿಗೊಮ್ಮೆ ವ್ರತಗೇಡಿ,
ಶಿವಶಿವಾ! ಲಿಂಗವಿಲ್ಲದೆ ಉಗುಳನುಗಿದಡೆ
ಅಂದಂದಿಗೆ ಕಿಲ್ಬಿಷ ಕೂಡಲಚನ್ನಸಂಗಮದೇವಾ!"

ಲಾಲಾರಸದಲ್ಲಿರುವ ಷಡ್‌ವಿಷಯ (ಷಡ್ರಸ)ಗಳು ಲಿಂಗಮುಖವಾಗಿಯೆ ಉಪಭುಕ್ತವಾಗಬೇಕಾದರೆ ಗುರುಲಿಂಗದೊಳಗೆ ಆರುಲಿಂಗಗಳು ಇದ್ದಾಗಬೇಕು; ಇರುತ್ತವೆ. ಅಂತೆಯೇ ಶಿವಲಿಂಗವೂ ಇದೆ, ಆ ಲಾಲಾರಸದೊಳಗಿನ ಸೂಕ್ಷ್ಮ ರೂಪಾಂಶವನ್ನು ಗ್ರಹಿಸಿ ಪ್ರಸಾದವನ್ನಾಗಿಸುತ್ತದೆ.

"ಲಿಂಗವಿಲ್ಲದೆ ಎನ್ನ ಮನಕ್ಕೆ ಸಮನಿಸದು, ಸಮನಿಸದು !
ಜಂಗಮವಿಲ್ಲದೆ ಎನ್ನ ಮನಕ್ಕೆ ಸಮನಿಸದು, ಸಮನಿಸದು!
ಪ್ರಸಾದವಲ್ಲದೆ ಎನ್ನ ತನುವಿಗೆ ಸಮನಿಸದು ಸಮನಿಸದು!
ಕೂಡಲಚನ್ನ ಸಂಗಮದೇವಾ ಇದು ಸತ್ಯನೋಡಾ,
ಸಕಲೇಂದ್ರಿಯಂಗಳು ಅನ್ಯಸಂಗಕ್ಕೆ ಸಮನಿಸುವು ಸಮನಿಸುವು"

ಇದರಿಂದಾಗಿ ನಾಲಗೆಯೊಳಗಿನ ಸೂಕ್ಷ್ಮನೇತ್ರೇಂದ್ರಿಯವು ಗುರುಲಿಂಗ ದೊಳಗಿನ ಶಿವಲಿಂಗಕ್ಕೆ ಸಮನಿಸುವುದು.

### ೪. ಮಾಹೇಶ್ವರನ ಜಂಗಮಲಿಂಗಸ್ಥಳ

ಗುರುಲಿಂಗದೊಳಗಿನ ನಿತ್ಯತ್ವವೇ ಗುರುಲಿಂಗದೊಳಗಿನ ಜಂಗಮಲಿಂಗ. ತ್ವಕ್ ಸರ್ವಾಂಗವ್ಯಾಪಿ, ಅಂತೆಯೇ ನಾಲಗೆಯಲ್ಲಿ ತ್ವಕ್ಕಿದೆ. ವಾಯುವಿನ ಅಷ್ಟಾಂಶವು ಜಲದಲ್ಲಿ ಸಮ್ಮಿಶ್ರವಾಗಿರುತ್ತದೆ. ಆದ್ದರಿಂದ ರಸದಲ್ಲಿ ಸ್ಪರ್ಶದ ಅಷ್ಟಾಂಶವಿರುತ್ತದೆ. ಸಾಲದಕ್ಕೆ ಸರ್ವಾಂಗದಲ್ಲಿರುವಂತೆ ನಾಲಗೆಗೂ ಸ್ಪರ್ಶಗುಣ ವಿರುತ್ತದೆಯಾಗಿ ಆ ನಾಲಗೆಯ ಚೇತನಾಂಶವಾದ ಗುರುಲಿಂಗದಲ್ಲಿಯೂ ಜಂಗಮ ಲಿಂಗವಿದ್ದೇ ಇರುತ್ತದೆ. ಇದುವೆ ಮಾಹೇಶ್ವರನ ಜಂಗಮ ಲಿಂಗಸ್ಥಳ. ಇದು ರಸದಲ್ಲಿರುವ ಸೂಕ್ಷ್ಮವಾದ ಸ್ಪರ್ಶಾಂಶವನ್ನು ಸಂಸ್ಪರ್ಶಿಸಿ ಸಂಸ್ಪರ್ಶ ಪ್ರಸಾದವನ್ನಾಗಿಸುತ್ತದೆ.

ಜಂಗಮಲಿಂಗ ಸರ್ವವ್ಯಾಪಿ; ನಿರೂಪಿ, ಅದರ ಮಹಿಮೆ ಅಪಾರ, ಅದು ಎಲ್ಲವನ್ನೂ ಮಾಡಬಲ್ಲದು. ಅದು ಮುಟ್ಟಬಲ್ಲದು, ಮೂಸಬಲ್ಲದು, ಆರೋಗಿಸಬಲ್ಲದು, ಅವಲೋಕಿಸಬಲ್ಲದು; ಆಕರ್ಣಿಸಬಲ್ಲದು, ಅನುಭೋಗಿಸ ಬಲ್ಲದು. ಪ್ರಮಾಣಕ್ಕೊಳಗಾಗಿ ಅದು ಮಾಡದು. ಅಪ್ರಮಾಣವಾಗಿ ಮಾಡುವ ಅಗ್ಗಳಿಕೆ ಅದಕ್ಕಿದೆ:

"ಎಂಟುಲಕ್ಷದಮೇಲೆ ಐನೂರು ದೇವರಿಗೆ ಮಾಡಿದ ಬೋನವ<br>
ಒಬ್ಬ ಜಂಗಮ ಆರೋಗಣೆಯ ಮಾಡುವನಲ್ಲದೆ,<br>
ಹದಿನಾರುಲಕ್ಷದಮೇಲೆ ಐನೂರು ದೇವರುಕೂಡಿಕೊಂಡು<br>
ಒಬ್ಬ ಜಂಗಮಕ್ಕೆ ಮಾಡಿದ ಬೋನವ ಆರೋಗಣೆಯ<br>
ಮಾಡಲರಿಯರು, ಇಂತಪ್ಪ ದೇವರಿಂದ ಜಂಗಮವೆ ಘನ,<br>
ಕೃತಯುಗದಲ್ಲಿ ಸುವರ್ಣದ ಲಿಂಗವಾದಲ್ಲಿ ನಿನ್ನ ಹೆಸರೇನು?<br>
ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ ನಿನ್ನತಾಯಿತಂದೆಯಾರು?<br>
ದ್ವಾಪರಯುಗದಲ್ಲಿ ತಾಮ್ರಲಿಂಗವಾದಲ್ಲಿ<br>
ಹದಿನೆಂಟುಜಾತಿಯ ಕೈಯಲ್ಲಿ ಕಿಲುಬು ಹೋಯಿತ್ತು,

ಕಲಿಯುಗದಲ್ಲಿ ಕಲ್ಲದೇವರಾದಡೆ ಇಕ್ಕಿದ
ಓಗರವನುಣ್ಣದೇಕೋ ? ಹಿಂದೊಮ್ಮೆ ನಾಲ್ಕುಯುಗದಲ್ಲಿ
ಅಳಿದುಹೋದುದನರಿಯಾ? ಇನ್ನೇಕೆ ದೇವತನಕ್ಕೆ ಬೆರತೆ?

ಸಾಕ್ಷಿ: ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ ।
ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್॥
ಇದಂ ಕಾರಣ, ಕೂಡಲಚೆನ್ನಸಂಗಯ್ಯಾ,
ತಪ್ಪದೆ ನಾಲ್ಕುಯುಗದಲ್ಲಿ ಜಂಗಮವೇ ಪ್ರಾಣಲಿಂಗವಾದಕಾರಣ
ಸ್ಥಾವರವೇ ಜಂಗಮಪ್ರಸಾದಕ್ಕೆ ಯೋಗ್ಯವಾಯಿತ್ತು."

ಇದರಲ್ಲಿ ಜಂಗಮಾಧಿಕ್ಯ ಜಂಗಮತತ್ತ್ವ ಪುರಾತನತೆ ಸುಸ್ಪಷ್ಟವಾಗಿ ನಿರ್ದಿಷ್ಟವಾಗಿವೆ. ನಾಲ್ಕು ಯುಗಗಳ ಅರ್ಥಧ್ವನಿಯನ್ನು ಎಂಟು ಲಕ್ಷ ಹದಿನಾರುಲಕ್ಷದೇವರ ವಿಚಾರವನ್ನು ಪಿಂಡಾಂಡಕ್ಕೆ ಅನ್ವಯಿಸಿಕೊಂಡು ಅರ್ಥವಿಸಿದಾಗ ವ್ಯಷ್ಟಿಗತ ಜಂಗಮಲಿಂಗದ ಮಹತಿ ಮನದಟ್ಟಾಗುತ್ತದೆ. ಹೀಗೆ ಪಿಂಡಾಂಡಪರವಾಗಿ ಅರ್ಥವಿಸುವಂತೆ ಮಾಡುತ್ತದೆ. 'ನಾಲ್ಕುಯುಗದಲ್ಲಿ ಜಂಗಮವೇ ಪ್ರಾಣಲಿಂಗವಾದಕಾರಣ'ಎಂಬ ವಿಶಿಷ್ಟವಾಕ್ಯವು, ಬಾಹ್ಯಾಭ್ಯಂತರ ಎಲ್ಲಯುಗಧರ್ಮಗಳಲ್ಲಿರುವ ಲಿಂಗ-ಜಂಗಮವಿಚಾರವನ್ನು ವಿವರಿಸಿದ ಈವಚನ ಎಲ್ಲಬಗೆಯಿಂದಲೂ ಗಮನಾರ್ಹವಾಗಿದೆ. ಜತೆಗೆ ಸಾಮಾಜಿಕ ಪ್ರಾಚೀನತೆಯನ್ನು ಉದ್ಘೋಷಿಸುವ ಉತ್ತಮ ವಚನವಾಗಿದೆ.

'ಸ್ಥಾವರವೇ ಜಂಗಮ ಪ್ರಸಾದಕ್ಕೆ ಯೋಗ್ಯವಾಯಿತ್ತು.' ಇದು ತುಂಬಾ ಅರ್ಥಪೂರ್ಣವೂ ಔಚಿತ್ಯಪೂರ್ಣವೂ ಆದ ಮಾತು. ಬ್ರಹ್ಮಾಂಡ ಸ್ಥಾವರ ಜಂಗಮಾತ್ಮಕವಾಗಿರುವಂತೆ ಪಿಂಡಾಂಡವೂ ಆಗಿದೆ. ಈ ಪಿಂಡಾಂಡದಲ್ಲಿ ಕಾಯ ಒಂದು ಸ್ಥಾವರ, ಜೀವ ಒಂದು ಜಂಗಮ, ಒಂದು ಅಚರಲಿಂಗ, ಇನ್ನೊಂದು ಚರಲಿಂಗ. ಚರಲಿಂಗವಿಲ್ಲದೆ ಅಚರಲಿಂಗಕ್ಕೆ ಪ್ರಸಾದವಿಲ್ಲ. ಅಂದರೆ ಚೈತನ್ಯವಿಲ್ಲದೆ ಆರೋಗಣೆಯಾಗುವಂತಿಲ್ಲ, ಆರೋಗಣೆಯಾದದ್ದು ಜೀರ್ಣವಾಗಿ ರಸವಾಗಿ ಸುರಸಪ್ರಸಾದವಾಗಿ ಸ್ಥಾವರಕಾಯಕ್ಕೆ ಒದಗಬೇಕಾದರೆ ಚೈತನ್ಯರೂಪ ಜಂಗಮಲಿಂಗವಿಲ್ಲದಾಗುವುದಿಲ್ಲ. ಈ ಇಂಗಿತಾನುಭವ ಇದರಲ್ಲಿದೆ.

ಇಲ್ಲಿ ಕಲಿಯಯುಗವೆಂದರೆ ತ್ಯಾಗಾಂಗ. ದ್ವಾಪರಯುಗವೆಂದರೆ ಭೋಗಾಂಗ. ತ್ರೇತಾಯುಗವೆಂದರೆ ಯೋಗಾಂಗ. ಕೃತಯುಗವೆಂದರೆ ಆತ್ಮಾಂಗ. ಇವು ಕ್ರಮವಾಗಿ ಕಲ್ಲು, ತಾಮ್ರ, ಬೆಳ್ಳಿ, ಚಿನ್ನಗಳನ್ನು ಹೋಲುತ್ತವೆ, ಕಲ್ಲಿನಂತಿರುತ್ತದೆ ಅಸ್ಥಿ. ತಾಮ್ರದಂತಿರುತ್ತದೆ ರಕ್ತ. ಬೆಳ್ಳಿಯಂತಿರುತ್ತದೆ ಸಾತ್ವಿಕಭಾವ ಅಥವಾ ಶುಕ್ಲ. ಚಿನ್ನದಂತಿರುತ್ತದೆ ಆತ್ಮ, 'ಹಿರಣ್ಮಯಃ ಪುರುಷಃ' ಎಂಬುದನ್ನು ನೆನೆಯಬೇಕು. ಇವೆಲ್ಲ ತಂತಮ್ಮ ಪೂರ್ವಾಶ್ರಯವಾದ ಸ್ಥಾವರತ್ವವನ್ನು ಕಳೆದುಕೊಳ್ಳದೆ ಜಂಗಮ ಪ್ರಸಾದಕ್ಕೆ ಅಂದರೆ ಜಂಗಮತ್ವಕ್ಕೆ ಸಲ್ಲವು: ಅಂತೆಯೇ ಮಾಹೇಶ್ವರಾಂಗನ ತ್ವಕ್ಕಿನ ಸ್ಥಾವರತ್ವ ಪೂರ್ವಾಶ್ರಯವು ಗುರುಲಿಂಗದೊಳಗಿನ ಜಂಗಮಲಿಂಗದಲ್ಲಿ ನಿವೃತ್ತಿಗೊಂಡು ನಿಷ್ಪತ್ತಿಗೊಳ್ಳಬೇಕು. ಇದುವೇ ಮಾಹೇಶ್ವರನ ಜಂಗಮಲಿಂಗಸ್ಥಳದ ಲಕ್ಷ್ಯ.

ಪ್ರತ್ಯಂಗದ ಉಪಾಂಗವೂ ಅಪೂರ್ವಿಕವಾಗಬೇಕು. ಅಂಗನೂ ಅಪೂರ್ವಿಕನಾಗಬೇಕು ಮತ್ತು ಭಕ್ತನಾಗಿಯೇ ಮಾಹೇಶ್ವರನಾಗಬೇಕು, ಹೀಗಾಗುವ ವಿಶೇಷ ಅನುಭಾವವೊಂದನ್ನು ಚನ್ನಬಸವಣ್ಣನು ಈ ತನ್ನ ವಚನದಲ್ಲಿ ಉಗ್ಗಡಿಸಿದ್ದಾನೆ:

"ಪೂರ್ವಿಕ ಪೂಜಕ, ಅಪೂರ್ವಿಕ ಭಕ್ತ ;
ಕರ್ಮಿ ಪೂರ್ವಿಕ, ನಿಷ್ಕರ್ಮಿ ಭಕ್ತ ;
ಲಿಂಗಪೂಜಕ ಜಂಗಮ ಭಕ್ತ.
ತನುಗುಣ ಪೂರ್ವ ಪೂರ್ವಸೂತಕವಿರಹಿತ
ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ ಆತನೆ ಅಚ್ಚ ಶರಣ."

ಇದೊಂದು ಅಪೂರ್ವ ಅನುಭಾವವಾಣಿ. ಇದರಲ್ಲಿ ತನು ಅಂಗ ಲಿಂಗ ಜಂಗಮ ಇವುಗಳ ಲಕ್ಷಣ ಲಕ್ಷಿತವಾಗಿ ಸ್ವಾತ್ಮಪ್ರಮೆಗೆ ಸಾಧನವಾಗಿದೆಯಲ್ಲದೆ ಜಂಗಮದ ನಿಲವಿನ ನಿಚ್ಚಳ ಚಿತ್ತಾರ ದರ್ಶನ ಹೇತುವೂ ಆಗಿದೆ.

ತನುಗುಣವೆ ಪೂರ್ವ. ತನುಗುಣವನ್ನು ನಿವೃತ್ತಿಗೊಳಿಸಿದಲ್ಲಿ ಅಂಗತ್ವ. ಅಂಗತ್ವವೇ ಪೂರ್ವಿಕ. ಅಂಗ ತನುಗುಣ ನಿರಸನ ಮಾಡಿದ್ದರೂ ಪೂರ್ತಿ ಮಾಡಿರುವುದಿಲ್ಲ. ಸೂಕ್ಷ್ಮವಾದ ಆಶ್ಚರ್ಯವಿರುತ್ತದೆ. ಆದ್ದರಿಂದ ತನು

ಪೂರ್ವವಾದರೆ ಅಂಗ ಪೂರ್ವಿಕ ಅಥವಾ ಪೂರ್ವಕ ಎನಿಸುತ್ತದೆ. ಇನ್ನು ಅಪೂರ್ವವೇ ಲಿಂಗ, ಅಪೂರ್ವಿಕವೇ ಜಂಗಮ. ಪೂರ್ವಿಕ ಅಂದರೆ ಅಂಗನ ಸೂಕ್ಷ್ಮ ಸಂಸ್ಕಾರದಲ್ಲಿರುವುದು ಲಿಂಗ ; ಆ ಸೂಕ್ಷ್ಮ ಸುಸ್ಕಾರವನ್ನು ನಿವೃತ್ತಿಗೊಳಿಸಿರುವುದು ಜಂಗಮ. ಪೂರ್ಣ ನಿವೃತ್ತಿಗೊಂಡಾಗಲೇ ಭಕ್ತತ್ವ ಪ್ರಾಪ್ತಿ. ಆ ಭಕ್ತತ್ವವೇ ಅಪೂರ್ವಿಕ, ಕರ್ಮರಹಿತ. ಅಂತಾಗುವುದೇ ಜಂಗಮಲಿಂಗ ಲಕ್ಷಣ. ಅಂತಾದರೂ ಆ ಜಂಗಮ ಲಿಂಗವು ಪ್ರಸಾದಲಿಂಗಾರಾಧಕವಾಗಿ 'ಭಕ್ತ' ಎನಿಸುತ್ತದೆ. ಪ್ರಸಾದ ಸಕ್ತವಾಗದೆ ಭಕ್ತವಾಗದೆ ಜಂಗಮತ್ವವಿಲ್ಲ.

ಜಿಹ್ವಾಂಗಕ್ಕೂ ಜಂಗಮ ಪ್ರೇಮ ಅನಿವಾರ್ಯ, ಇಲ್ಲವಾದರೆ ರಸಾನುಭವವುಂಟಾಗದು. ಮಿಗಿಲಾಗಿ ಸಮರಸರೂಪಶೀಲವುಂಟಾಗದು.

"ಸುಖಶೀಲಲಿಂಗ ಧ್ಯಾನ, ಸಮಶೀಲ ಜಂಗಮಪ್ರೇಮ ;
ಮಹಾಶೀಲ ಅವರೆಂದಂತೆಂಬುದು.
ಈ ತ್ರಿವಿಧವನರಿದಡೆ ಕೂಡಲ ಚನ್ನಸಂಗನೆಂಬೆ."

ಶೀಲ ತ್ರಿವಿಧ; ಸುಖ, ಸಮ, ಮಹಾ–ಎಂದು. ಸುಖಶೀಲಕ್ಕಿಂತ ಸಮಶೀಲ ಮಿಗಿಲು. ಸಮಶೀಲಕ್ಕಿಂತ ಮಹಾಶೀಲ ಮತ್ತೂ ಮಿಗಿಲು. ಲಿಂಗ ಧ್ಯಾನ ಸುಖಶೀಲ. ಜಂಗಮಪ್ರೇಮ ಸಮಶೀಲ. ಸಮಶೀಲವನ್ನು ಮೀರಿ ನಿಃಸ್ಥಲಶೀಲನಾಗಿರುವುದೇ ಮಹಾಶೀಲ. ಅದು ನಿರ್ದಿಷ್ಟ ಲಕ್ಷಣಕ್ಕೆ ಅತೀತ ; ಪ್ರಮಾಣಕ್ಕೆ ಅತೀತ. ಅದು ತುರ್ಯಾತೀತ. ಅದು ಅವರವರ ಅನುಭವ. ಅದುಳ್ಳವನೇ ಪರಶಿವ. ಅದುವೇ ಸಹಜ.

ಕಾಯಕ್ಕಿರುವಂತೆ ಆತ್ಮಕ್ಕೂ ಮೂರವಸ್ಥೆಗಳಿವೆ. ಆದರೆ ಆ ಅವಸ್ಥೆಗಳೇ ಬೇರೆ. ಅಂಗತ್ವ ಲಿಂಗತ್ವ ಜಂಗಮತ್ವ ಎಂಬವು ಚೇತನಾವಸ್ಥೆಗಳು. ಇವನ್ನು ಮೀರಿ ನಿಲ್ಲುವುದೇ ತುರೀಯಾವಸ್ಥೆ. ಅವನ್ನೂ ಮೀರುವುದೇ ಸಹಜತೆ. ಅದು ಇದ್ದೂ ಇಲ್ಲದ ಇಲ್ಲದೆ ಇರುವ ಸಹಜತೆ.

ಜಂಗಮ ಬೀಜ, ಲಿಂಗವೃಕ್ಷ, ಅಂಗಫಲ ಎಂದು ಹೇಳುವುದುಂಟು. ಬೀಜಾತೀತತತ್ವವೇ ಸಹಜತ್ವ. ಸಂಕೋಚ ವಿಕಾಸ ಧರ್ಮಗಳಿಂದ ದೂರಿರುವುದೇ ಸಹಜತ್ವ. ಜಂಗಮತ್ವವಿರುವಲ್ಲಿ ಪಾದೋದಕ ಪ್ರಸಾದಗಳ ಹಂಗುಂಟು. ಇವಿರುವಲ್ಲಿ ಆಚಾರ ಕ್ರಿಯೆ ಭಕ್ತಿಗಳ ಹಂಗುಂಟು.

ಕಾರಣ ಸಹಜಕ್ಕೇರುವುದೇ ಚರಮಗುರಿ. ಈ ಗುರಿಗೆ ನಿಲುಕಬೇಕಾದರೆ ಅಂಗತ್ವ ಲಿಂಗತ್ವ ಜಂಗಮತ್ವಗಳನ್ನು ಸಾಧಿಸಲೇಬೇಕು. ಜಂಗಮತ್ವಕ್ಕೆ ಬಾರದೆ ತುರ್ಯ ತುರ್ಯಾತೀತತತ್ವಗಳು ಅಳವಡವು. ಸ್ವಯ ಲಿಂಗತ್ವವು ಸಿದ್ಧಿಸದು.

"ಕವಿತ್ವ ಸಾಧಕರೆಲ್ಲರೂ, ಕಳವಳಿಸಿ ಹೋದರು.
ವಿದ್ಯಾಸಾಧಕರೆಲ್ಲರೂ ಬುದ್ಧಿಗೆಟ್ಟರು.
ತತ್ವ ಸಾಧಕರೆಲ್ಲರೂ ಭಕ್ತಿಹೀನರಾದರು.
ಲಿಂಗಸಾಧಕರೆಲ್ಲರೂ ಭೂ ಭಾರಕರಾದರು.
ಕೂಡಲಚನ್ನಸಂಗಮದೇವಯ್ಯ,
ನಿಮ್ಮ ಬಸವಣ್ಣ ಜಂಗಮಸಾಧಕನಾಗಿ ಸ್ವಯಲಿಂಗವಾದನು."

ಕವಿತ್ವ, ತತ್ತ್ವ, ವಿದ್ಯೆ ಲಿಂಗಸಾಧನಗಳಿಗಿಂತ ಜಂಗಮ ಸಾಧನೆ ಶ್ರೇಷ್ಠವೆನ್ನುತ್ತಾನೆ ಚನ್ನಬಸವಣ್ಣ. ಇದರಿಂದ ಸ್ವಯಲಿಂಗತ್ವ ಸಾಧ್ಯ.

### ೫. ಮಾಹೇಶ್ವರನ ಪ್ರಸಾದಲಿಂಗ :

ಗುರುಲಿಂಗದೊಳಗಿನ ಪರಿಪೂರ್ಣತ್ವ ಗುರುಲಿಂಗದೊಳಗಿನ ಪ್ರಸಾದಲಿಂಗ; ಅಥವಾ ಮಾಹೇಶ್ವರನ ಪ್ರಸಾದಲಿಂಗ, ವಾಯುಗಿಂತ ವ್ಯಾಪಕವಾದುದು ವಿಯತ್. ಇದು ಸರ್ವಾಂಗ ವ್ಯಾಪಿಯಾಗಿದೆ. ನಾದ ಅಥವಾ ಶಬ್ದವಿರುವಲ್ಲೆಲ್ಲ ಆಕಾಶವಿದ್ದೇ ಇರುತ್ತದೆ. ಅಂತೆಯೇ ಆಕಾಶದ ಅಷ್ಟಾಂಶವು ಜಲಾಂಗದಲ್ಲಿದೆ ; ಜಿಹ್ವಾಂಗದಲ್ಲಿದೆ. ಅಲ್ಲಿ ಉತ್ಪತ್ತಿಯಾಗುವ ಶಬ್ದ ತನ್ನ ಪೂರ್ವಾಶ್ರಯ ನಿರಸನ ಮಾಡಿಕೊಳ್ಳಲು ಅಲ್ಲಿಯೇ ಇರುವ ಗುರುಲಿಂಗದೊಳಗಿನ ಪ್ರಸಾದಲಿಂಗಕ್ಕೆ ತನ್ನನ್ನು ಅರ್ಪಿಸಿಕೊಳ್ಳುತ್ತದೆ. ಅರ್ಪಿಸಿಕೊಂಡು ಸುರಸಪ್ರಸಾದದೊಳಗಿನ ಸುಶಬ್ದ ಪ್ರಸಾದವಾಗುತ್ತದೆ. ಇದಾಗದೆ ಮಾಹೇಶ್ವರ ಪ್ರಸಾದಿತ್ವ ಪ್ರಾಪ್ತಿಯಾಗದು ; ಆಗದೆ ಜೀವತವಿಲ್ಲ.

"ಎಂತು ಜೀವಿಸಬಹುದು, ಗುರುಪ್ರಾಣಿಗೆ ಗುರು ಓಸರಿಸಿದಡೆ ?
ಎಂತು ಜೀವಿಸಬಹುದು, ಲಿಂಗಪ್ರಾಣಿಗೆ ಲಿಂಗ ಒಸರಿಸಿದಡೆ ?

ಎಂತು ಜೀವಿಸಬಹುದು, ಜಂಗಮ ಪ್ರಾಣಿಗೆ ಜಂಗಮ ಓಸರಿಸಿದಡೆ ?
ಎಂತು ಜೀವಿಸಬಹುದು, ಪ್ರಸಾದ ಪ್ರಾಣಿಗೆ,
ಕೂಡಲಚನ್ನಸಂಗಯ್ಯ ಪ್ರಸಾದ ಓಸರಿಸಿದಡೆ?"

ರಸರುಚಿಯೊಳಗಿನ ಸುಶಬ್ದ ಪ್ರಸಾದ ಓಸರಿಸಬಾರದು, ಅಂದರೆ ಲಿಂಗಾರ್ಪಣವಾಗದೆ ಇರಬಾರದು. ಆಗಬೇಕಾದರೆ ಗುರುಲಿಂಗದೊಳಗಿನ ಪ್ರಸಾದ ಲಿಂಗ ಅಗತ್ಯ. ಪ್ರಸಾದಲಿಂಗವಿಲ್ಲದೆ ರಸದೊಳಗಿನ ಶಬ್ದ ಪ್ರಸಾದವಾಗದು. ; ಪ್ರಸಾದವಾಗದೆ ಪರವಿಲ್ಲ.

"ಗುರುದ್ರೋಹಮಾಡಿದವನ ಮುಖವ ನೋಡಲಾಗದು ;
ಮತ್ತೆ ನೋಡಬಹುದು ; ಏಕೆ ?—ಮುಂದೆ ಲಿಂಗವಿಪ್ಪುದಾಗಿ.
ಲಿಂಗದ್ರೋಹಮಾಡಿದವನ ಮುಖವ ನೋಡಲಾಗದು ;
ಮತ್ತೆ ನೋಡಬಹುದು ; ಏಕೆ ?—ಮುಂದೆ ಜಂಗಮವಿಪ್ಪುದಾಗಿ.
ಜಂಗಮದ್ರೋಹ ಮಾಡಿದವನ ಮುಖವ ನೋಡಲಾಗದು ;
ಮತ್ತೆ ನೋಡಬಹುದು ; ಏಕೆ ?—ಮುಂದೆ ಪ್ರಸಾದವಿಪ್ಪುದಾಗಿ.
ಪ್ರಸಾದದ್ರೋಹ ಮಾಡಿದವನ ಮುಖವ ನೋಡಲಾಗದು ; ಏಕೆ ?
ಕೂಡಲ ಚನ್ನ ಸಂಗಮದೇವನ ಪ್ರಸಾದ ವಿರಹಿತವಾಗಿ
ಪರವಿಲ್ಲದ ಕಾರಣ."

ಯಾವದ್ರೋಹವಾದರೂ ಪ್ರಸಾದದ್ರೋಹವಾಗಬಾರದು, ಜಂಗಮ ದ್ರೋಹವನ್ನೂ ಕಳೆಯಬಲ್ಲದು ಪ್ರಸಾದಾವಧಾನ, ಪ್ರಸಾದಾನುಭವ, ಮತ್ತು ಪ್ರಸಾದಾನಂದ, ಪ್ರಸಾದದ್ರೋಹಿಗೆ ಪರಿಹಾರವಿಲ್ಲ ; ಪರವಿಲ್ಲ.

ಶಬ್ದವೂ ಒಂದು ದ್ರವ್ಯ; ಈ ದ್ರವ್ಯ ಶುಭವಾಗಬೇಕಾದರೆ ಪ್ರಸಾದ ಲಿಂಗಕ್ಕೆ ಆಪ್ಯಾಯನವಾಗಬೇಕು. ಅಂಗದ ಅವಸರಕ್ಕಾಗಿ ಆಡಿದ ನುಡಿ ಲಿಂಗಕ್ಕೆ ಅಪ್ಯಾಯನವಾಗದು, ಅಕಲಂಕಲಾಗದು.

ಗುರುಲಿಂಗದ ಆರಾಧನೆಯಲ್ಲಿಯೇ ಪರವಸ್ತು ಸ್ವರೂಪ ತಾನಾಗಬೇಕಾದರೆ ಗುರುಲಿಂಗದೊಳಗಿನ ಪ್ರಸಾದಲಿಂಗಾರಾಧನ ಅರ್ಪಣ ಅನುಭವಗಳು ಮಾಹೇ

ಶ್ವರಾಂಗನಿಗೆ ಅತ್ಯಗತ್ಯ ; ಅನಿವಾರ್ಯ ಸಾಹಿತ್ಯ.

"ಪ್ರಕೃತಿವಿಡಿದಿಹುದೆ ಪ್ರಾಣ, ಪ್ರಾಣವಿಡಿದಿಹುದೆ ಜ್ಞಾನ ;
ಜ್ಞಾನವಿಡಿದಿಹುದೆ ಗುರು.
ಇಂತೀ ಗುರುಲಿಂಗದ ಪ್ರಸಾದವನು
ಸದ್ಗುಣದಿಂದ ಹಿಡಿದು, ನಿರ್ಗುಣದಿಂದ ಬಿಡುವ
ಸಂದೇಹಿ ವ್ರತಗೇಡಿಗಳ ತೋರದಿರಯ್ಯಾ, ಕೂಡಲಚನ್ನಸಂಗಮದೇವಾ"

ಪ್ರಾಸಾದಿಕ ವಾಣಿಯಾಗಬೇಕಾದರೆ ಗುರುಲಿಂಗ ಪ್ರಸಾದ ಅಗತ್ಯ. ಅದನ್ನು ಅಲ್ಲಗಳೆದರೆ ವ್ರತಕ್ಕೆ ಹಾನಿ ; ಸಂದೇಹಕ್ಕೆ ಕೇಂದ್ರ. ಪ್ರಸನ್ನ ಭಾವಕ್ಕೆ ದೂರ. ಹೀಗಾದ ಬಳಿಕ ಶರಣತ್ವಕ್ಕೆ ಸಲ್ಲದಂತಾಗಬೇಕಾಗುತ್ತದೆ.

ಮಾಹೇಶ್ವರಶರಣ ಮಾತಿನಲ್ಲಿ ಮಿತಿಯುಳ್ಳವನಾಗಬೇಕು. ಮಾತು ಜ್ಯೋತಿರ್ಲಿಂಗ, ಅದನ್ನು ಆದಷ್ಟು ಎಚ್ಚರಿಕೆಯಿಂದ ಹಿತಮಿತವಾಗಿ ಹೆಚ್ಚಿಲ್ಲದಂತೆ ಉಪಯೋಗಿಸಬೇಕು. ಗುರುಲಿಂಗದೊಳಗಿನ ಪ್ರಸಾದಲಿಂಗಾರ್ಪಣಕ್ಕೆ ಉಚಿತವಾಗುವಂತಹದನ್ನೆ ಆಡಬೇಕು, ಆತನು ಮಾಹೇಶ್ವರನ ಶರಣ. ಆತನಿಗೆ ಮಾಹೇಶ್ವರ ಪ್ರಸಾದಲಿಂಗದ ಪ್ರಸನ್ನತೆಯುಂಟಾಗುತ್ತದೆ.

## ೬. ಮಾಹೇಶ್ವರನ ಮಹಾಲಿಂಗಸ್ಥಳ

ಗುರುಲಿಂಗದೊಳಗಿನ ಅಖಂಡತ್ವವೇ ಗುರುಲಿಂಗದೊಳಗಿನ ಮಹಾಲಿಂಗ; ಅಥವಾ ಮಾಹೇಶ್ವರನ ಮಹಾಲಿಂಗಸ್ಥಳ. ಆಕಾಶಕ್ಕಿಂತ ವ್ಯಾಪಕವಾದುದು ಆತ್ಮಾಂಗ. ಅದು ಎಲ್ಲೆಲ್ಲಿಯೂ ಇರುತ್ತದೆ. ಅಂತೆಯೇ ಜಿಹ್ವಾಂಗದಲ್ಲಿಯೂ ಆತ್ಮ ಚೈತನ್ಯವಿರುತ್ತದೆ. ಅಂತೆಯೇ ಹೃದಯಸ್ಥ ಮೂಲ ಮಹಾಲಿಂಗದ ಅಷ್ಟಾಂಶವು ಜಿಹ್ವಾಂಗದಲ್ಲಿಯೂ ಇರುತ್ತದೆ. ಇದುವೆ ಮಾಹೇಶ್ವರನ ಮಹಾಲಿಂಗಸ್ಥಳ. ಇದು ಅಸಾಧಾರಣ ಧರ್ಮವುಳ್ಳುದು. ಕೇವಲ ರಸ ಸುತೃಪ್ತಿಯನ್ನು ಮಾತ್ರ ಸ್ವೀಕರಿಸಬಲ್ಲುದು. ಇದರಿಂದ ರಸತೃಪ್ತಿ ಪ್ರಸಾದವಾಗಬಲ್ಲುದು.

ಆ ಮಾಹೇಶ್ವರ ಮಹಾಲಿಂಗದ ಪ್ರಸಾದವಾಗಿ ಬಂದ ಸುರಸ ಸುತೃಪ್ತಿಯಲ್ಲಿದ್ದ ಅಂಗನು ಅಂಗಭಾವವಳಿದು ನಿರಾಕುಳನಾಗಿರುತ್ತಾನೆ. ಆ ಮಹಾಲಿಂಗ ಪ್ರಸಾದದ ನೆಲೆಯನ್ನು ಶ್ರುತಿ ಸ್ಮೃತಿಗಳು ತಿಳಿಯವು. ಆ ಸಂತೃಪ್ತಿಯನ್ನು ಸಾಮಾನ್ಯರು ಅರಿಯರು.

"ಲಿಂಗಮುಖವನರಿದಂಗೆ ಅಂಗವೆಂಬುದಿಲ್ಲ ;
ಜಂಗಮ ಮುಖವನರಿದಂಗೆ ಸಂಸಾರವೆಂಬುದಿಲ್ಲ,
ಪ್ರಸಾದ ಮುಖವನರಿದಂಗೆ ಇಹಪರವೆಂಬುದಿಲ್ಲ.
ಈ ತ್ರಿವಿಧವೊಂದೆಂದರಿದವಂಗೆ ಮುಂದೇನೂ ಇಲ್ಲ.
ಈ ತ್ರಿವಿಧದ ನೆಲೆಯ ಶ್ರುತಿಸ್ಮೃತಿಗಳರಿಯವು :
ಕೂಡಲ ಚನ್ನಸಂಗಯ್ಯಾ, ನಿಮ್ಮ ಶರಣನೇ ಬಲ್ಲ."

ಲಿಂಗ ಜಂಗಮ ಪ್ರಸಾದಗಳು ಪರಿವಿಡಿದು ಅಂಗ, ಸಂಸಾರ, ಇಹಪರಗಳನ್ನು ನಿವೃತ್ತಿಗೊಳಿಸುತ್ತವೆ. ಅಂತಹ ಲಿಂಗ ಜಂಗಮ ಮತ್ತು ಪ್ರಸಾದ ಒಂದಾದುದೇ ಮಹಾಲಿಂಗ. ಅಂಥಹ ಮಹಾಲಿಂಗವನ್ನು ಮನದರಿತು ಅದರ ಪ್ರಸಾದ ಪರಿತೃಪ್ತಿಯುಂಟಾದ ಬಳಿಕ ಮುಂದೆ ಏನೂ ಇರುವುದಿಲ್ಲ. ಅದೇ ನಿರಾವಿಲಸ್ಥಿತಿ, ನಿಶ್ಚಲಸ್ಥಿತಿ ; ನಿರುಪಮಸ್ಥಿತಿ. ಆ ಸ್ಥಿತಿಯನ್ನು ಶ್ರುತಿ ಸ್ಮೃತಿಗಳೂ ಸಹ ತಿಳಿಯವು ; ಅಂದರೆ ಅರಿವು ನೆನಹುಗಳಿಗೂ ಸಹ ಅದು ಅಂದುವುದಲ್ಲ.

"ಉಭಯ ತನುಗುಣವಳಿದಲ್ಲದೆ ಅರಿವಿನಾಚಾರವಳವಡದು.
ಅರಿವಿನಾಚಾರವು ಅಳವಟ್ಟಲ್ಲದೆ ಲಿಂಗದ ಬೆಳಗು ದೊರಕೊಳ್ಳದು.
ಲಿಂಗದ ಬೆಳಗು ದೊರಕೊಂಡಲ್ಲದೆ ಕೂಡಲ ಚನ್ನಸಂಗಯ್ಯನಲ್ಲಿ
ಪರಿಣಾಮ ನೆಲೆಗೊಳ್ಳದು."

ಅರಿವಿನಾಚಾರದಿಂದ ಲಿಂಗದ ಬೆಳಗು. ಲಿಂಗದ ಬೆಳಗಿನಿಂದ ಪರಮ ಪರಿಣಾಮ. ಇದರಿಂದಾಗಿ ಮಾಹೇಶ್ವರಾಂಗನು ರಸರಸನೆಗಳ ಭಾವನೆಗಳೆರಡನ್ನು ನಿವೃತ್ತಿಗೊಳಿಸಿ ಅರಿವಿನಾಚಾರದಲ್ಲಿ ಗುರುಲಿಂಗದೊಳಗಿನ ಮಹಾಲಿಂಗದ ಬೆಳ

ಗನ್ನು ಪಡೆದು ಪರಿಣಮಿಸಬೇಕು. ಇಲ್ಲವಾದರೆ ಮಾಹೇಶ್ವರನ ಮಹಾಲಿಂಗತ್ವ ಮೈಗೂಡದು,

"ಗುರುವೆನ್ನ ತನುವ ಬೆರಸಿದ ಕಾರಣ,
ಗುರುವಿನ ತನುವ ನಾ ಬೆರಸಿದ ಕಾರಣ,
ಗುರು ಶುದ್ಧನಾದೆನಯ್ಯಾ.
ಲಿಂಗವೆನ್ನ ಮನವ ಬೆರಸಿದ ಕಾರಣ
ಲಿಂಗದ ಮನವ ನಾ ಬೆರಸಿದ ಕಾರಣ
ಲಿಂಗಶುದ್ಧನಾದೆನಯ್ಯಾ
ಜಂಗಮವೆನ್ನ ಜಿಹ್ವೆಯ ಬೆರಸಿದ ಕಾರಣ,
ಜಂಗಮದ ಜಿಹ್ವೆಯ ನಾ ಬೆರಸಿದ ಕಾರಣ
ಜಂಗಮ ಶುದ್ಧನಾದೆನಯ್ಯಾ;
ಈ ಮೂವರು ಎನ್ನ ಮುಟ್ಟಿ ತಾವು ಶುದ್ಧರಾದರು.
ತಮ್ಮಿಂದ ತಾವು ಶುದ್ಧರಾಗಲರಿಯದೆ,
ಕೂಡಲ ಚನ್ನ ಸಂಗಮದೇವಾ !"

ತನು ಮನ ಜಿಹ್ವೆ ಶುದ್ಧವಾದಲ್ಲದೆ ಮಾಹೇಶ್ವರತ್ವ ಬಾರದು ; ಮಾಹೇಶ್ವರತ್ವ ಬಾರದೆ ಮಹಾಲಿಂಗದ ಬೆಳಗಿನ ಪರಿಣಾಮ ದೊರೆಯದು. ತನು ಮನ ಜಿಹ್ವೆಗಳು ಶುದ್ಧವಾಗಬೇಕಾದರೆ ಗುರುಲಿಂಗ ಜಂಗಮ ಸಾಮರಸ್ಯವೇ ಮೂಲ. ತಾನು ಅಚ್ಚ ಐಕ್ಯಾಂಗನಾದರೆ ತನ್ನಿಂದ ಅಪರಿಗೂ ಶುದ್ಧಿಯ ಲಾಭ ಪರಸ್ಪರ ಲಾಭ.

"ಅಂಗದಿಂದ ಲಿಂಗ ಸುಖ, ಲಿಂಗದಿಂದ ಅಂಗಸುಖ ;
ಅಂಗಲಿಂಗ ಸಂಗದಿಂದ ಪರಮ ಸುಖ ನೋಡಯ್ಯಾ !
ಅಂಗಲಿಂಗ ಸಂಗ ಸುಖವನು
ಕೂಡಲ ಚನ್ನ ಸಂಗಯ್ಯನಲ್ಲಿ ಲಿಂಗೈಕ್ಯನೇ ಬಲ್ಲ !"

ಮಗುವನಪ್ಪಿ ತಾಯಿಗೆ, ತಾಯಿಯನಪ್ಪಿ ಮಗುವಿಗೆ ಹೇಗೆ ಪರಸ್ಪರ ಸುಖ ಸಮನಿಸುತ್ತದೆಯೋ ಹಾಗೆ ಅಂಗದಿಂದ ಲಿಂಗಕ್ಕೆ ಲಿಂಗದಿಂದ ಅಂಗಕ್ಕೆ ಸುಖಸವ ನಿಸುತ್ತದೆ. ಅಂತಹ ಆ ಅಂಗಲಿಂಗ ಸಂಗ ಸುಖವೇ ಪರಮ ಸುಖ, ಅದನು. ಆ ಲಿಂಗೈಕ್ಯನಲ್ಲದೆ ಅನ್ಯರು ಪಡೆಯರು ; ತಿಳಿಯರು. ಮಾಹೇಶ್ವರೈಕ್ಯನು ಗುರು ಲಿಂಗದೊಳಗಿನ ಮಹಾಲಿಂಗದಲ್ಲಿ ಅಂತಹ ಪರಮ ಸುಖವನ್ನು ಪಡೆಯಬಲ್ಲನು.

ಹೀಗೆ ಮಾಹೇಶ್ವರಸ್ಥಲವೊಂದರಲ್ಲಿಯೇ ಷಡ್ವಿದ ಲಿಂಗಗಳು,ಷಡ್ವಿದ ಅಂಗ ಗಳು ಉಂಟಾಗುತ್ತವೆ. ಅಂಗಗಳು ಆ ಅಲಿಂಗಗಳಲ್ಲಿ ಅರ್ಪಣ ಅನುಭವ ಆನಂದ ಗಳನ್ನು ಪಡೆಯುತ್ತವೆ ; ಸಂಗ ಸಮರಸವನ್ನು ಪಡೆಯುತ್ತವೆ. ಮಾಹೇಶ್ವರನ ಭಕ್ತನು ಮಾಹೇಶ್ವರನ ಐಕ್ಯಸ್ಥಲವನ್ನು ಅಳವಡಿಸಿಕೊಳ್ಳುತಾನೆ. ಗುರುಲಿಂಗ ದೊಳಗಿನ ಆಚಾರಲಿಂಗ ಮೊದಲ್ಗೊಂಡು ಗುರುಲಿಂಗದೊಳಗಿನ ಮಹಾಲಿಂಗದ ವರೆವಿಗೂ ಇರುವ ಆ ಆ ಕಳೆಗಳನ್ನು ಕೈಗೂಡಿಸಿಕೊಳ್ಳುತ್ತಾನೆ, ಇದರಿಂದಾಗಿ ಮಾಹೇಶ್ವರನ ಕಾಯ ಅಕಾಯನಾಗಿ ಪರಕಾಯ ಸ್ಥಿತಿಗೇರುತ್ತದೆ ; ಲಿಂಗಮಯ ಕಾಯವಾಗುತ್ತದೆ.

## ಗುರುಲಿಂಗ ಮಿಶ್ರಾರ್ಪಣ

ಇದನರಿವುದು ಇಲ್ಲಿ ಪ್ರಸ್ತುತ. ಯಾವ ಯಾವ ಲಿಂಗಕ್ಕೆ ಯಾವ ಯಾವ ರುಚಿ ಅರ್ಪಣವಾಗುತ್ತದೆಂಬುದನ್ನು ಆದಯ್ಯ ಶರಣನು ಹೀಗೆ ಹೇಳಿದ್ದಾನೆ.

"ಮಧುರವಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಆಚಾರಲಿಂಗ.
ಒಗರವಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಗುರುಲಿಂಗ.
ಕಾರವಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಶಿವಲಿಂಗ.
ಆಮ್ಲವಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಜಂಗಮಲಿಂಗ.

ಕಹಿಯಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಪ್ರಸಾದಲಿಂಗ.
ಲವಣವಾದ ರುಚಿಯನರಿವುದು,
ಗುರುಲಿಂಗದಲ್ಲಿಯ ಮಹಾಲಿಂಗ."

ಇದೇ ವಿಚಾರವನ್ನು ಚನ್ನ ಬಸವಣ್ಣನವರು ತಮ್ಮ ಮಿಶ್ರಾರ್ಪಣ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ :

"ಮಧುರವಾದ ರುಚಿಯನರಿವುದು ಆಚಾರಲಿಂಗದಲ್ಲಿ,
ಒಗರಾದ ರುಚಿಯನರಿವುದು ಗುರುಲಿಂಗದಲ್ಲಿ,
ಕಾರವಾದ ರುಚಿಯನರಿವುದು ಶಿವಲಿಂಗದಲ್ಲಿ.
ಆಮ್ಲವಾದ ರುಚಿಯನರಿವುದು ಜಂಗಮಲಿಂಗದಲ್ಲಿ.
ಕಹಿಯಾದ ರುಚಿಯನರಿವುದು ಪ್ರಸಾದಲಿಂಗದಲ್ಲಿ,
ಇವೆಲ್ಲರಲ್ಲಿಯ ರುಚಿಯನರಿವುದು ಮಹಾಲಿಂಗದಲ್ಲಿ.

ಇಂತೀ ಪಂಚ ರಸಂಗಳು ಲವಣ ಕೂಡಿದಲ್ಲದೆ ರುಚಿಯಾಗದಾಗಿ ಆ ಲವಣವನು ಪಂಚರಸಂಗಳಲ್ಲಿ ಕೂಡಿ ಅರ್ಪಿಸಬೇಕಲ್ಲದೆ ಬೇರೆ ಬೇರೆ ಅರ್ಪಿಸಲಾಗದು. ಇಂತು ಗುರುಲಿಂಗ ಮಿಶ್ರಾರ್ಪಣ.

ಇವರಿಬ್ಬರಲ್ಲಿಯೂ ಗುರುಲಿಂಗದೊಳಗಿನ ಮಹಾಲಿಂಗಾರ್ಪಣ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಆದಯ್ಯ ಶರಣನು ಲವಣ ರುಚಿಯನ್ನು ಮಹಾಲಿಂಗಕ್ಕೆ ಮೀಸಲಾಗಿಸಿ ಹೇಳಿದ್ದರೆ, ಚನ್ನಬಸವಣ್ಣನವರು ಲವಣ ರುಚಿಯನ್ನು ಪ್ರತ್ಯೇಕವಾಗಿಸದೆ ಉಳಿದ ಐಯ್ದು ರುಚಿಗಳಲ್ಲಿ ಮಿಶ್ರವಾಗಿಯೇ ಷಡ್ಲಿಂಗಗಳಿಗೆ ಅರ್ಪಣವಾಗುತ್ತದೆ ಎಂದು ಹೇಳುತ್ತಾರೆ.

ಮಾರ್ಗ ಕ್ರಿಯೆಗೆ ಆಚಾರಲಿಂಗ ಗುರುಲಿಂಗ ಶಿವಲಿಂಗಗಳು ಮೂರು ಆಧಾರವಾಗಿವೆ. ಇವುಗಳಲ್ಲಿ ಈ ಗುರುಲಿಂಗದ ವಿವರಣೆಗೆ ಎರಡು ಆಧಾರಗಳನ್ನು ಅಳವಿದ್ದಷ್ಟು ಅರಿತದಾಯಿತು, ಮಾರ್ಗ ಕ್ರಿಯದ ಎರಡನೆಯ ಹಂತವನ್ನು ಹತ್ತಿ ನಿಂತಾಯಿತು. ಇಲ್ಲಿಗೆ ಮಾಹೇಶ್ವರ ಸ್ಥಲವು ಭಕ್ತ

ಸ್ಥಲದೊಡಗೂಡಿ ನಿಸ್ಥಲವಾಯಿತು. ಆ ಮಾಹೇಶ್ವರನ ನಿಸ್ಥಲಕ್ಕೇರುವ ಶಕ್ತಿ ಭಕ್ತಿಗಳನ್ನು ಅಂಗಲಿಂಗಗಳನ್ನು ಸ್ಥಳ ಕುಳಗಳನ್ನು ಕರುಣಿಸಿದ ಸಕಲ ಕಳಾಗುರುವನ್ನು ಸದಾ ಹೃದಯದಿಂದ ನಿಜ ನಿಷ್ಠೆಯಿಂದ ನುತಿಸೋಣ, ನಮಿಸೋಣ :

## ಶಿಕ್ಷಾಗುರುವೆ ಶರಣು

ಗುರುವೆ ಶರಣು, ಎನ್ನ ಗುರುವೆ ಶರಣು, ಎನ್ನ
ಪರಿಭವವ ಕಳೆದ ಶಿಕ್ಷಾಗುರುವೆ ಶರಣು ॥

ಒರೆದೊರೆದು ಭಕ್ತಿಯನು, ಬಗೆದೋರಿ ; ಮರವೆಯನು
ಹರಿದು, ಸಂಸಾರವನು ಕೆಲಕೊತ್ತಿಸಿ,
ಇರುಳು ಹಗಲೆನ್ನದನವರತ ಬೋಧಿಸಿಯೆನ್ನ
ಪರಮ ಸುಖದೊಳಗಿರಿಸಿ ಹೊರೆದ ಗುರುವೇ ॥

ಸಿರಿಗಂಧವನು ಕಡಿದು ಕೊರೆದು ಸಣ್ಣಿಸುವಂತೆ,
ಕರುಣದಿಂದೆನ್ನ ಪೂರ್ವಾಪರವನು
ಶಿರವ ಹಿಡಿದೆತ್ತಿ ತೋರಿಸಿ, ಭಕ್ತಿ ಸಂಪದವ
ದೊರೆಕೊಳಿಸಿ ಪಾಲಿಸಿದ ಪರಮಗುರುವೇ ॥

ಅಂಗಲಿಂಗದ ನೋಟವನು ಪ್ರಾಣ ಭಾವದೊಳು
ಹಿಂಗದಿರಿಸುವ ಭೇದವನು ತೋರಿಸಿ,
ಅಂಗದಾಚಾರ ಸ್ಥಲದೊಳು ನೆಲಸಿರುತಿಪ್ಪ
ಸಂಗಿ ಚಿನ್ಮೂರ್ತಿ ಶ್ರೀ ಗುರುಲಿಂಗವೇ ॥

ಕಾಯ ಪ್ರಸಾದವಿದು, ಪ್ರಾಣ ಪ್ರಸಾದವಿದು,
ಭಾವ ಪ್ರಸಾದವಿದು ಎಂದು ತೋರಿಸಿ ;
ಆಯಸವ ಬಿಡಿಸಿಯೆನ್ನ ನಿರಾಯಾಸವ ತೋರಿಸಿದ
ಮಾಯಾರಹಿತ ಎನ್ನ ಗುರುಲಿಂಗವೇ !

ಒಳಗನರುಹಿಸಿ ತಿಳುಹಿ, ಹೊರಗ ಬೋಧಿಸಿ ನಿಲಿಸಿ,
ಒಳಗು ಹೊರಗೆಂದೆಂಬವೆರಡ ಕೆಡಿಸಿ
ಕಳೆಯ ಲಿಂಗದೊಳೊಚ್ಚತವನೊಪ್ಪಗೊಳಿಸಿದಾ
ಕರುಣಿ ಗುರು ಪುರದ ಮಲ್ಲಿನಾಥ ಗುರುವೆ !

ಎಂಬುದಾಗಿ ಗುರುಪುರದ ಮಲ್ಲಯ್ಯನೊಡನೆ ಮನಸಾರೆ ಮೇಳವಿಸಿ ಹಾಡಿ ಸವಿದಾಡಿ ಸಂತಸಗೊಳ್ಳೋಣ. ಮಹೇಶ್ವರ ಸಂಪುಟಕ್ಕೆ ಮಂಗಳ ಹಾಡೋಣ ;

ದೀಕ್ಷಾಗುರುವಿನಿಂದ ಭಕ್ತಸ್ಥಲ ಅಳವಟ್ಟಂತೆ ಶಿಕ್ಷಾಗುರುವಿನಿಂದ ಮಾಹೇಶ್ವರಸ್ಥಲ ಅಳವಡುತ್ತದೆ. ಈ ಒಂದು ಔಚಿತ್ಯವನ್ನು ಅನುಸರಿಸಿ ಈ ಶಿಕ್ಷಾಗುರು ಸ್ತುತಿಯನ್ನು ಮಾಡಲಾಗಿದೆ.

ಈ ಪರಿಭವವನ್ನು ಪರಿಹರಿಸಲು ಶಿಕ್ಷಾಗುರುವು ಶಿಷ್ಯನಿಗೆ ಅನುಗ್ರಹಿಸುವ ಶಿಕ್ಷಣ ಅಥವಾ ಶುಭಸಂಸ್ಕಾರ ಏನೆಂಬುದನ್ನು ಈ ಗುರುಸ್ತವನ ಗಂಭೀರವಾಗಿ ಉದ್ಬೋಧಿಸಿದೆ.

ಒಳಿತಾದ ಒಲವಬರೆದು, ಮರವೆಯ ಹರಿದು ಸಂಸಾರ ಕೆಲಕೊತ್ತಿಸಿ ಹತ್ತಿರಿರಿಸಿ ಬಗೆದೋರಿ ಹಗಲಿರಳು ಬೋಧಿಸಿ ಪರಮಸುಖದೊಳಿರಿಸಿ ಹೊರೆದ ಗುರುವಿಗೆ ಶರಣೆನ್ನದೆ ಜನ್ಮ ಸಾರ್ಥಕವಹುದೆ ?

ಆಹಾ! ಎಂತಹ ಅಂತಃಕರುಣೆ ಶ್ರೀಗುರು! ಶ್ರೀಗಂಧವನ್ನು ಆಯ್ದು ತೆಯ್ದು ಕೊಡುವಂತೆ ಶಿಷ್ಯಶಿಶುವಿನ ಶಿರವಿಡಿದೆತ್ತಿ ಕರುಣರಸದಿಂದ ಪೂರ್ವಾಪರವನ್ನು ತೋರಿಸಿ ಭಕ್ತಿಭಾಗ್ಯವನ್ನು ಕರುಣಿಸಿ ಕಾಪಾಡಿದ ಪರಮಗುರುಚರಣಕ್ಕೆ ಶರಣು.

ತನುಭಾವ ತೊಲಗಿಸಿ ಅಂಗಭಾವವನ್ನು ಜೀವಭಾವವನ್ನು ತೊಲಗಿಸಿ ಲಿಂಗಭಾವವನ್ನು ಪ್ರಾಣಭಾವಗಳಲ್ಲಿ ಅನುಗ್ರಹಿಸಿ ಭೇದವನ್ನು ತೋರಿಸಿಅಂಗದಾಚಾರಗಳಾದ ಮಾರ್ಗಕ್ರಿಯೆಗಳನ್ನು ಲಿಂಗದಾಚಾರಗಳಾದ ಮೀರಿದಕ್ರಿಯೆಗಳನ್ನು ಆಚರಿಸ ಹಚ್ಚಿ ಆ ಆಚಾರಗಳಲ್ಲಿ ತಾನೇ ಸಾಕ್ಷಾತ್ತಾಗಿ ನೆಲಸಿ ಹರಸಿ ಉದ್ಧರಿಸುವ ಚಿನ್ಮಯ ಮೂರ್ತಿ ಶ್ರೀಗುರುಲಿಂಗಕ್ಕೆ ಶ್ರೀಗುರುಲಿಂಗಸ್ವರೂಪಿಯಾದ ಗುರುವಿಗೆ ಶರಣು.

ಕ್ರಿಯಾಜ್ಞಾನಬೋಧೆಯಿಂದ ಕಾಯ, ಪ್ರಾಣ, ಭಾವಗಳನ್ನು ಶುದ್ಧಸಿದ್ಧ ಪ್ರಸಿದ್ಧ ಪ್ರಸಾದವನ್ನಾಗಿಸಿ ಆಶೀರ್ವದಿಸಿ ಆಯಸ ಹರಿಸಿ ನಿರಾಯಸದೊಳಗಿರಿಸಿ ಪರಿಪಾಲಿಸಿದ ಅಶುದ್ಧಮಾಯಾತೀತನಾದ ಗುರುಲಿಂಗದೇವನಿಗೆ . ಕರಕಂಜ ಜೋಡಿಸಿ ಶರಣು.

ಒಳಗೆ ಅರುಹು, ಹೊರಗೆ ಕುರುಹು ಕರುಣಿಸಿ ಒಳಹೊರಗೆಂಬ ಕವಲ ಕಲ್ಪನೆಯ ಕೆಡಿಸಿ, ಕಳೆಯ ಲಿಂಗದಲ್ಲಿ ಒಚ್ಚತವನು ಒಪ್ಪುಗೊಳಿಸಿ ಒಗುವಿಗೆ

ಯಾಗಿ ಕರುಣಿಸಿದ ಕರುಣಾಳು ಕಲಾಗುರುದೇವನ ಶ್ರೀಚರಣಕ್ಕೆ ಶರಣು ಶರಣಾರ್ಥಿ! ಭಕ್ತಸ್ಥಲದಿಂದ ಮಾಹೇಶ್ವರಸ್ಥಲಕ್ಕೆ ಬರುವಂತೆ ಬಂದು ನೆಲಸು ವಂತೆ ಬಗೆದುಂಬಿ ಬಗೆದೋರಿ ಬೋಧಿಸಿದ ಶಿಕ್ಷಾಗುರುವಿಗೆ ಶರಣು ಶರಣಾರ್ಥಿ!!

## ಗುರುವೇ ಶರಣು, ಗುರುಲಿಂಗನೆ ಶರಣು

ಭುವನಜೀವನಕ್ಕೆ ಭಾನು ಹೇಗೋ, ಹಾಗೆ ಭಾವಮಯ ಜೀವನಕ್ಕೆ ಗುರು ಭಾನು. ಭಾನುವಿಲ್ಲದೆ ಬೆಳಕಿಲ್ಲ ಭುವನಕ್ಕೆ! ಗುರುವಿಲ್ಲದೆ ಸತ್ಯವಾದ ಊರ್ಜಿತ ಸತ್ವವಾದ ಧರ್ಮದೃಷ್ಟಿಯಿಲ್ಲ ಬಾಳಿಗೆ! ಗುರುವಾಗಿ ಧರ್ಮದೀಕ್ಷೆಯನ್ನು ಧರ್ಮ ಶಿಕ್ಷಣವನ್ನು ಕೊಟ್ಟರೆ ಗುರುಲಿಂಗವಾಗಿ ಅಂತರಂಗದ ಚಿತ್ಕಳೆಯಾಗಿ ಜ್ಞಾನಾಚರಣೆ ಗಾಗಿ ಬುದ್ಧಿಗೆ ಪ್ರೇರೇಪಣೆಯನ್ನು ಕೊಡುತ್ತದೆ.

ಗುರುವೆ ಗುರು ಲಿಂಗವಾಗಿ ಅಂತರಂಗವನ್ನು ಬೆಳಗುವ ಭಾವ್ಯವಸ್ತುವಾಗಿ ಬಾಳ ಅಂತರ್ಯಾಮಿಯಾಗಿ ಆತ್ಮಚೈತನ್ಯವಾಗಿ ಉಪಾಸ್ಯವಾಗುತ್ತದೆ.

ತ್ಯಾಗಾಂಗೋಪಾಸನೆಯ ಸಿದ್ಧಿಯನ್ನು ಸಂಪಾದಿಸಿ ಮುಂದೆ ಭೋಗಾಂಗೋ ಪಾಸನೆಗೆ ಸಾಗುವ ಸಂಧಿಯಿದು. ಜಾಗ್ರದವಸ್ಥೆಯಲ್ಲಿ ಜಯವನ್ನು ಗಳಿಸಿ ಸ್ವಪ್ನಾ ವಸ್ಥೆಯನ್ನು ಶುದ್ಧ ಸಂವಿದವಸ್ಥೆಯನ್ನಾಗಿಸಲು ಸಾಗುವ ಸುಸಂಧಿಯಿದು. ಈ ಸುಸಂಧಿಯಲ್ಲಿ ಸುಸಮಯದಲ್ಲಿ ಜೀವನದ ಬಾಹ್ಯಾಭ್ಯಂತರ ಜ್ಯೋತಿಗಳಾದ ಗುರು ವನ್ನು ಗುರುಲಿಂಗವನ್ನು ನಚ್ಚಿ ಮಚ್ಚಿ ನೆನೆಯುವುದು ನಿಜಕ್ಕೂ ಪೂಜಕನ ಸಾಧ ಕನ ಕರ್ತವ್ಯ.

ರವಿಯು ಮಲಗಿದವರನ್ನು ಎಬ್ಬಿಸುವಂತೆ ಎಬ್ಬಿಸಿ ಎಂದಿನಂತೆ ದಿನಗೆಲಸಕ್ಕೆ ತೊಡಗಿಸುವಂತೆ, ಗುರುದೇವನು ಅಜ್ಞಾನಾಂಧಕಾರದಲ್ಲಿ 'ಮಲಗಿದ್ದ ಶಿಷ್ಯನನ್ನು ಸಾಧಕನನ್ನು ಎಚ್ಚರಿಸಿ–ಜ್ಞಾನಕ್ರಿಯೆಗಳನ್ನು ಬೋಧಿಸಿ ತಿಳಿಬೆಳಕಿಗೆ ತಂದು ಸತ್ಯ ಧರ್ಮದಲ್ಲಿ ಸಾಗುವಂತೆ ಮಾಡುತ್ತಾನೆ; ಮಾಡಿದ್ದಾನೆ. ಭಕ್ತನನ್ನಾಗಿಸಿ ಮಾಹೇ ಶ್ವರನನ್ನಾಗಿಸಿ ಅಕ್ರಿಯೆ ಅಜ್ಞಾನಗಳಿಂದ ಪಾರುಮಾಡಿದ್ದಾನೆ. ಮುಂದೆ ತಾನೇ ಶಿವಲಿಂಗವಾಗಿ ಬಂದು, ಜಂಗಮಲಿಂಗವಾಗಿ ನಿಂದು ಶಿಷ್ಯಾಂಗನನ್ನು ಪ್ರಸಾದಿ– ಪ್ರಾಣಲಿಂಗಿಗಳನ್ನಾಗಿಸಿ ಸ್ವಪ್ನಾವಸ್ಥೆಯುಳ್ಳ ಭೋಗಾಂಗದ ಶುದ್ಧಿ ಸಿದ್ಧಿಗಳಿಗೆ ಕಾರಣನಾಗಲಿದ್ದಾನೆ; ಆಗುತ್ತಾನೆ, ತೇಜೋಮೂರ್ತಿಯಾಗಿ ಮಾಯಾಮಲದ

ಮಂಜನ್ನು ಮರೆಯಾಗಿಸಿ ಮುಂಜಾವಿನ ಹೊಂಬೆಗಳನ್ನು ಕರುಣಿಸುವವನಾಗಿದ್ದಾನೆ. ತನುಗುಣಗಳನ್ನು ತ್ಯಾಗಮಾಡಿಸಿ ತ್ಯಾಗಾಂಗವನ್ನು ಉದ್ಧರಿಸಿದಂತೆ ಮನೋಗುಣಗಳನ್ನು ಮರಿದು ಭೋಗಾಂಗವನ್ನು ಲಿಂಗಭೋಗೋಪಭೋಗದಲ್ಲಿ ಲೀನವಾಗುವಂತೆ ಅನುಗ್ರಹಿಸುವವನಾಗಿದ್ದಾನೆ. ಚಿತ್ತ-ಬುದ್ಧಿಗಳನ್ನು ಕ್ರಿಯೆ ಜ್ಞಾನಗಳಿಂದ ಶ್ರದ್ಧೆ ನಿಷ್ಠೆಗಳಿಂದ ಚೇತರಿಸಿಕೊಳ್ಳುವಂತೆ ಮಾಡಿದ ಗುರುದೇವನು ಮುಂದೆ ಹಮ್ಮು ಮನಸ್ಸುಗಳನ್ನು ಅವಧಾನ-ಅನುಭವಗಳಿಂದ ಅನುಗ್ರಹಿಸಬೇಕಾಗಿದೆ. ಅಂತರ್ಯಾಮಿಯ ಆರಾಧಕನನ್ನಾಗಿಸಬೇಕಾಗಿದೆ. ಕ್ರಮಪ್ರಾಪ್ತವಾದರೂ ಕಷ್ಟಸಾಧ್ಯಗಳಾದ ಪ್ರಸಾದಿಸ್ಥಲ-ಪ್ರಾಣಲಿಂಗಸ್ಥಲಗಳನ್ನು ಪ್ರಕಾಶಪಡಿಸಿ ಪ್ರಸನ್ನರನ್ನಾಗಿಸಿ ಪೋಷಿಸಲು ಅಂತರ್ಗತ ಆಧಿಗಳನ್ನು ಅಳಿಯುವ ಅಂತರ್ಧ್ಯೇಯ ಸ್ವರೂಪನಾದ ಗುರುಲಿಂಗದೇವನನ್ನು ಶರಣುಶರಣಾರ್ಥಿ ಎಂದುಬಾಗದೆ ಬೇಡದೆ ಬಿಡುವಂತಿಲ್ಲ.

"ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹೇ
ತನ್ನೋ ರುದ್ರಃ ಪ್ರಚೋದಯಾತ್ !"
"ಈಶಾನಃ ಸರ್ವವಿದ್ಯಾನಾಂ ಈಶ್ವರಃ ಸರ್ವಭೂತಾನಾಂ।
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋಮೇಽಸ್ತು ಸದಾಶಿವೋಂ॥"

ಪ್ರತ್ಯಕ್ಷವಾಗಿ ಶ್ರೀಗುರುವಿನ ರೂಪದಲ್ಲಿ ಮತ್ಪುರುಷನಾಗಿ ಬಂದು ಬೋಧಿಸಿದ ತತ್ಪುರುಷನನ್ನು ಉಪಾಸಿಸೋಣ ! ಗುರುದೇವನಿಗಿಂತ ಮಹಾದೇವ ಮತ್ತೊಬ್ಬನಿಲ್ಲವಾಗಿ ಗುರುಮಹಾದೇವನನ್ನು ಧ್ಯಾನಿಸೋಣ!! ಹೀಗೆ ಹೊರ ಒಳಗೆ ಉಪಾಸ್ಯನಾದ ಶ್ರೀಗುರುಲಿಂಗದೇವನು ರುದ್ರರೂಪನಾಗಿ ನಮ್ಮ ರಜಸ್ತಮೋ ಗುಣಗಳನ್ನು ತೊಡೆದು ನಮ್ಮನ್ನು ಸತ್ವಸಾಧನೆಗೆ ತತ್ತ್ವಸಂಪಾದನೆಗೆ ಪ್ರಚೋದಿಸಲಿ.

ಅವನು ಎಲ್ಲ ವಿದ್ಯೆಗಳ ನಿಯಾಮಕನು; ಎಲ್ಲ ಭೂತಗಳ (ಪ್ರಾಣಿಗಳ) ನೇತಾರನು; ಬ್ರಹ್ಮನಿಗೂ ಬ್ರಹ್ಮವೇತ್ತರಿಗೂ ಅಧಿಪತಿಯು, ಪರಬ್ರಹ್ಮರೂಪನು. ಪರಶಿವನು, ಸದಾಶಿವಾತ್ಮಕನು ಓಂಕಾರಮಂತ್ರಮಯನು ಆದ ಶ್ರೀಗುರು ನಮಗೆ ಸದಾ ರಕ್ಷಕನಾಗಲಿ.

ನಾಲ್ಕನೆಯದಾದ ತತ್ಪುರುಷಮಂತ್ರ ನಾಲ್ಕು ಕಲೆಯುಳ್ಳದ್ದು. ಅಯ್ದನೆಯ ದಾದ ಈಶಾನಮಂತ್ರ ಅಯ್ದು ಕಲೆಯುಳ್ಳದ್ದು. ಎರಡೂ ಸೇರಿ ಒಂಬತ್ತು ಕಲೆಗಳು. ಅಂತೆಯೆ ನವಲಿಂಗಕಲೆಗಳುಳ್ಳ ಶ್ರೀಗುರು ತತ್ಪುರುಷನೂ ಆಹುದು, ಈಶಾನನೂ ಆಹುದು. ಅವನ ಅನುಗ್ರಹವಿಲ್ಲದೆ ನವಲಿಂಗಸಾಹಿತ್ಯ ಸ್ವಾಯತ್ತ ವಾಗದು. ಷಟ್‌ಸ್ಥಲ ಸಿದ್ಧಾಂತ ಸನ್ನಿಹಿತವಾಗದು. ಅದರಿಂದಾಗಿ 'ತತ್ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ' ಎಂದು ಜ್ಞಾನಭಾನು ವಾದ ಶ್ರೀಗುರುಲಿಂಗದೇವನನ್ನು ಪೊಡಮಟ್ಟು ಪ್ರಾರ್ಥಿಸದೆ ಗತ್ಯಂತರವಿಲ್ಲ. ಸಾಂಸ್ಕೃತಿಕ ಜೀವನಕ್ರಮಕ್ಕೆ ಶ್ರೀಗುರುವನ್ನು ಬಿಟ್ಟು ಬೇರೆ ಯಾರು ಬೆನ್ನಾಸರಿಲ್ಲ.

ಗುರುಸಂಸ್ಕಾರ ಗುರುತರ. ಅದು ಜೀವನಮಂದಾರ. ಅದರಿಂದ ನೀತಿ ನಿಯತಿ ನಿರ್ಮಳಸಾಹಿತ್ಯವೃತ್ತಿ ಉತ್ತಂಗೊಳ್ಳುತ್ತವೆ. ಉದಾತ್ತಭಾವ, ಉನ್ನತಾಚಾರ, ಉರ್ಜಿತವಿಚಾರ ಉಂಟಾಗುತ್ತವೆ. ಈ ಮೂರು ಒಂದುಗೂಡಿದರೆ ಅದೇ ಈ ಜೀವನದ ತ್ರಿವೇಣಿಸಂಗಮ. ಅಥವಾ ಆ ಶಿವಾತ್ಮವಿದ್ಯಾಗುರುವಿನಿಂದ ಬಂದ ಸತ್ಕ್ರಿಯೆ ಸಮ್ಯಕ್‌ಜ್ಞಾನಗಳೆರಡರ ಕೂಡಲಸಂಗಮ. ಪ್ರಸ್ತುತ ಷಟ್‌ಸ್ಥಲ ಸಾಧನೆಯಲ್ಲಿ ತ್ಯಾಗಾಂಗದಲ್ಲಿ ಭಕ್ತ–ಮಾಹೇಶ್ವರಗಳೆರಡರ ಮತ್ತು ಆಚಾರ–ಗುರುಲಿಂಗಗಳೆರಡರ ಕೂಡಲಸಂಗಮ, ಶ್ರದ್ಧೆ ನಿಷ್ಠೆಗಳೆರಡು ಒಂದರೊಡನೆ ಇನ್ನೊಂದು ಹೊಂದಿಕೊಂಡು ತ್ಯಾಗಾಂಗವನ್ನು ಅವಧಾನಕ್ಕೆ ಕರೆದೊಯ್ಯುತ್ತವೆ. ಪರಮಪ್ರಸಾದಿಯನ್ನಾಗಿಸುತ್ತವೆ. ಇದೆಲ್ಲಕ್ಕೂ ಕಾರಣ ಗುರುಸಂಸ್ಕಾರ! ಅಂತಹದು ಗುರುಬೋಧರೂಪ ಜ್ಯೋತಿಯ ಆವಿಷ್ಕಾರ!

ಗುರುಸಂಸ್ಕಾರದ ವ್ಯಾಪ್ತಿ ಅಷ್ಟಿಷ್ಟಲ್ಲ, ತ್ಯಾಗಾಂಗವನ್ನು ಮಾತ್ರ ತುಂಬುವದಲ್ಲ. ತ್ರಿವಿಧಾಂಗಗಳನ್ನು ತುಂಬಿ ತುಳುಕುತ್ತದೆ, ಅಖಂಡಮಂಡಲವನ್ನು ಬೆಳ್ಳಂ ಬೆಳಗಿಸುತ್ತದೆ.

"ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ।
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ॥"

ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆಗಳನ್ನು ಅನುಗ್ರಹಿಸಿ ತ್ರಿವಿಧ ಮಲಗಳನ್ನು ತೊಳೆದು, ತ್ರಿವಿಧ ತನುಭಾವವನ್ನು ತೊಡೆದು, ತ್ರಿವಿಧ ಲಿಂಗ

ಗಳನ್ನು ಕರುಣಿಸಿ ಲಿಂಗಾಂಗನನ್ನಾಗಿಸಿ ಲಿಂಗಸುಖಾಸ್ಪದನನ್ನಾಗಿಸಿ ಲಿಂಗವೇ ತಾನಾಗುವಂತೆ ಕೃಪೆಗೈದ ಕರುಣಾಳು ಕಳಾಗುರುವನ್ನು ಕೆಳಗಿನ ಸ್ತವನದಂತೆ ತ್ರಿಕಾಲದಲ್ಲಿಯೂ ಬಗೆದುಂಬಿ ಬಯಸದೆ ಬೇರೆ ಬಾಳಬಟ್ಟೆಯಿಲ್ಲ.

ಓ ಗುರುವೆ,

ಉಂಡಂತಾದುದು ಸುಖವೆಡೆ
ಗೊಂಡಂತಾದುದು ಮನಕ್ಕೆ ದಿವ್ಯಾಮೃತಮಂ
ಕೊಂಡಂತಾದುದು ನಿಮ್ಮಂ
ಕಂಡಾಕ್ಷಣದೊಳ್ ಕ್ರಿಯಾತ್ಮ ಗುರುವೇ ಕೇಳ್ಳೆ!

ತೆಗೆದಪ್ಪುತೆ ಬಿಗಿದಪ್ಪುತೆ
ನೆಗೆದಾಡುತೆ ಕೊಬ್ಬಿಕೊನರಿ ಕುಡಿವರೆಯುತ್ತುಂ
ಹೊಗಳುತೆ ಹೊಮ್ಮುತೆ ರಮಿಸುವೆ
ನಗಲದೆ ನಿಮ್ಮಂ ಸುಮಂತ್ರಬೋಧಕ ಗುರುವೆ!

ಪುಳಕದ ಜಳಕದೊಳಂಗಂ
ಮುಳುಗಿ ಮನಂ ತುಳುಕಿ ತೂಗಿ ತೊನೆದಾಡುತ್ತುಂ
ಇಳಿವ ಸುಖಾನಂದಾಶ್ರುವ
ನೆಳಸುವೆ ಸತತಂ ಸುವೇಧದಾಯಕ ಗುರುವೆ!

ನಂಬಿಸಿ ಚುಂಬಿಸಿ ಪದಯುಗ
ಮಂ ಬಿಗಿಬಿಗಿ ದಪ್ಪಿ ಹೆಪ್ಪನಿಟ್ಟಂತೆ ಮನಂ
ತುಂಬಿದ ತೊರೆಯುವೊಲಿಹ ಸುಖ-
ಮಂ ಬಯಸುವೆ ನಾಂ ತ್ರಿಕಾಲ ಗುರುವರ ನಿನ್ನಾ!

# ಅನುಬಂಧ

ಪಾರ್ಶ್ವಸ್ಥಂ ತಿಮಿರಂ ಹಂತಿ
ಪ್ರದೀಪೋ ಮಣಿನಿರ್ಮಿತಃ
ಸರ್ವಗಾಮಿ ತಮೋ ಹಂತಿ
ಬೋಧದೀಪೋ ನಿರಂಕುಶಃ

—ಸಿ. ಶಿಖಾಮಣಿ

# ಮಾಹೇಶ್ವರ ಸ್ಥಲ ಅಥವಾ ಗುರುಸ್ಥಲ

**ಚಿತ್ಸಂಪಾದನೆ :**

"ತಮಸೋ ಮಾ ಜ್ಯೋತಿರ್ಗಮಯ !"

ಇದು ಮಾಹೇಶ್ವರ ಸ್ಥಲದ ಮನೋರಥ ; ಮುಖ್ಯ ಧ್ಯೇಯ. ಸತ್ಸಂಪಾದನೆಯಾದ ಮೇಲೆ ಚಿತ್ಸಂಪಾದನೆ ಕ್ರಮಪ್ರಾಪ್ತ. ಸಂಪಾದನೆಗೆ ಕ್ರಮ. ಸತ್ತಿಗೆ ಕ್ರಮವಿಲ್ಲ. ಚಿತ್ಸಂಪಾದನೆಯ ಗುರಿ ಕತ್ತಲೆಯಿಂದ ಬೆಳಕಿಗೆ ಬರುವಿಕೆ.

ಮಾಹೇಶ್ವರನು ಯಾವುದನ್ನೇ ಆಚರಿಸಲಿ,ಯಾವುದನ್ನೇ ಆರಾಧಿಸಲಿ ಅದೆಲ್ಲ ಅರುವಿನ ಮುಖದಲ್ಲಿ ಮೊದಲಾಗಬೇಕು. ಜ್ಞಾನ ಸಾಹಿತ್ಯವೇ ಇವನ ಸಂಪತ್ತು. ಇವನ ಜೀವಾಳವೇ ಸಂವಿತ್ತು ಮಾಹೇಶ್ವರ ಚಿದ್ಭಕ್ತ;ಚಿನ್ನಿಷ್ಠ. ಚಿದ್ಭಾವಿ.ಚಿಜ್ಜೀವಿ ಭಕ್ತಸ್ಥಲದಲ್ಲಿ ಅಸತ್ ನಿವೃತ್ತಿಯಾಗಿ ಸತ್ ಪ್ರತಿಷ್ಠವಾದರೆ ಮಾಹೇಶ್ವರ ಸ್ಥಲದಲ್ಲಿ ತಮಸ್ಸು ನಿವೃತ್ತಿಯಾಗಿ ಚಿಜ್ಜ್ಯೋತಿ ಪ್ರತಿಷ್ಠಿತವಾಗುತ್ತದೆ. ಅಲ್ಲಿ ಅಕ್ರಿಯೆ-ಅನಾಚಾರಗಳು ತೊಲಗಿದರೆ ಇಲ್ಲಿ ಅಜ್ಞಾನ-ಅಹಂಕಾರಗಳು ತೊಲಗುತ್ತವೆ. ಅಲ್ಲಿ ಕ್ರಿಯೆ ಅಳವಟ್ಟರೆ ಇಲ್ಲಿ ಕ್ರಿಯಾಗಮ ಅಳವಡುತ್ತದೆ. ಅಲ್ಲಿ ಆಚಾರ ಅಳವಟ್ಟರೆ ಇಲ್ಲಿ ಅರಿವಿನಾಚಾರ ಅಳವಡುತ್ತದೆ.

ಜ್ಞಾನ, ನಿಷ್ಠೆ, ಸ್ಥಿರಬುದ್ಧಿ, ಸುರಸಪ್ರಸಾದ, ಗುರುತ್ವ, ಅಕಾಯತ್ವ, ಆಗಮ, ಆಚಾರ ಇವು ಮಾಹೇಶ್ವರನ ಮುಖ್ಯ ಸಂಪತ್ತು. ಇವನ್ನು ಚಿತ್ಪ್ರಕಾಶದಲ್ಲಿ ಸಂಪಾದಿಸುವುದೇ ಮಾಹೇಶ್ವರನ ಧ್ಯೇಯ. ಜ್ಞಾನವೇ ಈತನ ಶಕ್ತಿ, ನಿಷ್ಠೆಯೇ ಈತನ ಭಕ್ತಿ. ಸ್ಥಿರಬುದ್ಧಿಯೇ ಈತನ ವೃದ್ಧಿ. ಸುರಸಪ್ರಸಾದ ಪ್ರಾಪ್ತಿಯೇ ಈತನ ಸಿದ್ಧಿ. ಗುರುಲಿಂಗವಾಗುವುದೇ ಈತನಿಗೆ ಸ್ವಸ್ವರೂಪಪ್ರಾಪ್ತಿ. ಈತನ ಆಗಮ-ಆಚಾರಗಳು ಲೋಕೋಪಕಾರ ಸಂಪತ್ತಿ. ಚಿತ್ಸ್ವರೂಪ ಪ್ರತಿಷ್ಠೆಯಾಗುವುದೇ ಈತನಿಗೆ ಕಳೆ.

ಆ ಚಿತ್ಕಳೆಯಲ್ಲಿರುವ ಮಾಹೇಶ್ವರನಿಗೆ ಕಾಲಕರ್ಮಗಳು ಹೊದ್ದವು. ಪೂರ್ವಾಶ್ರಯ ಪರಾಶ್ರಯಗಳು ಹೊದ್ದವು. ಪ್ರವೃತ್ತಿ ಪ್ರಕೃತಿಗಳು ಬಂಧಿಸವು. ಸಾಂಸಾರಿಕ ಮತ್ತು ಸಂಕುಚಿತ ಭಾವವುಂಟಾಗದು. ಆಶಾಪಾಶದ ಕಟ್ಟಿರದು. ಕೋಪತಾಪಗಳಿರವು. ದೇಹವಿಲ್ಲವಾಗಿ ದೋಷವಿಲ್ಲ, ಕರ್ಮವಿಲ್ಲವಾಗಿ ಪಾಶ ಬಂಧವಿಲ್ಲ ; ಹುಟ್ಟುಸಾವಿಲ್ಲ.

"ಹಿಡಿದ ವ್ರತವ ಬಿಡುವವನಲ್ಲ ; ಲಿಂಗವಲ್ಲದನ್ಯವನೊಲ್ಲ.
ಅನ್ಯದೈವಕ್ಕೆರಗ, ಮರ್ತ್ಯದ ಮನುಜರ ಪುನ್ನಿಸ ;
ಪರಸತಿ ಪರದ್ರವ್ಯವ ಮುಟ್ಟ, ಕೊಟ್ಟುದನೊಲ್ಲ ;
ಲಿಂಗನಿಷ್ಠಾಭಕ್ತಿಯ ಹಿಂಗ, ಕೊಲಬಾರದ ಅರಿಗಳ ಗೆಲುವ
ಕಲಿ ತಾನಾಗಿ ! ಅದೆಂತೆಂದಡೆ :
'ಪರಸ್ತ್ರೀಯಂ ಪರಾರ್ಥಂ ಚ ವರ್ಜಯೇತ್ ಭಾವಶುದ್ಧಿಮಾನ್ ।
ಲಿಂಗನಿಷ್ಠಾನಿಯುಕ್ತಾತ್ಮಾ ಮಾಹೇಶ್ವರ ಇತಿ ಸ್ಮೃತಃ॥'
ಎಂದುದಾಗಿ, ಜೀವಭಾವ ಹಿಂಗಿ, ಶಿವಭಾವದಿಂ ಜೀವಿಸಿಪ್ಪನಯ್ಯ,
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ ಮಾಹೇಶ್ವರನು."

ಸಂವಿದಾತ್ಮನಾದ ಮಾಹೇಶ್ವರನು ಅವನೊಬ್ಬ ಅಗ್ನಿಪುರುಷ. ಆತನಿಗೆ ತ್ರಿವಿಧಕರ್ಮವೆಂಬ ತೃಣದ ಸಂಕೋಲೆ ಬಿಗಿಯದು. ಪ್ರತಿಯಾಗಿ ತಾನೇ ಸುಟ್ಟುಹೋಗುತ್ತದೆ. ನೀರ ತಾವರೆಯಂತೆ ನಿರ್ಲೇಪನಾಗಿರುವನು.

ಚಿಜ್ಜ್ಯೋತಿಯಿಲ್ಲದೆ ಚಿತ್ತದ ಭ್ರಾಂತಿ ಹರಿಯದು; ಹೃದಯದ ಅಂಧಕಾರ ತೊಲಗದು. ಅಂಧಕಾರ ತೊಲಗದೆ ಆತ್ಮಜ್ಞಾನವುಂಟಾಗದು. 'ಅಂಗಭೇಧ ವಿಮೂಢರಲ್ಲಿ ಆತ್ಮಜ್ಞಾನವನರಸಲುಂಟೆ ? ದೂರ ಶ್ರವಣ, ದೂರದೃಷ್ಟಿಯವರಲ್ಲಿ ಸಮ್ಯಕ್ ದೃಕ್ಕನರಸಲುಂಟೆ ? ಸಮ್ಯಕ್ ಜ್ಞಾನವಿಲ್ಲದವರಲ್ಲಿ ಲಿಂಗವನರಸಲುಂಟೆ ? ಸೌರಾಷ್ಟ್ರ ಸೋಮೇಶ್ವರನ ನಿಜವನರಿಯದವರಲ್ಲಿ ನಿಜಸುಖವನರಸಲುಂಟೆ ?'

ನಿಜವನರಿಯಬೇಕಾದರೆ ವೇದ ಶಾಸ್ತ್ರ ಪುರಾಣಾದಿಗಳಿಂದ ಸಾಧ್ಯವಿಲ್ಲ, ಚಿಲ್ಲಿಂಗದುಪಾಸನೆ ಅಗತ್ಯ. ಚಿಲ್ಲಿಂಗವೊದಗಬೇಕಾದರೆ ಸದ್ಗುರುವು ಅಗತ್ಯ.

ಸಚ್ಚಿದ್ಘನರೂಪವೇ ಸರ್ವವೇದ, ಸರ್ವಶಾಸ್ತ್ರ; ಸತ್ಯಸ್ವಾನುಭಾವಿ, ಸತ್ಯಸ್ವಾನುಭವವಿಲ್ಲದ ಶ್ರೋತ್ರಿಯತ್ವವು ಸುಖವಿಲ್ಲ. ನಿಜವರಿಯಲು ನೆರವಾಗುವುದಿಲ್ಲ.

"ವೇದವಿತ್ತುಗಳು ಅಗ್ನಿಪುರುಷನ ದೇವರೆಂಬರಯ್ಯಾ!
ಶಾಸ್ತ್ರವಿತ್ತುಗಳು ಪಾಷಾಣವೇ ದೇವರೆಂಬರಯ್ಯಾ!
ಆತ್ಮವಿತ್ತುಗಳು ಆತ್ಮನೇ ದೇವರೆಂಬರಯ್ಯಾ!
ಶಬ್ದವಿತ್ತುಗಳು ಸಮಯಂಗಳನೆ ದೇವರೆಂಬರಯ್ಯಾ!
ಇವರೆಲ್ಲರೂ ನಮ್ಮ ಸೌರಾಷ್ಟ್ರ ಸೋಮೇಶ್ವರಲಿಂಗದ
ನಿಜವನರಿಯದೆ ಜನನ ಜಾಡ್ಯಂಗಳಿಂ ಭವಭಾರಿಗಳಾದರಯ್ಯಾ!"

'ಶಾಸ್ತ್ರಜಾಲಂ ಮಹಾರಣ್ಯಂ' ಎಂಬಂತೆ ಅದೊಂದು ಮಹಾ ಘೋರಾರಣ್ಯ. ಅದರಲ್ಲಿ ಹೊಕ್ಕವರಿಗೆ ಹಾದಿ ಸಿಗದು; ಕಣ್ಣುಕಾಣದು. ನಿಜವರಿಯುವ ನಿಶ್ಚಯ ಮನೋಭಾವವುಂಟಾಗದು. ಜನನ ಜಾಡ್ಯಗಳನ್ನು ಹರಿದು ಭವದ ಭಾರವನ್ನು ಇಳುಹುವ ದೃಕ್ಕ್ರಿಯಾಶಕ್ತಿ ಸಮನಿಸದು. ಇನ್ನು ನಿಜವರಿಯುವ ಮಾತೆಲ್ಲಿ? ನಿಜವನರಿಯಬೇಕಾದರೆ ನಿಜಾನುಭಾವಿಯಾದ ಶಿವಾತ್ಮವಿದ್ಯಾವಿದನಾದ ಶಿವದೀಕ್ಷಾನುಗ್ರಹಕರ್ತನಾದ ಶಿವರಾಧನ ತತ್ಪರನಾದ ಶ್ರೀಗುರುವೇ ಆಗಬೇಕು. ಅಂತಹ ಶ್ರೀಗುರುವಿನ ಕಾರುಣ್ಯಕ್ಕೆ ಒಳಗಾದರೆ ಯಾವ ವೇದಶಾಸ್ತ್ರಗಳ ಬೆನ್ನು ಬೀಳಬೇಕಾಗಿಲ್ಲ; 'ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು ಶಬ್ದಜಾಲಂಗಳಿಗೆ ಬಳಲದಿರು ಬಳಲದಿರು!' ಬಿದ್ದು ಬಳಲಬೇಕಿಲ್ಲ. ಆ ವೇದಶಾಸ್ತ್ರಗಳೂ ಅರಸಿ ಕಾಣದಿರುವ ಆ ಪರತರವಸ್ತುವನ್ನು ಆ ಪರಮ ಚಿತ್ಕಳೆಯನ್ನು ಶಿವಾತ್ಮವಿದ್ಯಾಗುರುವು ಕರಕಂಜಕ್ಕೆ ತಂದು ಕರುಣಿಸುತ್ತಾನೆ; ಹೃದಯ ಕಂಜದಲ್ಲಿ ತೊಳಗಿಸುತ್ತಾನೆ. ಶಿರಕಂಜದಲ್ಲಿ ಸುಳುಹುಗೊಳಿಸುತ್ತಾನೆ. ಸರ್ವಾಂಗವನ್ನು ಲಿಂಗವನ್ನಾಗಿಸುತ್ತಾನೆ. ಇಂತಿರುವಾಗ ಇವನು ಅಲ್ಲಿ ಇಲ್ಲಿ ಹುಡುಕಬೇಕಾಗಿಲ್ಲ. ವೇದಶಾಸ್ತ್ರಗಳನ್ನು ಓದಬೇಕಾಗಿಲ್ಲ. ಅದಲ್ಲ ಇದಲ್ಲ ಎಂದು ನೇತಿಗಳೆಯಬೇಕಾಗಿಲ್ಲ. ನೇತಿಗಳೆವುದು ವೀರಶೈವ ತತ್ತ್ವವಲ್ಲ.

"....ಒಂದಹುದು ಒಂದಲ್ಲವೆಂದರೆ,
ಶಿರ ತನ್ನದು, ದೇಹ ಮತ್ತೊಬ್ಬರದೆಂದಡೆ ಮೆಚ್ಚುವರೆ ಶಿವಜ್ಞಾನಿಗಳು?

ಸೌರಾಷ್ಟ್ರ ಸೋಮೇಶ್ವರ ಲಿಂಗವನು
ಅಹುದಲ್ಲವೆಂಬರೆ ಬಲ್ಲವರಂ ?"

ಅಹುದು–ಅಲ್ಲ ಎಂಬುದು ಶಿವಜ್ಞಾನಿಯ ಸೊಲ್ಲಲ್ಲ ; ಶಿವಾದ್ವೈತಿಯ ಮಾತಲ್ಲ.

ಶಾಸ್ತ್ರಭ್ರಮೆಯಂತೆ ಶರೀರಭ್ರಮೆಯುಳ್ಳವರಿಗೂ ಚಿತ್ಸಂಪಾದನೆಯಾಗದು. ದೇಹವಾಸನೆಯುಳ್ಳವರಿಗೆ ದೇವವಾಸನೆ ದಕ್ಕದು.

"ಜಿಹ್ವೇಂದ್ರಿಯ, ಗುಹ್ಯೇಂದ್ರಿಯದಿಚ್ಛೆಯುಳ್ಳನ್ನಕ್ಕ ಜಂಗಮವಲ್ಲ.
ಪುತ್ರ, ಮಿತ್ರ, ಕಳತ್ರದಲ್ಲಿ ಮೋಹವುಳ್ಳನ್ನಕ್ಕ ಭಕ್ತನಲ್ಲ.
ಮಾತಿನ ಮಾಲೆಯ ಹೆಚ್ಚುಕುಂದು ಹೋರಟೆಯುಳ್ಳನ್ನಕ್ಕ ಅದ್ವೈತಿಯಲ್ಲ.
ಅಂಗಪ್ರಾಣದಾಶೆಯುಳ್ಳನ್ನಕ್ಕ ನಿಸ್ಪೃಹನಲ್ಲ.
ಸೌರಾಷ್ಟ್ರ ಸೋಮೇಶ್ವರ ಲಿಂಗವನರಿಯದಕ್ಕ ಸ್ವಾನುಭಾವಿಯಲ್ಲ."

ಇಚ್ಛೆ ಮೋಹ ಆಶೆ ಹೆಚ್ಚುಕಡಿಮೆ ಎಂಬ ಹೋರಾಟ ಇವು ಉಪಾಸಕನಿಗೆ ಉಚಿತವಲ್ಲ. ಇವುಗಳಿಂದ ಚಿತ್ಸಂಪಾದನೆಯಾಗದು. ಚಿತ್ಸಂಪಾದನೆಯಾಗದೆ ಲಿಂಗಜ್ಞಾನವಾಗದು. ಲಿಂಗ (ಸ್ವಯ)ದ ಜ್ಞಾನವಾಗದೆ ಸ್ವಾನುಭವ ವಳವಡದು. ಆದ್ದರಿಂದ ಶಾಸ್ತ್ರವಾಸನೆ ಶರೀರವಾಸನೆಗಳನ್ನು ಮೊದಲು ಬಿಡಬೇಕು. ಜತೆಗೆ ಲೋಕವಾಸನೆಯನ್ನೂ ತೊಲಗಿಸಬೇಕು.

"ಮಾತ ಕಲಿತು ಮಂಡೆಯ ಬೋಳಿಸಿ,
ವೇಷಭಾಷೆಗಳಿಂ ದೇಶ ಕೋಶ ಭುವನಂಗಳ ತಿರುಗಿ
ತೊಳಲಿ ಬಳಲಿ ನಿಂದರೇನಾಯಿತ್ತೋ ?
ಜಟಾಬಂಧದಿಂ ಗಡ್ಡದ ಹಿರಿಯರಪ್ಪಿ ಭೋ ! ನಾವೆಂದು !
ಬಿಂದು ಬೀಸರವೋಗದಿರ್ದರೇನಾಯಿತ್ತೋ ?
ಹೆಚ್ಚುಕುಂದು ಬಿಚ್ಚದನ್ನಕ್ಕ,
ತಥ್ಯಮಿಥ್ಯ ರಾಗದ್ವೇಷ ಭಯಮೋಹಗಳುಳ್ಳನ್ನಕ್ಕ,
ಸೌರಾಷ್ಟ್ರ ಸೋಮೇಶ್ವರ ಲಿಂಗವೆಂತು ಸಾಧ್ಯವಪ್ಪುದಯ್ಯಾ ?"

ಈ ತ್ರಿವಿಧ ವಾಸನೆಗಳು ಅನೇಕ ಭ್ರಾಂತಿಗಳಿಗೆ ಆಗರ. ಚಿತ್ಸಂಪಾದನೆಯಿಲ್ಲದವರಿಗೆ ಇವೆಲ್ಲ ಕಾಡುತ್ತವೆ ; ಬೀಡು ಮಾಡಿರುತ್ತವೆ,

"ಕಂಡೆ ಕಾಣೆನೆಂಬುದು ಕಂಗಳ ಭ್ರಮೆ.
ಕೂಡಿದೆನಗಲಿದೆನೆಂಬುದು ಕಾಯಭ್ರಮೆ.
ಅರಿದೆ ಮರೆದೆನೆಂಬುದು ಚಿದೋಹಂ ಭ್ರಮೆ.
ಓದು ವೇದಂಗಳ ಜಿನುಗುವುದು ಮನದ ಭ್ರಮೆ.
ಇಹ ಪರಂಗಳಾಸೆಗೆಯ್ವುದು ಜೀವಭ್ರಮೆ.
ಸೌರಾಷ್ಟ್ರ ಸೋಮೇಶ್ವರನೆಂಬುದು ಸಕಲಭ್ರಮೆ."

ಶ್ರುತಿಜ್ಞಾನ ಅರಿವು ಮರವೆಗಳಿಗೆ ಗುರಿ ಮಾಡುತ್ತದೆ. ಶರೀರ ಜ್ಞಾನ (ವಾಸನೆ) ಕಂಡೆ–ಕಾಣೆ, ಕೂಡಿದೆ–ಅಗಲಿದೆ ಎಂಬ ಭ್ರಾಂತಿಗೆ ಈಡುಮಾಡುತ್ತದೆ. ಲೋಕಜ್ಞಾನ ಇಹಪರಗಳ ಆಸೆಗೆ ಹಚ್ಚುತ್ತದೆ. ಸ್ಥಾವರಲಿಂಗ ವಾಸನೆ ಸಕಲ ಅಂದರೆ ಸಾಕಾರ ಭ್ರಮೆಗೆ ಮೂಲಾಗುತ್ತದೆ.

ಪ್ರಕೃತಿ ಜ್ಞಾನ ಯಥಾರ್ಥಜ್ಞಾನವಲ್ಲ. ಅಯಥಾರ್ಥ ಜ್ಞಾನವೇ ಭ್ರಮೆ. ಯಥಾರ್ಥ ಜ್ಞಾನವೇ ಪ್ರಮೆ. ಭ್ರಮೆ ಬಂಧಕಾರಣ. ಪ್ರಮೆ ಮೋಕ್ಷ ಕಾರಣ. ಭ್ರಮೆ ಭವಕ್ಕೆ ಕಾರಣ. ಭ್ರಮೆಯಿಂದ ತಾಮಸಾದಿ ಗುಣಗಳು ತನುಗುಣಗಳು ಹೆಚ್ಚುತ್ತವೆ. ತತ್ತ್ವದ ಮಾರ್ಗ ಮರೆಯಾಗುತ್ತದೆ. ತತ್ ಸಾಧನೆಗೆ ಆತಂಕವಾಗುತ್ತದೆ.

"ತನುಗುಣ ಮನಗುಣ ಪ್ರಾಣಗುಣಾದಿಗಳಲ್ಲಿ
ಹುದುಗಿದಡೆ, ಪಂಚೇಂದ್ರಿಯ ಅರಿಷಡ್ವರ್ಗಂಗಳೊಳು
ಮನಕೂರ್ತು ಬೆರಸಿದಲ್ಲಿ
ಆ ಮನದ ಹಸ್ತದಲ್ಲಿ ಲಿಂಗವಿಲ್ಲ ; ಲಿಂಗವಿಲ್ಲವಾಗಿ ಭಕ್ತಿಯಿಲ್ಲ.
ಭಕ್ತಿ ಇಲ್ಲವಾಗಿ ವಿವೇಕವಿಲ್ಲ ; ವಿವೇಕವಿಲ್ಲವಾಗಿ ಅರಿವಿಲ್ಲ.
ಅರಿವಿಲ್ಲವಾಗಿ ಸುಜ್ಞಾನವಿಲ್ಲ ; ಸುಜ್ಞಾನವಿಲ್ಲವಾಗಿ
ಪರಮಾರ್ಥ ಘಟಿಸದು. ತನುಗುಣಾದಿ ಇವೆಲ್ಲವ
ಕಳೆದುಳಿದಲ್ಲಿ ಮನದ ಹಸ್ತದಲ್ಲಿ ಲಿಂಗವಿದ್ದಿತ್ತು.

ಲಿಂಗದಲ್ಲಿ ಮನ ಸಂದಿತ್ತು. ಮನ ಸಂದಲ್ಲಿ
ಸೌರಾಷ್ಟ್ರ ಸೋಮೇಶ್ವರ ಸುಸ್ಥಿರವಾದನು."

ತನು ಗುಣಾದಿಗಳೇ ತಮಸ್ಸು. ಇದಿರುವಲ್ಲಿ ಲಿಂಗವಸ್ತು ತೋರದು ; ಭಕ್ತಿ ಭಾವ ಬಾರದು. ಕ್ರಿಯಾಜ್ಞಾನಗಳನ್ನು ವಿಭಾಗಿಸಬಲ್ಲುದು. ಅಂಗ-ಲಿಂಗರನ್ನು ಬೇರ್ಪಡಿಸಬಲ್ಲುದು. ಇದರಿಂದಾಗಿ ಚಿಜ್ಜ್ಯೋತಿ ಅಗತ್ಯ. ಚಿತ್ಪ್ರಕಾಶದಲ್ಲಿ ಪರಮಾರ್ಥ ಗೋಚರಿಸುತ್ತದೆ, ಘಟಿಸುತ್ತದೆ ; ಸುಸ್ಥಿರವಾಗುತ್ತದೆ.

"ಬ್ರಹ್ಮಜ್ಞಾನದಿಂದ ಬ್ರಹ್ಮವನರಿತರಿವು ಆ ಪರಬ್ರಹ್ಮದೊಡವೆರಸಿ
ನಿಂದಿತ್ತು. ಬ್ರಹ್ಮಬ್ರಹ್ಮಾಂಡ ಬೇರಿಲ್ಲದಿಪ್ಪಂತೆ,
ಆಕಾಶ ನೀಲ ಬೇರಿಲ್ಲದಿಪ್ಪಂತೆ, ಹಣ್ಣು ರುಚಿ ಬೇರಿಲ್ಲದಿಪ್ಪಂತೆ.
ದ್ವೈತವೇ ಅದ್ವೈತವಾದ ಬಳಿಕ ದ್ವೈತವೆಂದೆನಲುಂಟೆ ?-ಇಲ್ಲವಾಗಿ,
ಅರಿವು ಮರವಿಗೆ ತೆರಹಿಲ್ಲದೆ ಕರಿಗೊಂಡರಿವು ತಾನಾಗಿರಲು,
ನಾನಾಪರಿಯ ವಿಚಿತ್ರ ಚಿತ್ರಂಗಳತ್ಯಾಶ್ಚರ್ಯವಪ್ಪಂತೆ ತೋರುತ್ತಿರಲು,
ಅದು ವಿಪರೀತವೆಂದೆನಲುಂಟೆ ?
ಮುನ್ನ ತಾನಾಗಿರ್ದು ಇನ್ನು ಬೇರೆನಲುಂಟೆ ? ಇಲ್ಲವಾಗಿ
ಆದಿಮಧ್ಯಾಂತ ವಿರಹಿತವಾದ ಮಹಾ ಘನವೆ,
ಊಹಿಸಲಿಲ್ಲದ ಉಪಮೆ, ಭಾವಿಸಲಿಲ್ಲದ ಭಾವ,
ಅರಿಯಲಿಲ್ಲದ ಅರಿವು ತಾನಾಗಿ, ಸೌರಾಷ್ಟ್ರ ಸೋಮೇಶ್ವರನೆಂಬ
ನುಡಿಯನೊಳಕೊಂಡು ನಿಂದ ಸಹಜ,
ಭರಿತವಾಗಿರ್ದು ಇಲ್ಲದಂತಿಹ ಭೇದವನೇನೆಂಬೆನಯ್ಯಾ !"

ಈ ದಿಸೆಯಲ್ಲಿ ಈ ವಚನ ಅರ್ಥಪೂರ್ಣವಾಗಿದೆ. ಇದು ಚಿತ್ಸಂಪಾದನೆಯ ಪೂರ್ಣರೂಪ ; ಚರಮಗುರಿ.

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಜ್ಞಾನಸ್ವರೂಪ ಬ್ರಹ್ಮ; ಬ್ರಹ್ಮಸ್ವರೂಪ ಜ್ಞಾನ. ಯಾವಭೇದವಿಲ್ಲ. ಆ ಅರಿವು ಆ ಪರಬ್ರಹ್ಮದಲ್ಲಿ ಕರಿಗೊಂಡ ಬಳಿಕ ನಿಷ್ಪತ್ತಿಯಾದ ಬಳಿಕ ಬೇರಿಲ್ಲದಂತಾದ ಬಳಿಕ ಅರಿವುಮರವು ಎರಡಕ್ಕೂ ತೆರವಿಲ್ಲ

ದಂತಿರುತ್ತದೆ ; ತೆರೆಮುಸಗುಗೊಂಡಿರುತ್ತದೆ. ನಿರಾಕಾರವೂ ಸಾಕಾರವಾಗಿ ಸಾಕಾರವೂ ನಿರಾಕಾರವಾಗಿ ಚಿತ್ರವಿಚಿತ್ರವೆಲ್ಲವೂ ಚಿತ್ ಸ್ವರೂಪವಾಗಿ ಕಾಣುತ್ತದೆ. ಆಕಾಶ ನೀಲಗಳಂತೆ ಕಂಡು ಕಾಣದೆ, ಕಾಣದೆ ಕಾಣುವರೂಪಾ ರೂಪವುಳ್ಳುದಾಗಿರುತ್ತದೆ. ಹಣ್ಣಿಲ್ಲದೆ ರುಚಿಯಾಗದು ; ರುಚಿಯಿರದೆ ಹಣ್ಣೆನಿಸದು. ಅಂತೆಯೇ ಜ್ಞಾನ ಜ್ಞಾತೃಗಳೆರಡೂ ಜ್ಞೇಯಸ್ವರೂಪವೇ ಆಗಿರುತ್ತವೆ, ಜ್ಞಾತೃ ಜ್ಞೇಯಗಳು ಹಣ್ಣು ರುಚಿಗಳಂತಿರುತ್ತವೆ. ಜ್ಞಾನ ಜ್ಞಾತೃಗಳು ನೀಲಾಕಾಶಗಳಂತಿರುತ್ತವೆ ಬ್ರಹ್ಮ ಬ್ರಹ್ಮಾಂಡಗಳಂತೆ ಎಲ್ಲವೂ ಸತ್ಯವಾಗಿರುತ್ತವೆ ಅನಂತವಾಗಿರುತ್ತವೆ. ಮಧ್ಯದಲ್ಲಿ ಭಿನ್ನವಾಗಿ ತೋರಿದರೂ ಆದ್ಯಂತದಲ್ಲಿ ಭಿನ್ನವಲ್ಲ; ಅಣುಮಾತ್ರವಲ್ಲ. ಅಂತಃಕರಣಗಳಿಂದ ಪರಿಮಿತವಲ್ಲ. ಅಂತಃಕರಣಗಳನ್ನೂ ಅಳವಡಿಸಿಕೊಂಡು ಅತೀತವಾಗಿರುತ್ತದೆ.

ಅದು ಊಹೆಗೆ ನಿಲುಕದ ಉಪಮೆ ಭಾವಕ್ಕೆ ಬಾರದ ಭಾವ. ಅರಿವಿಗೆ ಅಳವಡದ ಅರಿವು ; ಅರಿಯಲಿಲ್ಲದ ಅರಿವು. ಅದು ನುಡಿಯನೊಳಕೊಂಡಿದ್ದರೂ ನುಡಿಯ ಉಪಾಧಿಯಿಲ್ಲ. ಆಗ ಅದು ವಾಚ್ಯವೂ ಅಲ್ಲ, ವಾಚಕವೂ ಅಲ್ಲ. ಅದು ಸಹಜ; ಅದು ಅವಾಗರುಪ್ರಣವ ಸ್ವರೂಪ. ವಿಶ್ವಭರಿತವಾಗಿ ವಿಶ್ವರೂಪವಾಗಿ ಇದ್ದು ವಿಲಕ್ಷಣವಾಗಿರುತ್ತದೆ. 'ಸ ಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಂ' ವಿಶ್ವರೂಪವೂ ಅದೇ ! ವಿಯದ್ರೂಪವೂ ಅದೇ ! ವಿಶ್ವಾತೀತ ರೂಪವೂ ಅದೇ ! ಇದ್ದೂ ಇಲ್ಲದಿಂತಿರುವ ವಸ್ತುವು ಅದೇ !

'ಅರಿಯಲಿಲ್ಲದ ಅರಿವು ತಾನಾಗಿ' ಎಂಬ ಅರ್ಥಪೂರ್ಣವಾಣಿಯ ವಿಚಾರ ಅಗತ್ಯ. ಪೂರ್ಣಜ್ಞಾನವುಳ್ಳ ವಾಣಿಯಿದು. ಅರಿತೆನೆಂದರೆ ಅಜ್ಞಾನಕ್ಕಿಂಬುಂಟು.

ಅರಿವು ಮರೆವು (ಜ್ಞಾನ-ಅಜ್ಞಾನ) ಎಂಬ ದ್ವಂದ್ವಕ್ಕೆ ತೆರಹಿಲ್ಲದ ವಸ್ತುವದು. ಅದನ್ನು ಕುರಿತು ಅರಿತೆನೆಂದು ಹೇಳಲಿಂಬಿಲ್ಲ. ಅರಿತೆನೆಂದರೆ ಆದೇ ಅರಿವಿಗೆ ಕೊರತೆ. ಭರಿತತ್ವಕ್ಕೆ ಕೊರತೆ.

ಸತ್ ಚಿತ್ತದ ವಿಷಯು. ಚಿತ್ ಬುದ್ಧಿಯ ವಿಷಯು. ಬ್ರಹ್ಮದಂತೆ ಆತ್ಮವೂ ಚಿತ್ ಸ್ವರೂಪವಾಗಿದೆ. ಅಂತೆಯೇ ಅದು ಜಡವೆನಿಸದೆ ಚೇತನವೆನಿಸುತ್ತದೆ. ನಿತ್ಯವೂ ಸತ್ಯವೂ ಆಗಿದೆ. ಅಂತಹ ಆ ಆತ್ಮಸ್ವರೂಪವನ್ನು ಯಥಾರ್ಥವಾಗಿ ಅರಿಯುವುದೇ ಬುದ್ಧಿಯ ಕಾರ್ಯ. ಚಿತ್ತದ ವ್ಯಾಪಾರ ಬುದ್ಧಿಗೆ, ಬುದ್ಧಿಯ

ವ್ಯಾಪಾರ ಅಹಂಕಾರಕ್ಕೆ ಒಳಪಟ್ಟಿರುತ್ತವೆ ; ಮಮಕಾರಕ್ಕೆ ಅಧೀನವಾಗಿರುತ್ತದೆ. ಇದರಿಂದಾಗಿ ಬುದ್ಧಿಗೆ ತಮಸ್ಸಿನ ಆವರಣವುಂಟು. ತಮಾವೃತವಾಗಿ ಆತ್ಮನ ಯಥಾರ್ಥಸ್ವರೂಪವನ್ನು ತಿಳಿಯದಾಗುತ್ತದೆ.

"ಜ್ಯೋತಿಯ ತಮ ಎಡೆಗೊಂಡಂತೆ, ಚಂದ್ರಮನ ರಾಹು ಎಡೆಗೊಂಡಂತೆ
ನಿಧಾನವ ಸರ್ಪನೆಡೆಗೊಂಡಂತೆ, ಅಂಬುಧಿಯ ಅನಲನೆಡೆಗೊಂಡಂತೆ,
ಮನವ ಮಾಯೆಯೆಡೆಗೊಂಡು ನಿಮ್ಮ ನೆನಹು ನೆಲಗೊಳಲೀಯದೆ
ಮರಣಕೊಳಗು ಮಾಡುತ್ತಿದ್ದುದಯ್ಯಾ ! ಈ ತಮವ ಪರಿಹರಿಸಿ
ಎನ್ನನುಳುಹಿಕೊಳ್ಳಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!"

ಬುದ್ಧಿಹಸ್ತದಲ್ಲಿ ಗುರುಲಿಂಗಧಾರಣವಾಗದೆ ತಮಸ್ಸು ತೊಲಗದು ; ತೇಜ ಬೆಳಗದು. ಕಾರಣ ಚಿನ್ಮಯ ಗುರುಲಿಂಗಧಾರಣವಾಗಬೇಕು. ಆದರೆ ಆಗ ತಮಸ್ಸು ಬಳಿ ಸುಳಿಯದು. 'ಜ್ಯೋತಿಯಿದ್ದ ಮನೆಯಲ್ಲಿ ಕತ್ತಲೆ ಬಾರದು. ಲಿಂಗವಿದ್ದಂಗದಲ್ಲಿ ಅಜ್ಞಾನವಿರದು. ಅಜ್ಞಾನವಿಲ್ಲವಾಗಿ ಅಂಗವಿಕಾರವಿಲ್ಲ....' ಎಂದು ತೋಂಟದ ಸಿದ್ಧಲಿಂಗೇಶ್ವರರ ಅಭಿಪ್ರಾಯ.

ಅಸತ್ ಚಿತ್ತಮಲವಾದರೆ ಅಚಿತ್ ಬುದ್ಧಿಯ ಮಲ. ಮಂತ್ರ ಸಂಸ್ಕಾರದಿಂದ ರೂಪಿತವಾಗುವ ಗುರುಲಿಂಗವು ಬುದ್ಧಿಯ ಮಲವನ್ನು ಕಳೆಯಬಲ್ಲ ಕಳೆಯುಳ್ಳದ್ದಾಗಿದೆ.

ಚಿತ್ಸಂಪಾದನೆಗೆ ಸಾಕ್ಷಾತ್‌ಸಾಧನ ಶ್ರೀಗುರು ಬೋಧಿಸಿದ ಮಂತ್ರ. ದೀಕ್ಷಾಸಂಸ್ಕಾರದೊಡನೆ ಬೋಧಿಸಿದುದೇ ಮಂತ್ರ. ಅದುವೇ ಗುರುಲಿಂಗಸ್ವರೂಪ. ದೀಕ್ಷಾಸಂಸ್ಕಾರವಿಲ್ಲದೆ ಬೋಧಿಸಿದಂದು ಮಂತ್ರವಾಗದು, ಗುರುಲಿಂಗಸ್ವರೂಪ ಮತ್ತೂ ಆಗದು. ಇದರಿಂದ ಚಿತ್ಸಂಪಾದನೆಯಾಗದು.

ಕ್ರಿಯಾದೀಕ್ಷೆಯಿಂದ ಅರ್ಚನವಿಧಾನ, ಆಚಾರಗಳು, ಮಂತ್ರದೀಕ್ಷೆಯಿಂದ ಪರಮಶಿವಾನುಭವವು ಉಂಟಾಗುತ್ತವೆ. ಉಂಟಾಗುವಂತೆ ಮಾಡುವುದೇ ತ್ರಿವಿಧದೀಕ್ಷಾಸಂಸ್ಕಾರ.

ಕ್ರಿಯಾದೀಕ್ಷಾ ಸಂಸ್ಕಾರದಿಂದ ಅರ್ಚನ ಅರ್ಪಣ ಆಚಾರಾದಿಗಳು ಅಳವಡುವಂತೆ ಮಂತ್ರದೀಕ್ಷಾಸಂಸ್ಕಾರದಿಂದ ಶ್ರವಣ ಮನನ ನಿದಿಧ್ಯಾಸಾದಿಗಳು

ಉಂಟಾಗುತ್ತವೆ. ಇವು ಚಿತ್ಸಂಪಾದನೆಗೆ ಸಾಧನಗಳು, ಇವುಗಳಿಂದ ಬುದ್ಧಿ ಶುದ್ಧವಾಗಿ ಚೇತನಗೊಳ್ಳುತ್ತದೆ. ಜಲಜನ್ಯಬುದ್ಧಿ ಜಡವಾಗಿರುವುದು ಸಹಜ. ಅಂತೆಯೆ ಆಕಾಶಾತ್ಮಗಳ ಅಂಶಗಳಿಂದ ಕೂಡಿರುವ ಕಾರಣ ನಾದಮಯವಾಗಿ ಪ್ರಕಾಶಮಯವಾಗಿ ಚೇತನಯುಕ್ತವಾಗಿಯೂ ಇರುತ್ತದೆ ಜಲಾಂಗವೇ ಮೂಲ ಮತ್ತು ಮುಖ್ಯವಾಗಿರುವುದರಿಂದ ಜಡಭಾವ ಪ್ರಾಕೃತಿಕವಾಗಿರುತ್ತದೆ ; ಪ್ರಭೂತ ವಾಗಿರುತ್ತದೆ. ಈ ಜಡತಮಸ್ಸಿನಿಂದ ಜ್ಯೋತಿರ್ಲೋಕಕ್ಕೆ ಹೋಗಿ ಸೇರಬೇಕಾದರೆ ಮಂತ್ರಮೂರ್ತಿ ಗುರುಲಿಂಗೋಪಾಸನೆ ಅತ್ಯವಸರ. ಮಂಗಳಕ್ರಿಯೆ ಸದ್ರೂಪತ್ವಕ್ಕೆ ಸಾಧನವಾದರೆ ಮಂತ್ರಮನನ ಚಿದ್ರೂಪತ್ವಕ್ಕೆ ಸಾಧನ.

ಪ್ರಣವ ಪಂಚಾಕ್ಷರವು ಪರಮ ಶ್ರೇಷ್ಠ. ಪರವಸ್ತುನಿಷ್ಠ. ಆದರಿಂದ ಅದು ಮಹಾಮಂತ್ರ. ಅದರ ಅನುಷ್ಠಾನದಿಂದ ಉಂಟಾಗುತ್ತದೆ ಆ ಚಿನ್ಮಯನ ಅಪರೋಕ್ಷ ಜ್ಞಾನ. ಉಳಿದ ಇನ್ನಾವ ಮಂತ್ರಗಳಿಂದ ಆ ಚಿನ್ಮಯನ ಆ ಅಪರೋಕ್ಷ ಜ್ಞಾನವುಂಟಾಗದು.

ಗುರುದೇವನಿಂದಲೆ ಅಂಗತ್ವ. ಗುರುದೇವನಿಂದಲೆ ಲಿಂಗತ್ವ. ಗುರುದೇವ ನಿಂದಲೆ ಅಂಗಲಿಂಗೈಕತ್ವ. ಗುರುದೇವನಿಗೂ ಗುರುಲಿಂಗಕ್ಕೂ ಅಭೇದತ್ವ. ಗುರುದೇವನಿಲ್ಲದೆ ಷಡಕ್ಷರಗಳಿಗೆ ಮಂತ್ರತ್ವಬಾರದು.- ಷಡ್ಲಿಂಗಗಳಿಗೆ ಲಿಂಗತ್ವವ ಳವಡದು. ಶಿಷ್ಯನಾಗಲಿ ಭಕ್ತನಾಗಲಿ ಷಟ್‌ಸ್ಥಲ ಸಂಪನ್ನನಾಗನು. ಭವಿ ಭಕ್ತನಾಗನು. ಲಿಂಗ ಜಂಗಮವೆನಿಸದು.

ಲಿಂಗವು ಅವ್ಯವಹಿತವಾದ ವಸ್ತು. ಸಾಧಕಾಂಗನಲ್ಲಿ ಸಮನ್ವಯಗೊಂಡ ವಸ್ತು. ಅಂದರೆ ಅವಿರಳವಾಗಿರುವ ವಸ್ತು. ಅದು ತಮಸ್ಸಿನಿಂದ ಆಚ್ಛಾದಿತ ವಾಗಿರುತ್ತದೆ; ಅಂದರೆ ಅನಭಿವ್ಯಕ್ತವಾಗಿರುತ್ತದೆ. ಅದರ ಅಭಿವ್ಯಕ್ತಿಯೇ ಗುರುದೇವನ ಅನುಗ್ರಹ ಫಲ, ಅದುವೇ ಗುರುಲಿಂಗಾಭಿವ್ಯಕ್ತಿ. ಅದುವೇ ಚಿತ್ಸಂಪತ್ಪ್ರಾಪ್ತಿ.

ಬುದ್ಧಿಯಂತೆ ಬುದ್ಧಿವಂತಿ ಆಣಿಯಾಗಿರುವ ಆಣಿಮುತ್ತಲ್ಲ. ಅದು ತನ್ನಿಂದ ತಾನೇ ಬರುವುದಲ್ಲ. ಗುರುದೇವನ ದೀಕ್ಷೆ ಶಿಕ್ಷೆಗಳಿಂದ ಬರುವುದು, ಬುದ್ಧಿ ಪ್ರಕೃತಿದತ್ತ ವರ. ಬುದ್ಧಿವಂತಿಕೆ ಗುರುದತ್ತ ವರ. ಬುದ್ಧಿ ಬತ್ತಿ ; ಬುದ್ಧಿ ವಂತಿಕೆ ಜ್ಯೋತಿ. ಆ ಜ್ಯೋತಿಯೇ ಗುರುಲಿಂಗ. ಅದರ ಉಪಾಸನೆಯಿಂದ ಸುಬುದ್ಧಿ ಸಿದ್ಧಿ.

ಬುದ್ಧಿ ಹಸ್ತದಲ್ಲಿ ಗುರುಲಿಂಗ ಅಭಿವ್ಯಕ್ತವಾಗಲು ಸಾಕ್ಷಾತ್ಸಾಧನ ಗುರು ಪದಿಷ್ಟ ಪ್ರಣವ ಪಂಚಾಕ್ಷರ ಮಂತ್ರ. ಆ ಮಂತ್ರ ಮನನದಿಂದ ನಿದಿಧ್ಯಾಸದಿಂದ ಆ ಅವ್ಯವಹಿತಾತ್ಮ ವಸ್ತುವಿನ ಅಪರೋಕ್ಷ ಜ್ಞಾನವುಂಟಾಗುತ್ತದೆ. ಅದುವೇ ಚಿತ್ಸಂಪಾದನೆ. ಅದರಿಂದ ಬುದ್ಧಿಗತ ಸಂಶಯ, ಜಡಭಾವ, ಅಸಂಭಾವನ, ವಿಪರೀತಭಾವನಾದಿಗಳು ತೊಲಗುತ್ತವೆ. ವಿಶಿಷ್ಟಜ್ಞಾನ ತೊಳಗುತ್ತದೆ, ಬಾಳು ತಿಳಿಗೊಳ್ಳುತ್ತದೆ.

ಆತ್ಮವು ಸತ್ತಾಗಿರುವಂತೆ ಚಿತ್ ಆಗಿಯೂ ಇದೆ. ಅದು ಎಲ್ಲಕ್ಕೂ ಅಧಿಷ್ಠಾನವಾಗಿರುವಂತೆ ಪ್ರಕಾಶವೂ ಆಗಿದೆ. ಆದ್ದರಿಂದ ಅದು ಚಿದ್ರೂಪವೆನಿಸಿದೆ. ಅದುವೇ ತನ್ನ ನಿಜತ್ವ ರೂಪು; ಸಹಜಸ್ವರೂಪು. ಆದ್ದರಿಂದ ಚಿತ್ಸಂಪಾದನೆ ಯೆಂದರೆ ಆತ್ಮಸಾಕ್ಷಾತ್ಕಾರ; ಆತ್ಮವೇ ತಾನೆಂಬರಿಕೆ.

ಬುದ್ಧಿ ವಿಷಯೇಂದ್ರಿಯ ಸಂಬಂಧದಿಂದ ಅಜ್ಞಾನಕ್ಕೊಳಗಾಗುತ್ತದೆ, ಅದೇ ಆತ್ಮಸಂಬಂಧದಿಂದ ಜ್ಞಾನಕ್ಕೊಳಗಾಗುತ್ತದೆ. ಅಂತಹ ಆತ್ಮಸಂಬಂಧದ ಸಂಪ್ರಾಪ್ತಿಗಾಗಿ ಮಂತ್ರಮಯ ಗುರುಲಿಂಗೋಪಾಸನೆ ಮುಖ್ಯವಾಗಿದೆ.

ಚಿತ್ ಸನ್ನಿಹಿತವಾಗದಾಗ ತಮಸ್ಸಿರುತ್ತದೆ, ತಮಸ್ಸಿನಲ್ಲಿ ತನ್ನ ಮರವು ತನಗಿರುತ್ತದೆ. ತನ್ನ ತಾನು ಮರೆಯುವುದಕಿಂತ ಬೇರೆ ಬಂಧವಿಲ್ಲ; ಬವಣೆಯಿಲ್ಲ. ಮರವೆಯಲ್ಲಿ ಮತಿ ಜಡವಾಗಿರುತ್ತದೆ; ಬಹಿರ್ಮುಖವಾಗಿರುತ್ತದೆ, ಆತ್ಮಾನಂದಕ್ಕೆ ಪ್ರತಿಕೂಲವಾಗಿರುತ್ತದೆ; ಪ್ರಕಾಶರಹಿತವಾಗಿರುತ್ತದೆ.

ಭಕ್ತಸ್ಥಲದಲ್ಲಿ ಗುರುದೇವನನ್ನು ಮುಖ್ಯವಾಗಿ ಎದುರಿಟ್ಟು ಪೂಜಿಸಿದರೆ ಮಾಹೇಶ್ವರ ಸ್ಥಲದಲ್ಲಿ ಲಿಂಗವನ್ನಾಗಿಸಿ ತನ್ನೊಳಗಿಟ್ಟುಕೊಂಡು ಪೂಜಿಸುತ್ತಾನೆ. ಅಂದರೆ ಅಲ್ಲಿ ಆಚಾರ ಪ್ರಧಾನವಾಗಿದ್ದು ಪರೋಕ್ಷ ಜ್ಞಾನವಿರುತ್ತದೆ. ಇಲ್ಲಿ ವಿಚಾರ ಪ್ರಧಾನವಾಗಿದ್ದು ಅಪರೋಕ್ಷವಾಗಿಯೂ ಇರುತ್ತದೆ. ಅಲ್ಲಿ ಆರಾಧ್ಯ ವಸ್ತು ಆಚಾರಮಾತ್ರವಾಗಿದ್ದರೆ ಇಲ್ಲಿ ವಿಚಾರಾಚಾರ ಉಭಯರೂಪವೂ ಆಗಿರುತ್ತದೆ, ಆಚಾರದ ವಿಕಾಸದಲ್ಲಿ ವಿಚಾರಾಮೃತ ತುಂಬಿ ಬರುತ್ತದೆ.

"ಶಿವತತ್ತ್ವ, ಶಿವಜ್ಞಾನ, ಶಿವೈಕ್ಯವೆಂಬ ತ್ರಿವಿಧವನರಿಯಬಲ್ಲರೆ ಅದು ವರ್ಮ, ಅದು ಸಂಬಂಧ. ಶಿವಾದಿ ಪೃಥ್ವಿಯಾಂತವಪ್ಪ ತತ್ತ್ವಾರ್ಥವನರಿತು ತತ್ತ್ವಜ್ಞಾನಿಯಾಗಬಲ್ಲರೆ ಅದು ವರ್ಮ, ಅದು ಸಂಬಂಧ. ಸಂವಿದಾತ್ಮನಾಗಿ ಚಿತ್‌ಸ್ವರೂಪದಿಂ ಪ್ರಾಣಲಿಂಗವನರಿದು ಶಿವಜ್ಞಾನಿಯಾಗಬಲ್ಲರೆ ಅದು ವರ್ಮ,

ಅದು ಸಂಬಂಧ." ಎಂದು ಆದಯ್ಯ ಶರಣನು ಶಿವಜ್ಞಾನ ಸಂಪಾದನೆಯ ರಹಸ್ಯವನ್ನು ಸಂಬಂಧವನ್ನು ಸ್ಪಷ್ಟಗೊಳಿಸಿದ್ದಾನೆ. ಸಂವಿದಾತ್ಮನಾಗದೆ ಚಿತ್‌ಸ್ವರೂಪದಿಂದ ಪ್ರಾಣಲಿಂಗವನರಿಯದೆ ಶಿವಜ್ಞಾನಿಯಾಗಲು ಸಾಧ್ಯವಿಲ್ಲೆಂದು ನಿರೂಪಿಸಿದ್ದಾನೆ.

ಭಕ್ತನು ಸದ್ರೂಪಾರಾಧನೆಯಿಂದ 'ಅಸ್ಮಿ' ಎಂಬ ಸತ್ತಾರೂಪ ಸಂವಿತ್ತನ್ನು ಪಡೆಯುತ್ತಾನೆ. ಮಾಹೇಶ್ವರನು ಚಿದ್ರೂಪಾರಾಧನೆಯಿಂದ 'ಪ್ರಕಾಶೇ' ಎಂಬ ಸಂವಿತ್ತನ್ನು ಸಂಪಾದಿಸುತ್ತಾನೆ, ಸಂಪಾದಿಸಿ ಸರ್ವನಿಯಂತ್ರತ್ವವನ್ನು ಪಡೆಯುತ್ತಾನೆ.

ಪರಶಿವನು ಕ್ರಿಯಾಶಕ್ತಿ ಸಂಪನ್ನನಾದಂತೆ ಜ್ಞಾನಶಕ್ತಿ ಸಂಪನ್ನನೂ ಆಗಿದ್ದಾನೆ. ಆದ್ದರಿಂದ ಸಾಧಕನು ಭಕ್ತನಾಗಿ ಆತನ ಆ ಕ್ರಿಯಾಶಕ್ತಿಯನ್ನು ಗಳಿಸಿ ಬಳಿಕ ಮಾಹೇಶ್ವರನಾಗಿ ಆತನ ಆ ಜ್ಞಾನಶಕ್ತಿಯನ್ನು ಸಂಪಾದಿಸುವುದು ಕ್ರಮಪ್ರಾಪ್ತವಾದುದು,

ಶುದ್ಧತ್ವದಿಂದ ಶಿವತ್ವಪ್ರಾಪ್ತಿ. ಜ್ವಲತ್ವದಿಂದ ಅಂದರೆ ಶುದ್ಧ ವಿದ್ಯಾಸ್ವರೂಪತ್ವದಿಂದ ಜ್ಯೋತಿರೂಪತ್ವ ಪ್ರಾಪ್ತಿ. ಆ ಜ್ಯೋತಿಯೇ ಚಿಚ್ಛಕ್ತಿ, ಆ ಚಿಚ್ಛಕ್ತಿಯುಳ್ಳುದೇ ಪರಶಿವರೂಪ ಗುರುಲಿಂಗ. ಅದುವೇ ಪರಮಪ್ರಕಾರಸ್ವರೂಪು ; ಪರಮಾರ್ಥಪ್ರಜ್ಞೆಯ ಬೆಳಗು. ಆ ಬೆಳಗನ್ನು ಗಟ್ಟಿಗೊಳಿಸಿ ಇರಿಸಿಕೊಳ್ಳುವುದೇ ಸುಬುದ್ಧಿಹಸ್ತದ ಬದುಕು: ಅಂತೆಯೇ ಮಾಹೇಶ್ವರಾಂಗನ ಬದುಕು.

ತಮೋಗುಣವೇ ಅವಿದ್ಯೆ, ಅವಿದ್ಯೆ ಅನಾದಿ. ಅದುವೇ ಅಂಗ–ಲಿಂಗರನ್ನು ಬೇರ್ಪಡಿಸುವ ವಿಧಿ ; ಜೀವತ್ವ ಪ್ರಾಪ್ತಿಗೆ ಹೇತು, ತಮಃಪ್ರಕೃತಿಯ ಸಂಬಂಧದಿಂದ ಭವಬಂಧ. ತಮಃಪ್ರಕೃತಿಯೇ ಅಧೋಮಾಯೆ ; ಅಶುದ್ಧ ಮಾಯೆ. ಇದು ಮೋಹಕಾರಿಣಿ, ದುಃಖದಾಯಿನಿ. ತನ್ನ ಮರೆಯಿಸುವ ಮಾರಿ. ಇದರಿಂದಾಗಿ ತಮಸ್ಸನ್ನು ತೊಲಗಿಸಬೇಕು. ತಿಳಿವಿನ ಬೆಳಗಿಗೆ ಬರಬೇಕು. ಅಂತೆಯೇ 'ತಮಸೋ ಮಾ ಜ್ಯೋತಿರ್ಗಮಯ' ಎಂದು ಶ್ರುತಿಯ ಪ್ರಾರ್ಥನೆ; ಇದುವೇ ಮಾಹೇಶ್ವರಾಂಗನ ಸಚ್ಚಿತ್‌ಸಾಧನೆ. ಈ ಸಾಧನೆಯಲ್ಲಿ ಸಿದ್ಧಿಯನ್ನು ಪಡೆಯದೆ ಮಾಹೇಶ್ವರನು ಪ್ರಸಾದಿಯಾಗನು ; ಪ್ರಮೋದಿಯಾಗನು. ಹುಟ್ಟು ಸಾವಿನ ಸಂಕೋಲೆಯನ್ನು ತಪ್ಪಿಸಿಕೊಳ್ಳನು.

"ತನುಸ್ವಾಯತವಾಗಿ ತನುವಿನ ಹಂಗಿನ ಗುರುವೆನ್ನದೆ, ಗುರುಸ್ವಾಯತ ವಾಗಿ ಗುರುವಿನ ಹಂಗಿನ ತನುವೆನ್ನದೆ, ತನ್ನೊಳಗೆ ಗುರು ಐಕ್ಯವೆನ್ನದೆ, ಗುರುವಿ ನೊಳಗೆ ತಾನೈಕ್ಯವೆನ್ನದೆ, ಅವಿರಳ ಸಂಭಾವನೆಯಿಂದ ಸಂಬುದ್ಧಿ ನಿಷ್ಠೆ ಅಣು ಮಾತ್ರ ಓಸರಿಸದೆ ರಸಮುಖಾರ್ಪಿತ ತೃಪ್ತಿನಾಗಿ, ಕಾಯಾಧಾರಲಿಂಗೋಪ ಜೀವಿಯಾಗಿ, ಸ್ಥಾವರದಂತೆ ನಿಬ್ಬೆರಗಾಗಿ, ತನುಸೋಂಕಿ ತನುನಷ್ಟವಾಗಿ ಒಂದು ಮುಖ ಮಾರ್ಗವಲ್ಲದೆ ಮತ್ತೊಂದ ಮೆಟ್ಟದಿರಬಲ್ಲಡಾತ ಮಾಹೇಶ್ವರನಯ್ಯಾ ಕೂಡಲ ಚನ್ನಸಂಗಯ್ಯಾ"

# ನಿಷ್ಠೆಯ ನೆಲೆ

ನಿಷ್ಠೆಯು ನೆಲೆ ಮಾಹೇಶ್ವರ ಸ್ಥಲ, ಚಿದ್ಗಳಿಕೆಯ ಬೆಲೆ ನಿಷ್ಠೆ. ನಿಷ್ಠೆ ಚಿದ್ದೀಪದ ತೈಲ, ಚಿತ್ಪಥಿಕನ ಬುತ್ತಿ ನಿಷ್ಠೆ. ಶ್ರದ್ಧೆ ಹೆಪ್ಪುಗಟ್ಟಿ ನಿಷ್ಠೆಯೆನಿಸುತ್ತದೆ. ಶ್ರದ್ಧೆಯ ವಿಕಾಸವೆ ನಿಷ್ಠೆ. ಶ್ರದ್ಧೆಯಲ್ಲಿ ನಿಶ್ಚಯಭಾವ ನೆಲೆಗೊಂಡರೆ ನಿಷ್ಠೆ; ಸಮ್ಯಕ್ ಜ್ಞಾನ ಸಮನಿಸಿದರೆ ಸಹಜ ನಿಷ್ಠೆ. ಇಂತಹ ನಿಷ್ಠೆ ಲಿಂಗದಲ್ಲಿ ನೆಲೆಗೊಂಡಲ್ಲಿ ಮಾಹೇಶ್ವರಸ್ಥಲ ಸಂಪನ್ನವಾಗುತ್ತದೆ. ಲಿಂಗ ಪ್ರೇಮ ಲಿಂಗ ವಿಶ್ವಾಸ ಗಾಢವಾಗುವುದೆ ನಿಷ್ಠೆಯ ನಿಜತ್ವ. ಲಿಂಗದಲ್ಲಿ ನಿಷ್ಠೆ ನಿಬ್ಬರಗಾದ ಅಂಗನಿಗೆ ಅನ್ಯದರಲ್ಲಿ ಅಭಿಲಾಷೆ ಅಂಕುರಿಸದು, ಅನನ್ಯತೆಯೂ ನಿಷ್ಠೆಯ ಹೃದಯ.

ನಿಷ್ಠಾ ಭಕ್ತಿಯುಕ್ತನು ಮಾಹೇಶ್ವರಾಂಗ. ಜ್ಞಾನ ಶಕ್ತಿ ಯುಕ್ತ. ಗುರುಲಿಂಗ; ನಿಷ್ಠೆಯು ನೆಲಸದೆ ಮಾಹೇಶ್ವರತ್ವವು ಮೈಗೂಡದು, ಬುದ್ಧಿ ಸ್ಥಿರಗೊಳ್ಳದು, ಉಪಾಸನೆ ಉತ್ತಮಗೊಳ್ಳದು. ಅನುಗ್ರಹ ಅಳವಡದು.

"ಸರ್ವಾಂಗವನು ಲಿಂಗನಿಷ್ಠೆಯಿಂದ ಗಟ್ಟಿಗೊಳಿಸಿ
ಮನವ ಉನ್ಮನಿಯಾವಸ್ಥೆಯನೆಯ್ದಿಸಿ
ಶತಪತ್ರದಲ್ಲಿ ಸೈತಿಟ್ಟು ಲಿಂಗಕ್ಕೆ ಅರ್ಪಿಸಿದ ನೈವೇದ್ಯವ
ಲಿಂಗನೆನಹಿನಲ್ಲಿಯೇ ಸ್ವೀಕರಿಸುವುದು........"

"ನಿಷ್ಠೆ ನಿಬ್ಬೆರಿಸಿ ಗಟ್ಟಿಗೊಂಡು ಅಭಿಲಾಷೆ
ಸಮನಿಸದೆ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರ"

ಈ ಎರಡು ವಚನ ಖಂಡಗಳಿಂದ ನಿಷ್ಠೆಯ ನೆಲೆ ಎಷ್ಟರದು ಎಂತಹದು ಎಂಬುದು ಮನದಟ್ಟಾಗುತ್ತದೆ.

ಶ್ರದ್ಧೆಯೊಳಗಿನ ಒಂದು ಪರಿಣತಭಾವವೇ ನಿಷ್ಠೆಯೆಂದೆನಿಸುತ್ತದೆ, ಶ್ರದ್ಧೆಯೆಂಬ ಹಣ್ಣಿನೊಳಗಿನ ರಸವೆ ನಿಷ್ಠೆ.

'ಶ್ರದ್ಧಾವಾನ್ ಲಭತೇ ಜ್ಞಾನಂ' ಶ್ರದ್ಧೆಯಿಂದ ಜ್ಞಾನ ಬರುತ್ತದೆ. ನಿಷ್ಠೆಯಿಂದ–ಬಂದಜ್ಞಾನ ನೆಲೆನಿಲ್ಲುತ್ತದೆ ; ಆರೋಗಿಸುವ ರಸ ಪದಾರ್ಥದಲ್ಲಿ ಪ್ರಸಾದಭಾವ ಪ್ರಾದುರ್ಭವಿಸುತ್ತದೆ ; ಆಡುವ ನುಡಿಯಲ್ಲಿ ರಸಾನುಭವ ತುಂಬಿರುತ್ತದೆ. 'ಲಿಂಗನಿಷ್ಠಾಂಗಿ ವಚನ ಹಾಡಿದರೆ ಒಪ್ಪುವನಲ್ಲದೆ ನಿಷ್ಠೆಹೀನರು ಓದಿ ಹಾಡಿದರೆ ನಳ್ಳಿಗುಳ್ಳಿಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬೊಗಳಿದಂತೆ....ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.' ನಡೆಗೆ ನಿಷ್ಠೆಬೇಕಾದಂತೆ ನುಡಿಗೂ ನಿಷ್ಠೆಬೇಕು. ನಿಷ್ಠೆಯಿಂದ ನಡೆದುದೇ ಶಿವತತ್ತ್ವ; ನಿಷ್ಠೆಯಿಂದ ನುಡಿದುದೇ ಶಿವಸಾಹಿತ್ಯ ; ಶಿವಮಂತ್ರ.

ನಿಷ್ಠೆಗೆ ಹೊರಗಾಗಿ ನಡೆದರೆ ನಿಷ್ಠೆಯಿಲ್ಲದಿದ್ದರೆ ಬಿದಿರೆಲೆ ಮೆಲಿದಂತೆ, ಮಳಲ ಹೊಸೆದಂತೆ, ನೀರ ಕಡೆದಂತೆ, ಜೊಳ್ಳು ಕುಟ್ಟಿದಂತೆ ನಿಷ್ಫಲ.

ನ್ಯಾಯವನ್ನು ಹಿಡಿದು ನುಡಿವುದು ನೀತಿಯನ್ನು ಹಿಡಿದು ನಡೆವುದು ನಿಷ್ಠೆ. ನಿಷ್ಠುರತೆಗೆ ಗುರಿಯಾದರೂ ನ್ಯಾಯಮಾರ್ಗದಿಂದ ಕದಲಬಾರದು. ದಾಕ್ಷಿಣ್ಯ ಪರರಾಗಬಾರದು. ಮೃತಿಗೆ ಎರವಾಗುವ ಹೊತ್ತು ಒದಗಿದರೂ ನೀತಿಯ ನಡೆಯನ್ನು ಬಿಡಬಾರದು. ಈ ಖಂತ ಜೀವನವೇ ನಿಷ್ಠೆಯ ಜೀವಾಳ. ಸದಾಚಾರ ಸುವಿಚಾರಗಳ ಸ್ವಾತಂತ್ರ್ಯವೇ ನಿಷ್ಠೆಯ ನಿಲುಕಡೆ.

# ಪೂರ್ವಾಶ್ರಯ ಪರಾಶ್ರಯ

ಮಾಹೇಶ್ವರನು ಈ ಎರಡನ್ನೂ ನಿರಸನ ಮಾಡಬೇಕು. ಪೂರ್ವಾಶ್ರಯವು ಭೂತನಿಷ್ಠ ಪೂರ್ವಾಶ್ರಯ, ಬಂಧುನಿಷ್ಠ ಪೂರ್ವಾಶಯ, ಪದಾರ್ಥನಿಷ್ಠ ಪೂರ್ವಾಶ್ರಯವೆಂದು ಮೂರೆರ. ಪ್ರಕೃತಿ ಅಂದರೆ ದೇಹನಿಷ್ಠ ಪೂರ್ವಾಶ್ರಯವನ್ನು ಪ್ರತ್ಯೇಕವಾಗಿ ಹೇಳುವ ಅವಸರವಿಲ್ಲ. ಪದಾರ್ಥನಿಷ್ಠ ಪೂರ್ವಾಶ್ರಯದಲ್ಲಿಯೇ ಸಮಾವೇಶವಾಗುತ್ತದೆ. ದುರ್ಗುಣನಿರಸನವೂ ಇದರಲ್ಲಿಯೇ ಬರುತ್ತದೆ.

ಪರಾಶ್ರಯವು ಪರರ ಆಶ್ರಯ ಪರರಪದಾರ್ಥಾಶ್ರಯ, ಪರದೈವಾಶ್ರಯ ಪರಶಿವಾಶ್ರಯ ಎಂದು ನಾಲ್ಕು ಬಗೆ. ಇವುಗಳಲ್ಲಿ ಮೊದಲಿನ ಮೂರು ನಿರಸನಕ್ಕೆ ವಿಹಿತವಾದವುಗಳು. ನಾಲ್ಕನೆಯದಾದ ಪರಶಿವಾಶ್ರಯವು ಸಂಪಾದನೀಯವಾದುದು. ಈ ಪಥದಲ್ಲಿ ಪರದ್ವೇಷ, ಪರದೂಷಣೆ, ಪರಹಿಂಸೆ, ಪರಮತ್ಸರಾದಿಗಳು ಸಹ ಪರಿತ್ಯಜಿಸತಕ್ಕವು.

ಪರಾಶ್ರಯ ಪದವು ಅರ್ಥಧ್ವನಿಯುಳ್ಳದಾಗಿದೆ. ಉತ್ತರ, ಶ್ರೇಷ್ಠ ಎಂಬ ಅರ್ಥಗಳಲ್ಲಿ ಪರಪ್ರಯೋಗವನ್ನು ಪರಾಮರ್ಶಿಸಿದಾಗ ಪೂರ್ವಾಶ್ರಯಕ್ಕೆ ಸಂವಾದಿಯಾಗಿ ನಿರಸನ ಭಾವವನ್ನು ಹಿಂಗಿ ನಿಲ್ಲುತ್ತದೆ. ಅನ್ಯಾರ್ಥದಲ್ಲಿ ಅನಂಗೀಕೃತವಾದರೆ ಉತ್ತರ-ಶ್ರೇಷ್ಠಾರ್ಥಗಳಲ್ಲಿ ಅಂಗೀಕೃತವಾಗುತ್ತದೆ.

ಪೂರ್ವವು ಅಂಗಸಂಬಂಧವಾದುದು ; ಪರವು ಲಿಂಗಸಂಬಂಧವಾದುದು. ಅಂದರೆ ಅಂಗಾಶ್ರಯವನ್ನು ಹಿಂಗಿ ಲಿಂಗಾಶ್ರಯವನ್ನು ಅಂಗೀಕರಿಸಬೇಕೆಂಬ ಅರ್ಥಪೂರ್ಣ ಅಭಿಪ್ರಾಯವು ಅಭಿವ್ಯಕ್ತವಾಗುತ್ತದೆ, ಪರಾಶ್ರಯ ಪ್ರಯೋಗವು ಬಿಡುವುದನ್ನು ಹಿಡಿಯುವುದನ್ನು ಎರಡನ್ನು ಏಕಕಾಲಕ್ಕೆ ಬೋಧಿಸುವ ವಿಶಿಷ್ಟಪದ ; ಗಮನಾರ್ಹ ಪದ.

ಪೂರ್ವಾಶ್ರಯವೆಂದರೆ ಅಪರಾಪ್ರಕೃತಿ ಆಶ್ರಯ ಇದು ಅಶುದ್ಧವೆಂದು

ಮೂವತ್ತಾರು ತತ್ತ್ವಗಳಲ್ಲಿ ಪರಿಗಣಿತವಾಗಿದೆ. ಪುರುಷನ ಪ್ರಪಂಚಕ್ಕೆ ಕಾರಣವಾಗಿರುತ್ತದೆ. ಅಪರಾ ಪ್ರಕೃತಿಯನ್ನು ಆಶ್ರಯಿಸಿದರೆ ಕಾಲ ಕರ್ಮಗಳಿಗೆ ರಾಗ ಭೋಗಗಳಿಗೆ ಅಶುದ್ಧ ವಿದ್ಯೆಗೆ ಒಳಗಾಗಬೇಕಾಗುತ್ತದೆ. ಒಳಗಾದರೆ ಜೀವಭಾವ ತಪ್ಪಿದ್ದಲ್ಲ. ಬಂಧ ದುಃಖ ಬಿಡುವಂಥದ್ದಲ್ಲ.

ಪರಾಶ್ರಯವೆಂದರೆ ಶುದ್ಧವಿದ್ಯಾಶ್ರಯ. ಇದರೀದ ಈಶ್ವರ ಸಾಕ್ಷಾತ್ಕಾರಕ್ಕೆ ಮಾರ್ಗವಾಗುತ್ತದೆ; ಮಾಹೇಶ್ವರತ್ವಕ್ಕೆ ಮಾರ್ಗವಾಗುತ್ತದೆ. ಶುದ್ಧವಿದ್ಯೆ ಈಶ್ವರಾಶ್ರಯವುಳ್ಳದು.

ಪರಾಶ್ರಯ ಪದಾರ್ಥಕ್ಕೆ ದ್ವಿಮುಖ. ತಾನು ಪರಶಿವನಿಗೆ ಆಶ್ರಯ: ಪರಶಿವನು ತನಗೆ ಆಶ್ರಯ. ಧ್ಯಾನ ಧಾರಣ ಮುಖಾಂತರ ತಾನು ಆಶ್ರಯಿತ್ತರೆ ಕರುಣಿಸುವ ಮುಖಾಂತರ ಆ ಪರಶಿವನು ತನಗೆ ಆಶ್ರಯವೀಯುತ್ತಾನೆ. ಹೀಗೆ ಪರಸ್ಪರ ಆಶ್ರಯ–ಆಶ್ರಯಿಭಾವವುಂಟಾಗುತ್ತದೆ. ಪರಾಶ್ರಯ ಪದದ ಮತ್ತೊಂದು ನೋಟವಿದು,

ಬುದ್ಧಿಯ ಪ್ರಬಲವಾದ ಪೂರ್ವಾಶ್ರಯವೆಂದರೆ ಸಂಮೋಹ. ಇದಕ್ಕೆ ಒಳಗಾಗದಂತೆ ಮಾನವನು—ಮಾಹೇಶ್ವರಾಂಗನು ಹೆಚ್ಚು ಎಚ್ಚರಿಕೆಯನ್ನು ವಹಿಸಬೇಕು. ವಿಷಯ ಮೋಹದಿಂದ ಅದರಲ್ಲಿಯೂ ಪರರ (ಅನ್ಯರ) ವಿಷಯ ಸಂಮೋಹದಿಂದ ಸ್ಮೃತಿ ನಾಶವಾಗುತ್ತದೆ; ಧೃತಿ ಮೃತಿಗೊಳ್ಳುತ್ತದೆ. ದುಃಖದಲ್ಲಿ ಸುಖದ ಭ್ರಾಂತಿ ಹುಟ್ಟುತ್ತದೆ. ಬುದ್ಧಿಶಕ್ತಿ ಕುಗ್ಗುತ್ತದೆ. ವೃದ್ಧಿಗೆ ಬರಲು ಅಡೆ ತಡೆಯಾಗುತ್ತದೆ. ಪ್ರಬುದ್ಧತೆ ಇದ್ದದ್ದೂ ಹಾಳಾಗುತ್ತದೆ. ಬುದ್ಧಿಯ ಪ್ರಗಲ್ಭತೆ ಅರ್ಥವಾಗುವುದಿಲ್ಲ. ಪ್ರತಿಭೆ ಮುಳುಗುತ್ತದೆ, ವಿಕಾಸಕ್ಕೆ ಮಾರ್ಗವಿರುವುದಿಲ್ಲ. ಬುದ್ಧಿ ಇದ್ದೂ ಇಲ್ಲದಂತಾಗಿ ಹಸುಗಿಂತ ಕಡೆಯಾಗಿ ಬಾಳಬೇಕಾಗುತ್ತದೆ. ಅಂದರೆ ಮಾನವತ್ವದಿಂದ ವಂಚಿತನಾಗಬೇಕಾಗುತ್ತದೆ. ಅದೇ ಬುದ್ಧಿಯನ್ನು ಮೋಹದ ವಶಕ್ಕೆ ಬಿಡದೆ ಬೆಳಸಿಕೊಂಡರೆ ಮಾನವ ಮರ್ತ್ಯಜೀವಿಗಳ ಪ್ರಭುವಾಗಿ ಬಾಳಬಲ್ಲ, ಬೆಳಗಬಲ್ಲ.

ಸತ್ಬುದ್ಧಿ ಜೀವಿಯಾಗದೆ ಅಂಧಕಾರ ಯುಗವನ್ನು ದಾಟಿ ಆಚೆಗೆ

ಹೋಗುವಂತಿಲ್ಲ. ಮೋಹತಮಸ್ಸಿನಲ್ಲಿಯೇ ತಡಕಂತ್ತ ತೊಳಲಬೇಕಾಗು ತ್ತದೆ. ಆದ್ದರಿಂದ ಮೋಹ ರೂಪ ಪೂರ್ವಾಶ್ರಯವನ್ನು ನಿರಸನಮಾಡಿ ಪರ ಶಿವ ಜ್ಞಾನವನ್ನು ಆಶ್ರಯಿಸಬೇಕು.

ಮಾನವನು ಎಚ್ಚತ್ತು ಮುಂದುವರಿಯಲು ಪೂರ್ವಾಶ್ರಯ ನಿರಸನ ಒಂದು ದಿವ್ಯ ಔಷಧ ; ಪ್ರಗತಿಗೇರುವ ಹದುಳ ಹಂತ. ಬುದ್ಧಿಚಂದ್ರನ ಬೆಳದಿಂಗಳು ನಡೆನುಡಿಗಳೆಂಬ ನೆಲದಮೇಲೆ ಬಿದ್ದು ಬಾಳ ಬೆಳಗುತ್ತದೆ. ನಡೆ ಯೆಂಬ ಅಂಗಳ ಮಂಗಳಮಯವಾಗುತ್ತದೆ. ನುಡಿಯೆಂಬ ರಂಗವಲ್ಲಿಗೆ ಮತ್ತೊಂದು ಮೆರಗು ಉಂಟಾಗುತ್ತದೆ. ಮಾಹೇಶ್ವರತ್ವದ ಎತ್ತರಕ್ಕೆ ಏರಿ ನಿಲ್ಲುವ, ನಿಂತು ನಲಿವ ಪುಣ್ಯ ಪ್ರಾಪ್ತಿಯಾಗುತ್ತದೆ. ಪರಮ ಪರಿಜ್ಞಾನ, ವಿಶಾಲ ವಿಚಾರಗಳ ಭಾಗ್ಯವುಂಟಾಗುತ್ತದೆ. ಜಗತ್ತಿನ ಜನಸಾಮಾನ್ಯರಿಗೂ ಆ ಭಾಗ್ಯ ಸಿಗುವಂತಾಗುತ್ತದೆ.

ಮೋಹದಿಂದ ಬುದ್ಧಿ ಮಂದವಾಗುತ್ತದೆ. ಜಠರದ ಅಗ್ನಿ ಮಾಂದ್ಯ ಜೀವನಕ್ಕೆ ಎಷ್ಟು ಕೇಡವೋ ಅಷ್ಟೇ ಏಕೆ ಅದಕ್ಕೂ ಹೆಚ್ಚು ಬುದ್ಧಿಮಾಂದ್ಯ ಕೇಡು. ಇದರಿಂದಾಗಿ ಬುದ್ಧಿಯ ಪೂರ್ವಾಶ್ರಯ ಮೋಹವನ್ನು ಮೊದಲು ಬಿಡಬೇಕು. ಪರರ ಕಷ್ಟಕರವಾದ ಆಶ್ರಯವನ್ನು ತ್ಯಜಿಸಬೇಕು. ತ್ಯಜಿಸಿ ತಿಳಿ ಯಾಗಬೇಕು. ತಿಳಿವುಳ್ಳವನೇ ಇತ್ತ ಹಮ್ಮನ್ನು ಅತ್ತ ಚಿತ್ತನ್ನು ಹಿಡತಕ್ಕೆ ತಂದು ಹೊಲಬಿಗೆ ಹಚ್ಚುವ ತಾತ್ತ್ವಿಕ ಪಥದ ಸಾರಥಿಯಾಗಬಲ್ಲನು. ಜ್ಞಾನ -ವಿಜ್ಞಾನ-ಪ್ರಜ್ಞಾನ ರೂಪಗಮ್ಯಸ್ಥಲವನ್ನು ಸೇರಬಲ್ಲನು.

ಬುದ್ಧಿಮಾಂದ್ಯವು ಭೂತಪ್ರತಿಬಂಧ, ವರ್ತಮಾನ ಪ್ರತಿಬಂಧ, ಆಗಾಮಿ ಪ್ರತಿಬಂಧವೆಂದು ತ್ರಿವಿಧ ರೂಪಾಗಿದೆ. ನಷ್ಟವಾದ ಧನಾದಿಗಳನ್ನು ನಶಿಸಿ ಹೋದ ಪೂರ್ವಾಶ್ರಮ ಸಂಬಂಧಿಗಳನ್ನು ಸ್ಮರಿಸಿಕೊಂಡು ಶೋಕಿಸುವುದು ಭೂತ ಪ್ರತಿಬಂಧ. ಇದೊಂದು ಬಗೆಯ ಬುದ್ಧಿಮಾಂದ್ಯ. ವಿಷಯಾಸಕ್ತಿ, ನಿಸ್ಮೃತಿ ವಿಪರೀತಾರ್ಥ, ಕುತರ್ಕ, ದುರಭಿಮಾನ, ದುರಾಗ್ರಹ, ಅಹಂಪಂಡಿತ ಮನ್ಯತೆ

ಇವು ವರ್ತಮಾನ ಪ್ರತಿಬಂಧ. ಇವೂ ಸಹ ಬುದ್ಧಿಮಾಂದ್ಯದಿಂದ ಉಂಟಾಗು ತ್ತವೆ. ಮುಂದಿನ ಜನ್ಮಕ್ಕೆ ಸ್ವರ್ಗಲೋಕ, ಸ್ವರ್ಗ ಸುಖಗಳಾಗಬೇಕು: ಶ್ರೀಮಂತನಾಗಿ ಭೂಮಿಕಾಂತನಾಗಿ ಬರಬೇಕು ಎಂದು ಬಯಸುವುದೇ ಆಗಾಮಿ ಪ್ರತಿಬಂಧ. ಹೀಗೆ ಬಯಸುವುದೂ ಬುದ್ಧಿಮಾಂದ್ಯದಿಂದಲೇ! ಈ ಪೂರ್ವಾ ಶ್ರಯ ಉತ್ತರಾಶ್ರಯಗಳನ್ನೆಲ್ಲ ಮಾಹೇಶ್ವರನು ನಿರಸನ ಮಾಡಬೇಕು.

# ವರ್ಣಾಧ್ವ - ಮಂತ್ರಾಧ್ವ

ತತ್ತ್ವಜ್ಞಾನಕ್ಕೆ ತತ್ತ್ವಪ್ರಾಪ್ತಿಗೆ ಆರುದಾರಿಗಳುಂಟು; ಅವನ್ನೇ ಷಡಧ್ವಗಳೆಂದು ಹೇಳುವುದುಂಟು. ವರ್ಣಾಧ್ವ, ಮಂತ್ರಾಧ್ವ, ಪದಾಧ್ವ, ಕಲಾಧ್ವ, ತತ್ತ್ವಾಧ್ವ. ಭುವನಾಧ್ವ.–ಎಂಬಿವು ಷಡಧ್ವಗಳು. ಇವು ಕ್ರಮವಿಡಿದು ಷಟ್‌ಸ್ಥಲಗಳಿಗೆ ಸಮನ್ವಯಗೊಳ್ಳುತ್ತವೆ. ಷಟ್‌ಸ್ಥಲಸಾಧಕರಿಗೆ ಸಹಕಾರಿಗಳಾಗುತ್ತವೆ.

ವರ್ಣಾಧ್ವ ಭಕ್ತನದಾದರೆ ಮಂತ್ರಾಧ್ವ ಮಾಹೇಶ್ವರನದು. ಮಾಹೇಶ್ವರನು ಮಂತ್ರಾಧ್ವದಲ್ಲಿ ಮುಂದುವರಿಯುತ್ತಾನೆ; ಮಂತ್ರಮೂರ್ತಿಯನ್ನು ಮನಮುಟ್ಟಿ ಆರಾಧಿಸುತ್ತಾನೆ.

ಷಡಧ್ವಗಳಲ್ಲಿ ಮೊದಲಿನವು ಮೂರು ಶಬ್ದಾತ್ಮಕವಾದವು; ಮುಂದಿನ ಮೂರು ಅರ್ಥಾತ್ಮಕವಾದವು. ಇವು ಆ ಪರಶಿವತತ್ತ್ವದಿಂದ ಉದಯವಾಗಿವೆ. ಅಂದರೆ, ಆ ಚಿನ್ಮಯನಿಂದ ಚಿಮ್ಮಿ ಬಂದಿವೆ,

"ನಿಃಕಲ ಶಿವತತ್ತ್ವದಲ್ಲಿ ಜ್ಞಾನಚಿತ್ತು ಉದಯವಾಯಿತ್ತು; ಆ ಚಿತ್ತಿನಿಂದ ಅಕಾರ, ಉಕಾರ, ಮಕಾರಗಳೆಂಬ ಅಕ್ಷರತ್ರಯಂಗಳಾದವು, ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ, ಇಂತೀತ್ರಿವಿಧಕ್ಕೆ ತಾಯಿ ಚಿತ್ತು. ಇಂತಿ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವದುತ್ಪತ್ತಿಯಾಯಿತ್ತು. ಆ ಓಂಕಾರವೆಂಬ

ಪ್ರಣವವೇ ಅಖಂಡಪರಿಪೂರ್ಣ ಗೋಳಾಕಾಕಾರ
ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ;
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೆ.

ಈ ಒಂದೇ ಒಂದು ವಚನವು ಆ ಚಿನ್ಮಯ ಶಿವನಿಂದ ಷಡಧ್ವಗಳು, ಷಡಧ್ವಗಳಿಂದ ಮಹಾಲಿಂಗವು ಉದಯವಾಗುವುದನ್ನು ಸಂಕ್ಷಿಪ್ತವಾಗಿಯಾದರೂ

ಸ್ಪಷ್ಟವಾಗಿ ನಿರೂಪಿಸಿದೆ. ಅಕ್ಷರತ್ರಯದಿಂದ ವರ್ಣಾಧ್ವವನ್ನು ಪ್ರಣವೋತ್ಪತ್ತಿಯಿಂದ ಮಂತ್ರಾಧ್ವವನ್ನು, ಪ್ರಣವದಲ್ಲಿಯೇ ಪಂಚಾಕ್ಷರಿಯಿರುವುದರಿಂದ ಆ ಪ್ರಣವನಿರೂಪಣ ಮಾತ್ರದಿಂದ ಪದಾಧ್ವವನ್ನು ಪ್ರತಿಪಾದಿಸಲಾಗಿದೆ. ಮತ್ತು 'ಮಕಾರವೇ ಕಳೆ' ಎಂಬುದರಿಂದ ಕಲಾಧ್ವವನ್ನು, 'ಉಕಾರವೇ ಬಿಂದು' ಎಂಬುದರಿಂದ ಭುವನಾಧ್ವವನ್ನು. ಆಕಾರವೇ ನಾದ ಎಂಬುದರಿಂದ ತತ್ತ್ವಾಧ್ವವನ್ನು ಅಭಿವ್ಯಕ್ತಗೊಳಿಸಿದ ಅನುಭವವನ್ನು ಕಂಡರಿಯದಿರೆವು. ಈ ಷಡಧ್ವಮಯವಾದ ಪ್ರಣವದಿಂದ ಮಹಾಲಿಂಗದ ಉದಯ. ಈ ವಿವರಣೆಯಿಂದ ವಿದಿತವಾಗುವುದೆಂದರೆ ಮಂತ್ರಮಯವು ಮಹಾಲಿಂಗವಾಗಿರುವಂತೆ ಗುರು (ಮಹಾ) ಲಿಂಗವೂ ಸಹ ಮಂತ್ರಮಯವಾಗಿದೆ. ಮಂತ್ರಮೂರ್ತಿಯಾದ ಗುರುಲಿಂಗೋಪಾಸನೆಗೆ ಅಥವಾ ಗುರುಲಿಂಗದ ಸನ್ನಿಧಿಗೆ ಸೇರಿ ಸನ್ನಿಹಿತವಾಗುವಿಕೆಗೆ ಮಂತ್ರಾಧ್ವವೇ ಮಹಾ ಮಾರ್ಗ.

ಮಂತ್ರಾಧ್ವ ಲಿಂಗದ ಉದಯಕ್ಕೆ ಕಾರಣ, ಅಂತೆಯೇ ಅಂಗನ ಸಾಧನ ಸಿದ್ಧಿಗಳಿಗೂ ಕಾರಣ. ಮಂತ್ರದಿಂದಾದ ಲಿಂಗಮೂರ್ತಿಯನ್ನು ಮಂತ್ರಮಾರ್ಗದಿಂದಲೇ ಉಪಾಸಿಸುವುದರಲ್ಲಿ ಔಚಿತ್ಯವಿದೆ; ಅನುಕೂಲವೂ ಇದೆ.

"ಶ್ರೀಗುರು ಮಂತ್ರದೀಕ್ಷೆಯಿಂದ ಮನದ ಪೂರ್ವಾಶ್ರಯದ ಕಳೆದು ಮನಕ್ಕೆ ಘನನೆನಹ ಸಂಬಂಧಿಸಿದನಾಗಿ ಮನನಿರ್ಮಲವಾಗಿ ಲಿಂಗಕ್ಕಾಶ್ರಯವೆಂದು ಅರಿವುದು."

ಇದು ಮಂತ್ರಮಾರ್ಗದಿಂದಾಗುವ ಫಲ. ಮಂತ್ರದಿಂದ ಮನ ಘನವಾಗುತ್ತದೆ. ಮಂತ್ರಮಯವಾಗುತ್ತದೆ: ಮಂತ್ರ ರೂಪಲಿಂಗಸ್ವರೂಪವೇ ಆಗುತ್ತದೆ. ಮನಮಾತ್ರವಲ್ಲ ಏಳುಧಾತುಗಳಿಂದ ಕೂಡಿದ ಮೈಯೆಲ್ಲ ಮಂತ್ರಮಯವಾಗುತ್ತದೆ.

ಮಂತ್ರದೀಕ್ಷೆಯಿಂದ ಎರಡು ಫಲವುಂಟಾಗುತ್ತವೆ. ಒಂದು ಮನದ ಪೂರ್ವಾಶ್ರಯವಳಿಯುವುದು; ಇನ್ನೊಂದು ಘನದ ನೆನಹು ಸಂಬಂಧಿಸಿ ನಿರ್ಮಲವಾಗಿ ಲಿಂಗಕ್ಕೆ ಆಶ್ರಯವಾಗುವುದು.

ಮನದ ಪೂರ್ವಾಶ್ರಯ ವಾಯುಭೂತ; ಮತ್ತು ವಾಯುಗುಣ. ಕಾಮಕ್ರೋಧಾದಿಗಳು ಗುಣದಲ್ಲಿ ಬರುತ್ತವೆ. ಇವನ್ನೆಲ್ಲ ಕಳೆವುದೇ ಮನದ ಪೂರ್ವಾಶ್ರಯ ನಿರಸನ, ಇದಾಗಬೇಕಾದರೆ ಮಂತ್ರಮಾರ್ಗದಿಂದ ಮಾತ್ರ! ಮಂತ್ರಾ

ಧ್ವವು ಮನದ ಪೂರ್ವಾಶ್ರಯವನ್ನು ಕಳೆದು ಪರಮಾಶ್ರಯವನ್ನು ತಳೆದು ಘನ ಮನವಾಗುವಂತೆ ಮಾಡುತ್ತದೆ.

"ಶ್ರೀಗುರುವಿನ ದೆಸೆಯಿಂದ ಪಡೆದ ಶಿವಮಂತ್ರಾಕ್ಷರವೇ
ಬೀಜವೆನಿಸಿಕೊಂಡಿತ್ತಯ್ಯಾ.
ಅಂಥಾ ಪ್ರಾಣಿಯೇ ಜ್ಞಾನಕಾಯನೆನಿಸಿಕೊಂಬನಯ್ಯಾ,
ಶಿವಮಂತ್ರೋಪದೇಶವಿಲ್ಲದಾತನು ಪ್ರಕೃತಿಕಾಯನೆನಿಸಿಕೊಂಬನಯ್ಯಾ.
ಪ್ರಕೃತಿಕಾಯನೆಂದೆಡೆ, ಅಜ್ಞಾನಿಯೆಂದು ಹೇಳಲ್ಪಡುತ್ತಿಪ್ಪುದಯ್ಯಾ,
ಇದು ಕಾರಣ. ಪ್ರಕೃತಿಕಾಯ–ಜ್ಞಾನಕಾಯವೆಂದು
ಎರಡು ಭೇದವಾಗಿಪ್ಪುದಯ್ಯಾ. ಶಿವಮಂತ್ರದೀಕ್ಷೋಪದೇಶವಾಗಲಾಗಿ,
ಪ್ರಕೃತಿಕಾಯ ಹೋಗಿ ಜ್ಞಾನಕಾಯವಪ್ಪುದು ತಪ್ಪದಯ್ಯಾ
ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ."

ಈ ವಚನಾಭಿಪ್ರಾಯದಂತೆ ತನುವನ್ನು ಜ್ಞಾನಕಾಯವನ್ನಾಗಿಸುತ್ತದೆ ತಾಮಸ ಪ್ರಕೃತಿ ಭಾವವನ್ನು ಕಳೆಯುತ್ತದೆ.

ಏನೆಲ್ಲವೂ ಮಂತ್ರಮಯವಾಗಿದೆ; ಮಂತ್ರದಲ್ಲಿ ಪ್ರತಿಷ್ಠಿತವಾಗಿದೆ. ಮಂತ್ರ ಬಿಟ್ಟು ಬೇರೆ ಮಾರ್ಗವಿಲ್ಲ. ಪಂಚಬ್ರಹ್ಮ ಮೂರ್ತಿಗಳು, ಸಾದಾಖ್ಯ ಗಳು, ಶಿವಶಕ್ತಿಯರು, ಅಂಗಲಿಂಗರು, ಹಸ್ತ ಮುಖಗಳು, ಪಾದೋದಕ ಪ್ರಸಾದಗಳು ಮಂತ್ರದಿಂದಾಗುತ್ತವೆ; ಮಂತ್ರ ಸ್ವರೂಪವಾಗಿವೆ. ಭೂತಗಳು, ತನ್ಮಾತ್ರಗಳು. ಇಂದ್ರಿಯಗಳು, ಕರಣಗಳು ಮಂತ್ರಮಯವಾಗಿವೆ, "ಪ್ರಣ ಮವೆ ಪರಬ್ರಹ್ಮ. ಪ್ರಣವಮವೆ ಪರಾಪರವಸ್ತು. ಪ್ರಣಮವೆ ಪರಂಜ್ಯೋತಿ ಪ್ರಕಾಶ. ಪ್ರಣಮವೆ ಪರಶಿವ. ಪ್ರಣವಮವೆ ಶುದ್ಧ ಪ್ರಸಾದ. ಪ್ರಣವಮವೆ ಪರಮಪದ, ಪ್ರಣಮವೆ ವೇದಶಾಸ್ತ್ರ ಪುರಾಣಾಗಮಂಗಳುತ್ಪತ್ತಿಗೆ ಕಾರಣ ನೋಡಾ! ಪ್ರಣಮವೆ ಸಪ್ತಕೋಟಿ ಮಹಾಮಂತ್ರ, ಅನೇಕ ಕೋಟಿ ಉಪ ಮಂತ್ರಗಳಿಗೆ ಪಾತ್ರ ಸ್ಥಾನ ನೋಡಾ! ಇಂತಪ್ಪ ಸ್ವರೂಪವಪ್ಪ ಪ್ರಣಮ ಮಂತ್ರವನೆ ಶುದ್ಧ ಮಾಯಾ ಸಂಬಂಧವೆಂಬ ಅಬದ್ಧರ ಎನಗೊಮ್ಮೆ ತೋರದಿ

ರಯ್ಯಾ! ಮಂತ್ರ ಜಡವಾದಲ್ಲಿಯೆ ಗುರುಜಡ ಗುರುಜಡವಾದಲ್ಲಿಯೇ ಲಿಂಗ ಜಡ ಲಿಂಗಜಡವಾದಲ್ಲಿಯೆ ಜಂಗಮ ಜಡ. ಜಂಗಮ ಜಡವಾದಲ್ಲಿಯೆ ಪ್ರಸಾದ ಜಡ. ಪ್ರಸಾದ ಜಡ ಎಂಬವರಿಗೆ ಮುಕ್ತಿ ಎಂಬುದು ಎಂದೂ ಇಲ್ಲ. ಮಂತ್ರ ಗುರು ಲಿಂಗ ಜಂಗಮಪ್ರಸಾದ ಮುಕ್ತಿ ಈ ಆರುಸಾಕ್ಷತ್ ಶಿವ ತಾನೆಯಲ್ಲದೇಬೆರಿಲ್ಲ. ಶಿವಬೇರೆ ಇವು ಬೇರೆ ಎಂಬ ಅಜ್ಞಾನ ಕರ್ಮಕಾಂಡಿಗಳ ಪಶು ಮತವರ ಎನಗೊಮ್ಮೆ ತೋರದರು. ಇದು ಕಾರಣ, ಪ್ರಣಮವೇ ಪರವಸ್ತು. ಪಂಚಾಕ್ಷರವೇ ಪಂಚ ಮುಖವನುಳ್ಳ ಪರಮೇಶ್ವರ ತಾನೆ ನೋಡಾ! ಮಹಾಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೇ!"

ಈ ವಚನದಲ್ಲಿ ಮಂತ್ರ ಮಹಿಮೆ ಮಿಗಿಲಾಗಿ ವರ್ಣಿತವಾಗಿದೆ. ಹೀಗಿರು ವಾಗ ಮುಮುಕ್ಷುವಿಗೆ ಮಂತ್ರ ಬಿಟ್ಟು ಮತ್ತೊಂದು ಮಾರ್ಗವೇ ಇಲ್ಲ. ಮಂತ್ರಾ ಧ್ವದಲ್ಲಿಯೆ ಮುಮುಕ್ಷು ಮುಂದುವರಿಯದೆ ವಿಧಿಯಿಲ್ಲ.

ಶುದ್ಧ ವಿದ್ಯೆಯಿಂದ ಷಡಧ್ವಸೃಷ್ಟಿ. ಅಕಾರಾದಿಕ್ಷಕಾರಾಂತ್ಯವಾದ ಅಯ್ವ ತ್ತೆರಡು ಅಕ್ಷರಗಳೇ ವರ್ಣಾಧ್ವ. "ಪ್ರಣವದ ಜ್ಯೋತಿಸ್ತಂಭಾಕೃತಿಯಲ್ಲಿಹ ಜೀವಾತ್ಮ ಪರಮಾತ್ಮನಲ್ಲಿ ಹಂ–ಕ್ಷಂ, ಹಂ—ಳಂ, ಎಂಬ ಚತುರಕ್ಷರಂಗಳುತ್ಪತ್ತಿ. ದರ್ಪಣಾಕೃತಿಯ ಯಕಾರ ಬೀಜದಲ್ಲಿ ಅ ಆ ಇ ಈ ಉ ಊ ಋ ೠ ಌ ೡ ಐ ಓ ಔ ಅಂ ಅಃ ಎಂಬ ಷೋಡಶಾಕ್ಷರುತ್ಪತ್ತಿ. ಅರ್ಧ ಚಂದ್ರಾಕೃತಿಯ ವಕಾರ ಬೀಜದಲ್ಲಿ ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಎಂಬ ದ್ವಾದಶಾಕ್ಷರು ತ್ಪತ್ತಿ, ಕುಂಡಲಾಕೃತಿಯ ಶಿಕಾರಬೀಜದಲ್ಲಿ ಡ ಢ ಣ, ತ ಥ ದ ಧ ನ, ಪ ಫ ಎಂಬ ದಶಾಕ್ಷರುತ್ಪತ್ತಿ, ದಂಡಕಾಕೃತಿಯ ಮಕಾರ ಬೀಜದಲ್ಲಿ ಬ ಭ ಮ ಯ ರ ಲ ಎಂಬ ಷಡಕ್ಷರುತ್ಪತ್ತಿ. ತಾರಾಕಾಕೃತಿಯ ನಕಾರ ಬೀಜದಲ್ಲಿ ವ ಶ ಷ ಸ ಎಂಬ ನಾಲ್ಕಕ್ಷರುತ್ಪತ್ತಿ. ಈ ಐವತ್ತೆರಡು ಅಕ್ಷರವು ವರ್ಣಾಧ್ವ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ!" ಮೂಲ ಬ್ರಹ್ಮ ಮಂತ್ರ ಬ್ರಹ್ಮಾಂಡ ರೂಪಗಳಾದ ಹನ್ನೊಂದು ಮಂತ್ರಗಳೇ ಮಂತ್ರಾಧ್ವ. ಹೃದಯ ಮಂತ್ರ, ಶಿರೋಮಂತ್ರ ಶಿಖಾಮಂತ್ರ, ಕವಚಮಂತ್ರ, ನೇತ್ರಮಂತ್ರ, ಅಸ್ತ್ರಮಂತ್ರ ಈಶಾನಮಂತ್ರ, ತತ್ಪುರುಷ ಮಂತ್ರ, ಅಘೋರಮಂತ್ರ. ವಾಮದೇವ ಮಂತ್ರ ಸದ್ಯೋಜಾತಮಂತ್ರ—ಈ ಹನ್ನೊಂದು ಮಂತ್ರಗಳು ಸಪ್ತಕೋಟಿ ಮಹಾ

ಮಂತ್ರಗಳ ಸಾರವಾಗಿವೆ ಇವನ್ನೇ ಮಂತ್ರಾಧ್ವವೆನ್ನುತ್ತಾರೆ. ಇವುಗಳಿಗೆ ಮೂಲ ಪಂಚಾಕ್ಷರಿ ಮಂತ್ರ, ಇದಕ್ಕೆ ಮೂಲ ಓಂಕಾರ. ನಾವಿಲ್ಲಿ ಮಂತ್ರಾಧ್ವ ಪದದ ಅರ್ಥವನ್ನು ಈ ರೀತಿ ವ್ಯಾಪಕವಾಗಿ ಮಾಡಿದ್ದೇವೆ. ಸರ್ವಮಂತ್ರ ಸಾಧಾರಣವ ನ್ನಾಗಿಯೂ ಕೇವಲ ಷಡಕ್ಷರವನ್ನು ಕುರಿತು ಹೇಳುವಾಗ ಅಸಾಧಾರಣಾರ್ಥವುಳ್ಳು ದನ್ನಾಗಿಯೂ ಅರ್ಥವಿಸಲಾಗಿದೆ. ಮಂತ್ರ ಪದ ಕೇವಲ ಹನ್ನೊಂದಕ್ಕೆ ಸೀಮಿತ ವಾಗಿ ಈ ವಿವೇಚನೆಯಲ್ಲಿ ಉಳಿಸಿಲ್ಲ.

ವರ್ಣ, ಮಂತ್ರ ಪದ ಈ ಮೂರು ಅಧ್ವಗಳು ಶಬ್ದಾತ್ಮಕವಾಗಿದ್ದು ಶರೀರವನ್ನು ಅವಲಂಬಿಸಿಕೊಂಡಿರುತ್ತವೆ. ಇವನ್ನು ಬಿಟ್ಟರೆ ತತ್ತ್ವಾಧ್ವದಲ್ಲಿ ಹೆಜ್ಜೆ ಹಾಕಲು ಸಾಧ್ಯವಿಲ್ಲ. ಅಂತೆಯೇ ಮಂತ್ರವನ್ನು ಮಂತ್ರ ಮೂರ್ತಿಯನ್ನು ಬಿಟ್ಟು ಮಾಹೇಶ್ವರನಿಗೆ "ನಾನ್ಯಃ ಪಂಥಾ ವಿದ್ಯತೇ ಅಯನಾಯ." ಮತ್ತೊಂದು ಮಾರ್ಗವಿಲ್ಲ.

# ಸ್ವರ್ಗ-ಅಪವರ್ಗ

ಇವೆರಡು ದ್ವಂದ್ವಕ್ಕೆ ಒಳಪಟ್ಟವು. ಏರಿ ಇಳಿಯುವುದು. ಇಳಿದು ಏರುವುದು ಸ್ವರ್ಗ. ಬಿಟ್ಟು ಹಿಡಿಯುವುದು, ಹಿಡಿದು ಬಿಡುವುದು ಮೋಕ್ಷ ಅಥವಾ ಅಪವರ್ಗ. ಇದರಿಂದಾಗಿ ಇವೆರಡೂ ಮಾಹೇಶ್ವರನಿಗೆ ಬೇಕಿಲ್ಲ.

ಮಾಹೇಶ್ವರ ಸ್ವಾಭಾವಿಕವಾಗಿ ಸಮಾಜಜೀವಿ. ಸಾಮಾಜಿಕ ಅಂದರೆ ಸಮಾಜ ಒಪ್ಪಿರುವ ಧರ್ಮ ನೀತಿ ಆಚಾರ ವಿಚಾರ ಮುಂತಾದವುಗಳನ್ನು ಕೈ ಬಿಡದೆ ನಡೆಯಿಸಿಕೊಂಡು ಬರುವುದು ಮಾಹೇಶ್ವರನ ನಿತ್ಯನಿಯಮ. ಸಾಮಾಜಿಕರ ಸುಸ್ಥಿತಿಯೇ ಸುಸಂಸ್ಕೃತಿಯೇ ಮಾಹೇಶ್ವರನ ಸ್ವರ್ಗಾಪವರ್ಗ, ತಾನು ಪರಕಾಯನಾಗಿದ್ದರೂ ಅಂದರೆ ಪರಶಿವಸ್ವರೂಪನಾಗಿದ್ದರೂ ಸಮಾಜ ಕ್ಷೇಮಕ್ಕಾಗಿ ಧರ್ಮಾಚಾರ ಭಾವಾಚಾರ ಜ್ಞಾನಚಾರಗಳನ್ನು ಬಿಡದೆ ತಾನೂ ಆಚರಿಸುತ್ತಾನೆ. ಆಗಮ ನಿಯಮ ಪರಿಪಾಲಕನಾಗಿರುತ್ತಾನೆ.

ಮಾಹೇಶ್ವರನಿಗೆ ತಾನು ಕೃತಾರ್ಥನಾದರೆ ಸಾಲದು, ಸಂತೃಪ್ತಿಯಾಗದು. ತನ್ನ ಸುಸ್ಥಿತಿಯೊಂದೇ ತನ್ನನ್ನು ಅಭಿಮಾನಿಸದು. ತನ್ನ ಉನ್ನತಿಯೊಂದೇ ತನ್ನನ್ನು ಆನಂದಿಸಹಚ್ಚದು. ತನ್ನಂತೆ ಮಾನವ ಸಮಾಜವೂ ಕೃತಾರ್ಥವಾಗಬೇಕು, ಸುಸ್ಥಿತಿಯುಳ್ಳದಾಗಬೇಕು, ಉನ್ನತಿಗೇರಬೇಕು. ಇಷ್ಟಾಗ ಬೇಕಾದರೆ ಸುಸಂಸ್ಕೃತಿಯಿಂದ ಎಲ್ಲರೂ ಬಾಳಬೇಕು—ಬದುಕಬೇಕು ಎಂಬುದೇ ಮಾಹೇಶ್ವರನ ಮನದ ಸಹಜವಾದ ಅಭಿಲಾಷೆ, ಧರ್ಮಾಚಾರದ ಜ್ಞಾನಾಚಾರದಕಾಂಕ್ಷೆ. ಇದಕ್ಕಾಗಿಯೇ ಸದ್ಭಾವಿಯಾಗುತ್ತಾನೆ, ಸಮಾಜ ಜೀವಿಯಾಗಿರುತ್ತಾನೆ. ಇಹಲೋಕ ವೀರನೆನಿಸಿ ಪರಲೋಕ ವೀರನೆನಿಸಿ ಇವೆರಡಕ್ಕೂ ಮಿಗಿಲಾಗಿ ಸಹಜವೀರನೆನಿಸಿ ಬಾಳಿ ಬೆಳಗುತ್ತಾನೆ. ಇಹ ಪರ ಒಂದಾಗಿಸುವುದೇ ಮಾಹೇಶ್ವರನ ಮಹತ್ತರ ಮಣಿಹ. ಈ ಮಣಿಹಕ್ಕಾಗಿ ಮಾಹೇಶ್ವರನು ಪೂರ್ವಾಶ್ರಯವನ್ನು ಅಪೇಕ್ಷಿಸನು. ಪ್ರಕೃತಿ ಆಶ್ರಯವನ್ನು ಬಯಸನು. ವೈಯಕ್ತಿಕವಾಗಿ ಸುಖಸಂಪತ್ತುಗಳನ್ನು ಆಶಿಸನು. ಸ್ವಾರ್ಥಕ್ಕಾಗಿ ಏನನ್ನೂ ಯತ್ಕಿಂಚಿತ್ತನ್ನೂ ಸಂಪಾದಿಸನು, ಸಂಸ್ಥಾಪಿಸನು.

ಸರ್ವೋನ್ನತಿಯೇ ಮಾಹೇಶ್ವರನ ಮೂಲಭೂತವಾದ ಗುರಿ. ಇದನ್ನು ನೆರವೇರಿಸಲು ಸಮರ್ಥನಾಗುವಂತೆ ತನ್ನನ್ನು ಮುಮ್ಮೊದಲು ರೂಪಿಸಿಕೊಳ್ಳು ತ್ತಾನೆ. ನಿತ್ಯದಲ್ಲಿ ನಿಜದಲ್ಲಿ ನಿಷ್ಠೆಯುಳ್ಳವನಾಗುತ್ತಾನೆ, ನಿಷ್ಠೆಯನ್ನು ಭ್ರಷ್ಟ ಗೊಳಿಸುವವುಗಳನ್ನು ನಿರಸನ ಮಾಡುತ್ತಾನೆ. ತಾನು ಮೊದಲು ಶಿವವಾಗಿ ಶಿವಸ್ವರೂಪನಾಗಿ ಸರ್ವವನ್ನು ಶಿವವಾಗಿಸಲು ಸರ್ವರನ್ನು ಶಿವಸ್ವರೂಪರ ನ್ನಾಗಿಸಲು ಕಂಕಣಬದ್ಧನಾಗುತ್ತಾನೆ. ಈ ದಿಸೆಯಲ್ಲಿ ಆತನ ಶಕ್ತಿ ಸಂಪನ್ನವಾದ ಶಿವವಾದ ಬಸಿರು ಉಸಿರು, ಆತನ ಆಗಮ ಆಚಾರ ಎಲ್ಲವೂ ಸಾರ್ವತ್ರಿಕವಾದವು, ಸರ್ವೋನ್ನತಿಗೆ ಮೀಸಲಾದವು.

ಮಾಹೇಶ್ವರನು ಆರೋಗಿಸುವುದು ರಸಪದಾರ್ಥವನ್ನಲ್ಲ ಸುರಸಪ್ರಸಾದ ವನ್ನು. ಆತನದು ಬರೀ ಬುದ್ಧಿಯಲ್ಲ ಸುಬುದ್ಧಿ. ಆತನ ಆರಾಧ್ಯವಸ್ತು ಜ್ಞಾನ ಶಕ್ತಿಯುಕ್ತ ಗುರುಲಿಂಗ. ಇದರಿಂದಾಗಿ ಆತನಿಗೆ ಧರ್ಮಾಚಾರವೇ ಸ್ವರ್ಗ, ಜ್ಞಾನಾಚಾರವೇ ಅಪವರ್ಗ. ಇವುಗಳ ಹೊರತು ಬೇರೆ ಸ್ವರ್ಗಾಪವರ್ಗಗಳಿಲ್ಲ.

ಸಮರಸದ ಕನಸು ನನಸಾಗಬೇಕಾದರೆ ರಸಜೀವನಕ್ಕಿಂತ ಸು–ರಸಜೀವನ ಅವಶ್ಯ. ಸಂಶಯ ಅನಿಶ್ಚಯ ಅಜ್ಞಾನಾದಿಗಳು ಅಳಿದು ಶಾಂತಿ ಸಮಾಧಾನ ಗಳು ಉಳಿದು ಬಾಳಬೇಕಾದರೆ ಬುದ್ಧಿಗಿಂತ ಸು–ಬುದ್ಧಿ ಅಗತ್ಯ. ಬಾಳಿಗೆ ಬೆಳಕು ಮೂಡಿ ಬರಬೇಕಾದರೆ ಪ್ರಜ್ಞಾಶಕ್ತಿಯ ಪ್ರತಿಷ್ಠಾಕಳೆಯ ಗುರುಲಿಂಗಾರಾಧ ನೆಯೇ ಆಗಮಾಚಾರವಾಗಲೇಬೇಕು. ತ್ರಿವಿಧಾಚಾರವನ್ನು ತಳೆಯಲೇಬೇಕು. ಗುರುಲಿಂಗ ಪ್ರಸಾದೋಪಭೋಗವೇ ದಿವ್ಯಭೋಗ. ಗುರುದೇವ ಕೃಪಾ ಕಟಾಕ್ಷವೇ ದಿವ್ಯಯೋಗ.

ಮಾಹೇಶ್ವರನಿಗೆ ಆತ್ಮೋನ್ನತಿ ತಳಹದಿ, ಸರ್ವೋನ್ನತಿ ಮೇಲಿನ ಸೌಧ. ಆತನಿಗೆ ಆಚಾರವೇ ಸ್ವರ್ಗ. ಆಚಾರ ಪ್ರಚಾರವೆ ಅಪವರ್ಗ. ಬೇರೆ ಸ್ವರ್ಗಾಪ ವರ್ಗಗಳ ಆಸೆ ಆತನಿಗಿರುವುದಿಲ್ಲ.

"ಇಹಲೋಕ ಪರಲೋಕ ತಾನಿರ್ದಲ್ಲಿ.
ಗಗನ ಮೇರು ಮಂದಿರ ತಾನಿರ್ದಲ್ಲಿ.
ಸಕಲ ಭುವನ ಸತ್ಯಲೋಕ ತಾನಿರ್ದಲ್ಲಿ.

ನಿತ್ಯನಿರಂಜನ ಪರತತ್ತ್ವ ತಾನಿರ್ದಲ್ಲಿ.
ಉತ್ತರೋತ್ತರ ಚತುರ್ವರ್ಗಳೆಯು ತಾನಿರ್ದಲ್ಲಿ.
ಚಂದ್ರಸೂರ್ಯ ತಾರಾಮಂಡಲ ತಾನಿರ್ದಲ್ಲಿ.
ಅಂತರ ಮಹದಂತರ ತಾನಿರ್ದಲ್ಲಿ.
ಸ್ವತಂತ್ರ ಗುಹೇಶ್ವರ ತಾನಿರ್ದಲ್ಲಿ."

ಮಾಹೇಶ್ವರಾಂಗನಿಗೆ ಮರ್ತ್ಯಲೋಕ ಅಮರ್ತ್ಯಲೋಕವೆಂಬ, ಬಾನು ಬೆಟ್ಟವೆಂಬ, ಪರ-ಅಪರವೆಂಬ ಮುಂತಾದ ಯಾವ ಭೇದವಿಲ್ಲ. ಎಲ್ಲವನ್ನು ತನ್ನಲ್ಲಿ ಕಾಣುತ್ತಾನೆ. ಎಲ್ಲವೂ ತಾನಾಗಿರುತ್ತಾನೆ. ತನ್ನ ಏಳ್ಗೆಯಂತೆ ಎಲ್ಲರ ಏಳ್ಗೆಯೂ ಎಲ್ಲರ ಏಳ್ಗೆಯಂತೆ ತನ್ನ ಏಳ್ಗೆಯೂ ಎರಡೂ ಅವಿಭಾಜ್ಯ ಅನುಷ್ಠೇಯ ಧ್ಯೇಯಗಳಾಗಿರುತ್ತವೆ. ಮಾಹೇಶ್ವರನು ಯಾವ ಅಂತರವನ್ನೂ ಕಾಣದೆ ಅಂತರಂಗ ಬಹಿರಂಗ ಶುದ್ಧನಾಗಿ ಶಾಂತನಾಗಿರುತ್ತಾನೆ. ಆತನಿಗೆ ಬಹಿರಂಗವೆಲ್ಲ ಸ್ವರ್ಗ. ಅಂತರಂಗವೆಲ್ಲ ಅಪವರ್ಗ. ಆತ ಸರ್ವಸ್ವತಂತ್ರ; ಸತತ ಪ್ರಸನ್ನ.

"ಏನೆಂದು ಎನಲಿಲ್ಲ. ನುಡಿದು ಹೇಳಲಿಕ್ಕಿಲ್ಲ.
ನಿಜದಲ್ಲಿ ನಿಂದ ಬೆರಗು ಕುರುಹ ಅರಿವುದೆ?
ಮರಣ ಹರಿದು ಹತ್ತುವುದೇ ಬಯಲು?
ಅದು ತನ್ನಲ್ಲಿ ತಾನಾದ ಬಯಲು, ತಾನಾದ ಘನವು-ಇನ್ನೇನನರಸಲಿಲ್ಲ
ಅದು ಮುನ್ನವೇ ತಾನಿಲ್ಲ, ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ

## ಆಗಮ-ಆಚಾರ :

ಆಗಮ ಶೈವ. ಆಚಾರ ಗೌರ. ಅಂದರೆ ಶಿವನಿಂದ ಬಂದುದು ಆಗಮ. ಶ್ರೀ ಗುರುವಿನಿಂದ ಬಂದದು ಆಚಾರ. ಆಗಮ ಶಾಬ್ದ. ಆಚಾರ ಶಾರೀರಿಕ, ಅಂದರೆ ಶಬ್ದನಿಷ್ಠವಾದುದು ಆಗಮ, ಶರೀರನಿಷ್ಠವಾದುದು ಆಚಾರ. ಅಥವಾ ಆಗಮ ಶಬ್ದನಿಷ್ಠವಾದರೆ ಆಚಾರ ಅರ್ಥನಿಷ್ಠ. ವರ್ಣ ಮಂತ್ರ ಪದ ಈ ತ್ರಿವಿಧಾಧ್ವರೂಪಾಗಿದೆ ಆಗಮ; ಕಲಾ-ಭುವನ-ತತ್ತ್ವ ಈ ತ್ರಿವಿಧಾಧ್ವರೂಪಾಗಿದೆ ಆಚಾರ.

ನುಡಿಯಿಂದ ಬಂದುದು ಆಗಮ; ನಡೆಯಿಂದ ಬಂದುದು ಆಚಾರ. ಶ್ರವಣ ನಿಷ್ಠ ಆಗಮ. ಚರಣ ನಿಷ್ಠ ಆಚಾರ. ಅಂದರೆ ಅನನುಷ್ಠಿತವಾದುದು ಆಗಮ; ಅನುಷ್ಠಿತವಾದದು ಆಚಾರ. ತಾಂತ್ರಿಕೀಶ್ರುತಿ ಆಗಮ; ತಾತ್ತ್ವಿಕೀಪದ್ಧತಿ ಆಚಾರ.

ಗಮ, ಚರ ಇವೆರಡೂ ಗತ್ಯರ್ಥಕ ಧಾತುಗಳೆಂಬುದು ಗಮನಾರ್ಹ. ಇದರಿಂದಾಗಿ ಆಗಮವೆಂದರೆ ಜ್ಞಾನ, ಆಚಾರವೆಂದರೆ ಕ್ರಿಯೆ ಎಂದೂ ಅರ್ಥವಾಗುತ್ತದೆ. ಈ ಜ್ಞಾನಕ್ರಿಯೆಗಳನ್ನು ಅನುಷ್ಠಿಸಲು ಕಾಯ (ದೇಹ) ಬೇಕೇ ಬೇಕೆಂದು ಬೇರೆ ಹೇಳಬೇಕಿಲ್ಲ. ಆದ್ದರಿಂದ ಆಗಮಲಿಂಗ-ಆಚಾರಲಿಂಗಗಳೆರಡರ ನಡುವೆ ಕಾಯಲಿಂಗವು ನಿರ್ದಿಷ್ಟವಾಗಿದೆ; ನಿರ್ದಿಷ್ಟವಾಗಿರುವುದು ಸೂಕ್ತವಾಗಿದೆ. ಕಾಯಯೋಗವಿಲ್ಲದೆ ಜ್ಞಾನಕ್ರಿಯೆಗಳಿಗೆ ಆಶ್ರಯವಿಲ್ಲ; ಈ ಔಚಿತ್ಯವನ್ನು ಮಾಹೇಶ್ವರಸ್ಥಲದ ಲಿಂಗಸ್ಥಲಗಳು ಉಗ್ಗಡಿಸುತ್ತವೆ. ಮಾಹೇಶ್ವರ ಸ್ಥಲದ ಆಗಮ-ಕಾಯ-ಆಚಾರ ಈ ಮೂರು ತ್ರಿವೇಣಿ ಸಂಗಮ.

ಮಾಹೇಶ್ವರಸ್ಥಲದಲ್ಲಿ ಕ್ರಿಯೆಜ್ಞಾನಗಳಿಗೆರಡಕ್ಕೆ ಪ್ರಾಧಾನ್ಯತೆಯಿದೆಯೆಂಬುದನ್ನು 'ಕ್ರಿಯಾಗಮ'—'ಜ್ಞಾನಾಚಾರ' ಎಂಬೆರಡು ಸುಂದರ ಪದ ಪ್ರಯೋಗಗಳು ಸೂಚಿಸುತ್ತವೆ. ಇವೆರಡೂ ಸಮ ಸಮುಚ್ಚಯಗಳೆಂಬುದನ್ನು ಈ ಎರಡು ಪದಗಳು ಸೂಚಿಸುತ್ತವೆ. ಕ್ರಿಯಾಗ್ರಮವೆಂದರೆ ಕ್ರಿಯೆ-ಜ್ಞಾನ. ಜ್ಞಾನಚಾರವೆಂದರೆ ಜ್ಞಾನ-ಕ್ರಿಯೆ.

ಆಗಮಲಿಂಗದಲ್ಲಿಯೇ ಕ್ರಿಯಾಗಮವಿದ್ದಂತೆ ಭಾವಾಗಮ ಜ್ಞಾನಾಗಮಗಳಿವೆ. ಆಚಾರಲಿಂಗದಲ್ಲಿ ಧರ್ಮಾಚಾರ, ಭಾವಾಚಾರ ಜ್ಞಾನಾಚಾರಗಳಿವೆ. ಭಾವಾಗಾಮ ಭಾವಾಚಾರಗಳು ಭಾವಗತ ಕ್ರಿಯಾಜ್ಞಾನಗಳನ್ನು ಸೂಚಿಸುತ್ತವೆ. ಒಟ್ಟಿನಲ್ಲಿ ಈ ಮೂರು ಮೂರು ಅಂಗಗಳಲ್ಲಿನ ಜ್ಞಾನಕ್ರಿಯೆಗಳನ್ನು ನಿರೂಪಿಸುತ್ತವೆ. ಇವುಗಳಿಂದ ಈ ಕಾಯ ಪರಕಾಯವಾಗುವ ನಿರೂಪಣ ನಿಜಕ್ಕೂ ನಿಷ್ಠಾವಂತರಿಗೆ ಗಮನಾರ್ಹ.

ಲೋಕದಲ್ಲಿ ಆಪ್ತರು ಅನೇಕರು ಆದರೆ ಪರಮಾಪ್ತರು ಇಬ್ಬರೇಇಬ್ಬರು. ಒಬ್ಬ ಶಿವ; ಇನ್ನೊಬ್ಬ ಶ್ರೀ ಗುರು. ಇವರಿಬ್ಬರು ಲೋಕೋತ್ತರ ಶಕ್ತಿ ಸಂಪನ್ನರು. ಸರ್ವಜ್ಞರು, ಸುಪ್ರಸನ್ನರು. ಸ್ವತಂತ್ರರು. ಜೀವಾತ್ಮರನ್ನು ಉದ್ಧರಿಸುವ ಕರುಣಾಶಾಲಿಗಳು, ಮಹಾದಾನಿಗಳು. ನಿಶ್ಚಿತವಾದ ಅರ್ಥವುಳ್ಳ ವಕ್ತಾರರು. ಇದರಿಂದಾಗಿ ಇವರು ಆಡಿದ ನುಡಿಗಳು ಆಗಮ ಶ್ರುತಿಗಳು; ಪರಮ ಪ್ರಮಾಣಗಳು. ಆಗಮ ಪ್ರಣೀತ ಶಿವ; ಆಗಮಾಚಾರನುಷ್ಠಾನ—ಆಗಮ ಬೋಧನ-ಕರ್ತಾ ಆಚಾರ್ಯನಾದ ಶ್ರೀಗುರು.

ಕೇವಲ ಪ್ರಾಕೃತಿಕ ವಿಷಯ ಪ್ರತಿಪಾದಕ ನಿಗಮಗಳಿಗಿಂತ ಅಧಿಕವಾಗಿ ಆಗಮಗಳು ಆಧ್ಯಾತ್ಮಸಾಧನಕ್ಕೆ ಪ್ರಮಾಣಗಳು. ಜ್ಞಾನ, ಯೋಗ, ಚರ್ಯ, ಕ್ರಿಯಾ-ಪಾದಗಳಿಂದ ಕೂಡಿದ ಶಿವಾಗಮಗಳು ಸತ್ಯಸಾಧಕರಿಗೆ ಪರಮ ಉಪಾದೇಯಗಳಾಗಿವೆ. ಅರ್ಚನ-ಅರ್ಪಣ, ಧ್ಯಾನ-ಜ್ಞಾನ, ಶಿವವ್ರತಗಳನ್ನು ಪ್ರತಿಪಾದಿಸಿ ಶಿವತ್ವಾಭಿವ್ಯಕ್ತಿಗೆ ಸತ್ಯಸಾಧನಗಳಾಗಿವೆ. 'ತ್ರೈಗುಣ್ಯ ವಿಷಯ ವೇದಾಃ' ಎಂಬ ಗೀತೋಕ್ತಿಯಂತೆ ತ್ರಿಗುಣ ಪ್ರತಿ ಪಾದಕಗಳು ನಿಗಮಗಳು ತ್ರಿಗುಣ, ತ್ರಿಮಲ ಪರಿಹಾರಕಗಳು ಆಗಮಗಳು.

ವೈದಿಕ ತಾಂತ್ರಿಕವೆಂದು ಶ್ರುತಿ ದ್ವಿವಿಧ. ವೈದಿಕೀಶ್ರುತಿಗಿಂತಲೂ ತಾಂತ್ರಿಕೀಶ್ರುತಿ ಭಿನ್ನವೆಂದು ಭಾವಿಸುವವರುಂಟು. ಇವೆರಡನ್ನೂ ಸಮನ್ವಯಗೊಳಿಸಿದ ಕೀರ್ತಿ ವೀರಶೈವರದು. ಅಂತೆಯೇ ಈ ಮತದಲ್ಲಿ 'ಸರ್ವಶ್ರುತಿ ಸಮನ್ವಯ' ಪ್ರತಿಪಾದನೆ ಪ್ರಸಿದ್ಧವಾಗಿದೆ. ಇದರಿಂದಾಗಿ ಇದು ತಾಂತ್ರಿಕ ವೈದಿಕಮತವೆಂದೆನಿಸಿದೆ.

ಶಿವಪ್ರೋಕ್ತವಾದ ಆಗಮಂಗಳು ಗ್ರಂಥಸ್ಥವಾಗಿವೆ. ಆವುಗಳಲ್ಲಿರುವ ಮಂತ್ರಗಳನ್ನು ಪ್ರಮಾಣ ಶ್ಲೋಕಗಳನ್ನು ಆಚಾರ್ಯನು ತಾನು ಆಚರಿಸುವುದಲ್ಲದೆ ಉಚ್ಚರಿಸಿ ಶಿಷ್ಯರಿಗೆ ಶ್ರವಣ ಮಾಡಿಸುವುದರಿಂದ ಶಿವಾಗಮಂಗಳಿಗೆ ಶ್ರುತಿ' ಎಂದು ಹೆಸರು ಸಾರ್ಥಕವಾಗಿ ಬಂದಿದೆ.

ಶಿವಾಗಮಂಗಳಿಗೆ ತಂತ್ರವೆಂದು .ಮತ್ತೊಂದು ಹೆಸರು, ತಂತ್ರಶಬ್ದಕ್ಕೆ ಅನೇಕ ಅರ್ಥಗಳಿವೆ. ಆದರೆ ಆಗಮಂಗಳನ್ನೇ ಕುರಿತು ಪ್ರಯೋಗಿಸುವ ತಂತ್ರ ಪದದ ನಿರ್ವಚನವು ಹೀಗಿದೆ,

"ತನೋತಿ ವಿಪುಲಾನರ್ಥಾನ್ ತಂತ್ರಮಂತ್ರಸಮಾಶ್ರಿತಾನ್
ತ್ರಾಣಂಚಕುರುತೇ ಪುಂಸಾಂ ತೇನ ತಂತ್ರಮಿತಿಸ್ಮೃತಂ"

ತಂತ್ರಗತ, ಮಂತ್ರಗತ ವಿಶೇಷಾರ್ಥಗಳನ್ನು ವಿವರಿಸಿ ಶ್ರಾವಕರಿಗೆ ಜಿಜ್ಞಾಸುಗಳಿಗೆ ಕ್ರಿಯಾಜ್ಞಾನ ರೂಪ ಬಲವನ್ನುಂಟು ಮಾಡಿ ರಕ್ಷಿಸುವುದರಿಂದ ತಂತ್ರವೆಂದು ಸಾರ್ಥಕ ಹೆಸರು. ವೇದಶಾಸ್ತ್ರವು ವೇದಾಂತವೆಂದು ಹೆಸರಾದರೆ ಶಿವಾಗಮ ಶಾಸ್ತ್ರವು ಸಿದ್ಧಾಂತ ಶಾಸ್ತ್ರವೆಂದು ಹೆಸರಾಗಿದೆ. ಈ ಸಿದ್ಧಾಂತ ಶಾಸ್ತ್ರವನ್ನೇ ಪ್ರಧಾನವನ್ನಾಗಿ ಭಾವಿಸುವ ವೀರಮಾಹೇಶ್ವರರು ಕ್ರಿಯಾಗಮ ಭಾವಾಗಮ ಜ್ಞಾನಾಗಮಗಳಲ್ಲಿ ಮತ್ತು ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳಲ್ಲಿ ನಿರತರಾಗಿ ಪರಹಿಂಸೆ ನಿಷಿದ್ಧಕರ್ಮ ಅಪೇಯ ಪಾನಾದಿಗಳನ್ನು ಬಿಟ್ಟಿರುತ್ತಾರೆ; ಬಿಡುವಂತೆ ಶಿಷ್ಯರಿಗೆ ಬೋಧಿಸುತ್ತಾರೆ.

ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ದಿವ್ಯಾಗಮಗಳು ಸಿದ್ಧಾಂತ ರೂಪಾಗಿವೆ. ರುದ್ರಪರ ಶಿವಪರವಾಗಿವೆ. ಅವುಗಳಲ್ಲಿ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರಿ, ಸಾಧನ, ಸಾಧ್ಯವೆಂಬ ಷಟ್‌ಪದಾರ್ಥಗಳ ಬೋಧೆ ಮುಖ್ಯವಾಗಿದೆ.

ಜ್ಞಾನವು ಅವಬೋಧ, ಶಾಬ್ದ ಎಂದು ಎರಡು ಬಗೆ. ಅವಬೋಧ ಜ್ಞಾನ ಅತ್ಯಂತ ಸೂಕ್ಷ್ಮ, ಅಪ್ರಕಟಿತ. ಅದಕ್ಕೆ ಮೂಲವಾದ ಮಹಾನಾದ ಪರಶಿವನಲ್ಲಿ ಅವ್ಯಕ್ತವಾಗಿರುತ್ತದೆ. ಶಕ್ತಿ ಸ್ಪಂದನದಿಂದ ಆ ಅವ್ಯಕ್ತನಾದ ಪರನಾದವಾಗುತ್ತದೆ. ಅದನ್ನೇ ಪರಾವಾಣಿ ಎಂದೆನ್ನುತ್ತಾರೆ. ಅದು ಉಳಿದೆಲ್ಲ ವಾಣಿ

ಗಳಿಗೆ ಶಬ್ದಗಳಿಗೆ ಕಾರಣವಾಗಿದೆ. ಆ ಪರನಾದ ಅಥವಾ ಪರಾವಾಣಿಯಲ್ಲಿರುವ ಶಕ್ತಿಗೆ ಪರಬಿಂದು ಅಥವಾ ಪರಾಬಿಂದು ಎಂದು ಹೆಸರು.

ಆ ಪರಾವಾಣಿಯು ಸಾದಾಖ್ಯ ರೂಪ ಸದಾಶಿವನ ಉದಯ ಕಾಲದಲ್ಲಿ ಅಭಿವ್ಯಕ್ತವಾಗಿ ಪಶ್ಯಂತಿ ರೂಪವನ್ನು ತಾಳುತ್ತದೆ; ಅನುಭವಗಮ್ಯವಾಗುತ್ತದೆ; ಅಪರನಾದವೆಂದೆನಿಸುತ್ತದೆ, ಈ ಅಪರನಾದವಾದ ಪಶ್ಯಂತಿಯಲ್ಲಿರುವ ಶಕ್ತಿಗೆ ಅಪರಬಿಂದುವೆಂದು ಹೆಸರು. ಇದರಿಂದ ಈಶ್ವರ ತತ್ತ್ವೋದಯವಾಗುತ್ತದೆ. ಇದರಿಂದ ಮಧ್ಯಮಾವಾಣಿ ಉದಯಿಸುತ್ತದೆ. ಇದರಿಂದ ಸೂಕ್ಷ್ಮವಾದ ಸ್ವರಾಕ್ಷರಗಳು ಸಂಭವಿಸುತ್ತವೆ. ಈಶ್ವರ ತತ್ತ್ವದಿಂದ ಶುದ್ಧ ವಿದ್ಯೆ, ಶುದ್ಧ ವಿದ್ಯೆಯಿಂದ ಸ್ಥೂಲವಾದ ವರ್ಗೀಯ ಅವರ್ಗೀಯ ವರ್ಣಗಳು ಹುಟ್ಟುವವು. ಶುದ್ಧವಿದ್ಯೆಯಿಂದ ವೈಖರೀವಾಣಿ ಉದಯಿಸುತ್ತದೆ. ವೈಖರಿ ಶುದ್ಧ ವಿದ್ಯೆಯ ಕಾರ್ಯ. ಅಂತೆಯೆ ಶಬ್ದಮಯಿಯಾದ ನಿಗಮಾಗಮಗಳೂ ಶುದ್ಧ ವಿದ್ಯೆಯ ಕಾರ್ಯಗಳು. ಇದರಿಂದ ಆ ಮೂಲ ಚಿನ್ನಾದದ ಹಂತ ಹಂತದ ಅಭಿವ್ಯಕ್ತಿಯ ಸ್ವರೂಪವನ್ನು ಸಾಧ್ಯವಿದ್ದ ಮಟ್ಟಿಗೆ ತಿಳಿಯಲು ಯತ್ನಿಸಿದ್ದಾಯಿತು.

ಮಹೇಶ್ವರನಿಂದ ಮಹಾಪ್ರಣವೋತ್ಪತ್ತಿಯಾದಂತೆ, ವೈಖರಿಯ ವರ್ಣಮಾಲೆಯು ಉತ್ಪತ್ತಿಯಾಗುತ್ತದೆ. ಐವತ್ತು ಅಕ್ಷರಗಳೇ ವರ್ಣಾಧ್ವವೆನಿಸುತ್ತದೆ. ವರ್ಣಾಧ್ವದ ನೆರವಿನಿಂದ ಮಂತ್ರಾಧ್ವವುಂಟಾಗುತ್ತದೆ. ಈ ಮಂತ್ರಾಧ್ವವೇ ಆಗಮಹೃದಯ. ಪದಾಧ್ವವೇ ಆಗಮ ವಿಸ್ತಾರ.

ಪ್ರಣವದಿಂದಾದ ಐವತ್ತು ಅಕ್ಷರಗಳಲ್ಲಿ ಸ್ವರಾಕ್ಷರಗಳು ಸಜೀವಾಕ್ಷರಗಳು; ವ್ಯಂಜನಾಕ್ಷರಗಳು ನಿರ್ಜೀವಾಕ್ಷರಗಳು. ಸ್ವರಗಳಿಂದ ಕೂಡಿ ವ್ಯಂಜನಗಳೂ ಸಜೀವವಾಗುತ್ತವೆ. ಇವುಗಳ ಜೋಡಣೆಯಿಂದ ಪದಗಳು, ಪದಗಳಿಂದ ಮಂತ್ರಗಳು ಹುಟ್ಟುವುವು. ಮಂತ್ರಗಳನ್ನು ನಿರೂಪಿಸುವವೇ ಆಗಮಗಳು.

"ನಾದರೂಪತಯಾ ಪೂರ್ವಂ ಶಿವೇನಾವಿಷ್ಕೃತಃ ಪುನಃ ।
ಸದಾಶಿವಾದಿರೂಪೇಣ ತೇನೈವಾಸೌ ಪೃಥಕ್ ಪೃಥಕ್ ॥
ಕಾಮಿಕಾದಿ ಪ್ರಭೇದೇನ ಶಿಷ್ಯೇಭ್ಯಃ ಸಂಪ್ರಕಾಶಿತಃ ।
ಅಷ್ಟಾವಿಂಶತಿ ಸಂಖ್ಯೋಽಸೌ ಸಿದ್ಧಾಂತ ಇತಿ ಸಂಜ್ಞಿತಃ ॥"

ಮೂಲನಾದವು ಪರಶಿವನಲ್ಲಿ ಸತ್ಯಶಿದ್ಧವಾಗಿದೆ.ಅದನ್ನು ಮೊತ್ತಮೊದಲು ಶಿವನು ಸ್ಪಂದನದಿಂದ ಪ್ರಕಾಶಗೊಳಿಸುವನು. ಮರಳಿ ಸದಾಶಿವ ಈಶ್ವರ ಶುದ್ಧ ವಿದ್ಯೆಗಳ ಮುಖಾಂತರ ಪರಾಪಶ್ಯಂತಿ ಮಧ್ಯಮ ವೈಖರಿಯಾಗಿ ಹೊರಹೊಮ್ಮಿಸಿ ಶಿಷ್ಯರಿಗಾಗಿ ಕಾಮಿಕಾದಿ ಇಪ್ಪತ್ತೆಂಟು ಆಗಮಂಗಳನ್ನು ಬೋಧಿಸಿದ್ದಾನೆ. ಆ ಶಿವಾಗಮಂಗಳೇ ಸಿದ್ಧಾಂತವೆಂಬ ಸಂಜ್ಞೆಯುಳ್ಳವಾಗಿವೆ.

ಈ ಇಪ್ಪತ್ತೆಂಟು ಆಗಮಂಗಳಲ್ಲಿ ಕಾಮಿಕ, ಯೋಗಜ, ಚಿಂತ್ಯ, ಕಾರಣ ಅಜಿತ–ಎಂಬ ಆಗಮಂಗಳೈದು ಶಿವನ ಸದ್ಯೋಜಾತ ಮುಖದಿಂದ ; ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮಂತ, ಸುಪ್ರಭೇದ—ಇವೈದು ವಾಮದೇವ ಮುಖ ದಿಂದ ; ವಿಜಯ, ನಿಃಶ್ವಾಸ, ಸ್ವಾಯಂಭು, ಅನಲ, ವೀರ—ಎಂಬವೈದು ಅಘೋರಮುಖದಿಂದ ; ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ ಎಂಬಿವು ತತ್ಪುರುಷಮುಖದಿಂದ ; ಪ್ರೋದ್ಗೀತ, ಲಲಿತ, ಸಿದ್ಧ, ಸಂತಾನ, ಸರ್ವೋತ್ತರ, ಪಾರಮೇಶ್ವರ, ಕಿರಣ, ವಾತುಲ–ಎಂಬ ಎಂಟು ತಂತ್ರಗಳು ಈಶಾನಮುಖದಿಂದ ಉತ್ಪತ್ತಿಯಾಗುವುವು. ಇವುಗಳಲ್ಲಿ ಮೊದಲಿನವು ಹತ್ತು ಶಿವಸಂಹಿತೆಗಳೆಂದು ಶಿವಾಗಮಂಗಳೆಂದು ಹೇಳಿಸಿಕೊಳ್ಳುತ್ತವೆ. ಮುಂದಿನವು ಹದಿನೆಂಟು ರುದ್ರಸಂಹಿತೆಗಳು ಅಥವಾ ರೌದ್ರಾಗಮಂಗಳೆಂದು ಹೆಸರಾಗಿವೆ. ಇವನ್ನು ಮೊದಲು ಸದಾಶಿವನು ವಿದ್ಯೇಶ್ವರರಿಗೆ. ಬಳಿಕ ದಶಶಿವರಿಗೆ, ಅನಂತರ ಅನಾದಿರುದ್ರನೇ ಮೊದಲಾದ ಅಷ್ಟಾದಶ ರುದ್ರರಿಗೆ ಬೋಧಿಸಿದನು. ಇದ ರಿಂದಾದಿ ಈ ಹೆಸರುಗಳು. ಈ ಇಪ್ಪತ್ತೆಂಟು ಆಗಮಂಗಳು ಶಾಖೋಪಶಾಖೆ ಗಳಿಂದ ಅನೇಕ. ಇದೊಂದು ವಿಪುಲವಾದ ವಿಶಿಷ್ಟವಾದ ವಾಙ್ಮಯ ; ಅದೊಂದು ಶ್ರೇಷ್ಠ ಸಮಾಮ್ನಾಯ. ದಿವ್ಯಧರ್ಮ ಬೋಧಕ ವಾಙ್ಮಯ.

ಪ್ರಸ್ತುತ ನಿರವಯ ಮಾಹೇಶ್ವರಸ್ಥಲದಲ್ಲಿ ಶ್ರೀ ಗುರುವಿನಿಂದ ಬೋಧ ರೂಪದಲ್ಲಿ ಶಿಷ್ಯನ ಆಚರಣೆಗೆ ಬಂದ ಕ್ರಿಯೆ, ಭಾವ, ಜ್ಞಾನಗಳೇ ಆಗಮ ಗಳೆನಿಸಿವೆ. ಅಂದರೆ ಶ್ರೀಗುರು ಪ್ರಣವಪಂಚಾಕ್ಷರರೂಪ ಆಗಮಲಿಂಗವನ್ನು ಶಿಷ್ಯನಿಗೆ ಅನುಗ್ರಹಿಸಿ ಇಷ್ಟಲಿಂಗದ ಅರ್ಚನ ಭಾವನ ಜ್ಞಾನ ರೂಪ, ಆಗಮ ಕ್ರಿಯೆಗಳನ್ನು ಆಚರಿಸ ಹಚ್ಚುತ್ತಾನೆ. ಈ ಕ್ರಿಯೆಗಳಿಂದ ಅಂಗನ ಕಾಯವು ಅಕಾಯ—ಪರಕಾಯವಾಗಿ ಪರಿಣಮಿಸುತ್ತದೆ. ಆ ಪರಮಪಾವನ ಪರಕಾಯ

ದಿಂದ ಲೋಕಹಿತಕ್ಕಾಗಿ ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳು ಆಚರಿತ ವಾಗುತ್ತವೆ.

ಶಿವನಿಂದ ಬಂದುದು ತಂತ್ರಜಾಲ, ಶ್ರೀಗುರುವಿನಿಂದ ಬಂದುದು ಬರು ವುದು ಮಂತ್ರಶೀಲ, ತಂತ್ರಜಾಲ ಹೇಗೆ ಆಗಮವೆನಿಸಿದೆಯೋ ಹಾಗೆ ಮಂತ್ರ ಶೀಲವೂ ಆಗಮವೆನಿಸಿದೆ. ತಂತ್ರಜಾಲ ಪಾಂಡಿತ್ಯವುಳ್ಳ ಹಲವರಿಗೆ ಮಾತ್ರ ಸಾಧ್ಯ ; ಮಂತ್ರಶೀಲ ಸರ್ವರಿಗೂ ಸಾಧ್ಯ. ಅದು ಶಿವವಚನ ; ಇದು ಗುರು ವಚನ.

ಗುರು ಕರುಣಿಸುವ ಆಗಮ ಲಿಂಗವು ವಾಚಕ ಮತ್ತು ವಾಚ್ಯ ರೂಪಾಗಿದೆ, ಕಾಯ ಕ್ಷೇತ್ರದಲ್ಲಿ ಆಚಾರ ರೂಪದಲ್ಲಿ ಅಭಿವೃದ್ಧಿಸಿ ಅಭ್ಯುದಯ ಶ್ರೇಯಸ್ಸು ಗಳಿಗೆ ಕಾರಣವಾಗುತ್ತದೆ ; ಸತ್ತೆಯ ಅನುಷ್ಠಾನಕ್ಕೆ ಪ್ರತಿಷ್ಠಾಪನಕ್ಕೆ ಸಾಧನ ವಾಗುತ್ತದೆ.

"ಆಪ್ತೋಕ್ತಿರತ್ರ ಸಿದ್ಧಾಂತಃ ಶಿವ ಏವಾಪ್ತಿಮಾನ್ಯತಃ
ನ ತಾಭ್ಯಾಂ ಸದೃಶಃ ಕಿಞ್ಚಿತ್ ಶ್ರೇಯ ಆಪ್ತಿ ವಿಧಾಯಕಃ ।
ಸಿದ್ಧಾಂತಃ ಸೇವ್ಯತೇ ಸದ್ಭಿಃ ಶಕ್ತಿಪಾತ ಪವಿತ್ರಿತೈಃ
ಕಾಮಕಾರಿತಯಾನ್ಯೈಸ್ತು ನಿಂದ್ಯತೇ ಪಶುಶಾಸ್ತ್ರವತ್ "

ಎಂದು ಶ್ರೀಕಂಠಸೂರಿಯು ತನ್ನ ರತ್ನತ್ರಯ ಗ್ರಂಥದಲ್ಲಿ ಹೀಗೆ ಹೇಳಿ ದಾನೆ. ಶಿವನೇ ಆಪ್ತ. ಆತನ ಉಕ್ತಿಯೇ ಸಿದ್ಧಾಂತ, ಆಪ್ತ, ಆಪ್ತವಾಕ್ಯ ಗಳಿಗಿಂತ ಬೇರೆ ಶ್ರೇಯಸ್ಕರ ವಿಧಾಯಕವಿಲ್ಲ. ಸತ್ಯವಂತರು ಅಂತಹ ಆಗಮ ಸಿದ್ಧಾಂತವನ್ನ ಸೇವಿಸುತ್ತಾರೆ ; ಶಕ್ತಿಪಾತ ಚಿನ್ನೆಯಿಂದ ಪರಿಶುದ್ಧರಾಗಿ ಶ್ರೀ ಗುರುವಿನ ಕರುಣೆಯಿಂದ ಪಡೆದು ಅನುಷ್ಠಿಸುತ್ತಾರೆ. ಉಳಿದವರು ತೆಗಳು ತ್ತಾರೆ. ಏಕೆಂದರೆ ಇವರು ಕಾಮ್ಯಭಾವಿಗಳು ; ಕಣ್ಣಿಂಜಲುಳ್ಳವರು.

ಆಗಮ ಅದೊಂದು ಅಂಬುಧಿ. ಅದರ ಬಳಿಗೆ ನೇರವಾಗಿ ನಡೆದು ಹೋಗಿ ಕುಡಿದರೆ ಅದರ ನೀರು ಉಪ್ಪು. ಶ್ರೀಗುರು ನಾರಿಕೇಳ ಕಲ್ಪವೃಕ್ಷ. ಆ ಆಗಮಾಂಬುಧಿಯ ನೀರು ಶ್ರೀ ಗುರುವೆಂಬ ತೆಂಗಿನ ಮರದಲ್ಲಿ ಬಂದರೆ ಸಿಹಿ

ಯಾಗುವುದು, ನೀರಡಿಕೆಯನ್ನು ನಿವಾರಿಸುವುದು. ನಿಶ್ಚಲ-ನಿರ್ಮಲ ಭಾವಗಳನ್ನು ಅಳವಡಿಸುವುದು.

ಶಕ್ತಿಪಾತಾನಂತರ ಶ್ರೀ ಗುರುವಿನಿಂದ ಶಿವದೀಕ್ಷೆಯ ಪಡೆದು ಪವಿತ್ರ ಹೃದಯರಾದವರಿಗೆ ಶಿವಾಗಮ ಸಿದ್ಧಾಂತಾನುಷ್ಠಾನದಲ್ಲಿ ಶ್ರದ್ಧೆ. ಉಳಿದ ಪಶುಶಾಸ್ತ್ರ ವಾಸನೆಯುಳ್ಳವರಿಗೆ ಶಿವಾಗಮ ಸಿದ್ಧಾಂತಗಳಾದ ಕ್ರಿಯಾಗಮ ಭಾವಾಗಮ ಜ್ಞಾನಾಗಮ ನಿಯಮಾನುಷ್ಠಾನವು ಸಾಧ್ಯವಿಲ್ಲ. ಮತ್ತು ಪಾಶಬದ್ಧರಾದ ಪಶುರೂಪ ಜನರ ನಿಂದೆಯಿಂದ ಶಿವಾಗಮ ಸಿದ್ಧಾಂತಕ್ಕೆ ಯಾವ ಕೊರತೆಯೂ ಅಪ್ರಾಣಿಕತೆಯೂ ಉಂಟಾಗುವುದಿಲ್ಲ.

ವೇದವೆಂದರೆ ಜ್ಞಾನ. ಆಗಮವೆಂದರೆ ಕ್ರಿಯೆ. ಜ್ಞಾನಕ್ರಿಯೆಗಳಂತೆ ವೇದಾಗಮಗಳಿಗೂ ಅವಿರೋಧ. ವೇದಧರ್ಮವಾದ ಜ್ಞಾನಾಚಾರವನ್ನೇ ಶಿವಾಗಮ ಸಿದ್ಧಾಂತವು ಪ್ರತಿಪಾದಿಸುತ್ತದೆ. "ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ । ವೇದಬಾಹ್ಯ ವಿರೋಧಿತ್ವಾತ್ ವೇದಸಮ್ಮತ ಉಚ್ಚತೇ॥" ಎಂದು ಶ್ರೀಜಗದ್ಗುರು ರೇಣುಕಶಿವಾಚಾರ್ಯರು ನಿರ್ದಿಷ್ಟರಾಗಿ ನಿರೂಪಿಸಿದ್ದಾರೆ. ಇದರಿಂದಾಗಿ ಜ್ಞಾನದಂತೆ ಕ್ರಿಯೆಯು ಹೇಗೆ ಪ್ರಮಾಣವೋ ಹಾಗೆ ನಿಗಮದಂತೆ ಆಗಮವೂ ಪ್ರಮಾಣ.

ಆಗಮದ ನಾಲ್ಕು ಚರಣಗಳಲ್ಲಿ ಜ್ಞಾನ-ಕ್ರಿಯೆಗಳೂ ಎರಡು ಚರಣಗಳಾಗಿವೆ. ಇನ್ನೆರಡು ಯೋಗ-ಚರ್ಯಗಳು. ಇದರಿಂದಾಗಿ ಆಗಮ ಸರ್ವಸಮನ್ವಯ ಸಮಾಮ್ನಾಯ. ಏನೆಲ್ಲವನ್ನು ಬೆಳಗುವ ಆ ಪರಶಿವನಲ್ಲಿ ನಿತ್ಯಸಿದ್ಧವಾದ ಸತ್ಯಶುದ್ಧವಾದ ದೃಕ್ಕ್ರಿಯಾಯೋಗವೇ ಆಗಮವಾಙ್ಮಯ. ಧರ್ಮ ಧಾರಣ ಕಾರಣವೇ ಆಗಮಾಮ್ನಾಯ.

ಮಾಹೇಶ್ವರನಿಗೆ ಆಗಮಉಶ್ವಾಸ; ಆಚಾರ ನಿಶ್ವಾಸ. ಇವೆರಡಿಲ್ಲದೆ ಇವನು ಬಾಳನು, ಬದುಕನು. ಆಗಮರೂಪ ಜ್ಞಾನವನ್ನು ಆಚಾರರೂಪಕ್ರಿಯೆಯನ್ನು (ಧರ್ಮವನ್ನು) ಸಮನ್ವಯಗಳಿಸಿಕೊಳ್ಳುವುದೇ ಈತನ ಜೀವನ ಧ್ಯೇಯ. ಇದಕ್ಕಾಗಿಯೇ ಈತನ ಪರಾಕಾಯ. ಈತನು ತನ್ನ ಕಾಯಕ್ಷೇತ್ರದಲ್ಲಿ ಬಿತ್ತಿ ಬೆಳೆಯತಕ್ಕ ಬೆಳೆಗಳೆಂದರೆ ಒಂದು ಆಗಮ; ಇನ್ನೊಂದು ಆಚಾರ. ಆಗಮ ಘ್ರಾಣದಲ್ಲಿ ಆಚಾರವನ್ನು ಆಘ್ರಾಣಿಸುತ್ತ ಇರುತ್ತಾನೆ; ಆಗಮ ಜಿಹ್ವೆಯಲ್ಲಿ

ಆಚಾರಸ್ವಾದವನ್ನು ಆಸ್ವಾದಿಸುತ್ತ ಇರುತ್ತಾನೆ. ಆತನಿಗೆ ಆಗಮ ಅದೊಂದು ಸುಶಬ್ದಗುಣವುಳ್ಳ ಚಿದ್ಗಗನ; ಆಚಾರ ಅದೊಂದು ಸಂಸ್ಪರ್ಶಗುಣವುಳ್ಳ ಸತ್ವವನ. ಆಗಮನಿಷ್ಠೆ, ಆಚಾರನಿಷ್ಠೆಗಳೇ ಆತನಿಗೆ ಸರ್ವಸಾಹಿತ್ಯ; ಶಿವಸಾಹಿತ್ಯ.

ಧರ್ಮವೆಂಬ ದೇವವೃಕ್ಷಕ್ಕೆ ಬೀಜ ಆಗಮ, ಫಲ ಆಚಾರ, ಭೂಮಿಕೆ ಕಾಯ, ಇಷ್ಟನ್ನು ಹೇಳುವುದೇ ಮಾಹೇಶ್ವರಲಿಂಗ ನಿರಮಯಸ್ಥಲಗಳ ಹೃದಯ.

ಆಚಾರ ಧರ್ಮದಿಂದ ಆರಂಭವಾಗುತ್ತದೆ. ನ್ಯಾಯನೀತಿ ನಿಯಮಂಗಳ ಅನುಷ್ಠಾನವೇ ಧರ್ಮ. ಊರ್ಜಿತತೆ ಉಂಟಾಗಬೇಕಾದರೆ ಧರ್ಮವೇ ಆಧಾರ.

ಆಧಾರಚಕ್ರ ಆಚಾರದ ನೆಲೆ. ಕ್ರಿಯೆಯೇ ಅದರ ಶಕ್ತಿ. ಶ್ರದ್ಧೆಯೇ ಆಚಾರದ ಜೀವಾಳ. ಚಿತ್ತನಿರೋಧವೇ ಬಂಡವಾಳ. "ಆಚಾರಕ್ಕೆ ಆಶ್ರಮಂಗಳೇ ಆಧಾರವು. ಅದು ಅಂದರೆ ಆಧಾರಚಕ್ರವು ಬ್ರಹ್ಮಚರ್ಯಾದಿ ಚತುರ್ದಳಂಗಳಿಂದೊಪ್ಪುತ್ತಿಹುದು. ತದಾಚಾರಸೇವಕನೇ ಭಕ್ತನು. ಶ್ರದ್ಧೆಯೇ ಚೈತನ್ಯವು; ಚಿತ್ತವೇ ಹಸ್ತ. ಚಿತ್ತವೆಂದರೆ ನಿಯಮಜ್ಞಪ್ತಿಜ್ಞಾನ. ಆಶ್ರಮಂಗಳಿಗೆ ಪೃಥ್ವಿಯೇ ಮೂಲ; ಇದಕ್ಕೆ ಪ್ರಾಣವೇ ಆಧಾರಮಾಗಿ ನಾಸಿಕವನನುಸರಿಸಿರ್ಪುದು. ಗುದುವೇ ಸ್ಥಾನ: ಇದಕ್ಕೆ ವಾದಿಸಾಂತವೇ ಬೀಜವು.

ಗುರುವಿಗೆ ಷಟ್ಕರ್ಮಗಳೇ ಸ್ವಾಧಿಷ್ಠಾನವು. ಯಜನಾದಿಷಡ್ದಳಂಗಳಿಂದೊಪ್ಪುತ್ತಿಹುದು. ಬಾದಿಲಾಂತವೇ ಬೀಜ. ತದ್ಗುರುಸೇವಕನೇ ಮಾಹೇಶ್ವರನು. ನಿಷ್ಠೆಯೇ ಚೈತನ್ಯವು. ಬುದ್ಧಿಯೇ ಹಸ್ತವು. ಕರ್ಮಕ್ಕೆ ಜಲವೇ ಮೂಲವಾದುದರಿಂದಉಪದೇಶಕತೃವಾದುದರಿಂದ ಜಿಹ್ವೆಯನನುಭವಿಸುತಿರ್ಪುದು ಪಾತ್ರಾಪಾತ್ರವಿವೇಕ ಪರಿಶುದ್ಧಿಯಿಂ ಗುಹ್ಯವೇ ಸ್ಥಾನವಾಯಿತ್ತು."

ಈ ಆಧಾರ ಸ್ವಾಧಿಷ್ಠಾನಚಕ್ರವಿವರಣೆಯಲ್ಲಿ ಆಚಾರಕ್ಕೆ ಬೇಕಾದ ಸಾಹಿತ್ಯವಿದೆ; ಸಂವಿತ್ತಿದೆ. ಇವುಗಳ ಆಧಾರದಲ್ಲಿ ಅನುಷ್ಠಿಸಿದ ಆಚಾರಸ್ವಾತ್ಮನ ಅಧಿಷ್ಠಾನಕ್ಕೆ ಅನುಕೂಲವಾಗುತ್ತದೆ.

ಆಚಾರದಿಂದ ಕಾರ್ಮಿಕಮಲ ತೊಳೆದುಹೋಗುತ್ತದೆ; ಕಾರ್ಮಿಕಮಲಕ್ಕೆ ಮೂಲವಾದ ಪೃಥ್ವಿಮದ, ಸಲಿಲಮದಗಳ ಸಂಹಾರವಾಗುತ್ತದೆ. ಪೃಥ್ವಿಮದದಿಂದ ತನುಗುಣ, ಸಲಿಲಮದದಿಂದ ಸಪ್ತಧಾತು ಉಲ್ಬಣಉಂಟಾಗುತ್ತವೆ.

ಇವನ್ನು ನೀಗಬೇಕಾದರೆ ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳು ಬೇಕು. ಕುಲ, ಛಲ, ಧನ, ರೂಪು, ಯೌವನ, ವಿದ್ಯೆ, ರಾಜ್ಯ, ತಪಸ್ಸು ಎಂಬ ಬಹಿರಂಗದ ಎಂಟುಮದಗಳನ್ನು ಸಂಸ್ಥಿತ, ತೃಣೀಕೃತ, ವರ್ತಿನಿ, ಕ್ರೋಧಿನಿ, ಮೋಹಿನಿ, ಅತಿಚಾರಿಣಿ, ಗಂಧಚಾರಿಣಿ, ವಾಸಿನಿ ಎಂಬ ಅಂತರಂಗದ ಎಂಟು ಮದಗಳನ್ನು ತ್ರಿವಿಧಾಚಾರಗಳು ತೀರ ತೊಳೆದುಹಾಕಬೇಕು.

ಬಹಿರಂಗ ಮದಗಳ ಸ್ವರೂಪ ಸ್ಪಷ್ಟವಾಗಿವೆ. ಅಂತರಂಗ ಮದಗಳ ಲಕ್ಷಣವನ್ನು ತಿಳಿಯಬೇಕು.

ಈ ಶರೀರವೇ ಶಾಶ್ವತ. ಈ ದೇಹವೇ ನಾನು. ಇದಕ್ಕೇಕೆ ದೀಕ್ಷಾ ಸಂಸ್ಕಾರ ? ಎಂದು ಮದಿಸಿ ದೇಹಭಾವದಲ್ಲಿ ಇರುವುದೇ ಸಂಸ್ಥಿತಮದ. ಎಂಥವರನ್ನೂ ತೃಣಸಮಾನವಾಗಿ ಕಂಡು ತಿರಸ್ಕರಿಸುವುದೇ ತೃಣೀಕೃತಮದ. ಪರಧನ, ಪರದೈವ, ಪರನಿಂದೆ, ಪರಹಿಂಸಾದಿಗಳಲ್ಲಿ ಚರಿಸುವುದೇ ವರ್ತಿನಿಮದ, ನಿರ್ನಿಮಿತ್ತವಾಗಿ ಇನ್ನೊಬ್ಬರಮೇಲೆ ಮುನಿಸುತಾಳುವುದೇ ಕ್ರೋಧಿನಿಮದ. ಯಾವಾಗಲೂ ಪತ್ನಿಪುತ್ರಾದಿಗಳಲ್ಲಿ ಮೋಹಿಸಿರುವುದೇ ಮೋಹಿನಿಮದ. ಮೋಹದ ವಶರಾಗಿ ಎಲ್ಲದರಲ್ಲಿ ಸೀಮೆಮೀರಿ ನ್ಯಾಯಮೀರಿ ನಿಯಮಮೀರಿ ವರ್ತಿಸುವುದೇ ಅತಿಚಾರಿಣಿಮದ. ಆಣವ ಮಾಯಾ ಕಾರ್ಮಿಕ ಮಲತ್ರಯ ವಾಸನೆಯಲ್ಲಿರುವುದೇ ಗಂಧಚಾರಿಣಿಮದ. ಸತ್ಪುರುಷರ ಸಂಗ, ಶಿವಾನುಭಾವ ಶ್ರವಣಗಳಿಲ್ಲದೆ ಸಂಸಾರ ಸುಖಭ್ರಾಂತಿ ಹಿಂಗದೆ ಇರುವುದೇ ವಾಸಿನಿಮದ. ಇವೆಲ್ಲವೂ ನೀತಿನಿಯಮಗಳಿಗೆ ವಿರೋಧವಾದವು; ಇವನ್ನೆಲ್ಲ ತೊಲಗಿಸುವುದೇ ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳ ಧ್ಯೇಯ. ಅಲ್ಲದೆ ತನುವ್ಯಸನ. ಮನೋವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನಗಳೆಂಬ ಸಪ್ತವ್ಯಸನಗಳನ್ನು, ಹಸಿವು, ನೀರಡಿಕೆ, ಶೋಕ, ಮೋಹ, ಹುಟ್ಟು–ಸಾವು ಎಂಬ ಷಡೂರ್ಮಿಗಳನ್ನು, ಕಾಮಾದಿ ಅರಿಷಡ್ವರ್ಗಗಳನ್ನು, ಜಾತಿ, ವರ್ಣ, ಆಶ್ರಮ, ಕುಲ ಗೋತ್ರ ನಾಮವೆಂಬ ಷಡ್ಭ್ರಮೆಗಳನ್ನು ಅಸ್ತಿ ತೇ ಜಾಯತೆ, ವಿಪರಿಣತೇ, ವಿವರ್ಧತೇ, ಅಪಕ್ಷಯತೇ, ವಿನಶ್ಯತೇ ಎಂಬ ಷಡ್ಭಾವ ವಿಕಾರಗಳನ್ನು ಅವಿದ್ಯೆ–ಅಸ್ಮಿತೆ–ರಾಗ–ದ್ವೇಷ–ಅಭಿನಿವೇಶ ಎಂಬ ಪಂಚಕ್ಲೇಶಗಳನ್ನು ತಾಪತ್ರಯಗಳನ್ನು ನಿವಾರಿಸುವುದೇ ಆಚಾರದ ಕರ್ತವ್ಯ.

ಪ್ರವೃತ್ತಿಗೆ ಕಾರಣವಾದ ನಡೆನುಡಿಗಳು ಅನಾಚಾರ, ನಿವೃತ್ತಿಗೆ ಕಾರಣವಾದ ನಡೆ ನುಡಿಗಳು ಆಚಾರ. ತ್ಯಾಗಾಂಗನಿಗೆ ಆಚಾರವೇ ಆಧಾರ.

"ಆಚಾರ ತನುಸಂಬಂಧವಾದಲ್ಲಿ ಶ್ರೀ ಗುರು ಸನ್ನಿಹಿತನು. ಅರಿವು ಮನ ಸಂಬಂಧವಾದಲ್ಲಿ ಶಿವಲಿಂಗಸನ್ನಿಹಿತನು. ಈ ಉಭಯಲಿಂಗಸಂಬಂಧವಾದಲ್ಲಿ ಜಂಗಮಲಿಂಗಸನ್ನಿಹಿತನು. ಇದುಕಾರಣ ಕೂಡಲ ಚನ್ನಸಂಗಯ್ಯನಲ್ಲಿ ತ್ರಿವಿಧ ಲಿಂಗಸಂಪನ್ನ ಶರಣನು" "ಆಚಾರ ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ ಆ ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗ ಸ್ವಾಯತ. ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು. ಈ ಭೇದವ ಭೇದಿಸಬಲ್ಲಡೆ ಕೂಡಲ ಸಂಗಯ್ಯನಲ್ಲಿ ಲಿಂಗೈಕ್ಯ ಕಾಣಾ !"

"ಆಚಾರ ಗುರುಸ್ಥಲ, ಅನುಭಾವ ಲಿಂಗಸ್ಥಲ. ಶಿವಧಾನ ಅರ್ಪಿತಸ್ಥಲ. ಪರಿಣಾಮ ಪ್ರಸಾದಿಸ್ಥಲ. ಸಮಾಧಾನ ಶರಣಸ್ಥಲ. ಅರಿವು ಐಕ್ಯಸ್ಥಲ ಇಂತೀ ಷಡ್ವರ್ಗಸರ್ವಾಂಗನಿರತ ಕೂಡಲಚೆನ್ನಸಂಗಾ, ನಿಮ್ಮ ಶರಣ."

"ಆಚಾರದರಿವು ಆಗಮವ ಕೂಡಿಕೊಂಡಿಹುದು. ಗುರುವಿನ ಆಚಾರದರಿವು ನಿಷ್ಠೆಯ ಕೂಡಿಕೊಂಡಿಹುದು. ಲಿಂಗಾಚಾರದರಿವು ಕ್ರಿಯೆಯ ಕೂಡಿಕೊಂಡಿಹುದು. ಸಮಯಾಚಾರದರಿವು ನಿಷ್ಕ್ರಿಯೆಯ ಕೂಡಿಕೊಂಡಿಹುದು. ಇಂತೀ ಚತುರ್ವಿಧದೊಳಗೆ ಆವ ಅಂಗವು ಅಲ್ಲ; ಕೂಡಲಚೆನ್ನಸಂಗನ ಶರಣನ ಪರಿ ಬೇರೆ."

"ಆಚಾರಲಿಂಗತ್ರಿವಿಧ: ಸದಾಚಾರ, ನಿಯತಾಚಾರ, ಗಣಾಚಾರ, ಎಲ್ಲ ಜನವಹುದೆಂಬುದೆ ಸದಾಚಾರ. ಹಿಡಿದ ವ್ರತನಿಯಮವ ಬಿಡದಿಹುದೇ ನಿಯತಾಚಾರ. ಶಿವನಿಂದೆಯ ಕೇಳದಿಹುದೆ ಗಣಾಚಾರ.

"ಆಚಾರಲಿಂಗಭಕ್ತಿ, ಗುರುಲಿಂಗಭಕ್ತಿ, ಶಿವಲಿಂಗಭಕ್ತಿ, ಜಂಗಮಲಿಂಗ ಭಕ್ತಿ, ಪ್ರಸಾದಲಿಂಗ ಭಕ್ತಿ, ಮಹಾಲಿಂಗ ಭಕ್ತಿ; ಇಂತೀ ಆರು ಸಹಿತ ಆಚಾರ, ಆಚಾರ ಸಹಿತ ಗುರು. ಗುರು ಸಹಿತ ಲಿಂಗ, ಲಿಂಗಸಹಿತ ಜಂಗಮ, ಜಂಗಮ ಸಹಿತ-ಪ್ರಸಾದ, ಪ್ರಸಾದಸಹಿತ ಮಹಾಲಿಂಗ. ಇಂತೀ ಎಲ್ಲ ಸ್ಥಲಂಗಳು ತಾನಾಗಬಲ್ಲಡೆ ಕೂಡಲ ಚನ್ನಸಂಗಯನಲ್ಲಿ ಲಿಂಗೈಕ್ಯವು"

"ಆಚಾರಲಿಂಗ ಮೋಹಿತನಾದಡೆ, ಸಖೀ ಸಹೋದರ ಮೋಹವ ಮರೆಯಬೇಕು. ಆಚಾರಲಿಂಗಭಕ್ತನಾದಡೆ, ಪೂರ್ವಚಾರವ ನಡೆಯಲಾಗದು. ಆಚಾರಲಿಂಗ ಪೂಜಕನಾದಡೆ, ಅನ್ಯಪೂಜೆಯ ಮಾಡಲಾಗದು. ಆಚಾರಲಿಂಗ ವೀರನಾದಡೆ, ಹಿಡಿದವ್ರತನೇಮವ ಬಿಡಲಾಗದು. ಆಚಾರಲಿಂಗ ಪ್ರಸಾದಿಯಾದಡೆ, ಅಶುಚಿಯಾಗಿರಲಾಗದು, ಆಚಾರಲಿಂಗಪ್ರಾಣಿಯಾದಡೆ ಭಕ್ತಿನಿಂದೆಯ ಕೇಳಲಾಗದು. ಇದು ಕಾರಣ, ಕೂಡಲ ಚೆನ್ನಸಂಗಯ್ಯನಲ್ಲಿ ಈ ಆರು ಸಹಿತ-ಆಚಾರಲಿಂಗಭಕ್ತಿ."

ಆಚಾರವಿಡಿದು ಲಿಂಗ, ಅನುಭಾವವಿಡಿದು ಜಂಗಮ.
ತನುವಿನ ಪ್ರಾಣ ಆಚಾರ, ಮನದ ಪ್ರಾಣ ಅನುಭಾವ.
ಇದು ಕಾರಣ, ಕೂಡಲ ಚೆನ್ನಸಂಗಮದೇವಾ,
ಲಿಂಗವನು ಜಂಗಮವನು ಬೇರರಸಲಿಲ್ಲ."

"ಆಚಾರವೆ ಅಂಗವಾದವರಿಗೆ ಅಂಗಾಶ್ರಯ ಹೊದ್ದುವುದೆ ಅಯ್ಯಾ? ತನು-ಭಕ್ತ, ಮನ-ಲಿಂಗ ಸಂಗವಾದವರಿಗೆ ಅನರ್ಪಿತ ಹೊದ್ದುವುದೆ ಅಯ್ಯಾ ? ಈ ಉಭಯ ಸಂಗನಿರ್ಣಯದ, ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನೇ ಬಲ್ಲ."

ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ, ಸಮತೆಯೆಂಬ ತಿರುವ ಮೆಟ್ಟಿ, ಜೀವಡೆಗೈದು, ಶಿಷ್ಯನೆಂಬ ಅಂಬ ತೊಡಚಿ, ಗುರುವೆಂಬ ವ್ಯಾಧನು ಲಿಂಗವೆಂಬ ಬಯಲ ಗುರಿಯನೆಚ್ಚಡೆ, ಗರಿದೋರದಂತೆ ಮುಳುಗಿಯಡಗಿತ್ತು! ಆ ಗುರಿಯನು ಬಾಣವನು ಅರಸಲುಂಟೆ, ಕೂಡಲಚೆನ್ನಸಂಗಾ, ನಿಮ್ಮಲ್ಲಿ?"

"ಆಚಾರವೆಂಬುದು ಅಗೋಚಾರ."

"ಆಚಾರವೆಂಬುದು ಕೂರಲಗು, ತಪ್ಪಿ ಬಂದಡೆ ಪ್ರಾಣವ ತಗುಲುವುದು ಅದು ಕಾರಣ, ಅರಿದರಿದು ಆಚರಿಸಬೇಕು.—ಆಚಾರ ವಿಚಾರ ಉಭಯದ ವಿಚಾರವ ನೋಡದೆ, ಶಿವದೀಕ್ಷೆಯ ಮಾಡಲಾಗದು. ಅದೆಂತೆಂದಡೆ: ಪರರ ಹೆಣ್ಣಿಗೆ ಕಣ್ಣಿಡದಿಹುದೆ ಒಂದನೆಯ ಆಚಾರ. ಪರರ ದ್ರವ್ಯವ ಅಪಹಾರ ಮಾಡದಿಹುದೆ ಎರಡನೆಯ ಆಚಾರ. ಸುಳ್ಳಾಡದಿಹುದೆ ಮೂರನೆಯ ಆಚಾರ, ವಿಶ್ವಾಸ ಘಾತವ ಮಾಡದಿಹುದೇ ನಾಲ್ಕನೆಯ ಆಚಾರ. ಪ್ರಾಣಹಿಂಸೆಯ ಮಾಡದಿಹುದೇ ಅಯ್ದನೆಯ ಆಚಾರ, ಸಕಲ ಶಿವಶರಣರ್ಗೆ ಸಂತೋಷವು

ಪುಟ್ಟಿಸುವುದೆ ಆರನೆಯ ಆಚಾರ. ಸ್ವೀಕರಿಸಿದ ನೇಮವ ಪ್ರಾಣಾಂತ್ಯವಾಗಿ ಬಿಡೆನೆಂಬುದೆ ಏಳನೆಯ ಆಚಾರ, ಷಟ್‌ಸ್ಥಲದವರ ಧಿಕ್ಕರಿಸುವ ಜನರ ಸೀಳುವೆನೆಂಬುವ ವ್ರತವೇ ಎಂಟನೆಯ ಆಚಾರ. ಕೆಟ್ಟಜನರ ಸಹವಾಸವ ಮಾಡದಿಹುದೇ ಒಂಬತ್ತನೆಯ ಆಚಾರ. ಸಜ್ಜನ ಸಂಗತಿಯ ಬಿಡದಿಹುದೇ ಹತ್ತನೆಯ ಆಚಾರ. ಅನ್ಯದೇವತಾಭಜನೆಗೆ ವಿಮುಖನಾಗಿಹುದೆ ಹನ್ನೊಂದನೆಯ ಆಚಾರ. ಶಿವನೇ ಸರ್ವ ದೇವ ಶಿಖಾಮಣಿಯೆಂದು ಮನದಲ್ಲಿ ಅಚ್ಚೊತ್ತಿಪ್ಪುದೇ ಹನ್ನೆರಡನೆಯ ಆಚಾರ. ಶಿವನಿಗೆ ಶಿವಗಣಂಗಳಿಗೆ ಭೇದವ ಮಾಡದಿಹುದೇ ಹದಿಮೂರನೆಯ ಆಚಾರ. ಸಕಲ ಜೀವಿಗಳಿಗೆ ಹಿತವ ಬಯಸುವುದೇ ಹದಿನಾಲ್ಕನೆಯ ಆಚಾರ, ಸರ್ವರಿಗೆ ಹಿತವ ಮಾಡುವುದೇ ಹದಿನೈದನೆಯ ಆಚಾರ. ಕಡ್ಡಿಯ ಲಿಂಗಕ್ಕೆ ತೋರಿ ದಂತಧಾವನೆ ಮಾಡುವುದೇ ಹದಿನಾರನೆಯ ಆಚಾರ. ಸರ್ವಾವಯವ ಸ್ವಚ್ಛವಾಗಿ ಪ್ರಕ್ಷಾಳಿಸುವುದೇ ಹದಿನೇಳನೆಯ ಆಚಾರ. ಲಿಂಗಮುದ್ರೆ ಇಲ್ಲದ ಗಂಡಿಯಲ್ಲಿ ಪಾಕವ ಮಾಡದಿಹುದೇ ಹದಿನೆಂಟನೆಯ ಆಚಾರ. ಪ್ರಮಣವ ಮುದ್ರೆ ಇಲ್ಲದ ವಸ್ತ್ರವ ಹೊದೆಯದಿಹುದೇ ಹತ್ತೊಂಬತ್ತನೆಯ ಆಚಾರ. ಹುಟ್ಟಿದ ಶಿಶುವಿಗೆ ಲಿಂಗಧಾರಣವ ಮಾಡದೆ ತಾಯ ಮೊಲೆಹಾಲು ಜೇನುತುಪ್ಪ ಮುಟ್ಟಿಸದಿಹುದೆ ಇಪ್ಪತ್ತನೇಯ ಆಚಾರ. ಆಡಿದ ಭಾಷೆಯ ಕಡೆಪೂರೈಸುವುದೇ ಇಪ್ಪತ್ತೊಂದನೆಯ ಆಚಾರ, ಸತ್ಯವನು ನುಡಿದು ತಪ್ಪದಿಹುದೇ ಇಪ್ಪತ್ತೆರಡನೆಯ ಆಚಾರ. ತುರಂಗಳ ಕಟ್ಟಿ ರಕ್ಷಿಸುವುದೆ ಇಪ್ಪತ್ತುಮೂರನೆಯ ಆಚಾರ. ತುರಂಗಳಿಗೆ ಲಿಂಗಮುದ್ರೆಯನಿಕ್ಕಿ ಹಾಲುಕರೆವುದೇ ಇಪ್ಪತ್ತನಾಲ್ಕನೆಯ ಆಚಾರ. ಮಂತ್ರಸಹಿತ ಗೋಮಯವ ಹಿಡಿದು, ಮಂತ್ರಸಹಿತ ಪುಟವಿಕ್ಕಿ, ಭಸ್ಮದ ರಾಶಿಯ ಮಾಡುವುದೇ ಇಪ್ಪತ್ತೈದನೆಯ ಆಚಾರ. ಆ ಭಸ್ಮದ ರಾಶಿಯ ಪಾದೋದಕದೊಡನೆ ಉಂಡೆಯ ಕಟ್ಟುವುದೇ ಇಪ್ಪತ್ತಾರನೆಯ ಆಚಾರ. ವಿಧಿಯರಿತು ಸ್ಥಾನವರಿತು ರುದ್ರಾಕ್ಷಿಗಳ ಧರಿಸುವುದೆ ಇಪ್ಪತ್ತೇಳನೆಯ ಆಚಾರ. ಶಿವಾನುಭವ ಶಾಸ್ತ್ರವ ವಿಚಾರಿಸುವುದೇ ಇಪ್ಪತ್ತೆಂಟನೆಯ ಆಚಾರ, ಮನವ ನೋಯಿಸಿ ಮಾತನಾಡದಿಹುದೇ ಇಪ್ಪತ್ತೊಂಬತ್ತನೆಯ ಆಚಾರ ಲಿಂಗದ ಕಳೆಯರಿತು ಲಿಂಗವ ಪೂಜಿಸುವುದೇ ಮೂವತ್ತನೆಯ ಆಚಾರ. ಗುರುಮುಖದಿಂದ ತಾನಾರು, ತನ್ನ ನಿಜವೇನು ಎಂದು ಬೆಸಗೊಳ್ಳುವುದೇ ಮೂವತ್ತೊಂದನೆಯ ಆಚಾರ. ಷಡ್ವರ್ಗಂಗಳ ಮೆಟ್ಟಿ ಷಟ್‌ಸ್ಥಲವನಿಂಬುಗೊಂಡುದೇ ಮೂವತ್ತೆರಡನೆಯ ಆಚಾರ. ಅವಿಚ್ಛಿನ್ನವಾಗಿ ಅಂಗತ್ರಯದಲ್ಲಿ

ವಾನ ಓಕರಿಸಿಕೊಂಡುದೇ ಮೂವತ್ತುಮೂರನೆಯ ಆಚಾರ. ಲಿಂಗದಲ್ಲಿ ಶಿಲೆಯ ಭಾವವನರಸದಿಹುದೇ ಮೂವತ್ತುನಾಲ್ಕನೆಯ ಆಚಾರ. ಜಂಗಮದಲ್ಲಿ ಕುಲವ ನರಸದಿಹುದೇ ಮೂವತ್ತೈದನೆಯ ಆಚಾರ. ವಿಭೂತಿಯ ಮಾಣ್ಬದಿಹುದೇ ಮೂವತ್ತಾರನೆಯ ಆಚಾರ. ರುದ್ರಾಕ್ಷಿಯ ಶುದ್ಧವ ಮಾಡಿ ಮಣಿಗಳ ಅರಸು ವುದೇ ಮೂವತ್ತೇಳನೆಯ ಆಚಾರ. ಪಾದೋದಕದಲ್ಲಿ ಉಚ್ಛಿಷ್ಟವಳಿದುದೇ ಮೂವತ್ತೆಂಟನೆಯ ಆಚಾರ. ಪ್ರಸಾದದಲ್ಲಿ ರುಚಿಯ ನೋಡದಿಹುದೇ ಮೂವ ತ್ತೊಂಬತ್ತನೆಯ ಆಚಾರ. ಮಂತ್ರದಲ್ಲಿ ಕುತ್ಸಿತ ಕಲ್ಪನೆಯ ಮಾಡದಿಹುದೇ ನಾಲ್ವತ್ತನೆಯ ಆಚಾರ. ಲಿಂಗಾರ್ಚನ ವಿರಹಿತ ಭೋಜನ ಮಾಡದಿಹುದೇ ನಾಲ್ವತ್ತೊಂದನೆಯ ಆಚಾರ. ಐಕ್ಯರ ಸಮಾಧಿಗೊಳಿಸಿ ತಾನು ಲಿಂಗಪೂಜೆಯ ಮಾಡುವುದೇ ನಾಲ್ವತ್ತೆರಡನೆಯ ಆಚಾರ ಲಿಂಗದ್ರೋಹವ ಕೇಳಿ ತಾನು ಪ್ರಾಣಬಿಡುವುದೇ ನಾಲ್ವತ್ತುಮೂರನೆಯ ಆಚಾರ. ಜಂಗಮದ್ರೋಹವ ಕೇಳಿ ತಾನು ಐಕ್ಯನಾಗುವುದೆ ನಾಲ್ವತ್ತುನಾಲ್ಕನೆಯ ಆಚಾರ. ಲಿಂಗದ್ರೋಹವ ಮಾಡಿದವನ ಶಿರವನೀಡಾಡುವುದೇ ನಾಲ್ವತ್ತೈದನೆಯ ಆಚಾರ. ಜಂಗಮ ದ್ರೋಹವ ಮಾಡಿದವನ ಪ್ರಾಣವ ಭೇದಿಸುವುದೇ ನಾಲ್ವತ್ತಾರನೆಯ ಆಚಾರ. ಅಷ್ಟಾವರಣ ಸಂಗವ ಮಾಡುವ ಭೇದವ ತಿಳಿವುದೇ ನಾಲ್ವತ್ತೇಳನೆಯ ಆಚಾರ. ತಾನಾರು, ಲಿಂಗವಾರು—ಎಂಬ ಭೇದವು ತಿಲಮಾತ್ರ ಇಲ್ಲದಿರುವುದೇ ನಾಲ್ವತ್ತೆಂ ಟನೆಯ ಆಚಾರ. ತನ್ನ ನಿಜ ವಿಚಾರವ ತಾ ಮರೆಯದೆ ಷಟ್‌ಸ್ಥಲದವರಿಗೆ ಅರುಹಿ ತನ್ನಂತೆ ಮಾಡುವುದೇ ನಾಲ್ವತ್ತೊಂಬತ್ತನೆಯ ಆಚಾರ. ಇಂತಿಷ್ಟು ಆಚಾರಂಗಳ ಕಡೆಮುಟ್ಟಿಸುವುದೇ ಕೂಡಲಚನ್ನಸಂಗಮ ದೇವಗಲ್ಲಿ ಐವತ್ತನೆಯ ಆಚಾರ ನೋಡಾ—ಸಿದ್ಧರಾಮಯ್ಯಾ!"

"ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ. ಅನುಭಾವಲಿಂಗವಿಡಿದು ಮಾರ್ಗಕ್ರಿಯಾಲಿಂಗಸಿದ್ಧಿ. ಮಾರ್ಗಕ್ರಿಯಾಲಿಂಗವಿಡಿದು ಮೀರಿದಕ್ರಿಯಾಲಿಂಗ ಸಿದ್ಧಿ. ಮೀರಿದಕ್ರಿಯಾಲಿಂಗವಿಡದು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ, ಲಿಂಗಜಾತಃ ಲಿಂಗಬೀಜಂ, ಎಂದುದಾಗಿ ಕೂಡಲಚನ್ನಸಂಗಯ್ಯ, ಲಿಂಗವಿಡಿದು ಲಿಂಗಸಿದ್ಧಿ."

ಚನ್ನಬಸವಣ್ಣನವರು ಈ ಹನ್ನೊಂದು ವಚನಗಳಲ್ಲಿ ಆಚಾರದ ವಿಚಾರ ವನ್ನು ವಿಶೇಷವಾಗಿ ವಿವರಿಸಿದ್ದಾರೆ, ಪರಿಣಾಮಕಾರಿಯಾಗಿ ಪ್ರತಿಪಾದಿಸಿದ್ದಾರೆ. ಆದರೂ ಆಚಾರದ ಮಹತಿ ಮುಗಿಯುವುದಿಲ್ಲ. ಆಚಾರದ ಆಧಿಕ್ಯಕ್ಕೆ ಆದ್ಯಂತ

ವಿಲ್ಲ; ಆಚಾರ ಷಟ್‌ಸ್ಥಲ ಸೌಧದ ಅಡಿಗಲ್ಲು. ಆಚಾರವಿಲ್ಲದೆ ಮುಂದಡಿ ಯಿಡುವಂತಿಲ್ಲ

ಆಚಾರ ಸೀಮಿತವಲ್ಲ ಅದು ಸರ್ವತೋಮುಖಿ. ಅಂತಹ ಆ ಆಚಾರ ಆಚಾರ್ಯನಿಂದ ಬರಬೇಕು ; ಆಚಾರ್ಯನಿಂದಲೇ ಅರಿಯಬೇಕು. ಆಚಾರ್ಯನಿಲ್ಲದ ಆಚಾರ ನಿಸ್ಸಾರ ; ನಿಷ್ಪ್ರಾಣ.

"ಆಚಾರಲಿಂಗಕ್ಕೆ ಗುರುಲಿಂಗವೇ ಪ್ರಾಣ. ಗುರುಲಿಂಗಕ್ಕೆ ಶಿವಲಿಂಗವೇ ಪ್ರಾಣ." ಎಂದು ತೋಂಟದ ಸಿದ್ಧಲಿಂಗೇಶ್ವರರು ನಿರೂಪಿಸಿದ್ದಾರೆ, ಮತ್ತು "ಆಚಾರಲಿಂಗಕ್ಕೆ ಪೃಥ್ವಿಯೇ ಸಮರ್ಪಣ ; ಗುರುಲಿಂಗಕ್ಕೆ ಜಲವೇ ಸಮರ್ಪಣ" ಎಂದಿದ್ದಾರೆ. ಪೃಥ್ವಿ ಪದಾರ್ಥ ಪ್ರಸಾದವಾಗಬೇಕಾದರೆ ಆಚಾರಲಿಂಗಾರ್ಪಣ ವಾಗಬೇಕು. ಪೃಥ್ವಿ ಆಚಾರಲಿಂಗಕ್ಕೆ ಅರ್ಪಣವಾಗಿ ಪ್ರಸಾದವಾಗಿ ಪರಿಣಾಮ ವನ್ನುಂಟುಮಾಡಿ ತನ್ನ ಭೂತತ್ವವನ್ನು ಕಳೆದುಕೊಳ್ಳುತ್ತದೆ ; ಸಾರ್ಥಕವಾಗು ತ್ತದೆ. ಅಂದರೆ ಆಚಾರದಿಂದ ಪೃಥ್ವ್ಯಂಗ ಪುನೀತವಾಗುತ್ತದೆ. 'ಆಚಾರಲಿಂಗದ ಪ್ರಸನ್ನತ್ವದಿಂದ ಭಕ್ತಬಯಲಾದನು ; ಗುರುಲಿಂಗದ ಪ್ರಸನ್ನತ್ವದಿಂದ ಮಾಹೇಶ್ವರ ಬಯಲಾದನು "ಆಚಾರಲಿಂಗ ಸಂಬಂಧಿಯಾದ ಬಳಿಕ ಪಂಚಭೂತದ ಪ್ರಕೃತಿಕಾಯ ಅಳಿದಿರಬೇಕಯ್ಯಾ ; ಗುರುಲಿಂಗ ಸಂಬಂಧಿ ಯಾದ ಬಳಿಕ ಪಂಚವಿಷಯಂಗಳ ಸಂಚ ವಂಚನೆಯ ಕೆಡಿಸಿರಬೇಕಯ್ಯಾ" "ಆಚಾರಲಿಂಗಾನುಭವದಿಂದ ಪೃಥ್ವಿಯ ಪೂರ್ವಾಶ್ರಯವನಳಿದ ಸದಾಚಾರ ನಿಷ್ಠನ ನೋಡಾ : ಸದ್ಗುರು ರತಿಯಿಂದ ಅಪ್ಪು ತತ್ತ್ವವ ಪೂರ್ವಾಶ್ರಯವನಳಿದ ಸದ್ಗುರು ನಿಷ್ಠನ ನೋಡಾ !" ತೋಂಟದ ಸಿದ್ಧಲಿಂಗೇಶ್ವರರ ಈ ನುಡಿಗಳಿಂದ ಆಚಾರದಿಂದಾಗುವ ಫಲಶ್ರುತಿಗಮ್ಯವಾಗುತ್ತದೆ.

ಆಚಾರದ ಚರಮ ಪರಿಣಾಮ ಅನುಭಾವ. ಆಚಾರವಿಲ್ಲದೆ ಅನುಭಾವ ಅಳವಡದು. ಅನುಭಾವವಿಲ್ಲದೆ ಆನಂದವಿಲ್ಲ. ಮಾನವ ಜೀವನ ವೃಕ್ಷಕ್ಕೆ ಫಲವಿಲ್ಲ. ಈ ನಿಟ್ಟಿನಲ್ಲಿ 'ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ" ಎಂಬ ಸಮ್ಯಕ್ ಜ್ಞಾನಿ ಚನ್ನಬಸವಣ್ಣನವರ ಗಂಭೀರವಾಣಿ ಗಮನಾರ್ಹವಾದುದು, ಆಚಾರವಿಲ್ಲದ ವಿಚಾರವೊಂದೇ ಅನುಭವವನ್ನು ತಾರದು. ಅರಿವು ಆಚಾರದಲ್ಲಿ ಪರಿಣತಗೊಳ್ಳುತ್ತದೆ.

ಆಚಾರ ಒಂದು ಲಿಂಗ. ಅದು ನಿರವಯ. ಅದರ ಸಕೀಲ ಸಂಬಂಧದಿಂದ ತೋಂಟದ ಸಿದ್ಧೇಶ್ವರರು ಹೇಳಿರುವಂತೆ 'ಪಂಚಭೂತದಪ್ರಕೃತಿ ಕಾಯ ಅಳಿಯುತ್ತದೆ, ಮುಖ್ಯವಾಗಿ ಪೃಥ್ವಿಯ ಪೂರ್ವಾಶ್ರಯ ಅಳಿಯುತ್ತದೆ. ಪ್ರಕೃತಿ ಕಾಯ ಪರಕಾಯವಾಗಲು ಸತ್ಯಶುದ್ಧ ಸಾಧನವಾಗುತ್ತದೆ; ಸಿದ್ಧಿಪ್ರದವೂ ಆಗುತ್ತದೆ.

"ಕಾಲ ಸಡಗರ ಕಯ್ಯಲಿದೆ; ಕಯ್ಯ ಸಡಗರ ಕಂಗಳಲಿದೆ.
ಅದೇನು ಕಾರಣವೆಂದಡೆ, ಕಂಗಳೇ ಕಾರಣವಾಗಿ!
ಒಂದು ಮಾತಿನೊಳಗೆ ವಿಚಾರವಿದೆ. ಕನ್ನಡಿಯೊಳಗೆ ಕಾರ್ಯವಿದೆ.
ಇದೇನು ಕಾರಣ ತಿಳಿಯದು ಹೇಳಾ ಗುಹೇಶ್ವರಾ ?"

## ಕಾಯ-ಪರಕಾಯ :

ಪ್ರವೃತ್ತಿಯಿಂದ ಪ್ರಕೃತ್ತಿಕಾಯ. ನಿವೃತ್ತಿಯಿಂದ ಪರಮಾರ್ಥಕಾಯ. ಶಕ್ತಿವಿಡಿದು ಪ್ರವೃತ್ತಿ. ಭಕ್ತಿವಿಡಿದು ನಿವೃತ್ತಿ: ಪ್ರವೃತ್ತಿಯಲ್ಲಿದೆ ಮಾಯೆ; ನಿವೃತ್ತಿಯಲ್ಲಿದೆ ನಿರ್ಮಾಯೆ. ಮಾಯಾಪ್ರವೃತ್ತಿ ಭವಕ್ಕೆ ಕಾರಣ ; ನಿರ್ಮಾಯ ನಿವೃತ್ತಿ ಶಿವಕ್ಕೆ ಕಾರಣ. ಮಾಯಾ ಪ್ರವೃತ್ತಿಯಿಂದ ದೇಹಗುಣ ; ನಿರ್ಮಾಯಿಕ ನಿವೃತ್ತಿಯಿಂದ ಕಾಯಗುಣ. ಶಕ್ತಿ ಪ್ರವೃತ್ತಿಯಿಂದ ರೂಪಿತವಾಗುವುದು ಶರೀರ ; ಭಕ್ತಿನಿವೃತ್ತಿಯಿಂದ ಸ್ವರೂಪಿತವಾಗುವುದು ಕಾಯ. ಶರೀರ ಭೋಗ ರೋಗ ಮೂಲ. ಕಾಯ ತ್ಯಾಗ-ಭೋಗ–ಯೋಗ ಮೂಲ.

ಮಾನವದೇಹ ಬಾಹ್ಯ ಪ್ರಕೃತಿಯ ಪ್ರಕೃಷ್ಟ ಕೃತಿ ; ಪೂರ್ಣಕೃತಿ. ಮಾನವ ದೇಹಕ್ಕಿಂತ ಮೇಲೆನಿಸಿದ ಮತ್ತೊಂದು ದೇಹ ಮರ್ತ್ಯದಲ್ಲಿಲ್ಲ. ಪ್ರವೃತ್ತಿಯಿಂದಾದ ಪ್ರಕೃತಿಯೆಂದು ದೇಹವೆಂದು ಹೇಳಿದೊಡನೆ ಹ್ಯೇಯವೆಂದಲ್ಲ. ಧರ್ಮ ಸಾಧನವಾದ ದೇಹವನ್ನು ಹೀನವನ್ನಾಗಿ ಭಾವಿಸಿದೆ ಗುರುಕಾರುಣ್ಯಕ್ಕೆ ಒಳಪಡಿಸಿ ಒಳ್ಳಾಗಿಸಬೇಕು. ನೆಲ್ಲಾಗುವುದು ನಿಸರ್ಗ. ನೆಲ್ಲಿನ ಮೇಲಿರುವ ಹೊಟ್ಟನ್ನು ಹಳಚಿ ಅಕ್ಕಿಯನ್ನಾಗಿಸಿಕೊಳ್ಳುವುದು ಸಂಸ್ಕೃತಿನಿಯತಿ. ಅಂತೆಯೇ ನೆಲ್ಲಿನಂತಿರುವ ದೇಹದಕಾರ್ಮಿಕಮಲವನ್ನು ಕಳಚಿದರೆ ದೇಹ-ಕಾಯ ಅಥವಾ ಅಂಗವಾಗುತ್ತದೆ. ಭಕ್ತಸ್ಥಲಕ್ಕೆ ಹೊಂದಿಕೊಳ್ಳುವ ಭಾಗ್ಯವುಂಟಾಗುತ್ತದೆ. ಶ್ರದ್ಧಾಭಕ್ತಿಗೂ ನಿವೃತ್ತಿ ಕಲೆಗೂ ನೆಲೆಯಾಗುತ್ತದೆ. ಆಚಾರಲಿಂಗದ ಆರಾಧನೆಗೆ ಅಂದರೆ ಅನುಷ್ಠಾನಕ್ಕೆ ಆಗರವಾಗಿರುತ್ತದೆ. ಇದರಿಂದಾಗಿ ದೇಹವನ್ನು ಜಡವೆಂದು ದೋಷಪೂರಿತವೆಂದು ನೀತಿಗಳೆಯಬಾರದು. ದೇಹಿಗೆ ಭಿನ್ನವೆಂದು ಭಾವಿಸಬಾರದು.

"ಆದಿ ಅನಾದಿ ಆತ್ಮವಿವೇಕ ಅನುಭಾವ ಸಂಬಂಧ
ಎಂತಿಪ್ಪುದೆಂದಡೆ : ಆದಿಯೇ ದೇಹ, ಅನಾದಿಯೆ ಆತ್ಮ ;
ಇಂತೀ ಆದಿ ಅನಾದಿಯ ಮೇಲಿಪ್ಪುದೇ ಪರಮಪ್ರಣವ;
ಆ ಪರಮ ಪ್ರಣವದ ಪರಮಪ್ರಕಾಶವೇ ಚಿಚ್ಛಕ್ತಿ ;

ಆ ಚಿಚ್ಛಕ್ತಿಯ ಸುವರ್ಣಪ್ರಭೆಯ ಮೇಲಣ
ಪರಮನಾದವೆ ಸುನಾದಬ್ರಹ್ಮ ; ಆ ಸುನಾದಬ್ರಹ್ಮದ
ಮೇಲಣ ಸೂಕ್ಷ್ಮಲಿಂಗವೆ ನಾದಬಿಂದು ಕಳಾತೀತವಾದ
ಜ್ಯೋತಿರ್ಮಯಲಿಂಗ ; ಆ ಲಿಂಗದಿಂದೊಗೆದ
ದೇಹೇಂದ್ರಿಯ ಮನಃ ಪ್ರಾಣಾದಿಗಳೆಲ್ಲ ಆ ಲಿಂಗದ
ಉಪಕರಣಂಗಳಾದ ಕಾರಣ, ಆ ದೇಹೇಂದ್ರಿಯ
ಮನಃ ಪ್ರಾಣಾದಿಗಳೆಲ್ಲ ಆ ಪರವಸ್ತುವಿಂಗೆ
ಭಿನ್ನವೆಂಬ ಅಜ್ಞಾನಿಯ ಮೆಚ್ಚ ಕೂಡಲ ಚನ್ನಸಂಗಯ್ಯ."

ಚನ್ನಬಸವಣ್ಣನವರ ಈ ಚಿದ್ವಾಣಿಯನ್ನು ನಿತ್ಯಾನಿತ್ಯವಾದಿಗಳು ಪಿಂಡಜ್ಞಾನಿಗಳು ಲಿಂಗಾಚಾರಿಗಳು ಮುಖ್ಯವಾಗಿ ಮನ್ನರಿಯಬೇಕು. ಪಿಂಡಾಂಡದಲ್ಲಿ ಆದಿ ಪದವಾಚ್ಯವಾದುದು ದೇಹ. ನಿವೃತ್ತಿಮಾರ್ಗದಲ್ಲಿ ಮಾರ್ಗಕ್ರಿಯೆಯಲ್ಲಿ ಇದು ತನ್ನ ಆದಿತನವನ್ನು ಆದೆಂದಿಗೂ ಅದಾವಕಾರಣಕ್ಕೂ ಕಳೆದುಕೊಳ್ಳಲಾರದು. ಈ ಆದಿವಿಡಿದು ಅನಾದಿಯೆನಿಸಿದೆ ಆತ್ಮ. ಆತ್ಮ, ಪ್ರಣವ, ಪ್ರಣವಪ್ರಕಾಶವಾದ ಚಿಚ್ಛಕ್ತಿ, ಚಿತ್ಪ್ರಭೆಯ ನಾದಬ್ರಹ್ಮ, ನಾದಬ್ರಹ್ಮದ ಮೇಲಿನ ಸೂಕ್ಷ್ಮಲಿಂಗ, ಸೂಕ್ಷ್ಮಲಿಂಗದ ಮೇಲಿನ ಜ್ಯೋತಿರ್ಲಿಂಗ–ಈ ಆರಕ್ಕೂ ಆದಿಯಾದುದು ದೇಹ. ಆ ಜ್ಯೋತಿರ್ಮಯಲಿಂಗದಿಂದ ಜನಿಸಿದೆ ದೇಹ, ಆ ಲಿಂಗಕ್ಕೆ ಉಪಕರಣವಾಗಿದೆ ದೇಹ. ಅಂದರೆ ಸ್ವಗತ ಭೇದವಾಗಿದೆ ದೇಹ. ಹೀಗಿರುವಾಗ ಆ ಪರವಸ್ತುವಿಗೆ ಭಿನ್ನವೆಂದು ದೂಷ್ಯವೆಂದು ಹೇಳಿದರೆ ಅದು ಅಜ್ಞಾನವೇ ಹೊರೆತು ಬೇರಲ್ಲ. ಅತ್ಯಂತ ಭಿನ್ನವಾದಿಯಾದ ಅಜ್ಞಾನಿಗೆ ಆ ಜ್ಯೋತಿರ್ಲಿಂಗದ ಸಾಕ್ಷಾತ್ಕಾರವಿಲ್ಲೆಂಬುದು ಶತಪಥಕ್ಕೂ ಸಿದ್ಧ.

ಮತ್ತೊಂದು ಮಾತಿನ ಚಿಂತನ ಮಂಥನ: 'ಆ ಲಿಂಗದಿಂದದೊಗೆದ ದೇಹೇಂದ್ರಿಯ ಮನಃ ಪ್ರಾಣಾದಿಗಳು.' ಇದು ವಿರೋಧಾಭಾಸವೇನಲ್ಲ; ಪ್ರತಿಯಾಗಿ ಸಹಜ ಸಿದ್ಧ. ಈ ಸಹಜ ಸಿದ್ಧತೆಯನ್ನು ಚನ್ನಬಸವಣ್ಣನು ತಾನೇ ಹೀಗೆ ಸಮರ್ಥಿಸಿ ಕೊಂಡಿದ್ದಾನೆ:

"ಕಟಕ ಸೂತ್ರದ ಗೂಡ ಮಾಡಿಕೊಂಡಿಪ್ಪಲ್ಲಿ,
ಸೂತ್ರಕ್ಕೆ ನೂಲನು ಅದೆಲ್ಲಿಂದ ತಂದಿತ್ತು ?
ರಾಟಿ ಇಲ್ಲ, ಹಂಜಿ ಇಲ್ಲ; ತನ್ನಲ್ಲಿಯೇ ನೂಲ ಕಲ್ಪಿಸಿ,
ತಾನದ ಮಾಡಿಕೊಂಡು ಆಡಿ ಅಡಗಿಸಿಕೊಂಡು ಹೋಹಂತೆ,
ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚ,
ತನ್ನಲ್ಲಿಯೇ ಲಯವನ್ನೈದಿಸಿಕೊಂಡು,
ಕೂಡಲ ಚನ್ನಸಂಗಯ್ಯ ನಿರ್ವಯರಾದನು"

ಅವಿನಾಭಾವವಾಗಿ ವಿಮರ್ಶಾಶಕ್ತಿಯುಳ್ಳ ಆ ಜ್ಯೋತಿರ್ಮಯ ಲಿಂಗವು ಸಮಷ್ಟಿ ವಿಶ್ವವನು ಸೃಷ್ಟಿಸಿದರೆ, ವಿನಾಭಾವದ ಶಕ್ತಿಯುಳ್ಳ ನಾದಾತ್ಮಕ ಸೂಕ್ಷ್ಮ ಲಿಂಗವು ವ್ಯಷ್ಟಿ ವಿಶ್ವವಾದ ಈ ಪಿಂಡವಾಚ್ಯ ದೇಹವನ್ನು ತನ್ನಿಂದ ತಾನೇ ಸೃಷ್ಟಿಸುತ್ತದೆ; ಸಂಹರಿಸುತ್ತದೆ. ಇದರೊಳಗೆ ಯಾವ ಆಭಾಸವಿಲ್ಲ; ಅಚ್ಚರಿಯಿಲ್ಲ.

ಸ್ವಯಂಭುವಿನ ಲೀಲೆ ಈ ಶಿರೆ, ಈ ತನು. ಆತನ ಸ್ವಭಾವದಿಂದ ಪಂಚಭೂತಾತ್ಮಕ ಪ್ರಪಂಚಯಾಯ್ತು. ಪ್ರಪಂಚವಿಡಿದು ಪ್ರಕೃತಿಯಾಯ್ತು. ಪೂರ್ವಾಶ್ರಯದತ್ತ ಇರುತ್ತದೆ. ಪ್ರಕೃತಿಯು ಮುಖ. ಏಕೆಂದರೆ ಪ್ರಕೃತಿಯು ಕರ್ಮಚಕ್ರ ಅಂತಹದು; ವಾಸನಾಚಕ್ರ ಅಂತಹದು. ಇವೆರಡರ ಸೆಳತದಿಂದ ಪಾರಾಗುವ ಶಕ್ತಿ ಪ್ರಕೃತಿಗಿಲ್ಲ; ಪ್ರವೃತ್ತಿಮುಖವಾಗಿ ಬಂದ ಕಾರಣ ಭಕ್ತಿಯೂ ಇಲ್ಲ. ಈ ಚಕ್ರಗಳಿಂದ ಪಾರಾಗಬೇಕಾದರೆ ಶ್ರೀ ಗುರುವಿನ ಕಾರುಣ್ಯವೇ ಮುಖ್ಯ.

"ಕಾಯದ ಪೂರ್ವಾಶ್ರಯ ಶ್ರೀಗುರುವಿನಿಂದ ಹೋಹುದು; ಲಿಂಗದಿಂದ ಹೋಹುದು ಇಂದ್ರಿಯಂಗಳ ಪೂರ್ವಾಶ್ರಯ ಶ್ರೀ ಗುರುವಿನಿಂದ ಹೋಹುದು; ಲಿಂಗದಿಂದ ಹೋಹುದು. ತನುವಿನಿಂದಲಾಹುದು ತನುವಿನಿಂದ ಹೋಹುದು.

ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರವುಳ್ಳನ್ನಕ್ಕರ
ಕೂಡಲ ಚನ್ನಸಂಗಯ್ಯನಲ್ಲಿ ಶರಣನೆನಿಸಬಾರದು."

"ಕಾಯಸಂಸ್ಕಾರದಲ್ಲಿ ಪಟಲ ಹರಿವುದೆ, ಶಿವಸಂಸ್ಕಾರವಿಲ್ಲದನ್ನಕ್ಕ ?
ವೇಷಲಾಂಛನದಿಂದ ಗ್ರಾಸ ದೊರಕಬಹುದಲ್ಲದೆ ಭವವೆಂತು ಹರಿವುದಯ್ಯಾ
ಅಂಗಭವಿ ಲಿಂಗಭವಿಯು ಕಳೆದುಳಿದಲ್ಲದೆ
ಕೂಡಲ ಚನ್ನಸಂಗಯ್ಯನ ಹೊದ್ದಬಾರದು."

ತನು ಸಿಕ್ಕಬಿದ್ದ ಚಕ್ರ ಒಂದಲ್ಲ, ಎರಡಲ್ಲ. ಕಾಲಾದಿ ಚಕ್ರಗಳು ಅನೇಕ. ಇವುಗಳಿಗೆ ಒಳಗಾದವನು ಮಾನವ. ಶ್ರೀಗುರುಕಾರುಣ್ಯದಿಂದ ಇವನ್ನು ಕಳೆದು ಕೊಂಡವನು ಶಿವಶರಣ; ಇವು ತಮ್ಮಿಂದ ತಾವೇ ತೊಲಗವು; ತನುವೂ ತಾನೇ ತೊಲಗಿಸದು. ಕಾಯ ವಾಸನೆ ಆದಿಯಾದುದು. ಕಾಯ ವಾಸನೆಯೋ ಅದೊಂದು ಕತ್ತಲೆ, ಅವಿದ್ಯೆ; ಅಥವಾ ಕಾರ್ಮಿಕಮಲ. ಇದರ ಪಟಲ ಪಟುತರವಾದುದು. ಶ್ರೀಗುರುವಿನ ಶಿವಸಂಸ್ಕಾರವಾಗದೆ ಈ ಹೊರ ಹೊದಿಕೆ ಹೋಗದು. ಕಾಷಾಯವೇಷ ಕರ್ಮವನ್ನು ಕಳೆಯದು, ಕುತ್ಸಿತ ವಾಸನೆಯನ್ನು ಕಳೆಯದು. ಅಂತಹ ವೇಷ ಅದೊಂದು ಗ್ರಾಸಸಂಪಾದನೆಯ ಗುರುತು. ಶಿವಸಂಸ್ಕಾರವಿಲ್ಲದ ವೇಷ ಅದೊಂದು ಅಪಮಾನ. ಅದರಿಂದಲೆ ನಿರ್ದಿಷ್ಟ ಚರಮಗುರಿ ಲಭಿಸದು; ಭವ ಹಿಂಗದು. ಭವಹರನ ಸಂಗ ಸಮನಿಸದು. ಅಂದರೆ ಆತ್ಮಪ್ರಜ್ಞೆ ಆತ್ಮಪ್ರಕಾಶ ಮೊದಗದು.

"ಕಾಯದ ಕಳವಳದಲ್ಲಿ ಹುಟ್ಟಿ ಸಂಸಾರ ವೇಧಿಸಿ
ಲಿಂಗದ ಮುಖವನರಿಯದವರಂತಿರಲಿ;
ಬ್ರಹ್ಮಜ್ಞಾನವನೆ ಪೂರೈಸಿ ಭಾಗ್ಯವಂತರೆನಿಸಿ
ವಿಶೇಷಂಗಳ ಕೊಂಡಾಡುವರಂತಿರಲಿ;
ತನುವ ತೊರೆದು ಮನಮಧ್ಯದೊಳಗೆ
ಕಾಲವಂಚಕರಾದವರಂತಿರಲಿ;
ಕೂಡಲ ಚನ್ನಸಂಗಯ್ಯನ ನಿಲವನರಿಯದ
ಅಂಗರುಚಿಗಳಂತಿರಲಿ.

ಕಳವಳ ಹಲವು. ಅವುಗಳಲ್ಲಿ ಕಾಯದ ಕಳವಳ ಮೊದಲಿನದು, ಮುಖ್ಯವಾದುದು. ಎಂಥವರಿಗೂ ಅನಿವಾರ್ಯವಾದುದು. ಕಾಯದ ಕಸವಿಸಿಗೆ ಕೈವಶ

ವಾಗದವರಾರು? ಒಡಲವಸರದ ವ್ಯಥೆಗೆ ಒಳಗಾಗದವರಾರು? ಒಳ್ಪುಗೆಡದ ರಾರು? ಆದಿಭೌತಿಕ ಆದಿದೈವಿಕ ದುಃಖಗಳು ಆ ಬಳಿಕಿನವು. ಆಧ್ಯಾತ್ಮಕದುಃಖ ಹುಟ್ಟಿನೊಡನೆ ಬಳಿವಿಡಿದು ಬಂದುದು; ಬಿಡದಂತಹದು. ಒಡಲನೋವಿಗೆ ಮಾಡಬಾರದುದನ್ನು ಮಾಡುತ್ತದೆ ಈ ಜೀವ. ಒಡಲವಿಡಿದೇ ಹುಟ್ಟುಸಾವಿ ಗೀಡಾಗಿದೆ ಈ ಪ್ರಾಣ. ಕೌಟುಂಬಿಕ ಲೌಕಿಕ ವ್ಯವಹಾರಗಳಲ್ಲಿ ಅತಿಕ್ರಮಿಸು ತ್ತದೆ ಈ ಆತ್ಮ. ಅಕೃತ್ಯಗಳಲ್ಲಿ ಅನಿಷ್ಟಚಿಂತೆಗಳಲ್ಲಿ ಮುಳುಗುತ್ತದೆ ಈ ಮನಸ್ಸು. ಸಂಸಾರವನ್ನೆ ಹಾಸಿ ಪೊದೆಯುತ್ತದೆ ಈ ಜೀವ. ಕಾಯಸಂಗದಲ್ಲಿ ಕಳಾಲಿಂಗದ ಮುಖದರ್ಶನ ರುಚಿಸದು; ಸುಖಸ್ವಾದ ಹಿಡಿಯದು. ಕಾಯ ಅಕಾಯವಾಗದೆ, ಕಾಯದಲ್ಲಿ ಕ್ರಿಯೆ ಅಳವಡದೆ ಬ್ರಹ್ಮಜ್ಞಾನ ಭರಿತನಾಗಿ ಭಾಗ್ಯವಂತನಾಗಿ ಬಾಳಿ ಫಲವಿಲ್ಲ; ಹೆಚ್ಚನ್ನು ಹೆಚ್ಚುಗಾರಿಕೆಯನ್ನು ಹೇಳಿ ಹೊಗಳಿ ಫಲವಿಲ್ಲ, ತನುವ ಗೆದ್ದರೂ ಮನವ ಗೆದಿಯದೆ ಪ್ರಯೋಜನವಿಲ್ಲ. ಅಕಾಯವಾಗಿದ್ದರೂ ಅಂತರಂಗ ಅಮಾಯವಾಗದಿದ್ದರೆ ಕಾಲವಶವಾಗದೆ ವಿಧಿಯಿಲ್ಲ. ಕಾಯಕರ್ಮ ಕಳಚಿ ಮನ ಮಾಯದಿಂದ ಮುಗ್ಗಿದ್ದರೆ ನುಗ್ಗುನುಚ್ಚಾಗಿದ್ದರೆ ಕಾಲದಿಂದ ವಂಚಿತರಾಗದೆ ಇರಲು ಸಾಧ್ಯವಿಲ್ಲ. ಲಿಂಗದ ನಿಲವನರಿಯದೆ ಲಿಂಗರುಚಿಗೆಳಸದೆ ಅಂಗರುಚಿ ಯಲ್ಲಿ ಅನುರಕ್ತರಾಗಿದ್ದರೆ ಕಾಲಚಕ್ರ ಕರ್ಮಚಕ್ರ ನಾದಬಿಂದುಚಕ್ರಗಳಿಂದ ತಪ್ಪಿಸಿ ಕೊಳ್ಳುವ ತಪಸ್ವಿಯಾರು ? ತೇಜಸ್ವಿಯಾರು ?

"ಕಾಯವೆಂಬ ಪಟ್ಟಣದೊಳಗೆ ಮನವೆಂಬ ಅರಸು,
ತ್ರಿಗುಣಗಳೆಂಬ ಪ್ರಧಾನರು, ವಶೀಕರಣವೆಂಬ ಸೇನಬೋವ;
ಸಂಚಲವೆಂಬ ತೇಜಿ, ಅಷ್ಟಮದವೆಂಬ ಆನೆ,
ಈರೈದು ಮನ್ನೆಯ ನಾಯಕರು, ಇಪ್ಪತ್ತೈದು ಪರಿಚಾರಕರು,
ನೂರನಾಲ್ವತ್ತೆಂಟು ದೇಹವಿಕಾರವೆಂಬ ಪರಿವಾರ,
ಈ ಸಂಭ್ರಮದಲ್ಲಿ ಮನವು ರಾಜ್ಯಂಗೈಯುತ್ತಿರಲು;—
ಇತ್ತ ಶೂನ್ಯವೆಂಬ ಪಟ್ಟಣದೊಳಗೆ,
ಅನಾಮಯನೆಂಬ ಲಿಂಗ ಅರಸು, ಅಜಾತನೆಂಬ ಶರಣಪ್ರಧಾನಿ;
ಪ್ರಪಂಚವೆಂಬ ದಳ ಮುರಿದು ಮೂವರಾಟ ಕೆಟ್ಟಿತ್ತು.
ಅರಸು ಕೂಡಲ ಚನ್ನಸಂಗಯ್ಯನೊಲಿದ ಕಾರಣ!"

ಕಾಯರಾಜ್ಯಕ್ಕೂ ಆಕಾಯ ಅಥವಾ ಪರಕಾಯರಾಜ್ಯಕ್ಕೂ ಇರುವ ವ್ಯತ್ಯಾಸ ಇಲ್ಲಿ ವ್ಯಕ್ತವಾಗಿದೆ; ತರತಮಭಾವ ತೋರುತ್ತಿದೆ.

ಕಾಯದ ಅರಸು ಮನ; ಪರಕಾಯದ ಅರಸು ಆಮಯವಿಲ್ಲದ ಘನ. ಇಲ್ಲಿ ಈ ತ್ರಿಗುಣಗಳು ಪ್ರಧಾನರು. ಅಲ್ಲಿ ಜನನವಿಲ್ಲದ ಶರಣ ಪ್ರಧಾನಿ. ಇಲ್ಲಿ ಕರಣ ಚಲನ; ಅಲ್ಲಿ ನಿಶ್ಚಲನ. ಇಲ್ಲಿ ದೇಹವಿಕಾರ; ಅಲ್ಲಿ ನಿರ್ವಿಕಾರ. ಇಲ್ಲಿ ಆ ಸಾರ್ವಭೌಮನ ಒಲುಮೆಯಿಲ್ಲ; ಅಲ್ಲಿ ಉಂಟು. ಇದನರಿದು ಕಾಯ ಅಕಾಯವಾಗಿ ಪರಕಾಯವಾಗುವಂತೆ ಪರಿಶುದ್ಧಮನದಿಂದ ಪ್ರಯತ್ನಿಸಬೇಕು; ಪರಿಣಮಿಸಬೇಕು. ಪರಿಣಮಿಸುವ ಪರಿಶುದ್ಧ ವಿಧಾನವಿದು :

ಕಾಯವೆಂಬ ಘಟಕ್ಕೆ ಕರಣಾದಿಗಳೆ ಸಮಯಿದಾನ;
ಅದಕ್ಕೆ ಚೈತನ್ಯವೇ ಜಲವಾಗಿ, ಸಮತೆಯೆಂಬ ಮುಚ್ಚಳವ ಮುಚ್ಚಿ,
ಧೃತಿಯೆಂಬ ಸಮಿದೆಯನೊಡ್ಡಿ, ಮತಿಯೆಂಬ ಅಗ್ನಿಯಲುರುಹಿ,
ಜ್ಞಾನವೆಂಬ ದರ್ವಿಯಲ್ಲಿ ಘಟ್ಟಿಸಿ ಪಕ್ವಕ್ಕೆ ತಂದು,
ಭಾವದಲ್ಲಿ ಕುಳ್ಳಿರಿಸಿ ಪರಿಣಾಮದೋಗರವ ನೀಡಿದಡೆ
ಕೂಡಲಚನ್ನಸಂಗಮ ದೇವಂಗೆ ಆರೋಗಣೆಯಾಯಿತ್ತು."

ಎಂತಹ ಸುಂದರವಾದ ಸಾಧನದರ್ಶನ; ಏನು ಸತ್ಯವಾದ ಶಿವವಾದ ಸಿದ್ಧಿಭಾವನ !! ಅದೆಂತಹ ಭಾವಪೂರ್ಣ ಪರಿಣಾಮದೋಗರದ ಆರೋಗಣೆ ! ಆರೋಗಿಸುವ ದೇವ ತನ್ನ ಕೂಡಿರುವ ಚನ್ನ !!

ಸುಯಿದಾನಕ್ಕೆ ಸಾಧನವಾದ ಘಟದ ಪಾತ್ರವೇನು? ಚೈತನ್ಯದ ಪಾತ್ರವೇನು? ಇತ್ತ ಕಾಯವಿಲ್ಲದೆ ಅತ್ತ ಚೈತನ್ಯವಿಲ್ಲದೆ ಸುಯಿದಾನ ಸಾಧ್ಯವೆ ? ಅರ್ಪಣ ಸಾಧ್ಯವೆ ? ಆರೋಗಣೆ ಸಾಧ್ಯವೆ? ಕಾಯಾರ್ಪಣ ಕರಣಾರ್ಪಣ ಭಾವಾರ್ಪಣವಾಗಬೇಕಾದರೆ ಸಮತೆ, ಧೃತಿ, ಮತಿ, ಜ್ಞಾನ, ಕ್ರಿಯೆ, ಪರಿಪಕ್ವತೆ ಈ ಷಟ್‌ಸಹಾಯ ಸಂಪತ್ತಿ ಅನಿವಾರ್ಯ.

ಕಾಯ ಸ್ವಚ್ಛವಾಗಿರಬೇಕು, ಕರಣಚಯ ಎಚ್ಚರವಾಗಿರಬೇಕು; ಭಾವ ನಿಶ್ಚಲವಾಗಿ ಸಜ್ಜಿತವಾಗಿರಬೇಕು ಪಾಕಕ್ಕೆ ಜಲ ಎಷ್ಟು ಅವಶ್ಯವೋ ಅಷ್ಟೇ

ಪಾತ್ರೆಯು ಅವಶ್ಯ. ಹೆಚ್ಚಾಗಿ ಸುಯಿದಾನ (ಪದಾರ್ಥ) ಅವಶ್ಯ. ಇವೆಲ್ಲವೂ ಇದ್ದು ಸೌದೆ-ಉರಿ ಇಲ್ಲದಿದ್ದರೆ ಆಗುವುದೆ ? ಮುಚ್ಚಳ ಮುಚ್ಚದಿದ್ದರೆ ಅವಸರಕ್ಕಾಗುವುದೆ? ಸಟ್ಟುಗ ಸಟ್ಟುಗವನ್ನಾಡಿಸುವ ಕರಕ್ರಿಯೆ ಇಲ್ಲದಿದ್ದರೆ ಪಾಕ ಪಕ್ವವಾಗುವುದೆ ?

"ಕಾಯವೇ ಲಿಂಗಾರ್ಪಿತ; ಅರ್ಪಿತವೇ ಪ್ರಸಾದ.
ಅದೇ ಮತ್ತೆ ಮತ್ತೆ ಅರ್ಪಿತ.
ದರ್ಶನದಿಂದಾಯಿತ್ತು, ಸ್ಪರ್ಶನದಿಂದಾಯಿತ್ತು.
ಅರ್ಪಿಸುವ ಸೋಂಕಿನ ಸುಖವನರ್ಪಿಸಲರಿಯದಿರ್ದಡೆ
ಭ್ರಾಂತಿ. ಕೂಡಲ ಚನ್ನಸಂಗಯ್ಯನ
ಪ್ರಸಾದಿಯ ಪ್ರಸಾದವ ಅತಿಗಳೆದಡೆ ಅದಕಿನ್ನೆಂತೊ!"

ಅರ್ಪಣವಸ್ತುವಿನಲ್ಲಿ ಮೊದಲಿನದು ಕಾಯಪದಾರ್ಥ. ಕಾಯಾರ್ಪಣವಾಗದೆ ಕರಣಾರ್ಪಣವಾಗದು. ಭಾವಾರ್ಪಣವಾಗದು. ಅಂತೆಯೇ ಕಾಯ ಅರ್ಪಣವಾಗದೆ ಕಾಯ ಅಕಾಯವಾಗದು; ಪರಕಾಯವಾಗದು.

ಕಾಯ ಪಾತ್ರೆಯೋ, ಪದಾರ್ಥವೊ ? ಕಾಯ ಪಾತ್ರೆಯಾದರೆ, ಅರ್ಪಿಸುವುದೆಂತು? ಕಾಯ ಪದಾರ್ಥವಾದರೆ ಪಾತ್ರೆಯಾವುದು? ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟಸಾಧ್ಯವೇನಲ್ಲ.

ಪಾತ್ರೆ ದ್ವಿವಿಧ. ಪದಾರ್ಥರೂಪ ಪಾತ್ರೆ. ಪದಾರ್ಥವಲ್ಲದ ಪಾತ್ರೆ. ಕಾಯ ಪದಾರ್ಥರೂಪಪಾತ್ರೆ. ರೊಟ್ಟಿ-ಪಲ್ಲೆ, ಅನ್ನ-ಸಾರು, ಸಕ್ಕರೆ-ತುಪ್ಪ ಎಂಬ ಜೋಡುನುಡಿಗಳನ್ನು ನೆನೆದರೆ ಮೊದಲಿನವು ಮೂರು ಪಾತ್ರೆರೂಪ ಪದಾರ್ಥ, ಅಥವಾ ಪದಾರ್ಥರೂಪಪಾತ್ರೆ ಆಗಬಲ್ಲವೆಂಬುದನ್ನು ಅರಿಯಬಹುದಾಗಿದೆ. ರೊಟ್ಟಿ-ಅನ್ನ-ಸಕ್ಕರೆಯಂತೆ ಕಾಯವೂ ಸಹ ಪದಾರ್ಥರೂಪ ಪಾತ್ರೆಯಾಗಿದೆ. ಕಾರಣ-ಭಾವಗಳನ್ನಿರಿಸಿಕೊಳ್ಳಲು ಪಾತ್ರೆಯಾದರೂ ಲಿಂಗಾರ್ಪಣ ಮಾಡಲು ಪದಾರ್ಥವೂ ಆಗುತ್ತದೆ: ಆದ್ದರಿಂದ 'ಕಾಯಪಾತ್ರೆ, ಕಾಯಲಿಂಗಾರ್ಪಿತ' ಎಂದು ಹೇಳುವಲ್ಲಿ ವಿರೋಧಾಭಾಸವೇನಿಲ್ಲ.

ದರ್ಶನ ಸ್ಪರ್ಶನಗಳಿಂದ ಅರ್ಚನಸೇವೆಯಿಂದ ಕಾಯ ಅರ್ಪಣವಾಗ ಬಲ್ಲುದು. ಅರ್ಪಣವಾಗಿ ಲಿಂಗಪ್ರಸಾದವಾಗಬಲ್ಲುದು ಲಿಂಗಪ್ರಸಾದವಾದ ಬಳಿಕ ಕಾಯ ಕಾಯವಲ್ಲ, ಅಕಾಯವಲ್ಲ; ಅದು ಪರಕಾಯ; ಅಥವಾ ಲಿಂಗ ಕಾಯ.

"ಕಾಯಪ್ರಸಾದವೊ, ಜೀವಪ್ರಸಾದವೊ, ಪ್ರಾಣಪ್ರಸಾದವೊ?
ಬಲ್ಲವರು ನೀವು ಹೇಳಿರೆ!
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂದು ಹೆಸರಿಟ್ಟುಕೊಂಡು ಕರೆವಿರಿ.
ಕಾಯವ ಕಳೆದು ಕಾಯಪ್ರಸಾದವೊ, ಜೀವವ ಕಳೆದು ಜೀವಪ್ರಸಾದವೊ;
ಪ್ರಾಣವ ಕಳೆದು ಪ್ರಾಣಪ್ರಸಾದವೊ? ಬಲ್ಲವರು ನೀವು ಹೇಳಿರೆ!!
ಇಂತಿವನುತ್ತರಿಸಿದ ಪ್ರಸಾದವನಲ್ಲದೆ ಕೊಳ್ಳೆ;
ರಂಜಕ ಪ್ರಸಾದಕ್ಕಂಜುವೆ ಕೂಡಲ ಚನ್ನಸಂಗಮದೇವಾ."

ಈ ತ್ರಿವಿಧವೂ ಪ್ರಸಾದವೆ! ಆದರೆ ಕಾಯಭಾವ ಕಳೆಯದೆ ಕಾಯಶುದ್ಧ ಪ್ರಸಾದವಾಗದು. ಜೀವಭಾವ ಕಳೆಯದೆ ಜೀವ ಸಿದ್ಧಪ್ರಸಾದವಾಗದು. ಪ್ರಾಣ ಭಾವ ಕಳೆಯದೆ ಪ್ರಾಣ ಪ್ರಸಿದ್ಧಪ್ರಸಾದವಾಗದು. ಕಾಯಭಾವವೆಂದರೆ ರೂಪ. ರೂಪ ಅರ್ಪಣವಾಗದೆ ಶುದ್ಧತ್ವ ಕಾಯಕ್ಕಿಲ್ಲ. ಜೀವಭಾವವೆಂದರೆ ರುಚಿ. ರುಚಿ ಅರ್ಪಣವಾಗದೆ ಸಿದ್ಧತ್ವ ಜೀವಕ್ಕಿಲ್ಲ ಪ್ರಾಣಭಾವವೆಂದರೆ ತೃಪ್ತಿ. ತೃಪ್ತಿ ಅರ್ಪಣ ವಾಗದೆ ಪ್ರಸಿದ್ಧತ್ವ ಪ್ರಾಣಕ್ಕಿಲ್ಲ. ಇಲ್ಲದ ಬಳಿಕ ಪ್ರಸಾದತ್ವವಿಲ್ಲ; ಪರವು ಸ್ವರೂಪತ್ವವಿಲ್ಲ. ಪ್ರಸಾದವಾಗದೆ ಅರ್ಪಿತವಾಗದು. ಅರ್ಪಿತವಾಗದೆ ಪರ ಕಾಯವೆನಿಸದು, ಪರಜೀವವೆನಿಸದು; ಪರಪ್ರಾಣವೆನಿಸದು. ಕಾರಣ ಮೊದಲು ಕಾಯಪ್ರಸಾದವಾಗಬೇಕು. ಕಾಯಬಿಟ್ಟು ಜೀವ ಪ್ರಾಣಗಳ ಪ್ರಸಾದ ಮಾಡಲು ಸಾಧ್ಯವಿಲ್ಲ. ಅವು ಸಿಕ್ಕುವುದೂ ಇಲ್ಲ.

"ತನುವಿರಹಿತ ಪ್ರಾಣವಿಲ್ಲ. ಗುರುವಿರಹಿತ ಲಿಂಗವಿಲ್ಲ.
ಕಂಗಳು ವಿರಹಿತ ನೋಟವಿಲ್ಲ. ಈ ಭೇದಕಸ್ಥಾನಂಗಳನರಿಯಬೇಕು,
ಕೂಡಲ ಚನ್ನಸಂಗಯ್ಯನನರಿದಡೆ."

ತನುಬಿಟ್ಟು ಪ್ರಾಣವಿಲ್ಲ; ಪ್ರಾಣಬಿಟ್ಟು ಜೀವವಿಲ್ಲ. ಹೀಗಿರುವಾಗ ಇವು ಭೇದವಲ್ಲ, ಅಭೇದವಲ್ಲ: ಭೇದಾಭೇದಸಹಿತವಾದವು. ಇವು ಕೂಡಿ ಅಗಲಿವೆ: ಅಗಲಿ ಕೂಡಿವೆ. ಇವು ಕ್ರಿಯಾಭೇದದಿಂದ ಬೇರಾದರೂ ಜ್ಞಾನಸ್ವರೂಪದಿಂದ ಒಂದೇ ಆಗಿವೆ. ಸಿಹಿಯಲ್ಲದೆ ಸಕ್ಕರೆಯಿಲ್ಲ. ಸಕ್ಕರೆಯಿಲ್ಲದೆ ಸಿಹಿಯಿಲ್ಲ. ಅಂತೆಯೇ "ಕಾಯವೂ ಜೀವವೂ, ಜೀವವೂ ಕಾಯವೂ ಬೆರಸಪ್ಪಂತೆ; ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ..." ಶಿವಶಕ್ತಿಯರಂತೆ ಪುಷ್ಪಪರಿಮಳದಂತೆ ಇವು ಒಂದಾಗಿವೆ; ಒಂದರೊಳಗೆ ಎರಡಾಗಿವೆ; ಎರಡರೊಳಗೆ ಒಂದಾಗಿವೆ. ಕಾಯಜೀವವಾಗಿ ಜೀವಕಾಯವಾಗಿ ಕಾಯಜೀವವೆರಡೂ ಕ್ರಿಯೆಯಲ್ಲಿ ಕರಿಗೊಂಡು ಜ್ಞಾನದಲ್ಲಿ ಕಳೆಗೊಂಡು ಲಿಂಗೈಕ್ಯವಾಗಿರುತ್ತವೆ.

"ಕಾಯವೆ ಕಳೆಯಾಗಿ, ಪ್ರಾಣವೆ ಲಿಂಗವಾಗಿ,
ಭಾವ ಭಾವಿಸುತ್ತಿದ್ದಿತ್ತು ನೋಡಾ! ಅನುಭಾವಕರಸ್ಥಲವಾಗಿ
ಭಾವ ಭಾವಿಸುತ್ತಿದ್ದಿತ್ತು ನೋಡಾ ! ಇದುಕಾರಣ,
ಕೂಡಲಚನ್ನಸಂಗಯ್ಯಾ. ಮಹವ ನುಂಗಿದ ಮಹಾಂತನ ಬೆರಗು"
"ಕಾಯಾನುಭಾವಿಗಳು ಕಾಯದಲೆ ಮುಕ್ತರು;
ಜೀವಾನುಭಾವಿಗಳು ಜೀವದಲೆ ಮುಕ್ತರು;
ಪ್ರಾಣಾನುಭಾವಿಗಳು ಪ್ರಾಣದಲೆ ಮುಕ್ತರು."

ಕಾಯಾನುಭಾವಿಗಳು ಕಡಿಮೆಯೇನಲ್ಲ. ಕಾಯ ಕಳೆಯಿಲ್ಲದೆ ಪ್ರಾಣಲಿಂಗ ಪ್ರಕಾಶಿಸದು. ಭಾವಲಿಂಗ ನೆಲಸದು, ಭಾವಿಸದು. ಆ ಘನಲಿಂಗಕ್ಕೆ ಕಾಯವ ನೊಳಕೊಂಬುದು ಹೆಚ್ಚೇನಲ್ಲ; ಅಚ್ಚರಿಯೇನಲ್ಲ.

"ಕಾಯವೆಂಬ ಕಣ್ಣಡ (ಕನ್ನಡಕ)ವಿಲ್ಲ ಪ್ರಾಣವಿಲ್ಲವಾಗಿ.
ಮನವೆಂಬ ನೆನಹಿಲ್ಲ ಅನುಭಾವವಿಲ್ಲವಾಗಿ,
ಅರುಹೆಂಬ ಕುರುಹಿಲ್ಲ ಪ್ರತಿಯಿಲ್ಲವಾಗಿ, ಕೂಡಲಚನ್ನಸಂಗಯ್ಯಾ!"

ಪ್ರಾಣಭಾವ ಹಿಂಗದೆ ಕಾಯಭಾವ ಹಿಂಗದು. ಪ್ರಾಣಭಾವ ಹಿಂಗಿದಲ್ಲಿ

ಕಾಯಭಾವವಿರದು. ಅನುಭಾವಗೋಷ್ಠಿಯಿಲ್ಲದಲ್ಲಿ ಮನದ ನೆನಹಿರದು; ಬೇರಿಲ್ಲದಾಗ ಅರಿವಿನ ಕುರುಹಿರಲು ಸಾಧ್ಯವಿಲ್ಲ. ಪ್ರಾಣಾಭಿಮಾನ ಪ್ರಾಣಾನುರಕ್ತಿಗಳನ್ನು ಪರಿಹರಿಸದೆ ಕಾಯ ಅಕಾಯವಾಗದು; ಪರಕಾಯ ಮತ್ತೂ ಆಗದು. ಅದೇ ಮನಪ್ರಾಣಗಳೆಲ್ಲವೂ ಘನವಾಗಿ ನಿಲ್ಲಲು ತನುವಿದ್ದೂ ತನುವಲ್ಲ. ಮನವಿದ್ದೂ ಮನವಲ್ಲ.

"ಕಾಯದಿಂದ ಲಿಂಗದರುಶನ ಕಾಯದಿಂದ ಜಂಗಮದರುಶನ
ಕಾಯದಿಂದ ಪ್ರಸಾದಸಂಪತ್ತು. ಕೂಡಲಚೆನ್ನಸಂಗಯ್ಯಾ,
ಈ ಕಾಯದಿಂದ ನಿಮ್ಮ ಕಂಡೆನಯ್ಯಾ!"

ಲಿಂಗಜಂಗಮ ದರ್ಶನಕ್ಕೆ ಪ್ರಸಾದಸಂಪತ್ತಿಗೆ ಕಾರಣವಾದ ಪರಂಜ್ಯೋತಿಯ ಸಾಕ್ಷಾತ್ಕಾರಕ್ಕೆ ಸಾಧನವಾದ ಕಾಯವೇ ಪರಕಾಯ. ಆ ಕಾಯ ಲಿಂಗಗ್ರಾಹಕವಾಗಿ ಲಿಂಗವೇ ಆಗಿ ಇರುತ್ತದೆ.

ತನುಗುಣ ತನ್ನ ಪ್ರಗತಿಗೆ ವಿರೋಧ. ಪ್ರಸನ್ನತೆಗೆ ವಿರೋಧ. 'ತನುಗುಣಸಂಗದಿಂದ ಪ್ರಸಾದಸಂಗ ಕೆಟ್ಟಿತ್ತು.' ಎನ್ನುತ್ತಾನೆ ಚೆನ್ನಬಸವಣ್ಣ. ತನುಗುಣವೆಂದರೆ ತನುವಿಕಾರ ತನುವಿಕಾರಕ್ಕೆ ಒಳಗಾದರೆ ಪ್ರಸನ್ನಭಾವ ಪ್ರಾಪ್ತಿಯಾಗಲಾರದೆಂಬುದು ಅನುಭವಸಿದ್ಧ ಮಾತು. ತನುಮೋಹ ತೊಲಗಬೇಕು. ತನುವಿನಾಶೆಯಿಂದ ತನ್ನತನದ ಕೇಡು ತನ್ನತನವನ್ನು ತಾನರಿಯಬೇಕಾದರೆ ತನ್ತ ಭಾವದ ತ್ಯಾಗ ತೀರಾ ಆಗಬೇಕು.

ತನುವ ಮೋಹಿಸಿದರೆ ರಕ್ತ. ತನುವ ನಿವೇದಿಸಿದರೆ ಭಕ್ತ. ತನುವ ದುಡಿಸಿ ದಾಸೋಹ ಮಾಡಬೇಕು. ತನುವ ಶ್ರಮಿಸಿ ಗುರುಸೇವೆ ಸಲ್ಲಿಸಬೇಕು. ತನುವಿಗೆಂದು ಆಶಿಸದೆ ತನ್ನ ಲಿಂಗಕ್ಕೆಂದು ಪಡಿಪದಾರ್ಥವನು ಅರ್ಪಿಸಬೇಕು; 'ತನುಮುಟ್ಟಿದ ಮುನ್ನ ಲಿಂಗಾರ್ಪಿತವ ಮಾಡಬೇಕು.' 'ತನುಮುಟ್ಟಿದ ಪದಾರ್ಥಲಿಂಗಾರ್ಪಿತವಲ್ಲ.' 'ತನುವ ಗುರುವಿನಲ್ಲಿ ಸವೆಸಿ, ಮನವ ಲಿಂಗದಲ್ಲಿ ಸವೆಸಿ, ಧನವ ಜಂಗಮದಲ್ಲಿ ಸವೆಸಿ, ತನುವೆ ಗುರುವಾಗಿ, ಮನವೆ ಲಿಂಗವಾಗಿ, ಧನವೇ ಜಂಗಮವಾಗಿ ಇಂತೀ ತ್ರಿವಿಧವು ನಿಮ್ಮಲ್ಲಿ ನಿಜಭರಿತವಾದ ಕಾಯವಿಡಿದು ಕರ್ಮವಿರಹಿತನಾಗು ಕೂಡಲ ಚೆನ್ನಸಂಗಮದೇವರಲ್ಲಿ." ಹೀಗೆ ನಡೆಯುವುದ

ರಿಂದ ತನುವಿನ ಸ್ವಾರ್ಥ ನೀಗುತ್ತದೆ; ಆಶೆಮೋಹಾದಿವಿಕಾರಗಳು ನಿರಸನವಾಗು ತ್ತವೆ. ಪದಾರ್ಥದ ಪೂರ್ವಾಶ್ರಯ ಪರಿಹಾರವಾಗುತ್ತದೆ. ತನುವ್ಯಸನ ತೊಲ ಗುತ್ತದೆ. ಆಗ "ತನು ಭಕ್ತ, ಮನ ದಾಸೋಹಿ, ಇಂದ್ರಿಯಂಗಳೇ ಪ್ರಸಾದಿ ಗಳು. ಸಜ್ಜನ ಶರಣನೆ ಪ್ರಾಣಲಿಂಗ ಇದು ಕಾರಣ, ಕೂಡಲ ಚನ್ನಸಂಗಮ ದೇವಾ, ಎನಗೆ ಹೊರಗೆ ಏನೂ ಅರಸಲಿಲ್ಲ."

"ತನು ನಿಮ್ಮನಪ್ಪಿ ಮಹಾತನುವಾದ ಬಳಿಕ ತನುವೆಂಬುದು ಮತ್ತೆಲ್ಲಿ ಯದೊ? ಮನ ನಿಮ್ಮನಪ್ಪಿ ಘನಮನವಾದ ಬಳಿಕ ಮನವೆಂಬುದು ಮತ್ತೆಲ್ಲಿ ಯದೊ ? ಭಾವ ನಿಮ್ಮನಪ್ಪಿ ನಿರ್ಭಾವವಾದ ಬಳಿಕ ಭಾವವೇಬುದು ಮತ್ತೆಲ್ಲಿ ಯದೊ ? ಇಂತೀ ತ್ರಿವಿಧವು ಲಿಂಗದಲ್ಲಿ ನಿರ್ಲೇಪವಾಗಿ ಮೈದೋರದಿರವ ಕೂಡಲ ಚನ್ನಸಂಗಯ್ಯ ತಾನೇ ಬಲ್ಲ." 'ತನು ಬಯಲು ನಿರವಯದೊಳಗಡಗಿತ್ತು. ಮನ ಬಯಲು ನಿರವಯದೊಳಗಡಗಿತ್ತು. ಭಾವ ಬಯಲು ನಿರವಯದೊಳ ಗಡಗಿತ್ತು. ಬಯಲು ಬಯಲ ಬೆರಸಿ ಬಯಲೆ ಆಯಿತ್ತು. ಕೂಡಲ ಚನ್ನ ಸಂಗಯ್ಯನೆಂಬ ನುಡಿಯಡಗಿತ್ತು." "ನಿರ್ನಾಮವಾಯಿತ್ತು, ನಿಷ್ಪತ್ತಿಯಾಯಿತ್ತು. ಅಗಮ್ಯದಲ್ಲಿ ಗಮನಗೆಟ್ಟಿತ್ತು. ನಿಂದಲ್ಲಿ ನಿರಾಳವಾಯಿತ್ತು. ಕೂಡಲ ಚನ್ನ ಸಂಗಮದೇವರಲ್ಲಿ ಶಬ್ದ ಮುಗ್ಧವಾಯಿತ್ತು."

ಪರಕಾಯವಾಗುವ ಪರಿಸ್ಥಿತಿಯಿದು ; ಪರಾಕಾಷ್ಠಸ್ಥಿತಿಯಿದು. ಮಹಾ ಲಿಂಗವನಪ್ಪಿ ಮಹಾತನುವಾಗುವುದು ; ಮಹಾ ಬಯಲಾಗುವುದು. ನಾಮ ವಡಗಿ ನಿಷ್ಪತ್ತಿಗೊಳ್ಳುವುದು. ಅಂದರೆ ಗಮನಗೆಟ್ಟು ನಿಂದಲ್ಲಿ ನಿರಾಳವಾಗು ವುದು ಶಬ್ದಮುಗ್ಧವಾಗುವುದು. ಯಾವ ಚಿಂತೆಯಿಲ್ಲದೆ ಶಾಂತವಾಗಿರುವುದೇ ನಿರಾಳತೆ ; ನಿಶ್ಯಬ್ಧತೆ. ಅದುವೇ ಚರಮ ಶರೀರ, ಅದುವೇ ಪರಕಾಯ ; ಕಲಾತೀತ ಪದಾಶ್ರಯ.

"ವಶೀಕೃತತ್ವಾತ್ ಪ್ರಕೃತೇರ್ಮಾಯಾ ಮಾರ್ಗಾತಿವರ್ತನಾತ್ ।
ಪರಕಾಯೋಽಯಮಾಖ್ಯಾತಃ ಸತ್ಯಜ್ಞಾನ ಸುಖಾತ್ಮಕಃ॥"

—ಸಿ ಶಿಖಾಮಣಿ

ಪ್ರಕೃತಿಯನ್ನು ಸಂಯಮಿಸಿ ವಶವರ್ತಿಯಾಗಿಸುವುದು, ಮಾಯಾ

(ಅವಿದ್ಯಾ) ಮಾರ್ಗ, ಅಧರ್ಮಮಾರ್ಗಗಳನ್ನು ಬಿಟ್ಟು ಧರ್ಮದ ತಿಳಿವಳಿಕೆ ಮತ್ತು ನಡೆವಳಿಕೆಯಲ್ಲಿರುವುದು. ಸತ್ಯ ಜ್ಞಾನವನ್ನು ಸತ್ಯಸುಖವನ್ನು ಪಡೆಯು ವುದು ಪರಕಾಯದ ಪರಮಧ್ಯೇಯ.

ಒಟ್ಟಿನಲ್ಲಿ ಮಾಹೇಶ್ವರಸ್ಥಲ ಮಾನವನ ಶ್ರೇಷ್ಠವಾದ ಸತ್ಯವಾದ ಧರ್ಮ ಸಂಸ್ಕೃತಿಯನ್ನು ಬಿತ್ತರಿಸಿದೆ. ಬಾಳಿನಲ್ಲಿ ಹಾಸು ಹೊಕ್ಕಾಗುವಂತೆ ಬೋಧಿಸಿದೆ. ಮಹಾ ಈಶ್ವರತ್ವಕ್ಕೆ ಏರಲು ಏನೇನು ಬೇಕೋ ಅದೆಲ್ಲವನ್ನು ಅಳವಡಿಸಿಕೊಂಡು ಆಚರಿಸಲು ಅನುವಾಗಿಸಿದೆ. ಆಗಮ ಧರ್ಮಗಳು ಅಚಾರ ಧರ್ಮಗಳು ಬಾಳಿ ನಲ್ಲಿ ಬೇರೂರಿ ಬಲಗೊಳ್ಳುವಂತೆ, ಬಲಗೊಂಡು ಬೆಳೆದು ಫಲಿಸುವಂತೆ ಮಾಡುವ ಮಹೋದ್ದೇಶವುಳ್ಳದ್ದಾಗಿದೆ. ಅಂತೆಯೇ ಅದು ನಿಷ್ಠೆ, ಪೂರ್ವಾಶ್ರಯಾದಿಗಳ ನಿರಸನ, ಶಿವ ಜಗನ್ಮಯನೆಂಬ ಭಾವನ, ದೈವೀಭಾವ ಸ್ಥಾಪನ, ದಿವ್ಯದೇಹ ಧಾರಣ. ತ್ರಿಕರಣಪೂರ್ವಕ ಅರ್ಚನ, ಕ್ರಿಯಾಜ್ಞಾನಾಚರಣ. ಧರ್ಮಾನುಷ್ಠಾನ- ಇವುಗಳಿಗೆ ಮುಖ್ಯವಾಗಿ ಮಹತ್ವವನ್ನಿತ್ತಿದೆ; ಭಕ್ತನಾದವನು ಇವುಗಳನ್ನು ಮುನ್ನಡೆಯಿಸಬೇಕೆಂದು ನಡೆಸಿ ಮಾಹೇಶ್ವರನೆನಿಸಬೇಕೆಂದು ಮನನೀಯವಾಗಿ ನಿರ್ದೇಶಿಸಿದೆ; ನಿರೂಪಿಸಿದೆ. ವಿಚಾರಶೀಲರು ವಿಶಾಲಮನೋಭಾವಿಗಳ ಇವನ್ನು ನೋಡಿದರೆ ಇವುಗಳಲ್ಲಿರುವ ಸಾಮಾಜಿಕ ಅಥವಾ ಪಾರಿಭಾಷಿಕ ಪದ ಪ್ರಯೋಗಗಳನ್ನು ಬಿಟ್ಟರೆ ಈ ಪ್ರಣಾಳಿಕೆ ಎಷ್ಟು ಪ್ರಬುದ್ಧವಾದುದು ಮತ್ತು ಇಡೀ ಮಾನವ ಜೀವನ ಪ್ರಗತಿಗೆ ಎಷ್ಟು ಅವಶ್ಯವಾದುದು ಎಂಬುದು ಸ್ಪಷ್ಟ ವಾಗುತ್ತದೆ. ಧಾರ್ಮಿಕ ಸಂಸ್ಕೃತಿಯ ಸ್ವರೂಪ ಚಿತ್ರಣವನ್ನು ಚೆನ್ನಾಗಿ ಮಾಡಿ ರುವುದನ್ನು ಮನಗಾಣಬಹುದಾಗಿದೆ. ನಿಷ್ಠೆ, ನಿರಸನ, ವಿಶಾಲಭಾವ, ತ್ರಿಕರಣ ಶುದ್ಧಿ, ಧರ್ಮದ ವಿಚಾರ-ಆಚಾರ ಇವುಗಳ ಅರ್ಥವಿಶೇಷವನ್ನು ಅಧಿಕ್ಯತೆ ಯನ್ನು ಅರಿಯಬಹುದಾಗಿದೆ. ಇವೆಲ್ಲ ಜನಜೀವನ ಕ್ರಮಕ್ಕೆ ಬರಬೇಕೆಂಬ ಹೆಬ್ಬಯಕೆ ಗ್ರಂಥಕರ್ತೃವಿನಲ್ಲಿರುವಿಕೆಯನ್ನು ಅರಿತು ಅತ್ಯಾನಂದವಾಗುತ್ತದೆ. ಮಾನವ ಜನ್ಮವನ್ನೆ ಸಾರ್ಥಕ ಮಾಡುವ ಪರಮ ಪುರುಷಾರ್ಥಗಳನ್ನು ಪಡೆದ ಉದಾತ್ತ ನಿರೂಪಣೆಗಳನ್ನು ನಿದರ್ಶಿಸುತ್ತೇವೆ.

ಧಾರ್ಮಿಕ ಆಚಾರ ವಿಚಾರಗಳು ನೆಲೆ ನಿಲ್ಲಬೇಕಾದರೆ ನಿಷ್ಠೆಯ ನೆಲೆಗಟ್ಟಿನ

ಆಧಾರದ ಮೇಲೆ. ಶ್ರೀಗುರುವಿನಿಂದ ಬಂದ ಸಂಸ್ಕಾರ ಸಂಸ್ಕೃತಿಗಳು ನೆಲಸಬೇಕಾದರೂ ನಿಷ್ಠೆಯ ಆಧಾರದ ಮೇಲೆ. ನಿಷ್ಠೆಯಿಂದ ನಡೆಯದಿದ್ದರೆ ಅವು ನಿಲ್ಲವು.

ಮಾಹೇಶ್ವರಾಂಗನಿಗೆ ನಿಷ್ಠೆ ಎಷ್ಟು ಅಗತ್ಯವೋ ಅಷ್ಟೇ ಧೃತಿಯೂ ಅಗತ್ಯ. ಧೃತಿಯಿಲ್ಲದೆ ನಿರಸನವ್ರತಗಳನ್ನು ನಡೆಯಿಸಲಾರ. ಪೂರ್ವಾಶ್ರಮ ಅಥವಾ ಪೂರ್ವಾಶ್ರಯ ನಿರಸನ ಮಾಡಬೇಕಾದರೆ ಬರಿಯ ಬಾಯ್ಮಾತಲ್ಲ; ಅದಕ್ಕೆ ಅದೆಂತಹ ದೃಢವಾದ ಧೃತಿ ಬೇಕೆಂಬುದನ್ನು ಆ ಹೊಲಬಿನಲ್ಲಿ ಹೋದರ ಗೊತ್ತಾಗುತ್ತದೆ.

ನಿರಸನವ್ರತದಂತೆ ನಿಷ್ಠೆಗೂ ಧೃತಿ ಬೇಕು. ಧೃತಿಯಿಲ್ಲದೆ ನಿಷ್ಠೆಯೂ ಗಟ್ಟಿಗೊಳ್ಳದು. ಎಲ್ಲಕ್ಕೂ ಮೂಲ ಧೃತಿ, ಧಾರಣಶಕ್ತಿಯಿಲ್ಲದೆ ಧೈರ್ಯ ಮನೋಭಾವವಿಲ್ಲದೆ ಯಾವುದೂ ಆಗದು. ನಿಷ್ಠೆ ನಿರಸನಗಳಂತೆ, ಆಚಾರ ವಿಚಾರಗಳೂ ತನ್ನಲ್ಲಿ ನೆಲಸಬೇಕಾದರೆ ಧೃತಿ ದೃಢವಾಗಿರಬೇಕು. ಯಾವುದನ್ನೂ ಕೈಬಿಡದೆ ನಡೆಯಿಸುವುದಕ್ಕೆ ಧೃತಿ ಎಂದರೆ ಸ್ಥಿರತೆ ಇದ್ದಾಗಬೇಕು; ದಾರ್ಢ್ಯತೆ ಇದ್ದಾಗಬೇಕು.

ಧೃತಿಯೆಂದರೆ ಬರಿಯ ಧಾರಣಶಕ್ತಿ ಮಾತ್ರವಲ್ಲ, ಆಧರಿಸುವ ಸ್ವಭಾವವೂ ಧೃತಿಯೆನಿಸುತ್ತದೆ. ಬರಿಯ ಇರಿಸಿಕೊಂಡರೆ ಸಾಲದು; ಇರಿಸಿಕೊಂಡುದನ್ನು ಆಧರಿಸಬೇಕು. ಇಲ್ಲವಾದರೆ 'ಭಕ್ತದೇಹಿಕದೇವ'ನಾಗುವ ಯೋಗ ಮಾಹೇಶ್ವರಾಂಗನಿಗೆ ಪ್ರಾಪ್ತವಾಗದು; ಪರಕಾಯನೆನಿಸನು.

ಮಾಹೇಶ್ವರಾಂಗನಿಗೆ ಧೃತಿವಂತಿಕೆಯಂತೆ ಮತಿವಂತಿಕೆಯೂ ಬೇಕು. ಮತಿವಂತಿಕೆಯಿಲ್ಲದೆ ಧೃತಿ, ನಿಷ್ಠೆಗಳು ದಿವ್ಯವಾಗವು, ದೀಪ್ತಿಗೊಳ್ಳವು.

ಬುದ್ಧಿ ಕರಣವೂ ಅಹುದು, ಗುಣವೂ ಅಹುದು. ಬುದ್ಧಿಯೆಂದರೆ ಜ್ಞಾನವೆಂದೂ ಅರ್ಥವಿದೆ. ಬುದ್ಧಿಗೇಡಿ ಎಂದು ಹೇಳಿದಾಗ ಕರಣವಿಲ್ಲೆಂದಲ್ಲ, ಕರಣಕ್ಕೆ ಇರಬೇಕಾದ ಗುಣ ಅಂದರೆ ಜ್ಞಾನವಿಲ್ಲ ಎಂದರ್ಥ. ಜ್ಞಾನಶಕ್ತಿಯಿಲ್ಲದೆ ನಿರಶನವ್ರತ. ಆಚಾರನಿಷ್ಠೆ, ಗುರುನಿಷ್ಠೆಗಳು ನೈಜವಾಗಿ ಸಾಗವು. ಇವೆಲ್ಲಕ್ಕೂ ಬೆಳಕನ್ನು ಬೀರಬಲ್ಲುದು ಮತಿವಂತಿಕೆ, ಆದ್ದರಿಂದ ಜ್ಞಾನಾಗಮ, ಜ್ಞಾನಾಚಾರಗಳ ಅಗತ್ಯ ಮಾಹೇಶ್ವರನಿಗೆ!

ನಾಲ್ಕನೆಯದಾಗಿ ನಿಷ್ಠೆ ಧೃತಿ ಮತಿಗಳಂತೆ ಕೃತಿಯೂ ಅನಿವಾರ್ಯ. ಇದಿಲ್ಲದಿದ್ದರೆ ಉಳಿದವುಗಳು ಹೆಳವನಂತಾಗುತ್ತವೆ, ನಿಷ್ಠೆ, ನಿರಶನ, ಧೃತಿ ಮತಿಗಳನ್ನು ಪ್ರಯೋಗದಲ್ಲಿ ತರುವ ಶಕ್ತಿಯೇ ಕೃತಿ ಅಥವಾ ಸಂಸ್ಕೃತಿ ಇಲ್ಲವೆ ಆಚಾರವೆಂದು ಹೇಳಿಸಿಕೊಳ್ಳುತ್ತದೆ. ನಿಷ್ಠಾದಿಗಳ ಆಚರಣೆಯ ರೂಪ ಚಲನತೆಗೆ ಜೀವಾಳ ಕ್ರಿಯೆ. ಕೃತಿಗೆ ಬಾರದ ಮತಿ ಧೃತಿ ನಿಷ್ಠೆ ನಿರಸನಾದಿಗಳಿಂದ ಏನು ಪ್ರಯೋಜನ ? ಯಾವ ಧ್ಯೇಯ ಸಾಧನ ?

ಈ ಸಾಧನ ಚತುಷ್ಟಯವೆಂಬ ಚಿಗುರು ಮಂಟಪದಲ್ಲಿ ಪ್ರತಿಷ್ಠಿಸಿ ಗುರು ಲಿಂಗವನ್ನು ಆರಾಧಿಸಬೇಕು ಮಾಹೇಶ್ವರಾಂಗನು. ಇವಿಲ್ಲದೆ ಗುರುಲಿಂಗ ಸಾಕ್ಷಾತ್ಕಾರವಾಗದು. ಮಾಹೇಶ್ವರತ್ವ ಮೈಗೂಡದು.

ಮಾಹೇಶ್ವರಾಂಗನ ಸಾಧನೆ ಮಹತ್ತರವಾದುದು; ಮನನೀಯವಾದುದು. ಚಿತ್ತ ಬುದ್ಧಿಗಳ ಒಡೆಯನಾಗಿ ಕ್ರಿಯಾಶಕ್ತಿಯನ್ನು ಜ್ಞಾನಶಕ್ತಿಯನ್ನು ಪಡೆದವನಾಗಿರಬೇಕು. ಪ್ರಾಕೃತಿಕ ಗಂಧ ರಸಗಳನ್ನು ಪ್ರಸಾದವನ್ನಾಗಿಸಿ ಪರಮಾರ್ಥಗೊಳಿಸಬೇಕು. ಸಚ್ಚಿತ್ಕಳಾಮಯನಾಗಿರಬೇಕು. ಮಾನವನು ಈ ಪವಿತ್ರ ಪರಿವರ್ತನಗೊಂಡಾಗ ಮಾಹೇಶ್ವರ ಎನಿಸನೇನು ?

ಮಾನವ ಧರ್ಮವನ್ನು ಉಳಿಸಿ ಬೆಳಸಲು ಕಂಕಣಬದ್ಧನಾದವನೇ ಮಾಹೇಶ್ವರಾಂಗ. ಸುಪ್ತ ಧರ್ಮಕ್ಕೆ ಸುಪ್ತ ಸದಾಚಾರಕ್ಕೆ ಸಚೇತನತೆಯನ್ನು ತಂದು ತುಂಬುತ್ತಾನೆ ಮಾಹೇಶ್ವರಾಂಗ. ಪ್ರಸುಪ್ತ ಸಂವಿತ್‌ಶಕ್ತಿಯನ್ನು ಪ್ರಬುದ್ಧಗೊಳಿಸುತ್ತಾನೆ ಮಾಹೇಶ್ವರಾಂಗ. ನಿಷ್ಠೆ ನಿರಸನಗಳೆಂಬ ಚಕ್ರಗಳುಳ್ಳ ತ್ಯಾಗಾಂಗ ರಥಕ್ಕೆ ಆಗಮ—ಆಚಾರಗಳೆಂಬ ಅಶ್ವಗಳನ್ನು ಹೂಡಿ ಮುನ್ನಡೆಯಿಸುತ್ತಾನೆ. ಜೀವನದ ಪೂರ್ಣತೆಯತ್ತ ಹೋಗುವ ಹೊಲಬಿನ ಮೂರು ಹೆಜ್ಜೆಯಲ್ಲಿ ಒಂದು ಹೆಜ್ಜೆಯನ್ನಿಟ್ಟು ಮುಗಿಸುತ್ತಾನೆ. ಪ್ರಸಾದಿಯಾಗುವ ಪ್ರಸನ್ನ ಭಾವವನ್ನು ಪಡೆದಿರುತ್ತಾನೆ. ಸದಾಚಾರ, ಸಂಯಮ, ಸ್ಥೈರ್ಯ, ಸದ್ವಿವೇಕ, ಶಿವಭಾವನೆಗಳಿಂದ ಸನ್ನದ್ಧನಾಗಿರುತ್ತಾನೆ.

ಪ್ರಗತಿ ಪಥದಲ್ಲಿ ಮಾರ್ಗಕ್ರಿಯೆ ಮೊದಲ ಸಾಧನ, ಮುಖ್ಯ ಸಾಧನ. ಮಾರ್ಗಕ್ರಿಯೆಗಳ ಅನುಷ್ಠಾನದಲ್ಲಿ ಮಾಹೇಶ್ವರಾಂಗನು ಬಹುದೂರ ಬಂದಿರುತ್ತಾನೆ. ಮೂರನೆಯ ಎರಡು ಭಾಗವನ್ನು ಮುಗಿಸಿರುತ್ತಾನೆ. ನಿಷ್ಕಪಟವಾದ ನಿಷ್ಕಲ್ಮಷವಾದ ನಿಷ್ಠೆಯ ನಿಕಷದಲ್ಲಿ ಮಾಹೇಶ್ವರಾಂಗನು ಅಪರಂಜಿಯಂತೆ

ಅಕಲಂಕನಾಗಿರುತ್ತಾನೆ ; ಅಕುಟಿಲನಾಗಿರುತ್ತಾನೆ, ನಿಸ್ವಾರ್ಥ ಮತ್ತು ನಿಷ್ಪನ್ನ ಮತಿಯುಳ್ಳವನಾಗಿರುತ್ತಾನೆ. ನಿರ್ವಿಕಾರಪ್ರವೃತ್ತಿಯುಳ್ಳವನಾಗಿರುತ್ತಾನೆ.

ಭಕ್ತಾಂಗನು ಆಚಾರವನ್ನೆ ಲಿಂಗವನ್ನಾಗಿ ಆರಾಧಿಸಿದರೆ ಮಾಹೇಶ್ವರಾಂಗನು ಗುರು ಅಂದರೆ ಜ್ಞಾನವನ್ನೇ ಅಂಗವನ್ನಾಗಿ ಆರಾಧಿಸುತ್ತಾನೆ, ಆತ ಕ್ರಿಯಾಸಕ್ತ ; ಈತ ಜ್ಞಾನಾಸಕ್ತ. ಆ ಭಕ್ತನೇ ಮಾಹೇಶ್ವರನೆನಿಸುತ್ತಾನೆ. ಕ್ರಿಯೆಯೊಡನೆ ಜ್ಞಾನನಿಷ್ಠನಾಗಿ ಕ್ರಿಯಾಜ್ಞಾನಾನುಷ್ಠಾನದಿಂದ ರಕ್ತ ಶುಕ್ಲಾದಿಗಳು ಶುದ್ಧವಾಗಿ ವೃದ್ಧಿಹೊಂದುತ್ತವೆ. ಬುದ್ಧಿ ವೃದ್ಧಿಯಾಗುತ್ತದೆ. ಕರಣ ವೃತ್ತಿಗಳು ಅಡಗುವವು. ಸತ್ಕಳೆ ಚಿತ್ಕಳೆಗಳು ಸಂವೃದ್ಧಿಗೊಳ್ಳುವವು.

ಪ್ರಕೃತಿಯನ್ನು ಸುಕೃತಿಗೆ ಪ್ರಗತಿಗೆ ಒಡನಾಡಿಯನ್ನಾಗಿಮಾಡಿಕೊಳ್ಳುವುದೇ ಷಟ್‌ಸ್ಥಲದ ಸದುದ್ದೇಶ. ಈ ದಿಸೆಯಲ್ಲಿ ಈ ಮಾಹೇಶ್ವರಸ್ಥಲ ಎರಡನೆಯ ಹಂತ. ಪ್ರಕೃತಿಯ ಪ್ರಭಾವವ ಮಾನವನ ಮೇಲೆ ಆಗದಿರದು. ಇದನ್ನು ನಿವಾರಿಸುವುದು ನೀತಿಗಳೆವುದು ನಿಜಕ್ಕೂ ಅಸಾಧ್ಯ. ಬಾಹ್ಯ ಮತ್ತು ಅಂತಃ ಪ್ರಕೃತಿಗಳೆರಡೂ ಮಾನವನ ಮನಸ್ಸಿನ ಮೇಲೆ ತಮ್ಮ ಮುದ್ರೆಯನ್ನೊತ್ತುತ್ತವೆ; ಬಗೆ ಬಗೆಯ ಭಾವಗಳನ್ನು ಕೆರಳಿಸುತ್ತವೆ; ಸುಖದುಃಖಗಳ ಕೇಡು ಲೇಸುಗಳ ಏರಿಳಿತಗಳ ಅನುಭವವನ್ನುಂಟು ಮಾಡುತ್ತವೆ. ನೆಲ ಜಲಗಳು ಜೀವನ ಸಹಕಾರಿಗಳಾಗಿರುವಂತೆ ತ್ಯಾಗಾಂಗವು ಸಹಕಾರಿಯಾಗಿದೆ. ನೆಲಜಲಗಳನ್ನು ಬಿಟ್ಟು ಹೇಗೆ ಜೀವನವಿಲ್ಲವೋ ಹಾಗೆ ತ್ಯಾಗಾಂಗವನ್ನು ಬಿಟ್ಟು ಜೀವನವಿಲ್ಲ. ಜೀವ ಶಿಶುವಿಗೆ ತ್ಯಾಗಾಂಗ ಒಂದು ತಾಯಿ ; ಜೀವನ ಪ್ರದಾಯಿ.

ಪ್ರಕೃತಿಯ ವಿಷಯದಲ್ಲಿ ವೈದಿಕಸಾಹಿತ್ಯದಲ್ಲಿ ಉದಾತ್ತವಾದ ಭಾವನೆಯಿದೆ. ಅದಕ್ಕಿಂತಲೂ ಅಧಿಕವಾದ ಭಾವ ತಾಂತ್ರಿಕ ಸಾಹಿತ್ಯದಲ್ಲಿದೆ. ದಿವ್ಯ ಧಾರ್ಮಿಕ ಸಂಸ್ಕೃತಿಯನ್ನು ಬಿತ್ತಿ ಬೆಳೆಯಲು ಬೆಳೆದು ಉಪಯೋಗಿಸಲು ಸತ್ಯ ಸಾಧನವನ್ನಾಗಿ ಕಂಡು ಉಪಯೋಗಿಸಿದ ಸರ್ವಾದರ್ಶ ಸೌಭಾಗ್ಯ ಶಿವಾಗಮ ಸಾಹಿತ್ಯಕ್ಕಿದೆ ; ಷಟ್‌ಸ್ಥಲ ಸಿದ್ಧಾಂತಕ್ಕಿದೆ. ಪ್ರಕೃತಿ ಪುರುಷರಾಗಲಿ ಶಿವಶಕ್ತಿಯರಾಗಲಿ ಪರಸ್ಪರ ಉಪಕಾರ್ಯ–ಉಪಕಾರಕ ಭಾವವುಳ್ಳವರಾಗಿದ್ದಾರೆ.

ಅನ್ನ ನೀರುಗಳಿಂದ ಮಾನವ ಜೀವನ. ಪಾದೋದಕ ಪ್ರಸಾದಗಳಿಂದ ಶರಣಜೀವನ. ಅನ್ನನೀರುಗಳು ಪ್ರಕೃತಿ. ಪಾದೋದಕ ಪ್ರಸಾದಗಳು ಸಂಸ್ಕೃತಿ.

ಅನ್ನ ನೀರುಗಳನ್ನು ಬಿಡದೆ, ಅವನ್ನೇ ಸಂಸ್ಕರಿಸಿ ಪಾದೋದಕ ಪ್ರಸಾದಗಳನ್ನಾಗಿ ಸಂವುದು ಷಟ್‌ಸ್ಥಲರೂಪ ಶಿವಾದ್ವೈತ ಸಿದ್ಧಾಂತ.

ಅನ್ನದಲ್ಲಿ ಗಂಧ, ನೀರಿನಲ್ಲಿ ರಸ–ಇವೆ. ಅನ್ನದೊಳಗಿನ ಗಂಧವನ್ನು ಆಚಾರ ಲಿಂಗಕ್ಕೆ, ನೀರಿನೊಳಗಿನ ರಸವನ್ನು ಗುರುಲಿಂಗಕ್ಕೆ ಅರ್ಪಿಸಿ ಪ್ರಸಾದವಾಗಿಸಿ ಆರೋಗಿಸಿ ಪರಿಣಮಿಸಬಲ್ಲವನೇ ಮಾಹೇಶ್ವರಾಂಗ. ಅನ್ನ ನೀರುಗಳಲ್ಲಿ ಇರುವ ಪ್ರಕೃತಿ ಭಾವವನ್ನು ಪ್ರವೃತ್ತಿ ಗುಣವನ್ನು ಸಂಸ್ಕಾರ ಬಲದಿಂದ ಸಂಸ್ಕೃತಿ ಭಾವಕ್ಕೆ ನಿವೃತ್ತಿ ಗುಣಕ್ಕೆ ತರುವಾತನೇ ಮಾಹೇಶ್ವರಾಂಗ, ಇಂತಹ ಮಾಹೇಶ್ವರಾಂಗನು ಬಿದಿಗೆಯ ಚಂದ್ರಕಲೆಯಂತೆ ಚೆಲುವಾಗಿ ಬೆಳಗುತ್ತಾನೆ. ಶಿವನ ಶಿರೋಧಾರಿ ಯಾಗುತ್ತಾನೆ.

ಮಾಹೇಶ್ವರಾಂಗನು ನಿವೃತ್ತಿಪರನಾಗಿ ಸತ್ಕ್ರಿಯೆ ಸಮ್ಯಗ್‌ಜ್ಞಾನನಿಷ್ಠ ನಾಗಿ ಸ್ವಾರ್ಥ ಸ್ವಾಭಿಮಾನಗಳನ್ನು ಬಿಟ್ಟಿರುತ್ತಾನೆ. ವಿಶ್ವಧರ್ಮಾಚರಣೆಯಲ್ಲಿ ನಿರತನಾಗಿರುತ್ತಾನೆ. ತನ್ನಂತೆ ಎಲ್ಲರು ಸುಖಸ್ವಾತಂತ್ರ್ಯ ಮತ್ತು ಸಂಸ್ಕೃತಿ ಯಿಂದ ಬಾಳಬೇಕೆಂದು ಬಯಸಿ ಅದಕ್ಕೆ ತಕ್ಕಂತೆ ತಾನೂ ಆಚರಿಸಿ ಅನ್ಯರೂ ಆಚರಿಸುವಂತೆ ಮಾಡಿ ಆಚಾರ್ಯ ಪದಕ್ಕೇರುತ್ತಾನೆ. ನಿಜಾಚರಣೆಯಿಂದ ನಿಜ ಜ್ಞಾನದಿಂದ ತಾನು ಪರಕಾಯ ಸ್ಥಿತಿಗೇರಿದ್ದರೂ ಲೋಕದವರ ಹಿತಕ್ಕಾಗಿ ಧರ್ಮಾಚಾರ ಭಾವಾಚಾರ ಜ್ಞಾನಾಚಾರಗಳನ್ನು ಆಚರಿಸುವ ಮಂಗಳಮಹಿಹ ಮಾಹೇಶ್ವರನದು, ಮಾಹೇಶ್ವರನು ಮರ್ತ್ಯದ ಮಾನವರನ್ನು ಮರೆತಿರುವುದಿಲ್ಲ. ತಾನೊಬ್ಬ ಮುಕ್ತನಾದರೆ ತೃಪ್ತಿಯಿಲ್ಲ. ಎಲ್ಲರೂ ಸುಸಂಸ್ಕೃತರಾಗಬೇಕು, ಸತ್ಯ ಸುಖವಂತರಾಗಬೇಕು—ಎಂಬ ವಿಶಾಲ ಮನೋಭಾವವುಳ್ಳವನಾಗಿ ಬಾಳುವನು. ಜಗಚ್ಚಕ್ಷುವಾದ ರವಿಯಂತೆ ಬೆಳಗಬೀರಿ ರಾಜಿಸುವನು. ಸದ್ಧರ್ಮಸಂಸ್ಕೃತಿಯ ಹಬ್ಬುಗೆಯೇ ಮಾಹೇಶ್ವರನ ಹೆಬ್ಬಯಕೆ. ಶಿವಾಗಮ ಶಿವಾಚಾರಗಳ ಪುನರು ಜ್ಜೀವನವೇ ಆತನ ಬಾಳುಸಿರು. ಮಾನವ ಜೀವನಕ್ಕೆ ಮಾರ್ಗದರ್ಶನ ಮಾಡಿ ಕೊಡುವುದೇ ಮಹಾಮಹಿಹ. ಜೀವನವನ್ನು ಚೈತನ್ಯಸಂಪನ್ನವಾಗಿಸುವುದೆ ಮಾಹೇಶ್ವರನ ಮನೀಷೆ. ಮಾನವೀಯತೆಯನ್ನು ಮನವರಿಕೆ ಮಾಡಿಕೊಟ್ಟ ವಿಶ್ವಪ್ರೇಮ ಎಲ್ಲರ ಹೃದಯಪ್ರದದಲ್ಲಿ ಊರುವಂತೆ ಉಕ್ಕುವಂತೆ ಯತ್ನಿಸುವುದೆ ಮಾಹೇಶ್ವರನ ಮುಖ್ಯ ಕರ್ತವ್ಯ. ಎಲ್ಲರನ್ನು ಕ್ರಿಯಾಶೀಲರನ್ನಾಗಿಸುವುದೆ ಆತನ

ಕಾಂಕ್ಷೆ. ಮಾನವರನ್ನು ಮಾನಸಿಕ ರೋಗಗಳಿಂದ ಮುಕ್ತರನ್ನಾಗಿಸುವುದೇ ಮಾಹೇಶ್ವರನ ಮನದ ಉದ್ದೇಶ. ದಾರಿಯ ದೂಳಾಗಿ ಹೋಗುತ್ತಿರುವ ನೀತಿ ನಿಯಮಗಳನ್ನು ಧರ್ಮಮರ್ಮಗಳನ್ನು ಅರಿತು ಅನುಷ್ಠಾನಕ್ಕೆ ತರುವಂತೆ ಅರುಹುವುದೇ ಆತನ ಅಭಿಲಾಷೆ. ಉತ್ತಮ ಗುಣಗಳಿಂದ ಆತ್ಮಶಕ್ತಿಯನ್ನು ಅಭಿವೃದ್ಧಿಗೊಳಿಸಬೇಕೆಂಬುದೇ ಆಶೆ. ಈ ಹಿರಿದಾಸೆಯಲ್ಲಿ ತನ್ನನ್ನು ತಾನೇ ಅರಿತು ಮರೆತಿರುತ್ತಾನೆ ತನ್ನ ಕಾಯಕಾಂಕ್ಷೆ ತನಗಿರುವುದಿಲ್ಲ. ಜನತೆಯೆಂಬ ಜಗದ್ಗುರುವಿಗೆ ಅರ್ಪಿತವಾಗಿ ಪರಿಶುದ್ಧವಾಗಿರುತ್ತದೆ. ಪರವಸ್ತು ಸ್ವರೂಪವಾಗಿರುತ್ತದೆ. ದೇಹೇಂದ್ರಿಯ ವಾಸನೆ ಅದೆಷ್ಟೂ ಇರುವುದಿಲ್ಲ. ಜನನಾವಸಾನ ಭಾವವೂ ಇರುವುದಿಲ್ಲ, ಭೌತಿಕಭಾವ ಹುಡುಕಿದರೆ ಸಿಕ್ಕದು. ಪಂಚಭೂತಪ್ರಕೃತಿ ಪಂಚಾಕ್ಷರ ಸ್ವರೂಪವಾಗಿ ಪ್ರಾಣ ಪ್ರಣವ ಸ್ವರೂಪವಾಗಿರುತ್ತದೆ.ತಾನು ಪ್ರಾಣಗಳು ಲಿಂಗಸ್ವರೂಪವಾಗಿರುತ್ತವೆ ;

"ಆಚಾರಃಸ್ಯಾತ್ ಪೃಥ್ವೀ ಗುರುರಾಪಃ ಶಿವಲುದೀರ್ಯತೇ ತೇಜಃ।
ಚರ ಏವಸ್ಯಾಧ್ವಾಯುಃ ಪ್ರಸಾದ ಆಕಾಶ ಇತ್ಯುದಾಹ್ರಿಯತೇ ॥
ಜೀವೋಮಹಾನಸೌ ಸ್ಯಾದ್ಭೂತಾತ್ಮಾ ಷಟ್ಸ್ಥಲಾತ್ಮನಾಮೇಷಾಂ ।
ಭಕ್ತಾದೀನಾಂ ಪೃಥ್ವ್ಯಾದ್ಯಂಗಾನಾಮುಚ್ಯತೇತ್ರ ತತ್ತ್ವಾರ್ಥಃ ॥"

ಪೃಥ್ವಿ ಆಚಾರಲಿಂಗ, ಜಲ ಗುರುಲಿಂಗ, ಅಗ್ನಿ ಶಿವಲಿಂಗ, ವಾಯು ಚರಲಿಂಗ, ಆಕಾಶ ಪ್ರಸಾದಲಿಂಗ. ಆತ್ಮ ಮಹಾಲಿಂಗವಾಗಿ ತಮ್ಮ ಭೌತಿಕ ಭಾವವನ್ನು ಕಳೆದುಕೊಂಡಿರುತ್ತವೆ. ಅನ್ವರ್ಥಕವಾಗಿ ಲಿಂಗಸ್ವರೂಪವನ್ನು ಪಡೆದಿರುತ್ತವೆ.

"ಆಧಾರಶ್ಚರತಾಂ ಸತಾಂ ಕ್ಷಿತಿರಥಾಚಾರಃ ಪಯಃಸ್ಯಾದ್ಗುರು
ರ್ಜ್ಯೋತಿರ್ಧೋ ದಿವ್ಯ ಸುಧಾರಸಃ ಪರತರಂ ಜ್ಯೋತಿಃ ಶಿವಃಪಾವಕಃ !
ಭಾಹ್ಯಾಭ್ಯಂತರಗಶ್ಚರೋ ಮರುದಥಾಕಾಶಃಪ್ರಸಾದಃ ಸ್ವಯಂ
ಶುದ್ಧಃ ಕಾಯವಿವರ್ಜಿತಃ ಖಲು ಮಹಾನ್ ಜೀವಃ ಷಡಂಗಾಂಗಿನಾಂ ॥

— ವಿಶೇಷಾರ್ಥ ಪ್ರಕಾಶಿಕೆ, ಅಧಿ-೫

ಪೃಥ್ವಿ ಆಚಾರಶೀಲರಿಗೆ ಆಧಾರವಾಗಿರುವುದರಿಂದ ಆಚಾರಲಿಂಗ, ಆಪ್ ಗುರುವಿನ ರಸಮಯ ಬೋಧಾಮೃತವಾಗಿ ಗುರುಲಿಂಗ. ಅಗ್ನಿ ಅಕ್ಷಿಗತ ಪರಂಜ್ಯೋತಿಯಾಗಿ ಶಿವಲಿಂಗ. ಒಳಹೊರಗೆ ಚರಿಸುವದಾಗಿ ವಾಯು ಜಂಗಮ ಲಿಂಗ, ಪ್ರಸನ್ನತೆಯಿಂದ ಕೂಡಿದುದಾಗಿ ಆಕಾಶ ಪ್ರಸಾದಲಿಂಗ. ಆಕಾಯನಾಗಿ ಅಮಳನಾಗಿ ಜೀವಾತ್ಮ ಮಹಾಲಿಂಗ, ಆ ಮಹಾಲಿಂಗಸ್ವರೂಪನಾದ ಶುದ್ಧಾಂತಃ ಕರಣ ದೇಹಿಯೇ ಶಿವಾದ್ವೈತ ಸ್ವರೂಪ.

"ಶಿವಾದ್ವೈತ ಪರಸ್ಯಾಸ್ಯ ನ ನಾಶೋ ನೈವ ಜನ್ಮ ಚ ।
ನೈವ ಚಾನ್ಯಾಗತಿರ್ನಾನ್ಯದ್ಬಂಧನಂ ನ ವಿಮೋಚನಂ ॥"

ಹೀಗೆ ಪರಕಾಯನಾದ ಮಾಹೇಶಾಂಗನಿಗೆ ಹುಟ್ಟು ಸಾವಿಲ್ಲ, ಬೇರಾವ ಬಗೆಯಿಲ್ಲ, ಬಂಧ-ಮೋಕ್ಷಗಳಿಲ್ಲ. ಲಿಂಗ ಸಂಸ್ಕಾರದಲ್ಲಿ ಮೈದೋರಿ ಹುಟ್ಟಿಲ್ಲ, ಲಿಂಗಭೋಗೋಪ ಭೋಗಿಯಾಗಿ ಜೀವನ ಸ್ಥಿತಿಯಲ್ಲಿ ಲಿಂಗಾರ್ಪಣವಾಗಿ ಮರಣ ವಿಲ್ಲ. ಹೆತ್ತತುಪ್ಪ ಕರಗಿ ತಿಳಿದುಪ್ಪವಾಗುವಂತೆ, ಕಪ್ಪುರ ಕರಗಿ ತೇಜವಾಗುವಂತೆ ಅಂಗ ಲಿಂಗವಾಗುತ್ತದೆ. ಕೊಡದೊಳಗಿನ ಆಕಾಸಕ್ಕೆ ಹೇಗೆ ಬಂಧ-ದೋಷ ಗಳಿಲ್ಲವೋ ಹಾಗೆ ಮಾಹೇಶ್ವರಾಂಗನಿಗೆ ಬಂಧ ಮೋಕ್ಷಗಳಿಲ್ಲ.

# ಮಾಹೇಶ್ವರನ ಮಜ್ಜನ

ಜಲಾಂಗನಾದ ಮಾಹೇಶ್ವರನ ಮಜ್ಜನ ಬಗೆ ಬೇರೆ ! ಅದು ತೆರಹಿಲ್ಲದ ಬಗೆ ; ಕುರುಹಿಲ್ಲದ ಬಗೆ ; ಅದೆಲ್ಲವನ್ನೂ ಒಳಗೊಂಡು ಅರಿವಿಗೂ ಅತೀತ ವಾಗುತ್ತದೆ,

ಅಂಗಮಜ್ಜನ ಅರಿತವರು ಹಲವರು, ಲಿಂಗಮಜ್ಜನ ಅರಿತವರು ಹಲ ವರು ಉಭಯ ಮಜ್ಜನ ಅರಿತವರು ವಿರಳ.

ಅಂಗಮಜ್ಜನ ಇಬ್ಬಗೆ. ಒಂದು ಬಹಿರಂಗ ಮಜ್ಜನ. ಇನ್ನೊಂದು ಅಂತರಂಗ ಮಜ್ಜನ. ಬಹಿರಂಗ ಮಜ್ಜನವನ್ನು ಬಹುಮಂದಿ ಅರಿತಿದ್ದಾರೆ ; ಆಚರಿಸುತ್ತಿದ್ದಾರೆ. ಅಂತರಂಗದ ಮಜ್ಜನವನ್ನು ಅರಿತವರು ಅಪರೂಪ. ಅರಿತಿದ್ದರೂ ಆಚರಿಸುವವರು ಇನ್ನೂ ಅಪರೂಪ.

"ಜಲ ಮಲಿನವ ತೊಳೆವಂತೆ, ಮನದ ತಮಂಧವ ತೊಳೆದು,
ದರ್ಪಣದೊಳಗಣ ಪ್ರತಿಬಿಂಬದಂತಿಪ್ಪೆಯಯ್ಯ,
ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ."

ಮೈ ತೊಳೆಯಬಹುದು. ಮನವ ತೊಳೆಯುವುದು ಕಠಿಣ. ಮನ ತೊಳೆಯದೆ ಮಜ್ಜನ ಮುಗಿಯದು ; ಅರೆಕೊರೆಯದು. ಮನಕೆ ಅಂಟಿರುವ ಕೊಳೆ ಮರುವೆ ಮಂಪರೆಯೆಂದರೆ ಅಜ್ಞಾನ. ಅಜ್ಞಾನವೇ ತಮಂಧ. ಮನ ವನ್ನು ತೊಳೆಯದೆ ತನ್ನ ಸಾಕ್ಷಾತ್ಕಾರ ತನಗಾಗದು. ಮುಕುರವಿಲ್ಲದೆ ಮುಖ ಕಾಣದು. ತಿಳಿಮನವಿಲ್ಲದೆ ತನ್ನ ಸ್ವರೂಪ ತನಗೆ ಕಾಣದು. ಮುಕುರ ಮಸುಕಾಗಿದ್ದರೆ ಮುಖ ಅಸ್ಪಷ್ಟವಾಗಿ ಕಾಣುವುದು. ಮುಕುರ ತುಂಬಾ ಮಲಿನ ವಾಗಿದ್ದರೆ ಮುಖ ಏನೂ ಕಾಣದು. ಅಂತೆಯೇ ಮನ ಸಂಶಯಕ್ಕೊಳಗಾದರೆ ಸಂಕಲ್ಪ ವಿಕಲ್ಪಗಳಿಗೊಳಗಾದರೆ ಮಸುಕಾದಂತೆ, ಮಲಿನವಾದಂತೆ ! ಇವನ್ನು ಕಳೆಯಬೇಕಾದರೆ ಜ್ಞಾನಾಚಾರ ಮಜ್ಜನ ಮುಖ್ಯವಾಗಿ ಬೇಕು. ಜ್ಞಾನದಿಂದ,

ಸಂಶಯು ನಿವೃತ್ತಿ. ಆಚಾರದಿಂದ ಸಂಕಲ್ಪ ವಿಕಲ್ಪ ನಿವೃತ್ತಿ. ಆಗ ಮನ ಮಡಿ ಯಾಗುತ್ತದೆ. ಅಂತಾದಾಗ ಅಂಗಮಜ್ಜನ ಅಖಂಡವಾಗುತ್ತದೆ. ಅಷ್ಟಾದರೂ ಸಾಲದು. ಜತೆಗೆ ಲಿಂಗ ಮಜ್ಜನವಾಗಬೇಕು. ಲಿಂಗವೆಂದರೆ ಜೀವಾತ್ಮ, ಜೀವ ಭಾವವನ್ನು ತೊಳೆಯಬೇಕು.

ಲಿಂಗವಂತರೆಲ್ಲರೂ ಲಿಂಗಮಜ್ಜನ ಮರ್ಮವನ್ನು ಅರಿತಿರಲಾರರು; ಅರಿತಿದ್ದರೂ ಆಚರಿಸಲಾರರು. ಬರೀ ಜಲದಿಂದ ಮಜ್ಜನ ಮಾಡಿದರೆ ಲಿಂಗ ಮಜ್ಜನವಾಗದು. ಸ್ವಾನುಭವವೆಂಬ ಅಮೃತ ಜಲದಿಂದ ಮಜ್ಜನ ಮಾಡುವು ದನ್ನು ಮನಗಾಣಬೇಕು.

"ಉದಯ ಕಾಲ ಮಜ್ಜನಕ್ಕೆರೆಯಲಾಗಿ, ಉತ್ಪತ್ತಿ ಕಾಲದ ಕರ್ಮವು ಕೆಡುವುದಾಗಿ! ಮಧ್ಯಾಹ್ನ ಕಾಲ ಮಜ್ಜನಕ್ಕೆರೆಯಲಾಗಿ ಸ್ಥಿತಿಕಾಲ ಕರ್ಮವು ಕೆಡುವುದಾಗಿ!! ಅಸ್ತಮಾನಕಾಲ ಮಜ್ಜನಕ್ಕೆರೆಯಲಾಗಿ ಲಯಕಾಲ ಕರ್ಮವು ಕೆಡುವುದಾಗಿ!!! ಉದಯದ ಪೂಜೆ ಬ್ರಹ್ಮಂಗೆ, ಮಧ್ಯಾಹ್ನದ ಪೂಜೆ ವಿಷ್ಣು ವಿಂಗೆ, ಅಸ್ತಮಾನದ ಪೂಜೆ ರುದ್ರಂಗೆ! ಇಂತೀ ತ್ರಿವಿಧ ಕಾಲ ನಾಸ್ತಿಯಾಗಿ ಮಜ್ಜನಕ್ಕೆರೆಯಬಲ್ಲನಾಗಿ, ಕೂಡಲ ಚನ್ನ ಸಂಗಯ್ಯಾ, ನಿಮ್ಮ ಶರಣ ಭವಕ್ಕೆ ದೂರ."

ಅರಿವುದು ಉದಯಮಜ್ಜನ; ಅರಿತಂತೆ ಆಚರಿಸುವುದು ಮಧ್ಯಾಹ್ನ ಮಜ್ಜನ. ಅರಿವು ಆಚಾರದಲ್ಲಿ ಆಚಾರ ಅರುಹಿನಲ್ಲಿ ಕರಗಿಗೊಳ್ಳುವುದು, ಕರಿ ಗೊಂಡು ಅನುಭವಿಯಾಗುವುದು ಸಂಜೆಯ ಮಜ್ಜನ. ಈ ತ್ರಿವಿಧ ಮಜ್ಜನ ವಿಲ್ಲದೆ ಕಾಯಭಾವ ಪ್ರಾಣಭಾವ ಜೀವಭಾವಗಳು ತೊಲಗವು. ಕಾಯ ಭಾವವನ್ನು ತೊಲಗಿಸಿಕೊಳ್ಳುವುದೇ ಕರದಿಷ್ಟ ಲಿಂಗದ ಮಜ್ಜನ. ಪ್ರಾಣ ಭಾವವನ್ನು ಪರಿಹರಿಸಿಕೊಳ್ಳುವುದೇ ಪ್ರಾಣಲಿಂಗ ಮಜ್ಜನ. ಜೀವ ಭಾವವನ್ನು ಕಳೆದುಕೊಳ್ಳುವುದೇ ಭಾವಲಿಂಗ ಮಜ್ಜನ.

ಅರಿವು ಆಚಾರ ಅನುಭವಗಳನ್ನು ಅಳವಡಿಸಿಕೊಳ್ಳದೆ ಮೂರು ವೇಳೆ ಮಜ್ಜನಕ್ಕೆರೆದರೆ ಪ್ರಯೋಜನವಿಲ್ಲ. ಮಲತ್ರಯಗಳನ್ನು ಕಳೆದುಕೊಳ್ಳಬೇಕಾದರೆ ಮಜ್ಜನ ತ್ರಯಬೇಕು. ಆಚಾರದಿಂದ ಕಾರ್ಮಿಕಮಲ, ಅರಿವಿನಿಂದ ಮಾಯಿ ಕಮಲ, ಅನುಭವದಿಂದ ಆಣವಿಕಮಲ ಅಣಗುತ್ತವೆ. ಪರವಿಡಿದು ಸತ್ ಚಿತ್

ಆನಂದಗಳು ಅಳವಡುತ್ತವೆ. ಆದ್ದರಿಂದ ಆಚಾರ–ಅರಿವು–ಅನುಭವಗಳೇ ತ್ರಿವಿಧ ಮಜ್ಜನ. ಈ ತ್ರಿವಿಧ ಮಜ್ಜನಕ್ಕೆ ಮಾಹೇಶ್ವರಾಂಗನು ತನ್ನ ಜೀವನದಲ್ಲಿ ಮಹತ್ವವನ್ನು ಕೊಟ್ಟು ಮೈಗೂಡಿಸಿಕೊಳ್ಳುತ್ತಾನೆ. ಅದರಿಂದ ಆತನಿಗೆ ಮಾಹೇಶ್ವರತ್ವ ಸಾರ್ಥಕವಾಗುತ್ತದೆ.

ಈ ಮಜ್ಜನ ಮರ್ಮವನರಿಯದೆ ಅದೆಷ್ಟು ಕಾಲ ಜಲಮಜ್ಜನ ಜಡ ಅರ್ಚನಗಳನ್ನು ನೆರವೇರಿಸಿದರೂ ನಿಷ್ಪ್ರಯೋಜನ.

"ಅನಾದಿ ಶರಣ ಹೃತ್ಕಮಲ ಮಧ್ಯದ
ತೇಜೋಮಯವನೇನೆಂದುಪಮಿಸುವೆನಯ್ಯಾ !
ಜಲವೇ ಪಾದಶಿಲೆ, ಪೃಥ್ವಿಯೇ ಪಿಂಡಿಗೆ,
ಆಕಾಶವೇ ಲಿಂಗ, ಸಪ್ತಸಮುದ್ರಂಗಳೇ ಪಂಚಾಮೃತ ;
ಮೇಘವೇ ಅಗ್ಗವಣಿಯ ಬಿಂದುಗೆ,
ಮಳೆಗಾಲವೆ ಮಜ್ಜನ, ಚಂದ್ರಮನೇ ನೊಸಲ ಗಂಧ ;
ನಕ್ಷತ್ರವೆ ಅಕ್ಷತೆ, ತರುಮರಾದಿಗಳೆ ಪತ್ರಪುಷ್ಪ ;
ಒಳಗೆ ಪಂಚಮಹಾ ವಾದ್ಯ ; ಮಾಗಿ ಎಂಬ
ಪರಿಯಾಣವ ಬೆಳಗಿ, ಬೇಸಗೆ ಎಂಬ ಓಗರವ ಗಡಣಿಸಿ,
ಸರ್ವಪರಿಮಳವೆಂಬ ತುಪ್ಪವನೆರೆದು
ಪರವೆಂಬ ಮೇಲೋಗರವನಿಕ್ಕಿ,
ಬೆಳಗು—ಕತ್ತಲೆ ಎಂಬ ಕನ್ನಡಕವ ಕಟ್ಟಿ,
ಇಂತು ಲಿಂಗಾರೋಗಣೆಯ ಮಾಡಿಸಿ,
ಸುಜ್ಞಾನದಲ್ಲಿ ಕೈಗರೆದು, ಭಾವವೆಂಬ ವೀಳೆಯವ ಕೊಟ್ಟು,
ಆನು ನೀನೆಂಬ ಅನುಲೇಪನ ಗಂಧವ ಪೂಸಿ,
ವಾಯುವೆಂಬ ವಸ್ತ್ರವನುಡಿಸಿ,
ಎಲ್ಲೆಲ್ಲಿ ಗುಹೇಶ್ವರನೆಂಬ ಲಿಂಗವು
ಪರಿಪೂರ್ಣವಾಗಿರ್ದ ಬಳಿಕ ಮಜ್ಜನಕ್ಕೆರೆವ
ಠಾವಾವುದೈ ಸಂಗನ ಬಸವಣ್ಣ."

"ಆಚಾರ ಅಂಗದ ಮೇಲೆ ಆಯತವಾದುದೇ ಇಷ್ಟಲಿಂಗ,
ಆ ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗ……"

ಎಂದು ಚನ್ನಬಸವಣ್ಣನ ನಿರೂಪಣೆ. ಆಯತಲಿಂಗಕ್ಕೆ ಆಚಾರವೇ ಮಜ್ಜನ. ತ್ಯಾಗಾಂಗಕ್ಕೆ ಆಚಾರವೇ ಲಿಂಗ.

'ಮಳೆಗಾಲವೆ ಮಜ್ಜನ' ಎಂದು ಪ್ರಭುದೇವನು ಸಮಷ್ಟಿ ತ್ಯಾಗಾಂಗ ಮಜ್ಜನ ವಿರಾಡ್ರೂಪ ಲಿಂಗಮಜ್ಜನವನ್ನು ಮನೋಹರವಾಗಿ ನಿರೂಪಿಸಿದ್ದಾನೆ. ಮಜ್ಜನ ಅರ್ಚನಗಳ ವೈಶಾಲ್ಯತೆಯನ್ನು ಕಾವ್ಯಮಯ ಶೈಲಿಯಲ್ಲಿ ಕಮನೀಯ ವಾಗಿ ಬಣ್ಣಿಸಿದ್ದಾನೆ.

"ಮಜ್ಜನಕ್ಕೆರೆವುದು ಮಾಣ್ದು ಬಳಿಕ ಮತ್ತೊಂದಕ್ಕೆರಗದಿರಬೇಕು.
ಪೂಜೆಯ ಮಾಡುವುದು ಮಾಣ್ದು ಬಳಿಕ ಪರರ ಬೋಧಿಸಲಾಗದು.
ಅರ್ಪಿತವ ಮಾಡುವುದು ಮಾಣ್ದು ಬಳಿಕ ಅಂಗಭೋಗಂಗಳೆಲ್ಲವ ಮರೆಯಬೇಕು.

ಇಂತಿದು ಮೀರಿದ ಘನ ಅಗಮ್ಯವಾಯಿತ್ತು ;
ಅದನರಿಯಬಾರದು. ಅದಂತಿರಲಿ,
ನಾನು—ನೀನೆಂಬ ಭ್ರಾಂತುಳ್ಳನ್ನಕ್ಕ,
ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಬೇಕು.
ಕೂಡಲಚನ್ನ ಸಂಗಯ್ಯಾ. ಇವ ಮಾಡದಿರ್ದಡೆ ನಾಯಕನರಕ."

ಪೂಜ್ಯ ಪೂಜಕ ಭಾವವಿರುವವರೆವಿಗೂ ಬಾಹ್ಯಮಜ್ಜನ ಅರ್ಚನಾದಿ ಗಳನ್ನು ಬಿಡಬಾರದು. ಬಿಟ್ಟರೆ ದೋಷ. ಬಾಹ್ಯ ಮಜ್ಜನ ಮಾತ್ರದಲ್ಲಿಯೇ ಜೀವನ ನಿರ್ವಹಣವಾಗಬಾರದು : ಪರ್ಯವಸಾನವಾಗಬಾರದು. ಬಾಹ್ಯ ಜಲಮಜ್ಜನ ಅಂತರ್ಜಲಮಜ್ಜನಕ್ಕೆ ಪ್ರೇರಕವಾಗಬೇಕು.

ಮಜ್ಜನದ ಉದ್ದೇಶ ಬಾಹ್ಯಾಭ್ಯಂತರ ಮಲಗಳೆರಡನ್ನೂ ನಿರ್ಮೂಲ ಗೊಳಿಸುವುದು; ತನು—ಮನ—ಪ್ರಾಣ ಜೀವ ಈ ನಾಲ್ಕರ ಮಲಗಳನ್ನು ತೊಳೆವ ಮಜ್ಜನವೇ ನಿಜವಾದ ನಿರವಶೇಷವಾದ ನಿಮಜ್ಜನದ ನಿಲುಕಡೆ. ಇದ ರಿಂದ ತ್ರಿವಿಧಾವಸ್ಥೆಗಳು ತ್ರಿಗುಣಮಲಗಳಿಂದ ಬಿಡುಗಡೆಯನ್ನು ಪಡೆಯುತ್ತವೆ.

ತ್ರಿವಿಧತನುಮಲಗಳು ತೊಲಗುತ್ತವೆ, ತ್ರಿಕರಣಶುದ್ಧಿ, ತ್ರಿನೇತ್ರಸಿದ್ಧಿ, ತ್ರಿವಿಧಾತ್ಮಸಿದ್ಧಿ, ತ್ರಿಕಾಲಜ್ಞಾನ, ತ್ರಿವಿಧಪ್ರಸಾದ ಪ್ರಾಪ್ತಿ ಉಂಟಾಗುತ್ತವೆ. ತ್ರಿವಿಧ ಭಕ್ತಿ, ತ್ರಿವಿಧಶಕ್ತಿ ಸಂಭವಿಸುತ್ತವೆ; ಇವೆಲ್ಲ ಉಂಟಾಗಬೇಕಾದರೆ ಚನ್ನಬಸವಣ್ಣನವರು ಹೇಳಿದ ಮಜ್ಜನ–ಅರ್ಚನ–ಅರ್ಪಣಗಳ ಒಗೆ ಭಾವಗಳನ್ನು ಕೊರತೆಯಲ್ಲದಂತೆ ಅರಿತುಕೊಳ್ಳಬೇಕು. ಇದಕ್ಕಾಗಿ ಅವರ ಹಿರಿಯ ವಚನವಿನ್ನಿಲ್ಲಿ ಉದ್ಧರಿಸಲಾಗಿದೆ.

"ಅಯ್ಯಾ, ದ್ವಾದಶದಳಕಮಲದ ಮಧ್ಯದಲ್ಲಿ ನೆಲಸಿರ್ಪ
ಅನಾದಿ ನಿಷ್ಕಲಂಕ ಜ್ಯೋತಿರ್ಮಯ ಪರಶಿವಲಿಂಗದೇವಂಗೆ
ಕ್ರಿಯಾಶಕ್ತಿ, ಸ್ವರೂಪವಾದ ಚಿತ್‌ಪೃಥ್ವಿಹೃದಯ ಮಧ್ಯದಲ್ಲಿ
ನೆಲಸಿರ್ಪ ಪರಿಣಾಮ ಜಲವ ಚಿದ್ಭಾಂಡದೊಳಗೆ ಪರಿಣಾಮ
ಪಾವಡದಿಂದ ಶೋಧಿಸಿ, ಗುರು ಚರ ಪರ ಸ್ವರೂಪವಾದ
ಜಂಗಮ ಮೂರ್ತಿಗಳ ಮೊಳಕಾಲ ಪರಿಯಂತರ ಪ್ರಕ್ಷಾಲನವ ಮಾಡಿ,
ಉಳಿದುದಕದಿಂದ ಉಭಯ ಪಾದಕಮಲವನು ಅಡಿಪಾದದ
ಮೂರು ವೇಳೆ, ಅಂಗುಲಿಗಳ ಒಂದು ವೇಳೆ, ಸ್ಪರ್ಶನವ
ಮಾಡಿದಂತಹ ಗುರುಪಾದೋದಕವ ಭಾಂಡಭಾಜನದಲ್ಲಿ ತುಂಬಿ,
ಕರಕಮಲದಲ್ಲಿ ಅನಾದಿ ನಿಷ್ಕಲಂಕ ಜ್ಯೋತಿರ್ಮಯ
ಇಷ್ಟಮಹಾಲಿಂಗದೇವನ ಮೂರ್ತವ ಮಾಡಿಸಿಕೊಂಡು,
ಪಂಚರಸಯುಕ್ತವಾದ ಅವುಡಾದಡೆಯೂ ಒಂದು ಕಾಷ್ಠದಿಂದ
ಹಸ್ತ ಪಾದ ಮುಖಂಗಳಲ್ಲಿ ಸ್ಥಾಪಿಸಿರುವ ಐವತ್ತೆರಡು ನಖದಂತ
ಪಂಕ್ತಿಗಳ ತೀಡಿ, ನೇತ್ರ ಮೊದಲಾದ ಲಿಂಗದವಯವಂಗಳ ಪ್ರಕ್ಷಾಲಿಸಿ,
ಕಟಿಸ್ನಾನ, ಕಂಠಸ್ನಾನ, ಮಂಡಸ್ನಾನ ಮೊದಲಾದ ತ್ರಿವಿಧಲಿಂಗ ಸ್ನಾನವ
ಮಾಡಿ, ಪಾವುಗೊರಡ ಮೆಟ್ಟಿ ಪಾವಡವಾಗಲಿ, ಪರ್ಣಾಸನವಾಗಲಿ
ದರ್ಭೆ ಬೆತ್ತ ಮೊದಲಾದಾಸನದಲ್ಲಿ ಮೂರ್ತವ ಮಾಡಿ, ಗುರುಪಾದೋ
ದಕದೊಳಗೆ ಭಸ್ಮ, ಗಂಧ, ಪುಷ್ಪ-ಮಂತ್ರವ ಸ್ಥಾಪಿಸಿ. ಪಂಚಾಮೃತ
ವೆಂದು ಭಾವಿಸಿ, ಅನಾದಿ ನಿಷ್ಕಲಂಕ ಜ್ಯೋತಿರ್ಮಯ ಇಷ್ಟಮಹಾ
ಲಿಂಗ ದೇವಂಗೆ ಲೀಲಾಮಜ್ಜನವ ಮಾಡಿಸಿ, ಕ್ರಿಯಾಚಾರದಲ್ಲಿ ದಹಿಸಿದ

ವಿಭೂತಿಯಲ್ಲಿ ಗುರುಪಾದೋದಕ ಲಿಂಗಪಾದೋದಕ ಮಂತ್ರ ಸಂಬಂಧ ವಾದ ಚಿದ್ಭಸಿತವ ಸ್ನಾನ ಧೂಲನ ಧಾರಣಂಗಳ ಮಾಡಿ, ಅಷ್ಟವಿಧಾ ರ್ಚನೆ ಷೋಡಶೋಪಚಾರಂಗಳೊಳಗೆ ಲಿಂಗಾಣತಿಯಿಂದ ಬಂದುದ ಸಮರ್ಪಿಸಿ...........ತಾನಾ ಪರಿಣಾಮ ಪಾದೋದಕ ಪ್ರಸಾದದಲ್ಲಿ ಸಂತೃಪ್ತನಾದಾತನೇ ನಿಮ್ಮ ಅಚ್ಚ ಶರಣನಲ್ಲದೆ, ಉಳಿದ ನಾಹಂ ಭ್ರಮೆ ಯಿಂದ ತೊಳಲುವ ಜಡಜೀವಿಗಳೆತ್ತ ಬಲ್ಲರಯ್ಯಾ ನಿಮ್ಮ ನಿಜಾಚರಣೆಯ ವಿಚಾರದ ಪರಿಣಾಮವ, ಕೂಡಲ ಚನ್ನ ಸಂಗಮದೇವಾ ?"

ಈ ವಚನದಲ್ಲಿ ಮಜ್ಜನ ಪ್ರಕ್ರಿಯೆಯ ಮಹೋನ್ನತ ಭಾವವನ್ನು ಮನ ದಟ್ಟಾಗಿಸಿಕೊಳ್ಳಬೇಕು, ಚಿತ್‌ಪೃಥ್ವಿ, ಪರಿಣಾಮ ಜಲ. ಚಿದ್ಬ್ರಾಂಡದಲ್ಲಿ ಪರಿ ಣಾಮ ಪಾವಡದಿಂದ ಶೋಧಿಸಿ, ಜಂಗಮಮೂರ್ತಿಯ ಕಟಿಸ್ನಾನ ಮಾಡಿಸ ಬೇಕಂತೆ! ಉಳಿದ ಅದೇ ಜಲವನ್ನು ಗುರು ಪಾದೋದಕ ಮಾಡಿ ಅದರಲ್ಲಿ ಹಲ್ಲುಜ್ಜುವ ಕಡ್ಡಿಯನ್ನು ಅದ್ದಿ ಶುದ್ಧ ಮಾಡಿ ಉಪಯೋಗಿಸಬೇಕಂತೆ! ಮತ್ತು ಕಟಿಸ್ನಾನ, ಕಂಠಸ್ನಾನ, ಮಂಡಸ್ನಾನಗಳನ್ನು ಅದೇ ಜಲದಲ್ಲಿ ಆಚರಿಸಬೇಕಂತೆ! ಇದಕ್ಕಿಂತಲೂ ಸೂಕ್ಷ್ಮವಾಗಿ ಮುಂದುವರಿದು ಭಸ್ಮಸ್ನಾನ, ಮಂತ್ರಸ್ನಾನ, ಆಚಾರಸ್ನಾನ, ವಿಚಾರಸ್ನಾನ, ಅನುಭವಾಮೃತ ಸ್ನಾನಾದಿಗಳು ನಿರ್ದಿಷ್ಟವಾಗಿವೆ. ಭಸ್ಮಸ್ನಾನ ಜ್ಯೋತಿಸ್ನಾನ, ವಿಭೂತಿಯಿಂದ ಅನುಭೂತಿಯವರೆಗೆ ಪಂಚಸ್ನಾನ ಗಳು ಪರಿಗಣಿತವಾಗಿವೆ, ಬಳಿಕ ಹದಿನಾಲ್ಕು ಕಲೆಗಳಿಂದ ಕೂಡಿದ ರುದ್ರಾಕ್ಷಿ ಧಾರಣ ಇದನ್ನು ಕಲಾಸ್ನಾನವೆಂದು ಕರೆಯಬಹುದು, ಈ ಕಲಾಸ್ನಾನದಿಂದ ಹದಿನಾಲ್ಕು ಕರಣೇಂದ್ರಿಯಗಳೆಂಬ ಕಣ್ಣುಗಳು ವಿಚಲಿತವಾಗಿ ವಿಕಸನಗೊಳ್ಳು ತ್ತವೆ. ಸರ್ವಾಂಗ ಲಿಂಗಾಂಗವಾಗಿ ಮಂಗಳಮಯವಾಗುತ್ತದೆ. ಕಾಯ ಕರಣ ಗಳ ಕತ್ತಲೆ ಕಳೆಯುತ್ತದೆ. ಭಕ್ತದೇಹಿಕ ದೇವನು ಶೈವೀ ಸೌಂದರ್ಯದಿಂದ ಶೋಭಿಸುತ್ತಾನೆ,

## ಮಂತ್ರ—ಮನನ

"ಗುರುಂ ಷಡಕ್ಷರೀವಿದ್ಯಾರೂಪಿಣಂ ಷಟ್‌ಸ್ಥಲಾತ್ಮಕಂ ।
ಸ್ವೀಯಂ ಗುರುಪದಂ ಸಿದ್ಧಂ ನತ್ವಾ ನ್ಯಾಸಂ ಸಮಾಚರೇತ್"॥

—ವಿಶೇಷಾರ್ಥ ಪ್ರಕಾಶಿಕೆ,

ಷಟ್‌ಸ್ಥಲ ಸಿದ್ಧಾಂತದಲ್ಲಿ ಷಡಕ್ಷರ ಮಂತ್ರ ಆದೊಂದು ಮಹಾವಿದ್ಯೆ, ಮಹಾಯಜ್ಞ ; ಮಹಾ ವಿನಿಯೋಗ. ಅದರಲ್ಲಿಯೂ ವಿಶೇಷವಾಗಿ ಮಾಹೇಶ್ವರ ಸ್ಥಲ ಮಂತ್ರಮಯವಾಗಿದೆ. ಮಂತ್ರಮೂರ್ತಿಯಾದ ಗುರುವೇ ಗುರುಲಿಂಗ ವಾಗಿ ಉಪಾಸ್ಯವಾಗಿದೆ. ಆದ್ದರಿಂದ ಮಂತ್ರಜಪ, ಮಂತ್ರಮನನ ಮುಖ್ಯ ವಾಗಿವೆ,

ಶರೀರವನ್ನಾಶ್ರಯಿಸಿವೆ ಷಡೂರ್ಮಿಗಳು; ಷಡ್ವರ್ಗಗಳು. ಇವು ತೊಲಗಿ ಷಟ್‌ಸ್ಥಲ ಬ್ರಹ್ಮಿಯಾದ ಶ್ರೀಗುರುವಿನ ಸಾಕ್ಷಾತ್ಕಾರರೂಪ ಕರುಣ ಸುಖ ಸಂಪತ್ತು ಸಂಪ್ರಾಪ್ತವಾಗಬೇಕಾದರೆ ಶಿವಯಜ್ಞಸ್ವರೂಪವಾದ ಶಿವವಿದ್ಯೆಯೆಂದೆ ನಿಸಿದ ಶಿವಷಡಕ್ಷರ ಮಂತ್ರವನ್ನು ಶ್ರೀ ಗುರುವಿನಿಂದ ಪಡೆದು ಜಪಿಸಬೇಕು. ಮಂತ್ರಾರ್ಥವನ್ನು ಮನನ ಮಾಡಬೇಕು.

ಮಂತ್ರ ಬಿಟ್ಟು ಪ್ರಸಾದವಿಲ್ಲ. ಮನ ಬಿಟ್ಟು ಮಾನವನಿಲ್ಲ, ಮನನ ಬಿಟ್ಟು ಮಹಾನುಭಾವರಿಲ್ಲ. ಕ್ರಿಯಾದೀಕ್ಷೆ ಫಲಿಸಬೇಕಾದರೆ ಮಂತ್ರದೀಕ್ಷೆ ಬೇಕು. ಮಂತ್ರ ಫಲಿಸಬೇಕಾದರೆ ಜ್ಞಾನದೀಕ್ಷೆ ಬೇಕು. ಮಂತ್ರಜ್ಞಾನವಿಲ್ಲದೆ ಮನನ ಫಲಿಸದು,

"ಪೂಜಾಕೋಟಿ ಸಮಂ ಸ್ತೋತ್ರಂ ಸ್ತೋತ್ರಕೋಟಿ ಸಮಂ ಜಪಃ ।
ಜಪಕೋಟಿ ಸಮಂಧ್ಯಾನಂ ಧ್ಯಾನಕೋಟಿ ಸಮಂ ಮನೋಲ್ಲಯಃ ॥"

ಕೋಟಿ ಕ್ರಿಯೆಗಳಲ್ಲಿ ಅರ್ಚನಕ್ರಿಯೆ ಅಧಿಕ. ಕೋಟಿ ಅರ್ಚನೆ ಕ್ರಿಯೆಗಳಿಗಿಂತ ಸ್ತವನ ಶ್ರೇಷ್ಠ. ಕೋಟಿಸ್ತವನಗಳಿಗಿಂತ ಮಂತ್ರ ಜಪ ಮಹೋನ್ನತ. ಕೋಟಿ ಜಪಕ್ಕಿಂತ ಧ್ಯಾನರೂಪ ಮನನ ಮತ್ತೂ ಉತ್ತಮ. ಕೋಟಿ ಮನನಕ್ಕಿಂತ ಮನೋಲಯ ಮಹಾಮಹೋತ್ತಮ.

ಷಡಕ್ಷರಮಂತ್ರ ಷಟ್‌ಸ್ಥಲ ಬ್ರಹ್ಮಸ್ವರೂಪ. ಅದು ಹಾಗಾಗುವುದು. ಷಟ್‌ಸ್ಥಲಬ್ರಹ್ಮಿಯಾದ ಶ್ರೀಗುರುವಿನಿಂದ; ಶ್ರೀಗುರು ಶಕ್ತಿಸ್ವರೂಪ. ಷಡಕ್ಷರ ಮಂತ್ರ ಸ್ವಾತಿಬಿಂದು ಸ್ವರೂಪ. ಆ ಮಂತ್ರಿನ ಚಿಪ್ಪಿನಲ್ಲಿ ಸೇರಿದಾಗ ಮಂತ್ರ ಬಿಂದು ಮುತ್ತಾಗುತ್ತದೆ. ಸತ್ಯಶಿವ ಸುಂದರರೂಪಾಗುತ್ತದೆ. ಆದುದರಿಂದ ಶ್ರೀಗುರುಮುಖದಿಂದ ಷಡಕ್ಷರ ಮಂತ್ರವನ್ನು ಸಾಧಕಶಿಷ್ಯನು ಪಡೆಯಬೇಕು.

ಶ್ರೀಗುರು ಮುಖಕ್ಕೆ ಬಾರದ ಷಡಕ್ಷರ ಆದೊಂದು ಸಾಗರ ನೀರು. ಶ್ರೀ ಗುರುವೇ ನಾರಿಕೇಳ ವೃಕ್ಷ. ಆ ಸಾಗರ ಜಲ ಈ ನಾರಿಕೇಳ ವೃಕ್ಷದ ಫಲ ಮುಖದಲ್ಲಿ ಬಂದರೆ ಎಳೆನೀರಾಗುವುದು.

ಷಡಕ್ಷರ ಮಂತ್ರವನ್ನು ಪಡೆದ ಶಿಷ್ಯನು ಅಕ್ಷರಕ್ಕೆ ಆರು ಸಾವಿರ ಜಪವನ್ನು ಮಾಡಿದರೆ ಕನಿಷ್ಠ ಜಪವೆನಿಸುವುದು. ಅಕ್ಷರಕ್ಕೆ ಮೂವತ್ತಾರು ಸಾವಿರದಂತೆ ಜಪ ಮಾಡಿದರೆ ಮಧ್ಯಮ ಜಪವೆನಿಸುವುದು. ಅಕ್ಷರಕ್ಕೆ ಒಂದು ಲಕ್ಷದಂತೆ ಆರು ಲಕ್ಷ ಜಪವನ್ನು ಜೀವನದಲ್ಲಿ ಮಾಡಿದರೆ ಉತ್ತಮ ಜಪವೆನಿಸುವುದು. ಇದನ್ನೇ ಜಪಯಜ್ಞವೆನ್ನುವರು. ಜಪವೆನ್ನುವರು; ಜಪವಿನಿಯೋಗವೆನ್ನುವರು.

ಈ ಜಪಯಜ್ಞಕ್ಕೆ ರುದ್ರ ದೇವನೆ ಶಿವಾಗ್ನಿ. ಷಡಕ್ಷರ ಮಂತ್ರವೇ ಹವನ ದ್ರವ್ಯ. ಈ ಹೋಮದಿಂದ ಜ್ಯೋತಿರ್ಮಯ ರುದ್ರ ದೇವನು ಪ್ರಸನ್ನನಾಗುವನು. ಆಭಯ ಪ್ರಭಾವ ಪ್ರವರ್ಧಿಸುವುದು. ಮೂವತ್ತಾರು ಎಪ್ಪತ್ತೆರಡು ನೂರೆಂಟು ತತ್ತ್ವಗಳ ಪರಿಶುದ್ಧಿಯಾಗುವುದು, ಅಭಿವೃದ್ಧಿಯಾಗುವುದು: ಶಿವಾತ್ಮವಿದ್ಯೆಯು ಸಿದ್ಧಿಸುವುದು. ಮಂತ್ರಾರ್ಥ ಮನನಕ್ಕೆ ಸ್ಫೂರ್ತಿಯುಂಟಾಗುವುದು. ಮಂತ್ರಾರ್ಥ ಪ್ರತಿಪಾದನೆಯಲ್ಲಿ ಪಾರಂಗ ತತ್ವವುಂಟಾಗುವುದು. ಮೂರು ತನು ಮಂತ್ರಮಯವಾಗುವುದು, ತ್ಯಾಗಾಂಗದಲ್ಲಿ ಮಂತ್ರನ್ಯಾಸವನ್ನು ಗುರುಮುಖದಿಂದ ಅರಿತು ಆಚರಿಸಬೇಕು. ಮುಖದಲ್ಲಿ ಮಂತ್ರ ಜಪವನ್ನು ಮಾಡಬೇಕು. ಮನದಲ್ಲಿ ಮಂತ್ರಾರ್ಥವನ್ನು ಮನನ ಮಾಡಬೇಕು. ಆಗ

ಮಂತ್ರಮಯ ಮೂರ್ತಿಯು ಭಾವದಲ್ಲಿ ಮನನೀಯವಾಗುತ್ತದೆ. ಆಗ ಆತ್ಮಾರ್ಪಣದ ವಿನಿಯೋಗವಾಗುತ್ತದೆ.

ಮಂತ್ರಮೂರ್ತಿಲಿಂಗ, ಮತ್ತು ಗುರು; ಗುರುಲಿಂಗವೆಂದರೂ ಸಲ್ಲುವುದು. ಗುರುಲಿಂಗಕ್ಕೆ ಓಂಕಾರ ಮುಖ. ನಮಃಕಾರಗಳು ಹಸ್ತದ್ವಯ. ಶಿಕಾರ ಮಧ್ಯದೇಹ, ವಾಕಾರ-ಯಾಕಾರಗಳು ಪಾದದ್ವಯ. ಹೀಗೆ ಮಂತ್ರಲಿಂಗ ರೂಪವೂ ಆಗಿದೆ;ಗುರು ಸ್ವರೂಪವೂಆಗಿದೆ. ಪ್ರಣವ ಪಂಚಾಕ್ಷರಿ ಪರಾವಿದ್ಯೆಯೂ ಆಗಿದೆ; ಪರಮಸುಖ ಪ್ರದವೂ ಆಗಿದೆ. ಪ್ರಸಾದಪ್ರದಾಯಕವೂ ಆಗಿದೆ.

ಶಿವಷಡಕ್ಷರವಿದ್ಯೆ ಅರ್ಥ–ವರ್ಣ–ಪದ–ವಾಕ್ಯ ಎಂದು ನಾಲ್ಕು ಬಗೆ, ಇವನ್ನೇ ಕ್ರಮವಾಗಿ ಪರಾ–ಪಶ್ಯಂತಿ-ಮಧ್ಯಮೆ-ವೈಖರೀ ಎಂದು ಹೇಳಲಾಗುತ್ತದೆ.

"ಅರ್ಥರೂಪಾ ಪರಾವಿದ್ಯಾ ಪಶ್ಯಂತೀ ವರ್ಣರೂಪಿಣೀ ।
ಮಧ್ಯಮಾ ಪದರೂಪಾ ಸ್ಯಾದ್ವೈಖರೀ ವಾಕ್ಯರೂಪಿಣೀ ॥"

—ವಿಶೇಷಾರ್ಥ ಪ್ರಕಾಶಿಕೆ, ಅಧಿ-೪.

ಷಡಕ್ಷರ ಮಂತ್ರ ಪರಾವಿದ್ಯೆಯಾದಾಗ ಅರ್ಥರೂಪಾಗಿ, ಪಶ್ಯಂತಿ ವಿದ್ಯೆಯಾದಾಗ ವರ್ಣರೂಪಾಗಿ, ಮಧ್ಯಮಾವಿದ್ಯೆಯಾದಾಗ ಪದರೂಪಾಗಿ ವೈಖರೀ ವಿದ್ಯೆಯಾದಾಗ ವಾಕ್ಯರೂಪಾಗಿ ಇರುತ್ತದೆ. ಷಡಕ್ಷರದೊಳಗಿನ ಓಂಕಾರ ಅರ್ಥರೂಪ. ನಕಾರಾದಿ ಯಕಾರಾಂತ ಐದು ಅಕ್ಷರಗಳು ವರ್ಣರೂಪ 'ನಮಃ' ಎಂಬುದ ಮತ್ತು 'ಶಿವಾಯ'ಎಂಬುದು ಇವೆರಡು ಪದರೂಪ. ಸಂಪೂರ್ಣ ಷಡಕ್ಷರ ಮಂತ್ರ ವಾಕ್ಯರೂಪ. ಇವುಗಳಲ್ಲಿ ಅರ್ಥ ಮನಸ್ಸಿನಿಂದ, ವರ್ಣದೃಕ್ಕಿನಿಂದ, ಪದ ವಾಕ್ಕಿನಿಂದ, ವಾಕ್ಯ ತನುವಿನಿಂದ ಹುಟ್ಟುವವು

ಮನನಲಕ್ಷಣ ಮನಸ್ಸಿನದು. ವಿಲೋಕನ ಲಕ್ಷಣ ನಯನದ್ದು. ವಚನ ಲಕ್ಷಣ ಮುಖದ್ದು. ತಾಲು ಓಷ್ಠ ಜಿಹ್ವೆ ಇವುಗಳ ಯೋಗಲಕ್ಷಣ ದೇಹದ್ದು, ಇದರಿಂದಾಗಿ ಪರಾವಿದ್ಯೆ ಮಾನಸಿಯೆನಿಸಿದೆ. ಪಶ್ಯಂತಿ ಚಾಕ್ಷುಷಿಯೆನಿಸಿದೆ. ಮಧ್ಯಮೆ ವಾಚಿಕಿಯೆನಿಸಿದೆ. ವೈಖರೀ ವಾಪುಷಿಯೆನಿಸಿದೆ.

ಷಟ್‌ಸ್ಥಲಸಾಧಕನಿಗೆ ಮಂತ್ರಜಪವೇ ಮಹಾದೇವನ ಭಜನೆ. ಈತನ ಭಜನೆ ಕೇವಲ ವೈಖರಿಯಾಗಿ ನಡೆಯುವುದಿಲ್ಲ. ಆ ಆ ಸ್ಥಲದಲ್ಲಿ ಆ ಆ ಇಂದ್ರಿಯ ಮುಖದಲ್ಲಿ ನಡೆಯುತ್ತದೆ, ನಿದರ್ಶನಕ್ಕಾಗಿ ಭಕ್ತಸ್ಥಲದಲ್ಲಿ ಇರುವಾಗ ನಾಸಿಕ ಮುಖದಲ್ಲಿ ನಡೆಯುತ್ತದೆ ಶ್ವಾಸೋಚ್ಛ್ವಾಸರೂಪಪ್ರಾಣವಾಯುವಿನಿಂದ ಜಪ ಜರಗುತ್ತದೆ. ಪೂಜೆಗೆ ಪ್ರಾರಂಭದಲ್ಲಿಮಾಡಿದ ಪ್ರಾಣಾಯಾಮದಿಂದ ಪ್ರಾಣ ವಾಯು ಸುವಾಸಿತವಾಗುತ್ತದೆ; ಸುನಿಶ್ಚಲವಾಗುತ್ತದೆ. ಆಗ ದೈಹಿಕಾಚಾರ ಗಳನ್ನು ದೂರಬಿಟ್ಟು ಆತ್ಮಿಕಾಚಾರಗಳಿಂದ ಆಚಾರಲಿಂಗವನ್ನು ಶ್ರದ್ಧೆಯಿಂದ ಭಾವಿಸುತ್ತಾನೆ ಭಕ್ತ. ಆತನ ಆ ಶುದ್ಧ ಸುವಾಸಿತಶ್ವಾಸೋಚ್ಛ್ವಾಸನಾದವೇ ಶಿವ ಮಂತ್ರಜಪವೆನಿಸುತ್ತದೆ. ಓಂ ಎಂದು ಶ್ವಾಸರೂಪದಲ್ಲಿ ಒಳಕ್ಕೆ ಹೋಗಿ ನಮಃ ಶಿವಾಯ ಎಂದು ನಿಶ್ವಾಸಮೂಲಕ ಹೊರಬರುತ್ತವೆ. ಕುಂಭಕದಲ್ಲಿ ಅಂತಸ್ಥ ವಾಗುತ್ತದೆ. ಆಗ ಆಚಾರಲಿಂಗ ಷಡಕ್ಷರ ಮಂತ್ರಸ್ವರೂಪವಾಗಿರುತ್ತದೆ. ಚಿತ್ತ ಗತವಾಗಿ ಭಕ್ತನ ಚಿತ್ತ ಮಂತ್ರಾರ್ಥ ಮನನದಲ್ಲಿ ಪರ್ಶಿಸಿ ಮಂತ್ರಮಯ ಆಚಾರ ಲಿಂಗ ಸ್ವರೂಪವಾಗಿರುತ್ತದೆ. ಆಗ ಘ್ರಾಣಕರದಿಷ್ಟಲಿಂಗದ ಪತ್ರಪುಷ್ಪಗತ ಸುಗಂಧಪ್ರಸಾದ ಗ್ರಾಹಕವಾಗಿರುತ್ತದೆ. ಅದುವೇ ಅವರ ಆಚಾರ. ಅದುವೇ ಮಂತ್ರಜಪ. ಅದರಿಂದ ಚಿತ್ತಪುಷ್ಟಿಯೊದಗುತ್ತದೆ.

ಎರಡನೆಯದಾಗಿ ಮಾಹೇಶ್ವರನು ತನ್ನ ಜಪವನ್ನು ರಸನೆಯ ಮುಖದಲ್ಲಿ ಜರಗಿಸುತ್ತಾನೆ. ಗುರುಲಿಂಗ ಸ್ವಾಭಾವಿಕವಾಗಿ ಷಡಕ್ಷರಮಂತ್ರ ಸ್ವರೂಪವಾಗಿರು ತ್ತದೆ. ತಾಲು ಓಷ್ಠಾದಿಗಳಿಂದ ವಾಚಕೋಪಾಂಶು ಜಪ ಜರಗುತ್ತದೆ. ನಿಷ್ಠೆ ಯಿಂದ ನಡೆಯುತ್ತದೆ. ಮಂತ್ರರಸಾಸ್ವಾದದಲ್ಲಿ ತಲ್ಲೀನವಾದ ಜಿಹ್ವೆ ಬುದ್ಧಿ ಗಳು ಬೇರೆ ಜಡಪದಾರ್ಥಗಳ ರಸಾಸ್ವಾದವನ್ನು ಆಶಿಸವು, ಮಂತ್ರವೇ ಮಹಾ ಕಾವ್ಯವಾಗಿ ಮಂತ್ರರಸವೇ ಕಾವ್ಯರಸವಾಗಿರುತ್ತದೆ. ಆ ಮಂತ್ರಮಯ ಕಾವ್ಯ ರಸಸ್ವರೂಪವಾಗಿ ಗುರುಲಿಂಗವಿರುತ್ತದೆ. ಮಂತ್ರವೇ ವಾಕ್ಯವಾಗಿ ರಸಭಾವ ಪೂರ್ಣಕಾವ್ಯವಾಗಿ ವಾಚಕಜಪವಾಗಿರುತ್ತದೆ, ಅರ್ಥರೂಪ ಪರಾವಿದ್ಯೆಯಾಗಿ ಬುದ್ಧಿಗತವಾಗಿರುತ್ತದೆ. ವೈಖರಿಜಪ ಜಿಹ್ವೆಯಲ್ಲಿ ನಡೆದರೆ ಅರ್ಥರೂಪದಲ್ಲಿ ಪರಾಜಪಬುದ್ಧಿಯಲ್ಲಿ ಸಿದ್ಧವಾಗಿರುತ್ತದೆ. ಇದೇ ಬೌದ್ಧಿಕ ಮನನ. ವಾಚ

ಕೋಪಾಂಶು ಜಪನಾದವು ಕರಸ್ಥಲದ ಕ್ರಿಯಾಲಿಂಗವನ್ನು ಸೋಂಕಿ ಬರುವ ಕಾರಣ ಚಿನ್ನಾದವಾಗಿ ಪರಿಣಮಿಸುತ್ತದೆ.

ಇದರಂತೆ ಮುಂದಿನ ಸ್ಥಲಗಳಲ್ಲಿ ಮಂತ್ರಜಪ–ಮಂತ್ರಮನನಗಳನ್ನು ಮನವರಿಕೆಮಾಡಿಕೊಳ್ಳಬೇಕು: ಪ್ರಸಾದಿಸ್ಥಲದಲ್ಲಿ ಲಿಂಗ ನಿರೀಕ್ಷಣರೂಪದಲ್ಲಿ ಜಪ ಜರಗುತ್ತದೆ. ಶಿವಲಿಂಗ ಷಡಕ್ಷರವರ್ಣರೂಪವಾಗಿರುತ್ತದೆ ಅದುವೇ ತನ್ನ ಸ್ವರೂಪವಾಗಿರುತ್ತದೆ. ಷಡಕ್ಷರ ಸ್ವರೂಪವಾದ ಶಿವಲಿಂಗರೂಪ ಸ್ವರೂಪವನ್ನು ಅನಿಮಿಷದೃಷ್ಟಿಯಿಂದ ಪ್ರಸಾದಿ ವಿಲೋಕಿಸುತ್ತಾನೆ, ಆ ಷಡಕ್ಷರರೂಪ ಶಿವಲಿಂಗಾಕಾರವಾಗಿ ಅಹಂಭಾವವಿರುತ್ತದೆ. ಷಡ್ವರ್ಣರೂಪ ಶಿವಲಿಂಗಾಕಾರವಾದ ಅಹಂಭಾವಕ್ಕೆ ದೇಹೋಹಂಭಾವವಿರದು; ದೇಹವರ್ಣ ತೋರದು. ಶಿವಲಿಂಗಾಕಾರದರ್ಶನದಲ್ಲಿಯೇ ಸಾವಧಾನಿಯಾಗಿರುತ್ತಾನೆ ಪ್ರಸಾದಿ.

ಪ್ರಾಣಲಿಂಗಿಯ ಜಪ ತ್ವಗಿಂದ್ರಿಯದಮುಖದಲ್ಲಿ ಸ್ಪರ್ಶರೂಪದಲ್ಲಿನಡೆಯುತ್ತವೆ. ಮನದಲ್ಲಿ ಅನುಭವರೂಪಾಗಿ ಮನನವಾಗುತ್ತದೆ. ಜಂಗಮಲಿಂಗವಾಗಿ ಮನನೀಯವಾಗುತ್ತದೆ. ಲಿಂಗಸ್ಪರ್ಶಾನುಭೂತಿಯ ಹೊರತು ಬೇರೆ ಯಾವ ಸ್ಪರ್ಶಜ್ಞಾನ ಪ್ರಾಣಲಿಂಗಿಗಿರುವುದಿಲ್ಲ. ಲಿಂಗಸ್ಪರ್ಶವೇ ಚೈತನ್ಯಸ್ಪರ್ಶವಾಗಿ ಮಂತ್ರಮಯವಾಯುವೇ ಪ್ರಾಣವಾಗಿರುತ್ತಾನೆ. ಪ್ರಾಣಲಿಂಗಿಗೆ ಸುಳಿವ ಗಾಳಿಯೆಲ್ಲ ಮಂತ್ರಮಯ ಜಂಗಮಲಿಂಗವಾಗಿರುತ್ತದೆ. ಹೀಗೆ ಅರಿತು ಆಚರಿಸುವುದೇ ಪ್ರಾಣಲಿಂಗಿಯ ಮಂತ್ರಮನನ.

ಶರಣನ ಮಂತ್ರಜಪಕ್ಕೆ ಕರ್ಣೇಂದ್ರಿಯವೆ ಮುಖ. ಪದರೂಪಾದಮಂತ್ರ ಶ್ರವಣವೇ ಜಪ. ಅದರಿಂದ ಉಂಟಾದ ಪ್ರಸನ್ನತೆಯೇ ಪ್ರಸಾದಲಿಂಗ, ಆ ಪ್ರಸನ್ನತೆಯ ಪರಿಣಾಮಭಾವಿಯಾಗುವುದೇ ಮಂತ್ರಮನನ. ಪ್ರಸಾದಲಿಂಗವೇ ಮನನೀಯ. ಪ್ರಸಾದಜ್ಞಾನಿಯಾಗಿ ಶರಣ ಆನಂದದಲ್ಲಿ ತಲ್ಲೀನನಾಗಿರುತ್ತಾನೆ.

ಐಕ್ಯನ ಮಂತ್ರಜಪಕ್ಕೆ ಮನವೇ ಮುಖ. ಅರ್ಥರೂಪ ಷಡಕ್ಷರವೇ ಮಂತ್ರಮನನ. ಮಂತ್ರಾರ್ಥಸ್ವರೂಪವಾದ ಮಹಾಲಿಂಗವೇ ಮನನೀಯವಸ್ತು. ಅದರಲ್ಲಿ ಭಾವಸಾಮರಸ್ಯವೇ ಪರಾಕಾಷ್ಠದೆಸೆ. ಮಂತ್ರಾರ್ಥಮನನವೇ ಐಕ್ಯನ ಮಂತ್ರಜಪ.

"ಯತ್ರ ಮರುತ್ತತ್ರಮನೋ, ಯತ್ರಮನಸ್ತತ್ರ ಚ ಮರುದು
ಪಯೋಗಃ ।
ಅರ್ಥ ಷಡಕ್ಷರಪವನಂ ಕೃತ್ವಾ ಪ್ರೀತ್ಯೈವ ಷಟ್‌ಸ್ಥಲೀ
ಜಪತಿ ॥"

ಷಟ್‌ಸ್ಥಲ ಸಾಧಕನ ಬಾಳೆಲ್ಲ ಮಂತ್ರಮಯ, ಲಿಂಗಮಯ. ಆತನ ಉಸಿರೆಲ್ಲ ಮಂತ್ರ; ಮನವೆಲ್ಲ ಮಂತ್ರ. ಮಂತ್ರವೇ ಮಹಾಲಿಂಗ ; ಇದರಿಂದಾಗಿ ಆತ ಮಂತ್ರಮಯ ಶರೀರಿ. ಚರಮಶರೀರಿ. ಮನಮಂತ್ರದಲ್ಲಿ ಮಂತ್ರಲಿಂಗ ದಲ್ಲಿ ತಲ್ಲೀನವಾಗಿರುತ್ತವೆ.

ಶ್ರೀಗುರು ತನ್ನ ಮಂತ್ರವಿದ್ಯೆಯೆಂಬ ಚಿತ್ಕನ್ಯೆಯನ್ನು ಭಕ್ತನೆಂಬ ಅಳಿಯ ನಿಗೆ ಧಾರೆಯೆರೆದು ಕರುಣಿಸುತ್ತಾನೆ. ಆ ಪರಾಂಗನೆಯೊಡನಿರುವುದೇ ಭಕ್ತನ ಬಾಳು.

"ರಮತೇ ಮಾಮಹೋರಾತ್ರಂ ಪರಾವಿದ್ಯಾ ಪರಾಂಗನಾ ।
ನ್ಯಾಕಾಶೋ ಮಯಾರಂತು ತವ ಮಾಯೇ ಪರಾಂಗನೇ ॥
ಏವಂ ಜಪಂತೀ ಕ್ರಿಡಾ ಸಮಾಧೌ ಪರಯಾ ಸಹ ।
ವಿದ್ಯಯಾ ರಮತೇ ನಿತ್ಯಂ ಮಾಯಾಂಹ್ಯೇಯಾಂ ಶ್ವವದ್ರಹೇತ್ ॥
ಇತ್ಯನೇನ ನಿರುಕ್ತೇನ ವೀರ ಮಾಹೇಶ್ವರು ಮತಂ ।

– ವಿಶೇಷಾರ್ಥ ಪ್ರಕಾಶಿಕೆ, ಅಧಿ–೪

ಕಡೆಯ ಎರಡು ಪಂಕ್ತಿಗಳು ಸಿದ್ಧಾಂತಶಿಖಾಮಣಿಯ ಈ ಕೆಳಗಿನ ಶ್ಲೋಕ ವನ್ನು ಪೂರ್ಣವಾಗಿ ಅನುಸರಿಸಿದೆ :

"ವಿದ್ಯಾಯಾಂ ರಮಂತೇಯಸ್ಮಾನ್ಮಾಯಾಂ ಹ್ಯೇಯಾಂ ಶ್ವವದ್ರಹೇತ್।
ಅನೇನೈವ ನಿರುಕ್ತೇನ ವೀರಮಾಹೇಶ್ವರ : ಸ್ಮೃತಃ ॥"

—ಸಿ. ಶಿ. ಪರಿ–೫,

ಇಂತಹ ಅಮೋಘವಾದ ಪರಾವಿದ್ಯೆಯನ್ನು ಪರಮಕರುಣೆಯಿಂದ ಅನುಗ್ರಹಿಸಿದ ಶ್ರೀಗುರು ದೇವನನ್ನು ಸ್ತುತಿಸಿ, ಮನನಿಸೋಣ :

"ಗುಣಾತೀತರುಚಿವ್ಯಾಪ್ತ ಪರಮಾನಂದದ ಪ್ರಭೋ ।
ಗುರೋ ಗುರುಪದಾರ್ಥೈಕ ಸ್ವಸಂವೇದ್ಯ ನಮೋಽಸ್ತುತೇ ॥"

ತ್ರಿಗುಣ ರಹಿತವಾದ ಮಂತ್ರಾಮೃತ ರುಚಿಯುಳ್ಳ ಪರಮಾನಂದವನ್ನು ಕರುಣಿಸುವ ಪ್ರಭು ಗುರು. ಗುರು ಪದದ ಅರ್ಥ ಅನುಭವಗಳನ್ನು ಅಳವಡಿಸಿ ಕೊಂಡಾತನೇ ಗುರು. ಓ ಗುರುವೆ ನಿನಗೆ ನಮಸ್ಕಾರ !

# ಜಲ-ಮೌಕ್ತಿಕ ಯೋಗ

"ಬೀಜ–ವೃಕ್ಷಯೋಗದಂತೆ ಭಕ್ತಸ್ಥಲ;
ಜಲ-ಮೌಕ್ತಿಕ ಯೋಗದಂತೆ ಮಾಹೇಶ್ವರ ಸ್ಥಲ."

ಎಂದು ಆದಯ್ಯ ಶಿವಶರಣನ ಅಭಿಪ್ರಾಯವಿದು. ಈ ವಚನದಲ್ಲಿ ಕಾಯ-ಜೀವದ ಅಥವಾ ಅಂಗ-ಲಿಂಗದ ಹೊಲಿಗೆಯ ಹೊಲಬನ್ನು ಬೆಸುಗೆಯ ಬೆಡಗನ್ನು ಭೇದಾಭೇದವನ್ನು ಹೋಲಿಕೆಗಳಿಂದ ಚಲುವಾಗಿ ಚಿತ್ರಿಸಲಾಗಿದೆ; ಮನದಟ್ಟಾಗಿ ಮೂಡಿಸಲಾಗಿದೆ. ಭಕ್ತನದು ಬೀಜವೃಕ್ಷಯೋಗ. ಮಾಹೇಶ್ವರನದು ಜಲ ಮೌಕ್ತಿಕಯೋಗ. ಎಂತಹ ಸುಂದರವಾದ ಸಾರ್ಥಕವಾದ ಹೋದಿಕೆ, ಹೋಲಿಕೆ! ಭೂತತ್ತ್ವದವನು ಭಕ್ತ. ಜಲತತ್ತ್ವದವನು ಮಾಹೇಶ್ವರ. ಭೂಮಿಗೂ ಬೀಜ-ಭೂಜಗಳಿಗೂ ಸಂಬಂಧ. ಅಂತೆಯೆ ನೀರು ಮುತ್ತಿಗೂ ಸಂಬಂಧ.

ಭಕ್ತಿಯೇ ಭೂಮಿ. ಬೀಜವೇ ಭಕ್ತ. ವೃಕ್ಷವೇ ಆಚಾರಲಿಂಗ. ಬೀಜರೂಪ ಭಕ್ತನು ವೃಕ್ಷರೂಪ ಆಚಾರಲಿಂಗವಾಗಿ ಪರಿಣಮಿಸುವನು. ಅಂತೆಯೇ ಜಲರೂಪ ಮಾಹೇಶ್ವರನು ಮೌಕ್ತಿಕ ರೂಪ ಗುರುಲಿಂಗವಾಗಿ ಪರಿಣಾಮಗೊಳ್ಳುವನು. ಭಕ್ತಾಂಗನು ಆಚಾರಲಿಂಗವಾಗುವುದೆಂದರೆ ಬೀಜ ವೃಕ್ಷವಾದಂತೆ ! ಮಾಹೇಶ್ವರಾಂಗನು ಗುರುಲಿಂಗವಾಗುವುದೆಂದರೆ ಜಲ ಮುತ್ತಾದಂತೆ ! ಬೀಜ ವೃಕ್ಷ ನ್ಯಾಯದಲ್ಲಿ ಪರಸ್ಪರ ಪರಿಣಾಮವಾಗುವ ಯೋಗವಿದೆ. ಅದೇ ಜಲಮೌಕ್ತಿಕ ನ್ಯಾಯದಲ್ಲಿ ಪರಸ್ಪರ ಪರಿಣಾಮವಾಗುವ ಯೋಗವಿಲ್ಲ; ಬೀಜ ಮರವಾದಂತೆ ಮರ ಬೀಜವಾಗುವುದು. ಬೀಜಾಂಕುರಗಳಲ್ಲಿ ಅನ್ಯೋನ್ಯ ಭಾವವಿದೆ. "ನೀರಳಿದು ಮುತ್ತಾದ ಬಳಿಕ ಮರಳಿ ಮುತ್ತು ನೀರಾಗದು.

"ಬೀಜದಿಂದಾಯಿತ್ತು ಅಂಕುರವೆಂದೆಂಬರು ;
ಆ ಬೀಜಕ್ಕೆ ಅಂಕುರವೆ ಪ್ರಾಣವೆಂದರಿಯರು."

ಎಂದು ಚನ್ನಬಸವಣ್ಣನವರ ನಿರೂಪಣೆ. ಅಂಕುರಕ್ಕೆ ಕೊಟ್ಟ ಆಧಿಕ್ಯದ ಅರಿಕೆಯಾಗುತ್ತದೆ, ಅಂತೆಯೇ ಭಕ್ತನೆಂಬ ಬೀಜಕ್ಕಿಂತ ಅಂಕುರದಂತಿರುವ ಆಚಾರಲಿಂಗವೆಂಬ ಚೈತನ್ಯಕ್ಕೆ ಚೇತನತೆಯಿದೆ. ಆದರೂ ಅಂಕುರ ಮರಳಿ ಬೀಜವಾಗಬಲ್ಲುದು. ಆದರೆ, "ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ ?" ಎಂಬಂತೆ ಮಾಹೇಶ್ವರಾಂಗಜಲ ಗುರುಲಿಂಗವೆಂಬ ಮುತ್ತಾಗಿ ಮತ್ತೆ ಜಲವಾಗದು. ಆಚಾರಲಿಂಗ–ಗುರುಲಿಂಗಗಳೆರಡರ ಪರಿಣಾಮ ಪ್ರಕ್ರಿಯೆಯಲ್ಲಿ ಈ ಪ್ರಭೇದವಿದೆ. ಆದುದರಿಂದ ಭಕ್ತ ಮಾಹೇಶ್ವರನಾಗಿಯೇ ಗುರುಲಿಂಗಯೋಗದಲ್ಲಿ ಕರಿಗೊಳ್ಳಬೇಕು.

ಮಾಹೇಶ್ವರಾಂಗನು ಸ್ವಾತಿಯ ಸಲಿಲ, ಅಥವಾ ಬಿಂದು, ನಿಷ್ಠೆಯೇ ಸಿಂಪು. ನಿಷ್ಠೆಯಲ್ಲಿರುವ ಮಾಹೇಶ್ವರನು ಮುತ್ತಾಗುವನು.

"ಅರತುದಯ್ಯ ಅಂಗಗುಣ, ಬರತುದಯ್ಯ ಭಕ್ತಿರಸ.
ಆವರಿಸಿತಯ್ಯ ಅಂಗ ಲಿಂಗವನು.
ಏನೆಂದರಿಯೆನಯ್ಯ ; ಲೋಕಲೌಕಿಕವನರಿಯೆನಯ್ಯ;
ಲಿಂಗಭ್ರಾಂತನಾದೆನಯ್ಯ, ಕೂಡಲ ಚನ್ನಸಂಗಮದೇವಾ,
ನಿಮ್ಮ ಕರುಣವೆನ್ನನೆಡೆಗೊಂಡತ್ತಾಗಿ !

ಮಾಹೇಶ್ವರನ ಅಂಗ–ಲಿಂಗಯೋಗ ಅದೊಂದು ಅಪೂರ್ವ ಯೋಗ. ಅಂಗಭಾವವಳಿದು ಲಿಂಗಭಾವದಲ್ಲಿ ಉಳಿವಯೋಗ; ಉಳಿದು ಹೊಳೆವ ಯೋಗ. ಮುತ್ತಿನ ಬೆಲೆ ಮುತ್ತರಿತವರಿಗೆ ಗೊತ್ತು. ನೀರು ಮುತ್ತಾಗುವಿಕೆಯಲ್ಲಿ ಅದೆಂತಹ ಸ್ಥಿತ್ಯಂತರ ! ಅದೇನು ಗತ್ಯಂತರ ! ನೀರಿನ ಕಳೆಯೇನು, ಮುತ್ತಿನ ಕಳೆಯೇನು ? ನೀರಿನ ಬೆಲೆಯೇನು, ಮುತ್ತಿನ ಬೆಲೆ ಯೇನು ? ಮುತ್ತಾದ ಬಳಿಕ ಮತ್ತೊಂದರ ಹಂಗಿಲ್ಲ.

"ಗುರುಲಿಂಗ ಉದಯವಾದವರ ಉದಯವ ನೋಡಿರಯ್ಯ.
ಹಿಂದೆ ಕತ್ತಲೆ ಮುಂದೆ ಬೆಳಗಾಯಿತ್ತು.
ಬೆಳಗು ಬೆಳದಿಂಗಳಾಯಿತ್ತು.
ಕೂಡಲ ಚನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು."

ಗುರುಲಿಂಗ ಅದೊಂದು ಸಂವಿತ್ಸೂರ್ಯ, ಅಥವಾ ಚಿಚ್ಚಂದ್ರ. “ಬೆಳಗಾಯಿತ್ತು ; ಬೆಳಗು ಬೆಳದಿಂಗಳಾಯಿತ್ತು.’ ಎಂದು ಬಣ್ಣಿಸಿರುವುದರಿಂದ ರವಿ–ಶಶಿಗಳ ಎರಡರ ಭಾವ ಏಕಕಾಲಕ್ಕೆ ಎರಕಗೊಂಡು ಬರುತ್ತದೆ. ಗುರುಲಿಂಗ ರವಿಯೂ ಅಹುದು ; ಶಶಿಯೂ ಅಹುದು. ಉದಯಿಸುತ್ತ ರವಿ ಬೆಳಗುತ್ತ ಶಶಿ. ಅದರ ಬೆಳಗಿನಲ್ಲಿ ಬಿಸಿಯಿಲ್ಲ, ಆದರ ಮುಂದೆ ಕತ್ತಲೆ ನಿಲ್ಲುವುದಿಲ್ಲ. ಅದೊಂದು ದಿವ್ಯ ರತ್ನ ಪ್ರಭೆ. ಅದರಿಂದ ಬಾಳಿಗಾಗುವುದು ಸತ್ಯಶೋಭೆ.

ಗುರುಲಿಂಗರೂಪ ಜ್ಞಾನಪ್ರಕಾಶ ಉದಯವಾದರೆ ಕರ್ಮಕತ್ತಲೆ ಹಿಂದುಳಿಯುತ್ತದೆ. ಮಹಾಜ್ಞಾನದ ಮುಂಬೆಳಗು ಮೂಡುತ್ತದೆ. ಅದರಲ್ಲಿ ಹಮ್ಮಿನ ಬಿಸಿ ಬಾರದು; ಬೆಳದಿಂಗಳಂತೆ ತಂಪಾಗಿರುತ್ತದೆ. ಭಾನುಶಕ್ತಿಯೇ ಜ್ಞಾನಶಕ್ತಿ ; ಚಂದ್ರಶಕ್ತಿಯೇ ಕ್ರಿಯಾಶಕ್ತಿ. ಇವೆರಡೂ ಗುರುಲಿಂಗದಲ್ಲಿ ಒಂದುಗೂಡಿರುತ್ತವೆ, ಇದೊಂದು ಮೌಕ್ತಿಕಯೋಗ.

“ಲಿಂಗವಿಡಿದು ಲಿಂಗಮಾಹೇಶ್ವರನೆನಿಸಿಕೊಂಬೆ.
ಲಿಂಗವಿಡಿದು ಲಿಂಗಪ್ರಾಣಿ ಎನಿಸಿಕೊಂಬೆ
ಅರಿವರತು ಕ್ರಿಯಾನು ಭಾವವಿಡಿದಿಹರೆ
ಕೂಡಲ ಚನ್ನಸಂಗಮನಾಥ.”

ಈ ಚನ್ನಬಸವಣ್ಣನವರ ವಚನ ಮಾಹೇಶ್ವರನ ಜಲ ಮೌಕ್ತಿಕ ಯೋಗವನ್ನು ಯೋಗ್ಯರೀತಿಯಲ್ಲಿ ವಚಿಸಿದೆ. ‘ಅರಿವರತು ಕ್ರಿಯಾನುಭಾವ ವಿಡಿದಿಹರೆ’ ಎಂತಹ ಸುಂದರವಾದ ಸ್ವಾನುಭವಪೂರ್ಣಉಕ್ತಿ! ನೀರಳಿದು ಮುತ್ತಾದಂತೆ ಅರಿವು ನಿಷ್ಪತ್ತಿಗೊಂಡು ಕ್ರಿಯಾನುಭಾವ ನೆಲಗೊಂಡರೆ ಅದೇ ಮೌಕ್ತಿಕಯೋಗ. ಇಲ್ಲಿ ಅರಿವೇ ನೀರು. ಕ್ರಿಯಾನುಭವವೇ ಮುತ್ತು. ಅರಿವು ಕ್ರಿಯಾನುಭಾವದಲ್ಲಿ ನೀರು ಮುತ್ತಿನಲ್ಲಿ ಏಕಾರ್ಥವಾದಂತೆ ಅಗಿ ಅರತು ಹೋಗುತ್ತದೆ.

“ಗುರು ಕೊಟ್ಟಲಿಂಗ, ತನ್ನ ನಚ್ಚಿನ ಲಿಂಗ, ಆಯತವಾಯಿತ್ತಯ್ಯ.
ಪ್ರಾಣ ನಚ್ಚಿನಿಂದ ಸ್ವಾಯತವಾಯಿತಯ್ಯ.
ಉಭಯ ನಚ್ಚಿನಿಂದ ಸಂಗವಾಯಿತ್ತು,
ಕೂಡಲ ಚನ್ನಸಂಗ ನಮ್ಮಲ್ಲಿ !”

ನೀರು ಮುತ್ತಿನಲ್ಲಿ ಅರತಂತೆ ಅಂಗ ಗುರು–ಲಿಂಗದಲ್ಲಿ ಅರತು ಬೆರತು ತಾನಾಗಿರುತ್ತದೆ. ಅಂತಾಗುವ ಅಚ್ಚ ಬಗೆ ಈ ವಚನದಲ್ಲಿ ವಿಶ್ಲೇಷಿತವಾಗಿದೆ. ಜೀವನ ಸಾಗರಶುಕ್ತಿ ಮಾಹೇಶ್ವರಾಂಗ, ಗುರು ಕಾರುಣ್ಯಾಮೃತವೇ ಸ್ವಾತಿಯು ಹನಿ ಅದು ಮೊದಲು ಆಯತವಾಗಿ ಆಮೇಲೆ ಪ್ರಾಣನಚ್ಚಿನಿಂದ ಸ್ವಾಯತ ವಾಗಿ ಉಭಯ ನಚ್ಚಿನಿಂದ ಅಂದರೆ ದೃಕ್ಕ್ರಿಯೆಗಳೆರಡರ ನಚ್ಚಿನಿಂದ ಸನ್ನಿಹಿತಸಂಗ ವಾಗುವುದು. ಅಂದರೆ ನೀರೇ ಮುತ್ತಾಗುವುದು. ಅಂತೆಯೇ ಅಂಗವೇ ಲಿಂಗ ವಾಗುವುದು. ಇದು "ಜಲ ಮೌಕ್ತಿಕಯೋಗ." ಈ ಯೋಗದ ಬೆಡಗನ್ನಿಲ್ಲಿ ಭಾವಿಸಿ :

"ಲಿಂಗ ಆಚಾರದಲ್ಲಿ ಸಂಗವಾಯಿತ್ತು.
ಆಚಾರ ಪ್ರಾಣದಲ್ಲಿ ಸಂಗವಾಯಿತ್ತು.
ಪ್ರಾಣ ಲಿಂಗದಲ್ಲಿ ಸಂಗವಾಯಿತ್ತು.
ಪ್ರಾಣಕ್ಕೆ ಪ್ರಾಣ ಉಭಯ ಪ್ರಾಣ ಏಕ ಕೂಡಲ ಚನ್ನಸಂಗಾ !"

ಮುತ್ತಿನಂತಹ ಮಾತು. ಮುತ್ತಿನಾಕಾರವನ್ನು ತೋರುವ ಮುಕುರವಿದು. ಲಿಂಗ, ಆಚಾರ, ಪ್ರಾಣ, ಲಿಂಗ ಇವುಗಳ ಸುತ್ತನ್ನು ಭಾವಿಸಿಕೊಂಡು ಗಮನಿಸ ಬೇಕು ಇದು ಜಲದಿಂದಾದ ಜಡಮುತ್ತಲ್ಲ. ಲಿಂಗಸಾಹಿತ್ಯದಿಂದಾದ ಜೀವಂತ ಮುತ್ತು. ಉಭಯ ಪ್ರಾಣ ಏಕವಾದ ಈ ಜೀವಂತ ಮುತ್ತಿಗೆ ಬೆಲೆಯಿದೆಯೆ? ಚಿತ್ಕಳೆಯಿಂದ ಚಲುವಾದ ಮುತ್ತು. ಪರಮ ಆ ಚಿತ್ಕಳೆ ಪಾದೋದಕದಲ್ಲಿ ಸಮರಸವಾಗಿ, ಆಚಾರ ಪೂರ್ವಕವಾಗಿ ಆರೋಗಣೆಯಾಗಿ, ಆ ಆಚಾರ ಪ್ರಾಣ ವಾಗಿ, ಆ ಪ್ರಾಣಲಿಂಗದಲ್ಲಿ ಸಂಗವಾಗಿ ಏಕವಾಗುವ ಅಂದರೆ ಐಕ್ಯವಾಗುವ ಯೋಗ ನಿಜಕ್ಕೂ ಜಲ ಮೌಕ್ತಿಕ ಯೋಗವೆಂದೇ ಹೇಳಬೇಕು.

ಅರ್ಪಣವಾದ ಪಾದೋದಕಪ್ರಸಾದ ಅಂತರಂಗದಲ್ಲಿ ಆಚಾರ ಮುಖದಲ್ಲಿ ಪರಿಣಾಮಗೊಂಡು ರಕ್ತಶುಕ್ಲವಾಗಿ ಪ್ರಾಣವಾಗಿ ಬಳಿಕ ಆಚಾರ–ವಿಚಾರಗಳಿಂದ ಅದೇ ಪ್ರಾಣಲಿಂಗವಾಗಿ ಎರಡು ಏಕವಾಗುವುದೇ ಮೌಕ್ತಿಕಯೋಗ!

"ಉದಕ ಮೂರ್ತಿಯಾಗಿ ಉದಯವಾಗಿತ್ತು.
ಪಿಂಡಿಗೆಯಲ್ಲಿಯೇ ಮೂಲಸ್ಥಾನ ಸಾಧ್ಯವಾಯಿತ್ತು.
ಸ್ವದೇಹ ಶಿವಪುರದಲ್ಲಿ ವಾಯುಪೂಜೆ.
ಗುಹೇಶ್ವರ ಗುಹೇಶ್ವರನೆಂಬುದಲ್ಲಿಯೇ ನಿಂದುದು–ಓ!"

ಇದು ಪಿಂಡಾಂಡದೊಳಗಿನ ಉದಕ ಮೌಕ್ತಿಕಯೋಗ. ಚೇತನ ಮೌಕ್ತಿಕ ಉದಯ. ಪಿಂಡದೊಳಗಿನ ರಸರಾಶಿಯೆಲ್ಲ ಒಂದುಗೂಡಿ ಮುತ್ತಿನಂತಹ ಒಂದು ಪಿಂಡಿಗೆ (ಗಂಟು) ಉಂಟಾಗುವುದು. ಆದರಲ್ಲಿ ಪ್ರಾಣ–ಚೇತನಗಳು ನೆಲಗೊಳ್ಳುವವು. ಸ್ವದೇಹವೇ ಶಿವಪುರ. ಅಲ್ಲಿ ಪ್ರಾಣಲಿಂಗಪೂಜೆ. ಪೂಜೆ ಇದು ಶ್ಲೇಷಾರ್ಥಕಪದ. ಅರ್ಚನರೂಪ ಸತ್ಕಾರಾರ್ಥದೊಡನೆ ಶೂನ್ಯವನ್ನೂ ಸೂಚಿಸುವ ಪದ. ಶೂನ್ಯವು ಬಿಂದುರೂಪ ಮೌಕ್ತಿಕವನ್ನು ಧ್ವನಿಸುತ್ತದೆ. ಆ ಶೂನ್ಯಾಕಾರದ ಚಿದ್ಬಿಂದುವೇ ಮೌಕ್ತಿಕ. ಅದನ್ನು ಮಾಹೇಶ್ವರನು ತ್ರಿವಿಧಾಚಾರ ವಿಚಾರಗಳಿಂದ ಪಡೆಯುತ್ತಾನೆ. ಅದರಲ್ಲಿ ದಿವ್ಯರಸರೂಪನೂ ಜ್ಯೋತಿರ್ಮಯನೂ ಆದ ಮಹಾಚೈತನ್ಯ ನೆಲೆಗೊಂಡಿರುತ್ತಾನೆ. ಅದು ಲಭ್ಯವಾಗುವುದು ಒಂದು ಸೌಭಾಗ್ಯ. ಓ! ಅದೆಂತಹ ಸಂಯೋಗ! ಪಿಂಡಾಕಾಶದಲ್ಲಿ ನಿರವಯಲಿಂಗ ಚಿತ್ತ ಬುದ್ಧಿಗಳಲ್ಲಿ ಚಿದ್ವ್ಯೋಮಾಕಾಶಸ್ವರೂಪವಾಗಿ ಸಾಕ್ಷಾತ್ಕಾರವಾಗುವ ಮಹಾಯೋಗ ನಿಜಕ್ಕೂ ಮಹಾಭಾಗ್ಯ! ಕ್ರಿಯೆ, ಭಾವ, ಜ್ಞಾನಗಳು ನಿಷ್ಪತ್ತಿಗೊಂಡು ತ್ರಿವಿಧಸ್ಥಲ ಏಕವಾಗಿ ಅಂದರೆ ಆಚಾರ ಪ್ರಾಣ ಲಿಂಗಗಳಲ್ಲಿ ಅಭಿನ್ನತೆ ಅಳವಟ್ಟು ಅಂದರೆ ತ್ರಿಪುಟಿ ನಷ್ಟವಾಗಿ ನಿಂದ ಶಿವಯೋಗವೇ ಜಲ ಮೌಕ್ತಿಕವಾದಂತೆ ಜೀವನ್ಮುಕ್ತಸ್ಥಿತಿ.

"ಕಾಯಗುಣಂಗಳಳಿದು ಜೀವನ್ಮುಕ್ತನಾದ ಬಳಿಕ
ಸಮ್ಯಕ್ ಜ್ಞಾನವೆಂಬುದೊಂದು ಶಾಂತಿಯು ದೊರಕೊಂಡಿತ್ತು ನೋಡಿದರೆ
ಅಂತರಂಗ ಬಹಿರಂಗವೆಂಬ ವನರಿಯನಾಗಿ
ದ್ವೈತಾದ್ವೈತವ ನೀಕರಿಸಿ ನಿರ್ವಾಣ ನಿಷ್ಪತ್ತಿಯಾಗಿ
ಗುಹೇಶ್ವರಾ, ನಿಮ್ಮ ಶರಣನನುಪಮ ಸುಖಿಯಾಗಿರ್ದ!"

ಮೌಕ್ತಿಕ ಜಡ. ಅದು ಪರಿಣಮಿಸದು. ಜೀವನ್ಮುಕ್ತ ಅಜಡ. ತನ್ನ ಪೂರ್ವದ ಜಲದಂತಿರುವ ಕಾಯಗುಣಗಳನ್ನೆಲ್ಲ ಕಳೆದು ದೇವಗುಣಗಳು ಬೆಳೆದು

ಸಮ್ಯಗ್ ಜ್ಞಾನವುಂಟಾದ ಬಳಿಕ ಅಂದರೆ ಜೀವನ್ಮುಕ್ತನಾದ ಮೇಲೆ ಶಾಂತಿ ಸಮ ನಿಸುತ್ತದೆ. ಆಗ ಒಳಹೊರಗೆಂಬ ಕವಲ ಬಗೆಯಿಲ್ಲ. ಭೇಧಾಭೇದದ ಭಾವನೆ ಯಿಲ್ಲ. ನಿರ್ವಾಣಭಾವವಿಲ್ಲ. ಅನುಪಮ ಸುಖಿಯಾಗಿರುವ ಮಹಾಯೋಗ ವೊಂದೇ ಜೀವನ್ಮುಕ್ತನಾದ ಮಾಹೇಶ್ವರಾಂಗನ ಮಹಾಭಾಗ್ಯ.

ಜಲ ಅಗ್ನಿಯಾಗಿ, ಅಗ್ನಿವಾಯುವಾಗಿ, ವಾಯು ಆಕಾಶದಲ್ಲಿ ನಿವೃತ್ತಿ ಅಥವಾ ನಿಷ್ಪತ್ತಿಗೊಳ್ಳುವುದು ಸಹಜ. ಇದರಂತೆ ಮಾಹೇಶ್ವರನ ಆಚಾರ ರೂಪರಸವು ಜ್ಞಾನಾಗ್ನಿಯಲ್ಲಿ ಜ್ಞಾನಾಗ್ನಿಯು, ಪ್ರಾಣವಾಯುವಿನಲ್ಲಿ ಪ್ರಾಣ ವಾಯು ಪರಮಾಕಾಶದಲ್ಲಿ ನಿಷ್ಪತ್ತಿಗೊಂಡು ಮೌಕ್ತಿಕದಂತೆ ಶೂನ್ಯಲಿಂಗ ಸ್ವರೂಪವಾಗುತ್ತದೆ.

ಗುರುಲಿಂಗದ ವಿಕಾಸವಾದವನ್ನು ವಿಚಾರಿಸಿದರೂ ವಚನದಲ್ಲಿ ಬರುವ 'ನಿರ್ವಾಣ ನಿಷ್ಪತ್ತಿಯಾಗಿ' ಎಂಬ ಮಾತು ಸತ್ಯಕ್ಕೆ ಸತ್ಯವಾಗಿ ನಿಲ್ಲುತ್ತದೆ. ಗುರುಲಿಂಗವು ಮಾಹೇಶ್ವರಾಂಗನ ಮಹತ್ ಸಾಧನೆಯ ಫಲವಾಗಿ ಕ್ರಿಯೆ, ಮಂತ್ರ, ವೇಧೆ, ಬೋಧ, ಪ್ರಸನ್ನ, ನಿರ್ವಾಣವಾಗಿ ವಿಕಾಸಗೊಂಡು ವಿರಾಜಿಸು ತ್ತದೆ. ಆ ನಿರ್ವಾಣಸ್ವರೂಪವೂ ನಿಷ್ಪತ್ತಿಗೊಂಡಾಗ ನಿರುಪಮ ಸುಖ ಸಂಪ್ರಾ ಪ್ತಿಯಾಗುತ್ತದೆ. ಅಂದರೆ ನಿರ್ವಾಣಲಿಂಗದಲ್ಲಿ ಮಾಹೇಶ್ವರಾಂಗನು ನಿಜೈಕ್ಯತೆ- ಯನ್ನು ಪಡೆಯುತ್ತಾನೆ. ನೀರು ಮುತ್ತಾದಂತೆ ನಿಜದ ನಿಲವಿನಲ್ಲಿ ನೆಲಸುತ್ತಾನೆ. ಮುತ್ತಿನಂತೆ ಚಿತ್ಕಳಾಪ್ರಪೂರ್ಣನಾಗಿ ಪರಿಶೋಭಿಸುತ್ತಾನೆ; ಪರಮ ಮೌಲ್ಯ ವುಳ್ಳವನಾಗುತ್ತಾನೆ. ಅಪರಕಾಯ ಪರಕಾಯ ವಾಗುತ್ತದೆ. ಮೊದಲು ಮುತ್ತಿ ನಂತೆ ಹೊಳೆವ ಜಲಬಿಂದು ಸಿಂಪಿನ ಸಂಗದಲ್ಲಿ ಮುತ್ತೇ ಆಗಿ ಮೆರೆಯುವಂತೆ, ಮಾಹೇಶ್ವರಾಂಗನು ಮಹಾಜ್ಞಾನಾಚಾರದ ಫಲವಾಗಿ ಮಹಾಲಿಂಗವಾಗಿಯೇ ಬಾಳುವ ಬೆಳಗುವ ಯೋಗವನ್ನು ಪಡೆಯುತ್ತಾನೆ. ಜ್ಞಾನಶಕ್ತಿಯೆಂಬ ಶುಕ್ತಿ ಯಲ್ಲಿ ಅಡಗಿ, ಗುರುಲಿಂಗವೆಂಬ ಮೌಕ್ತಿಕವಾಗುವ ಮಹಾಯೋಗವನ್ನು ಪಡೆ ಯುತ್ತಾನೆ.

# ತ್ಯಾಗಾಂಗದಲ್ಲಿ ಭೌತವಿಜ್ಞಾನ

ಸಮಷ್ಟಿ ಪಂಚಮಹಾಭೂತಗಳೇ ವ್ಯಷ್ಟಿರೂಪ ಮಾನವ ಶರೀರದಲ್ಲಿ ಅಣುರೂಪದಲ್ಲಿ ಪರಿಣಾಮಗೊಂಡಿವೆ. ಮರವೆಲ್ಲ ಬೀಜದಲ್ಲಿರುವಂತೆ ಬ್ರಹ್ಮಾಂಡವೆಲ್ಲ ಪಿಂಡಾಂಡವಲ್ಲಿ ಅಡಕಾಗಿದೆ. ತ್ರಿವಿಧ ಶರೀರದಲ್ಲಿ ಪಂಚಭೂತಗಳು ಹಾಸು ಹೊಕ್ಕಾಗಿವೆ. ಪಂಚಮಹಾಭೂತಗಳ ಪರಮಹಾಗು ಚರಮ ಪರಿಣಾಮವೇ ಮಾನವಶರೀರ. (ಬ್ರಹ್ಮಾಂಡ-ಪಿಂಡಾಂಡಗಳ ಸಮನ್ವಯವನ್ನು ಸವಿಸ್ತಾರವಾಗಿ ಅರಿಯಬೇಕೆಂದರೆ 'ಭಕ್ತಸಂಪುಟ'ದ ಅನುಬಂಧವನ್ನು ಓದಬೇಕು.)

ಷಟ್‌ಸ್ಥಲ ಸಿದ್ಧಾಂತದಲ್ಲಿ ಶಾರೀರಕ ಭೌತಿಕ ಆತ್ಮಿಕ ಸಮನ್ವಯಗೊಳಿಸಿದ ವೈಜ್ಞಾನಿಕ ಪ್ರಗತಿಗೇರಿಸಿದ ಕೀರ್ತಿ ಶಿವಾಗಮಗಳದ್ದು. ಇದೋದು ದಿಟಕ್ಕೂ ತಾಂತ್ರಿಕ ಕ್ರಾಂತಿ, ಸಮನ್ವಯ ಪ್ರಗತಿ; ವೈಜ್ಞಾನಿಕ ವಿದ್ಯುತಿ. ತಾತ್ತ್ವಿಕ ವಿಸ್ತರಣೆಯ ನೈತಿಕ ಸುಧಾರಣೆಯ ಪ್ರಭಾವಪೂರ್ಣಪದ್ಧತಿ, ಪುರಾತನ ಶೈವ ಸಂಪ್ರದಾಯಕ್ಕೆ ಪರಂಪರತೆಗೆ ಶರಣುಹೋಗದ ಸರ್ವಸ್ವತಂತ್ರರೀತಿ. ಶೈವತತ್ತ್ವ ಸಿದ್ಧಾಂತದಮೇಲೆ ಚರಮವಾದ ಪರಮ ಪರಿವರ್ತನೆ. ಈ ಪರಿವರ್ತನೆ ಸಮಾಜ ಜೀವನದ ವರ್ತಮಾನಕಾಲಕ್ಕೆ ಮಾತ್ರವಲ್ಲದೆ ಭೂತದಿಂದ ಭವಿಷ್ಯಕಾಲಕ್ಕೆ ಮಧ್ಯ ಸೇತುವೆಯಾಗಿ ನಿಂತಿದೆ ಭೌತಿಕ ಆತ್ಮಿಕ ಸಿದ್ಧಾಂತಗಳೆರಡನ್ನೂ ಒಳಗೊಂಡ ಈ ಪರಿವರ್ತನೆಯನ್ನು ಅಳವಡಿಸಿಕೊಂಡ ಸಮಾಜ ಜೀವಂತವಿರಲು ಸಾಧ್ಯ; ಜಗತ್ತಿನಲ್ಲಿ ಜ್ವಲಂತವಾಗಲು ಸಾಧ್ಯ.

ಜಗತ್ತು ಜಗದೀಶನಷ್ಟೇ ನಿತ್ಯ ಮತ್ತು ಸತ್ಯ; ಅಲ್ಲದೆ ಪರಮನಷ್ಟೆ-ಪರಿಪೂರ್ಣವೆಂದು ಪ್ರಥಮವಾಗಿ ಪ್ರತಿಪಾದಿಸಿದ ಕೀರ್ತಿ ಶಿವಾದ್ವೈತಸಿದ್ಧಾಂತಕ್ಕಿದೆ. ಅಂತೆಯೇ ಶಕ್ತಿಯೂ ಸಚ್ಚಿದಾನಂದಮಯೀ ಎಂದು ಹೇಳಿ, ಶಿವಶಕ್ತಿಸಮನ್ವಯ ಶಿಖರಕ್ಕೆ ಸುವರ್ಣಕಲಶವನ್ನಿಕ್ಕಿದೆ.

"ಏನೆಂದೆನಲಿಲ್ಲದ ಮಹಾಘನಲಿಂಗವು
ತನ್ನಲೀಲೆಯಿಂದ ತಾನೇ ಸ್ವಯಂಭುಲಿಂಗವಾಯಿತ್ತು.

ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ.
ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ.
ಆತ್ಮನಿಂದಾದುದು ಆಕಾಶ; ಆಕಾಶದಿಂದಾದುದು ವಾಯು.
ವಾಯುವಿನಿಂದಾದುದು ಅಗ್ನಿ; ಅಗ್ನಿಯಿಂದಾದುದು ಅಪ್ಪು.
ಅಪ್ಪುವಿನಿಂದಾದುದು ಪೃಥ್ವಿ; ಪೃಥ್ವಿಯಿಂದಾದುದು
ಸಕಲ ಜೀವರೆಲ್ಲ. ಇವೆಲ್ಲ ನಿಮ್ಮ ನೆನಹುಮಾತ್ರದಿಂ
ದಾದವು ಸಿಮ್ಮಲಿಗೆಯ ಚನ್ನರಾಮಾ!"

"ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬೈದು ತತ್ವಂಗಳು
ಹುಟ್ಟುವುದಕ್ಕೆ ಓಂಕಾರ ಪ್ರಥಮವೇ ಮೂಲಕಾರಣವಾಗಿಪ್ಪುದು.
ಪ್ರಣವಕ್ಕೆ ಪಂಚಾಕೃತಿಗಳು, ಆ ಪಂಚಾಕೃತಿಗಳಿಂದ
ಪಂಚಾಕ್ಷರಂಗಳು, ಆ ಪಂಚಾಕ್ಷರಂಗಳೇ ಪಂಚಮುಖ
ಸ್ವರೂಪವನ್ನೈದಿ, ಪಂಚಕಲಾಶಕ್ತಿಯುಕ್ತವಾಗಿ ಸದಾಶಿವನಾದನು.
ಆ ಸದಾಶಿವನ ಐದು ವದನಂಗಳಿಂದ ಪಂಚಭೂತಗಳು
ಪುಟ್ಟಿದವಾದಕಾರಣ ಈ ಪಂಚಭೂತ ತತ್ವಂಗಳ
ಜನನಕ್ಕೆ ಮೂಲಕಾರಣವಾದಂಥಾದ್ದೇ ಓಂಕಾರಪ್ರಣವವು.
ಆ ಸದಾಶಿವಮೂರ್ತಿಯ ಸದ್ಯೋಜಾತ ಮುಖದೊಳಗೆ
ಸರ್ವಾಧಾರಮಯವಾದ ಧರಣೀತತ್ವವು ಪುಟ್ಟಿತು.
ವಾಮದೇವ ಮುಖದೊಳಗೆ ಸರ್ವಪಾನ್ಯ ಪ್ರಕ್ಷಾಳನ
ರೂಪವಾದ ಉದಕತತ್ವವು ಪುಟ್ಟಿತು.
ತತ್ಪುರುಷ ಮುಖದೊಳಗೆ ಸರ್ವೋತ್ತೇಜನ ರೂಪವಾದ
ತೇಜವು ಪುಟ್ಟಿತು. ಅಘೋರ ಮುಖದೊಳಗೆ ಸರ್ವ
ಚಾಂಚಲ್ಯಮಯವಾದ ಸಮೀರತತ್ವವು ಪುಟ್ಟಿತು.
ಈಶಾನ್ಯಮುಖದೊಳಗೆ ಸರ್ವಾವಕಾಶಪ್ರದವಾದ ವ್ಯೋಮ
ತತ್ವವು ಪುಟ್ಟಿತು- ಎಂಬುದೀಗ ಈ ತತ್ವಂಗಳು ಪುಟ್ಟಿದವು."

ಈ ಎರಡು ವಚನಗಳಲ್ಲಿ ಭೂತ ಜನಕ ಯಾರು? ಅವನು ಹೇಗೆ ಸ್ವಯಂಭುವಾದನು, ಅವನ ಸ್ವರೂಪ ವೆಂತಹದು, ಅವನಿಂದ ಆತ್ಮಾದಿ ಭೂತಗಳು

ಹುಟ್ಟಲು ಕಾರಣವೇನು, ಜಗದುತ್ಪತ್ತಿಗೆ ಮಹಾಕಾರಣನಾದ ಆತನ ವಾಚ್ಯ ಯಾವುದು? ಅದರ ಆಕೃತಿ ಅಕ್ಷರಮುಖ ಶಕ್ತಿಗಳು ಯಾವು? ಯಾವ ಯಾವ ಮುಖದಲ್ಲಿ ಯಾವಯಾವ ಭೂತೋದಯವಾಯಿತು, ಯಾವಯಾವ ಭೂತದಲ್ಲಿ ಯಾವಯಾವ ಗುಣಧರ್ಮಗಳಿವೆ. ಇವೇ ಮುಂತಾದ ಭೌತವಿಚಾರ ಸಂಕ್ಷಿಪ್ತವಾಗಿ ಯಾದರೂ ಸ್ಫುಟವಾಗಿ ಬಂದಿದೆ. ಇದೆಲ್ಲ ಹೇಗಾದರಿರಲಿ; ಈಗ ನಮಗೆ ಬೇಕಾದುದು ತ್ಯಾಗಾಂಗ ಭೌತವಿಜ್ಞಾನ ತಾನೆ? ತ್ಯಾಗಾಂಗಕ್ಕೆ ಅಂದರೆ ಸ್ಥೂಲ ತನುವಿಗೆ ಮುಖ್ಯವಾದ ಭೂತಗಳೆಂದರೆ ನೆಲ ಜಲ ಎರಡೆ! ಇವೆರಡನ್ನು ಕುರಿತು ಇಲ್ಲಿ ಕೊಂಚ ವಿಚಾರಿಸಲು ಪ್ರಯತ್ನಿಸೋಣವಾಗುತ್ತದೆ. ಸಮಷ್ಟಿಭೂತಗಳಾದ ಇವು ವ್ಯಷ್ಟಿಯಲ್ಲಿ ಹೇಗೆ ಇವೆ? ಏನನ್ನು ಉತ್ಪಾದಿಸಿ ಜೀವನ ನಿರ್ವಹಣ ಕಾರಣ ವಾಗಿವೆ? ಎಂಬುದೇ ಈ ಪ್ರಕರಣದ ಪ್ರಸ್ತುತ ವಿಷಯ.

# ಪೃಥ್ವ್ಯಂಗ-ಜಲಾಂಗ

ಸದಾಶಿವನ ಸದ್ಯೋಜಾತಮುಖದಿಂದ ಜನಿಸಿದೆ ಪೃಥ್ವಿ; ವಾಮದೇವ ಮುಖದಿಂದ ಜನಿಸಿದೆ ಜಲ. ಪೃಥ್ವಿಗೆ ತಾರಕಾಕೃತಿ; ಜಲಕ್ಕೆ ದಂಡಕಾಕೃತಿ. ಪೃಥ್ವಿಗೆ ನಕಾರ ಬೀಜಾಕ್ಷರ; ಜಲಕ್ಕೆ ಮಕಾರ ಬೀಜಾಕ್ಷರ. ಪೃಥ್ವಿ ಎಲ್ಲವನ್ನು ಎಲ್ಲರನ್ನು ಧಾರಣಮಾಡುವ ಎಲ್ಲವನ್ನು ಸಹಿಸುವ ಶಕ್ತಿಯುಳ್ಳದಾಗಿದೆ. ಇದ ರಿಂದಾಗಿ ಇದು ಸರ್ವಾಧಾರವಾಗಿದೆ. ಜಲವು ಸರ್ವಜೀವಿಗಳ ಪಾನಪ್ರಕ್ಷಾಲನ ಗಳಿಗೆ ಕಾರಣವಾಗಿದೆ. ಸಸ್ಯವರ್ಧನಕ್ಕೂ ಸಾಧನವಾಗಿದೆ. ಜೀವನನಿರ್ವಹಣ ಕಾರಣವೂ ಆಗಿದೆ. ಇದರಿಂದಾಗಿ ಇದು 'ಜೀವನ' ಎಂಬ ಹೆಸರನ್ನು ತೊಟ್ಟಿದೆ. ನೆಲಜಲಗಳಿಲ್ಲದೆ ಜೀವನವೇ ಇಲ್ಲ.

ಪೃಥ್ವಿ ಸಾಕಾರಶಿವನಿಗೆ ಗೌರಿಯಾಗಿದೆ; ಜಲ ಗಂಗೆಯಾಗಿದೆ. ಒಂದು ಕ್ರಿಯಾಶಕ್ತಿದ್ಯೋತಕ; ಇನ್ನೊಂದು ಜ್ಞಾನಶಕ್ತಿದ್ಯೋತಕ. ಒಂದು ವರ್ಧಕ, ಧಾರಕ, ಇನ್ನೊಂದು ಶೋಧಕ, ಪ್ರಕಾಶಕ. ಒಂದು ಹಸಿವನ್ನು ಹಿಂಗಿಸುತ್ತದೆ. ಇನ್ನೊಂದು ನೀರಡಿಕೆಯನ್ನು ಹಿಂಗಿಸುತ್ತದೆ. ಉಭಯುವ ಸ್ಥೂಲಾಂಗ ಅಥವಾ ತ್ಯಾಗಾಂಗ ಪೋಷಕ.

ಪೃಥ್ವಿಯಲ್ಲಿ ಶಬ್ದಸ್ಪರ್ಶರೂಪರಸಗಂಧ ಈ ಐಯ್ದು ಗುಣಗಳಿವೆ. ಜಲ ದಲ್ಲಿ ಶಬ್ದ ಸ್ಪರ್ಶರೂಪರಸ ಈ ನಾಲ್ಕು ಗುಣಮಾತ್ರ ಇವೆ. ಇದಲ್ಲದೆ ಪೃಥ್ವಿಗೆ ಪಂಚಭೂತಗಳ ಇಪ್ಪತ್ತೈದು ವಿಭೇದಗುಣಗಳುಂಟು. ಅಪ್ಪುವಿಗೆ ಪೃಥ್ವಿಯ ಐಯ್ದು ಗುಣಗನ್ನು ಬಿಟ್ಟು ಇಪ್ಪತ್ತು ಗುಣಗಳುಂಟು.

ಭೂಮಿ ಕಠಿಣವಾಗಿದೆ. ಜಲ ದ್ರವರೂಪವಾಗಿದೆ. ಧಾರಣಕ್ರಿಯೆ ಧರಣಿ ಯದು. ಪಿಂಡೀಕರಣಕ್ರಿಯೆ ಅಪ್ಪುವಿನದು. ಪೀತವರ್ಣಪೃಥ್ವಿಯದು. ಶ್ವೇತ ವರ್ಣ ಸಲಿಲದ್ದು, ನೆಲಕ್ಕೆ ಬ್ರಹ್ಮನು ಅಧಿದೇವತೆ. ಜಲಕ್ಕೆ ವಿಷ್ಣು ಅಧಿದೇವತೆ.

ಈ ನೆಲಜಲಗಳು ಶಿವನ ಸಮಷ್ಟಿತ್ಯಾಗಾಂಗ, 'ಶಿವಾಂಶೋಽಪ್ಯಪ್ಪ ಮೂರ್ತಯ್ಯಃ' ಎಂದು ಚನ್ನಬಸವೇಶ್ವರರ ಕರಣಹಸಿಗೆಯ ಪ್ರಮಾಣವಿದೆ.

ಸಾಕಾರಶಿವನಿಗೆ ಎಂಟು ತನುಗಳಿವೆ. ಅವುಗಳಲ್ಲಿ ನೆಲಜಲಗಳೆರಡು ಮೊದಲಿನವು. ಇವು ಆತನ ಸಮಷ್ಟಿರೂಪ ಬ್ರಹ್ಮಾಂಡಸ್ಥೂಲ ತನುವಾಗಿವೆ. ಈ ಬ್ರಹ್ಮಾಂಡ ತನುವೆ ಸಾರಸಂಗ್ರಹವಾಗಿ ವ್ಯಷ್ಟಿರೂಪಪಿಂಡಾಂಡ ಸ್ಥೂಲ ತನುವಾಗುತ್ತದೆ. ಹೇಗೆಂದರೆ:

"ಅಸ್ಥಿ ಮಾಂಸತ್ವಚೋನಾಡೀರೋಮಃ ಚೈವತು ಪಂಚಕಂ |
ಕ್ಷಿತೇಃ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ॥"

ಮೂಳೆ, ಮಾಂಸ, ತೊವಲು, ನರ, ಕೂದಲು ಇವೈದು ಪೃಥ್ವಿಯಿಂದಾಗುವವು. ರುಂಡ, ಮುಂಡ ಕೈಕಾಲುಗಳಲ್ಲಿ ೨೧೬ ಮೂಳೆಗಳಿವೆ, ರುಂಡದಲ್ಲಿ ೨೨ಮೂಳೆಗಳು ಪಂಚಜ್ಞಾನೇಂದ್ರಿಯಗಳು ಇವೆ: ಮೆದುಳಿದೆ. ಮುಂಡದಲ್ಲಿ ೧೩೪, ಕೈಕಾಲುಗಳಲ್ಲಿ ೬೦ ಮೂಳೆಗಳಿವೆ. ಮಾಂಸಚ್ವಜಗಳು ಎಲ್ಲೆಲ್ಲಿಯೂ ಇವೆ. ಸಹಸ್ರಾರು ನಾಡಿಗಳಿವೆ. ಚರ್ಮದ ತುಂಬ ರೋಮಗಳಿವೆ. ಎಂಟು ಕೋಟಿ ರೋಮಗಳಿವೆಯೆಂದು ಹೇಳುವುದುಂಟು, ಮಾಂಸಖಂಡಗಳಿಲ್ಲದಿದ್ದರೆ ಯಾವ ಕ್ರಿಯೆಯೂ ನಡೆಯದು. ಸ್ಥಿತಿಸ್ಥಾಪನಾಶಕ್ತಿ ಮಾಂಸಖಂಡಗಳಿಗಿದೆ. ಹೃದಯಕೋಶ, ರಕ್ತನಾಳ, ಶ್ವಾಶಕೋಶ, ಕರುಳು ಜೀರ್ಣಕೋಶ ಮುಂತಾದವುಗಳಲ್ಲಿ ಮಾಂಸಖಂಡಗಳು ಮುಖ್ಯಾಂಗವಾಗಿರುತ್ತವೆ. ಇವು ಇಂದ್ರಿಯ ಪುಷ್ಟಿಗೂ ಸಂಕೋಚ- ವಿಕಾಸಕ್ರಿಯೆಗಳಿಗೂ ಸಹಾಯಕವಾಗಿವೆ, ಕೀಲುಗಳ ಕೆಲಸಕ್ಕೂ ಸಹಾಯಕವಾಗಿವೆ. ಮಾಂಸವಿಲ್ಲದೆ ಮೈಕಟ್ಟು ಇರದು. ಮಾಂಸ ಮೂಳೆಯುಂತೆ ಮೈತುಂಬಿಕೊಂಡಿರಲು ಮುಖ್ಯವಾಗಿ ಬೇಕು. ಇಂತಹ ಮಾಂಸವನ್ನು ಗುರುಮಂತ್ರದಿಂದ ತುಂಬಿ ಶುದ್ಧವಾಗಿಸುತ್ತಾನೆ. ಅಂತೆಯೇ ತೊವಲು ನಾಡಿಗಳನ್ನೂ ಶುದ್ಧವಾಗಿಸುತ್ತಾನೆ. ಅಂದರೆ ಶುದ್ಧತೆಗೆ ಸಾಧನಗಳಾದ ಸತ್ಕ್ರಿಯಾಚರಣೆಗಳನ್ನು ಬೋಧಿಸಿ ಆಚರಣೆಗೆ ತರ ಹೇಳುತ್ತಾನೆ.

"ಲಾಲಾಮೂತ್ರಂ ತಥಾಸ್ವೇದಃ ಶುಕ್ಲಂ ಸೋಣಿತಮೇವ ಚ|
ಅಪಾಂ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ ॥"

ಲಾಲಾರಸ, ಮೂತ್ರ, ಸ್ವೇದ, ಶುಕ್ಲ, ರಕ್ತ ಇವೈದು ಜಲದಿಂದಾಗುವವು.

ಈ ಹತ್ತು ಸೇರಿ ಸ್ಥೂಲಾಂಗವಾಗುವುದು. ಇವುಗಳಲ್ಲಿ ರಕ್ತ, ಶುಕ್ಲಗಳು ಪ್ರಧಾನವಾದವುಗಳು. ಮೈ ತೂಕದ ೧೩ನೆಯ ಒಂದು ಭಾಗ ರಕ್ತವಿರುತ್ತದೆ. ರಕ್ತದಲ್ಲಿ ಕ್ಷಾರ ರಸವಿರುತ್ತದೆ. ಕೆಂಪು ಬಿಳಿ ಕಣಗಳಿರುತ್ತವೆ. ರಕ್ತವೇ ಪ್ರಾಣಾಧಾರವಾಗಿದೆ. ರಕ್ತದ ಬಿಳಿ ಕಣಗಳು ಗಾಯಗಳನ್ನು ಮಾಣಿಸುತ್ತವೆ, ಅಪಾಯವನ್ನು ತಪ್ಪಿಸುತ್ತವೆ. ವಿಷಕ್ರಿಮಿಗಳನ್ನು ನಾಶಪಡಿಸುತ್ತವೆ. ರಕ್ತ ಚಲನೆ ಹೃದಯದಿಂದ ಪ್ರಾರಂಭವಾಗುತ್ತದೆ. ಎದೆಯ ಎಡಗಡೆಯಿಂದ ಮೊದಲಾಗುತ್ತದೆ. ಶುದ್ಧ ರಕ್ತದ ಸಾರವೇ ವೀರ್ಯ. ಇದರಿಂದ ಬುದ್ಧಿಯುಂಟಾಗುತ್ತದೆ. ರಕ್ತ ಶುಕ್ಲಗಳ ಸಂವೃದ್ಧಿಗೆ ಸಾಧನಗಳಾದ ಯಮ-ನಿಯಮ-ಧೃತಿ ಧಾರಣಾದಿಗಳನ್ನು ಶ್ರೀ ಗುರುದೇವನು ಬೋಧಿಸುತ್ತಾನೆ.

"ಚಿತ್ತಂ ಚ ಪ್ರಾಣವಾಯುಶ್ಚ ನಾಸಿಕಂ ಗಂಧ ಮೇವ ಚ ।
ಪಾಯುಃ ಪಂಚವಿಧಂ ಪ್ರೋಕ್ತಮಿತ್ಯೇತದ್ಭೂಮಿ ಪಂಚಕಂ ॥"

— ವಿಜಯ ಭೈರವಿ.

ಪಾಯು, ಗಂಧ, ನಾಸಿಕ, ಪ್ರಾಣ, ಚಿತ್ತ ಇವೈದು ಪೃಥ್ವಿಯಿಂದ ಹುಟ್ಟುತ್ತವೆ. ಪೃಥ್ವಿಯೊಳಗಿನ ಪೃಥ್ವಿಯಿಂದ ಪಾಯು ಕರ್ಮೇಂದ್ರಿಯ, ಪೃಥ್ವಿಯೊಳಗಿನ ಅಪ್ಪುವಿನಿಂದ ಗಂಧ ತನ್ಮಾತ್ರ, ಪೃಥ್ವಿಯೊಳಗಿನ ಅಗ್ನಿತತ್ತ್ವದಿಂದ ಘ್ರಾಣವೆಂಬ ಜ್ಞಾನೇಂದ್ರಿಯ, ಪೃಥ್ವಿಯೊಳಗಿನ ವಾಯುತತ್ತ್ವದಿಂದ ಪ್ರಾಣವಾಯು, ಪೃಥ್ವಿಯೊಳಗಿನ ಆಕಾಶತತ್ತ್ವದಿಂದ ಚಿತ್ತವೆಂಬ ಅಂತಃಕರಣ ಜನಿಸುವವು.

"ಬುದ್ಧಿಶ್ಚಾಪಾನವಾಯುಶ್ಚ ಜಿಹ್ವಾ ಚ ರಸ ಏವ ಚ ।
ಗುಹ್ಯಂ ಪಂಚವಿಧಂ ಪ್ರೋಕ್ತಮಿತ್ಯೇತಜ್ಜಲ ಪಂಚಕಂ ॥"

—ವಿಜಯ ಭೈರವಿ.

ಗುಹ್ಯ, ರಸ, ಜಿಹ್ವೆ, ಅಪಾನವಾಯು, ಬುದ್ಧಿ ಇವೈದು ಜಲದಿಂದ ಹುಟ್ಟುತ್ತವೆ. ಜಲದೊಳಗಿನ ಪೃಥ್ವಿಯ ಅಂಶದಿಂದ ಗುಹ್ಯವೆಂಬ ಕರ್ಮೇಂದ್ರಿಯ, ಜಲದೊಳಗಿನ ಜಲತತ್ತ್ವದಿಂದ ರಸತನ್ಮಾತ್ರ, ಜಲದೊಳಗಿನ

ಅಗ್ನಿತತ್ತ್ವದಿಂದ ಜಿಹ್ವೆಯೆಂಬ ಜ್ಞಾನೇಂದ್ರಿಯು, ಜಲದೊಳಗಿನ ವಾಯು ತತ್ತ್ವದಿಂದ ಅಪಾನವಾಯು, ಜಲದೊಳಗಿನ ಆಕಾಶ ತತ್ತ್ವದಿಂದ ಬುದ್ಧಿಯೆಂಬ ಅಂತಃಕರಣ ಹುಟ್ಟುವವು.

ಪಾಯ್ವಿಂದ್ರಿಯಕ್ಕೆ ದೇವದತ್ತವಾಯು, ಮೃತ್ಯುದೇವತೆ, ಅಲ್ಲಿ ಸರ್ಜನ-ವಿಸರ್ಜನ ವಿಷಯ. ಇನ್ನು ಗುಹ್ಯೇಂದ್ರಿಯಕ್ಕೆ ಧನಂಜಯ ವಾಯು, ಬ್ರಹ್ಮ ದೇವತೆ, ಅಲ್ಲಿ ಆನಂದ-ಅನಾನಂದ ವಿಷಯ. ಸುಗಂಧ-ದುರ್ಗಂಧ ಈ ಈ ಎರಡು ಗಂಧಭೇದ.

ಇನ್ನು ಜ್ಞಾನೇಂದ್ರಿಯಗಳಾದ ಘ್ರಾಣೇಂದ್ರಿಯಕ್ಕೆ ಪೃಥ್ವಿ ಮಹಾಭೂತ, ಅಶ್ವಿನಿ ಅಧಿದೇವತೆ, ಅಲ್ಲಿ ಗಂಧ ವಿಷಯ. ಜಿಹ್ವೇಂದ್ರಿಯಕ್ಕೆ ಅಪ್ಪು ಮಹಾಭೂತ, ವರುಣ ಅಧಿದೇವತೆ, ಅಲ್ಲಿ ರಸ ವಿಷಯ. ಮಧುರ, ಆಮ್ಲ, ತಿಕ್ತ, ಕಟು, ಕಷಾಯ, ಲವಣ-ಈ ಆರು ರಸಭೇದ.

ಅಪಾನವಾಯುವಿಗೆ ಹರಿತವರ್ಣ, ಗುದಸ್ಥಾನ; ಮಲಮೂತ್ರ ವಿಸರ್ಜನ ಕ್ರಿಯೆ.

ಪ್ರಾಣವಾಯುವಿಗೆ ಇಂದ್ರನೀಲವರ್ಣ, ಹೃದಯ ಸ್ಥಾನ; ಅಂಗುಷ್ಠದಿಂದ ಘ್ರಾಣದವರೆಗಿದ್ದು ಶ್ವಾಸೋಚ್ಛ್ವಾಸಕ್ಕೆ ಕಾರಣವಾಗಿ ಅನ್ನವನ್ನು ಜೀರ್ಣ ಮಾಡುವಿಕೆ.

ಇನ್ನು ಅಂತಃಕರಣಗಳಲ್ಲಿನ ಚಿತ್ತಕ್ಕೆ ಪೃಥ್ವಿ ಮಹಾಭೂತ, ಬ್ರಹ್ಮ ಅಧಿದೇವತೆ, ಅಲ್ಲಿ ಸ್ಥಿರದಿಂದ ಅವಧರಿಸಿ ಆನಂದಿಸುವಿಕೆಯೆ ಕ್ರಿಯೆ. ಬುದ್ಧಿಗೆ ಅಪ್ಪು ಮಹಾಭೂತ, ವಿಷ್ಣು ಅಧಿದೇವತೆ, ಅಲ್ಲಿ ಬುದ್ಧಿ ನಿಶ್ಚಯಿಸುವುದೇ ಕ್ರಿಯೆ.

ನಾಡಿಗಳು ಹತ್ತು. ಇಡಾ, ಪಿಂಗಳ, ಸುಷುಮ್ನ, ಗಾಂಧಾರಿ, ಹಸ್ತಿಜಿಹ್ವಾ, ಪೂಷಾ, ಪಯಸ್ವಿನಿ, ಅಲಿಂಬೂ, ಲಕುಹಾ, ಶಂಖಿನಿ ಇವು ಹತ್ತು ನಾಡಿಗಳು. ಇವುಗಳಲಿ ಮೂಗಿನ ಎಡದ ಚಂದ್ರನಾಳವೇ ಇಡಾನಾಡಿ; ಬಲದ ಸೂರ್ಯನಾಳವೇ ಪಿಂಗಳಾನಾಡಿ; ಮಧ್ಯನಾಳವೇ ಸುಷುಮ್ನನಾಡಿ. ಬಲದ ಕಣ್ಣು ಗಾಂಧಾರಿ, ಇಡದ ಕಣ್ಣು ಹಸ್ತಜಿಹ್ವಾ; ಬಲದ ಕಿವಿ ಪೂಷಾನಾಡಿ, ಎಡದ ಕಿವಿ ಪಯಸ್ವಿನೀ

ನಾಡಿ; ಮೇಢ್ರನಾಳವೇ ಅಲಂಬುಸನಾಡಿ, ಗುದನಾಳವೇ ಲಕುಂಹನಾಡಿ, ನಾಭಿನಾಳವೇ ಶಂಖಿನೀನಾಡಿ, ಇವೆಲ್ಲವು ತ್ಯಾಗಾಂಗದಲ್ಲಿರುತ್ತವೆ.

ಒಟ್ಟಾಗಿ ಅಂಗದಲ್ಲಿ ೭೨ ಸಾವಿರ ನಾಡಿಗಳಿವೆ. ಇವುಗಳಲ್ಲಿ ೧೫೦೦ ನಾಡಿಗಳು ಕಾರಣನಾಡಿಗಳು. ಇವುಗಳಲ್ಲಿ ೭೦೦ ಮುಖ್ಯ ನಾಡಿಗಳು ಇವುಗಳಲ್ಲಿ ೧೦೦ ಇನ್ನೂ ಮುಖ್ಯ, ಇವುಗಳಲ್ಲಿ ೫೦ ಮುಖ್ಯ. ಇವುಗಳಲ್ಲಿ ೨೮ ಮುಖ್ಯ. ಇವುಗಳಲ್ಲಿ ೧೦ ನಾಡಿಗಳು ಪ್ರಯೋಜನ ನಾಡಿಗಳು. ಇವುಗಳಲ್ಲಿ ಇಡೀ ಪಿಂಗಳ ಸುಷುಮ್ನ ಎಂಬ ಮೂರು ನಾಡಿಗಳು ಅತ್ಯಂತ ಬೀಜನಾಡಿಗಳು.

ತ್ಯಾಗಾಂಗದಿಂದ ಸಪ್ತಧಾತುಗಳು ಸಂಜನಿಸುತ್ತವೆ. ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ, ರೇತಸ್ಸು ಇವು ಸಪ್ತ ಧಾತುಗಳು. ಇವು ದೇಹದಲ್ಲೆಲ್ಲಾ ವ್ಯಾಪಿಸಿರುತ್ತವೆ. ಇವೆಲ್ಲವು ಅನ್ನದಿಂದಾಗುತ್ತವೆ. ಉಂಡ ಅನ್ನ ಏಳು ದಿನಕ್ಕೆ ರಸವಾಗುತ್ತದೆ. ಆ ರಸ ಮತ್ತೇಳು ದಿನಕ್ಕೆ ರಕ್ತವಾಗುತ್ತದೆ. ಆ ರಕ್ತ ಬಳಿಕ ಏಳು ದಿನಕ್ಕೆ ಮಾಂಸವಾಗುತ್ತದೆ, ಆ ಮಾಂಸ ಮತ್ತೇಳು ದಿನಕ್ಕೆ ಮೇದಸ್ಸಾಗುತ್ತದೆ. ಆ ಮೇಧಸ್ಸು ಮತ್ತೇಳು ದಿನಕ್ಕೆ ಮೂಳೆಯಾಗುತ್ತದೆ. ಆ ಮೂಳೆ ಮರಳಿ ಏಳು ದಿನಕ್ಕೆ ಮಜ್ಜೆಯಾಗುತ್ತದೆ. ಆ ಮಜ್ಜೆ ಮತ್ತೇಳು ದಿನಕ್ಕೆ ಶುಕ್ಲವಾಗುತ್ತದೆ. ಈ ಸಪ್ತಧಾತುಗಳ ವರ್ಣಾಂಶಿಕ ಭೇದ, ತನುಚೇಷ್ಟೆಗಳ ವಿವರವನ್ನು ಚನ್ನಬಸವಣ್ಣನವರ ಕರಣಹಸಿಗೆಯಲ್ಲಿ ಹೀಗೆ ಹೇಳಲಾಗಿದೆ. "ರಸಕ್ಕೆ ಕಪಿಲವರ್ಣದ ಧಾತು, ಪೃಥ್ವಿಯಂಶಿಕ; ದೇಹವನಲುಕಿಸುತ್ತಿಹುದು. ರುಧಿರಕ್ಕೆ-ನೀಲವರ್ಣದ ಧಾತು, ಅಪ್ಪುವಿನಂಶಿಕ; ಶರೀರನಡುಗಿಸುತ್ತಿಹುದು. ಮಾಂಸಕ್ಕೆ-ರಕ್ತವರ್ಣದ ಧಾತು, ಅಗ್ನಿಯಂಶಿಕ; ಶರೀರವ ಕಳವಳಿಸುತ್ತಿಹುದು. ಮೇಧಸ್ಸಿಗೆ-ಮಾಂಜಿಷ್ಟ ವರ್ಣದ ಧಾತು, ಮಾರುತನಂಶಿಕ; ಶರೀರವ ಬೆದರಿಸುತ್ತಿಹುದು. ಅಸ್ಥಿಗೆ-ಕೃಷ್ಣವರ್ಣದ ಧಾತು, ಆಕಾಶದಂಶಿಕ; ಶರೀರವ ಎತ್ತರತತ್ತರ ಮಾಡಿ ಮರುಳಾಗಿ ನುಡಿಸುತ್ತಿಹುದು. ಮಜ್ಜೆಗೆ-ತಾಮ್ರವರ್ಣದ ಧಾತು, ಸೂರ್ಯನಂಶಿಕ; ಶರೀರವ ಒತ್ತರಿಸಿ ನುಡಿಸುತ್ತಿಹುದು. ಶುಕ್ಲಕ್ಕೆ-ಶ್ವೇತ ವರ್ಣದ ಧಾತು, ಚಂದ್ರನಂಶಿಕ; ಶರೀರವ ಕಂಪಿಸಿ ಕಳವಳಿಸಿ ನುಡಿಸುತ್ತಿಹುದು. ಇಂತಿದು ಸಪ್ತಧಾತುಗಳ ವರ್ಣಾದಿ ವಿವರ."

ಕೂದಲು ಎಲುಬು, ಉಗುರ, ಹಲ್ಲು, ಸಿರಾ, ಸ್ನಾಯು, ಧಮನೀರೇತಸ್ಸು ಇವು ಸ್ಥಿರವಾದವು. ಇವೆಲ್ಲ ತಂದೆಯಿಂದ ಉತ್ಪನ್ನವಾಗುವವು. ಮಾಂಸ, ರಕ್ತ, ಮೇಧಸ್ಸು, ಮಜ್ಜಾ, ಹೃದಯ, ನಾಭಿ, ಯಕೃತ್, ಪ್ಲೀಹ, ಕರುಳು, ಗುದ ಮೊದಲಾದ ಮೃದು ಭಾಗಗಳು ತಾಯಿಯ ಅಂಶದಿಂದ ಉಂಟಾಗು ವವು.

ಷಟ್‌ಸ್ಥಲ ಸಿದ್ಧಾಂತದಲ್ಲಿ ತ್ಯಾಗಾಂಗದ ಜ್ಞಾನ ಮೊದಲಿನದು; ಮಾಡಿ ಕೊಳ್ಳಬೇಕಾದುದು. ಇಲ್ಲವಾದರೆ ಪ್ರಗತಿಗೆ ದಾರಿಯೇ ಇಲ್ಲ. ಇದರಿಂದಾಗಿ 'ಕರಣ ಹಸಿಗೆ'ಗೆ ಪ್ರಧಾನ ಸ್ಥಾನವಿದೆ.

ಪೃಥ್ವ್ಯಂಗದ ಇಪ್ಪತ್ತೈದು ಗುಣಧರ್ಮಗಳಿವು:

"ಸರ್ವಾಧಾರವಾದ ಧರಣೀ ತತ್ತ್ವಕ್ಕೆ ಪಂಚವಿಂಶತಿ ತತ್ತ್ವಂಗಳೇ ಪ್ರಸಿದ್ಧವಾಗಿರುತಿಹವು. ಪೃಥ್ವಿಗೆ ಅಯ, ಶಕಟ, ಮುಸಲಾದಿಗಳ ಸಂಘಟನೆ ಯಿಂದ ಹುಟ್ಟುವ ಗಡಗಡ ಎಂಬ ಶಬ್ದವುಂಟು. ಆ ಶಬ್ದಗುಣವಿದ್ದಲ್ಲಿ ಆಕಾಶ ತತ್ತ್ವವುಂಟು. ಆಕಾಶ ತತ್ತ್ವಸಂಬಂಧವಾದ ರಾಗ ದ್ವೇಷ ಲಜ್ಜೆ ಮೋಹ ಭಯ ಈ ಐದು ಗುಣಗಳುಂಟು. ಮತ್ತಮಾ ಪೃಥ್ವಿಗೆ ಮುಟ್ಟಿದರೆ ಬಿರುಸಾಗಿ ತಟ್ಟುವ ಕಠಿಣ ಸ್ಪರ್ಶನಉಂಟು. ಸ್ಪರ್ಶನಗುಣವಿದ್ದಲ್ಲಿ ವಾಯು ತತ್ತ್ವಉಂಟು; ವಾಯುತತ್ತ್ವ ಸಂಬಂಧವಾದ ಧಾವನ, ಪ್ರಸಾರಣ, ವಲನ, ಚಲನ, (ವಿಯೋಗ) ಆಕುಂಚನ ಈ ಐದು ಗುಣಗಳುಂಟು. ಮತ್ತಮಾ ಪೃಥ್ವಿಗೆ ಸಾಕಾರಮಾದ ರೂಪವುಂಟು. ಆ ರೂಪಗುಣವಿದ್ದಲ್ಲಿ ಅಗ್ನಿತತ್ತ್ವವುಂಟು; ಅಗ್ನಿ ತತ್ತ್ವಸಂಬಂಧವಾದ ಕ್ಷುಧೆ, ತೃಷೆ, ನಿದ್ರೆ, ಆಲಸ್ಯ, ಕಾಂತಿ (ಸಂಗ) ಈ ಐದು ಗುಣಗಳುಂಟು. ಮತ್ತಮಾ ಪೃಥ್ವಿಗೆ ಮಧುರರಸವುಂಟು. ರಸಗುಣ ವಿದ್ದಲ್ಲಿ ಆತಪ್ಪುತ್ತ್ವವುಂಟು; ಅಪ್ಪು ತತ್ತ್ವಸಂಬಂಧವಾದ ಶ್ಲೇಷ್ಮ (ಲಾಲಾರಸ) ಸ್ವೇದ, ಮೂತ್ರ, ಶುಕ್ಲ, ಶೋಣಿತ ಈ ಐದು ಗುಣಗಳುಂಟು. ಮತ್ತಮಾ ಪೃಥ್ವಿಗೆ ಸದ್ಗಂಧವುಂಟು. ಗಂಧಗುಣವಿದ್ದಲ್ಲಿ ಮೂಲಪೃಥ್ವೀ ತತ್ತ್ವವುಂಟು; ಮೂಲಪೃಥ್ವೀ ತತ್ತ್ವಸಂಬಂಧವಾದ ಅಸ್ಥಿ, ಮಾಂಸ, ನಾಡಿ, ಚರ್ಮ, ರೋಮ ಈ ಅಯಿದು ಗುಣಗಳುಂಟು. ಅಂತು ಪೃಥ್ವ್ಯಂಗಕ್ಕೆ ಪಂಚವಿಂಶತಿ ಗುಣಗಳೆಂದೇ ಪ್ರಸಿದ್ಧವಾಗಿರುತಿಹವು.

ಈ ಪೃಥ್ವ್ಯಂಗದ ಅಸ್ಥಿ ಮಾಂಸಾದಿ ಅಯ್ದು ಗುಣಗಳನ್ನು ಬಿಟ್ಟು ಉಳಿದ ಇಪ್ಪತ್ತು ಗುಣಗಳು ಜಲಾಂಗಕ್ಕೆ ಉಂಟು.

ಪೃಥ್ವ್ಯಂಗದಲ್ಲಿ ಆಧಾರ ಚಕ್ರ. ಆ ಆಧಾರಚಕ್ರದ ಸ್ವರೂಪ, ವರ್ತನೆಗಳು ಹೀಗಿವೆ:

"ಆಧಾರ ಚಕ್ರದ ಚತುರ್ದಳ ಪದ್ಮದ ಮಧ್ಯದಲ್ಲಿ ಹ-ಮಂತ್ರ ಸದ್ಯೋಜಾತ, ಆ ಮಂತ್ರದಲ್ಲಿ ವ್ಯೋಮವ್ಯಾಪಿನೇ, ವ್ಯೋಮರೂಪಾಯ, ಸರ್ವವ್ಯಾಪಿನೇ, ಶಿವಾಯ ಎಂಬ ನಾಲ್ಕು ಪದ. ಅಲ್ಲಿ ಅಂದರೆ ಆ ಪದದಲ್ಲಿ ವ-ಶ-ಷ-ಸ ಎಂಬ ನಾಲ್ಕು ವರ್ಣ. ಆ ವರ್ಣಗಳಲ್ಲಿ ಭುವನ, ಅನಾಶ್ರಿತ, ಅನಾದಿ, ಅನಂತ, ವ್ಯೋಮರೂಪ, ವ್ಯಾಪಿನಿ, ಊರ್ಧ್ವಗಾಮಿನಿ, ಮೋಚಿಕ, ರೋಚಿಕಾದ್ರಿ, ಪಿಕೋದಿಪ, ಶಾಂತ್ಯತೀತೆ, ಶಾಂತಿ, ವಿದ್ಯೆ, ಪ್ರತಿಷ್ಠೆ, ನಿವೃತ್ತಿ, ಸದಾಶಿವ, ಅಚಿಂತ್ಯ-ಎಂಬ ಹದಿನಾರು ಭುವನ. ಆ ಭುವನಗಳಲ್ಲಿ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ-ಎಂಬ ಪಂಚತತ್ತ್ವ. ಆ ತತ್ತ್ವಾಧ್ವದಲ್ಲಿ ನಿವೃತ್ತಿ ಕಲೆ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ"

ಈ ರೀತಿ ಆಧಾರದಲ್ಲಿ ಆರು ಅಧ್ವಗಳು ಇರುತ್ತವೆ. ಇದರಂತೆ ಜಲಾಂಗದಲ್ಲಿ ಸ್ವಾಧಿಷ್ಠಾನ ಚಕ್ರ. ಆ ಸ್ವಾಧಿಷ್ಠಾನ ಚಕ್ರದ ಸ್ವರೂಪ ಮತ್ತು ವರ್ತನೆಗಳು ಹೀಗಿವೆ:

"ಅಲ್ಲಿಂದ ಮೇಲೆ ಸ್ವಾಧಿಷ್ಠಾನ ಚಕ್ರದ ಷಡುದಳ ಪದ್ಮದ ಮಧ್ಯದಲ್ಲಿಹ ಮಂತ್ರ ವಾಮದೇವ. ಆ ಮಂತ್ರಾಧ್ವದಲ್ಲಿ ಈಶಾನಮೂರ್ಧಾಯ, ತತ್ಪುರುಷ ವಕ್ತ್ರಾಯ, ಅಘೋರಹೃದಯಾಯ, ವಾಮದೇವ ಗುಹ್ಯಾಯ, ಸದ್ಯೋಜಾತ ಮೂರ್ತಯೇ ಓಂ ನಮೋನಮಃ ಎಂಬ ಆರು ಪದ. ಆ ಪದಾಧ್ವಗಳಲ್ಲಿ ಬ-ಭ-ಮ-ಯ-ರ-ಲ ಎಂಬ ಆರು ವರ್ಣ. ಆ ವರ್ಣಾಧ್ವಗಳಲ್ಲಿ ಸೂಕ್ಷ್ಮ, ವಾಮದೇವ ಸತ್ಯಾನಂದ, ಸರ್ವೇಶ್ವರ, ಶಿವೋತ್ತಮ, ನಿತ್ಯಾನಂದ, ಏಕನೇತ್ರ, ಸದಾನಂದ, ಏಕರುದ್ರ, ನಿಜಾನಂದ, ತ್ರಿಮೂರ್ತಿ, ಶ್ರೀಕಂಠ,ಶಿಖಂಡಿ, ಮಾಮಜ್ಯೇಷ್ಠ, ರೌದ್ರಿ, ಕಲವಿಕರಿಣಿ, ಕಾಳಿ, ಜಲವಿಕರಿಣಿ?, ಸರ್ವಭೂತದಮನಿ, ಬಲಪ್ರಮಥಿನಿ, ಮನೋನ್ಮನಿ, ಅಂಗುಷ್ಠ ಮಂತ್ರ ಭುವನ. ಮಹಾಭುವನ, ಏಕಾಶನ, ಎಂಬ

ಇಪ್ಪತ್ತು ನಾಲ್ಕು ಭುವನ, ಆ ಭುವನಾಧ್ವಗಳಲ್ಲಿ ಶಬ್ದ ಸ್ಪರ್ಶ ರೂಪ ರಸ ಗಂಧ ಎಂಬ ಪಂಚತತ್ತ್ವ. ಆ ಪಂಚತತ್ತ್ವದಲ್ಲಿ ಪ್ರತಿಷ್ಠೆ ಎಂಬ ಕಲೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ."

ಇವು ಸ್ವಾಧಿಷ್ಠಾನ ಚಕ್ರದಲ್ಲಿರುವ ಆರು ಅಧ್ವಗಳು. ಇದರಿಂದ ಪೃಥ್ವ್ಯಂಗ ಜಲಾಂಗಗಳೆರಡರಲ್ಲಿ ಅಂದರೆ ತ್ಯಾಗಾಂಗದಲ್ಲಿ ಷಡಧ್ವಗಳು ಎಷ್ಟೆಷ್ಟಿವೆಯೆಂಬುದು ಅರಿಕೆಯಾಗುತ್ತದೆ

ಆಚಾರೋಪಾವಸ್ಥೆಯು ಪೃಥ್ವ್ಯಂಗನಾದ ಭಕ್ತನದು; ಗುರೂಪಾವಸ್ಥೆಯು ಜಲಾಂಗನಾದ ಮಾಹೇಶ್ವರನದು. ಈ ಉಪಾವಸ್ಥೆಗಾಗಿ ಆ ಪರಶಿವನೇ ಆಚಾರವಾಗಿ ಗುರುವಾಗಿ ಬರುವನು. ಬಂದು ತ್ಯಾಗಾಂಗಕ್ಕೆ ಗುರುಕಾರುಣ್ಯವನ್ನು ಕರುಣಿಸುವನು. ಕರುಣಿಸಿ ಪೂರ್ವಾಶ್ರಯವನ್ನು ಪರಿಹರಿಸುವನು. ಅಂದರೆ ಪ್ರವೃತ್ತಿವರ್ತನೆಯನ್ನು ನಿರಸನ ಮಾಡಿಸುವನು. ಕರಸ್ಥಲಕ್ಕೆ ಕ್ರಿಯಾಲಿಂಗವನ್ನು ಕರುಣಿಸುವನು. ಪ್ರಾಣ ಚಿತ್ತಗಳಲ್ಲಿ ಆಚಾರಲಿಂಗವನ್ನು, ಜಿಹ್ವೆ ಬುದ್ಧಿಗಳಲ್ಲಿ ಗುರುಲಿಂಗವನ್ನು ಪ್ರತಿಷ್ಠಿಸುವನು. ಜಡವಾದ ಪೃಥ್ವಿ ಜಲಗಳನ್ನು ಚಿತ್ಪೃಥ್ವ್ಯಂಗ, ಚಿಜ್ಜಲಾಂಗಗಳನ್ನಾಗಿಸುವನು. ಅಂದರೆ ಭಕ್ತಾಂಗ, ಮಹೇಶ್ವರಾಂಗರನ್ನಾಗಿಸುವನು. ಕ್ರಿಯಾಜ್ಞಾನರೂಪ ಶಕ್ತಿಗಳನ್ನು ನಿವೃತ್ತಿ-ಪ್ರತಿಷ್ಠೆಯೆಂಬ ಕಲೆಗಳನ್ನು ಅನುಗ್ರಹಿಸುವನು. ಶ್ರದ್ಧೆ–ನಿಷ್ಠೆ ಎಂಬ ಭಕ್ತಿಗಳನ್ನು ಸಾಧಿಸಲು ಬೋಧಿಸುವನು. ಚಿತ್ತವನ್ನು ಸುಚಿತ್ತವನ್ನಾಗಿ ಬುದ್ಧಿಯನ್ನು ಸುಬುದ್ಧಿಯನ್ನಾಗಿ ಮಾರ್ಪಡಿಸುವನು. ಅನ್ನಮಯ ಕೋಶವನ್ನು ಪ್ರಸಾದಮಯ ಕಾಯವನ್ನಾಗಿಸುವನು ತಾಮಸ ರಾಜಸಗುಣಗಳನ್ನು ದೂರಮಾಡಿ ಸಾತ್ವಿಕಗುಣಗಳಾದ ಸತ್ಯ, ಜ್ಞಾನ, ತಪಸ್ಸು, ಮೌನ, ಹರ್ಷ, ಕ್ಷಮೆ, ಸಾಹಸ, ಧೈರ್ಯ, ವಿವೇಕ ಎಂಬಿವುಗಳನ್ನು ಅಳವಡಿಸುವನು:

ಆಚಾರಲಿಂಗದಲ್ಲಿ ಶ್ರದ್ಧಾಭಕ್ತಿಯುಳ್ಳ ಭಕ್ತನು, ಗುರುಲಿಂಗದಲ್ಲಿ ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನು ಎಂದೆನಿಸಿಕೊಂಬ ಉಭಯಸ್ಥಲವು ತನುಮನಧನವೆಂಬ ತ್ರಿವಿಧ ಪದಾರ್ಥವನ್ನು ಗುರುಲಿಂಗಜಂಗಮಕ್ಕೆ ಮಾಡುವ ಬುದ್ಧಿಯಿಲ್ಲದೆ ಸಮರ್ಪಣೆಯ ಮಾಡಿ ತನುವೇ ಗುರುವು, ಮನವೆಲಿಂಗ, ಧನವೇ ಜಂಗ

ಮವಾಗಿ ಬೆಳಗುತಿಹುದಾದ ಕಾರಣ ತ್ಯಾಗಾಂಗಸ್ಥಲದ ಬೆಳಗಿನೊಳಗಡಗಿತ್ತು; ಈ ತ್ಯಾಗಾಂಗ ಸ್ಥಲದ ಬೆಳಗೇ ಸತ್ಕ್ರಿಯಾ ಪ್ರಕಾಶದೊಳಗೆ ಅಡಗಿತ್ತು.

ಚಿತ್ತ-ಬುದ್ಧಿ: ಚಿತ್ತ ಭಕ್ತನದು ; ಬುದ್ಧಿ ಮಾಹೇಶ್ವರನದು. ಇದಕ್ಕೆ ಅಂತಃಕರಣಗಳೆಂದು ಹೆಸರು. ಷಟ್‌ಸ್ಥಲದಲ್ಲಿ ಹಸ್ತಗಳೆಂದುಹೆಸರು. ಕಾಮಾಂಗವೆನಿಸಿವೆ. ಚಿತ್ತವು ಅಪಂಚೀಕೃತಪೃಥ್ವಿಯಲ್ಲಿ ಆತ್ಮವು ಸೇರಿ ಕ್ರಿಯಾಶಕ್ತಿಯಿಂದಾಗುತ್ತದೆ. ಬ್ರಹ್ಮಅಧಿದೇವತೆ. ಬುದ್ಧಿ ಅಪಂಚೀಕೃತ ಜಲಭಾಗದಲ್ಲಿ ಆತ್ಮವು ಸೇರಿ ಜ್ಞಾನಶಕ್ತಿಯಿಂದಾಗುತ್ತದೆ; ವಿಷ್ಣು ಅಧಿದೇವತೆ.

ಶ್ರದ್ಧೆಯಿಂದ ಚಿತ್ತ ಸುಚಿತ್ತಹಸ್ತವಾಗುತ್ತದೆ. ಆಚಾರಲಿಂಗವನ್ನು ಆರಾಧಿಸುತ್ತದೆ. ನಿಷ್ಠೆಯಿಂದ ಬುದ್ಧಿ ಸುಬುದ್ಧಿಯಾಗಿ ಗುರುಲಿಂಗವನ್ನು ಆರಾಧಿಸುತ್ತದೆ. ಇದರಿಂದಾಗಿ ಕ್ರಿಯಾಜ್ಞಾನಶಕ್ತಿಗಳು ನಿವೃತ್ತಿ ಪ್ರತಿಷ್ಠಾ ಕಳೆಗಳು ಉಂಟಾಗುತ್ತವೆ. ಆಚಾರಲಿಂಗದ ಅರ್ಚನ–ಧ್ಯಾನಗಳಿಗೆ ನಕಾರವೇ ಮಂತ್ರವಾಗಿ ಚಿತ್ತಕ್ಕೆ ಸಾಧನವಾಗುತ್ತದೆ. ಗುರುಲಿಂಗದ ಅರ್ಚನಧ್ಯಾನಗಳಿಗೆ ಮಕಾರವೇ ಮಂತ್ರವಾಗಿ ಬುದ್ಧಿಗೆ ಸಾಧನವಾಗುತ್ತದೆ. ನಕಾರ ಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಘ್ರಾಣವೇ ಮುಖ. ಮಂಕಾರಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ಜಿಹ್ವೆಯೇ ಮುಖ. ಈ ಮುಖಗಳಿಗೆ ಕ್ರಮವಾಗಿ ಗಂಧ-ರಸಗಳೇ ಪದಾರ್ಥಗಳು. ಮನ ಬಯಸಿ ಘ್ರಾಣ ಆಘ್ರಾಣಿಸಿದುದನ್ನು ಚಿತ್ತ ತನ್ನಲ್ಲಿರಿಸಿಕೊಳ್ಳುತ್ತದೆ, ಅಂತೆಯೇ ಮನ ಹಾರೈಸಿ ಜಿಹ್ವೆ ರುಚಿಸಿದುದನ್ನು ಬುದ್ಧಿ ತನ್ನಲ್ಲಿ ಇಂಬಿಟ್ಟುಕೊಳ್ಳುತ್ತದೆ.

ಚಿತ್ತಬುದ್ಧಿಗಳಿಗೆ ಪರಾಶಕ್ತಿ. "ಮನಸಾದಿಕರಣಂಗಳೈದು ಪರಾಶಕ್ತಿಯ ಸ್ವರೂಪು. ನಿಃಕಲ ಪರಶಿವಗೆ ಅಂಗವಾದ ಪರಾಶಕ್ತಿಯಿಂದಲೆ ಹುಟ್ಟಿ ಪರಾಶಕ್ತಿಯಿಂದಲೇ ಬೆಳೆದು ಪರಾಶಕ್ತಿಯ ಅಧೀನವಿಡಿದು ವರ್ತಿಸಿ ಪರಾಶಕ್ತಿಯಲ್ಲಿಯೇ ಅಡಗಿ ಪರಾಶಕ್ತಿ ತದ್ರೂಪು ತದಾಕಾರವಾಗಿ ಒಪ್ಪುತ್ತಿಹುದು."

ತ್ಯಾಗಾಂಗನಿಷ್ಠವಾದವು ಚಿತ್ತ-ಬುದ್ಧಿಗಳು. ಚಿತ್ತವನ್ನು ನಿರೋಧಿಸದೆ ಕ್ರಿಯಾಚಾರ ಫಲಿಸದು. ಬುದ್ಧಿ ಸ್ಥಿರವಾಗದೆ ಜ್ಞಾನಾಚಾರ ಫಲಿಸದು. ಸ್ಥಿರ ಚಿತ್ತ ಸ್ಥಿರಬುದ್ಧಿ ಇವೆರಡೂ ತ್ಯಾಗಾಂಗನಿಗೆ ತೀರ ಅಗತ್ಯ, ಇವುಗಳಿಂದ ಎಲ್ಲ

ವಿಷಯ ವಿಚಾರಗ್ರಹಣ ಸಾಧ್ಯ. ಚಿತ್ತ-ಬುದ್ಧಿಗಳು ಸಸ್ಯವರ್ಗದಲ್ಲಿಲ್ಲ. ಪ್ರಾಣಿವರ್ಗದಲ್ಲಿ ಸಾಮಾನ್ಯವಾಗಿರುತ್ತವೆ. ಮಾನವವರ್ಗದಲ್ಲಿ ವಿಶೇಷವಾಗಿರುತ್ತವೆ.

"ಔಷಧಿ ವನಸ್ಪತಿಷು ಹಿ ರಸೋ ದೃಶ್ಯತೇ ।ಚಿತ್ತಂ ಪ್ರಾಣಭೃತ್ಸು। ತೇಷು ಹಿ ರಸೋ ದೃಶ್ಯತೇ । ನ ಚಿತ್ತಮಿತರೇಷು । ಪುರುಷೇ ತ್ವೇವ ವಿಸ್ತರಂ । ಸ ಹಿ ಪ್ರಜ್ಞಾನೇನ ಸಂಪನ್ನತಮಃ । ವಿಜ್ಞಾತಂ ವದತಿ । ವಿಜ್ಞಾತಂ ಪಶ್ಯತಿ।"

— ಐತರೇಯ ಆರಣ್ಯಕ.

ಇವೆರಡರಿಂದ ಮಾನವನು ಮುಂದುವರಿಯಲು ಅನುಕೂಲವಾಗಿದೆ. ಇವೆರಡೂ ಮಾನವೀಯತೆಗೆ ನಾಂದಿಯನ್ನು ಹಾಕಿವೆ. ಉಳಿದ ಪ್ರಾಣಿಗಳನ್ನು ಮೀರಿಸಿವೆ. ಮಾಹೇಶ್ವರತ್ವದ ಮಹಾಸ್ಥಿತಿಗೆ ಒಯ್ಯಲು ಶಕ್ತವಾಗಿವೆ. ಚಿತ್ತ-ಬುದ್ಧಿಗಳು ಚಿನ್ನಬಣ್ಣಗಳಿದ್ದಂತೆ! ಇವೆರಡೂ ಸೇರಿ ಒಂದು ಸುವರ್ಣ. ಇವೆರಡರ ನೆರವಿಂದ ಮಾನವನು ಮುಖ್ಯವಾಗಿ ಮಾಹೇಶ್ವರಾಂಗನು ತನ್ನ ವಿಕಾಸಸ್ವರೂಪವನ್ನು ವಿಶಿಷ್ಟಸ್ವಭಾವವನ್ನು ರೂಪಿಸಿಕೊಳ್ಳುತ್ತಾನೆ. ಸ್ವರ್ಣಾಭರಣದಂತೆ ಸರ್ವಧಾರ್ಯನಾಗುತ್ತಾನೆ,

ಘ್ರಾಣ–ಜಿಹ್ವೆ: ಇವೆರಡು, ಜ್ಞಾನೇಂದ್ರಿಯಗಳು. ಇವಕ್ಕೆ ಷಟ್‌ಸ್ಥಲದಲ್ಲಿ ಮುಖಗಳೆಂದುಹೆಸರು. ಇವುಗಳಿಂದ ಗಂಧ–ರಸಪದಾರ್ಥಗಳ ಸ್ವೀಕಾರ. ಇವೆರಡು ಜ್ಞಾನಶಕ್ತಿಯ ಕಾರ್ಯಗಳು. ಸ್ವೀಕರಿಸಿದ ಗಂಧ–ರಸಗಳನ್ನು ಅರಿಯುವುದೇ ಇವುಗಳ ಕ್ರಿಯೆ. ಇವು ವಿದ್ಯಾಂಗವೆನಿಸಿವೆ. ಹೃಷೀಕವೆನಿಸಿವೆ.

ಘ್ರಾಣ ಪೃಥ್ವೀಭೂತಕ್ಕೆ ಭಕ್ತಾಂಗನಿಗೆ ಸಂಬಂಧಿಸಿದೆ.

ಜಿಹ್ವೆ ಜಲಭೂತಕ್ಕೆ ಮಾಹೇಶ್ವರಾಂಗನಿಗೆ ಸಂಬಂಧಿಸಿದೆ.

"ಶ್ರವಣೇಂದ್ರಿಯವೇ ಮೊದಲಾದ ಅರಿವು ರೂಪಾದ ಇಂದ್ರಿಯಂಗಳೈದು ಜ್ಞಾನಶಕ್ತಿಯ ಸ್ವರೂಪು. ನಿಃಕಲ ಪರಶಿವಗೆ ಅಂಗವಾದ ಜ್ಞಾನಶಕ್ತಿಯಿಂದಲೇ ಹುಟ್ಟಿ, ಜ್ಞಾನಶಕ್ತಿಯಿಂದಲೇ ಬೆಳೆದು, ಜ್ಞಾನಶಕ್ತಿಯ ಅಧೀನವಿಡಿದು ವರ್ತಿಸಿ, ಜ್ಞಾನಶಕ್ತಿಯಲ್ಲಿ ಅಡಗಿ, ಆ ಜ್ಞಾನಶಕ್ತಿಯ ತದ್ರೂಪು ತದಾಕಾರವಾಗಿ ಒಪ್ಪುತಿಹವು."

"ಘ್ರಾಣೇಂದ್ರಿಯಕ್ಕೆ ಪೃಥ್ವಿ ಮಹಾಭೂತ. ಅಶ್ವಿನಿ ಅಧಿದೇವತೆ. ಗಂಧ ವಿಷಯ, ಸುಗಂಧ–ದುರ್ಗಂಧ ಇವೆರಡು ಗಂಧಭೇದ.

ಜಿಹ್ವೇಂದ್ರಿಯಕ್ಕೆ ಅಪ್ಪು ಮಹಾಭೂತ. ಅರುಣ ಅಧಿದೇವತೆ. ರಸವಿಷಯ, ಮಧುರ, ಆಮ್ಲ, ತಿಕ್ತ, ಕಟು ಕಷಾಯ ಲವಣ ಇವಾರು ರಸಭೇದ.

ನಾಸಿಕಜ್ಞಾನೇಂದ್ರಿಯಕ್ಕೆ ಪೃಥ್ವಿಭೂತವೇ ಮೂಲಚೈತನ್ಯ. ಪೃಥ್ವಿ ಭೂತವು ನಾಸಿಕೇಂದ್ರಿಯದೊಳಗೆ ವಾಸವಾಗಿರುವ ಕಾಲದಲ್ಲಿ ಗಂಧಗ್ರಹಿಸುವ ಶಕ್ತಿಯುಳ್ಳದಾಗುವುದು.

ಜಿಹ್ವೆಯೆಂಬ ಜ್ಞಾನೇಂದ್ರಿಯಕ್ಕೆ ಅಪ್ಪು ಭೂತವೇ ಮೂಲಚೈತನ್ಯ. ಇದು ಜಿಹ್ವೆಯಲ್ಲಿರುವಾಗ ರುಚಿಯ ಗ್ರಹಿಸುವುದು.

ಪೃಥ್ವಿಜನ್ಯಘ್ರಾಣ; ಜಲಜನ್ಯಜಿಹ್ವೆ: ಆದರಿಂದ ಘ್ರಾಣಗಂಧಾಸ್ವಾದಿ; ಜಿಹ್ವೆ ರಸಾಸ್ವಾದಿ. ಘ್ರಾಣದಿಂದ ಪ್ರಾಣ, ಜಿಹ್ವೆಯಿಂದ ಅಪಾನ ಪೋಷಿತ ವಾಗುತ್ತವೆ ಘ್ರಾಣಕ್ಕೆ ಚಿತ್ತ, ಜಿಹ್ವೆಗೆ ಬುದ್ಧಿ ಸಂಬಂಧವಿದ್ದು ಸಂವೃದ್ಧಿ ಗೊಳ್ಳುತ್ತವೆ.

ಗಂಧವನ್ನು ಅಳೆಯುತ್ತದೆ ಘ್ರಾಣ; ರಸವನ್ನು ತಿಳಿಯುತ್ತದೆ ರಸನ, ಗಂಧದ ಉತ್ತಮ-ಮಧ್ಯಮ ಉತ್ಪತ್ತಿ-ನಾಶ ಇವುಗಳನ್ನು ಅರಿಯುತ್ತದೆ ಮೂಗು ಷಡ್ರುಚಿಗಳ ಹೆಚ್ಚುಕಡಿಮೆಯನ್ನು ಸಮ-ವಿಷಮತೆಗಳನ್ನು ನಿದರ್ಶಿಸುತ್ತದೆ ನಾಲಗೆ. ಗಂಧದಿಂದ ಭಿನ್ನ ಘ್ರಾಣ; ರಸರುಚಿಗೆ ಭಿನ್ನ ರಸನೆ.

ಗುದ-ಗುಹ್ಯ: ಇವೆರಡು ಕರ್ಮೇಂದ್ರಿಯಗಳು. ಇವೆರಡು ಕ್ರಿಯಾ ಶಕ್ತಿಯ ಪರಿಣಾಮಗಳು ; ಅಥವಾ ಕಾರ್ಯಗಳು. ಹೊರಕ್ಕೆ ಬಿಡುವುದೇ ಇವುಗಳ ಕ್ರಿಯೆ. "ವಾಗಿಂದ್ರಿಯವೇ ಮೊದಲಾದ ಕರ್ಮಕ್ರಿಯಾ ರೂಪಮಾದ ಇಂದ್ರಿಯಂಗಳೈದು ಕ್ರಿಯಾಶಕ್ತಿಯ ಸ್ವರೂಪು, ನಿಃಕಲ ಪರಶಿವಗೆ ಅಂಗವಾದ ಕ್ರಿಯಾಶಕ್ತಿಯಿಂದಲೇ ಹುಟ್ಟಿ, ಕ್ರಿಯಾಶಕ್ತಿಯಿಂದಲೇ ಬೆಳೆದು, ಕ್ರಿಯಾಶಕ್ತಿಯ ತದ್ರೂಪು, ತದಾಕಾರವಾಗಿರುತಿಪವು." ಇವು ಕರ್ಮಾಂಗ ವೆನಿಸಿವೆ. ಕ್ರಿಯಾ ಹೃಷೀಕವೆನಿಸಿವೆ. ನೆಲದಿಂದ ಗುದ, ಜಲದಿಂದ ಗುಹ್ಯ ಜನಿಸುತ್ತವೆ.

"ಪಾಯ್ವೇಂದ್ರಿಯಕ್ಕೆ ಪೃಥ್ವಿಭೂತ. ಧನಂಜಯ ವಾಯು. ಬ್ರಹ್ಮ ಅಧಿದೇವತೆ. ಸರ್ಜನ-ವಿಸರ್ಜನ ವಿಷಯ. ಗುಹ್ಯೇಂದ್ರಿಯಕ್ಕೆ ಅಪ್ಪುಭೂತ, ದೇವದತ್ತವಾಯು. ಮೃತ್ಯು ಅಧಿದೇವತೆ. ಆನಂದ-ಅನಾನಂದ ವಿಷಯ.

ಕರ್ಮೇಂದ್ರಿಯಗಳು ಸ್ವತಂತ್ರವಲ್ಲ. ಇವು ಮನಸ್ಸು ವಾಯುಗಳಿಗೆ ಅಧೀನವಾದವುಗಳು. ಗುದೇಂದ್ರಿಯಕ್ಕೆ ದೇವದತ್ತವಾಯು ಮೂಲ ಚೈತನ್ಯ.

ಇದಿರುವಾಗ ಸರ್ಜನಾದಿ ಕಾರ್ಯವನ್ನು ಗುದ ಮಾಡುವುದು. ಅಂತೆಯೇ ಗುಹ್ಯೇಂದ್ರಿಯಕ್ಕೆ ಧನಂಜಯ ವಾಯು ಮೂಲ ಚೈತನ್ಯ. ಇದಿರುವಾಗ ಮೈಥನಕ್ರಿಯೆ ನಡೆಯುವುದು.

ಗುದದಲ್ಲಿ ಆಧಾರಚಕ್ರವಿದೆ, ಕ್ರಿಯಾಶಕ್ತಿಯಿದೆ. ನಿವೃತ್ತಿ ಕಳೆಯಿದೆ. ಆಚಾರಲಿಂಗ ಅಲ್ಲಿ ರೂಪಿತವಾಗುತ್ತದೆ. ಗುಹ್ಯದಲ್ಲಿ ಸ್ವಾಧಿಷ್ಠಾನ ಚಕ್ರವಿದೆ, ಜ್ಞಾನಶಕ್ತಿಯಿದೆ; ಪ್ರತಿಷ್ಠಾ ಕಳೆಯಿದೆ; ಅಲ್ಲಿ ಗುರುಲಿಂಗ ರೂಪಿತವಾಗುತ್ತದೆ.

ಶಿವಾದ್ವೈತ ಸಿದ್ಧಾಂತದಲ್ಲಿ ಮಲತ್ರಯಗಳನ್ನು ಬಿಡುವುದೆ ಗುದಕ್ರಿಯೆ; ಶಿವಾನುಭವಿಗಳ ಸತ್ಸಂಗದಲ್ಲಿ ಆನಂದಿಸುವುದೆ ಗುಹ್ಯಕ್ರಿಯೆ. ಇವುಗಳಿಂದ ಇವೆರಡರ ನಿವೃತ್ತಿ.

ನಕಾರಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಗುದಾಂಗದ ಆಧಾರ ಚಕ್ರವೆ ಪ್ರಣವಪೀಠ. ಅಲ್ಲಿ ತೋರುವ ಹಳದಿ ಬಣ್ಣವೆ ಜ್ಯೋತಿ. ಆ ಲಿಂಗಕ್ಕೆ ಸದ್ಯೋಜಾತವೆ ಮುಖ. ಸುಚಿತ್ತವೆ ಹಸ್ತ. ಸುಗಂಧವೆ ಪ್ರಸಾದ.

ಮಕಾರ ಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಗುಹ್ಯಾಂಗದ ಸ್ವಾಧಿಷ್ಠಾನವೆ ಪ್ರಣವಪೀಠ, ಬಿಳಿಯ ಬಣ್ಣವೆ ಜ್ಯೋತಿ. ವಾಮದೇವವೆ ಮುಖ, ಸುಬುದ್ಧಿಯೆ ಹಸ್ತ. ಸುರಸವೆ ಪ್ರಸಾದ.

ಗಂಧ–ರಸ: ಇವೆರಡು ತನ್ಮಾತ್ರಗಳು, ವಿಷಯಗಳು; ಇವನ್ನು ಷಟ್‌ಸ್ಥಲದಲ್ಲಿ ಪದಾರ್ಥಗಳೆಂದು ಹೇಳುವರು.

ಪೃಥ್ವಿಯಿಂದಾದ ಗಂಧ ಭಕ್ತನಿಗೆ. ಜಲದಿಂದಾದ ರಸ ಮಾಹೇಶ್ವರನಿಗೆ. ಭಕ್ತನ ಘ್ರಾಣಮುಖ ಗಂಧ ಪದಾರ್ಥವನ್ನು ಗ್ರಹಿಸುತ್ತದೆ. ಆಚಾರಲಿಂಗಕ್ಕೆ ಅರ್ಪಿಸಿ ಸುಗಂಧ ಪ್ರಸಾದವನ್ನಾಗಿಸುತ್ತದೆ. ಮಾಹೇಶ್ವರನ ಜಿಹ್ವಾಮುಖ ರಸ ಪದಾರ್ಥವನ್ನು ಗ್ರಹಿಸಿ, ಗುರುಲಿಂಗಕ್ಕೆ ಅರ್ಪಿಸಿ ಸುರಸ ಪ್ರಸಾದನ್ನಾಗಿಸುತ್ತದೆ. ಆಧಾರದಲ್ಲಿ ಚಿತ್ತಗಂಧವನ್ನು ಸ್ವಾಧಿಷ್ಠಾನದಲ್ಲಿ ಬುದ್ಧಿ ರಸವನ್ನು ಸ್ಥಿತಿಗೊಳಿಸುತ್ತವೆ. ಗುದದಿಂದ ಶೇಷವಾದ ಕನಿಷ್ಠವಾದ ಗಂಧಾಂಶ, ಗುಹ್ಯದಿಂದ ಶೇಷವಾದ ಕನಿಷ್ಠವಾದ ರಸಾಂಶ ವಿಸರ್ಜನವಾಗುತ್ತವೆ. ಯೋಗಾಂಗವೆನಿಸಿವೆ.

ಕ್ರಿಯಾ–ಜ್ಞಾನಶಕ್ತಿಗಳಿಂದ ಚಿತ್ತ–ಬುದ್ಧಿಗಳು, ಚಿತ್ತಬುದ್ಧಿಗಳಿಂದ ಗಂಧ ರಸಗಳು ಹುಟ್ಟುವವು. ಇಚ್ಛಾಶಕ್ತಿ ಸ್ವರೂಪವಾಗಿರುವವು. "ಪ್ರಾಣ ಭೂತ ಪಂಚಕಂಗಳಿಗೆ ಮೂಲಕಾರಣವಾದ ಐದು ವಿಷಯಂಗಳು ಇಚ್ಛಾಶಕ್ತಿ

ಸ್ವರೂಪು. ನಿಃಕಲ ಪರಶಿವಗೆ ಅಂಗವಾದ ಇಚ್ಛಾಶಕ್ತಿಯಿಂದಲೆ ಹುಟ್ಟಿ, ಇಚ್ಛಾ ಶಕ್ತಿಯಿಂದಲೇ ಬೆಳೆದು, ಇಚ್ಛಾಶಕ್ತಿಯ ಅಧೀನವಿಡಿದು ವರ್ತಿಸಿ, ಇಚ್ಛಾಶಕ್ತಿ ಯಲ್ಲಿ ಅಡಗಿ, ಇಚ್ಛಾಶಕ್ತಿ ತದ್ರೂಪು ತದಾಕಾರವಾಗಿರುತಿಹವು."

ಗಂಧ ಮತ್ತು ರಸಗಳೆರಡರಿಂದ ದೇಹದ ಪರಿಪುಷ್ಟತೆ, ದೇಹಕಾಂತಿ, ದೇಹಸ್ಥಿತಿ, ಕೊನೆಗೆ ದೇಹಲಯ ಉಂಟಾಗುತ್ತವೆ. ಮತ್ತು ಗಂಧ–ರಸಗಳ ಹಿತಮಿತಸೇವನೆಯಿಂದ ತೃಪ್ತಿ ಸ್ಫೂರ್ತಿ ಉಲ್ಲಾಸ ಉತ್ಸಾಹಗಳು ಉಂಟಾಗು ತ್ತವೆ. ಇವೆರಡರ ವಿಷಮತೆಯಿಂದ ಕೃಶತೆ ಕಫದೋಷಗಳು ಕ್ರಮವಾಗಿ ಉಂಟಾಗುತ್ತವೆ. ಗಂಧವಳಿದ ರಸವಿಲ್ಲದ ಆಹಾರವನ್ನು ಆರೋಗಿಸಬಾರದು. ಅತಿಗಂಧ, ಅತಿರಸ, ನಿಷಿದ್ಧಗಂಧ, ನಿಷಿದ್ಧರಸಗಳನ್ನು ಉಪಯೋಗಿಸಬಾರದು. ಹಿತಮಿತವಾದ ಗಂಧ–ರಸಗಳಿಂದ ಘ್ರಾಣ–ಜಿಹ್ವೆಗಳು ತ್ಯಾಗಾಂಗವು ಹದುಳತೆ ಯಲ್ಲಿ ಇರುತ್ತವೆ. ಇದರಿಂದ ಚಿತ್ತಬುದ್ಧಿಗಳು ಸ್ಥಿರವಾಗಿ ಶಾಂತವಾಗಿರುತ್ತವೆ.

ಗಂಧ–ರಸಗಳ ಪರಿಶುದ್ಧಿಯಿಂದ ಹಿತಮಿತದಿಂದ ಮಲ ಮೂತ್ರಗಳು ಅವಿ ಕಾರ ವಾಗಿರುತ್ತವೆ. ಅಂದರೆ ಅತಿಯಾಗದೆ, ಏನೂ ಆಗದೆ ಇರುವ ವಿಷಮ ಸ್ಥಿತಿ ಇಲ್ಲವಾಗುತ್ತದೆ. ಅಜೀರ್ಣದಿಂದ ಮಲಗೆಡುತ್ತದೆ. ರೂಕ್ಷ ತೀಕ್ಷ್ಣ ಆಹಾರದಿಂದ ನೀರಸ ಆಹಾರದಿಂದ ಉಪವಾಸದಿಂದ ಮಲಬದ್ಧತೆಯುಂಟಾಗು ತ್ತದೆ. ಅಪೇಯಪಾನದಿಂದ ಮೂತ್ರವಿಕಾರವುಂಟಾಗುತ್ತದೆ. ಧಾತು ಪುಷ್ಟಿ ಹಾಳಾಗುತ್ತದೆ. ಇದರಿಂದ ದೇಹಕ್ಕೂ ದೇಹಿಗೂ ತೊಂದರೆಯುಂಟಾಗುತ್ತದೆ.

ದೇಹ–ದೇಹೀ: ಇವನ್ನೇ ಅಂಗ–ಅಂಗಿ ಎಂದು ಹೇಳಬಹುದು. ಇವೆರಡೂ ಸೇರಿ ಶುದ್ಧವಾಗಿ ಪಿಂಡವೆನಿಸುತ್ತದೆ. ಇವೆರಡರ ಜ್ಞಾನ ಅಗತ್ಯ. ಸಾಮಾನ್ಯವಾಗಿ ತ್ಯಾಗಾಂಗ ಭೋಗಾಂಗ ಯೋಗಾಂಗ ಈ ಮೂರನ್ನು ದೇಹ ವೆಂದು ಹೇಳುವುದುಂಟು. ತ್ಯಾಗಾಂಗವೇ ದೇಹ; ಭೋಗಾಂಗ–ಯೋಗಾಂಗ ಗಳೇ ದೇಹೀ ಎಂದು ವಿವೇಚಿಸುವುದುಂಟು. ಇದಕ್ಕೆ ಈ ಪುರಾತನೋಕ್ತಿ ಸಾಕ್ಷಿ ನುಡಿಯುತಿದೆ:

"ಸರ್ವಾಧಾರವಾದ ಧರಣೀ ತತ್ತ್ವವು, ಸರ್ವಪಾನ್ಯ ಪ್ರಕ್ಷಾಳನ ರೂಪ ಮಾದ ಉದಕತತ್ತ್ವಂಗಳೆರಡು ಕೂಡಿ ಸ್ಥೂಲವಾದ ದೇಹವು ಕಾಯ ಸ್ವರೂಪ ವಾಗಿರುತಿಹುದು. ದಾಹಕ ಪಾಚಕ ರೂಪಮಾದ ಧನಂಜಯ ತತ್ತ್ವವು ಸರ್ವ

ಚಾಂಚಲ್ಯಮಯಮಾದ ಸಮೀರ ತತ್ತ್ವವು ಸರ್ವಾವಕಾಶಪ್ರದಮಾದಂಬರ ತತ್ತ್ವವು ಈ ಮೂರು ಕೂಡಿ ಜೀವನು ಜೀವಸ್ವರೂಪನಾಗಿಪ್ಪನು. ಆತ್ಮನು ಘಟದೊಳಗೆ ಜೀವಿಸಿರುವ ಪರ್ಯಂತವೂ ಪಂಚಭೂತಂಗಳು ಕೂಡಿ ಒಂದು ದೇಹ ವೆಂಬಂತೆ ಕಾಣಬರ:ತಿಹವು. ಆತ್ಮನು ಘಟವ ಬಿಟ್ಟುಹೋದ ಬಳಿಕ ಪೃಥ್ವೀ ತತ್ತ್ವ ಸಂಬಂಧವಾದ ಶಲ್ಯಾ (ಅಸ್ಥಿ) ದಿಗಳು, ಅಪ್ಪು ತತ್ತ್ವಸಂಬಂಧವಾದ ಶ್ಲೇಷ್ಮಾದಿಗಳು ಪೃಥ್ವಿಯಲ್ಲಿಯೇ ಉಳಿಯುವವು. ಅಗ್ನಿತತ್ತ್ವಸಂಬಂಧವಾದ ಕ್ಷಂಧಾದಿಗಳು, ವಾಯುತತ್ತ್ವಸಂಬಂಧವಾದ ಚಲನಾದಿಗಳು, ಆಕಾಶ ತತ್ತ್ವ ಸಂಬಂಧವಾದ ರಾಗಾದಿಗಳು ಆತ್ಮನೊಡನ್ಯೈದುತಿಹವು. ಅದು ಕಾರಣವಾಗಿ ಎರಡೇ ಕಾಯಸ್ವರೂಪು; (ಅಂದರೆ ಪೃಥ್ವಿ ಅಪ್ಪು ಈ ಎರಡೇ ಕಾಯಸ್ವರೂಪು,) ಮೂರೇ (ಅಗ್ನಿ ವಾಯು ಆಕಾಶ ಈ ಮೂರು) ಜೀವಸ್ವರೂಪೆಂದು ತಿಳಿದು ಕೊಂಬುದು ತತ್ತ್ವಜ್ಞಾನಿಗಳು."

ಎಂಬುದಾಗಿ "ವಚನ ಶಾಸ್ತ್ರಸಾರ" ಭಾಗ-೨ರ ಪುಟ-೧೧೨ರಲ್ಲಿ ಈ ವಚನ ಉಲ್ಲಿಖಿತವಾಗಿದೆ.

ಪಂಚಭೂತ ಪಂಚಪ್ರಾಣ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಅಂತಃಕರಣಚತುಷ್ಟಯ-ಈ ಇಪ್ಪತ್ತುನಾಲ್ಕು ತತ್ತ್ವವೇ ದೇಹ: ಆತ್ಮವೇ ದೇಹೀ-ಎಂದು ಹೇಳುವುದಕ್ಕೂ ಇದಕ್ಕೂ ಇರುವ ಭೇದವನ್ನು ತಿಳಿಯ ಬೇಕು.

ಇವೆರಡರಿಂದ ಹನ್ನೊಂದಿಂದ್ರಿಯಗಳು, ಜ್ಞಾನ, ವಿಜ್ಞಾನ, ಆಯುಷ್ಯ, ಸುಖ, ದುಃಖ, ಇವೆಲ್ಲವು ಜನಿಸುತ್ತವೆ. ಮಿಗಿಲಾಗಿ ದೇಹಿಯಿಂದ ಜನಿಸುತ್ತವೆ.

ಪೃಥ್ವ್ಯಂಗ ಜಲಾಂಗಗಳ ಉಪಸಂಹಾರ ಹೀಗಿದೆ ; "...ಜಲವು ತಾನೇ ಪೃಥ್ವೀ ಸ್ವರೂಪಮಾಗಿ ಬಲಿದು ಆ ಪೃಥ್ವಿಯನ್ನೇ ತನಗಾಧಾರವ ಮಾಡಿ ಕೊಂಡು, ತಾನೇ ಪೃಥ್ವಿಗೆ ಆಧಾರಮಾಗಿ ಪೃಥ್ವಿಯಂ ಪರಿವೇಷ್ಟಿಸಿರ್ಪ ಜಲವೇ ಪತಿಯಾಗಿ, ಪೃಥ್ವಿಯಲ್ಲಿ ಪರಿವ ಜಲವೇ ಸತಿಯಾಗಿರ್ಪ ಆ ಜಲಬಂಧದಿಂ ಕುಡ್ಯ ಸೌಧ ಗೃಹಾದಿ ನಾನಾ ಸ್ವರೂಪಂಗಳಾಗಿ ನಿಂತು, ತನ್ನಲ್ಲಿರ್ಪ ಜಲವು ಆರಿ ಹೋಗಲು, ಆ ಸೃಷ್ಟಿಶಕ್ತಿಯಿಂ ತಾಂ ಗಟ್ಟಿಗೊಂಡು, ಜೀವರಿಗೆ ಜಲಹಿಂಸೆ ಯಂ ನಿವಾರಣ ಮಾಡುತ್ತಾ, ಆ ಜಲದಿಂದಲೇ ತಾನು ಲಯುವನ್ನೈದುತ್ತಿರ್ಪುದು. 'ಪೃಥ್ವಿಯು ಆ ಜಲದಿಂದಲೇ ಪೂತಮಾಗಿ, ಅದರಿಂದಲೇ ಪೆರ್ಚಿ, ಅದ

ರಿಂದಲೇ ಲಯಮಂ ಹೊಂದುವುದು.' ಇಲ್ಲಿ ಪೃಥ್ವಿಲಯವೆಂದರೆ ಜಲದಲ್ಲಿ ಅವ್ಯಕ್ತವಾಗಿ ಲೀನವಾಗುವಿಕೆ, ಜಲಲಯವೆಂದರೆ ಅಗ್ನಿಯಲ್ಲಿ ಅಂತರ್ಲೀನವಾಗುವಿಕೆ. 'ಪೃಥ್ವಿಯು ಲಯಮಪ್ಪಲ್ಲಿ ಕರ್ಮವು ನಷ್ಟವಪ್ಪುದು. ಪೃಥ್ವೀ ನಷ್ಟವೇ ಬ್ರಹ್ಮನ ಲಯವು, ಜಲ ನಷ್ಟವೇ ವಿಷ್ಣುವಿನ ಲಯವು. ಅಂತಪ್ಪ ವಿಷ್ಣುವಿನ ಮಾಯೆಯನಳಿದ ನಿರ್ಮಲಾತ್ಮನೇ ಮಹಾಲಿಂಗವು. ಅಂತಪ್ಪ ಮಹಾಲಿಂಗದಲ್ಲಿ ಜೀವ ಮೂಲ ದೇಹವಾಲಗಳಾಗಿರ್ಪ ಜಲವಾಯುಗಳ ಸುಳುಹಡಗಿ ನಾಹಂ ಭ್ರಮೆಯು ಉಡುಗಿರ್ಪುದೇ ಲಿಂಗೈಕ್ಯಕಾಣಾ ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ !"

ಅಂತೆಯೇ ವ್ಯಷ್ಟಿಯಲ್ಲಿ ಗುರುಕರುಣಾಜಲದಲ್ಲಿ ಶಿಷ್ಯನ ಅಥವಾ ಭಕ್ತನ ಪೃಥ್ವ್ಯಂಗವು ಗುರುವಿನ ಜ್ಞಾನಾಗ್ನಿಯಲ್ಲಿ ಜಲಾಂಗವು ಅವ್ಯಕ್ತವಾಗುವವು. ಅಂದರೆ ಗುರುತಂತ್ರದಿಂದ ಭಕ್ತಕ್ಷೇತ್ರದಲ್ಲಿರುವ ಅಸ್ಥಿಯೇ ಅನರ್ಘ್ಯ ಹಿರಣ್ಯವಾಗುವುದು ಹಿರಣ್ಯವೆಂದರೆ ಹಿರಣ್ಮಯ ಪುರುಷವೆಂದರ್ಥ. ಮಾಂಸವೇ ಮಂತ್ರವಾಗುವುದು. ನಾಡಿಯೇ ಸೂತ್ರವಾಗುವುದು. ಚರ್ಮವೇ ಹಸ್ತವಾಗುವುದು. ರೋಮಗಳೇ ಕುಸುಮಗಳಾಗುವವು. ಶುಕ್ಲವೇ ಕ್ಷೀರವಾಗುವುದು. ಹೀಗಾಗಿ ಸದ್ರೂಪ ಶಿವಲಿಂಗಾರಾಧನೆ ಸಾಗುವುದು. ಸಲ್ಲಿಂಗದಲ್ಲಿ ಭಕ್ತಮಾಹೇಶ್ವರಾಂಗಗಳು ತಲ್ಲೀನವಾಗುವವು. ಅಂದರೆ ಪರಮ ಶಾಂತಿಯು ತ್ಯಾಗಾಂಗದಲ್ಲಿ ತುಂಬಿಕೊಳ್ಳುವುದು. ನಿವೃತ್ತಿ ಪ್ರತಿಷ್ಠೆಗೊಳ್ಳುವುದು. ಕ್ರಿಯಾಲಿಂಗದಲ್ಲಿ ತ್ಯಾಗಾಂಗ ಸದಾಕಾಲ ಸನ್ನಿಹಿತವಾಗಿ ತನ್ನ ತಾ ಮರೆಯುವುದು.

# ತ್ಯಾಗಾಂಗ—ಕ್ರಿಯಾಲಿಂಗ

ಈ ಮಾಹೇಶ್ವರಸ್ಥಲ ನಿರೂಪಣದಿಂದ ತ್ರಯಾಂಗಗಳಲ್ಲಿ ತ್ಯಾಗಾಂಗ ನಿರೂಪಣೆ ನಿಷ್ಪತ್ತಿಗೊಳ್ಳುತ್ತದೆ. ಇದರಿಂದಾಗಿ ತ್ಯಾಗಾಂಗ ಕ್ರಿಯಾಲಿಂಗಗಳ ಇಡಿನೋಟವನ್ನು ಬೀಜರೂಪದಲ್ಲಿ ರೂಪಿಸುವುದು ಸೂಕ್ತ ಹಾಗು ಸಕ್ರಮ.

ಈ ಸಲ ತನುವನ್ನು ಕ್ರಿಯಾದೀಕ್ಷೆಯಿಂದ ತ್ಯಾಗಾಂಗವನ್ನಾಗಿಸಿ ಈ ಸ್ಥೂಲದೇಹಾವಿಷ್ಟನ್ನ ಚೈತನ್ಯವನ್ನು ಕ್ರಿಯಾಲಿಂಗವನ್ನಾಗಿಸಿ ಅನುಗ್ರಹಿಸುವನು ಶ್ರೀ ಗುರು. ಸ್ಥೂಲದೇಹ ಪ್ರಾಕೃತ ಸೃಷ್ಟಿ. ತ್ಯಾಗಾಂಗ ಅಪ್ರಾಕೃತ ಸೃಷ್ಟಿ. ಪ್ರಾಕೃತ ಬ್ರಹ್ಮಸೃಷ್ಟಿ. ಅಪ್ರಾಕೃತ ಶ್ರೀಗುರುಸೃಷ್ಟಿ. ಪ್ರಕೃತಿ ಸಂಸ್ಕಾರದಿಂದಾದುದು ಸ್ಥೂಲದೇಹ. ಪರಮಗುರುವಿನ ಸಂಸ್ಕಾರದಿಂದಾದುದು ತ್ಯಾಗಾಂಗ; ಮತ್ತು ಕ್ರಿಯಾಲಿಂಗ.

ಶಕ್ತಿ ಸ್ವರೂಪವಾದುದು ಅಂಗ; ಶಿವಸ್ವರೂಪವಾದುದು ಲಿಂಗ. ಪೂಜಕ ಪೂಜ್ಯಭಾವ ಪರಿವಿಡಿದು ಅಂಗ ಲಿಂಗಗಳಿಗುಂಟು.

ಪಂಚಭೂತಾತ್ಮಕವಾದ ಅಥವಾ ಅಷ್ಟಮೂರ್ತಿಸ್ವರೂಪವಾದ ಈ ಸೃಷ್ಟಿ ಭೋಜ್ಯವೆನಿಸಿದೆ. ಇದು ಅತ್ಯಂತ ತಾಮಸಗುಣದಿಂದ ಕೂಡಿದೆ. ಅತ್ಯಂತ ಗೂಢ ಚೈತನ್ಯವುಳ್ಳುದಾಗಿದೆ. ಆದ್ದರಿಂದ ಇದನ್ನು ಜಡವೆಂದು ಗೂಢವೆಂದು (ಅವ್ಯಕ್ತವೆಂದು) ಹೇಳುವರು.

ನೆಲ ಜಲ ಈ ಎರಡು ಭೂತಗಳ ಪರಿಣಾಮವೇ ಸ್ಥೂಲದೇಹ. ಇದು ತಾಮಸಗುಣ, ಕಾರ್ಮಿಕಮಲಗಳಿಂದ ವಿಶಿಷ್ಟ. ಪೃಥ್ವಿಯಿಂದ ಅಸ್ಥಿ, ಮಾಂಸ, ನಾಡಿ, ಚರ್ಮ, ರೋಮಗಳಾಗಿವೆ. ಅಪ್ಪುವಿನಿಂದ ರಕ್ತ, ಶುಕ್ಲ, ಮೂತ್ರ, ಬೆವರು, ಲಾಲಾರಸ ಅಂದರೆ ಜೊಲ್ಲು ಆಗಿವೆ. ಇವುಗಳಲ್ಲಿ ಅಸ್ಥಿ ಕೇವಲ ಪೃಥ್ವಿಯೊಂದರ ಅಂಶ. ಮಾಂಸ ನೆಲದಲ್ಲಿ ಜಲಾಂಶ ಕೂಡಿ ಆದ ಅಂಶ. ನಾಡಿ ಪೃಥ್ವಿಯಲ್ಲಿ ತೇಜಾಂಶ ಸೇರಿ ಆದುದು. ಚರ್ಮ ಪೃಥ್ವಿಯಲ್ಲಿ ವಾಯ್ವಂಶ

ಸಂಬಂಧವಾಗಿ ಆದುದು. ರೋಮ ಪೃಥ್ವಿಯಲ್ಲಿ ಆಕಾಶಾಂಶ ಕೂಡಿ ಆದ ಅಂಶ. ಇದರಿಂದಾಗಿ ಅಸ್ಥಿ ನೆಲದಂತೆ ಕಠಿಣವಾಗಿ, ಮಾಂಸ ಜಲದಂತೆ ತೇವವಾಗಿ ನಾಡಿ ಬೆಂಕಿಯಂತೆ ಬಿಸಿಯಾಗಿ, ಚರ್ಮ ಗಾಳಿಯಂತೆ ಶೀತೋಷ್ಣವಾಗಿ, ರೋಮ ಆಕಾಶದಂತೆ ವ್ಯಾಪಕವಾಗಿ ಇರುತ್ತವೆ. ಇನ್ನು ರಕ್ತ ನೀರೊಂದರ ಅಂಶ. ಶುಕ್ಲ ನೆಲದಿಂದ ಕೂಡಿದ ನೀರಿನಂಶ. ಮೂತ್ರ ಬೆಂಕಿಯಿಂದ ಬೆರೆತ ನೀರಿನಂಶ. ಬೆಮರು ಗಾಳಿಯೊಂದೊಡಗೂಡಿದ ನೀರಿನಂಶ. ಜೊಲ್ಲು ಮುಗಿಲುಗೂಡಿದ ನೀರಿನಂಶ. ರಕ್ತ ನೀರಾಗಿ ನಿರ್ಗಂಧವಾಗಿ ನೀರಿನಂತಿರುತ್ತದೆ. ಶುಕ್ರ ಗಟ್ಟಿಯಾಗಿ ಗಂಧಯುಕ್ತವಾಗಿ ನೆಲದಂತಿರುತ್ತದೆ. ಮೂತ್ರ ಬೆಂಕಿಯಂತೆ ಬಿಸಿಯಾಗಿರುತ್ತದೆ. ಬೆಮರು ಶ್ರಮರೂಪಚಲನದಿಂದಾಗಿ ವಾಯ್ವಂಶವೆನಿಸಿದೆ. ಜೊಲ್ಲು ಊರ್ಧ್ವಮುಖಿಯಾಗಿ ಆಕಾಶಾಂಶವೆನಿಸಿದೆ. ಈ ಹತ್ತು ಸೇರಿರುವುದು ಸ್ಥೂಲಾಂಗ. ಈ ಹತ್ತು ಸ್ಥೂಲಾಂಗ ಕಾರ್ಯ. ಇವುಗಳಲ್ಲಿ ಕಾರ್ಮಿಕಮಲ ದೋಷವಿರುತ್ತದೆ. ಏಕೆಂದರೆ ಇವೆಲ್ಲ ಕರ್ಮದಿಂದ ರೂಪಿತವಾಗುತ್ತವೆ. ಜಡ ಕರ್ಮಗಳಿಂದ ಕಾಮ್ಯ ಮತ್ತು ನಿಷಿದ್ಧಕರ್ಮಗಳಿಂದ ರೂಪಿತವಾದಾಗ ಇವು ದೋಷಯುಕ್ತವಾಗುತ್ತವೆ. ಇವುಗಳಿಂದಾಗಿ ಸ್ಥೂಲತನು ದೋಷದೂಷಿತವಾಗುತ್ತದೆ. ಆದ್ದರಿಂದ ಶ್ರೀಗುರು ಕ್ರಿಯಾದೀಕ್ಷೆಯನ್ನು ಅನುಗ್ರಹಿಸಿ ಅರ್ಚನ ರೂಪ ಸತ್ಕ್ರಿಯೆಯನ್ನು ಬೋಧಿಸಿ ಅಳವಡಿಸಿ ಸ್ಥೂಲಾಂಗವನ್ನು ತ್ಯಾಗಾಂಗವನ್ನಾಗಿಸುತ್ತಾನೆ. ಅಂದರೆ ಕಾಮ್ಯ ನಿಷಿದ್ಧಾದಿ ಕರ್ಮಗಳನ್ನು ಬಿಡಿಸಿ ಲಿಂಗಾರ್ಚನ, ಲಿಂಗಾರ್ಚನಕ್ಕಾಗಿ ಸತ್ಯಶುದ್ಧ ಕಾಯಕಗಳನ್ನು ಹಿಡಿಸಿ ಶುದ್ಧವನ್ನಾಗಿಸುತ್ತಾನೆ. ಸತ್ಯಸಾಧನೆಗೆ ತಕ್ಕುದನ್ನಾಗಿಸುತ್ತಾನೆ. ಲಿಂಗಾರ್ಚನೆಗಾಗಿಯೇ ತನ್ನನ್ನು ಸರ್ವಾತ್ಮವಾಗಿ ಅರ್ಪಿಸಿ ತ್ಯಾಗಾಂಗವೆಂಬ ಅನ್ವರ್ಥನಾಮವನ್ನು ತೊಡುತ್ತದೆ.

ಈ ತ್ಯಾಗಾಂಗವೇ ಭಕ್ತ ಮಾಹೇಶ್ವರ ಎಂದು ಎರಡು ಬಗೆಯಾಗುತ್ತದೆ. ತ್ಯಾಗಾಂಗದ ಪೃಥ್ವ್ಯಂಗವೇ ಪರಿಶುದ್ಧವಾಗಿ ಭಕ್ತಾಂಗ ವಾಗುತ್ತದೆ. ತ್ಯಾಗಾಂಗದ ಜಲಾಂಗವೇ ಪರಿಶುದ್ಧವಾಗಿ ಮಾಹೇಶ್ವರಾಂಗ ವಾಗುತ್ತದೆ. ಇವೆರಡೊಂದಾದುದೇ ತ್ಯಾಗಾಂಗ. ತನುಗುಣವಳಿದುದೇ ತ್ಯಾಗಾಂಗ. ಇಷ್ಟಲಿಂಗದ ಅರ್ಚನೆಯ ಮಾಡುವ ಶಕ್ತಿ ಭಕ್ತಿಯುಳ್ಳುದೇ ತ್ಯಾಗಾಂಗ. ಸ್ಥೂಲತನು ಧರ್ಮ ಗುಣಗಳನ್ನೆಲ್ಲ ದೂರಮಾಡಿದುದೇ ತ್ಯಾಗಾಂಗ. ಅನ್ನವೆಂಬ ಅಭಿಪ್ರಾಯವನ್ನು ಅಲ್ಲಗಳೆದು ಪ್ರಸಾದವೆಂಬ ಭಾವ ಬಲಿದು ಪ್ರಸಾದವನ್ನೆ ಆರೋಗಿಸಿ ಪ್ರಸಾದ

ಕಾಯವಾದುದೇ ತ್ಯಾಗಾಂಗ. ಅಸ್ಥಿ ಮಾಂಸಾದಿಗಳನ್ನು ರಕ್ತ ಶುಕ್ಲಾದಿಗಳನ್ನು ಮಂತ್ರಮಯವಾಗಿಸಿಕೊಂಡುದೇ ತ್ಯಾಗಾಂಗ.

ಈ ತ್ಯಾಗಾಂಗಕ್ಕೆ ತತ್ತ್ವ ಅಥವಾ ಅಧಿದೇವತೆ ಬ್ರಹ್ಮ. ಇದರ ಕಾರ್ಯ ಉತ್ಪತ್ತಿ. ಇದರ ಅವಸ್ಥೆ ಜಾಗ್ರತ್. ಇಲ್ಲಿರುವವನು ವಿಶ್ವಾತ್ಮ. ಸ್ಥಾನ ನೇತ್ರ. ಗುಣ ಸತ್ವ. ಈ ತ್ಯಾಗಾಂಗವನ್ನು ಜೀವಾತ್ಮ ಸ್ಥಲವೆಂದು ಹೇಳುವುದುಂಟು.

ತ್ಯಾಗಾಂಗದ ಮೊದಲಿನ ಭೇದವಾದ ಭಕ್ತಾಂಗವು ಗುರುಭಕ್ತ, ಲಿಂಗಭಕ್ತ, ಜಂಗಮಭಕ್ತ ಎಂದು ಮೂರು ಬಗೆಯಾಗುತ್ತದೆ. ತನುಕ್ರಿಯೆಗಳನ್ನು ಗುರುವಿಗರ್ಪಿಸಿ ಗುರುಭಕ್ತ, ಮನಕ್ರಿಯೆಗಳನ್ನು ಲಿಂಗಕ್ಕರ್ಪಿಸಿ ಲಿಂಗಬಕ್ತ, ಭಾವಕ್ರಿಯೆಗಳನ್ನು ಜಂಗಮಕ್ಕರ್ಪಿಸಿ ಜಂಗಮ ಭಕ್ತ ಎಂದು ಹೇಳಿಸಿಕೊಳ್ಳುತ್ತಾನೆ. ಗುರುಭಕ್ತ ಸ್ಥಲ-ಪಿಂಡ, ಪಿಂಡಜ್ಞಾನ, ಸಂಸಾರಹೇಯ, ಗುರುಕರುಣ, ಲಿಂಗಾಧಾರಣ ಎಂಬುದಾಗಿ ಆಯ್ದು ಉಪಸ್ಥಲಗಳಿಂದ ಕೂಡಿರುತ್ತದೆ. ಇವುಗಳ ಉಪಾಸನೆಯಿಂದ ಗುರುಭಕ್ತಿ ಉಂಟಾಗುತ್ತದೆ. ಲಿಂಗಭಕ್ತಸ್ಥಲ ವಿಭೂತಿಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರಿಜಪ, ಭಕ್ತಮಾರ್ಗಕ್ರಿಯಾ, ಉಭಯಸ್ಥಲ ಎಂದು ಅಯ್ದು ಉಪಸ್ಥಲಗಳಿಂದ ಕೂಡಿರುತ್ತದೆ. ಇವುಗಳ ಉಪಾಸನೆಯಿಂದ ಲಿಂಗಭಕ್ತಿ ಸಂಭವಿಸುತ್ತದೆ. ಜಂಗಮ ಭಕ್ತಸ್ಥಲ-ತ್ರಿವಿಧ ಸಂಪತ್ತಿ, ಚತುರ್ವಿಧ ಸಾರಾಯ, ಉಪಾಧಿದಾನ, ನಿರುಪಾಧಿದಾನ, ಸಹಜದಾನ ಎಂದು ಅಯ್ದು ಉಪಸ್ಥಲಗಳಿಂದ ಕೂಡಿರುತ್ತದೆ. ಇವುಗಳ ಉಪಾಸನೆಯಿಂದ ಜಂಗಮಭಕ್ತಿ. ಒಟ್ಟಾಗಿ ೩-೧೫ ಉಪಸ್ಥಲಗಳಿಂದ ಕೂಡಿ ಭಕ್ತಾಂಗಸ್ಥಲವೆನಿಸುತ್ತದೆ.

ಇನ್ನು ತ್ಯಾಗಾಂಗದ ಎರಡನೆಯ ಎಸಳಾದ ಮಾಹೇಶ್ವರಾಂಗವು ಇಹವೀರ, ಪರ ವೀರ, ಸಹಜ (ಲಿಂಗ) ವೀರ ಎಂದು ಮೂರು ತೆರನಾಗುತ್ತದೆ. ಮರ್ತ್ಯ ಲೋಕದ ಮಹಾಗಣಂಗಳು ಮೆಚ್ಚುವಂತೆ-ವರ್ತಿಸುವವನೇ ಇಹವೀರ. ದೇವ ಲೋಕದ ದೇವಗಣಂಗಳು ಮೆಚ್ಚುವಂತೆ ಬಾಳುವವನು ಪರವೀರ. ಇಹಪರಗಳ ಹಂಗಿಲ್ಲದೆ ಸರ್ವಕರಣಗಳನ್ನು ಲಿಂಗಕ್ಕರ್ಪಿಸಿ ಕಾಮ ನಿಷ್ಕಾಮಗಳಿಂದ ದೂರನಾಗಿ ಇರುವವನೇ ಸಹಜವೀರ ಅಥವಾ ಲಿಂಗವೀರ. ಇವುಗಳಲ್ಲಿ ಇಹವೀರ ಸ್ಥಲವು ಮಾಹೇಶ್ವರಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯನಿರಸನಸ್ಥಲಗಳಿಂದ

ಕೂಡಿರುತ್ತದೆ. ಇವುಗಳಿಂದ ಇಹವೀರತ್ವ ವುಂಟಾಗುತ್ತದೆ. ಪರವೀರಸ್ಥಲವು ವಾಗದ್ವೈತ ನಿರಸನ, ಆಹ್ವಾನ ವಿಸರ್ಜನ ನಿರಸನ, ಅಷ್ಟ ತನುಮೂರ್ತಿ ನಿರಸನ ಸ್ಥಲಗಳಿಂದ ಕೂಡಿರುತ್ತದೆ. ಇವುಗಳಿಂದ ಪರವೀರತ್ವವುಂಟಾಗುತ್ತದೆ. ಸಹಜ ವೀರ ಸ್ಥಲವು ಸರ್ವಗತತ್ವ ನಿರಸನ, ಶಿವಜಗನ್ಮಯ, ಭಕ್ತದೇಹಿಕಲಿಂಗ ಸ್ಥಲ ಗಳಿಂದ ಕೂಡಿರುತ್ತದೆ. ಇವುಗಳಿಂದ ಸಹಜವೀರತ್ವ—ವುಂಟಾಗುತ್ತದೆ. ಒಟ್ಟಾಗಿ ಮಾಹೇಶ್ವರ ಸ್ಥಲವು ಹನ್ನೆರಡು ಅಂದರೆ ೩-೪ ಉಪಸ್ಥಲಗಳಿಂದ ಕೂಡಿರುತ್ತದೆ.

ಲಿಂಗವಿಡಿದ ತನು ಅಂಗವೆನಿಸುತ್ತದೆ ಆ ಆ ಲಿಂಗಕಳೆಗಳನ್ನು ಮೈಗೂಡಿಸು ಕೊಳ್ಳುವುದೇ ಅಂಗವಿಕಾಸ ಆಚಾರ, ವಿಚಾರ, ಗುರು, ಚರ, ಪ್ರಸಾದಗಳೇ ವೀರಶೈವರಲ್ಲಿ ಲಿಂಗಗಳಾಗಿರುತ್ತವೆ. ಇವನ್ನು ಅಂಗವಿಸಿಕೊಳ್ಳುವುದೇ ಅಂಗದ ಪ್ರಗತಿ. ಈ ದಿಸೆಯಲ್ಲಿ ಮೊದಲನೆಯದಾದ ಭಕ್ತಾಂಗವು ಆಚಾರವಿಡಿದು ಆಚಾರಾಂಗವೆಂದು, ಗುರುವಿಡಿದು ಗೌರವಾಂಗವೆಂದು. ಶಿವವಿಡಿದು ಶಿವಾಂಗ ವೆಂದು, ಚರವಿಡಿದು ಚರಾಂಗವೆಂದು, ಪ್ರಸಾದವಿಡಿದು ಪ್ರಸಾದಾಂಗವೆಂದು, ಮಹವಿಡಿದು ಮಹದಂಗವೆಂದು ಹೇಳಿಸಿಕೊಳ್ಳುತ್ತದೆ. ಆಚಾರಾದಿಗಳು ಲಿಂಗ ಗಳೆಂಬುದನ್ನು ಓದುಗರು ನೆನೆಯಬೇಕು. ಇದರಂತೆ ಎರಡನೆಯದಾದ ಮಾಹೇ ಶ್ವರಾಂಗವು ಮುಖ್ಯವಾಗಿ ನಿಷ್ಠೆಯ ಮುಖಾಂತರ ಮುಂದುವರಿಯುತ್ತದೆ. ಇದರಿಂದಾಗಿ ಆಚಾರನಿಷ್ಠೆ, ಗುರುನಿಷ್ಠೆ, ಲಿಂಗನಿಷ್ಠೆ, ಚರನಿಷ್ಠೆ, ಪ್ರಸಾದನಿಷ್ಠೆ, ಮಹನ್ನಿಷ್ಠೆ ಎಂದು ಅರು ಬಗೆಯಾಗುತ್ತದೆ. ಈ ಹನ್ನೆರಡು ಪ್ರಗತಿಪರ ಅಂಗ ಗಳಿಂದ ತ್ಯಾಗಾಂಗವು ತತ್ತ್ವಮಯವಾಗುತ್ತದೆ; ಲಿಂಗಸ್ವರೂಪವಾಗುತ್ತದೆ.

ಆ ನಿಃಕಲ ಶಿವತತ್ತ್ವದಲ್ಲಿ ಶಕ್ತಿಯ ಚಲನವಾಗಿ ಅಂಗ-ಲಿಂಗವೆಂದು ಎರ ಡಾಗಿ ಉಪಾಸಕ ಉಪಾಸ್ಯ ಭಾವವುಳ್ಳವಾಗಿವೆ. ಆದ ಬಗೆಯನ್ನು ಮುಂದಿನ ಶರಣವಾಣಿಯಲ್ಲಿಯೇ ವಚಿಸಿ ರುಚಿಸಿ ಸಂತಸಗೊಳ್ಳೋಣ :

"ಆ ಸುಜ್ಞಾನ ಶಕ್ತಿಯಿಂದ ಕ್ರಿಯಾಶಕ್ತಿ ಉದಾಯವಾಗಿ ಆ ಕ್ರಿಯಾಶಕ್ತಿ ಯ ಸಂಗದಿಂದ ನೀನು ಆಚಾರ ಲಿಂಗವಾದಲ್ಲಿ ಅಲ್ಲಿ ನಿವೃತ್ತಿ ಎಂಬ ಕಲೆಯಲ್ಲಿ ನಾನುದಯವಾಗಿ ಆಚಾರ ಲಿಂಗಕ್ಕಾಶ್ರಯನಾಗಿ ಸದ್ಭಕ್ತನಾಗಿರ್ಪುದ ನೀ ಬಲ್ಲೆಯ ಲ್ಲದೆ ಮತ್ತಾರು ಬಲ್ಲರು ಹೇಳಾ ?

ಆ ಇಚ್ಛಾಶಕ್ತಿಯಿಂದ ಸುಜ್ಞಾನಶಕ್ತಿ ಉದಯವಾಗಿ ಸುಜ್ಞಾನಶಕ್ತಿಯ ಸಂಗದಿಂದ ನೀನು ಗುರುಲಿಂಗವಾದಲ್ಲಿ ಆ ಪ್ರತಿಷ್ಠೆ ಎಂಬ ಕಲೆಯಲ್ಲಿ ನಾನುದಯವಾಗಿ ಆ ಗುರುಲಿಂಗಕ್ಕಾಶ್ರಯವಾಗಿ ಮಾಹೇಶ್ವರನಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ ?

ಇನ್ನೊಂದು ಬಗೆಯಲ್ಲಿ ಅಂಗವು ಮೋಹಿ, ಭಕ್ತ, ಪೂಜಕ, ವೀರ, ಪ್ರಸಾದಿ, ಪ್ರಾಣಿ ಎಂದು ಆರು ಬಗೆಯಾಗುವುದೆಂದು ಚನ್ನಬಸವಣ್ಣ ಮತ್ತು ಆದಯ್ಯಗಳು ಹೇಳಿದ್ದಾರೆ.

"ಆಚಾರಲಿಂಗ ಮೋಹಿತನಾದರೆ ಸಖ ಸಹೋದರ ಮೋಹವ ಮರೆಯಬೇಕು. ಆಚಾರಲಿಂಗ ಭಕ್ತನಾದರೆ ಪೂರ್ವಾಚಾರವ ನೆಡೆಯಲಾಗದು. ಆಚಾರಲಿಂಗ ಪೂಜಕನಾದರೆ ಅನ್ಯಪೂಜೆಯ ಮಾಡಲಾಗದು. ಆಚಾರಲಿಂಗ ವೀರನಾದರೆ ಹಿಡಿದ ವ್ರತ ನೇಮವ ಬಿಡಲಾಗದು. ಆಚಾರಲಿಂಗ ಪ್ರಸಾದಿಯಾದರೆ ಅಶುಚಿಯಾಗಿರಲಾಗದು. ಆಚಾರಲಿಂಗ ಪ್ರಾಣಿಯಾದರೆ ಭಕ್ತನಿಂದೆಯ ಕೇಳಲಾಗದು. ಇದುಕಾರಣ ಕೂಡಲಚನ್ನಸಂಗಯ್ಯನಲ್ಲಿ ಈ ಆರು ಸಹಿತ ಆಚಾರಲಿಂಗಭಕ್ತಿ. ಗುರುಲಿಂಗ ಮೋಹಿತನಾದಡೆ ಮಾತಾಪಿತರ ಮೋಹವ ಮರೆಯಬೇಕು. ಗುರುಲಿಂಗಭಕ್ತನಾದಡೆ ಪೂರ್ವಬಂಧು ಪ್ರೇಮವ ಮಾಡಲಾಗದು. ಗುರುಲಿಂಗ ವೀರನಾದಡೆ ಗುರುಮಾರ್ಗಾಚಾರದಲ್ಲಿ ನಡೆಯಬೇಕು; ಗುರುಲಿಂಗ ಪ್ರಸಾದಿಯಾದಡೆ ಗುರುವಾಜ್ಞೆಯ ಮೀರವಾಗದು. ಗುರುಲಿಂಗ ಪ್ರಾಣಿಯಾದಡೆ ಮಾನವರ ಸೇವೆ ಮಾಡಲಾಗದು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಈ ಆರು ಸಹಿತ ಗುರುಲಿಂಗಭಕ್ತಿ.

ಇನ್ನು ಗುರುಲಿಂಗ ಮೋಹಿತನಾದಡೆ ತನುಗುಣ ನಾಸ್ತಿಯಾಗಿರಬೇಕು. ಗುರುಲಿಂಗ ಭಕ್ತನಾದಡೆ ತನ್ನ ಗುರುವಿನಲ್ಲಿ ಸವೆಯಬೇಕು. ಗುರುಲಿಂಗ ವೀರನಾದಡೆ ಭವರೋಗಂಗಳಿಲ್ಲದಿರಬೇಕು. ಗುರುಲಿಂಗ ಪ್ರಾಣಿಯಾದಡೆ ಪ್ರಕೃತಿ ಗುಣರಹಿತ ನಾಗಿರಬೇಕು. ಗುರುಲಿಂಗ ಪ್ರಸಾದಿಯಾದಡೆ ಗುರುಪ್ರಸಾದವಲ್ಲದೆ ಸ್ವೀಕರಿಸದಿರಬೇಕು. ಗುರುಲಿಂಗ ತೃಪ್ತನಾದಡೆ ಅರಸುವ ಅರಿಕೆ ಇಲ್ಲದಿರಬೇಕು. ....ಇಂತು ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕು." ಇವೆಲ್ಲ ಆಚರಣೆಗಳು ಅಳವಟ್ಟರೆ ತ್ಯಾಗಾಂಗ ತಿಳಿಗೊಳ್ಳುತ್ತದೆ. ಇವಿಷ್ಟು ಅಂಗತ್ವಲಕ್ಷಣಗಳು. ಇವಲ್ಲದೆ,

"ಕಿಂಕುರ್ವಾಣತೆಯಿಂದ ಉಳ್ಳುದನರಿತು ಮಾಡುವಲ್ಲಿ ಭಕ್ತ; ನಿಷ್ಠೆ ನಿಬ್ಬೆರಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರ. ಕರ್ತೃಭೃತ್ಯತ್ವನರಿತ ಭಕ್ತ ; ವ್ರತನೇಮ ಛಲವುಳ್ಳವ ಮಾಹೇಶ್ವರ. ತ್ರಿವಿಧ ಕ್ರೀಯಿಂದ ಭೇದವನರಿತು ಮಾಡುವುದು ಭಕ್ತಸ್ಥಲ; ಚತುರ್ವಿಧ ಫಲ ಪ್ರಾಪ್ತಿಯನನುಭವಿಸದೆ ನಿಶ್ಚಯ ವಸ್ತುವ ಕಾಂಬುವುದು ಮಾಹೇಶ್ವರಸ್ಥಲ. ಇದ್ದುದ ವಂಚನೆಯ ಮಾಡದೆ, ಇಲ್ಲದುದಕ್ಕೆ ಕಡನ ಮಾಡದೆ, ಪರರ ಕಾಡಿ ಬೇಡಿ ತಂದು ದಾಸೋಹವ ಮಾಡದೆ, ತನ್ನ ಬೇಡಿದವರಿಗೆ ಇಲ್ಲೆನ್ನದಿಹುದು ಭಕ್ತಸ್ಥಲ; ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಮೊದಲಾದ ಸಕಲ ಸಂಸಾರ ವಿಷಯದಲ್ಲಿ ಮನಮಗ್ನವಾಗದಿಹುದೇ ಮಾಹೇಶ್ವರಸ್ಥಲ. ಭಕ್ತನಾದಡೆ ತನುಮನಧನದಾಶೆಯಳಿದಿರಬೇಕು ; ಮಾಹೇಶ್ವರನಾದಡೆ ಪರಧನ ಪರಚಿಂತೆ ಪರಾಂಗನೆಯರ ಎಡೆಯಳಿದುಳಿದಿರಬೇಕು. ಭಕ್ತಂಗೆ ಕ್ರಿ, ಮಾಹೇಶ್ವರಂಗೆ ನಿಶ್ಚಯ. ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ ; ಕಕ್ಷೆ ಭಕ್ತನ ಸೋಂಕು, ಮುಖ ಸೆಜ್ಜೆ ಮಾಹೇಶ್ವರನ ಸೋಂಕು ; ಕುಚಿತ್ತವಳಿದು ಸುಚಿತ್ತ ನೆಲೆಗೊಂಡು ಆಚಾರಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಭಕ್ತನೆಂಬೆನು ; ಕುಬುದ್ಧಿಯಳಿದು ಸುಬುದ್ಧಿ ನೆಲೆಗೊಂಡು ಗುರುಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಮಾಹೇಶ್ವರನೆಂಬೆನು. ಕಾಯ ಇಂದ್ರಿಯಗಳಲ್ಲಿ ಮೆಚ್ಚಿಹನ್ನಕ್ಕರ ಭಕ್ತಸ್ಥಲವಿಲ್ಲ ; ಆತ್ಮ ಹಲವು ವಿಷಯಂಗಳಲ್ಲಿ ಹರಿವನ್ನಕ್ಕರ ಮಾಹೇಶ್ವರಸ್ಥಲವಿಲ್ಲ, ಭಕ್ತಂಗೆ ತ್ರಿವಿಧ ಮಲನಾಸ್ತಿಯಾಗಿರಬೇಕು ; ಮಾಹೇಶ್ವರಂಗೆ ಬಂದ ಜಪನೇಮ ಕರ್ಮಗಳು ಹಿಂಗಿರಬೇಕು. ಭಕ್ತನಾದರೆ ಕಿಂಕರ ಕಂಕರನಾಗಿರಬೇಕು ; ಮಾಹೇಶ್ವರನಾದರೆ ಆದಿ ಅನಾದಿಯನರಿದಿರಬೇಕು. ಲಾಂಛನದೆಡೆಯಲ್ಲಿ ಹುಸಿಯ ಸಂಪಾದಿಸುವನ್ನಕ್ಕರ ಭಕ್ತನಲ್ಲ ; ಪುರುಡುವಿಡಿದಾತ ಮಾಹೇಶ್ವರನಲ್ಲ. ಭಕ್ತಸ್ಥಲ ಗುರುರೂಪು, ಮಾಹೇಶ್ವರಸ್ಥಲ ಲಿಂಗರೂಪು. ಭಕ್ತ ಬ್ರಹ್ಮತತ್ತ್ವ, ಮಾಹೇಶ್ವರ ವಿಷ್ಣುತತ್ತ್ವ, ಭಕ್ತಂಗೆ ಪೃಥ್ವಿಯೇ ಅಂಗ, ಮಾಹೇಶ್ವರಂಗೆ ಅಪ್ಪುವೇ ಅಂಗ. ಘ್ರಾಣಕ್ಕೂ ಗಂಧಕ್ಕೂ ಪೃಥ್ವಿಯೆಂಬ ಮಹಾಭೂತ ; ಅಲ್ಲಿ ನಿವೃತ್ತಿ ಎಂಬ ಕಲೆ ಇಹುದು. ಆ ಕಲೆಯಲ್ಲಿ ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವ ಧರಿಸಿದಾತ ಭಕ್ತನು ; ಜಿಹ್ವೆಗೂ ಗುಹ್ಯಕ್ಕೂ ಅಪ್ಪುವೆಂಬ ಮಹಾಭೂತ ; ಅಲ್ಲಿ ಪ್ರತಿಷ್ಠೆ ಎಂಬ ಕಲೆ ಇಹುದು, ಆ ಕಲೆಯಲ್ಲಿ ಜ್ಞಾನಶಕ್ತಿ

ಯುಕ್ತನಾದ ಗುರುಲಿಂಗವ ಧರಿಸಿದಾತ ಮಾಹೇಶ್ವರನು. ಗುರುವಿಂಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಸ್ಥಲ ; ಅರಿದಿಹೆವೆಂಬನ್ನಕ್ಕ ಮಾಹೇಶ್ವರಸ್ಥಲ, ಸಮದೃಷ್ಟಿಯಾಗದವನ ಭಕ್ತನೆಂತೆಂಬೆ ? ವಿಷಯಂಗಳಳಿಯದವನ ಮಾಹೇಶನೆಂತೆಂಬೆ ? ಭಕ್ತಂಗೆ ಭಕ್ತಿಯೇ ಲಿಂಗಾರ್ಚನೆ ; ಮಾಹೇಶ್ವರಂಗೆ ಜ್ಞಾನವೈರಾಗ್ಯವೇ ಲಿಂಗಾರ್ಚನೆ. ವಾಕ್ಕು ಪಾಣಿಪಾದ ಪಾಯು ಗುಹ್ಯವೆಂದು ಸ್ಥೂಲ ಕಾಯಾವಸ್ಥೆಯ ಕರ್ಮೇಂದ್ರಿಯಂಗಳ ಕಠಿಣ ಗುಣವ ತಿಳಿದು ಕಾಯಕರ್ಮನಾಸ್ತಿಯಾಗಿ, ಭೃತ್ಯಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಭಕ್ತಸ್ಥಲ ; ಶ್ರೋತ್ರತ್ವಕ್ಕು ನೇತ್ರ ಜಿಹ್ವೆ ಘ್ರಾಣವೆಂಬ ಸೂಕ್ಷ್ಮಜೀವನಾವಸ್ಥೆಯ ಜ್ಞಾನೇಂದ್ರಿಯಂಗಳ ಮೃದುಗುಣವಳಿದು ಕ್ರೋಧಕರ್ಮನಾಸ್ತಿಯಾಗಿ ನಿಷ್ಠಾಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಮಾಹೇಶ್ವರಸ್ಥಲ. ಪಾದಾದಿ ಗುದಪರಿಯಂತರ ಪೃಥ್ವೀತತ್ವ ; ಆ ತತ್ವದ ಕಠಿಣಗುಣವಳಿದು ಕರ್ಮಸಾದಾಖ್ಯದಿಂ ಭೃತ್ಯತ್ವವೇ ಭಕ್ತಸ್ಥಲ ; ಗುದಾದಿಗುಹ್ಯ ಪರ್ಯಂತರ ಅಪ್ಪು ತತ್ವ ; ಆ ತತ್ವದ ಮೃದುಗುಣವಳಿದು ಕರ್ತೃಸಾದಾಖ್ಯದಿಂ ನಿಷ್ಠತ್ವವೇ ಮಾಹೇಶ್ವರಸ್ಥಲ." ಇವೆಲ್ಲವುಗಳಿಂದ ಭಕ್ತ ಮಾಹೇಶ್ವರ ಸಹಿತ ತ್ಯಾಗಾಂಗ ರೂಪಿತವಾಗುತ್ತದೆ.

"ಪಂಚಮಹಾಪಾತಕ ಸೂತಕಾದಿಗಳ ತನ್ನ ಸ್ವಾತ್ಮಜ್ಞಾನದಿಂದ ನಷ್ಟವ ಮಾಡಿ, ಚಿದ್ಘನಲಿಂಗವ ಪಡೆದು ಲಿಂಗ ಮುಂತಾಗಿ ನಿರ್ವಂಚಕತ್ವದಿಂದ ಸತ್ಯ ಕಾಯಕವ ಮಾಡಿ ಗುರುಲಿಂಗ ಜಂಗಮಕ್ಕೆ ಸಮಸ್ತ ಭೋಗಂಗಳ ಸಮರ್ಪಿಸಿ, ಭವಿಮಾರ್ಗವನುಳಿದು ಸತಿಸುತ ಒಡಹುಟ್ಟಿದವರು ಬಾಂಧವರು ಮೊದಲಾಗಿ ಸದಾಚಾರ ಲಿಂಗಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೇ ಪ್ರಾಣವಾಗಿರ್ಪಾತನೆಂಬುದೀಗ ಭಕ್ತನೆಂಬ ಶಬ್ದಕ್ಕರ್ಥ.

ಷಡೂರ್ಮಿ ಷಡ್ವರ್ಗ ಷಡ್ಭಾವವಿಕಾರಂಗಳು ಮುಂತಾದ ದುರ್ಮಾರ್ಗ ಅನಾಚಾರವಂ ತನ್ನ ಸ್ವಾತ್ಮಜ್ಞಾನದಿಂದ ನಷ್ಟವ ಮಾಡಿ ಸಮಸ್ತ ಮದಂಗಳಲ್ಲಿ ಯೋಗ್ಯಾಯೋಗ್ಯವ ತಿಳಿದು ಪುತ್ರಮಿತ್ರ ಕಳತ್ರಾದಿಗಳೆಲ್ಲ ಪಂಚಾಚಾರಂಗಳ ಮುಂದುಗೊಂಡು ಸಮಸ್ತ ಭೋಗಂಗಳ ನಿರ್ವಂಚಕತ್ವದಿಂದ ಸಮರ್ಪಿಸಿ ಕ್ರಿಯಾಚಾರ ಜ್ಞಾನಾಚಾರ ಭಾವಾಚಾರವೇ ಪ್ರಾಣವಾಗಿರ್ಪಾತನೆಂಬುದೀಗ ಮಾಹೇಶ್ವರನೆಂಬ ಶಬ್ದಕ್ಕರ್ಥ."

ಈ ಎರಡು ನುಡಿಗಳಿಂದ ತ್ಯಾಗಾಂಗ ಲಕ್ಷಣವು ಇನ್ನೂ ಸ್ಫುಟಗೊಂಡಿದೆ. 'ತನುತ್ರಯಂಗಳಲ್ಲಿ ತನುಮನಧನಂಗಳಲ್ಲಿ ಗುರುಲಿಂಗ ಜಂಗಮಕ್ಕೆ ವಂಚನೆಯಿಲ್ಲದೆ ನಿರ್ವಂಚನೆಯಿಂದ ಸಮರ್ಪಣೆಯ ಮಾಡುವಂತಹದೇ ತ್ಯಾಗಾಂಗವು.' 'ಕತ್ತಲೆ ಸತ್ತು ಬೆಳಗು ಬೀದಿವರಿಯಿತ್ತು ನೋಡ–ಎಲೆ ಅಮ್ಮಾ ! ತತ್ತ್ವಂಗಳ ಮೇಲಿಪ್ಪ ಆಚಾರಲಿಂಗದ ನೈಷ್ಠೆಯ ಬಲದಿಂದ ಅಖಂಡಿತ ಕರಣಂಗಳನೊಳಕೊಂಡಿಪ್ಪ ಈಷಣತ್ರಯಂಗಳನಿಕ್ಕಿ ತ್ಯಾಗಾಂಗಿಯಾದೆ.'

'ವಾಗ್ಬ್ರಹ್ಮಿಗಳೆಲ್ಲರು ಪಡುವ ಪಾಟ ನೋಡಿ ನಮ್ಮ ಭಕ್ತರು ತ್ಯಾಗಾಂಗದಲ್ಲಿ ಇಷ್ಟ ಪ್ರಾಣಭಾವಕ್ಕೆ ಬಾಹ್ಯ ಪದಾರ್ಥರೂಪವ ಈಕ್ಷಣ ಜ್ಞಾನ ಸ್ಪರ್ಶನದಿಂದ ಅರ್ಪಿಸಿ ದೇಹ ಪ್ರಸಾದಿಯಾಗಿ ಚರಶೇಷದಲ್ಲಿ ಇಷ್ಟಲಿಂಗ ಪೂಜಕರಾಗಿ ಅನಿಷ್ಟವ ಪರಿಹರಿಸಿದರು.' ಆದ್ದರಿಂದ ಅಂತಹ ಇಷ್ಟಲಿಂಗ ಸ್ವರೂಪವನ್ನು ಮುಂದರಿಯೋಣ.

ಪ್ರಣವ ಪಂಚಾಕ್ಷರಿಯೊಳಗಿನ ನಮಃ ಪದವು ತ್ಯಾಗಾಂಗವನ್ನು ತ್ಯಾಗಾಂಗ ಕ್ರಿಯೆಯನ್ನು ಬೋಧಿಸುತ್ತದೆ.

## ಲಿಂಗಸ್ಥಳ:

ತ್ಯಾಗಾಂಗವಚ್ಛಿನ್ನ ಚೈತನ್ಯವೆ ಕ್ರಿಯಾಲಿಂಗ. ಇದು ಚಿತ್ಕಳಾಂಶ. ಆ
ಮೂಲ ಮಹಾಲಿಂಗದ ಒಂದು ಕಿರಣ. ಒಂದೇ ಮೂರಾಗುವುದು. ತ್ಯಾಗಾಂಗ
ದಲ್ಲಿ ಕ್ರಿಯಾಲಿಂಗ, ಭೋಗಾಂಗದಲ್ಲಿ ಪ್ರಾಣಲಿಂಗ, ಯೋಗಾಂಗದಲ್ಲಿ ಭಾವ
ಲಿಂಗಾಗುವುದು. ಹೀಗೆ ಮೂರಾಗುವುದು ಗುರುಕಾರಣ್ಯದಿಂದ. ಶ್ರೀಗುರು
ವಿನ ಕ್ರಿಯಾದೀಕ್ಷೆಯಿಂದ ತ್ಯಾಗಾಂಗಗತ ಕ್ರಿಯಾ ಶಕ್ತಿಯೇ ನಿವೃತ್ತಿಕಳೆಯಾಗಿ
ನೆಲಸಿ ಕ್ರಿಯಾಲಿಂಗವಾಗುವುದು. ಅದನ್ನೇ ಬಹಿಷ್ಕರಿಸಿ ಶ್ರೀಗುರು ಶಿಲಾಪೀಠದಲ್ಲಿ
ರಿಸಿ ಇಷ್ಟಲಿಂಗವನ್ನಾಗಿ ಅನುಗ್ರಹಿಸುವನು. ಅರ್ಚನ ಅರ್ಪಣಾದಿಗಳಿಗೆ ಅನು
ಕೂಲಪಡಿಸುವನು ; ಆಯತ್ತಗೊಳಿಸುವನು. ಇಷ್ಟಲಿಂಗಕ್ಕೆ ಸ್ವಯಲಿಂಗ,
ಕ್ರಿಯಾಲಿಂಗ, ಆಯತಲಿಂಗ, ಕರಸ್ಥಲಲಿಂಗ ಎಂದು ಪರ್ಯಾಯ ಹೆಸರುಗ
ಳುಂಟು. ಕರ, ಉರಗಳಲ್ಲಿ ಇಷ್ಟಲಿಂಗವನ್ನು ಧರಿಸುವುದುಂಟು. ಇದು ಇಷ್ಟ
ವಾದ ಲಿಂಗ, ಅಥವಾ ಇಷ್ಟವಾದುದನ್ನೆಲ್ಲ ಕೊಡುವ ಲಿಂಗ. ತ್ಯಾಗಾಂಗತ್ವ
ನಿರ್ವಹಣೆಗಾಗಿ ನಿವೃತ್ತಿ ಕಳೆಯುನ್ನುಂಟು ಮಾಡುವುದೇ ಇದರ ಲಕ್ಷ್ಯ. ನಿವೃತ್ತಿ
ಕಳೆ ತ್ಯಾಗಾಂಗದಲ್ಲಿ ನೆಲಸಬೇಕಾದರೆ ಇಷ್ಟಿ ಅಂದರೆ ಪೂಜೆಯೇ ಪ್ರಥಮದಲ್ಲಿ
ಅಪ್ರತಿಮಪಥ. ಇಷ್ಟಿಗೆ ಅರ್ಹವಾದ ಲಿಂಗವಾದ್ದರಿಂದ ಇಷ್ಟಲಿಂಗ ; ಇಷ್ಟಿ
ಕ್ರಿಯೆಗೆ ತಕ್ಕುದಾದ ಲಿಂಗವಾದ ಕಾರಣದಿಂದ ಕ್ರಿಯಾಲೀಗ. ಪಶ್ಚಿಮ ಚಕ್ರ
ದಿಂದ ಪರಮ ಗುರುದೇವನ ಕೃಪಾಕಟಾಕ್ಷದಿಂದ ಕರಕಂಜಕ್ಕೆ
ಬಂದುದರಿಂದ ಆಯತಲಿಂಗ. ತನ್ನ ಬಿಟ್ಟು ಅಗಲದೆ ತನ್ನಲ್ಲಿಯೇ ಎಲ್ಲ ವೇಳೆ
ಯಲ್ಲಿ ಇರುವುದರಿಂದ ಸ್ವಯಲಿಂಗ. ಇದೇ ಅರ್ಥದಲ್ಲಿ ಬಿಚ್ಚು ಕನ್ನಡ ನುಡಿಯಲ್ಲಿ
'ಹೆಳವಲಿಂಗ' ವೆಂದು ಹೇಳುವುದುಂಟು. ದೇಹದೇಗುಲದ ದಿವ್ಯ ದೇವ ಇಷ್ಟ
ಲಿಂಗ. ಇದರ ಧಾರಣದಿಂದ ದೇಹ ಅಂಗವಾಯಿತು, ದೇಹಗುಣಗಳನ್ನು
ದೂರಮಾಡಿ ತ್ಯಾಗಾಂಗವೆನಿಸಿತು ; ತ್ಯಾಗಾಂಗ ಭವಿತನವನ್ನು ಕಳೆದುಕೊಂಡು
ತ್ಯಾಗಾಂಗಭಕ್ತವಾಯಿತು.

ಇಷ್ಟ (ಕ್ರಿಯಾ) ಲಿಂಗದ ಮುಖ್ಯಸ್ಥಲ ನೇತ್ರಸ್ಥಲ. ಕರಸ್ಥಲದಲ್ಲಿ

ಎದುರಿಟ್ಟು ನೀರಿಕ್ಷಿಸಲು ಆರಾಧಿಸಲು ಗುರುಕೃಪಾಕಟಾಕ್ಷದಿಂದ ಮೂರ್ತಿರೂಪ ವನ್ನು ತಳೆಯಿತು. ಷಡಕ್ಷರ ಮಂತ್ರಾರ್ಥಕ್ಕೆ ವಿಷಯವಾಯಿತು.

"ಚಿತ್ತವೆಂಬ ಬಿತ್ತು ಬಲಿದು ಎರಡಾದಲ್ಲಿ ಲಿಂಗವೆಂಬ
ಕಳೆ ಅಂಕುರಿಸಿ ಮೂರ್ತಿಯಾಯಿತ್ತು.
ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು,
ನೋಡಿದರೆ ಮೂರ್ತಿ, ಹಿಡಿದಡೆ ಬಯಲು;
ಈ ಮೂರ್ತಿಯೊಳಗದೆ ಈರೇಳು ಲೋಕದ ಪ್ರಾಣಕಳೆ,
ಆ ಕಳೆಯ ಬೆಳಗು ತಾನೇ ನಮ್ಮ ಗುಹೇಶ್ವರಲಿಂಗದ
ಲೀಲಾ ಮೂಲದ ಪ್ರಥಮ ಬಿತ್ತು"

ಈ ಪ್ರಭುವಾಣಿ ಇಷ್ಟಲಿಂಗದ ಸ್ವರೂಪಲಕ್ಷಣವನ್ನು ಸಂಪೂರ್ಣವಾಗಿ ಸ್ವಾನುಭವಸಂಪನ್ನವಾಗಿ ಮಾಡಿದೆ. ಇದರಿಂದಾಗಿ ಇದು ಪ್ರಾಣಲಿಂಗಸ್ವರೂಪವೂ ಆಗಿದೆ. ಕಾರಣ ಶ್ರೀಗುರು ಶಿಷ್ಯನಿಗೆ ಪ್ರಾಣದಂತೆ ಧರಿಸು, ಇದುವೇ ನಿನ್ನ ಪ್ರಾಣವೆಂದು ಭಾವಿಸು ಎಂದು ಆಜ್ಞಾದೀಕ್ಷೆಯನ್ನು ಮಾಡುತ್ತಾನೆ.

ಪ್ರಾಣಲಿಂಗದ ಒಂದಂಶವೇ ಶಿವಲಿಂಗ ಶಿವಲಿಂಗವಿರುವುದು ನೇತ್ರ ಸ್ಥಲದಲ್ಲಿ. ಅದು ಚಿತ್ತಬಿತ್ತು ಬಲಿತಕಳೆ. ಆ ಕಳೆಯ ಅಂಶವನ್ನೇ ಗುರು ತಂದು ಶಿಲಾಪೀಠದಲ್ಲಿರಿಸಿ ಮೂರ್ತೀಭವಿಸುತ್ತಾನೆ. ಇಷ್ಟಸೆಂದು ದೃಷ್ಟಿಸೆಂದು ಹೇಳುತ್ತಾನೆ. ಮೂರ್ತಿವೆತ್ತ ಇಷ್ಟಲಿಂಗದ ಘನತೆ-ಗಮನಾತೀತವಾದುದು; ನಿರುಪಮವಾದುದು. ಏಕೆಂದರೆ ನೋಡಲು ಮೂರ್ತಿಯಾಗಿ ಕಂಡರೂ ನಿಜ ವಾಗಿ ಅಮೂರ್ತವಾಗಿಯೂ ಇರುತ್ತದೆ. ಅಂದರೆ ಮೂರ್ತಾಮೂರ್ತ ಸ್ವರೂಪವಾಗಿದೆ. ಇದರಿಂದಾಗಿ ಇದು ಪ್ರಾಣಸ್ವರೂಪವೂ ಪ್ರಾಣಲಿಂಗಸ್ವರೂ ಪವೂ ಆಗಿದೆ. ಮೂರ್ತವಾಗಿ ಧಾರಣಕ್ಕೆ ಅಮೂರ್ತವಾಗಿ ಧ್ಯಾನಕ್ಕೆ ಸಾಧನ ಅಥವಾ ವಿಷಯವಾಗಿದೆ. ಮೂರ್ತಿರೂಪಾಗಿ ಧಾರಣಕ್ಕೆ ಕಾರಣವಾದಂತೆ ಅರ್ಚನೆಗೂ ಕಾರಣವಾಯಿತು. ಇದರಿಂದಾಗಿ ಇಷ್ಟವಾಯಿತು. ಇನ್ನು ಲಿಂಗ ಪದಕ್ಕೆ ಅರ್ಥವನ್ನು ಈ ಮೂರ್ತಿಯೊಳಗಿದೆ ಈರೇಳು ಲೋಕದ ಪ್ರಾಣಕಳೆ. ಆ ಕಳೆಯ ಬೆಳಗೇ ಇಷ್ಟಲಿಂಗ. ಇಂತಹ ಮಹಂತಲೀಲೆಗೆ ಮೂಲ ಪ್ರಥಮ

ಬಿತ್ತಾಗಿದೆ ಅಂದರೆ ಕಾರಣವಾಗಿದೆ ಕರದಿಷ್ಟಲಿಂಗ; ಎಂಬುದಾಗಿ ಈ ವಾಕ್ಯಗಳಿಂದ ಮಾಡಿದೆ. ಏನು ವಿಶಾಲಭಾವ! ಎಂತಹ ವಿಶಿಷ್ಟಾನುಭಾವ!! ಇಷ್ಟಲಿಂಗದ ವಿಶಿಷ್ಟಜ್ಞಾನಕ್ಕೆ ವಿಶುದ್ಧ ಲಕ್ಷಣ ಚಿತ್ರಣಕ್ಕೆ ಈ ಒಂದು ವಚನವೇದ ಸಾಕು. ಇದಕ್ಕೆ ಎಷ್ಟಾದರೂ ಬರೆಯಬಹುದು ಭಾಷ್ಯ. ಎಷ್ಟಾದರೂ ನಿರೂಪಿಸಬಹುದು ನಿರುಕ್ತಿ.

"ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಂಗಳಿಂದ
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿ
ಪ್ಪುದೀಗ ಇಷ್ಟಲಿಂಗ, ಆ ಇಷ್ಟಲಿಂಗಕ್ಕೆ ಆಶ್ರಯವಾಗಿ
ಚತುರ್ದಶ ಇಂದ್ರಿಯಂಗಳಲ್ಲಿ ತನ್ಮುಖವಾಗಿ
ಸರ್ವೇಂದ್ರಿಯಂಗಳಿಗೆ ಚೈತನ್ಯವಾಗಿ
ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದೀಗ ಪ್ರಾಣಲಿಂಗ.
ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವಭ್ರಮೆಗಳು ನಷ್ಟವಾಗಿ
ಅನುಭಾವದಲ್ಲಿ ಅನುವಾಗಿ, ಭಾವ, ಸದ್ಭಾವ, ನಿರ್ಭಾವಂಗಳಲ್ಲಿ
ಭರಿತವಾಗಿ ಭಾವಬ್ರಹ್ಮವೆಂಬ ಭೇದವಿಲ್ಲದೆ
ಸನ್ನಿಹಿತ ಭಾವದಿಂದ ಇಪ್ಪುದೀಗ ಭಾವಲಿಂಗ.
ಇಂತೀ ಮೂರುಲಿಂಗದ ಮೂಲ, ಆರುಲಿಂಗದ ಅಂತ್ಯವ
ನೊಳಕೊಂಡು, ಮಾರ್ಗಕ್ರಿ, ನಿಃಕ್ರಿಯವಾಗಿ,
ಧ್ಯಾನನಷ್ಟವಾಗಿ, ಮಂತ್ರಗೋಪ್ಯವಾಗಿ, ಜ್ಞಾನಶೂನ್ಯವಾಗಿ
ಭಾವದಿಗಂಬರವಾಗಿ, ಘನಕ್ಕೆ ಘನವಾದ ಪರಬ್ರಹ್ಮವು
ತಾನೇ ಸೌರಾಷ್ಟ್ರ ಸೋಮೇಶ್ವರಾ."

ತ್ರಿಲಿಂಗಗಳ ಸ್ವರೂಪು ಕ್ರಿಯೆ ನಾಮಗಳು ಸ್ಥಲಗಳು ಈ ವಚನದಲ್ಲಿ ನಿರ್ದಿಷ್ಟವಾಗಿ ನಿರೂಪಿತವಾಗಿದೆ.

"ನಾದ-ಬಿಂದು-ಕಳೆಯಂ ತಿಳಿದು ಚಿನ್ನಾದ ಸ್ವರೂಪವಾದ
ಗುರುದೇವನು, ಚಿದ್ಬಿಂದು ಸ್ವರೂಪವಾದ ಲಿಂಗದೇವನು.
ಚಿತ್ಕಳಾಸ್ವರೂಪವಾದ ಜಂಗಮದೇವನೆಂದರಿದು.

ಸ್ಥೂಲ ಶರೀರಾಭಿಮಾನಿಯಾದ ಜೀವಾತ್ಮನು,
ಸೂಕ್ಷ್ಮ ಶರೀರಾಭಿಮಾನಿಯಾದ ಅಂತರಾತ್ಮನು,
ಕಾರಣ ಶರೀರಾಭಿಮಾನಿಯಾದ ಪರಮಾತ್ಮನು
ಎಂದೆನಿಸಿಕೊಂಬ ಆತ್ಮತ್ರಯಂಗಳಲ್ಲಿ,
ಸತ್ಕ್ರಿಯಾ ಸ್ವರೂಪಮಾದ ಇಷ್ಟಲಿಂಗವು,
ಸುಜ್ಞಾನ ಸ್ವರೂಪಮಾದ ಪ್ರಾಣಲಿಂಗವು,
ಪರಿಪೂರ್ಣಸ್ವರೂಪಮಾದ ಭಾವಲಿಂಗವು ಎನಿಸಿಕೊಂಬ
ಲಿಂಗತ್ರಯಂಗಳಲ್ಲಿ ಸಂಬಂಧಿಸಿ ಸ್ವಾಯತವ ಮಾಡಿಕೊಂಡು,
ಜೀವಾತ್ಮನಲ್ಲಿ ಇಷ್ಟಲಿಂಗ, ಅಂತರಾತ್ಮನಲ್ಲಿ ಪ್ರಾಣಲಿಂಗ,
ಪರಮಾತ್ಮನಲ್ಲಿ ಭಾವಲಿಂಗವನು ಸಂಬಂಧಿಸಿ
ಸ್ವಾಯತವ ಮಾಡಿಕೊಂಬುದು."

ಲಿಂಗಸಂಬಂಧ ಕೇವಲ ಕಾಯದಲ್ಲಿ ಮಾತ್ರವಲ್ಲ ಕಾಯಾವಚ್ಛಿನ್ನ ಆತ್ಮರುಗಳಲ್ಲಿಯೂ ಇರುತ್ತದೆಂಬುದನ್ನು ಈ ವಚನವು ಸ್ಪಷ್ಟಗೊಳಿಸಿದೆ. ಅಂತೆಯೇ ದೇಹಭಾವದ ಜತೆಗೆ ಜೀವ ಭಾವವೂ ತೊಲಗುತ್ತದೆ. ಅಂಗ-ಲಿಂಗ ಎಂಬ ಭೇದವಡಗಲು ಅನುಕೂಲವಾಗುತ್ತದೆ. ಲಿಂಗರೂಪವಾಗುವುದೆಂದರೆ ಲಿಂಗಕಳೆಯಿಂದ ಕೂಡಿ ಕಂಗೊಳಿಸುವುದು :

"ಮಹಾನಾದ ಕಳೆಯೇ ಲಿಂಗಕ್ಕಾಶ್ರಯಮಾಗಿ,
ಲಿಂಗದ ಕಳೆಯೇ ಹೃದಯಕ್ಕಾಶ್ರಯಮಾಗಿ,
ಹೃದಯದ ಕಳೆಯೇ ಜ್ಞಾನಕ್ಕಾಶ್ರಯಮಾಗಿ,
ಜ್ಞಾನದ ಕಳೆಯೇ ನಿತ್ಯಕ್ಕಾಶ್ರಯಮಾಗಿ
ನಿತ್ಯ ನಿರವಯ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ."

ಈ ವಚನದ ಅರ್ಥವಿಂತಿದೆ ;—

'ಮಹಾನಾದವುಳ್ಳ ಪರಬ್ರಹ್ಮದ ಚಿತ್ಕಳೆಯೇ ಇಷ್ಟಲಿಂಗಕ್ಕೆ ಚೈತನ್ಯವಾಗಿ, ಇಷ್ಟಲಿಂಗದ ಚೈತನ್ಯ ಕಳೆಯೇ ಮನದಲ್ಲಿ ಪ್ರಾಣಲಿಂಗವಾಗುವುದಕ್ಕೆ ಆಸ್ಪದವಾಗಿ, ಮನದಲ್ಲಿ ಬೆಳಗಲ್ಪಟ್ಟ ಪ್ರಾಣಲಿಂಗವೇ ಚಿತ್ಪ್ರಾಣವನ್ನು ಒಳ

ಕೊಂಬುವುದಕ್ಕೆ ಆಶ್ರಯವಾದ ಭಾವಲಿಂಗವಾಗಿ, ಆ ಪ್ರಾಣವನ್ನೊಳಕೊಂಡಿದ್ದ ಭಾವಲಿಂಗವೇ ಆತ್ಮವನೊಳಕೊಂಬುವುದಕ್ಕೆ ಆಶ್ರಯವಾದ ಮಹಾಲಿಂಗವಾಗಿ ಶಾಶ್ವತವಾದ ನಿರಾಕಾರವಾದ ಪರಶಿವಲಿಂಗವು ಅಂತರಂಗ ಬಹಿರಂಗದಲ್ಲಿ ಭಿನ್ನವಿಲ್ಲೆಂದರ್ಥವು.'

ಇದರಿಂದ ಇಷ್ಟಲಿಂಗದ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ತ್ಯಾಗಾಂಗಕ್ಕೆ ಜೀವಾತ್ಮ, ಜೀವಾತ್ಮನಿಗೆ ಇಷ್ಟಲಿಂಗ, ಇಷ್ಟಲಿಂಗಕ್ಕೆ ಚಿತ್ಕಳೆ ಚೈತನ್ಯವಾಗಿರುವುದನ್ನು ಇಷ್ಟಲಿಂಗದ ಚಿತ್ಕಳೆಯೇ ಪ್ರಾಣಲಿಂಗಕ್ಕೂ ಭಾವಲಿಂಗಕ್ಕೂ ಆಶ್ರಯವಾಗಿರುವುದನ್ನು ಚೆನ್ನಾಗಿ ಗಮನಿಸುವದಾಗಬೇಕು, ಮತ್ತು ಇಷ್ಟಲಿಂಗವು ಆ ಮಹಾನಾದವುಳ್ಳ ಪರಬ್ರಹ್ಮದ ಸ್ವರೂಪವಾಗಿರುವುದು ಮನವರಿಕೆಯಾಗುತ್ತದೆ. ಪ್ರಣವಸ್ವರೂಪವೂ ಆಗಿದೆ.

'ಸ್ಥೂಲ ತನುವಿನಲ್ಲಿ ಸತ್ಕ್ರಿಯಾಚಾರ ಸಂಬಂಧವಾಗಲಲ್ಲಿ
ಇಷ್ಟಲಿಂಗ ಸಂಬಂಧವಾಗಿಪ್ಪದು.'

ಸತ್ಕ್ರಿಯಾಚಾರಕ್ಕೆ ತ್ಯಾಗಾಂಗವೇ ಮಂದಿರ. ಇಷ್ಟಲಿಂಗವೇ ದೇವರು. ಸತ್ಕ್ರಿಯಾಚಾರವು ತ್ಯಾಗಾಂಗಕ್ಕೂ ಇಷ್ಟಲಿಂಗಕ್ಕೂ ಸಂಬಂಧ. ಅಂತರ್ಗತ ಜ್ಞಾನ–ಭಾವಗಳು ಸತ್ಕ್ರಿಯಾರೂಪ ದ್ವಾರದಲ್ಲಿಯೇ ಬರಬೇಕು; ಬಂದು ಬಾಹ್ಯವನ್ನು ಬೆಳಗಬೇಕು. ಅಂತಹ ಆ ಸತ್ಕ್ರಿಯಾಚಾರ ಸ್ವರೂಪವೇ ತ್ಯಾಗಾಂಗ ಇಷ್ಟಲಿಂಗಗಳು. ತ್ಯಾಗಾಂಗ ಇಷ್ಟಲಿಂಗಗಳನ್ನು ಬಿಟ್ಟು ಸತ್ಕ್ರಿಯಾಚಾರವಿರದು. ಸತ್ಕ್ರಿಯಾಚಾರವನ್ನು ಬಿಟ್ಟು ತ್ಯಾಗಾಂಗೇಷ್ಟಲಿಂಗಗಳಿರವು. ತ್ಯಾಗಾಂಗ ಅದೊಂದು ಮಹಾ ಬೆಲೆಯುಳ್ಳ ಮಾಣಿಕ್ಯ. ಇಷ್ಟಲಿಂಗ ಆ ಮಾಣಿಕ್ಯದ ಮಹಾ ಕಳೆ.

"ಗುರುಚರಣದಿಂದೊದಗಿದ ಇಷ್ಟಲಿಂಗದಲ್ಲಿ
ವಿಶ್ವಾಸ ಬಲಿದಲ್ಲಿ ಆಯತಲಿಂಗ,
ಆ ಇಷ್ಟಲಿಂಗದ ಭಾವ, ಮನೋವೇದ್ಯವಾದಲ್ಲಿ ಸ್ವಾಯತಲಿಂಗ.
ಆ ಇಷ್ಟಲಿಂಗದ ಭಾವ, ಮನೋವೇದ್ಯ ಸುಖವು.
ಭಿನ್ನವಾಗಿ ತೋರದೆ ಅನುಪಮ ಪರಿಣಾಮ
ಪರಿಪೂರಿತವಾದಲ್ಲಿ ಸನ್ನಿಹಿತಲಿಂಗ.
ಇಂತು ಇಷ್ಟ ಪ್ರಾಣ ಭಾವಲಿಂಗಗಳು ತನುತ್ರಯಂಗಳಲ್ಲಿ

ಆಯುತ ಸ್ವಾಯುತ ಸನ್ನಿಹಿತಂಗಳು....
ಆಯುತಲಿಂಗ ಸಂಬಂಧವಿಲ್ಲದಾತ ಅಂಗಭವಿ."
ಸ್ವಾಯತಲಿಂಗ ಸಂಬಂಧವಿಲ್ಲದಾತ ಮನಭವಿ.

ಇಷ್ಟಲಿಂಗದಲ್ಲಿ ವಿಶ್ವಾಸವಿಲ್ಲದೆ ಇದು ಆಯಂತಲಿಂಗವಾಗದು. ಅಂದರೆ ತ್ಯಾಗಾಂಗದಲ್ಲಿ ಸಮವೇಧಿಸದು; ಸಂಬಂಧಿಸದು, ಕಾರಣ ವಿಶ್ವಾಸಾಧಿಕ್ಯ ಅನಿವಾರ್ಯ. ಇದೇ ಈ ಇಷ್ಟಲಿಂಗದ ವಿಶ್ವಾಸಭಾವ ಮನೋವೇದ್ಯವಾದರೆ ಅದೇ ಸ್ವಾಯತಲಿಂಗ ಅಂದರೆ ಭೋಗಾಂಗದ ಪ್ರಾಣಲಿಂಗ. ಇದೇ ಈ ಇಷ್ಟಲಿಂಗದ ವಿಶ್ವಾಸಾಧಿಕ್ಯ ಭಾವಜನ್ಯ ಆನಂದವು ಅಭಿನ್ನವಾಗಿ ಅನುಪಮ ಪರಿಣಾಮ ಪರಿಪೂರ್ಣವಾದರೆ ಅದೇ ಸನ್ನಿಹಿತಲಿಂಗ ಅಂದರ ಯೋಗಾಂಗದ ಭಾವಲಿಂಗ. ಹೀಗೆ ಇಷ್ಟಲಿಂಗದ ಸಂಬಂಧ ಬರೀ ಬಾಹ್ಯದ್ದಲ್ಲ; ಅತ್ಯಂತ ಆಂತರಿಕವಾದುದು.

ಆಯುತಲಿಂಗ ಸಂಬಂಧವಿಲ್ಲವಾದರೆ ಅಂಗತ್ವವೇ ಇಲ್ಲ. ಭಕ್ತತ್ವ ಮೊದಲೇ ಇಲ್ಲ. ಅಂಗಭವಿಯಾದಲ್ಲಿ ಭಕ್ತತ್ವವನ್ನು ಸಾಧಿಸುವುದು ಆರೆ ಮರುಳುತನ. ಕಾಯ ಶುದ್ಧವಾಗದೆ ಕ್ರಿಯೆ ಶುದ್ಧವಾಗದು. ಕ್ರಿಯೆ ಶುದ್ಧವಾಗದಲ್ಲಿ ಕ್ರಿಯಾಲಿಂಗವಿರದು. ಸತ್ಕಳೆ ಸಮನಿಸದು.

"ಎನ್ನ ಸ್ಥೂಲ ತನುವಿಂಗೆ ಶಿಲೆಯ ಮರೆಯಲ್ಲಿ ನಿಂದು
ಎನ್ನ ಘಟದಲ್ಲಿ ಮೂರ್ತಿಗೊಂಡು,
ಬಾಹ್ಯ ಕ್ರಿಯಾರ್ಚನೆ ಪೂಜನೆಗಳಿಂದ ಆಸ್ಥೂಲ ತನುವ ಶುದ್ಧ ಮಾಡಿದೆ."

ಶರೀರ ಶುದ್ಧತೆಗೆ ಸಾಧನ ಬಾಹ್ಯ ಕ್ರಿಯಾರ್ಚನೆ ಪೂಜನೆಗಳು. ಕ್ರಿಯಾರ್ಚನೆಗೆ ಕಾರಣ ಕ್ರಿಯಾರೂಪ ಇಷ್ಟಲಿಂಗ. ಕ್ರಿಯಾರ್ಚನೆಗಾಗಿಯೇ ತ್ಯಾಗಾಂಗದಲ್ಲಿ ಮೂರ್ತಿಗೊಂಡಿದೆ, ಶಿಲೆಯ ಮರೆಯಲ್ಲಿ ನೆಲಸಿದೆ, ಸ್ಥೂಲ ತನುವನ್ನು ಶುದ್ಧವಿಸಿ ತ್ಯಾಗಾಂಗ ಸ್ಥಲವನ್ನಾಗಿಸುತ್ತದೆ.

ಇಲ್ಲಿ ಪ್ರಯೋಗಿಸಿದ 'ಶಿಲೆಯ ಮರೆಯಲ್ಲಿ ನಿಂದು' ಎಂಬುದು ಗಮನಾರ್ಹ ವಿಚಾರ. ಶಿಲೆಯೇ ಅಂದರೆ ಪೀಠವೇ ಲಿಂಗವೆಂದು ಭ್ರಮಿಸಿದವರಿಗೊಂದು ಬೆಳಕು. ನೆಲಸಲು ಶಿಲೆ ಆಶ್ರಯವೇ ಹೊರತು ಶಿಲೆಯೇ ಲಿಂಗವಲ್ಲ. ಕಲ್ಲು ಲಿಂಗವೆಂದು ಕಟಕಿಯಾಡುವವರು ಇದನ್ನು ಚೆನ್ನಾಗಿ ಗಮನಿಸಿದಲ್ಲಿ ಲೇಸು.

ತನು ಭಾವ ತೊಲಗುವುದೇ ಪರಿಶುದ್ಧತೆ. ತನುತನದಲ್ಲಿ ಅಣುತನವಿದೆ, ಅಣುತನವಿರುವಲ್ಲಿ ಆಣವಮಲತನವಿರುತ್ತದೆ. ಆಣವಮಲದೊಡನೆ ಮಾಯಾ ಮಲ ಕಾರ್ಮಿಕಮಲಗಳಿರುತ್ತವೆ. ಇವಿರುವಲ್ಲಿ ಶುದ್ಧತೆಯಿರಲು ಸಾಧ್ಯವಿಲ್ಲ.

"ಸ್ಥೂಲದಿಂದ ದೃಷ್ಟ, ಸೂಕ್ಷ್ಮದಿಂದ ಅದರ ಸುಸಂಗ :
ಕಾರಣದಿಂ ವಾಯು ಭ್ರಮೆ. ಇಂತೀ ತನುತ್ರಯಂಗಳ
ಕಳೆದು ನಿಜದ ಉಳುಮೆಯಲ್ಲಿ ಒಡಗೂಡಬೇಕು,
ವೀರ ಶೂರ ರಾಮನಾಥನ."

ತನುತ್ರಯಗಳನ್ನು ಕಳೆವ ಬಗೆ ಈ ವಚನದಲ್ಲಿ ಸೂಚ್ಯವಾಗಿ ವ್ಯಕ್ತವಾಗಿದೆ. ಸ್ಥೂಲವಾದ ಅಂದರೆ ಸಾಕಾರವಾದ ಇಷ್ಟಲಿಂಗ ಸಂಬಂಧ (ಧಾರಣ)ದಿಂದ ದೃಷ್ಟದೇಹದ ಅಂದರೆ ಸ್ಥೂಲ ತನುವಿನ ಸಂಸಾರವನ್ನು, ಸೂಕ್ಷ್ಮವಾದ ಅಂದರೆ ನಿರಾಕಾರವಾದ ಪ್ರಾಣಲಿಂಗ ಸಂಬಂಧ (ಧ್ಯಾನ)ದಿಂದ ಸೂಕ್ಷ್ಮ ತನುವಿನ ಸಂಸಾರವನ್ನು ಇಷ್ಟಲಿಂಗ ಪ್ರಾಣಲಿಂಗಗಳಿಗೆ ಕಾರಣವಾದ ಭಾವಲಿಂಗ ಸಂಬಂಧ (ನಿದಿಧ್ಯಾಸ)ದಿಂದ ಕಾರಣ ತನುಭ್ರಮೆಯನ್ನು ಕಳೆದು ಪರಿ ವಿಡಿದು ತ್ಯಾಗಾಂಗ ಭೋಗಾಂಗ ಯೋಗಾಂಗಳನ್ನಾಗಿಸಿ, ನಿಜದ ಉಳಿವೆಯಲ್ಲಿ ಅಂದರೆ ಲಿಂಗತ್ರಯಗಳಲ್ಲಿ ಒಡಗೂಡುವುದೇ ತನುಭಾವ ತೊಲಗಿ ತತ್ತ್ವಭಾವ ನೆಲಸುವ ಪರಿ.

ಸ್ಥೂಲ ತನುವಿನಲ್ಲಿ ಇಷ್ಟರೂಪ ಕ್ರಿಯಾಲಿಂಗವಿರುತ್ತದೆ. ಸ್ಥೂಲತನು ವೆಂದರೆ ಪೃಥ್ವಿ ಅಪ್ ಭೂತಾಂಗಗಳೆರಡರ ಪರಿಣಾಮವಾದ ತನು. ಅಂದರೆ ಅಸ್ಥಿ ಮಾಂಸ ನಾಡಿ ಚರ್ಮ ರೋಮಂಗಳು ಮತ್ತು ರಕ್ತ ಶುಕ್ಲ ಮೂತ್ರ ಬೆವರು ಜೊಲ್ಲುಗಳು. ಈ ಹತ್ತರ ಸಮಷ್ಟಿಯೇ ಸ್ಥೂಲತನು ಇವು ಕ್ರಿಯೆಗೆ ಆಶ್ರಯ ; ಅಥವಾ ವಿಷಯ. ಇವುಗಳಲ್ಲಿ ಕ್ರಿಯಾಲಿಂಗವಿದ್ದು ಸತ್ಕ್ರಿಯಾಚಾರ ಗಳನ್ನು ಮಾಡಿಸಿ ಇವುಗಳಲ್ಲಿರುವ ತನುಭಾವವನ್ನು ತೊಲಗಿಸಿ ಅಂಗಭಾವವನ್ನು ಅಳವಡಿಸಿ, ಈ ಅಂಗಾವಚ್ಛಿನ್ನ ಚೈತನ್ಯವಾದ ಕ್ರಿಯಾಲಿಂಗದಲ್ಲಿ ಇನ್ನೂ ಮಿಗಿ ಲಾಗಿ ಶ್ರದ್ಧೆ ನಿಷ್ಠೆಗಳು ಸಾತಿಶಯವಾಗಿ ಅಂಗತ್ವವನ್ನೂ ಹಿಂಗಿಸಿ ನಿಜದ ಉಳಿಮೆ ಯಾದ ಲಿಂಗಸ್ವರೂಪದಲ್ಲಿ ವಚನಕಾರನು ಹೇಳುವಂತೆ ಒಡಗೂಡಿ ಸಚ್ಚಿದ್ರೂ ಪಾದ ಕ್ರಿಯಾಜ್ಞಾನಗಳಲ್ಲಿ ಕರಿಗೊಳ್ಳುವ ಕಲಾಶಕ್ತಿಯುಂಟಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕೇವಲ ಶಿಲೆಯು ಮರೆಯಲ್ಲಿರುವ, ಕರಕಂಜದಲ್ಲಿ

ಕರಿಗೊಂಡ ಇಷ್ಟವೊಂದೇ ಲಿಂಗವೆಂದಲ್ಲ. ತ್ಯಾಗಾಂಗವನ್ನು ತುಂಬಿಕೊಂಡಿರುವ ಸಚ್ಚಿದ್ರೂಪಾದ ಕ್ರಿಯಾಜ್ಞಾನ ಸ್ವರೂಪವೂ ಇಷ್ಟರೂಪ ಕ್ರಿಯಾಲಿಂಗವೆಂದು ಶತಸ್ಸಿದ್ಧವಾಗುತ್ತದೆ.

"ಕೈಯಲ್ಲಿ ಕುರಿತು ಹಿಡಿದು, ಕಣ್ಣಿನಲ್ಲಿ ನೋಡಿ
ಆತ್ಮನಲ್ಲಿ ಅರಿದು, ತನ್ನ ತಾನೇ ತಿಳಿದು, ಕಯ್ಯಲ್ಲಿದ್ದುದೇನು ?
ಕಣ್ಣಿನಲ್ಲಿ ನೋಡಿದುದೇನು ? ಆತ್ಮನಲ್ಲಿ ಅರಿದುದೇನು ?
ಇಂತೀ ತ್ರಿವಿಧ ಗುಣವ ತಿಳಿಯಬೇಕಣ್ಣ.
ಕೈಯಲ್ಲಿದ್ದುದು ಕಡದ ಲಿಂಗವೊ ?"
ಕಣ್ಣಿನಲ್ಲಿ ನೋಡಿದುದು ಬಣ್ಣದ ಲಿಂಗವೊ ?
ಆತ್ಮನಿಂದರಿದುದು ಬಯಲ ಲಿಂಗವೋ ?
ಕೈಗೂ ಕಣ್ಣಿಗೂ ಮನಕ್ಕೂ ಭಿನ್ನವಾಯಿತ್ತು.
ಲಿಂಗಪ್ರಾಣಿ, ಪ್ರಾಣಲಿಂಗಿಗಳ ಇನ್ನಾರನೂ ಕಾಣೆ.
ಭಾವಿಸಲಿಲ್ಲ, ಭ್ರಮೆಗೊಳಗಾಯಿತ್ತು.
ಆದಿಯ ಶರಣರೆಲ್ಲರೂ ಹೋದರಲ್ಲಾ ಹೊಲಬುಗೆಟ್ಟು.
ನಾದಕ್ಕೊಳಗಾಯಿತ್ತು. ಆತ್ಮನ ಕಳೆಯನೆಯ್ದಿದರಿನ್ನಾರನೂ ಕಾಣೆ.
ಕಳಾತೀತ ಪರಂಜ್ಯೋತಿ ಪ್ರಕಾಶ ನೀನೇ ನಿಷ್ಕಳಂಕಮಲ್ಲಿಕಾರ್ಜುನ."

ಮೇಲಿನ ಅಭಿಪ್ರಾಯವನ್ನೇ ಈ ವಚನ ಎತ್ತಿಹಿಡಿದಿದೆ. ಕರದೊಳಗಿರುವ ಕುರುಹೊಂದೇ ಕ್ರಿಯಾಲಿಂಗವೆಂದಲ್ಲ. ಕಾಯದೊಳಗಿರುವ ಕ್ರಿಯಾ ಶಕ್ತಿಯೂ ಸಹ ಕ್ರಿಯಾಲಿಂಗವಾಗಬೇಕು. ಇದಾಗಬೇಕಾದರೆ ಕರದ ಕ್ರಿಯಾಲಿಂಗದ ಸತ್ಯ ಶುದ್ಧ ಸಾಂಸ್ಕಾರಿಕ ಶಕ್ತಿ ಕಾಯದ ಅಸ್ಥಿ ಮೊದಲಾದವುಗಳಲ್ಲಿ ಆಳವಡಬೇಕು; ಅಸ್ಥಿ ಮಾಂಸ ನಾಡಿ ಚರ್ಮ ರೋಮಾದಿಗಳಲ್ಲಿ ನಿತ್ಯ ನಿಸರ್ಗ ಕ್ರಿಯೆಯಿರುತ್ತದೆ. ಕರದಿಷ್ಟದಲ್ಲಿ ಶ್ರೀ ಗುರು ಇರಿಸಿದ ಕ್ರಿಯಾದೀಕ್ಷಾ ಸಂಸ್ಕಾರವು ಕರದಿಷ್ಟದಿಂದ ಕಾಯಕ್ಕೆ ಕರಿಗೊಳ್ಳಬೇಕು ಅಂದರೆ ಕರದಿಷ್ಟ ಲಿಂಗದಿಂದ ಪ್ರೇರಿತವಾಗಿ ಕಾಯವು ನೈಮಿತ್ತಿಕ ವಿಹಿತಗಳಾದ ಅರ್ಚನ ಕಾಯಕಾದಿಗಳಲ್ಲಿ ನಿರತವಾಗಿರಬೇಕು. ಈ ಅರ್ಚನ ಆಚಾರ ಸತ್ಯ ಶುದ್ಧ ಕಾಯಕಾದಿಗಳನ್ನು ಮಾಡದೆ ಕೇವಲ ಕೈಯಲ್ಲಿ ಅಥವಾ ಎದೆಯಲ್ಲಿ ಲಿಂಗಧಾರಣವಿದ್ದರೆ ಪ್ರಯೋಜನ

ವಿಲ್ಲ. ಮತ್ತು ಕೇವಲ ಕರದ ಕುರುಹೇ ಲಿಂಗವೆಂದು ತಿಳಿದಿದ್ದರೆ ತಪ್ಪು; ಕರದಿಷ್ಟವೂ ಕಾಯದ ಕ್ರಿಯಾಶಕ್ತಿಯೂ ಒಡಗೂಡಿರುವುದೇ ಇಷ್ಟರೂಪಕ್ರಿಯಾ ಲಿಂಗಸ್ವರೂಪ. ಪೂಜಾದಿಕ್ರಿಯಾಚಾರಗಳಿಂದ ಅಸ್ಥಿ ಮಾಂಸಾದಿಗಳು ರಕ್ತ ಶುಕ್ಲಾದಿಗಳು ಶುದ್ಧವಾಗುತ್ತವೆ, ಸಚೇತನ ಗೊಳ್ಳುತ್ತವೆ. ಸತ್‌ಕ್ರಿಯಾಲಿಂಗ ಸ್ವರೂಪವಾಗುತ್ತವೆ. ಇದಲ್ಲದೆ ಈ ವಚನದ ಅರ್ಥವನ್ನು ಪುರಾತನರು ಹೀಗೆ ಅಳವಡಿಸಿದ್ದಾರೆ ; ಹಸ್ತದಲ್ಲಿ ಇಷ್ಟಲಿಂಗವನು ಕುರುಹಿಟ್ಟು ಪಿಡಿದು, ಸುಜ್ಞಾನ ದೃಷ್ಟಿಯಲ್ಲಿ ಪ್ರಾಣಲಿಂಗದ ನಿರೀಕ್ಷಿಸಿ, ಆತ್ಮದಲ್ಲಿ ಭಾವಲಿಂಗದ ಸಂಭಂಧವ ತಿಳಿದು, ತಮ್ಮ ಜ್ಞಾನದಿಂದ ತಾವೇ ಅರಿದು, ನಾವು ತ್ರಿವಿಧಲಿಂಗ ಸಂಬಂಧಿಗಳೆಂದು ಹೇಳುತ್ತಿಹರು. ಕೈಯಲ್ಲಿರುವುದು ಇಷ್ಟಲಿಂಗವೆಂದು, ಜ್ಞಾನದೃಷ್ಟಿಯಲ್ಲಿ ನೋಡಿದುದು ಪ್ರಾಣಲಿಂಗವೆಂದು, ಆತ್ಮನಲ್ಲಿ ತಿಳಿದುದು ಭಾವಲಿಂಗವೆಂದು ಈ ತ್ರಿವಿಧಲಿಂಗ ಒಂದೇ ಎಂಬ ಸಮರಸ ಭಾವವನರಿಯಬೇಕು. ಎಲೇ ಹಿರಿಯರುಗಳಿರಾ, ಕಯ್ಯಲ್ಲಿರುವುದು ಪಂಚಸೂತ್ರಪ್ರಮಾಣದಿಂದ ಕಟಿದು ತಿದ್ದಿ ತೀರ್ಚಿ ಒಪ್ಪವಿಟ್ಟುದು ಲಿಂಗವೆಂದಲ್ಲಿ ಅಹುದು ಎಂಬರು. ಸುಜ್ಞಾನದೃಷ್ಟಿಯಲ್ಲಿ ನಿರೀಕ್ಷಿಸಿದುದು ಸಾಕಾರ–ನಿರಾಕಾರದೊಡನೆ ಕೂಡಿದ ಮಂತ್ರಮೂರ್ತಿಯಾದ ಪ್ರಾಣಲಿಂಗವು ಎಂಬಲ್ಲಿ ಅಹುದು ಎಂಬರು. ಆತ್ಮನಿಂದ ತಿಳಿದು ನಿರಾಕಾರವಾದುದು ಭಾವಲಿಂಗವು ಎಂಬಲ್ಲಿ ಅಹುದು ಎಂಬರು. ಕೈಯಲ್ಲಿಪ್ಪ ಇಷ್ಟಲಿಂಗಕ್ಕೂ, ಸುಜ್ಞಾನದಲ್ಲಿ ನೋಡಿದ ಪ್ರಾಣಲಿಂಗಕ್ಕೂ, ಆತ್ಮನಲ್ಲಿ ತಿಳಿದ ಭಾವಲಿಂಗಕ್ಕೂ ಬೇರಾಯಿತ್ತು. ಪ್ರಾಣಲಿಂಗದಲ್ಲಿ ಪ್ರಾಣವು ಕೂಡಿ ಪ್ರಾಣದಲ್ಲಿ ಪ್ರಾಣಲಿಂಗವು ಕೂಡಿ ಪ್ರಾಣ ಪ್ರಾಣಲಿಂಗಸಮರಸವುಳ್ಳವರ ಒಬ್ಬರನೂ ಕಾಣೆನು. ತ್ರಿವಿಧಲಿಂಗವು ಒಂದೇ ಎಂಬ ಸಮರಸಭಾವದಿಂದೆ ಭಾವಿಸಲಿಲ್ಲ. ಭಿನ್ನಭಾವಿಗಳು ಭಿನ್ನಭಾವಭ್ರಾಂತಿಗೆ ಈಡಾದರು. ಜ್ಞಾನಿಗಳೆನಿಸಿಕೊಂಬ ಶರಣರುಗಳೆಲ್ಲರು ಸತ್ಪಥಮಾರ್ಗಕ್ಕೆ ವಿಲಕ್ಷಣರಾಗಿ ಭಿನ್ನಭಾವಿಗಳಾಗಿ ಹೋದರಲ್ಲಾ ! ಇವರೆಲ್ಲರು ಪ್ರಾಣನ ಪ್ರಪಂಚಿಗೆ ಒಳಗಾದರು. ಆತ್ಮನಲ್ಲಿ ಬೆಳಗುವ ಮಹಾಲಿಂಗವೇ ಇಷ್ಟ ಪ್ರಾಣಭಾವಲಿಂಗವಾಗಿಪ್ಪುದೆಂದರಿದು ತ್ರಿವಿಧ ಭಕ್ತಿವಿಡಿದು ಆಚರಿಸಿ, ಮಹಾಲಿಂಗದಲ್ಲಿ ಕೂಡುವರೊಬ್ಬರನೂ ಕಾಣೆ. ಪರಂಜ್ಯೋತಿ ಪ್ರಕಾಶವನುಳ್ಳಮಹಾಲಿಂಗವೇ, ನೀನು ಪ್ರಾಣನ ವರ್ತನೆ ಇಲ್ಲದ ಚಿತ್ಪ್ರಾಣನಲ್ಲಿ ಪ್ರಾಣಲಿಂಗವಾಗಿಪ್ಪೆ. ದೇಹದ ವರ್ತನೆ ಇಲ್ಲದ ಆಚಾರ ಲಿಂಗದಲ್ಲಿ ಇಷ್ಟಲಿಂಗವಾಗಿಪ್ಪೆ. ಆತ್ಮನ ವರ್ತನೆ ಇಲ್ಲದ ಚಿದಾತ್ಮನಲ್ಲಿ ಭಾವಲಿಂಗವಾಗಿಪ್ಪೆ— ಎಂದರಿದು ಸಮರಸದಿಂದ ಆಚರಿಸುತ್ತಿರುವನೆಂಬುದರ್ಥ

ಈ ಅರ್ಥವಿವರಣೆಯಲ್ಲಿ ಇಷ್ಟಲಿಂಗದ ನಿರ್ದಿಷ್ಟ ಲಕ್ಷಣವನ್ನು ನೆಲೆಯನ್ನು ನಿದರ್ಶಿಸಲಾಗಿದೆ. ಇದರಿಂದಾಗಿ ಇದನ್ನು ಇಲ್ಲಿ ಎತ್ತಿ ಉದ್ಧರಿಸಲಾಗಿದೆ.

ಇನ್ನು ಇಷ್ಟಲಿಂಗವನ್ನು ಹೇಗೆ ತನ್ನ ತ್ಯಾಗಂಗದಲ್ಲಿ ಅಳವಡಿಸಿ ಕೊಳ್ಳಬೇಕು ? ಅಳವಡಿಸಿಕೊಂಡರೆ ಆಗುವ ಯೋಗವೇನು ? ಎಂಬ ಕೇಳಿಕೆಗಳಿಗೆ ಈ ಮುಂದಿನ ವಚನ ಉತ್ತಮ ಉತ್ತರವಾಗಿದೆ :

"ಹೊರಸವಿ, ಒಳಸವಿ; ತೀರಾಸವಿ.
ಹೊರಸವಿಯಿಂದ ಬ್ರಹ್ಮಸತ್ತ; ಒಳಸವಿಯಿಂದ ವಿಷ್ಣು ಸತ್ತ.
ತೀರಾಸವಿಯಿಂದ ರುದ್ರಸತ್ತ; ಷಡ್ರುಚಿಯಿಂದ ಬ್ರಹ್ಮಾಂಡ ಜನರು ಸತ್ತರು.
ಇಂತೀಸವಿಯ ಸೇವಿಸಿದಾತನೇ ನಿಜಲಿಂಗೈಕ್ಯ,
ನಿಃಕಳಂಕ ನಿರ್ಮಾಯ ಪ್ರಭುವೇ !"

ಹೊರಸವಿ ಇಷ್ಟಲಿಂಗದ ಸುಖ. ಒಳಸವಿ ಪ್ರಾಣಲಿಂಗದ ಸುಖ. ತೀರಾಸವಿ ಭಾವಲಿಂಗದ ಸುಖ. ಷಡ್ರುಚಿ ಷಡ್ವಿಧಲಿಂಗವನೊಳಕೊಂಡ ಮಹಾಲಿಂಗರುಚಿ. ಖರ್ಜೂರದಂತೆ ಸಕ್ಕರೆಯ ಬಾದಾಮಿಯಂತೆ ಹೊರಸವಿ ಇಷ್ಟಲಿಂಗಾನಂದ. ತೆಂಗಿನಂತೆ ಬಾಳೆಯಂತೆ ಒಳಸವಿ ಪ್ರಾಣಲಿಂಗಾನುಷ್ಠಾನ. ದ್ರಾಕ್ಷಿಯಂತೆ ಬೆಲ್ಲದಂತೆ ಒಳಹೊರಸವಿ ಭಾವಲಿಂಗೋಪಾಸನ. ಇಷ್ಟಲಿಂಗದ ಚಿತ್ಕಳೆಯನ್ನು ಅಂತರಂಗಕ್ಕೆ ಅಳವಡಿಸಿಕೊಳ್ಳುವುದು ಕರ್ಮಕಾಂಡಿಗೆ ಕಠಿಕಷ್ಟ. ತೆಂಗನು ಒಡೆಯದೆ ಬಾಳೆಯ ಸುಲಿಯದೆ ತಿಂದರೆ ಹೇಗೆ ರುಚಿಬಾರದೋ ಹಾಗೆ ದೇಹಮೋಹ ದೇಹಭಾವಗಳಳಿಯದೆ ಪ್ರಾಣಲಿಂಗೋಪಾಸನೆಯನ್ನು ಮಾಡಿ ಸುಖಿಸಲು ಕರ್ಮಕಾಂಡಿಗೆ ವೇದಾಂತಿಗೆ ಯೋಗಮಾರ್ಗಿಗೆ ಸಿದ್ಧಾಂತಿಗೆ ಅಸಾಧ್ಯ ಕ್ರಿಯಾಲಿಂಗೋಪಾಸನೆಯಿಂದ ದೇಹಮೋಹವಳಿದು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗೋಪಾಸನೆಯಲ್ಲಿ ಪರಮ ಪ್ರೇಮವುಳ್ಳ ಪ್ರಸಾದಿಗೆ ಮಾತ್ರ ಸಾಧ್ಯ. ಇಷ್ಟಪ್ರಾಣಲಿಂಗಗಳನ್ನು ಒಳಗೊಂಡಲ್ಲದೆ ಇರುವ ಮಹಾನಂದವು ಶಿವಯೋಗಿಗಲ್ಲದೆ ಸರ್ವರಿಗೆ ಸಾಧ್ಯವಿಲ್ಲ.

'ಚಿದಂಶಕನಾದ ಜ್ಞಾನಸಕಲಾತ್ಮನು ಇಷ್ಟಲಿಂಗವನು ಬ್ರಹ್ಮತತ್ವಾತ್ಮಂಶಿಕ

ವಾದಸ್ಥೂಲತನುವಿನಲ್ಲಿ ಸ್ವಾಯತವಮಾಡಿ, ಆ ಸ್ಥೂಲತನುವಿನ ಪ್ರಕೃತಿಯನು ನಷ್ಟವ ಮಾಡಿದನೆಂಬುದೀಗ ಹೊರಸವಿಯಿಂದ ಬ್ರಹ್ಮಸತ್ತನೆಂಬ ಶಬ್ದಕ್ಕರ್ಥ.'

ಪ್ರಾಕೃತಿಕವಾಗಿ ಬ್ರಹ್ಮಸತ್ತಾತ್ಮಕವಾದುದು ಸ್ಥೂಲತನು; ಇದರಿಂದ ಇದು ಸ್ಥೂಲಪ್ರಕೃತಿ; ಜಡಭಾವವುಳ್ಳದು, ನೈಮಿತ್ತಿಕ ವಿಹಿತಾದಿ ಸತ್ಕ್ರಿಯೆಗೆ ಆಶ್ರಯವಿಲ್ಲದು. ಇಂತಹ ಸ್ಥೂಲ ತನುವಿನಲ್ಲಿ ಸಚ್ಚಿದಾನಂದ ಸ್ವರೂಪವಾದ ಇಷ್ಟಲಿಂಗವನ್ನು ಆಯತಗೊಳಿಸುವುದಲ್ಲದೆ ಸ್ವಾಯತವನ್ನಾಗಿಯೂ ಮಾಡಿ ನಿತ್ಯದ ನಿಸರ್ಗಕ್ರಿಯೆಗಳೊಡನೆ ನಿತ್ಯನೈಮಿತ್ತಿಕವೆನಿಸಿದ ಇಷ್ಟಲಿಂಗಾರ್ಚನಾದಿಗಳಲ್ಲಿ ನಿರತವನ್ನಾಗಿಸಿದರೆ ಬ್ರಹ್ಮತತ್ತ್ವವಾದ ಪ್ರಾಕೃತಿಕಾಂಶವು ಅಂದರೆ ಜಡಪ್ರಕೃತಿ ಭಾವವು ನಷ್ಟವಾಗಿ ದೈಹಿಕದುಃಖಕಾಠಿಣ್ಯಾದಿಗಳು ದೂರವಾಗಿ ತ್ಯಾಗಾಂಗ ನಿಜ ತತ್ತ್ವಾನಂದಮಯವಾಗುತ್ತದೆ. ಸದ್ರೂಪವಾಗಿ ಶಿವದರ್ಶನ ಸಂತೋಷ ಸಂಪ್ರಾಪ್ತಿಯಾಗುತ್ತದೆ.

ಇನ್ನು 'ಆ ಇಷ್ಟಲಿಂಗ ಪ್ರಾಣಕಳಾ ಚೈತನ್ಯಸ್ವರೂಪವಾದ ಪ್ರಾಣಲಿಂಗ-ವನ್ನು ವಿಷ್ಣುತತ್ತ್ವಾಂಶಿಕ ಸೂಕ್ಷ್ಮತನುವಿನಲ್ಲಿ ಸ್ವಾಯತವಮಾಡಿ ಆ ಸೂಕ್ಷ್ಮ ತನುವಿನ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ಒಳಸವಿಯಿಂದ ವಿಷ್ಣುಸತ್ತನೆಂಬರ್ಥ.'

ಅಂತೆಯೇ ಪ್ರಾಕೃತಿಕವಾಗಿ ವಿಷ್ಣುತತ್ವಾಂಶಿಕವಾದುದು ಸೂಕ್ಷ್ಮತನು. ಮಾಯಿಯಮಲವುಳ್ಳದು. ಚಂಚಲಾತ್ಮಕವಾದುದು. ಸಂಕಲ್ಪವಿಕಲ್ಪಾತ್ಮಕ ವಾದುದು. ಹಮ್ಮುಬಿಮ್ಮುಗಳಿಂದ ಕೂಡಿದುದು. ಈ ರೂಪದ ಸೂಕ್ಷ್ಮತನುವಿನಲ್ಲಿ ಆ ಇಷ್ಟಲಿಂಗದ ಪ್ರಾಣಕಳೆಯಂತಿರುವ ಸಕಲನಿಷ್ಕಲವಾದ ಪ್ರಾಣಲಿಂಗವನ್ನು ಪ್ರತಿಷ್ಠಿಸಿ ಸೂಕ್ಷ್ಮತನುವಿನ ವಿಷಯವಾಸನೆಯನ್ನು ಆಶೋತ್ತರವನ್ನು ಅಳಿಸಿ ಬಿಡುವುದೇ ವೈಷ್ಣವೀ ಪ್ರಕೃತಿಯನ್ನು ನಿವೃತ್ತಿಗೊಳಿಸುವಿಕೆ. ಆಗ ಪ್ರಾಕೃತಿಕ ಜ್ಞಾನದೊಡನೆ ಪರಮಾರ್ಥಜ್ಞಾನವಾಗಿ ಸದ್ವಾಸನೆ ಸದಾಶೆಗಳು ಉಂಟಾಗುತ್ತವೆ.

ಮೂರನೆಯದಾಗಿ 'ಪ್ರಾಣಲಿಂಗದ ಪರಮಾನಂದ ಸ್ವರೂಪವಾದ ಭಾವಲಿಂಗವನು ರುದ್ರತತ್ತ್ವಾಂಶಿಕವಾದ ಕಾರಣತನುವಿನಲ್ಲಿ ಸ್ವಾಯತವ ಮಾಡಿ ಆ ತನುವಿನ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ತೀರಾ ಸವಿಯಿಂದ ರುದ್ರಸತ್ತ ಎಂಬ ಶಬ್ದಕ್ಕರ್ಥ.'

ಪ್ರಾಕೃತಿಕ ಕ್ರಮದಂತೆ ರುದ್ರ ತತ್ತ್ವಾಂಶಿಕವಾಗಿದೆ ಕಾರಣತನು. ಅದರಿಂದಾಗಿ ಅದು ಆಣವಮಲವುಳ್ಳುದಾಗಿದೆ. ಅಜ್ಞಾನವುಳ್ಳದ್ದಾಗಿದೆ. ಭಾವಭ್ರಮೆಯುಳ್ಳುದಾಗಿದೆ. ದುರ್ಭಾವಯುಕ್ತವಾಗಿದೆ. ಇದಿಷ್ಟು ಅದರ ಪ್ರಕೃತಿಸ್ವಭಾವ. ಅಂತಹ ಆ ಕಾರಣತನುವಿನಲ್ಲಿ ಪ್ರಾಣಲಿಂಗದ ಪರಮಾನಂದಸ್ವರೂಪವಾದ ಭಾವಲಿಂಗವನ್ನು ನೆಲಗೊಳಿಸಿ ಆ ಕಾರಣತನುವಿನ ಅಣುಭಾವ ದುರ್ಭಾವ ಭ್ರಮಾದಿಗಳನ್ನು ದೂರಮಾಡುವುದೇ ರೌದ್ರಪ್ರಕೃತಿಯನ್ನು ನಿವೃತ್ತಿಗೊಳಿಸಿದಂತೆ. ಆಗ ಅದು ಯೋಗಾಂಗವಾಗಿ ಪರಮಾನಂದವನ್ನು ಪಡೆಯುತ್ತದೆ.

'ಆ ಇಷ್ಟ–ಪ್ರಾಣ–ಭಾವಲಿಂಗದ ಏಕಸ್ವರೂಪಾದ ಘನಮಹಾಲಿಂಗವನ್ನು ಷಡ್ವಿಧಾಂಗದಲ್ಲಿರುವ ಮನಮೊದಲಾಗಿ ಅರುವತ್ತಾರುಕೋಟಿ ಕರಣಂಗಳ ಪ್ರಕೃತಿಯ ನಷ್ಟವಮಾಡಿದನೆಂಬುದೀಗ 'ಷಡ್ರುಚಿಯಿಂದ ಬ್ರಹ್ಮಾಂಡದ ಜನರು ಸತ್ತರು ಎಂಬ ಶಬ್ದಕ್ಕರ್ಥ.'

"ಅಂಗಕ್ರಿಯೆನರಿದಲ್ಲಿ ಸ್ಥಾಣುವಿನ ಬಾಯಂತಿಲದಂತೆ,
ಆತನ ಕಳೆಯ ತಿಳಿದಲ್ಲಿ ಆ ಶಿಲೆಯೊಳಗಿರ್ದ ಬಿಂದು
ಒಲವರದಿಂದ ಜಾರುವಂತೆ, ಆ ಅರಿವು ಮರಿವು ಮಹದಲ್ಲಿ ಬೆರಸುವಾಗ
ವಾರಿಶಿಲೆ ನೋಡನೋಡಲಿಕ್ಕೆ ನೀರಾದಂತೆ ಇರಬೇಕು.
ಕಾಯವಶದಿಂದ ಕರ್ಮವ ಮೀರಿ, ಕರ್ಮವಶದಿಂದ ಧರ್ಮವಶದಿಂದ
ಮಾರ್ಗಗತನಾದಲ್ಲಿ ಅದೇ ಕಾಯವೆರಸಿ ಎಯ್ದಿದ ಕೈಲಾಸ.
ಆ ಭಾವ ನಿಮ್ಮಲ್ಲಿ ನೀವೇ ತಿಳಿದುಕೊಳ್ಳಿ,
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ."

ಕ್ರಿಯೆಯ ಕ್ರಿಯಾಲಿಂಗದ ಆವಶ್ಯಕತೆ ಆಧಿಕ್ಯತೆ ಇದರಲ್ಲಿ ಇಮ್ಮಾಗಿ ಅಭಿವ್ಯಕ್ತವಾಗಿದೆ. ಕ್ರಿಯೆಯಿಲ್ಲದೆ ಕಾಯ ಶುದ್ಧವಾಗದು; ಕಳಾಭಿವ್ಯಕ್ತವಾಗದು. ಕ್ರಿಯಾ ನಿರತರಾಗದೆ ಜೀವನ ಪ್ರಗತಿಯಾಗದು. ಕ್ರಿಯೆಯಿಲ್ಲದೆ ಎಳ್ಳು ಎಣ್ಣೆ ಬಾರದು. ಅಂತೆಯೇ ಶಿವಕ್ರಿಯೆಯಿಲ್ಲದೆ ಅಂತರ್ಗತ ಚಿಲ್ಲಿಂಗ ಕರಸ್ಥಲದಲ್ಲಿ ಕಾಣದು. ಚಂದ್ರಕಾಂತಶಿಲೆಯ ಅಮೃತಬಿಂದು ಚಂದ್ರೋದಯಕ್ಕೆ ಹೊರಹೊಮ್ಮುವಂತೆ ಇಷ್ಟಲಿಂಗದ ಕಳೆಯು ಕ್ರಿಯೆಯ ಜ್ಞಾನಾಚಾರವಿಲ್ಲದೆ ಸರ್ವಾಂಗ

ದಲ್ಲಿ ತುಂಬಿತುಳುಕದು. ಕ್ರಿಯೆ ಜ್ಞಾನಗಳೆರಡೂ ಸಮರಸವಾದರೆ ಆಗ ಆಲಿಕಲ್ಲು (ನೀರ್ಗಲ್ಲು) ಕರಗಿ ನೀರೇ ಆಗುವಂತೆ ಅಂಗವು ಲಿಂಗದೊಡನೆ ಏಕರಸವಾಗುತ್ತದೆ. ತನ್ನ ಅಂಗಭಾವದಿಂದ ನಿಷ್ಪತ್ತಿಗೊಳ್ಳುತ್ತದೆ. ಶಿವಕ್ರಿಯೆಯಿಂದ ಶರೀರವಾಸನೆ ಅಳಿಯುತ್ತದೆ. ಶಿವಜ್ಞಾನದಿಂದ ಮನದಾಸೆ ತೊಲಗುತ್ತದೆ. ಸಂಚಿತ ಆಗಾಮಿ ಪ್ರಾರಬ್ಧಕರ್ಮಗಳು ಬಿಟ್ಟುಹೋಗುತ್ತವೆ. ಆಗ ಅಂಗಲಿಂಗಗಳಿಗೆ ಭಿನ್ನಭಾವ ವಿರುವುದಿಲ್ಲ. ಕ್ರಿಯೆ ಮತ್ತು ಧರ್ಮಗಳ ರಹಸ್ಯ ಅಂತಹದು. ಕ್ರಿಯಾಲಿಂಗ ಪ್ರಭಾವದಿಂದ ಸತ್ಕ್ರಿಯಾನಿರತನಾದ ಭಕ್ತನ ಕಾಯವೇ ಕೈಲಾಸವಾಗುತ್ತದೆ. ಆತನು ಕಾಯವೆರಸಿ ಕೈಲಾಸಕ್ಕೆ ಹೋದಂತಾಗುತ್ತದೆ, ಅಂದರೆ ಕಾಯ ಬೇರಲ್ಲ; ಕೈಲಾಸ ಬೇರಲ್ಲ. ಕ್ರಿಯಾಲಿಂಗನಿಷ್ಠನು ಕಾಯವಿದ್ದು ಕೈಲಾಸಸುಖವನ್ನು ಪಡೆಯುತ್ತಾನೆ. ಜೀವನ್ಮುಕ್ತನೆನಿಸುತ್ತಾನೆ. ಇದು ಕ್ರಿಯಾಲಿಂಗದ ಕಳಾವಂತಿಕೆ. ಕ್ರಿಯಾಲಿಂಗವುಳ್ಳ ಕಾಯವನ್ನು ಬಿಟ್ಟು ಬೇರೆ ಏನನ್ನು ಸಾಧಿಸಲು ಸಾಧ್ಯವಿಲ್ಲ. "ಸ್ಥೂಲತನುವ ಬಿಟ್ಟು ಕಂಡೆಹೆನೆಂದಡೆ ನೀನೇ ಪ್ರಮಾಣು, ಕ್ರಿವಿಡಿದು ಅಂಗದಲ್ಲಿ ನಿಂದಕಾರಣ ! ಸೂಕ್ಷ್ಮತನುವನೊಲ್ಲದೆ ನಿನ್ನನೋಡಿ ಕಂಡೆಹೆನೆಂದಡೆ ನೀನೇ ಪ್ರಮಾಣು. ಭಾವದ ಕೊನೆಯಲ್ಲಿ ಆರ್ಚಿಸಿಕೊಂಬೆಯಾಗಿ ! . ಕಾರಣ ತನುವ ಮರೆದು ನಿನ್ನ ನೋಡಿ ಕಂಡಿಹೆನೆಂದಡೆ ನೀವೇ ಪ್ರಮಾಣು, ಚಿದಂತ್ಯ ಚಿತ್ಪ್ರಕಾಶದ ಬೆಳಗಿನಲ್ಲಿ ಕಟ್ಟುವಡೆದೆಯಾಗಿ! ಇಂತೀ ಜಾಗ್ರದಲ್ಲಿ ಕ್ರಿಮಂತನಾಗಿ, ಸ್ವಪ್ನದಲ್ಲಿ ಆತ್ಮಸ್ವರೂಪನಾಗಿ, ಸುಷುಪ್ತಿಯಲ್ಲಿ ಮೂರ್ಚೆಯಿಂದ ಅಮೂರ್ತಿಯಾಗಿ, ವಿರಳಕ್ಕೆ ವಿರಳವಾಗಿ ಪರಿಪೂರ್ಣವಸ್ತು ನೀನಲಾ-ಭಕ್ತಿಕಾರಣನಾಗಿ! ಶಂಭುಗಿಂದತ್ತ ಸ್ವಯಂಭುಗಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರಾ!"

ಮುಂದಿನ ಎಲ್ಲ ಪ್ರಗತಿಗೂ ಅಂತರಂಗದ ವಿಕಾಸಕ್ಕೂ ತ್ಯಾಗಾಂಗವೇ ಮೂಲಕಾರಣ. ತ್ಯಾಗಾಂಗಗತ ಚೈತನ್ಯಅಂದರೆ ಕ್ರಿಯಾಲಿಂಗವೇ ಮುಖ್ಯಕಾರಣ. ಈ ತ್ಯಾಗಾಂಗ-ಕ್ರಿಯಾಲಿಂಗಗಳನ್ನು ಬಿಟ್ಟು ಮುಂದುವರಿಯಲು ಎಂದಿಗೂ ಯಾವ ಬಗೆಯಲ್ಲಿಯೂ ಸಾಧ್ಯವಿಲ್ಲ. ಏಕೆಂದರೆ

"ಸದ್ಗುರುಸ್ವಾಮಿ ಅನುಗ್ರಹಿಸಿ ಕೊಟ್ಟುದೇ ಇಷ್ಟಲಿಂಗ.
ಆ ಲಿಂಗವೇ ಪ್ರಾಣವ ಭೇದಿಸಿ ಪ್ರಾಣಲಿಂಗವಾಯಿತ್ತು;

ಭಾವವ ಭೇದಿಸಿ ಭಾವಲಿಂಗವಾಯಿತ್ತು. ಈ ತ್ರಿವಿಧವು
ಒಂದೇ ಲಿಂಗ ಕಾಣಾ ಅಪ್ರಮಾಣ ಕೂಡಲಸಂಗಮದೇವ."

ತ್ಯಾಗಾಂಗವೇ ಭೋಗಾಂಗವಾಗಿ ಯೋಗಾಂಗವಾಗುವಂತೆ, ಇಷ್ಟ (ಕ್ರಿಯಾ)ಲಿಂಗವೇ ಪ್ರಾಣಲಿಂಗವಾಗಿ ಭಾವಲಿಂಗವಾಗುತ್ತದೆ–ನಿವೃತ್ತಿಮಾರ್ಗ ದಲ್ಲಿ! ಹೀಗಿರುವಾಗ ತ್ಯಾಗಾಂಗ ಕ್ರಿಯಾಲಿಂಗಗಳ ಮಹತ್ವ ಮನವರಿಕೆಯಾಗ ದಿರದು.

ತ್ಯಾಗಾಂಗವೇ ಉಪಾಸನೆಯು ಭೇದದಿಂದ ಭಕ್ತ, ಮಾಹೇಶ್ವರ ಎಂದು ಎರಡುತೆರನಾದಂತೆ ಉಪಾಸ್ಯ ಇಷ್ಟಲಿಂಗವು ಸಹ ಆಚಾರಲಿಂಗ–ಗುರುಲಿಂಗವೆಂದು ಎರಡು ತೆರನಾಗಿದೆ. ಅಸ್ಥಿ ಮಾಂಸ ನಾಡಿ ಚರ್ಮ ರೋಮ ಮತ್ತು ರಕ್ತ ಶುಕ್ರ ಮುಂತಾದವುಗಳ ರೂಪಾದ ತ್ಯಾಗಾಂಗದಲ್ಲಿ ಕ್ರಿಯಾಲಿಂಗವಿದ್ದರೆ, ತ್ಯಾಗಾಂಗದ ಭಕ್ತಸ್ಥಲಕ್ಕೆ ಸೇರಿದ ಘ್ರಾಣ, ಆಧಾರ, ಚಿತ್ತಗುದಗಳಲ್ಲಿ ಆಚಾರಲಿಂಗವಿರುತ್ತದೆ. ಇದರಿಂದ ಅಪಾನವಾಯು ಶುದ್ಧವಾಗಿ ಸರಳವಾಗಿ ನಿರುಪದ್ರವಿಯಾಗುತ್ತದೆ. ತ್ಯಾಗಾಂಗದ ಮಾಹೇಶ್ವರಸ್ಥಲಕ್ಕೆ ಸೇರಿದ ಜಿಹ್ವೆ, ಬುದ್ಧಿ, ಸ್ವಾಧಿಷ್ಠಾನ, ಗುಹ್ಯಗಳಲ್ಲಿ ಗುರುಲಿಂಗವಿರುತ್ತದೆ. ಇದರಿಂದ ಮುಖ್ಯವಾಗಿ ಪ್ರಾಣವಾಯು ಪಾವನವಾಗಿ ಪುಷ್ಟವಾಗಿ ಉರ್ಧ್ವಮುಖಿಯಾಗುತ್ತದೆ. ಭಕ್ತಾಂಗನಿಗೆ ಆಚಾರ ಲಿಂಗ. ಆಚಾರಲಿಂಗಕ್ಕೆ ಕ್ರಿಯಾಶಕ್ತಿ–ನಿವೃತ್ತಿಕಳೆ. ಮಾಹೇಶ್ವರನಿಗೆ ಗುರುಲಿಂಗ ಗುರುಲಿಂಗಕ್ಕೆ ಜ್ಞಾನಶಕ್ತಿ. ಪ್ರತಿಷ್ಠಾಕಳೆ, ಲೌಕಿಕಕ್ರಿಯಾಶಕ್ತಿ ಪಾರಮಾರ್ಥಿಕ ಕ್ರಿಯಾಶಕ್ತಿ ಎಂದು ಕ್ರಿಯಾಶಕ್ತಿ ಎರಡುಬಗೆಯಾಗಿದೆ. ಇದು ಮುಖ್ಯವಾಗಿ ಕರ್ಮೇಂದ್ರಿಯಗಳಲ್ಲಿರುತ್ತದೆ. ಇದು ಲೌಕಿಕರನ್ನು ಅಸಿಮಸಿ ಕೃಷಿವಾಣಿಜ್ಯಯಾ ಚನೆ ಗೋಪಾಲತ್ವವೆಂಬ ಷಟ್‌ಕೃಷಿಗಳಿಗೆ ಪ್ರೇರೇಪಿಸುತ್ತದೆ. ಪರಮಾರ್ಥಸಾಧಕ ರನ್ನು ಗುರುಕಾರುಣ್ಯಕ್ಕೆ ಪಾತ್ರರನ್ನಾಗಿಸಿ ಲಿಂಗಾಂಗಸಂಬಂಧಿಗಳನಾಗಿಸಿ ಗುರುಭಕ್ತಿ ಲಿಂಗಪೂಜೆ ಜಂಗಮದಾಸೋಹ ಮುಂತಾದ ಸತ್ಕ್ರಿಯೆಗಳನ್ನು ಮಾಡಿಸುತ್ತದೆ, ವಾಕ್ಕಿನಲ್ಲಿ ಶಿವಮಂತ್ರ ಜಪ ಶಿವಸ್ತೋತ್ರಗಳ ಹೇಳಿಸುತ್ತದೆ. ಕರದಿಷ್ಟವನ್ನು ಆರಾಧಿಸಹಚ್ಚುತ್ತದೆ ಕರಗಳನ್ನು. ಗುರುಮಾರ್ಗಾಚಾರದಲ್ಲಿ ನಡೆಯಹಚ್ಚುತ್ತದೆ ಚರಣಗಳನ್ನು. ಅಧೋಗತಿಗೆಳೆವ ಮಲತ್ರಯಗಳನ್ನು ವಾಯುವಿನಿಂದ ಬಿಡಿಸ ಹಚ್ಚುತ್ತದೆ, ಸತ್ಸಂಗದಲ್ಲಿ ಸಂತೋಷಿಸಹಚ್ಚುತ್ತದೆ.

ಅಂತೆಯೇ ಜ್ಞಾನಶಕ್ತಿಯೂ ದ್ವಿವಿಧವಾಗಿದೆ: ಲೌಕಿಕಜ್ಞಾನ, ಪಾರಮಾರ್ಥಿಕ ಜ್ಞಾನವೆಂದು. ಲೌಕಿಕ ವಾಸನೆಯುಳ್ಳವರು ಗುರು-ನರ, ಲಿಂಗ–ಶಿಲೆ ಜಂಗಮ–ಮನುಜ, ಪಾದೋದಕ–ಜಲ, ಪ್ರಸಾದ–ಎಂಜಲು ಎಂದು ಭಾವಿಸುವಂತೆ ಮಾಡುತ್ತದೆ. ಇತ್ತ ಗುರುಕಾರುಣ್ಯವನ್ನು ಪಡೆದು ಲಿಂಗಾಂಗ ಸಂಬಂಧಿಗಳಾದ ಸಾಧಕರಿಗೆ ಆ ನಿಷ್ಕಲ ಪರಬ್ರಹ್ಮದ ಸದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದರೂಪವೇ ಜಂಗಮ, ನಿತ್ಯತ್ವವೇ ಪ್ರಸಾದ, ಪರಿಪೂರ್ಣತ್ವವೇ ಪಾದೋದಕವೆಂದು ತಿಳಿದಾಚರಿಸುವಂತೆ ಪ್ರೇರೇಪಿಸುತ್ತದೆ. ಜ್ಞಾನಶಕ್ತಿಯು ಮುಖ್ಯವಾಗಿ ಜ್ಞಾನೇಂದ್ರಿಯಗಳಲ್ಲಿರುತ್ತದೆ. ಇದು ಕಿವಿಯಿಂದ ಶಿವಜಪ ಶಿವವಿಚಾರಗಳನ್ನೇ ಕೇಳುವಂತೆ ಮಾಡುತ್ತದೆ. ಸ್ಪರ್ಶೇಂದ್ರಿಯದಿಂದ ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗಗಳನ್ನೇ ಸೋಂಕುವಂತೆ ಮಾಡುತ್ತದೆ. ಕಣ್ಣಿನಿಂದ ಶಿವಲಿಂಗ ನೀರಿಕ್ಷಣೆಯನ್ನು ಮಾಡಿಸುತ್ತದೆ. ನಾಲಗೆಯಿಂದ ಗುರುಲಿಂಗಜಂಗಮ ಪ್ರಸಾದವನ್ನೇ ಸ್ವೀಕರಿಸ ಹಚ್ಚುತ್ತದೆ, ಘ್ರಾಣದಿಂದ ಗುರುಸ್ಪರ್ಶವಾದ ಪ್ರಸಾದ ಪುಷ್ಪವನ್ನಾಗಲಿ ಲಿಂಗಕ್ಕೆ ಧರಿಸಿದ ಪ್ರಸಾದ ಪುಷ್ಪಪರಿಮಳವನ್ನಾಗಲಿ ಮೂಸ ಹಚ್ಚುತ್ತದೆ. ಈ ಎಲ್ಲಕ್ರಿಯಾಚಾರ–ಜ್ಞಾನಾಚಾರಗಳಿಂದ ತ್ಯಾಗಾಂಗ ತಿಳಿಗೊಳ್ಳುತ್ತದೆ.

ಆಚಾರಲಿಂಗಕ್ಕೆ ನಾಸಿಕ ಮುಖ, ಚಿತ್ತ ಹಸ್ತ; ಸುಗಂಧ ಪ್ರಸಾದ. ಗುರುಲಿಂಗಕ್ಕೆ ಜಿಹ್ವೆ ಮುಖ, ಬುದ್ಧಿ ಹಸ್ತ; ಸುರಸ ಪ್ರಸಾದ. ಇವೆರಡೊಂದಾದ ಕ್ರಿಯಲಿಂಗಕ್ಕೆ ನಾಸಿಕ ಜಿಹ್ವೆಗಳೆರಡು ಮುಖ, ಚಿತ್ತಬುದ್ಧಿಗಳೆರಡು ಹಸ್ತ; ಸುಗಂಧ ಸುರಸಗಳೆರಡು ಪ್ರಸಾದ. ಮತ್ತು ಪಡಿಪದಾರ್ಥಗಳ ರೂಪು ಪ್ರಸಾದ. ಅಂತೆಯೆ ಆಚಾರಲಿಂಗಕ್ಕೆ ಗಂಧತೃಪ್ತಿ. ಗುರುಲಿಂಗಕ್ಕೆ ರಸತೃಪ್ತಿ. ಇಷ್ಟರೂಪ ಕ್ರಿಯಾಲಿಂಗಕ್ಕೆ ಉಭಯತೃಪ್ತಿ. ಘ್ರಾಣ-ಗಂಧ-ಆಚಾರಲಿಂಗ ಇವು ಭಕ್ತಾಂಗ ತ್ರಿಪುಟಿ. ಜಿಹ್ವೆ–ರಸ–ಗುರುಲಿಂಗ ಇವು ಮಾಹೇಶ್ವರಾಂಗ ತ್ರಿಪುಟಿ. ಸ್ಥೂಲಾಂಗ-ಕ್ರಿಯೆ-ಇಷ್ಟಲಿಂಗ ಇವು ತ್ಯಾಗಾಂಗ ತ್ರಿಪುಟಿ.

ಸ್ಥೂಲಾಂಗ, ಘ್ರಾಣ, ಜಿಹ್ವೆಗಳು ಅಧ್ಯಾತ್ಮ; ಕ್ರಿಯೆ, ಗಂಧ, ರಸಗಳು ಆಧಿಭೂತ; ಇಷ್ಟಲಿಂಗ, ಆಚಾರಲಿಂಗ-ಗುರುಲಿಂಗಗಳು ಅಧಿದೇವತೆ. ಆಚಾರಲಿಂಗ ಅಣುಸ್ವರೂಪ, ಗುರುಲಿಂಗ ಮಹದ್ರೂಪ. ಅಣು ಮಹತ್–ಈ

ಉಭಯರೂಪ ಕ್ರಿಯಾತ್ಮಕ ಇಷ್ಟಲಿಂಗ. ಸದ್ರೂಪ ಆಚಾರಲಿಂಗ, ಚಿದ್ರೂಪ ಗುರುಲಿಂಗ; ಸಚ್ಚಿದಾನಂದರೂಪ ಇಷ್ಟಲಿಂಗ. ಕ್ರಿಯಾಶಕ್ತಿ ಆಚಾರಲಿಂಗದಲ್ಲಿ; ಜ್ಞಾನಶಕ್ತಿ ಗುರುಲಿಂಗದಲ್ಲಿ; ಕ್ರಿಯೆಜ್ಞಾನಶಕ್ತಿಗಳೆರಡು ಇಷ್ಟಲಿಂಗದಲ್ಲಿ. ನಿವೃತ್ತಿಕಳೆ ಆಚಾರಲಿಂಗದಲ್ಲಿ: ಪ್ರತಿಷ್ಠಾಕಳೆ ಗುರುಲಿಂಗದಲ್ಲಿ; ಈ ಉಭಯ ಕಳೆ ಇಷ್ಟಲಿಂಗದಲ್ಲಿ. ನಾದಾತ್ಮಕವಾದ ಅಕಾರ ಬೀಜಾಕ್ಷರ ಸ್ವರೂಪವೇ ಇಷ್ಟ ಲಿಂಗ. ಇದು ತಾರಕ ದಂಡಕ ಆಕೃತಿಗಳುಳ್ಳದು. ಆಚಾರಲಿಂಗ ತಾರಕಾಕೃತಿ; ಗುರುಲಿಂಗ ದಂಡಾಕೃತಿ.

ಕ್ರಿಯಾಲಿಂಗದ ಅರ್ಚನೆಯ ಸಂಬಂಧವಿಡಿದು ಉಳಿದೆಲ್ಲ ಲಿಂಗಗಳು ಅಲ್ಲಲ್ಲಿ ಜಾಗ್ರತಗೊಂಡು ನೆಲೆಸುತ್ತವೆಯೆಂಬುದನ್ನು ಘನಲಿಂಗದೇವರು ಹೀಗೆ ನಿರೂಪಿಸಿ ದ್ದಾರೆ:

ಕ್ರಿಯಾಲಿಂಗವ ಅಂಗೈಯೊಳಳವಡಿಸಿ ಮಜ್ಜನಕ್ಕೆರೆದು, ತ್ರಿಪುಂಡ್ರಮಂ ಧರಿಸಿ, ಪುಷ್ಪಜಾತಿಗಳರ್ಪಿಸಿ ಪೂಜೆಯ ಮಾಡುವನ್ನಕ್ಕರ ಪೂಜೆಗೆ ಮೆಚ್ಚಿ ಪಂಚ ಸ್ಪರ್ಶಗಳ ಮರೆಯಲೊಡನೆ ಆಚಾರದಲ್ಲಿ ಜಂಗಮಲಿಂಗ ನೆಲೆಗೊಂಡಿತ್ತು. ಆ ಲಿಂಗದ ಪ್ರಕಾಶಮಂ ನೋಡುವ ನೇತ್ರಂಗಳು ಆ ಪ್ರಕಾಶಕ್ಕೆ ಮೆಚ್ಚಿ ಪಂಚ ವರ್ಣಂಗಳಂ ಮರೆಯಲೊಡನೆ ಆ ನೇತ್ರಂಗಳಲ್ಲಿ ಶಿವಲಿಂಗ ನೆಲೆಗೊಂಡಿತ್ತು; ಆ ಲಿಂಗದ ಸದ್ವಾಸನೆಯಂ ವಾಸಿಸುವ ಘ್ರಾಣ ಆ ವಾಸನೆಗೆ ಮೆಚ್ಚಿ ಪಂಚ ಗಂಧಂಗಳ ಮರೆಯಲೊಡನೆ, ಆ ಘ್ರಾಣದಲ್ಲಿ ಆಚಾರಲಿಂಗ ನೆಲೆಗೊಂಡಿತ್ತು. ಆ ಲಿಂಗದ ಮಂತ್ರಸ್ವರೂಪವನ್ನೆತ್ತಿ ಕೊಂಡಾಡುವ ಜಿಹ್ವೆ ಆ ಮಂತ್ರಕ್ಕೆ ಮೆಚ್ಚಿ ಪಂಚರಸಂಗಳ ಮರೆಯಲೊಡನೆ ಆ ಜಿಹ್ವೆಯಲ್ಲಿ ಗುರುಲಿಂಗ ನೆಲೆಗೊಂಡಿತ್ತು; ಆ ಲಿಂಗವಂ ಮನವೊಲಿದು ಹಾಡುವ ನಾದಮಂ ಕೇಳಿದ ಶ್ರೋತ್ರ, ಆ ನಾದಕ್ಕೆ ಮೆಚ್ಚಿ ಪಂಚನಾದಂಗಳ ಮರೆಯಲೊಡನೆ ಆ ಶ್ರೋತ್ರದಲ್ಲಿ ಪ್ರಸಾದಲಿಂಗ ನೆಲೆ ಗೊಂಡಿತ್ತು. ಆ ಲಿಂಗಮಂ ನೆನೆವ ಮನ, ಆ ನೆನಹಿಂಗೆ ಮೆಚ್ಚಿ ಪಂಚಪರಿಣಾ ಮಂಗಳ ಮರೆಯಲೊಡನೆ ಆ ಮನದಲ್ಲಿ ಮಹಾಲಿಂಗ ನೆಲೆಗೊಂಡಿತ್ತು; ಈ ಷಡಿಂದ್ರಿಯಗಳು ಆ ಕ್ರಿಯಾಲಿಂಗವನಪ್ಪಿ ಅಗಲದ ಕಾರಣ ಆ ಲಿಂಗ ಒಲಿದು ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ನೆಲೆಗೊಂಡಿತ್ತು........"ಹೀಗೆ ಆ ಕ್ರಿಯಾ ಲಿಂಗವೊಂದೇ ಸರ್ವಾಂಗಲಿಂಗವಾಗುವುದು. ಸರ್ವಕ್ರಿಯೆಗಳಿಗೆ ಸ್ಫುರಣ ಕೊಡು

ವುದು. ಕ್ರಿಯಾಲಿಂಗದ ಕಳೆಯೇ ಸರ್ವಾಂಗಗಳಲ್ಲಿ ಸರ್ವಲಿಂಗಗಳಲ್ಲಿ ಅಂಗವಿಸಿರುವುದು.

"ಪ್ರಣವಸ್ವರೂಪನಾದ ಪರಮಾತ್ಮನು ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ. ಬಿಂದುವೇ ಶರೀರವಾಗಿ, ನಾದವೇ ಪ್ರಾಣವಾಗಿ, ಕಳೆಯೇ ಮನವಾಗಿ, ಬಿಂದುಮಯವಾದ ಶರೀರದಲ್ಲಿ ರೂಪು, ನಾದಮಯಮಾದ ಪ್ರಾಣದಲ್ಲಿ ನಾಮ, ಕಳಾಮಯಮಾದ ಮನದಲ್ಲಿ ಕ್ರಿಯೆ, ಇಂತು ನಾಮರೂಪು ಕ್ರಿಯಾಯುಕ್ತಮಾದ ಪುರುಷನ-ಶರೀರದಲ್ಲಿ ಭಕ್ತಿ, ಪ್ರಾಣದಲ್ಲಿ ಜ್ಞಾನ, ಮನದಲ್ಲಿ ವೈರಾಗ್ಯ ನೆಲೆಗೊಂಡಲ್ಲಿ, ಬಿಂದುವಿನಲ್ಲಿ ಆಚಾರಲಿಂಗ ಸಂಬಂಧವಾಯಿತ್ತು. ನಾದದಲ್ಲಿ ಗುರುಲಿಂಗ ಸಂಬಂಧವಾಯಿತ್ತು, ಕಳೆಯಲ್ಲಿ ಶಿವಲಿಂಗ ಸಂಬಂಧವಾಯಿತ್ತು........"

"ಚರಿಸಿ ವರ್ತಿಸುವುದೇ ಆಚಾರವಾದಕಾರಣ ಇಡಾಪಿಂಗಳ ನಾಡಿಯಿಂ ರೇಚಕ ಪೂರಕಂಗಳು ಚರಿಸಿ ವರ್ತಿಸುವ ದೆಸೆಯಿಂ ನಾಸಿಕಕ್ಕೆ ಆಚಾರಲಿಂಗವಾಗಬೇಕಾಯಿತು. ಮಂತ್ರ ಮೂರ್ತಿಯೇ ಗುರುವಾದ ಕಾರಣ ಷಡಕ್ಷರಿಯೇ ಷಟ್ ರುಚಿಯಾಗಿ ತೋರಿಹುದಾಗಿ ಅಂತಪ್ಪ ಷಟ್‌ರುಚಿಯೇ ಜಿಹ್ವೆಯ ಮುಖಕ್ಕೆ ಸಲುವ ದೆಸೆಯಿಂ ಜಿಹ್ವೆಗೆ ಗುರುಲಿಂಗವಾಗಬೇಕಾಯಿತು....."

ಈ ಉಕ್ತಿಗಳಿಂದ ಈ ವಿವರಣೆಯಿಂದ ಕ್ರಿಯಾಲಿಂಗ ಆಚಾರಲಿಂಗ ಗುರುಲಿಂಗಗಳ ಸ್ವರೂಪ, ಸ್ಥಾನ, ಕ್ರಿಯೆಗಳು ಮನವರಿಕೆಯಾಗದಿರದು. ಒಟ್ಟಿನಲ್ಲಿ ಹೇಳುವುದಾದರೆ: ನಿವೃತ್ತಿ ಮಾರ್ಗದಲ್ಲಿ ಜ್ಞಾನಾದಿ ಉಳಿದ ಶಕ್ತಿಗಳಿಗೆಲ್ಲ ಕ್ರಿಯಾಶಕ್ತಿಯೇ ತಾಯಿ. ಪ್ರಾಣಭಾವಲಿಂಗಗಳಿಗೂ ಆಚಾರಲಿಂಗಾದಿಗಳಿಗೆಲ್ಲಕ್ಕೂ ಕ್ರಿಯಾಲಿಂಗವೇ ತಂದೆ. ತ್ಯಾಗಾಂಗವೇ ಮಾಮನೆ. ಪ್ರಾಣಾದಿಗಳು ಕ್ರಿಯಾಶಕ್ತಿಯ ಕಾರ್ಯಗಳಾಗಿವೆ. ಕಳಂಕರಹಿತ ಆಚಾರವೇ ಕ್ರಿಯೆ. ಕ್ರಿಯೆಯೇ ನಿವೃತ್ತಿನಿಲಯದ ಅಡಿಗಲ್ಲು. ಈ ಅಡಿಗಲ್ಲಿಗೆ ನೆಲೆ ಅಥವಾ ಆಧಾರ ತ್ಯಾಗಾಂಗ. ತ್ಯಾಗಾಂಗ ತೇಜವೇ ಕ್ರಿಯಾಲಿಂಗ. ತ್ಯಾಗಾಂಗ ಕ್ರಿಯಾಶಕ್ತಿಯೇ ಕ್ರಿಯಾಲಿಂಗ; ನಿವೃತ್ತಿ ಪ್ರತಿಷ್ಠಾ ಕಳೆಗಳೆ ಕ್ರಿಯಾಲಿಂಗ.

"ಭಕ್ತಂಗೆ ಹರಣ ಕಿರಣ ಚೈತನ್ಯ ಪ್ರಕಾಶವನುಳ್ಳ ಆಚಾರಲಿಂಗವು, ಮಾಹೇಶ್ವರಂಗೆ ಹರಣ ಕಿರಣ ಚೈತನ್ಯ ಪ್ರಕಾಶವನುಳ್ಳ ಗುರುಲಿಂಗವು—ಎಂಬ

ರಡು ಲಿಂಗಸ್ಥಲವು ಸಾಕಾರವಾಗಿ ಪೀಠ ಕಟಿಗಳಿಂದ ವ್ಯಕ್ತೀಕರಿಸಿ, ಇಷ್ಟಲಿಂಗವೆನಿಸಿಕೊಂಡು ಅನಿಷ್ಟಪಂಚಕ ಜನ್ಮ ಜರೆ ಮರಣ ಶೋಕ ಮೋಹ ವೆಂಬುದನ್ನು ಪರಿಹರಿಸಿ, ನಷ್ಟವ ಮಾಡಿ ತೋರಿತು."

ಪರತರ ಶಿವಲಿಂಗವೆಳಸಿ ನಿನಗಾಗಿ
ಕರಕಂಜದೊಳು ಕಾಣಿಸಿತು ಯೋಗಿ ಯಜಿಸು ॥ ಪ ॥

ಮೊದಲ ಪೀಠವೆ ಬಿಂದುವಾಗಿ ಮೇಲೆನಿಸಿದ
ಸದಮಳ ಪೀಠವದು ನಾದವಾಗಿ ಗೋಮುಖವೆ
ಸದಮಳ ಕಳೆಯಾಗಿ ಸಕಲಾತೀತವೆ ಲಿಂ
ಗದ ನಿಜವಾಗಿರಲದರೊಳುಜ್ವಲಿಪ ॥ ೧ ॥

ತರುವಿಸ್ತಾರವನೊಳಕೊಂಡಿದ್ದ ಬೀಜದ
ಪರಿಯಂತೆ ಯಾರಧ್ವಗಳಿಗಿಂಬು ಪಡೆದ
ಪರಬೊಮ್ಮಕಾಶ್ರಯ ವಾಗಿಹ ನಿಜಶಕ್ತಿ
ವೆರಸಿ ತನಗೆ ತಾನಾಧಾರವಾಗಿರ್ಪ ॥ ೨ ॥

ಮೂರು ಮಂಡಳವನುಚ್ಚಳಿಸಿದ ಗುಣವರ್ಣ
ಮೂರನು ಮೀರಿ ಬೋಧ ಮಾತ್ರವಾಗಿ
ತೋರುವ ಗುರು ಶಂಭುಲಿಂಗವದು ತಾನೆ
ಬೇರೆನಿಸಿದೆ ನಿನ್ನ ಕಣ್ಣ ಮುಂದಿಹುದು ॥ ೩ ॥

ಎಂದು ನಿಜವರಿತ ನಿಜಗುಣರು ಕರಸ್ಥಲದ ಕ್ರಿಯಾಲಿಂಗದ ನಿಜ ಸ್ವರೂಪವನ್ನು ಸಾರವಾಗಿ ಸುಂದರವಾಗಿ ಈ ಹಾಡಿನಲ್ಲಿ ಹಾಡಿದ್ದಾರೆ.

ಆ ಪರತರ ಶಿವಲಿಂಗ ಗುರುಕರುಣೆಯಿಂದ ತ್ಯಾಗಾಂಗನ ಕರಕಂಜದಲ್ಲಿ ಕಾಣಿಸಿದೆ : ಕಂಗೊಳಿಸಿದೆ.

ಓಂ ಶಾಂತಿಃ

## ಪ್ರಥಮ ಸಂಪುಟದ ಮೇಲೆ ಪತ್ರ–ಪತ್ರಿಕೆಗಳ

# ವಿ ಮ ರ್ಶೆ ಗ ಳು

## ಆ ಚಾ ರ್ಯ ಸಾ ಹಿ ತ್ಯ

### "ಜೀವನ ಸಿದ್ಧಾಂತ" (ಭಕ್ತ ಸಂಪುಟ)

"ಸಾಹಿತ್ಯ ಲೋಕದಲ್ಲಿ ರತ್ನ ರಚಿತ ದೀಪಗಳು ಹಲವು, ಬೋಧ ದೀಪಗಳು ಕೆಲವೇ ಕೆಲವು. ಅಂಥದೊಂದು ಅಪೂರ್ವಪ್ರಭೆ ಶ್ರೀ ಶ್ರೀ ಜ. ಚ. ನಿ. ಯವರು. ಈ ನಂದಾದೀಪದಿಂದ ಬೆಳಕು ಅಂಟಿಸಿಕೊಂಡವರು ಈ ನಾಡಿನಲ್ಲಿ ಸಹಸ್ರ ಸಹಸ್ರ ಜನ, ಬರೆಯುವವರ ದೃಷ್ಟಿಯಲ್ಲಂತೂ ಜ. ಚ. ನಿ ಯವರು ಗೌರವ ಆದರಗಳಿಗೆ ಪಾತ್ರರಾಗಿರುವ ಹಿರಿಯಜೀವ, ಅಂತಹ ಮಹಾನುಭಾವರ ಮೇರುಕೃತಿ ಜೀವನ ಸಿದ್ಧಾಂತ,"

ಕೃತಿಯನ್ನು ಕರ್ತೃವನ್ನು ಕುರಿತು ತಮ್ಮ ಮುನ್ನುಡಿಯಲ್ಲಿ ಇಷ್ಟೊಂದು ಸಮಗ್ರವಾಗಿ, ಸೂಚ್ಯವಾಗಿ, ಸಂಗ್ರಹವಾಗಿ ಬರೆದು, ಓದುಗರಿಗೆ ಮಾರ್ಗದರ್ಶನ ಮಾಡಿ, ಶ್ರೀ ನಿರಂಜನರು ವಿಮರ್ಶಕನ ಕಾರ್ಯವನ್ನು ಸುಲಭ ಗೊಳಿಸಿದ್ದಾರೆ.

ವೀರಶೈವ ಧರ್ಮಕ್ಕೆ ಆಕರವಾದ ಸಂಸ್ಕೃತ ಸಾಹಿತ್ಯದಲ್ಲಿ "ಸಿದ್ಧಾಂತ ಶಿಖಾಮಣಿ"ಗೆ ಅಗ್ರಸ್ಥಾನ ದೊರಕುತ್ತದೆ. ಶಿವಾಗಮಗಳ ಸಾರವಾದ ಈ ಮೇರು ಕೃತಿಯನ್ನು ಆಧರಿಸಿ, ಅವಧರಿಸಿ, ವಿಶ್ಲೇಷಿಸಿ ಕಳೆದ ಎಂಟನೂರು ವರ್ಷಗಳ ಅವಧಿಯಲ್ಲಿ ಹಲವಾರು ಸಂಸ್ಕೃತ ಹಾಗೂ ಕನ್ನಡ ಕೃತಿಗಳು ರಚಿತವಾಗಿದ್ದರೂ ಆ ಕೆನೆಹಾಲನ್ನು ಕನ್ನಡಿಗರಿಗೆ ಉಣಿಸಲು ಜ. ಚ. ನಿ ಯವರಂತಹ ಪ್ರತಿಭಾನ್ವಿತ ಅನುಭವಿ ಮಹಾತ್ಮಸಂತರ ಅವತಾರ ಅಗತ್ಯವಾಯಿತು.

ಶ್ರೀ ಜ. ಚ. ನಿಯವರು ಈಗಾಗಲೆ "ಸಿದ್ಧಾಂತ ಶಿಖಮಣಿ"ಯ ಮೂರು ಅನುವಾದಗಳನ್ನು ಪ್ರಕಟಿಸಿದ್ದಾರೆ. "ಮಣಿ ಕಾಂತಿ" ಎಂಬ ಹೆಸರಿನಿಂದ ೧೯೫೦ ರಲ್ಲಿ ಗದ್ಯ ರೂಪದಲ್ಲಿ, "ಮಣಿ ಮುಕುರ" ಎಂಬ ಹೆಸರಿನಿಂದ ೧೯೫೫ ರಲ್ಲಿ ಪದ್ಯ ರೂಪದಲ್ಲಿ, "ಮಣಿ ವಚನಗಳು" ಎಂಬ ಹೆಸರಿನಿಂದ ೧೯೬೩ ರಲ್ಲಿ ವಚನ

ರೂಪದಲ್ಲಿ ಅವು ಪ್ರಕಟವಾಗಿವೆ. ಈ ಮೂರು ಕೃತಿಗಳು ಮೂಲ ಸಂಸ್ಕೃತದ ಅನುವಾದಗಳಾದರೂ ಶೈಲಿಯ ವೈವಿಧ್ಯತೆಯಿಂದ, ಭಾಷೆಯ ಮಾಧುರ್ಯದಿಂದ ನಿರೂಪಣೆಯ ಕೌಶಲದಿಂದ ಸ್ವತಂತ್ರ ಕೃತಿಗಳಂತೆ ಆಸ್ತಿಕರಾದ ಓದುಗರಲ್ಲಿ ಜನ ಪ್ರಿಯವಾಗಿವೆ. ಪ್ರಸ್ತುತ ಗ್ರಂಥದಲ್ಲಿ ಈ ಕಾರ್ಯವನ್ನು ಮುಂದುವರೆಸಿ ಶ್ರೀಗಳ ವರು ಸಿದ್ಧಾಂತ ಶಿಖಾಮಣಿಯ ಶಿವಾದ್ವೈತವನ್ನು ವೇದ ಆಗಮ ಉಪನಿಷತ್ತು ಭಗವದ್ಗೀತೆ, ಶಿವಶರಣರ ವಚನಗಳು, ಇವೇ ಮುಂತಾದ ದಾರ್ಶನಿಕ ಗ್ರಂಥಗಳಲ್ಲಿ ಮಂಡಿತವಾದ ವಿಚಾರಗಳೊಂದಿಗೆ ಸಮೀಕರಿಸಿ ತುಲನ ಮಾಡಿ, ಸ್ವಮತೀಯ ಸಾಧಕರಿಗೆ ಮಾತ್ರವಲ್ಲದೆ ತಾತ್ವಿಕ ವಿಚಾರಗಳಲ್ಲಿ ಆಸಕ್ತಿಯುಳ್ಳವರೆಲ್ಲರಿಗೂ ಸೊಗ ಸಾಗುವಂತೆ ಸವಿವರವಾಗಿ ಸೋದಾಹರಣವಾಗಿ ಸವಿಸ್ತಾರವಾಗಿ ನಿರೂಪಿಸಿದ್ದಾರೆ. ಶ್ರೀಗಳವರ ಪ್ರತಿಭೆಯಿಂದ ಶಿವಾದ್ವೈತ ಸಿದ್ಧಾಂತ ಮನುಕುಲದ "ಜೀವನ ಸಿದ್ಧಾಂತ"ವಾಗಿ ಬೆಳಗಿದೆ, ಈ ದೃಷ್ಟಿಯಿಂದ ಶ್ರೀಗಳವರ ಈ ಕೃತಿಗೆ ತಾತ್ವಿಕ "ಆಚಾರ್ಯ" ಸಾಹಿತ್ಯದಲ್ಲಿ ಅಗ್ರಸ್ಥಾನ ಕೊಡಬೇಕಾಗುತ್ತದೆ, ಬೆಳ್ಳಿಹಬ್ಬದ ಸವಿ ನೆನಪಿಗಾಗಿಈ ಕೃತಿ ಕಾಣಿಕೆಯನ್ನು ಶ್ರೀಗಳವರಿಗೆ ಅರ್ಪಿಸಿದ ಭ್ರಮರಾಂಬಾ ಬಳ ಗದವರ ಶ್ರದ್ಧಾಭಕ್ತಿ ಅಭಿರುಚಿಗಳು ಪ್ರಶಂಸನೀಯ.

—ಪ್ರಜಾವಾಣಿ, ೧೯೭೬ ಪುಟ್ಟಸ್ವಾಮಯ್ಯ

೨. ಜೀವನ ಸಿದ್ಧಾಂತ–(ಭಕ್ತ ಸಂಪುಟ, ಭಕ್ತಿ ಜ್ಞಾನಗಳ ಮೇರು ಕೃತಿ)

ಭಕ್ತ ಸಂಪುಟವಾದ ಈ ಪ್ರಸಕ್ತ ಸಂಪುಟದಲ್ಲಿ ಪಿಂಡಸ್ಥಳ, ಮತ್ತು ಪಿಂಡ ಜ್ಞಾನಸ್ಥಳಗಳಿಂದ ಹಿಡಿದು ಶರಣಸ್ಥಳ ಐಕ್ಯಸ್ಥಳದವರೆಗೆ ಭಕ್ತನ ವಿವಿಧ ಸ್ಥೂಲ ಸೂಕ್ಷ್ಮಕ್ರಿಯಾ ವಿಶೇಷಗಳನ್ನು ವಿವರಿಸುತ್ತಾ ಭಕ್ತಸ್ಥಳದ ಪ್ರಾಮುಖ್ಯತೆಯನ್ನು ವರ್ಣಿಸುತ್ತಾರೆ. ಗ್ರಂಥದ ಉತ್ತರಭಾಗದಲ್ಲಿ ಶಿವಾದ್ವೈತ ತತ್ವ, ದೀಕ್ಷಾ, ಶಿಕ್ಷಾ, ಜ್ಞಾನ–ಈ ಗುರುತ್ರಯರ ನಿರೂಪಣೆ ಕ್ರಿಯಾ, ಭಾವ, ಜ್ಞಾನ ಈ ಲಿಂಗತ್ರಯಗಳ ವಿಶೇಷ ಜ್ಞಾನಗಳ ಪರಿಚಯ, ಸ್ವಯ, ಚರ ಪರಸ್ಥಲಗಳ ಮಾರ್ಮಿಕ ವಿವರಣೆಯನ್ನು ಒದಗಿಸುತ್ತಾ ಭಕ್ತ, ಗುರುಲಿಂಗ ಜಂಗಮ ಸಾಮ ರಸ್ಯ ಸ್ಪಷ್ಟಗೊಳಿಸುತ್ತಾರೆ. ಆಚಾರ, ಗುರು, ಶಿವ, ಜಂಗಮ, ಪ್ರಸಾದ, ಮಹಾಲಿಂಗ ಇವುಗಳ ಪ್ರಾಮುಖ್ಯತೆಯನ್ನು ಸೋದಾಹರಣವಾಗಿ ತಿಳಿಸುತ್ತಾ ಭಕ್ತನ ಆಚಾರ, ಗುರು, ಶಿವ, ಜಂಗಮ, ಪ್ರಸಾದ ಲಿಂಗಗಳ ಔಚಿತ್ಯ ಪ್ರಾಮು ಖ್ಯತೆಗಳನ್ನು ವಿವರ ವಿವರವಾಗಿ ಕೊಡುತ್ತಾರೆ. ಗ್ರಂಥದ ಕೊನೆಯ ಭಾಗವಾದ

ಅನುಬಂಧದಲ್ಲಿ ಶಕ್ತಿ, ಭಕ್ತಿಗಳ, ಪಿಂಡಾಡ, ಬ್ರಹ್ಮಾಂಡಗಳ ವಿವರಣೆಯನ್ನು ಕೊಡುತ್ತಾ ಗ್ರಂಥವನ್ನು ಭಗವದ್ಗೀತೆಯ ಅನೇಕ ಪೋಷಕ ವಾಕ್ಯಗಳಿಂದ ಪೋಷಿಸಿ, ಸಮರ್ಥಿಸುತ್ತಾರೆ. ಈ ಗ್ರಂಥ ವೀರಶೈವ ತಂತ್ರ, ಭಕ್ತಿ ಮಾರ್ಗವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಸಹಾಯವಾದೀತು. ಆದರೆ ಗ್ರಂಥದ ಶೈಲಿಯ ಬಗ್ಗೆ 'ನೀರಿಳಿಯಂದ ಗಂಟಲೋಳ್ ಒಮ್ಮೊಮ್ಮೆ ಕಡುಬಿತುರುಕಿ' ದಂತಾಗುತ್ತದೆ.

—ಎಂ. ಚಂದ್ರಶೇಖರ್

—'ಕನ್ನಡ ನುಡಿ' ಆಗಸ್ಟ್ ೧೯೬೮

## ೩. ಸೀಮಾಕೃತಿ

ಆಧುನಿಕ ಕನ್ನಡ ಸಾಹಿತ್ಯ ಎಲ್ಲ ದೃಷ್ಟಿಯಿಂದ ಬೆಳೆದು ಸುಪುಷ್ಟವಾಗುತ್ತಿದೆ ಎನ್ನುವುದಕ್ಕೆ ನಮ್ಮ ಮುಂದಿರುವ ಶ್ರೀ ಜ. ಚ ನಿ. ಅವರ ಜೀವನಸಿದ್ಧಾಂತ ಜೀವಂತ ಸಾಕ್ಷಿ, ಇದೇ ಗಾತ್ರದ ಆ ಬೃಹದ್ಗಾತ್ರದಲ್ಲಿ ಪೂರ್ಣತೆಯನ್ನು ಕಾಣಲಿರುವ ಈ ಮಹಾ ಪ್ರಬಂಧ ಪ್ರಸ್ತುತದಲ್ಲಿ ನಾಡನುಡಿ ಭಕ್ತರಿಗೆ ಭಕ್ತ ಸಂಪುಟವನ್ನಿತ್ತಿದೆ. ಇನ್ನುಳಿದ ಮಾಹೇಶ, ಪ್ರಸಾದಿ ಪ್ರಾಣಲಿಂಗಿ ಶರಣ, ಐಕ್ಯಸಂಪುಟಗಳು ಇದೇ ರೀತಿಯಲ್ಲಿ ಬರಲಿವೆ. ಎಲ್ಲ ಸಂಪುಟಗಳು ಬಂದಾಗ ನಾಡಿನ ಸಾಹಿತ್ಯ ಶುಭೋದಯ ಖಂಡಿತವಾಗಿಯೂ ಆಗುವುದರಲ್ಲಿ ಸಂದೇಹವೇ ಇಲ್ಲ.

ಮಹಾಕವಿ ಶಿವಯೋಗಿ ಶಿವಾಚಾರ್ಯನ ಸಿದ್ಧಾಂತ ಶಿಖಾಮಣಿ ಶ್ರೀ ಜ. ಚ. ನಿ. ಅವರ ಮೇಲೆ ಮಾಡಿರುವ ಅನನ್ಯ ಸಾಧಾರಣವಾದ ಪರಿಣಾಮವೇ ಪ್ರಕೃತದ ಮಹಾಕೃತಿಗೆ ಪ್ರಚೋದನೆ, ಆ ಮಹಾಗ್ರಂಥವನ್ನು ಓದಿ ಹೃದಯ, ಮನಸ್ಸುಗಳನ್ನು ತುಂಬಿಕೊಂಡ ಶ್ರೀಗಳು ಲೋಕ ಬದುಕಲೆಂದು ಈ ಬೃಹತ್ ಕೃತಿಯನ್ನು ನಾಡಿನ ಜನತೆಗೆ ಅರ್ಪಿಸಿ ಕೃತಕೃತ್ಯರಾಗಿದ್ದಾರೆ. ಮಹಾಗುರುವಿನ ಕೃಪೆ ಇಲ್ಲದೆ ಇಂಥ ದೊಡ್ಡ ಕೃತಿ ರಚಿತವಾಗಲಾರದು. ಇದನ್ನು ಓದುತ್ತ ಹೋದಂತೆ ನಮಗೆ ಅಂತಃ ಪ್ರಜ್ಞೆ ತಾನೇ ತಾನಾಗಿ ಹೊಮ್ಮುತ್ತ ಹೋಗುತ್ತದೆ. ಅಂತೂ ನಾಡಿನ ಭಾಗ್ಯ ವಿಶೇಷದಿಂದ ಇಂಥದೊಂದು ಸೀಮಾಕೃತಿ ಲಭ್ಯವಾಗಿದೆ. ಇದಕ್ಕಾಗಿ ನಾಡವರು ಸರ್ವ ದೃಷ್ಟಿಯಿಂದಲೂ ಹೆಮ್ಮೆಪಟ್ಟುಕೊಳ್ಳಬಹುದು.

—ಅಿ. ವೆಂ.

"ಸಂಯುಕ್ತ ಕರ್ನಾಟಕ" ೧೫-೧-೬೮

## ೪. "ಜೀವನ ಸಿದ್ಧಾಂತ" ಗಂಗಾಪ್ರವಾಹ !

ವಿಚಾರಗೋಷ್ಠಿ ಮತ್ತು ಅಕ್ಕನ ಬಳಗಗಳಲ್ಲಿ ತಮ್ಮ ನವ್ಯಕೃತಿ "ಜೀವನ ಸಿದ್ಧಾಂತ" ವನ್ನು ಶ್ರವಣ ಮಾಡಲಾಗುತ್ತಿದೆ. ಅದು ಒಂದು ಸಿದ್ಧಾಂತ ಮಾತ್ರವಲ್ಲ ಶಿವಾನುಭವ ಸಾಧಕನ ಸಾಧನಾ ಪಥದ ಕೈದೀವಿಗೆಯಂತಿದೆ. ಆ ಗ್ರಂಥದ ಬೆಳಕಿನಲ್ಲಿ ಉಳಿದ ಗ್ರಂಥಗಳು ಮಿಣುಕು ದೀಪದಂತೆ ಕಾಣುತ್ತವೆ. ಭಕ್ತಸ್ಥಲ ಮಾತ್ರವನ್ನೆ ಬೃಹದ್ರೂಪ ವಿಮರ್ಶೆಮಾಡಿ ಸಾಹಿತ್ಯ ಲೋಕಕ್ಕೆ ಕರುಣಿಸಿರುವ ತಮ್ಮ ಶಿವಾನುಭವ ಅಗಾಧವಾದುದು ತಮ್ಮ ಸಾಹಿತ್ಯ ಝರಿ ಶಿವನ ಜಟೆಯಿಂದ ಹರಿಯುವ ಗಂಗಾಪ್ರವಾಹದ ಬುಗ್ಗೆಯಲ್ಲದೆ ಬೇರೆಯಿಲ್ಲ. ಶಿವತತ್ವವನ್ನು ಪ್ರಸಾರ ಮಾಡುವುದಕ್ಕಾಗಿಯೇ ಈ ಇಪ್ಪತ್ತನೆಯ ಶತಮಾನದಲ್ಲಿ ಅವತರಿಸಿರುವ ಕಾರಣ ಶಿವಯೋಗಿಗಳೆಂದೇ ನಮ್ಮ ತ್ರಿಕರಣ ಪೂರ್ವಕವಾದ ನಂಬಿಕೆ. ಗ್ರಂಥವನ್ನು ಮುಂದಿಟ್ಟುಕೊಂಡು ಓದುತ್ತಿದ್ದರೆ ಹೃದಯ ಅರಳಿ ತಮ್ಮ ದಿವ್ಯರೂಪು ಮುಂದೆ ಬಂದು ನಿಲ್ಲುತ್ತದೆ. ಸಾಹಿತ್ಯದ ಕನ್ನಡಿಯಲ್ಲಿ ಸರ್ವರಿಗೂ ಸದಾ ಕಾಲದಲ್ಲಿಯೂ ದರ್ಶನವೀಯುತ್ತಿರುವ ತಮ್ಮನ್ನು ಗಾರುಡಿಗರು ತಾವೆಂದು ತಿಳಿದಿದ್ದೇವೆ. ಇಂತಹ ಪವಿತ್ರ ಗ್ರಂಥಗಳನ್ನು ಪ್ರಕಟಿಸಲು ಮುಂದೆ ಬಂದ ಭ್ರಮರಾಂಬ ಬಳಗ ದವರು ನಿಜವಾಗಿಯೂ ಧನ್ಯರು. ಇನ್ನುಳಿದ ಐದು ಭಾಗಗಳೂ ಶೀಘ್ರವಾಗಿ ಹೊರಬಂದು ಜಗತ್ತಿನ ಅಜ್ಞಾನ ತಿಮಿರವನ್ನು ಹರಿಸುವ ಜ್ಞಾನ ಜ್ಯೋತಿಯಾಗಿಬೆಳಗಲೆಂದು ಹೃದಯಾರಶ್ರೀಗುರುವಿನಡಿಯಲ್ಲಿ ಪ್ರಾರ್ಥಿಸುತ್ತೇನೆ.

ಸಿ. ಎಂ. ವೀರಣ್ಣ, ವಿಜಯಪುರ

'ಜೀವನ ಸಿದ್ಧಾಂತ' (ಭಕ್ತಸಂಪುಟ)ದ ಅನುಬಂಧದಲ್ಲಿ ಸಂಕ್ಷಿಪ್ತವಾಗಿ ಸಾರಭೂತವಾಗಿ ಅನುಭಾವ ಪೂರ್ಣವಾಗಿ ಆದ್ಯರ ವಚನಸಾಹಿತ್ಯದ ಜೋಡಣೆ ನಿದರ್ಶನ ಪೂರ್ವಕ ಮಾಡಿರುವ ವಿವರಣೆಯು ವೈಶಿಷ್ಟ್ಯವನ್ನು ಕಂಡು ಅಚ್ಚರಿಗೊಂಡು ಆನಂದ ತುಂದಿಲನಾದೆ.

ಶ್ರೀ ಗುರು ಕುಮಾರಾಶ್ರಮ ಗಿರಿಯಪುರ.

—ಶ್ರೀ ಸದಾಶಿವ ಶಿವಾಚಾರ್ಯರು

## ಇತರ ಕೃತಿಗಳ ವಿಮರ್ಶೆ

# ಒಳಗಣ್ಣಿನ ಹೃದಯಂಗಮ ನೋಟ

### "ದೃಷ್ಟಿ ದರ್ಶನ"

ಇದು ವಿಜ್ಞಾನಯುಗ, ವೈಜ್ಞಾನಿಕ ಪ್ರಗತಿ ಅತಿಯಾಗಿ ಸಾಗುತ್ತಿದ್ದು ಮಾನವೀ ಲೋಕವನ್ನೇ ದಿಗ್ಭ್ರಾಂತಿಗೊಳಿಸುತ್ತಿದೆ. ಚಂದ್ರಮಂಡಲಯಾನದ ಸುದ್ದಿಯನ್ನು ಅರಿಯದವರೇ ಇಲ್ಲ. ಇನ್ನೂ ಏನೇನು ಮಹತ್ತಾದ ಸಾಧನೆಯ ಸುದ್ದಿ ಬರುತ್ತದೋ ಎಂಬ ಕುತೂಹಲ ಇದ್ದೇ ಇದೆ.

ವಿಜ್ಞಾನ ದೃಷ್ಟಿಯನ್ನು ಹೊಂದಿರುವ ಮಾನವನಲ್ಲೇ ಅನೇಕ ಅಂತಸ್ಸತ್ವಗಳುಂಟು. ಅವುಗಳಲ್ಲಿ ಅತನಿಗೆ ನಿಸರ್ಗದತ್ತವಾಗಿ ದೊರೆತಿರುವ ನೋಡುವ ದೃಷ್ಟಿ ಸಾಮಾನ್ಯವಾದುದೇನೂ ಅಲ್ಲ. ಆದರೆ, ಕಣ್ಣಿದ್ದವರೆಲ್ಲರೂ ನೋಡಬಲ್ಲರೆಂದು ಹೇಳುವುದು ಸಾಧ್ಯವಿಲ್ಲದ ಮಾತು, ಲೋಕದಲ್ಲಿ ಮೂರು ಬಗೆಯ ಅಂಧರಿರುವರು, ಹುಟ್ಟು ಕುರುಡರು, ಆಕಸ್ಮಿಕಗಳಿಂದ ಅಂಧರಾದವರು; ಕಣ್ಣಿದ್ದು ಅಂಧರಾದವರು. ಈ ಮೂವರಲ್ಲಿ ಮೂರನೆಯವರ ಅಂಧತ್ವ ನಿವಾರಣೆ ಮಾಡವುದು ಸಾಧ್ಯವಿದೆ. ಆದರೆ ಅದಕ್ಕೆ ಸ್ವತಃ ಅವರೇ ವಿಶೇಷ ಶ್ರಮಪಡಬೇಕು. ನಮ್ಮ ಮುಂದಿರುವ ದೃಷ್ಟಿದರ್ಶನ ಅಂಥ ಅಂಧರಿಗೆ ತುಂಬ ಸಹಕಾರಿ.

ಪ್ರತಿಯೊಬ್ಬರಿಗೂ ಯಾಂತ್ರಿಕವಾಗಿ ಹೊರಗಣ್ಣಿನಿಂದ ನೋಡಲು ಬರುತ್ತದೆ. ಆದರೆ, ಒಳಗಣ್ಣನ್ನು ಹಿಗ್ಗಿಸಿ, ಮನಗಣ್ಣಿನಿಂದ ನೋಡವುದು ತಿಳಿದಷ್ಟು ಸುಲಭವಲ್ಲ. ಇದು ತತ್ವದ ಹಾದಿ. ಪ್ರಕೃತ ಗ್ರಂಥದಲ್ಲಿ ಶ್ರೀ ಜ. ಚ. ನಿ. ಅವರು ವೈಜ್ಞಾನಿಕ ವಾಸ್ತವಿಕಾಂಶವನ್ನು ತಾತ್ವಿಕ ದೃಷ್ಟಿಯ ವಿವರಣೆಯೊಂದಿಗೆ ಇತ್ತು ಉಪಕರಿಸಿದ್ದಾರೆ. ಕಥೆ, ಕಾದಂಬರಿ ಓದಿ ಸಂತೃಪ್ತಿಪಡುವ ಲಘು ಸಾಹಿತ್ಯ ಪ್ರಿಯರಿಗೆ ಈ ಗ್ರಂಥ ಸುಲಭ ಗ್ರಾಹ್ಯವಲ್ಲ. ಆದರೆ, ಶ್ರಮಪಟ್ಟು ಓದಿದವರಿಗೆ ಖಂಡಿತ ಅಲಭ್ಯಲಾಭವುಂಟು. ಶ್ರೀ ಜ. ಚ. ನಿ ಇವರ ಈ ಗ್ರಂಥವನ್ನು ನಾವು ಹಾರ್ದಿಕವಾಗಿ ಸ್ವಾಗತಿಸುತ್ತೇವೆ.

ಸಂಯುಕ್ತ ಕರ್ನಾಟಕ

—ತಾ.ರ.ಆ ೧೫-೧-೭೮

೨. ಎಲ್ಲ ದರ್ಶನಗಳಿಗೆ ಅಗತ್ಯವಾದ ಸಾಧನವು ದೃಷ್ಟಿ. ಕಣ್ಣಿನಿಂದ ಪ್ರಾರಂಭ ವಾಗುವ ದೃಷ್ಟಿ ಅಂತರಂಗದಲ್ಲಿ ಪ್ರತಿಫಲಿಸಿ ಅನುಭಾವದಲ್ಲಿ ಪರಿಪಕ್ವಗೊಂಡು ಸಾಕ್ಷಾತ್ಕಾರದಲ್ಲಿ ಪರ್ಯವಸಾನವಾಗುವಂತೆ ಮಾಡುವುದೇ ಎಲ್ಲ ತತ್ವ ಶಾಸ್ತ್ರಗಳ, ಎಲ್ಲಾ ಸಿದ್ಧಾಂತಗಳ, ಎಲ್ಲ ದರ್ಶನಗಳ ಗುರಿ.

ಎಲ್ಲ ಧರ್ಮಗಳವರಿಗೂ ಸಾಮಾನ್ಯವಾದ ಈ ದೃಷ್ಟಿ ತತ್ವವು ವಿವಿಧವಾಗಿ ಪ್ರತಿಫಲಿಸಿ ಅನುಭಾವದಲ್ಲಿ ಪರಿಪಕ್ವ ಬರುವ ವಿಧಾನಗಳನ್ನೂ, ಆತ್ಮಸಾಕ್ಷಾತ್ಕಾರಕ್ಕೆ ಅವುಗಳಿಂದ ಆಗುವ ಪ್ರಯೋಜನಗಳನ್ನೂ ಶ್ರೀ ಜ. ಚ. ನಿ. ಯವರು ಈ ಗ್ರಂಥದಲ್ಲಿ ತಮ್ಮದೇ ಆದ ಸರಳ ಶೈಲಿಯಲ್ಲಿ ಅನುಬಾವಿ ತಾತ್ವಿಕನಂತೆ ಪ್ರಭಾವ ಯುತವಾಗಿ ಪರಿಣಾಮ ಕಾರಿಯಾಗಿ ಪ್ರತಿಪಾದಿಸಿದ್ದಾರೆ. ಡಾ॥ ಶಿವರಾಂ ಅವರು ಮುನ್ನುಡಿಯಲ್ಲಿ ಹೇಳಿರುವಂತೆ ಇದು

"ಒಮ್ಮೆ ಓದಿದರೆ ಅರ್ಥವಾಗುವ ಸುಲಭ ಗ್ರಂಥವಲ್ಲ. ಮೇಲೆ ಮೇಲೆ ಓದಿ ಮನನಮಾಡಿ ಮನಸ್ಸನ್ನು ಮೆಲಕು ಹಾಕುವಂತೆ ಮಾಡಿದರೆ ಗಂಭೀರವಾದ ಅರ್ಥ. ಗೂಢಾರ್ಥ ಎಲ್ಲವೂ ತಿಳಿಯಬರುತ್ತವೆ.

ಕನ್ನಡಿಗರ ತಾತ್ವಿಕ ದೃಷ್ಟಿ, ಧರ್ಮಶ್ರದ್ಧೆ ! ವಿಮರ್ಶಾಶಕ್ತಿ, ನಿರೂಪಣೆಯ ನೈಪುಣ್ಯ, ಇವುಗಳಿಗೆ ಹಾಕಿದ ಸವಾಲಿನಂತಿದೆ ಈ ಗ್ರಂಥ, ಆಚಾರ್ಯ ಭಾಷ್ಯಕ್ಕೆ ಟೀಕಟಿಪ್ಪಣಿ ವಿವರಣೆ ವಾರ್ತಿಕಗಳು ಎಷ್ಟೊಂದು ಅಗತ್ಯವೋ ಹಾಗೆಯೇ ಇಂತಹ ಸೂತ್ರರೂಪಗ್ರಂಥಕ್ಕೂ ಅವು ಅಗತ್ಯ. ತಾತ್ವಿಕ ವಿಚಾರಗಳಲ್ಲಿ ಆಸಕ್ತಿಯುಳ್ಳ ಕನ್ನಡಿಗರು ಈ ಕಾರ್ಯಕ್ಕಾಗಿ ಮೂಲ ಲೇಖಕರನ್ನು ನಿರೀಕ್ಷಿಸದೆ ತಾವೇ ಮಾಡು ವಂತಾಗಲೆಂಬುದು ನಮ್ಮ ಹಾರೈಕೆ.

ಪುಟ್ಟಸ್ವಾಮಯ್ಯ —ಪ್ರಜಾವಾಣಿ, ೨೮-೭-೬೮

೩. ಎರಡು ದೃಷ್ಟಿದಾತ ಕೃತಿಗಳು : ದೃಷ್ಟಿದರ್ಶನ ಮತ್ತು ಹೊಳಹು—ಸುಳುಹು.

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಪೂಜ್ಯ ಶ್ರೀ ಜ. ಚ. ನಿ. ಯವರ ಮೇಲಿನ ಎರಡು ಪುಸ್ತಕಗಳು ಸಾಮಾನ್ಯನಿಗೆ ಮನುಷ್ಯ ಜೀವನದ ಹಿರಿಮೆಯ ದರ್ಶನ ಮಾಡಿಸಲು ತುಂಬ ಸಹಾಕವಾಗಿವೆ.

'ದೃಷ್ಟಿ ದರ್ಶನ'ದಲ್ಲಿ ಮಾನವನ ದಾರ್ಶನಿಕ ದೃಷ್ಟಿಯನ್ನು ವಿವಿಧ ಉಪನಿಷತ್ತುಗಳ ಮತ್ತು ಶಿವಶರಣರ ವಚನಗಳ ಆಧಾರದಿಂದ ವಿಶದೀಕರಿಸಲಾಗಿದೆ.

'ರವಿಕಾಣದುದಂ ಕವಿ ಕಂಡಂ' ಎಂಬ ಮಾತನ್ನು ಸಮರ್ಥಿಸಿದ ಶ್ರೀ ಸ್ವಾಮಿಜಿ ಯವರು ಅದಕ್ಕೆ ಯೋಗ್ಯ ಗುರುವಿನ ಅಗತ್ಯವನ್ನೂ ಒತ್ತಿ ಹೇಳಿದ್ದಾರೆ. ಸೌಂದರ್ಯದ ಬಗ್ಗೆ ಅವರ ಮೀಮಾಂಸೆ ಹೃದಯಂಗಮವಾಗಿದೆ. ವಿವಿಧ ವಿಧ 'ದೃಷ್ಟಿ'ಗಳ ಪರಿಚಯವನ್ನೂ ಮಾಡಿಕೊಡಲಾಗಿದೆ. ಇದೊಂದು ಹೊಸ ವೈಚಾರಿಕ ಸಾಹಿತ್ಯವೆನ್ನಬಹುದು.

ಮಿಂಚಿನಂತೆ ಆಗಾಗ್ಗೆ ಹೊಳೆದಿದ್ದ ಭಾವಗಳ ಸಂಗ್ರಹ 'ಹೊಳಹು ಸುಳುಹು'; ಮಾನವನ ಸೂಕ್ಷ್ಮ ಪ್ರಜ್ಞೆಗೆ ನಿಲುಕುವ ಭಾವಗಳು ಅನೇಕ. ಪ್ರತ್ಯಕ್ಷವಾಗಿ ಗೋಚರಿಸುವ ಸುಳುಹುಗಳೊಂದಿಗೆ ಆಯಾ ಭಾವಗಳಿಗೆ ನುಡಿರೂಪ ಹೊಳಹು ಕೊಟ್ಟಿದ್ದಾರೆ ಶ್ರೀ ಸ್ವಾಮೀಜಿಯವರು. ಅಂತಹ ಅನೇಕ ಹೊಳಹು-ಸುಳುಹುಗಳ ದ್ವಂದ್ವಗಳ ತಾರತಮ್ಯ ಮತ್ತು ಸಂಬಂಧವನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಸಾಧಕನಿಗೊಂದು ಉಪಯುಕ್ತ ಕೈದೀವಿಗೆ 'ಹೊಳಹು–ಸುಳುಹು'.

—ಕಾ. ರ. ಅ.

ವಿಕ್ರಮ, ಸೆಪ್ಟೆಂಬರ್ ೭, ೧೯೬೭

## ಕೊರವಂಜಿ ಸಾಹಿತ್ಯ

ಜ. ಚ. ನಿ ಯವರು ಸಂಗ್ರಹಿಸಿ ಸಂಪಾದಿಸಿದ "ಕೊರವಂಜಿ ಸಾಹಿತ್ಯ" ೭೭ ಜಾನಪದ ಗೀತೆಗಳ ಸಂಗ್ರಹ, ಇವುಗಳಲ್ಲಿ ಕೆಲವು ಗೀತೆಗಳಿಗೆ "ಚನ್ನಮಲ್ಲಿಕಾರ್ಜುನ" "ಗುಹೇಶ್ವರ" "ಕಪಿಲಸಿದ್ಧಮಲ್ಲೇಶ" ಎಂಬ ಅಂಕಿತಗಳಿರುವುದರಿಂದ ಅವು ಅನುಕ್ರಮವಾಗಿ ಅಕ್ಕಮಹಾದೇವಿ, ಅಲ್ಲಮಪ್ರಭು, ಸಿದ್ಧರಾಮ ಇವರು ರಚಿಸಿದುವೆಂದು ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಗೀತೆಗಳ ಶೈಲಿ ವಸ್ತು ನಿರೂಪಣೆಗಳ ಶಿಥಿಲತೆಯನ್ನು ನೋಡಿದರೆ ಹಿಂದಿನವರ ಹೆಸರಿನಲ್ಲಿ ಅರ್ವಾಚೀನ ಕವಿಗಳು ರಚಿಸಿದ ಪ್ರಕ್ಷಿಪ್ತ ಗೀತೆಗಳಾಗಿರಬಾರವೆ ಇವು? ಎಂಬ ಸಂದೇಹ ಸಹಜವಾಗಿ ಮೂಡುತ್ತದೆ. ಈ ದಿಸೆಯಲ್ಲಿ ಹೆಚ್ಚಿನ ಸಂಶೋಧನ ನಡೆಯಬೇಕಾಗಿದೆ.

ಪುಟ್ಟಸ್ವಾಮಯ್ಯ

ಪ್ರಜಾವಾಣಿ, ೨೮–೭–೬೮

೨. ಅಕ್ಕಗಳು ನಿರೂಪಿಸಿದ ಕೊರವಂಜಿ ಹಾಡು ಎಂಬ ಕೃತಿಯನ್ನು ಸಂಪಾದಿಸುವಾಗ ಇವರಿಗೆ ಈ ಕೊರವಂಜಿ ಸಾಹಿತ್ಯದ ಬಗ್ಗೆ ಉತ್ಸಾಹ ಬಂದು ಕೆಲವು ಕೊರವಂಜಿ ಗೀತಾವಚನಗಳನ್ನು ಜೋಡಿಸಿದ್ದಾರೆ. ಶಿವನು ಕಿರಾತ, ಶಿವೆಯು ಕಿರಾತೆಯಾಗಿದ್ದಾಳೆ. ಆ ಕಿರಾತೆಗೇ ಕೊರವೆಯೆನ್ನುತ್ತಾರಂತೆ. ಪುರಾಣದಲ್ಲಿ ನಾರದನ ಪಾತ್ರವಿದ್ದಂತೆ ಜನಪದ ಸಾಹಿತ್ಯದಲ್ಲಿ ಕೊರವಂಜಿಯ ಪಾತ್ರ. ಕೊರವಂಜಿ ಇಲ್ಲದೆ ಜನಪದ ಸಾಹಿತ್ಯದ ಯಾವ ಕತೆಯೂ ಕೊನೆಗಾಣದು. ಈ ಸಂಬಂಧಪಟ್ಟ ಹಾಡುಗಳನ್ನು ಸಂಗ್ರಹಿಸಿ ಶ್ರೀಗಳವರು ಸಾಹಿತ್ಯ ಸಹೃದಯರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇಲ್ಲಿ 'ಕೈ ತೋರೆ ಕೈತೋರೆ ದುಂಡಿ' ಎಂಬ ಹಾಡನ್ನು ಗಮನಿಸಬಹುದು. ಈ ಹಾಡುಗಳಿಗೆ ರಾಗ ಸಂಯೋಜನೆ ಮಾಡಿರುವುದೊಂದು ವಿಶೇಷ ಅಂಶ. ಇಲ್ಲಿರುವ ಅನೇಕ ಹಾಡುಗಳು ಬೆಡಗಿನ ಹಾಡುಗಳೂ ಆಗಿದ್ದು, ಅರ್ಥಗರ್ಭಿತವಾಗಿವೆ. ಶಿವಶರಣರ ಕೃತಿಗಳಲ್ಲಿ ಈ ಕೊರವಂಜಿ ಸಾಹಿತ್ಯದ ಸ್ಥಾನ ವಿಶಿಷ್ಟವಾದದು.

ಎಂ. ಚಂದ್ರಶೇಖರ್
"ಕನ್ನಡನುಡಿ" ಆಗಸ್ಟ್ ೧೯೭೮

## ಭಾವಗೀತಾಂಜಲಿ

ಭಾವಗೀತಾಂಜಲಿ, ಸಂವೇದನ. ಈ ಕವಿತಾ ಸಂಗ್ರಹಗಳಲ್ಲಿ ಜ. ಚ. ನಿ, ಯವರ ಬಹುಮುಖ ಪ್ರತಿಭೆಯುದ್ಯೋತಕವಾಗಿದೆ. "ಗುರುವೆಲ್ಲಿ? ಗುರುವೆಲ್ಲಿ? ಗುರುವಿಹನು ನಿನ್ನಲ್ಲಿ" ಎಂಬ ಸಾಲುಗಳಲ್ಲಿ ದಾರ್ಶನಿಕ ಉತ್ಸುಕತೆ ಇದ್ದರೆ, "ಶಾಂತಿ ಶಶಿಯು ಮೂಡಿ ಭ್ರಾಂತಿಯಿರುಳು ದೂಡಿ" ಎಂಬ ಗೀತೆಯಲ್ಲಿ ಸಂತ ಕವಿಯ ಓಜಸ್ಸು ಪ್ರಕಟವಾಗಿದೆ. "ನಾ ಹರನಲ್ಲದೆ ನೀ ಹರನಲ್ಲ" ಎಂಬ ಗೀತೆ ಅನುಭಾವಿಯ ದಿಟ್ಟತನವನ್ನು ವ್ಯಕ್ತಪಡಿಸುವುದಾದರೆ, "ಕೇಂದ್ರ ಏಕ ಸದಸ್ಯ ಆಯೋಗ ಕನ್ನಡ ರಾಜ್ಯಕ್ಕೆ ನಿರುಪಯೋಗ" ಎಂಬ ಸಾಲುಗಳು ಕವಿಯ ರಾಜಕೀಯ ಪ್ರಜ್ಞೆಯನ್ನು ಮೆರಸುತ್ತವೆ.

ಶರಣರ ಸೂಳ್ನುಡಿಗಳ ಅನುಭಾವದಿಂದ ಅಮೃತಪಾನ ಮಾಡಿ ಪುನೀತ ಹೃದಯರಾಗಬಯಸುವವರು ಭಾವ ಗೀತಾಂಜಲಿಯ ಗ್ರಂಥಕ್ಕೆ ಶರಣುಹೋಗ

ಬೇಕು. ಆರು ಕವನ ಸಂಕಲನಗಳಿಂದ ಆರಿಸಿದ ಮತ್ತು ಹೊಸದಾಗಿ ಸೇರಿಸಿದ ಕವನ ಸಂಗ್ರಹ ಇದು. ಗೇಯತೆಯ ನಾದ ಮಾಧುರ್ಯ ಪ್ರಧಾನವಾಗಿ ರುವ ಕವನ ಸಂಗ್ರಹ ಧ್ವನಿ ವಿಶೇಷದ ವಿವಿಧ ವಿಲಾಸದ ಪ್ರತಿಮಾ ವಿಧಾನ ಕೌಶಲದ ತತ್ವದ ತನಿರಸದ ರುಚಿಯನ್ನು ಬಿಡಿಬಿಡಿಯಾಗಿಯೂ ಒಟ್ಟಾಗಿಯೂ ಗಮನಿಸಬಹುದು. ಸಾಹಿತ್ಯಕ ದೃಷ್ಟಿಯಿಂದ ಶುದ್ಧ ಭಾವಗೀತೆಯ ಲಕ್ಷಣಗಳು ಕಡಮೆಯಿದ್ದರೂ ಭಕ್ತಿ ಮಿಶ್ರಿತವಾದ ವಚನಗಳೇ ಹೆಚ್ಚು. ಭಕ್ತ ಸಹೃದಯರ ಹೃದಯವಂತಿಕೆಗೆ ಶ್ರೀಮಂತಿಕೆಯನ್ನು ಪುಷ್ಟಿ ತುಷ್ಟಿಯನ್ನು ಕೊಡುತ್ತವೆ. 'ಬೆಕ್ಕೊಂದು ಬಂತು', 'ಹೊನ್ನ ಹಕ್ಕಿ' 'ಶ್ರೀ ಗಿರಿಗೆ', 'ಸಾಗಿ ಬಾ ಸೀಮೋಲ್ಲಂಘನಕ್ಕೆ' ಮುಂತಾದ ಉತ್ತಮ ಕವನಗಳಿವೆ. ಶ್ಲೇಷಾರ್ಥ ಚಮತ್ಕಾರದಿಂದ ಅಲಂಕಾರಗಳ ಸೆಳೆತದಿಂದ 'ಅಳಿಯ', 'ಓ ಲಿಂಬೆ' ಮುಂತಾದ ಗೀತೆಗಳು ಧ್ವನಿತವಾಗಿವೆ. ಒಟ್ಟಿನಲ್ಲಿ ಭಕ್ತರಿಗೆ ಭಕ್ತಿಯ ರಸಪುಂಜವನ್ನೊದಗಿಸುವ ಕೃತಿ ಇದು. ಆದರೂ ಶುದ್ಧಾಂಗವಾಗಿ ನೋಡಿದಾಗ ಕೆಲವು ಲೋಪದೋಷಗಳನ್ನು ಗುರುತಿಸಬಹುದು.

**ಸಂವೇದನ:** ಇಲ್ಲಿ ಪ್ರಮುಖವಾಗಿ ಶಿವನನ್ನು ಕುರಿತು ಜೀವಿಯ ಶಿವಧೊ ಶಿವಧೊ ಎಂಬ ಕಳಕಳಿಯ ಮೊರೆಯಿದೆ. ಅನಾದಿಕಾಲದಿಂದಲೂ ಜೀವಿ ಶಿವನ ಹತ್ತಿರವಿದ್ದರೂ ದೂರವಿದ್ದಂತೆ ಆಡುವ ಆಟದಿಂದ ಭಕ್ತಿ ಸಾಹಿತ್ಯ ನಿರ್ಮಾಣವಾಗಿದೆ. ಸಂವೇದನ ಕೃತಿಯಲ್ಲಿ ಹೊಸ ಕಾವ್ಯದ ಈ ಸ್ವರ ಸಮ್ಮೇಳನವನ್ನು ಕಾಣುತ್ತೇವೆ. ಇಲ್ಲಿ ವರಭಕ್ತಿ ಆದರ ಅಭಿವ್ಯಕ್ತಿ ಸಹಜ, ನೇರ, ಅಷ್ಟೇ ಉತ್ಕಟ. 'ಗುರುವೆಲ್ಲಿ' 'ನನಗಿಂತ ಅಕ್ಕರೆ ನಿನ್ನ ಮೇಲೆ' 'ಹಂಸೆಯ ಹೃದಯ ಆಶೆ', 'ಪ್ರಸಾದ ಪುಷ್ಪ', 'ಆತ್ಮಾರಾಧನ' ಮುಂತಾದ ಉತ್ತಮ ಕವಿತೆಗಳಿವೆ. ಅಲ್ಲಲ್ಲಿ ನಿರ್ಜೀವ ಕೃತಿಗಳ ದರ್ಶನವನ್ನು ವಿಧಿಯಿಲ್ಲದೇ ಮಾಡುತ್ತೇವೆ.

**ದೃಷ್ಟಿದರ್ಶನ ಜೀವನ ದೃಷ್ಟಿ:** ಮನಸ್ಸಿಗೆ ವ್ಯಷ್ಟಿದೃಷ್ಟಿ, ಸಮಷ್ಟಿ ದೃಷ್ಟಿ ಕೂಡಿದಾಗ ಸರ್ವತೋಮುಖ ಬೆಳವಣಿಗೆಯಾಗುತ್ತದೆ. ಹಾಗೆಯೇ ಈಗ್ರಂಥದಲ್ಲಿ ಶ್ರೀಗಳವರು ಮನಸ್ಸಿನ ಒಂದು ಕವಾಟವನ್ನು ತೆಗೆದು ಜ್ಞಾನ ದೃಷ್ಟಿಯ ಬೆಳಕನ್ನು ಬೀರಿದ್ದಾರೆ. ಇವರ 'ದೃಷ್ಟಿ ಸೃಷ್ಟಿ', 'ದರ್ಶನ ಮತ್ತು ಜೀವನ', 'ದೃಷ್ಟಿ ದಾನ', 'ದರ್ಶನ ದೃಷ್ಟಿ', 'ದೃಷ್ಟಿ ಸೌಂದರ್ಯ', 'ಸತ್ಯಂ ಶಿವಂ ಸುಂದರಂ', 'ಜ್ಞಾನ ದೃಷ್ಟಿ', 'ಅನುಭವ ದೃಷ್ಟಿ' ಮುಂತಾದ ಪ್ರಬಂಧಗಳಲ್ಲಿ ಶ್ರೀಗಳವರು

ತಮ್ಮ ಅನುಭವ ವೈಶಾಲ್ಯತೆಯನ್ನು ವಿವರವಾಗಿ ವಿಸ್ತರಿಸಿ ಸಾಮಾನ್ಯ ಜನಗಳಿಗೆ ಸುಲಭ ವೇದ್ಯವಾಗುವಂತೆ ಮಾಡಿದ್ದಾರೆ. ಇವರ ಶೈಲಿ ಸರಳವಾದರೂ ಅಲ್ಲಲ್ಲಿ ತಡೆಹಿಡಿಯುತ್ತದೆ. ಆಸ್ತಿಕ ಭಕ್ತರಿಗೆ ಪವಿತ್ರ ಗ್ರಂಥವಾಗಬಲ್ಲದು.

—ಎಂ. ಚಂದ್ರಶೇಖರ್ ಆಗಸ್ಟು ೧೯೭೪ ರ "ಕನ್ನಡನುಡಿ"

## ಶೀಲಸಂಪಾದನೆ

ಜ.ಚ.ನಿ. ಯವರು ಯುವಕರಿಗಾಗಿಯೇ ಬರೆದಿರುವ ಕೃತಿ ಶೀಲಸಂಪಾದನೆ ನೇರವಾಗಿ ಮನವನ್ನು ಮುಟ್ಟುವ ಇವರ ಶೈಲಿ, ಎಷ್ಟು ಸರಳವೋ ಅಷ್ಟೇ ಮೋಹಕವಾಗಿದೆ. ಮನೆ ಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಸಲ್ಲ, ಮನಸ್ಸಿನಿಂದ ಮಾಡಿದ್ದೇ ಚಂದ. ಮನಸ್ಸಿನ ಐಕ್ಯವೇ ಐಕ್ಯ. ಈ ಮಾತುಗಳಲ್ಲಿ ತಾತ್ವಿಕ ಗಾಂಭೀರ್ಯದೊಡನೆ ಕಾಂತಾ ಸಮ್ಮಿತಿಯ ಮಾಧುರ್ಯ ಸಮ್ಮಿಳಿತವಾಗಿದೆ. ಶ್ರೀ ಕೃಷ್ಣಶರ್ಮರು ಇದನ್ನು ವಿನೋಬಾಭಾವೆಯವರ "ಶುಚಿತ್ವ–ಆತ್ಮದರ್ಶನ" ಎಂಬ ಗ್ರಂಥದೊಡನೆ ಹೋಲಿಸಿರುವುದು ಉಚಿತ. ಶೀಲದ ಬಗೆಗೆ ಶಿವಶರಣರ ಮಾನವೀಯ ಉದಾತ್ತ ಭಾವನೆಗಳನ್ನು, ಸತ್ಯ ಸುಂದರ ಕಲ್ಪನೆಗಳನ್ನು ಕಾವ್ಯಮಯ ಸರಳ ಶೈಲಿಯಲ್ಲಿ ನಿರೂಪಿಸುವ ಈ ಗ್ರಂಥ ವಿದ್ಯಾರ್ಥಿಗಳು, ಜೀವನಪಥದಲ್ಲಿ ಅಡಿಯಿಟ್ಟ ಯುವಕ ಯುವತಿಯರು ಓದಲೇ ಬೇಕಾದ ಕೈಪಿಡಿಯಂತಹ ಕೃತಿ

## ಹೊಳಹು ಸುಳುಹು

ಹೊಳಹು ಸುಳುಹು ಎಂಬ ಕಿರುಹೊತ್ತಿಗೆಯಲ್ಲಿ ಜ. ಚ. ನಿ ಯವರು ನಾಮರೂಪಕ್ರಿಯೆ ಅನುಭಾವಗಳಲ್ಲಿ ಸಮಾನವಾದ ಸುಮಾರು ನೂರು "ದ್ವಂದ್ವ" ಗಳನ್ನು ಕುರಿತ ತಮ್ಮ ಅನುಭವವನ್ನು ವಚನಶೈಲಿಯಲ್ಲಿ ವಿಸ್ಮಯಗೊಳಿಸುವ ವೈವಿಧ್ಯತೆಯಿಂದ ನಿರೂಪಿಸಿದ್ದಾರೆ.

ಬಸವಕಲ್ಯಾಣದ ಪರಿಚಯಾತ್ಮಕ ಕಿರುಹೊತ್ತಿಗೆ "ಕುಂಡಕಲ್ಯಾಣ". ಮೊದಲು ಮಂಗಳವೆಡೆಯೆಂದು ಕರೆಯಲ್ಪಡುತ್ತಿದ್ದ ನಗರವೇ ಚಾಲುಕ್ಯ ರಾಜಧಾನಿಯಾಗಿ ಕಲ್ಯಾಣವೆಂಬ ಹೆಸರು ಪಡೆದಿರಬೇಕೆಂಬ ಲೇಖಕರ ಅಭಿಪ್ರಾಯ ಕುತೂಹಲಕಾರಿಯಾಗಿದೆ. ಇದು ನಿಜವಾದರೆ ಬಸವಣ್ಣನವರ ಜೀವಿತಕಾಲದ ಕೆಲವು ಸಂಧಿಗ್ಧಗಳು ಸುಲಭವಾಗಿ ಪರಿಹಾರವಾಗುವುವು.

—ಪುಟ್ಟಸ್ವಾಮಯ್ಯ—ಪ್ರಜಾವಾಣಿ, ೨೮-೭-೭೪

## ಶ್ರೀ ಜ. ಚ. ನಿ. ಅವರ
## 'ಭಾವಾನುಭಾವಗಳ ಸಂವೇದನ'

ಶ್ರೀ ಜ. ಚ ನಿ. ಅವರು ಪೀಠಾಧಿಪತಿಗಳಾಗಿದ್ದು ಸಾಹಿತ್ಯ ರಂಗದಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ. ಆಧುನಿಕ ಭಾರತದ ಸಮನ್ವಿತ ಜೀವನ, ಪ್ರಗತಿ ಪರ ಜೀವನದ ಹೆಜ್ಜೆಗಳನ್ನು ಗುರುತಿಸುವ ಸಂವೇದನೆಯುಳ್ಳ ಕವಿಹೃದಯ, ಕವಿ ಪ್ರತಿಭೆ ಇದರಲ್ಲಿದೆ. ಶ್ರೀಗಳು ತಮ್ಮ ಕವನಗಳಿಗೆ ಆಯ್ದುಕೊಂಡ ಕೆಲವು ವಿಷಯಗಳು ತೀರ ಭಾವೋದ್ರೇಕಕ್ಕೆ ಎಡೆ ಮಾಡುವಂತಹವು. ಆದರೂ ಸಮಾಜ ಹಿತ ಪ್ರಜ್ಞೆಯ ಕವಿಯಲ್ಲಿ ಅವು ಕಾವ್ಯ ಸಂವೇದನೆಗಳಾಗಿ ಸಮತೂಕ ದಿಂದ ಮೂಡಿವೆ:

"ಸಂವೇದನ" ಕವನ ಸಂಕಲನದಲ್ಲಿ ಕವಿಗಳು ರೂಪಾಯಿಯ ಅಪಮೌಲ್ಯ ಬೆಳಗಾಂವಿಯ ಸಮಸ್ಯೆ, ಏಕ ಸದಸ್ಯ ಆಯೋಗ ಇವುಗಳಂಥ ವಿಷಯದಲ್ಲಿಯೂ ತಮ್ಮ ಸಾತ್ವಿಕ ಸಂತಾಪ ವ್ಯಕ್ತ ಮಾಡಿದ್ದಾರೆ.

"ಎಲ್ಲಿ ನಿನ್ನ ಅನುಗ್ರಹ"ವೆಂಬ ಸುಂದರ ಗೀತವಂತೂ ಸಾತ್ವಿಕ ಸಂತಾಪದ ತಿಳಿ ಹೊನಲಾಗಿದೆ.

"ಅತ್ತ ಸೆಮಿನಾರು, ಇತ್ತ ಸೆಮಿನಾರು
ಸುತ್ತು ಜಾಹೀರಾತು ಸಹಸ್ರಾರು ಬದುಕಲವಕಿಲ್ಲ ನಾರು ಬೇರು
ಹೃದಯ ಮಾತ್ರ ನಂಜು ನೂರು"

ಸ್ವತಂತ್ರ ಭಾರತದ ಈ ಹುಚ್ಚಾಟ ಒಟ್ಟು ಮಾನವ ಜೀವಿತದ ತೂಕಲ ಕಂಡು ಕರಗಿದ ಕವಿಗಳು ಕೊನೆಗೆ...ಮುಗಿಲ ಮೇಲೆರಡು ಉಪಗ್ರಹ
ನೆರೆಯೊಳನಂತ ಸತ್ಯಾ (ಪೂರ್ವ) ಗ್ರಹ
ಬಗೆಯೊಳನೇಕ ದುರಾಗ್ರಹ ಇವುಗಳೊಳೆಲ್ಲಿ ನಿನ್ನನುಗ್ರಹ ?"
ಎಂದು ವ್ಯಥಿತ ಹೃದಯದಿಂದ ಪ್ರಾರ್ಥನೆ ಮಾಡುತ್ತಾರೆ.

### ಮತಾತೀತ ಸಂವೇದನೆ

ಬಾಹ್ಯ ಜೀವನದ ಬಗೆಗೆ ಎಚ್ಚರವಿದ್ದ ಈ ಕವಿಗಳ ಹೃದಯ ಅಂತರಂಗ ದಲ್ಲಿ ಸದಾಶಿವನಿಗಾಗಿ ಮೊರೆಯುತ್ತದೆ. ಈ ಹೃದಯದ ಮೊರೆತ ಬರಿ ಮತಾ ಚಾರದ ಪರಿಭಾಷೆಯಲ್ಲ. ನೆಲದ ಬಂಧನದಿಂದ ಜೀವ ಬಿಡುಗಡೆ ಹೊಂದಿ

ಮಂಗಲ ಭಾವದಲ್ಲಿ ನಿಲ್ಲಿಸಲು ಸತತ ಹೋರಾಟ ನಡೆಸಿರುತ್ತದೆ. 'ಸಂ–ವೇದನ' ಹಾಗೂ 'ಭಾವಗೀತಾಂಜಲಿ–ಎಂಬ ಎರಡು ಕವನ ಸಂಕಲನಗಳಲ್ಲಿಯೂ ಈ ಬಗೆಯ ಹೋರಾಟದ ಚಿತ್ರ ಕಾಣುತ್ತದೆ.

"ಎಲ್ಲ ಕದಗಳು ತೆರೆದಿವೆ ನೋಡು ಓ ಮಾಯಿ
ಕುಲ್ಲನಾಯಿಯು ನುಗ್ಗಿದೆ ತೆರೆದು ತಾ ಬಾಯಿ
ಮಾಯಿ ನೀನಾಗಿ ಮನೆಯ ಕೆಡಿಸದಂತಿರು ನಿ
ಮ್ಮಾಯಿ ನೀನಾಗಿ ಮನೆಯ ಮಡಿಯುಳಿಸು ಮಾನಿನಿ !

ಅಂತರಂಗ ಸುದ್ಧಿಯ ಈ ಹಂಬಲ ತುಂಬ ಮನೋಹರ ! ಇಂಥ ಅನೇಕ ಪ್ರಾರ್ಥನಾ ಗೀತಗಳು 'ಭಾವಗೀತಾಂಜಲಿ'ಯ ತುಂಬ ಇವೆ. ಪ್ರೊ॥ ಎಸ್. ಆರ್. ಮಳಗಿಯವರು ಮುನ್ನುಡಿಯಲ್ಲಿ ಹೇಳಿದಂತೆ "ಸಹೃದಯದ ಹೃದಯ ವಂತಿಕೆಗೆ ಆರೋಗ್ಯಕರ ಪುಷ್ಟಿ" ಈಯುತ್ತಿರುವ ಗೀತೆಗಳಿವು.

ಶ್ರೀ ಜ. ಚ. ನಿ ಅವರು ವಿಶಿಷ್ಟಮತದ ಮಠಾಧಿಪತಿಗಳಾಗಿದ್ದುದ ರಿಂದ ಮತದ ಪರಿಭಾಷೆಯನ್ನು ಬಳಸುವದು ಸ್ವಾಭಾವಿಕ. ತಮ್ಮ ಶ್ರದ್ಧೆಯ ಹಿರಿಮೆ ಗರಿಮೆಗಳ ಎಚ್ಚರದ ನುಡಿಯಾಡುವದೂ ಸ್ವಾಭಾವಿಕ. ಅದರೊಡನೆ ಈ ಮತ ಪರಿಭಾಷೆ ಸರ್ವಮತೀಯ ಭಾವಸಂವೇದನೆಯ ವಾಹನವಾಗುವಂತೆ ಮಾಡುತ್ತಿರುವುದು ಅವರ ಸಮತೂಕದ–ನವ ಭಾರತ ಪ್ರಜ್ಞೆಗೆ ಸಾಕ್ಷಿಯಾಗಿದೆ.

## ಭಾವ–ಕಲ್ಪನೆಗಳ ಬಹುಮುಖ

'ಸಂ-ವೇದನೆ'ಯಲ್ಲಿಯ ನಲವತ್ತಾರು ಪದ್ಯಗಳೂ ಭಾವಗೀತಾಂಜಲಿ'ಯ ಐವತ್ತು ಮೂರು ಪದ್ಯಗಳೂ ಈ ಕವಿಗಳ ವ್ಯಕ್ತಿತ್ವದ ಬಹುಮುಖ ಅನುಸಂಧಾ ನಕ್ಕೆ ಕನ್ನಡಿ ಹಿಡಿದಿವೆ.

ಕೆಲವು ಕವನಗಳು ಕಲ್ಪನಾ ವಿಲಾಸದ ಚಮತ್ಕಾರದಿಂದ ಬಾದು ತತ್ವ ವನ್ನು ವಿಸ್ತರಿಸಿ ತೋರಿದರೆ, ಮತ್ತೆ ಕೆಲವು ಕವನಗಳು ಯುಕ್ತಿ ಚಮತ್ಕಾರ, ಲಯಬದ್ಧ ಪದಸಂಯೋಜನೆಗಳ ಸ್ವಾರಸ್ಯದಿಂದ ವಿಚಾರ ಮಾಲಿಕೆಗಳಾಗಿವೆ.

"ಅಂಗಸುಖ ರಾಗರಸ । ಲಿಂಗಸುಖ ಯೋಗರಸ
ಅಂಗ ಲಿಂಗ ಸಮರಸ । ಲಿಂಗ ಮೋಕ್ಷ' ಫಲರಸ"

ಇಂಥ ಪದಗಳ ಉಕ್ತಿಶಕ್ತಿಯಿಂದ ರಸಾನುಭವದ ವಿವೇಕ ಪ್ರಭಾವಯುತವಾಗಿ ಹೊಳೆಯುತ್ತದೆ. ಅವರು ತಮ್ಮ ಗ್ರಂಥಗಳಿಗೆ ಬರುವ ಪ್ರಸ್ತಾವನೆಗಳ ಗದ್ಯದಲ್ಲಿಯೂ ಈ ಉಕ್ತಿ ಲೀಲೆಗೆ ಹೆಚ್ಚಿನ ಅವಕಾಶ ನೀಡುತ್ತಾರೆ. ಆದರೆ ಇದು ಕೇವಲ ಭಾಷಾ ಪಾಂಡಿತ್ಯದ ಪರಿಣಾಮವಲ್ಲ; ವಿವಿಧ ಭಾವ-ವಿವಿಧ ಕಲ್ಪನೆಗಳ ವಿವೇಕದಿಂದ ಉದ್ದೀಪಿತವಾದ ಒಂದು ಶೈಲಿ ವಿಶೇಷ.

## ಸಮನ್ವಿತ ಸಂವೇದನೆ

ಈ ಎಲ್ಲ ಭಾವ, ಕಲ್ಪನೆ, ಉಕ್ತಿ ಚಮತ್ಕಾರಗಳ ಹಿಂದೆ ಇರುವುದು ಸಮನ್ವಯ ದರ್ಶನದ ಹಂಬಲು ಹಾಗೂ ವಿವೇಕ. ಕವಿಗಳಿಗೆ ಕೇವಲ ಪಾಂಡಿತ್ಯದ ತಾಕಲಾಟದಲ್ಲಿ ನಿಲ್ಲುವ ಅಭಿರುಚಿಯಿಲ್ಲ. ಅವರು ಪ್ರಧಾನವಾಗಿ ಸುಕುಮಾರ ಸತಿಭಾವದಿಂದ ಶಿವನತ್ತ ಸಾಗಿದ ಶರಣ ಜೀವ. ಈ ಅನುಸಂಧಾನದಲ್ಲಿ ತನ್ನ ಮಾರ್ಗಕ್ರಮಣವು ಧರ್ಮ–ವಿವೇಕ–ಎಚ್ಚರಗಳಿಂದ ಕೂಡಿರುವುದಕ್ಕಾಗಿ ಹಂಬಲಿಸುತ್ತದೆ. ಆದ್ದರಿಂದಲೇ ಬಾಳಿನ ಜಂಜಡ–ತೊಡಕುಗಳನ್ನು ಅರಿಯಲು, ಬಿಡಿಸಲು, ಸಮನ್ವಿತ ಮುಖ ಕಾಣಲು ಪರಿತಪಿಸುತ್ತದೆ. ಇದೇ ಜ. ಚ. ನಿ. ಅವರ ಕವನ ಗಾನದ ಸಂಕೀರ್ಣತೆಯ ಮೂಲ.

ಶಿವಭಕ್ತಿಯ ಹಂಬಲ ಅದರೊಳಗಿನ ಸರಳ ಸುಂದರ ಮುಖ. ಆ ಮುಖದಿಂದ ಪ್ರಕೃತಿ ಗೀತ ಬರಲಿ. ಪ್ರಾಣಿಶ್ರಮ ಮೂಡಲಿ. ರಾಷ್ಟ್ರದೃಷ್ಟಿ ಜಾಗತಿಕ ದೃಷ್ಟಿ ಅನುಭವ ದೃಷ್ಟಿಯ ಭಾವಲಹರಿ ಹರಿಯಲಿ–ಏನಾದರೂ ಸಮನ್ವಿತ ಸಂವೇದನೆಯ ಸಹಜ ಭಕ್ತಿಯ ಉದ್ಧಾರವಾಗಿ ಹರಿಯುವವು.

— ಆರ್. ಜಿ. ಕುಲಕರ್ಣಿ

ಸಂಯುಕ್ತ ಕರ್ನಾಟಕ

27–11–67

## 'ಪ್ರತಿಭಾಸಿದ್ಧರು ಪಂಡಿತಾರಾಧ್ಯರು'

ಸಮ್ಯಜ್ಞಾನ ಸಾರಾಯ ಸಂಪತ್ತುಳ್ಳ ಪರಮ ಶ್ರೀಮಂತ, ಮಹಾ ಜ್ಞಾನ ಸಂಪನ್ನ, ಮಹಂತ, ಪ್ರಕಾಂಡ ಪಾಂಡಿತ್ಯದಿಂದ ತೊಳಗಿ ಬೆಳಗುವ ಘನವಂತ

ಎಣಿಸಿದವರೇ ಶಿವಾನುಭವ ಸಂಪನ್ನರಾದ ಶ್ರೀ ಪಂಡಿತಾರಾಧ್ಯರು. ಶಿವಾಗಮ ಕೋವಿದರು, ಶಿವಶ್ರೀಯುತರು ಆದ ಇವರ ದಿವ್ಯ ಚರಿತ್ರೆಯೇ ನಮ್ಮ ಮುಂದಿರುವ ಪ್ರಕೃತ ಪುಸ್ತಕ.

ರೇವಣಸಿದ್ಧ, ಮರುಳಸಿದ್ಧ ಏಕೋರಾಮರೆಂಬ ಸಿದ್ಧತ್ರಯರಿಗಿಂತಲೂ, ವಿಶ್ವಾರಾಧ್ಯರಿಗಿಂತಲೂ ಪಂಡಿತಾರಾಧ್ಯರು ಪ್ರಾಚೀನರು. ಇವರ ಕಾಲ 8ನೇ ಶತಮಾನಕ್ಕೂ ಹಿಂದಿನದೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಅದನ್ನು ಕರ್ನೂಲು ಜಿಲ್ಲೆಯ ಪಾಣಂ ಗ್ರಾಮದ ಶಾಸನವೇ ಸೂಚಿಸುತ್ತದೆ.

ಇದರ ಜೊತೆಗೆ 8ನೆಯ ಶತಮಾನಕ್ಕೆ ಹಿಂದಿದ್ದ ಶ್ರೀ ನೀಲಕಂಠ ಶಿವಾಚಾರ್ಯರನ್ನು ಇವರೊಡನೆಯೂ ಇವರ ನಂತರವೂ ಇರುವ ಶ್ರೀ ಶಂಕರಾಚಾರ್ಯರನ್ನು ನಿರ್ದೇಶಿಸಿದ ಬಳಿಕ ಮೂರನೆಯವರನ್ನಾಗಿ ಶ್ರೀ ಪಂಡಿತಾರಾಧ್ಯರನ್ನು ನಿರ್ದೇಶಿಸಿರುವುದು ನಿಜಕ್ಕೂ ಗಮನಾರ್ಹ. ಅಂತೆಯೇ ಶೈವಾಚಾರ್ಯರಲ್ಲಿ ಪಂಡಿತಾರಾಧ್ಯರಿಗೆ ಪ್ರಖ್ಯಾತಿ. ಜೊತೆಗೆ ಶ್ರೀ ಶಂಕರರ ಸಮಕಾಲೀನತೆ ವ್ಯಕ್ತವಾಗುತ್ತದೆ.

ಪ್ರಾಚೀನ ಸಂಸ್ಕೃತ ವಾಙ್ಮಯದಲ್ಲಿ ಸಿದ್ಧತ್ರಯರು, ಆಚಾರ್ಯತ್ರಯರೂ, ಪಂಡಿತರು ಯಾರೆಂದು ಸ್ಪಷ್ಟ ಉಲ್ಲೇಖವಿದೆ. ಈ ಮೇರೆಗೆ ರೇವಣ, ಮರುಳ ಏಕೋರಾಮ ಸಿದ್ಧತ್ರಯರು ; ಶ್ವೇತಾಚಾರ್ಯ, (ಪಂಡಿತ) ಲಕುಲೀಶಾಚಾರ್ಯ, ನೀಲಕಂಠಾಚಾರ್ಯರು ಆಚಾರ್ಯತ್ರಯರು ; ಉದ್ಭಟಾರಾಧ್ಯ, ಕೋಟಿಪಲ್ಲಾ (ವಿಶ್ವಾ)ರಾಧ್ಯ, ವೇಮಾರಾಧ್ಯರು ಆರಾಧ್ಯತ್ರಯರು ; ಶ್ರೀಪತಿ, ಮಂಚನ ಮಲ್ಲಿಕಾರ್ಜುನರು ಪಂಡಿತತ್ರಯರು.

ಅಂತೂ ಆ ಮಹಾ ವ್ಯಕ್ತಿತ್ವದ ಪರಿಚಯ ಪಡೆಯಬೇಕೆಂಬ ಜಿಜ್ಞಾಸುಗಳಿಗೆ ಇದು ಪರಮ ಕುತೂಹಲಕಾರಿಯಾದ ಕೃತಿ. ಮಲ್ಲಿಕಾರ್ಜುನ ಪಂಡಿತರಿಗಿಂತ ಪ್ರತ್ಯೇಕರಾದವರು ಶ್ರೀ ಶೈಲರ ಪ್ರಥಮ ಪಂಡಿತಾರಾಧ್ಯರು ಎಂಬುದನ್ನು ಈ ಕೃತಿ ಸ್ಪಷ್ಟ ಪಡಿಸುತ್ತದೆ. ಇಂಥ ಸುಪ್ರೌಢ ಕೃತಿಯನ್ನು ನಾಡಿಗೆ ಇತ್ತ ಶ್ರೀ ಜ. ಚ. ನಿ. ಅವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

—ಅ. ನಂ.

ಸಂಯುಕ್ತ ಕರ್ನಾಟಕ ೧೧–೧೨–೬೭

## 'ಜೀವನ ಸಿದ್ಧಾಂತ' ಜೇನುಸವಿದಂತೆ

ಓ ಗುರುದೇವ! 'ಜೀವನ ಸಿದ್ದಾಂತ' ಜೇನು ಸವಿದಂತಿದೆ. ವಿಚಾರಗಳ ವಿಶಾಲದೃಷ್ಟಿ ಅಗಣಿತ ವಾಗಿವೆ. ಹೊಸ ಹೊಸ ಅನುಭಾವದ ನುಡಿಗಳು ನಿರೂಪಿಸಲಾಗಿದೆ. ತಾನು ಮಾಡುವ ಸತ್ಕ್ರಿಯೆ ಗಳೆಲ್ಲವೂ ಮಾತನಾಡುವ ಸುಭಾಷಿತಗಳೆಲ್ಲವೂ ತಾನರಿವ ಸ್ವಾನುಭವವೆಲ್ಲವೂ ಲಿಂಗಸ್ವರೂಪ. ಇವುಗಳಲ್ಲಿ ನೇಹವು ನಿಬಿಡವಾಗುವುದೇ ಶ್ರದ್ಧೆಯು ಸಾಂದ್ರವಾಗುವುದೇ ನಿಷ್ಠೆ.

ಮಾತು ಮಂತ್ರಗಳಾಗುವುದಕ್ಕಿಂತ ಬೇರಿಲ್ಲ ಪ್ರಾಣಲಿಂಗ ಪ್ರತಿಷ್ಠೆ. ಸ್ವಾನುಭೂತಿಯು ಸಂಪಾದನೆಗಿಂತ ಬೇರಿಲ್ಲ ಭಾವಲಿಂಗ ನಿಷ್ಠೆ; ಇತ್ಯಾದಿ ಸ್ವಾನುಭವದ ಸವಿನುಡಿಗಳು. ವೀರಶೈವ ರಿಗೆ ಅತ್ಯವಶ್ಯಕವಾದವುಗಳು. ಹೃದಯ ಕಮಲ ವನ್ನು ಅರಳಿಸುವಂತ ವಿಚಾರಗಳು ಅನೇಕಗಳಿವೆ. ಬುದ್ಧಿಗೆ ಬೆಳಕನ್ನು ತೋರುವಂತವುಗಳಾಗಿವೆ. ಓದುವಾಗ ಏಕೆ ಇಷ್ಟು ಬೇಗ ಒಂದು ಗಂಟೆ ಹೋಯಿತು ಅನಿಸುತ್ತೆ. ಇಂಥಾ ಅನುಭಾವಾ ಮೃತವನ್ನು ಉಣಿಸುತ್ತಿರೋಣದರಿಂದ ಬಳಗವು ಚಿರರುಣಿಯಾಗಿದೆ.

—ಗು. ಶಂಕರಮ್ಮ
ಬೆಂಗಳೂರು





ಕನ್ನಡದ ಶಿವ ಸಾಹಿತ್ಯ ಸನ್ನಿಧಿ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಅವರಲ್ಲಿ ಸಾಹಿತ್ಯ ಸತ್ವ ಯುಗಧರ್ಮದ ಪರಿಣಾಮವಾಗಿ, ಸ್ವಯಂ ಪರಿಶ್ರಮದ ಫಲವಾಗಿ ಮೈಗೂಡಿ ಬಂದಿದೆ. ವಿಮರ್ಶೆಯಲ್ಲಿ, ವಿಶ್ಲೇಷಣೆಯಲ್ಲಿ ಅವರದೇ ಆದ ಒಂದು ಕಲೆಯಿದೆ; ಕೌಶಲ್ಯವಿದೆ.

ಹೃದಯ ಪ್ರಧಾನವಾದ ಶ್ರೀ ಸನ್ನಿಧಿಯವರ ಸಾಹಿತ್ಯ ಅದೊಂದು ಹಿಮಾಲಯದ ಗೌರೀಶಿಖರ. ಆದರೂ ಮಾನವತೆಯನ್ನು ಮರೆತಿಲ್ಲ. ಮಾನವತೆಯ ಉಪಾಸನೆಗಾಗಿ ಮಂಗಳಕರವಾಗಿ ಬೆಳಗಿದೆ. ಭಾವ ಸೌಂದರ್ಯ, ವಿಚಾರ ವೈವಿಧ್ಯ, ನುಡಿ ನಾವೀನ್ಯತೆ ಅವರ ಸಾಹಿತ್ಯದ ವೈಶಿಷ್ಟ್ಯ.

'ಜೀವನ ಸಿದ್ಧಾಂತ'ವಂತೂ ಶ್ರೀ ಸನ್ನಿಧಿಯವರ ಆಳವಾದ ಅಭ್ಯಾಸ, ಅನುಭವ ಮತ್ತು ಪ್ರತಿಭೆಗಳಿಗೆ ಸಾಕ್ಷಿ! ಕನ್ನಡ ದಾರ್ಶನಿಕ ಸಾಹಿತ್ಯ ಲೋಕದಲ್ಲಿ ಅವರಿಗೆ ಹಿರಿಯ ಸ್ಥಾನವಿದೆಯೆನ್ನುವುದಕ್ಕೆ ಇದೊಂದೇ ಸಾಕು!

ಗೊ. ರು. ಚನ್ನಬಸಪ್ಪ